ಶ್ರೀಶ್ರೀ ವಿಶ್ವೇಶತೀರ್ಥ ಶ್ರೀಪಾದರ ಚತುರ್ಥ ಪರ್ಯಾಯದ
ಸಮಾರೋಪ ಸಮಾರಂಭದಲ್ಲಿ ನಡೆದ ೨೧ನೇ ಶ್ರೀಮನ್ನ್ಯಾಯ
ಸುಧಾಮಂಗಳ ಮಹೋತ್ಸವದಲ್ಲಿ ಅರ್ಪಿಸಿದ ಪುಷ್ಪಮಾಲೆ.

# ಶ್ರೀಮದ್ಭಾಗವತಸಾರ


ಅನುಗ್ರಹ

ಶ್ರೀಶ್ರೀ ವಿಶ್ವೇಶತೀರ್ಥ ಶ್ರೀಪಾದರು

ಸಂಗ್ರಹ

ಬೆ. ನಾ. ವಿಜಯೀಂದ್ರಾಚಾರ್ಯ



ಪ್ರಕಾಶನ

ಶ್ರೀ ಮಧ್ವಜಯಂತೀ ಪ್ರತಿಷ್ಠಾನ

ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು –560 028

ಶ್ರೀಶ್ರೀ ವಿಶ್ವೇಶತೀರ್ಥ ಶ್ರೀಪಾದರ ಚತುರ್ಥ ಪರ್ಯಾಯದ ಮಹೋತ್ಸವ ಸಮಾರಂಭದಲ್ಲಿ ನಡೆದ ೨೧ನೇ ಶ್ರೀಮನ್ನ್ಯಾಯಸುಧಾಮಂಗಳ ಮಹೋತ್ಸವದ ಶುಭಸಂದರ್ಭದಲ್ಲಿ ವೃಷ ಸಂವತ್ಸರದ ಪುಷ್ಯ ಶುದ್ಧ ಚತುರ್ದಶಿಯಂದು 'ಶ್ರೀಮದ್ಭಾಗವತಸಾರ' ಎಂಬ ಹೊತ್ತಗೆಯನ್ನು ಶ್ರೀ ಸರ್ವಜ್ಞ ಪೀಠಾಧಿಪತಿಗಳಾದ ಶ್ರೀಶ್ರೀ ವಿಶ್ವೇಶತೀರ್ಥ ಶ್ರೀಪಾದರು ತಮ್ಮ ಅಮೃತಹಸ್ತದಿಂದ ಬಿಡುಗಡೆಗೊಳಿಸಿ ಅನುಗ್ರಹಿಸಿದರು


ಸಂಗ್ರಾಹಕ: ಬೆ. ನಾ. ವಿಜಯೀಂದ್ರಾಚಾರ್ಯ

ಪ್ರಕಾಶನ: ಶ್ರೀ ಮಧ್ವಜಯಂತೀ ಪ್ರತಿಷ್ಠಾನ
ಪೂರ್ಣಪ್ರಜ್ಞ ವಿದ್ಯಾಪೀಠ
ಬೆಂಗಳೂರು 560 028

ಪ್ರಥಮ ಮುದ್ರಣ: 17-1-2002

ಪ್ರತಿಗಳು: 1000

ಪುಟಗಳು: 444





ಬೆಲೆ: ರೂ. 130/-

ಪ್ರತಿಗಳು ದೊರೆಯುವ ಸ್ಥಳ: ಶ್ರೀಕೃಷ್ಣಮಠ, ಉಡುಪಿ
ಮತ್ತು
ಪೂರ್ಣಪ್ರಜ್ಞ ವಿದ್ಯಾಪೀಠ
ಬೆಂಗಳೂರು 28

ಮುಖಪುಟ ವಿನ್ಯಾಸ: ಶ್ರೀ ಕೆ. ಎಂ. ಶೇಷಗಿರಿ, ಬೆಂಗಳೂರು

ಅಕ್ಷರ ಸಂಯೋಜನೆ: 'ನವದುರ್ಗಾ ಲೇಸರ್‌ಟೆಕ್'
C/o ಡಾ। ಕೆ. ಪದ್ಮನಾಭ ಕೇಕುಣ್ಣಾಯ, ಉಡುಪಿ -2 [Ph.: 31159]
ಮುದ್ರಣ: ಪೂರ್ಣಪ್ರಜ್ಞ ಮುದ್ರಣಾಲಯ, ಬೆಂಗಳೂರು.

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮಹಾಸಂಸ್ಥಾನಮ್

ಶ್ರೀಶ್ರೀ ವಿಶ್ವೇಶತೀರ್ಥ ಶ್ರೀಪಾದರು

ಶ್ರೀ ಪೇಜಾವರ ಮಠ, ಉಡುಪಿ-೧.

# ಅನುಗ್ರಹ ಸಂದೇಶ

ಶ್ರೀಮದ್ಭಾಗವತವು ಭಗವಂತನ ಮತ್ತು ಭಕ್ತರ ವಿವಿಧ ಚರಿತ್ರೆಗಳನ್ನು ನಿರೂಪಿಸಿ ಭಕ್ತಿ ಮತ್ತು ತತ್ತ್ವಜ್ಞಾನದ ಪ್ರಬೋಧನೆಯನ್ನು ನೀಡುವಂತೆ ನೈತಿಕ ಹಾಗೂ ಮಾನವೀಯ ಮೌಲ್ಯಗಳನ್ನು ಎತ್ತಿತೋರಿಸುವ ಸಂದೇಶಗಳನ್ನು ನೀಡಿದೆ. ನಮ್ಮ ಭಾಗವತದ ಪ್ರವಚನದಲ್ಲಿ ಈ ಎಲ್ಲಾ ವಿಷಯಗಳನ್ನು ಭಾಗವತವು ಹೇಗೆ ನಿರೂಪಿಸುತ್ತದೆ ಎಂದು ವಿವರಿಸುವ ಪ್ರಯತ್ನವನ್ನು ಮಾಡಿರುವೆವು. ನಮ್ಮ ಪ್ರೀತಿಯ ಶಿಷ್ಯನಾದ ವಿಜಯೀಂದ್ರನು ಅತ್ಯಂತ ಪರಿಶ್ರಮ ವಹಿಸಿ ಈ ಎಲ್ಲಾ ವಿಷಯಗಳನ್ನು ಸಂಗ್ರಹಿಸಿ ಈ ಹೊತ್ತಗೆಯನ್ನು ಸಿದ್ಧಪಡಿಸಿದ್ದಾನೆ. ಅವನ ನಿಷ್ಠೆ, ಉತ್ಸಾಹ, ಪರಿಶ್ರಮಗಳನ್ನು ಕಂಡು ನನಗೆ ಅತ್ಯಂತ ಸಂತೋಷವಾಗಿದೆ. ಇವನಿಗೆ ಭಗವಂತನು ವಿಶೇಷವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುವುದರ ಜೊತೆಗೆ ಈ ತರುಣ ಉತ್ಸಾಹಿ ವಿದ್ವಾಂಸನಿಂದ ವಿಶೇಷ ರೀತಿಯ ಜ್ಞಾನಸೇವೆಯು ಮುಂದಿನ ವರುಷಗಳಲ್ಲಿ ನಡೆಯಲೆಂದು ಆಶಿಸುವೆವು.

ಇತಿ ಸಪ್ರೇಮ ನಾರಾಯಣಸ್ಮರಣೆಗಳು

ಸಹಿ

(ಶ್ರೀಶ್ರೀ ವಿಶ್ವೇಶತೀರ್ಥಶ್ರೀಪಾದರು)

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮಹಾಸಂಸ್ಥಾನಮ್

ಶ್ರೀಶ್ರೀ ವಿಶ್ವಪ್ರಸನ್ನತೀರ್ಥ ಶ್ರೀಪಾದರು

ಶ್ರೀ ಪೇಜಾವರ ಮಠ, ಉಡುಪಿ ೧.

# ಅನುಗ್ರಹ ಸಂದೇಶ

"ಹಾಳು ಹರಟೆಯಾಡಿ ಮಾನವ ಬಾಳು ಹಾಳುಮಾಡಿಕೊಳ್ಳಬೇಡ, ಹರಿ ನಿನ್ನ ಕಥೆಯ ಕೇಳಿ ಬಾಳಿರೋ ಪ್ರಾಕೃತರಿಗೆ" ಎಂಬ ದಾಸವಾಣಿ, ಹರಿಕಥಾಶ್ರವಣಕ್ಕೆ ಸಂದ ಪ್ರಶಸ್ತಿ. ಹರಿಕಥಾ ಶ್ರವಣವು ಆಧ್ಯಾತ್ಮಿಕ ಸಾಧನೆಯ ಮೊದಲ ಮೆಟ್ಟಿಲು. 'ಬುದ್ಧೋಽಭಿಧಾನಂ ಶ್ರವಣಂ ಬುದ್ಧೇತರಃ ಧ್ರುವಂ ವಿದಧ್ಯಾತ್' ತಿಳಿದವರು ಹೇಳಬೇಕು; ತಿಳಿಯದವರು ಕೇಳಬೇಕು.

ನಮ್ಮ ಗುರುಗಳ ತುರೀಯ ಪರ್ಯಾಯದಲ್ಲಿ ಶ್ರೀಕೃಷ್ಣನ, ಶ್ರೀಮದಾಚಾರ್ಯರ ಸನ್ನಿಧಿಯಲ್ಲಿ ಇದು ಸತ್ರವು ನಡೆದಿದೆ. ಶ್ರೀಮದಾಚಾರ್ಯರ ವಿಶೇಷ ಸನ್ನಿಧಾನ ಪಾತ್ರರಾದ ಗುರುಗಳು ಉಪದೇಶಿಸಿದ್ದಾರೆ; ಬುಭುತ್ಸುಗಳನೇಕರು ಅದನ್ನು ಎರಡೂ ಕಿವಿಗಳ ಮೂಲಕ ತಮ್ಮೊಳಗೆ ಅಂತಃಕರಣದಲ್ಲಿ ತುಂಬಿಕೊಂಡಿದ್ದಾರೆ. ಮತ್ತನೇಕರು ಅದನ್ನು ಮನನಮಾಡಿ ಅದರ ಸವಿಯನ್ನುಂಡಿದ್ದಾರೆ. ಹಾಗೆ ಸವಿದವರು ಅದರ ಸವಿಯನ್ನು ಇತರರಿಗೂ ಹಂಚಿದ್ದಾರೆ. 'ಏಕಃ ಸ್ವಾದು ನ ಭುಂಜೀತ' ಅಲ್ಲವೇ.

ಬಾಯಿಯ ಮೂಲಕ ಕಿವಿಗೆ ಹರಿಯುವ ಪ್ರಕ್ರಿಯೆ ಸೀಮಿತ ಕಾಲದ್ದು, ಸೀಮಿತ ದೇಶದ್ದು. ಹಾಗೆಂದು ಬಗೆದು ಇದು ನಿರಂತರವಾಗಿ ಅನಂತ ದೇಶದಲ್ಲಿ ನಡೆಯಬೇಕು ಎಂದು ಸಂಕಲ್ಪಿಸಿ ಬರವಣಿಗೆಯ ಮೂಲಕ ಲಿಖಿತರೂಪದಲ್ಲಿ ಹಂಚಹೊರಟವರು ವಿದ್ವಾನ್ ಬಿ. ನಾ. ವಿಜಯೀಂದ್ರ ಆಚಾರ್ಯ ಇವರು. ಈ ಪುಸ್ತಕವನ್ನು ಓದುವ ಎಲ್ಲರೂ ಇವರಿಗೆ ಋಣಿಗಳು. ಗುರುಗಳ ಪರ್ಯಾಯಗಳಲ್ಲಿ ಇವರಿಂದ ನಡೆದ ಜ್ಞಾನಯಜ್ಞದಲ್ಲಿ ಇದು ಒಂದು ಭಾಗ ಅಷ್ಟೆ. ಸಾರಸ್ವತ ಲೋಕಕ್ಕೆ ಇವರಿಂದ ಇಂತಹ ಸೇವೆ ನಿರಂತರವಾಗಿ ಸಲ್ಲುತ್ತಿರಬೇಕೆಂದು ಆಶಿಸಿ, ಅಂತಹ ಶಕ್ತಿಯನ್ನು ಹರಿಗುರುಗಳು ಇವರಲ್ಲಿ ತುಂಬಲೆಂದು ಶ್ರೀಕೃಷ್ಣಮುಖ್ಯಪ್ರಾಣರಲ್ಲಿ ಪ್ರಾರ್ಥಿಸುತ್ತೇವೆ.

ಇಂತು ಸಪ್ರೇಮ ನಾರಾಯಣ ಸ್ಮರಣೆಗಳು.

ಸಹಿ/

(ಶ್ರೀಶ್ರೀ ವಿಶ್ವಪ್ರಸನ್ನತೀರ್ಥ ಶ್ರೀಪಾದರು)

# ಶ್ರೀಕೃಷ್ಣಮಂತ್ರದ ಫಲಕ್ಕೊಂದು ಜ್ವಲಂತನಿದರ್ಶನ

ಶ್ರೀಕೃಷ್ಣನು ತನ್ನ ಅವತಾರದ ಉಪಸಂಹಾರ ನಡೆಸುವಾಗ ಸ್ವೀಕರಿಸಿದ ಐದು ರೂಪಗಳಲ್ಲಿ ಒಂದು ರೂಪ ಭೂಮಿಯ ಮೇಲೆಯೇ ಇರುವಂತೆ ಅನುಗ್ರಹಿಸಿದ್ದನು. ತನ್ನ ಕುರಿತಾದ ಗೋಪಾಲಮಂತ್ರವನ್ನು ಅಂದರೆ ಕೃಷ್ಣಷಡಕ್ಷರಮಂತ್ರವನ್ನು ಭಜಿಸುವ ಭಕ್ತರಿಗೆ ಫಲ ನೀಡಬೇಕೆಂಬ ಉದ್ದೇಶದಿಂದ. ಹೀಗೆ ಭಕ್ತರಿಗೆ ಫಲ ನೀಡಬೇಕೆಂದರೆ ಒಂದು ರೂಪವನ್ನೇ ಸ್ವೀಕರಿಸುವ ಆವಶ್ಯಕತೆ ಇಲ್ಲದಿದ್ದರೂ, ಭಕ್ತವತ್ಸಲನಾದ ಶ್ರೀಕೃಷ್ಣ ಭಕ್ತರಿಗೆ ತನ್ನ ಮಂತ್ರಜಪದಲ್ಲಿ ಅಧಿಕ ವಿಶ್ವಾಸ ಉಂಟಾಗಲೆಂದು ಹೀಗೆ ಅನುಗ್ರಹಿಸಿರುವನು. ಶ್ರೀಕೃಷ್ಣನ ಈ ಬಗೆಯ ಅನುಗ್ರಹವಿಶೇಷವನ್ನು ಭಕ್ತರೆದುರು ಸಾರಿದವರು ಶ್ರೀ ಮಧ್ವಾಚಾರ್ಯರು–

'ಗೋಪಾಲಮಂತ್ರಂ ಭಜತಾಂ ಫಲಪ್ರದಸ್ತ್ವೇಕೇನ ರೂಪೇಣ ಸ ಭುವ್ಯದೃಶ್ಯತ'

ಮಹಾಭಾರತತಾತ್ಪರ್ಯನಿರ್ಣಯ -೩೨-೨೬.

ಇಷ್ಟೇ ಅಲ್ಲದೆ, ಶ್ರೀ ಮಧ್ವಗುರುಗಳು ತಮ್ಮ 'ತಂತ್ರಸಾರಸಂಗ್ರಹ'ದಲ್ಲಿ ೭೧ ಮಂತ್ರಗಳನ್ನು ಉಲ್ಲೇಖಿಸಿ, ಇವುಗಳಲ್ಲೂ ಎರಡು ಮಂತ್ರಗಳು ಕಲಿಕಾಲದಲ್ಲೂ ಹೆಚ್ಚು ಫಲಪ್ರದಗಳು: ಒಂದು ವೇದವ್ಯಾಸಮಂತ್ರವಾದರೆ ಮತ್ತೊಂದು ಕೃಷ್ಣಮಂತ್ರ ಎಂದು ಸಂದೇಶಿಸಿರುವರು.

'ವಾಸಿಷ್ಠವೃಷ್ಣಿಪ್ರವರಮಂತ್ರಾಸ್ತತ್ರಾಪಿ ವೀರ್ಯದಾಃ'

ತಂತ್ರಸಾರಸಂಗ್ರಹ -೪-೪೨.

ಶ್ರೀಕೃಷ್ಣಮಂತ್ರದ ಕುರಿತಾಗಿ ಶ್ರೀಮದಾಚಾರ್ಯರು ನೀಡಿರುವ ಈ ಸಂದೇಶಗಳಿಗೆ ಜ್ವಲಂತ ನಿದರ್ಶನವಾಗಿ ಮೂಡಿಬಂದಿವೆ ಈ 'ಶ್ರೀಮದ್ಭಾಗವತಸಾರ'.

ಶ್ರೀಶ್ರೀ ವಿಶ್ವೇಶತೀರ್ಥರು ಉಡುಪಿ ಶ್ರೀಕೃಷ್ಣಮುಖ್ಯಪ್ರಾಣರ ಸನ್ನಿಧಿಯಲ್ಲಿ ಸುಮಾರು ಹತ್ತು ತಿಂಗಳುಗಳ ಕಾಲ ನಡೆಸಿದ ಭಾಗವತದ ಪ್ರವಚನಗಳ ಮಾಲಿಕೆಯನ್ನು ಸುಂದರವಾಗಿ, ಗುರುಗಳ ವಿಚಾರಧಾರೆಗೆ–ಶೈಲಿಗೆ ಸ್ವಲ್ಪವೂ ಧಕ್ಕೆ ಬಾರದಂತೆ ನಾಜೂಕಾಗಿ ಪೋಣಿಸಿದವರು ಶ್ರೀ ವಿಜಯೀಂದ್ರಾಚಾರ್ಯರು. ಅವರಿಗೆ ಅಂತಹ ಸೌಭಾಗ್ಯ ದೊರಕಲು ಒಂದು ಕಾರಣ ಶ್ರೀಕೃಷ್ಣಮಂತ್ರ.

ಶ್ರೀ ವಿಜಯೀಂದ್ರರು ಎಂಟನೇ ವಯಸ್ಸಿನವರಿದ್ದಾಗ, ಅವರ ಉಪನಯನ ಉಡುಪಿ ಶ್ರೀಕೃಷ್ಣನ ಸನ್ನಿಧಿಯಲ್ಲೇ ನಡೆದಿದ್ದು, ಆಗ ಸರ್ವಜ್ಞಪೀಠಾರೂಢರಾಗಿದ್ದ ಶ್ರೀಶ್ರೀ ವಿಶ್ವೇಶತೀರ್ಥರು ಅವರಿಗೆ ಶ್ರೀಕೃಷ್ಣಮಂತ್ರವನ್ನು ಉಪದೇಶಿಸಿದರು. ಇದುವರೆಗೂ ಆ ಅನುಸಂಧಾನದಿಂದ ಮಂತ್ರವನ್ನು ಜಪಿಸುತ್ತ ಬಂದಿದ್ದ ವಿಜಯೀಂದ್ರರ ಕೃಷ್ಣಮಂತ್ರದ ಮಾಧ್ಯಮದ ಫಲವಾಗಿಯೇ ಎಂಬಂತೆ ಶ್ರೀಕೃಷ್ಣ

ಅವರಿಂದ ತನ್ನ ಕುರಿತಾದ ವಿಶಿಷ್ಟ ಕೃತಿಯೊಂದು ಹೊರಹೊಮ್ಮುವಂತೆ ಮಾಡಿ ಅನುಗ್ರಹಿಸಿರುವನು

ಇದೇ ಸಮಗ್ರ ಭಾಗವತದ ಸಂದೇಶ - ಭಕ್ತವತ್ಸಲನಾದ ಶ್ರೀಕೃಷ್ಣ ಭಕ್ತರನ್ನು ಹೇಗೆ ಬೇಕಾದರೂ ಉದ್ಧರಿಸಬಲ್ಲ; ಅದಕ್ಕಾಗಿ ತಾನು ಬೇರೆ ಬೇರೆ ರೂಪಗಳನ್ನು ತಾಳಲೂ ಸಿದ್ಧ; ಆ ರೂಪಗಳಲ್ಲಿ ಚಿತ್ರ, ವಿಚಿತ್ರ, ಲೀಲೆಗಳನ್ನು ನಡೆಸಲೂ ಸಿದ್ಧ.

'ಶ್ರೀಮದ್ಭಾಗವತಸಾರ'ದ ಮುಖಪುಟದಲ್ಲಿ ವಿರಾಜಿಸುತ್ತಿರುವ ಶ್ರೀ ಮಧ್ವ ಪ್ರತಿಷ್ಠಿತ ಕೃಷ್ಣ ಭಕ್ತರಿಗೆ, ಸಾಧಕರಿಗೆ ಭಾಗವತದ ಈ ಸಂದೇಶವನ್ನೇ ಸೂಚ್ಯವಾಗಿ ಸಾರುತ್ತಿರುವನು.

ಜೊತೆಗೆ ತನ್ನ ನಿಲುವನ್ನೂ ಘೋಷಿಸುತ್ತಿರುವನು:

ಯೇ ಯಥಾ ಮಾಂ ಪ್ರಪದ್ಯಂತೇ ತಾನ್ ತಥೈವ ಭಜಾಮ್ಯಹಮ್

-ಭಕ್ತರ ಸೇವೆಗನುಗುಣವಾಗಿ ಒಲಿಯುವವನು ನಾನು.

ಸಗ್ರಿ, ರಾಘವೇಂದ್ರ, ಉಪಾಧ್ಯಾಯ

# ವಾಙ್ಮುಖ

ಎಂಟರ ಎಳವೆಯಲ್ಲಿಯೇ ಕಾವಿಯ ನಂಟನ್ನು ಅಂಟಿಸಿಕೊಂಡ ವೆಂಕಟರಮಣ ಶ್ರೀಶ್ರೀ ವಿಶ್ವೇಶತೀರ್ಥ ಶ್ರೀಪಾದರಾಗಿ ಜಗತ್ತೇ ಬೆಬ್ಬೆರಗಾಗುವಂತಹ ವಿಶ್ವತೋಮುಖ ಸಾಧನೆಗಳನ್ನು ಸಾಧಿಸಿದ್ದಾರೆ. ಶ್ರೀಮದಾಚಾರ್ಯರ ಪೀಠಕ್ಕಿರುವ ಸನ್ನಿಧಾನದ ಮಹತ್ವ ತಿಳಿಯಬೇಕಿದ್ದರೆ ನಮ್ಮ ಗುರುಗಳ ಅವಲೋಕನವನ್ನೊಮ್ಮೆ ಮಾಡಿ. ವಾಮನನ ರೂಪ; ತ್ರಿವಿಕ್ರಮನ ಸಾಧನೆ.

ತಮ್ಮ ನಾಲ್ಕನೇ ಪರ್ಯಾಯದಲ್ಲಿ ಗುರುಗಳು ಸಾಧಿಸಿದ ಸಾಧನೆಗಳು ನೂರಾರು. ಸಾಮಾಜಿಕ ಸಾಧನೆಯೇ ಅದ್ಭುತವಾಗಿದ್ದರೆ, ಅದಕ್ಕಿಂತಲೂ ಮಿಗಿಲಾದದ್ದು ಅವರ ಜ್ಞಾನಸೇವೆ. ಜಗತ್ತಿನ ಸಾವಿರಾರು ಅಧ್ಯಾತ್ಮಪಿಪಾಸುಗಳು ತಮ್ಮ ಜ್ಞಾನದ ತೃಷೆಯನ್ನು ಪರ್ಯಾಯದ ಸಂದರ್ಭದಲ್ಲಿ ತಣಿಸಿಕೊಂಡಿದ್ದಾರೆ. ತೃಪ್ತಿಯಿಂದ ಉದ್ಗರಿಸಿದ್ದಾರೆ. ಶ್ರೀ ತಾತ್ಪರ್ಯಚಂದ್ರಿಕಾ, ಶ್ರೀಮನ್ನ್ಯಾಯಸುಧಾ, ಸರ್ವಮೂಲಗಳು, ಉಪನಿಷತ್ತು ಮುಂತಾದ ಉದ್ಗ್ರಂಥಗಳ ಪಾಠದ ಒಟ್ಟಿಗೆ ಸಂಧ್ಯಾಸಮಯದಲ್ಲಿ ಶ್ರೀಮದ್ಭಾಗವತ, ರಾಮಾಯಣ, ಮಹಾಭಾರತ, ಹರಿವಂಶ ಮುಂತಾದ ಇತಿಹಾಸಗ್ರಂಥಗಳ ಪ್ರವಚನವನ್ನು ನಿರಂತರ ನಡೆಸಿದರು. ಭಾವಪೂರ್ಣವಾದ ಮನಮುಟ್ಟುವ ಉಪನ್ಯಾಸ ಕೇಳಿದವರೇ ಧನ್ಯ. ಭಾಗವತದ ಪ್ರತಿಯೊಂದು ಪ್ರಸಂಗವನ್ನೂ ಚೆನ್ನಾಗಿ ಅನುಭವಿಸಿ ಅವುಗಳಿಂದ ಸಾಮಾಜಿಕ, ಧಾರ್ಮಿಕ, ತಾತ್ವಿಕವಾದ ಸಂದೇಶಗಳನ್ನು ಸಾರವನ್ನು ಸಂಗ್ರಹಿಸುವ ಶ್ರೀಪಾದರ ಕಲೆ ಅವರ್ಣನೀಯ.

ವಿಮರ್ಶೆಯಿಂದ ಮೂಡಿಬರುವ ಪ್ರವಚನ 'ಅಜ್ಞೋಹಂ' ಎಂಬ ಭಾವನೆಯನ್ನು ಮೂಡಿಸಿದರೆ, ವಿಮರ್ಶೆಯ ಒಟ್ಟಿಗೆ ಭಾವನೆಯೂ ಸೇರಿದಾಗ 'ದಾಸೋಹಂ' ಎನ್ನುವ ಪ್ರಜ್ಞೆ ಮೂಡುತ್ತದೆ. ಮುಕ್ತಿಗೆ ಹೇತುವಾದ ಎರಡನೇ ಭಾವ ಶ್ರೀಪಾದರ ನುಡಿಯಲ್ಲಡಗಿದೆ.

ಶ್ರೀಮದ್ಭಾಗವತ ಪ್ರವಚನವನ್ನು ಸುಮಾರು ಒಂಭತ್ತು ತಿಂಗಳು ನಡೆಸಿದ್ದಾರೆ. ಮಾತುಮಾತಿಗೂ ಅನುಭಾವದ ಹಿನ್ನೆಲೆಯಲ್ಲಿ ಮೂಡಿಬರುವ ತಾತ್ವಿಕ ಸಂದೇಶಗಳು ಎಂಥಹ ನಾಸ್ತಿಕನನ್ನು ಆಸ್ತಿಕನನ್ನಾಗಿ ಮಾಡುವಂಥಹವು. ಇವುಗಳ ಸ್ವಾದುರಸವನ್ನು ನಾನೊಬ್ಬನೆ ಸ್ವಾರ್ಥಿಯಾಗಿ ಸವಿಯಬಾರದು; ಜನರೆಲ್ಲರೂ ಸವಿಯಬೇಕು. ಭವವೆಂಬ ಕಹಿಯಿಂದ ದೂರವಾಗಬೇಕೆಂದು ಗುರುಗಳ ಅನುಗ್ರಹವನ್ನು ಪಡೆದು ಸಂಗ್ರಹಿಸಿದ್ದೇನೆ. ಸಂಗ್ರಹದಲ್ಲಿಯ ದೋಷಗಳಿಗೆ ನಾನೇ ಹೊಣೆಗಾರನಾಗಿದ್ದೇನೆ. ಗುರುಗಳ ಅಂತರ್ಯಾಮಿಯಾದ ಮಧ್ವಪತಿ ಗೋಪಾಲಕೃಷ್ಣನ ಅಡಿದಾವರೆಗಳಲ್ಲಿ ಈ ಸಂಗ್ರಹಕುಸುಮವನ್ನು ಸಮರ್ಪಿಸುತ್ತೇನೆ.

ಬಿ. ನಾ. ವಿಜಯೀಂದ್ರಾಚಾರ್ಯ

# ಕೃತಜ್ಞತೆ

ನನ್ನ ಗುರುಗಳನ್ನು ಭಕ್ತಿ ಗೌರವಗಳಿಂದ ಕಾಣುವ ಕಣ್ಣುಗಳು ಕೋಟಿಯನ್ನು ಮೀರುತ್ತವೆ. ಆದರೆ ಅವರೆಲ್ಲರನ್ನೂ ಗುರುಗಳು ತಮ್ಮ ಎರಡೇ ಕಣ್ಣುಗಳಿಂದ ನೋಡುತ್ತಾರೆ. ಇದಕ್ಕೆ ಸಾಕ್ಷಿ ನಾನೂ ಒಬ್ಬ. ನನ್ನಲ್ಲಿನ ಅಂಕುಡೊಂಕುಗಳನ್ನೆಲ್ಲ ಸರಿಪಡಿಸಿಕೊಂಡು ಸಾಧನೆಯ ಮಾರ್ಗದಲ್ಲಿ ಮುಂದೂಡಿದವರು ಗುರುಗಳು. ಇಂತಹ ಗುರುಗಳ ಸ್ಮರಣೆ ಎಂದೂ ಮರೆಯದಂತೆ ಕರುಣಿಸಲೆಂದಷ್ಟೇ ಹರಿವಾಯುಗುರುಗಳನ್ನು ಕೃತಜ್ಞನಾಗಿ ಪ್ರಾರ್ಥಿಸಿಕೊಳ್ಳುತ್ತೇನೆ.

ಎರಡನೆಯದಾಗಿ ಮತ್ತೋರ್ವ ನನ್ನ ಗುರುಗಳು ಶ್ರೀಶ್ರೀ ವಿಶ್ವಪ್ರಸನ್ನ ತೀರ್ಥರು. ನಮ್ಮ ಒಳಗಿನ ವ್ಯಕ್ತಿತ್ವವನ್ನು ಸೂಕ್ಷ್ಮವಾಗಿ ಗಮನಿಸಿ ಅರಿಯಬಲ್ಲ ಜಾಣ್ಮೆ ಇವರದು. ನೂರಾರು ಬಾರಿ ತಪ್ಪಿ ನಡೆದಾಗಲೂ ಸಹನೆಯಿಂದ ನನ್ನನ್ನು ತಿದ್ದಿದ್ದಾರೆ. ಶ್ರೀಪಾದರ ಭಾಗವತ ಪ್ರವಚನದ ಒಟ್ಟಿಗೆ ಭಾಗವತ ವಾಚನದ ಮೂಲಕ ಹೃದಯ ಮುಟ್ಟುವಂತೆ ಆಯಾ ಭಾವಗಳನ್ನು ಅಭಿವ್ಯಕ್ತಿಗೊಳಿಸಿದ್ದಾರೆ. ಅವರು ವಾಚನ ಮಾಡಿದ ಬಹುತೇಕ ಶ್ಲೋಕಗಳನ್ನು ಸಂಗ್ರಹಿಸಿದ್ದೇನೆ. ಅನುಗ್ರಹ ಸಂದೇಶವನ್ನು ದಯಪಾಲಿಸಿದ ಗುರುವರ್ಯರಿಗೆ ಕೃತಜ್ಞತಾಪೂರ್ವಕ ಅನಂತ ಸಾಷ್ಟಾಂಗ ನಮನಗಳನ್ನರ್ಪಿಸುವೆ.

ಈ ಸಂಗ್ರಹದಲ್ಲಿ ನನ್ನಿಂದಾದ ದೋಷಗಳನ್ನು ಸರಿಯಾಗಿ ಪರಿಶೀಲಿಸಿ ತಿದ್ದಿ ಉಪಕರಿಸಿದವರು ಘನ ವಿದ್ವಾಂಸರಾದ ಸಹೃದಯಿಗಳಾದ ಶ್ರೀ ಕೆ. ಹಯವದನ ಪುರಾಣಿಕರು. ಗುರುಗಳ ಮೇಲಿನ ಭಕ್ತಿಯಿಂದ ನನ್ನ ಮೇಲಿನ ಕರುಣೆಯಿಂದಲೂ ಪರಿಶೀಲಿಸಿ ತಮ್ಮ ಅನಿಸಿಕೆಯನ್ನು ಬರೆದು ಕೊಟ್ಟಿದ್ದಾರೆ. ಕೃತಜ್ಞತೆಯಿಂದ ಇವರಿಗೆ ನಮಿಸಿ ಸದಾ ಆಶೀರ್ವಾದವನ್ನು ಬಯಸುತ್ತೇನೆ.

ಪರ್ಯಾಯದ ಅವಧಿಯಲ್ಲಿ ನಿರಂತರ ಸೂಕ್ತ ಸಲಹೆಗಳನ್ನು ನೀಡಿ ಪ್ರೀತಿ ಔದಾರ್ಯಗಳಿಂದ ಕಂಡು ನನ್ನನ್ನು ಹರಸಿದವರು ಸಗ್ರಿ ರಾಘವೇಂದ್ರ ಉಪಾಧ್ಯಾಯರು. ಇವರ ಅಂತರ್ಯಾಮಿ ಪ್ರೇರಣೆಯಿಂದಲೇ ಅಲ್ಪನಾದ ನನಗೂ ಇಂತಹ ಸಂಗ್ರಹವನ್ನು ಸಾಧಿಸಲಾಯಿತು. ಸಜ್ಜನ ಸಂಗದ ರುಚಿ ಏನೆನ್ನುವುದನ್ನು ತೋರಿಸಿಕೊಟ್ಟಿದ್ದಾರೆ. ನನ್ನ ಮೇಲಿನ ವಾತ್ಸಲ್ಯದಿಂದ ಮುಖಪುಟಲೇಖನವನ್ನೂ ಬರೆದುಕೊಟ್ಟಿದ್ದಾರೆ. ಇವರ ಬಳಿ ಮತ್ತೂ ಉತ್ತಮ ಮಾರ್ಗದರ್ಶನ ಮಾಡಿರೆಂದು ಪ್ರಾರ್ಥಿಸಿ ವಿನಮ್ರನಾಗಿ ನಮಿಸುತ್ತೇನೆ.

ನನ್ನ ಈ ಕಾರ್ಯದಲ್ಲಿ ಸಕಲವಿಧದಿಂದಲೂ ಪ್ರೋತ್ಸಾಹಿಸಿದ ಮೂವರು ಗುರುಗಳು ಪ್ರಸಿದ್ಧ ವಿದ್ವಾಂಸರಾದ ಎ. ಹರಿದಾಸ ಭಟ್ಟರು, ವೇಂಕಟರಮಣ ಉಪಾಧ್ಯಾಯರು, ಸಿ. ಎಚ್. ಬದರೀನಾಥ ಆಚಾರ್ಯರು –ಇವರನ್ನು

ನಮಿಸುತ್ತೇನೆ. ಅದರಂತೆ ನನ್ನ ಜನ್ಮದಾತೃಗಳಾದ ತಂದೆತಾಯಂದಿರಿಗೂ ನನ್ನ ಸಹೋದರರಿಗೂ ಆಭಾರಿಯಾಗಿದ್ದೇನೆ.

ಈ ಸಂಗ್ರಹಕಾರ್ಯದಲ್ಲಿ ಅತ್ಯಂತ ಆಸಕ್ತಿಯಿಂದ ನನಗೆ ನೆರವಾದ ಸ್ನೇಹಿತರು ಕೆ. ರಾಘವೇಂದ್ರ ಆಚಾರ್ಯ, ಧನಂಜಯ ಆಚಾರ್ಯ, ವಾದಿರಾಜ ಆಚಾರ್ಯ ಮತ್ತು ಸುರೇಂದ್ರ ಇವರ ಉಪಕಾರವನ್ನು ಮರೆಯುವಂತಿಲ್ಲ. ಅದರಂತೆ ಪೂರ್ಣಪ್ರಜ್ಞ, ಆಚಾರ್ಯ, ಸುಜ್ಞಾನೇಂದ್ರ, ದೀಪಕ್, ಸುನೀಲ, ವ್ಯಾಸಮುನಿ ಇವರನ್ನು ಪರೋಕ್ಷವಾಗಿ ಉಪಕರಿಸಿದ ಎಲ್ಲ ಸ್ನೇಹಿತರನ್ನೂ ಕೃತಜ್ಞತಾಪೂರ್ವಕ ಅಭಿನಂದಿಸುತ್ತೇನೆ.

ಪರ್ಯಾಯದ ಅವಧಿಯಲ್ಲಿ ಅನೇಕ ಹೊತ್ತಗೆಗಳನ್ನು ಸಕಾಲದಲ್ಲಿ ಸುಂದರವಾದ ಅಕ್ಷರಮಾಲೆಗಳಿಂದ ವಿನ್ಯಾಸಗೊಳಿಸಿದ, ಸಹೃದಯಿಗಳಾದ 'ನವದುರ್ಗಾ ಲೇಸರ್ ಟೆಕ್'ನ ಮಾಲಿಕರಾದ ಶ್ರೀಯುತ ಡಾ। ಪದ್ಮನಾಭ ಕೇಕುಣ್ಣಾಯರಿಗೆ ಮತ್ತು ಇವರ ಶ್ರೀಮತಿಯವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಸಕಾಲದಲ್ಲಿ ಈ ಗ್ರಂಥವು ಹೊರಬರಲು ಇವರ ವಿಶ್ವಾಸ ಮತ್ತು ಕರ್ತವ್ಯನಿಷ್ಠೆಗಳೇ ಕಾರಣ.

ಈ ಮುದ್ರಣಕಾರ್ಯಕ್ಕಾಗಿ ಹದಿನೈದುಸಾವಿರ ರೂಪಾಯಿಗಳನ್ನು ನಂಜನಗೂಡಿನವರಾದ ಶ್ರೀ ಸತ್ಯನಾರಾಯಣ ರಾವ್ ದಂಪತಿಗಳು ನೀಡಿದ್ದಾರೆ. ಅವರ ಈ ಉಪಕಾರವನ್ನು ನಾವು ಮರೆಯುವಂತಿಲ್ಲ.

ಈ ಪುಸ್ತಕದ ಅಂದಕ್ಕೆ ಕಾರಣವಾಗುವಂತಹ ಮುಖಪುಟ ವಿನ್ಯಾಸವನ್ನು ಸಿದ್ಧಗೊಳಿಸಿದ ಸಹೃದಯಿಗಳಾದ ಕೆ. ಎಂ. ಶೇಷಗಿರಿ ಬೆಂಗಳೂರು ಇವರಿಗೂ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ಗ್ರಂಥಕ್ಕೆ ಸಂಬಂಧಿಸಿದ ಅನೇಕ ಕಾರ್ಯಗಳಲ್ಲಿ ವಿಶೇಷವಾಗಿ ಪರಿಶ್ರಮವನ್ನು ವಹಿಸಿದ ನನ್ನ ಪ್ರಿಯಮಿತ್ರ ಪವನ ಕುಮಾರನನ್ನು ಈ ಸಂದರ್ಭದಲ್ಲಿ ಮರೆಯುವಂತಿಲ್ಲ.

ಸಕಾಲದಲ್ಲಿ ಮುದ್ರಿಸಿಕೊಟ್ಟ ಪೂರ್ಣಪ್ರಜ್ಞ ಮುದ್ರಣಾಲಯದವರಿಗೂ ಆಭಾರಿಯಾಗಿದ್ದೇನೆ.

ಶ್ರೀಮದ್ಭಾಗವತಸಾರವನ್ನು ಪ್ರಕಾಶನಗೊಳಿಸಿದ ಶ್ರೀ ಮಧ್ವಜಯಂತೀ ಪ್ರತಿಷ್ಠಾನಕ್ಕೆ ನನ್ನ ಅನಂತ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಬೆ. ನಾ. ವಿಜಯೀಂದ್ರಾಚಾರ್ಯ

# ಪ್ರಥಮ ಸ್ಕಂಧಃ

## ದ್ವಿತೀಯ ಸ್ಕಂಧಃ

## ತೃತೀಯ ಸ್ಕಂಧಃ



## ಚತುರ್ಥ ಸ್ಕಂಧಃ

## ಪಂಚಮ ಸ್ಕಂಧಃ



## ಷಷ್ಠ ಸ್ಕಂಧಃ

## ಸಪ್ತಮ ಸ್ಕಂಧಃ

## ಅಷ್ಟಮ ಸ್ಕಂಧಃ

## ನವಮ ಸ್ಕಂಧಃ



## ದಶಮ ಸ್ಕಂಧಃ

## ಏಕಾದಶ ಸ್ಕಂಧಃ



## ದ್ವಾದಶ ಸ್ಕಂಧಃ



* * *

## ಶ್ರೀ ಪೇಜಾವರ ಶ್ರೀಪಾದರ

# 'ಭಾಗವತ ಪ್ರವಚನ'

"ಮಾತೆಯರೆ! ನೀವು ಏನು ತಪ್ಪು ಮಾಡಿದರೂ ನಿಮಗೆ ರಿಯಾಯಿತಿ ನೀಡುತ್ತೇವೆ. ಆದರೆ ನೀವು ಭರತನಂತಹ ಸುಪುತ್ರರನ್ನು ಜಗತ್ತಿಗೆ ನೀಡಬೇಕು ನೀಡಿದರೆ ನೀವು ಏನು ತಪ್ಪು ಮಾಡಿದರೂ ಭಗವಂತ ಕ್ಷಮಿಸುತ್ತಾನೆ. ಹೀಗೆಂದ ಮಾತ್ರಕ್ಕೆ ನೀವೆಲ್ಲರೂ ಕೈಕೇಯಿಯರಾಗಬೇಕೆಂದು ಅಭಿಪ್ರಾಯವಲ್ಲ. ಭರತನ ತಾಯಂದಿರಾಗಬೇಕೆಂದು ಬಯಸುತ್ತೇವೆ.

"ಮಹನೀಯರೆ! ನೀವೆಲ್ಲರೂ ಹಿರಣ್ಯಕಶಿಪುಗಳಾಗುವುದು ಬೇಡ. ಪ್ರಹ್ಲಾದ ನಂತಹ ಮಗನಿಗೆ ತಂದೆಯಂದಿರಾಗಿರಿ. ಪ್ರಹ್ಲಾದನಂತಹ ಮಕ್ಕಳನ್ನು ಪಡೆದರೆ ನಿಮ್ಮ ಎಲ್ಲ ಅಪರಾಧಗಳನ್ನೂ ಭಗವಂತ ಮನ್ನಿಸುತ್ತಾನೆ."

*ಹೀಗೆ ಸಾಗುತ್ತದೆ ಓದುಗರ ಎದೆತಟ್ಟುವ, ಮನಮುಟ್ಟುವ ಮಾತಿನ ಓಘ, ರಾಮಾಯಣ ಭಾರತ ಹೀಗೆ ಉಪನಿಷತ್ತು, ಏಕೆ? ಆಧುನಿಕ ಇತಿಹಾಸಗಳಂತಹ ಎಲ್ಲ ಪ್ರಸಂಗಗಳನ್ನು ಸಂವಾದಿಯಾಗಿ ತೋರಿಸುವ ಭಾಗವತಪ್ರವಚನವಿದು ಪರಮಪೂಜ್ಯ ಗುರುವರ್ಯರದು, ಅನ್ಯಾದೃಶ! ಇಂತಹ ಇನ್ನೊಂದು ಕೃತಿಯನ್ನು ನಾವು ಕಂಡಿಲ್ಲ! ಇದೀಗ ಈ ಹೊತ್ತಗೆ ಭಾಗವತರಸಪಾನರಸಿಕರಿಗೆ ರಸದೌತಣ ನೀಡಲಿದೆ. ಗುರುವರ್ಯರ ಕರುಣೆಯ ಉಪದೇಶಧಾರೆಯನ್ನು ಮನೆಮನೆಗೆ ಹರಿಸಲಿದೆ.*

— ಹಯವದನ ಪುರಾಣಿಕ

ಶ್ರೀರುಗ್ಮಿಣೀಶಾಯ ನಮಃ

# ಅಥ ಪ್ರಥಮ ಸ್ಕಂಧಃ

## ಮಂಗಲಪದ್ಯ

ಶ್ರೀಮದ್ಧನುಮ–ಭೀಮ–ಮಧ್ವಾಂತರ್ಗತ ರಾಮ–ಕೃಷ್ಣ–ವೇದವ್ಯಾಸಾತ್ಮಕ ಲಕ್ಷ್ಮೀಹಯಗ್ರೀವಾಯ ನಮಃ

ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ
ಸಂಜೀವಯತ್ಯಖಿಲ ಶಕ್ತಿಧರಃ ಸ್ವಧಾಮ್ನಾ ।
ಅನ್ಯಾಂಶ್ಚ ಹಸ್ತ ಚರಣ ಶ್ರವಣತ್ವಗಾದೀನ್
ಪ್ರಾಣಾನ್ನಮೋ ಭಗವತೇ ಪುರುಷಾಯ ತುಭ್ಯಮ್ ॥

ಆಚಾರ್ಯಃ ಪವನೋಽಸ್ಮಾಕಂ ಆಚಾರ್ಯಾಣೀ ಚ ಭಾರತೀ ।
ದೇವೋ ನಾರಾಯಣಃ ಶ್ರೀಶಃ ದೇವೀ ಮಂಗಲದೇವತಾ ॥

ಯೋ ವಿಪ್ರಲಂಭ ವಿಪರೀತ ಮತಿಪ್ರಭೂತ
ವಾದಾನ್ನಿರಸ್ಯ ಕೃತವಾನ್ಭುವಿ ತತ್ತ್ವವಾದಮ್ ।
ಸರ್ವೇಶ್ವರೋ ಹರಿರಿತಿ ಪ್ರತಿಪಾದಯಂತ-
ಮಾನಂದತೀರ್ಥ ಮುನಿವರ್ಯಮಹಂ ನಮಾಮಿ ॥

ಆಪಾದ ಮೌಲಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ ॥

ಜನ್ಮಾದ್ಯಸ್ಯ ಯತೋಽನ್ವಯಾದಿತರತಶ್ಚಾರ್ಥೇಷ್ವಭಿಜ್ಞಃ ಸ್ವರಾಟ್
ತೇನೇ ಬ್ರಹ್ಮ ಹೃದಾ ಯ ಆದಿಕವಯೇ ಮುಹ್ಯನ್ತಿ ಯಂ ಸೂರಯಃ ।
ತೇಜೋ ವಾರಿಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋ ಮೃಷಾ
ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ ಸತ್ಯಂ ಪರಂ ಧೀಮಹಿ ॥

ಸೃಷ್ಟಿಸ್ಥಿತ್ಯಪ್ಯಯೇಹಾನಿಯತಿದೃಶಿತಮೋಬಂಧಮೋಕ್ಷಾಶ್ಚ ಯಸ್ಮಾ-
ದಸ್ಯ ಶ್ರೀ-ಬ್ರಹ್ಮ-ರುದ್ರ ಪ್ರಭೃತಿ ಸುರ-ನರ-ದ್ವಿಟ್ಯಶಶತ್ರ್ವಾತ್ಮಕಸ್ಯ ।
ವಿಷ್ಣೋರ್ವ್ಯಸ್ತಾಃ ಸಮಸ್ತಾಃ ಸಕಲ ಗುಣನಿಧಿಃ ಸರ್ವದೋಷವ್ಯಪೇತಃ
ಪೂರ್ಣಾನಂದೋಽವ್ಯಯೋ ಯೋ ಗುರುರಪಿ ಪರಮಶ್ಚಿಂತಯೇ ತಂ ಮಹಾಂತಮ್ ॥

ಶ್ರೀಮನ್ನಾರಾಯಣನು ಬಾದರಾಯಣರಾಗಿ ಅವತರಿಸಿ, ವೇದಾದ್ರಿಯ ಉತ್ತುಂಗ ಶಿಖರಗಳನ್ನೇರಿ ವೇದಗಳ ಸಾರವನ್ನು ಸಂಗ್ರಹಿಸಿ ಕರುಣೆಯಿಂದ ಪಾಮರರಾದ ಸಜ್ಜನರಿಗೆ ನೀಡಿದನು. ಈ ಮೂಲಕ ಅಪಾರವಾದ ಉಪಕಾರವನ್ನು ಮಾಡಿ ಭವಾಕೂಪಾರದ ಪಾರವನ್ನು ತೋರಿದ. ಶ್ರೀವೇದವ್ಯಾಸರ ಪುರಾಣ ರಚನೆ, ವೇದಗಳ ವಿಂಗಡಣೆ, ಮಹಾಭಾರತದ ನಿರ್ಮಾಣ ಮುಂತಾದ ಪ್ರತಿಯೊಂದು ಕೃತಿಯೂ ಮಾನವರ ಪರಮೋನ್ನತಿಗೆ ಕಾರಣವಾಗಿದೆ. ಜೀವನಕ್ಕೆ ಬೇಕಾದ ಬಹುದೊಡ್ಡ ಸಂಗತಿಗಳನ್ನು ಅಳವಡಿಸಿಕೊಂಡ ಗ್ರಂಥ ಮಹಾಭಾರತ. ಪಂಚಮವೇದವೆಂದು ಪ್ರಸಿದ್ಧವಾದ ಈ ಗ್ರಂಥದಲ್ಲಿ ಹೇಳದ ಸಂಗತಿಗಳೇ ಇಲ್ಲ. ಇದರಲ್ಲಿ ಹೇಳಿದ್ದನ್ನೇ ಬೇರೆ ಗ್ರಂಥಗಳಲ್ಲಿ ಕಾಣಬಹುದು.

ಮಹಾಭಾರತ ರಚನೆಯಾದ ಬಳಿಕ ರಚನೆಗೊಂಡ ಮತ್ತೊಂದು ಗ್ರಂಥವೇ ಶ್ರೀಮದ್ಭಾಗವತ. ಇದು 'ಪುರಾಣ ರಾಜ' ಎನಿಸಿದೆ. ಭಗವದ್ಭಕ್ತರ ಕರ್ತವ್ಯಗಳನ್ನು ಜ್ಞಾನ, ಭಕ್ತಿ, ವೈರಾಗ್ಯಗಳ ಹಿನ್ನೆಲೆಯಲ್ಲಿ ನಿರೂಪಿಸಲು ಹೊರಟ ಗ್ರಂಥವೇ ಶ್ರೀಮದ್ಭಾಗವತ. 'ಭಗವದ್ಭಕ್ತಿಯೇ ಭಕ್ತರ ಕರ್ತವ್ಯ' ಎಂದು ಮಂಗಲಪದ್ಯದಲ್ಲಿಯೇ 'ಧೀಮಹಿ' ಎಂಬ ಪದದಿಂದ ವ್ಯಾಸರು ಸೂಚಿಸಿದ್ದಾರೆ.

ಈ ಧ್ಯಾನವು ಜ್ಞಾನ ಮತ್ತು ಸಾಕ್ಷಾತ್ಕಾರಗಳ ನಡುವೆ ಇದೆ. ತತ್ತ್ವನಿಶ್ಚಯವಾಗದೆ ಧ್ಯಾನ ಕೈಗೂಡದು. ನಿಶ್ಚಯಜ್ಞಾನವಿಲ್ಲದೆ ಧ್ಯಾನಕ್ಕೆ ಕುಳಿತರೆ ಭಗವಂತನ ಬಗ್ಗೆಯೇ ಗೊಂದಲಗಳುಂಟಾಗಿ ಸಂಶಯರಾಕ್ಷಸರ ಆಕ್ರಮಣಕ್ಕೆ ಗುರಿಯಾಗಿ ಧ್ಯಾನಕ್ಕೆ ಕಟಪಾಣ ಬೀಳುವ ಸಾಧ್ಯತೆಗಳಿವೆ. ಆದ್ದರಿಂದ ಏಕಾಗ್ರತೆಯಿಂದ ಧ್ಯಾನ ಸಿದ್ಧಿಸಬೇಕಾದರೆ ತತ್ತ್ವ ನಿಶ್ಚಯವಾಗಬೇಕೆನ್ನುತ್ತಾರೆ ಶ್ರೀಮದಾಚಾರ್ಯರು. 'ಧ್ಯಾನಂ ನಿಶ್ಚಿತ ತತ್ತ್ವಸ್ಯ' (ತಂತ್ರಸಾರ ೪--೧೪೭) ಎಂದು.

ಜ್ಞಾನಕ್ಕೆ ಪೂರಕವಾಗಿ ಭಕ್ತಿ, ವಿರಕ್ತಿಗಳು ಬೇಕು. ಪ್ರೀತಿ, ಆಸಕ್ತಿಗಳನ್ನು ಜಗತ್ತಿನೆಡೆ ಹರಿಸಿದರೆ ಹರಿ ದೂರಸರಿಯುತ್ತಾನೆ. ಜಗತ್ತಿನಲ್ಲಿ ವಿರಕ್ತಿ, ಹರಿಯಲ್ಲಿ ಭಕ್ತಿಯನ್ನು ತಾಳಬೇಕು. ಹೀಗೆ ತತ್ತ್ವಜ್ಞಾನವನ್ನು ತಲೆಯಲ್ಲಿ ಹೊತ್ತುಕೊಂಡು, ಹರಿಭಕ್ತಿಯನ್ನು ಹೃದಯದಲ್ಲಿ ತುಂಬಿಕೊಂಡು, ವಿರಕ್ತಿ ಎಂಬ ಮಡಿಯನ್ನುಟ್ಟುಕೊಂಡು ಧ್ಯಾನಕ್ಕೆ ಕುಳಿತರೆ ಭಗವತ್ಸಾಕ್ಷಾತ್ಕಾರವಾಗುತ್ತದೆ. ಆದ್ದರಿಂದ 'ಧ್ಯಾನ' ಎಂಬುದು ಜ್ಞಾನ ಮತ್ತು ಸಾಕ್ಷಾತ್ಕಾರಗಳ ನಡುವೆ ಇದೆ. ಧ್ಯಾನಕ್ಕೆ ಜ್ಞಾನ, ಭಕ್ತಿ, ವೈರಾಗ್ಯಗಳು ಪೂರಕವಾಗಿವೆ. ಇವುಗಳಿಂದ ಸಹಿತವಾದದ್ದೇ ಧ್ಯಾನ. ಈ ದೃಷ್ಟಿಯಿಂದಲೇ ವ್ಯಾಸರು 'ಧೀಮಹಿ' ಎಂದು ಪ್ರಯೋಗಿಸಿದ್ದಾರೆ. ಪ್ರತ್ಯೇಕವಾಗಿ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಹೇಳದಿರುವುದು ಈ ತಾತ್ತ್ವಿಕ ಚಿಂತನೆಗೆ ನಾಂದಿಯಾಗಿದೆ.

ಧ್ಯಾನ ಎಂದರೆ ನಿರಂತರ ಚಿಂತನೆ. ನಿರಂತರ ಚಿಂತಿಸುವುದೇ ಧ್ಯಾನ. ನಾವು ಯಾವ ವಸ್ತುವನ್ನು ನೆನೆಯಬೇಕು? ಒಂದು ವಸ್ತುವನ್ನು ನೆನೆಯಬೇಕಾದರೆ ಅದರಲ್ಲಿ ಗುಣಗಳು ತುಂಬಿರಬೇಕು. ಪ್ರೀತಿ ಹುಟ್ಟಲು ಗುಣಸಂಪನ್ನತೆಯೇ ಕಾರಣ. ಜಗತ್ತಿನಲ್ಲಿ ಶ್ರೇಷ್ಠ ಗುಣಗಳಿಂದ ತುಂಬಿದ ಎಲ್ಲಾ ವಸ್ತುಗಳಿಗಿಂತಲೂ ಶ್ರೇಷ್ಠನಾದವ

ಶ್ರೀಮನ್ನಾರಾಯಣ. ಆದ್ದರಿಂದ ಮುಕ್ತಾಮುಕ್ತರನ್ನೂ ನಿಯಮಿಸುವ ಭಗವಂತನನ್ನೇ ಧ್ಯಾನಿಸಬೇಕು.

ಪರನಾದ ಭಗವಂತ ಸತ್ಯನೂ ಆಗಿದ್ದಾನೆ. ಜಗತ್ತಿನಲ್ಲಿ ಇರುವ ವಸ್ತುಗಳೆಲ್ಲಾ ಸತ್ಯವಾಗಿಯೇ ಇರುವಾಗ ಪರನು ಸತ್ಯ ಎಂದುದೇಕೆ? ಎಂದರೆ ಪರಮಾತ್ಮನು ಸತ್ಯವಾದ ಜಗತ್ತಿಗಿಂತಲೂ ಸತ್ಯನಾಗಿದ್ದಾನೆ. ಸತ್ಯಸ್ವರೂಪನಾಗಿದ್ದಾನೆ. ಇರುವ ವಸ್ತುಗಳಿಗೆಲ್ಲಾ ಇರುವಿಕೆಯನ್ನು ನೀಡಿದ್ದರಿಂದ– ಸತ್ತಾಪ್ರದನಾದ್ದರಿಂದ ಭಗವಂತನು ಸತ್ಯ ಎನಿಸಿದ್ದಾನೆ. ಇದನ್ನೇ ಟೀಕಾಕೃತ್ಪಾದರು ತತ್ವಸಂಖ್ಯಾನದ ಕೊನೆಗೆ ಹೇಳುತ್ತಾರೆ–

ಪದ್ಮಾ ಪದ್ಮಾಸನಾನಂತ ಪ್ರಭೃತೀದಂ ಯದಿಚ್ಛಯಾ ।
ಸತ್ತಾದಿ ಲಭತೇ ದೇವಃ ಪ್ರೀಯತಾಂ ಶ್ರೀಪತಿಃ ಸ ಮೇ ॥

ಲಕ್ಷ್ಮೀ, ಚತುರ್ಮುಖಬ್ರಹ್ಮ, ಶೇಷ ಮೊದಲಾದ ಸಮಸ್ತವಾದ ಈ ಪ್ರಪಂಚವು ಯಾವನ ಇಚ್ಛಾಮಾತ್ರದಿಂದ ಸೃಷ್ಟಿ ಸ್ಥಿತ್ಯಾದಿಗಳನ್ನು ಪಡೆಯುತ್ತದೆಯೋ, ಅಂತಹ ಕ್ರೀಡಾದಿ ಗುಣವಿಶಿಷ್ಟನಾದ ಲಕ್ಷ್ಮೀಪತಿಯು ನನ್ನಲ್ಲಿ ಪ್ರೀತಿಯನ್ನು ತಾಳಲಿ!! ಎಂದು.

## ಭಗವಂತನ ಅರಿವಿಗೆ ಜಗತ್ತು ಮಾಧ್ಯಮ

ಮುಂದೆ ಸತ್ಯನಾದ, ಧ್ಯಾನಕ್ಕೆ ವಿಷಯನಾದ, ಶ್ರೇಷ್ಠನಾದ ಭಗವಂತನನ್ನು ಗುರುತಿಸುವ ಬಗೆ ಹೇಗೆ? ಎಂಬ ಪ್ರಶ್ನೆ ಬರುತ್ತದೆ. ಒಂದು ವಸ್ತುವನ್ನು ತಿಳಿಯಬೇಕಿದ್ದರೆ ಅದರ ಲಕ್ಷಣಜ್ಞಾನ ಬೇಕು. ಉದಾ:

ಮನುಷ್ಯ ಎಂದರೆ ಯಾರು?

ಉತ್ತರ: ಕೈ, ಕಾಲು, ತಲೆ ಇದ್ದವ ಮನುಷ್ಯ.

ಪ್ರಶ್ನೆ: ಕೈ, ಕಾಲು, ತಲೆ ಮಂಗನಿಗೂ ಇದೆಯಲ್ಲವೇ?

ಉತ್ತರ: ಬಾಲ ಇರಬಾರದು.

ಕೈಕಾಲುಗಳಿದ್ದು ಬಾಲ ಇಲ್ಲದ ವಸ್ತುವನ್ನು ಕಂಡಾಗ 'ಮನುಷ್ಯ' ಎಂದು ಗುರುತಿಸುತ್ತೇವೆ. ಕಣ್ಣಿಗೆ ಕಾಣುವ ವಸ್ತುಗಳನ್ನು ಇಂತಹ ಲಕ್ಷಣಗಳಿಂದ ಗುರುತಿಸುತ್ತೇವೆ. ಆದರೆ ಕಣ್ಣಿಗೇ ಕಾಣದ ಭಗವಂತನನ್ನು ಗುರುತಿಸುವ ಬಗೆ ಹೇಗೆ? ಅವನ ಲಕ್ಷಣವಾದರೂ ಏನು? ಎಂದು ಸಂಶಯ ಬಂದರೆ; ವ್ಯಾಸರು ಉತ್ತರಿಸಿದರು 'ಜನ್ಮಾದ್ಯಸ್ಯ ಯತಃ' ಎಂದು.

ನಾವು ಕಾಣುವ ಜಗತ್ತಿನ ಮೂಲಕ ಕಾಣದ ಭಗವಂತನನ್ನು ಗುರುತಿಸಬೇಕು. ನಮಗೆ ದೇವರು ಕಾಣಿಸದಿದ್ದರೂ ದೇವರಿಂದ ಸೃಷ್ಟವಾದ ಜಗತ್ತು ಕಾಣಿಸುತ್ತದೆ. ಈ ಕಾಣುವ ಜಗತ್ತಿನ ಹುಟ್ಟು, ಸ್ಥಿತಿ, ನಾಶಗಳಿಗೆ ಕಾರಣ ಯಾರೆಂದು ಅರಸಿದರೆ ದೇವರ ಅಸ್ತಿತ್ವ ಅರಿಯುತ್ತದೆ. ಒಂದು ಸಣ್ಣ ಗಡಿಯಾರವೂ ಕ್ರಮಬದ್ಧವಾಗಿ ಚಲಿಸಬೇಕಾದರೆ ಅದರ ಹಿಂದೆ ಒಬ್ಬ ವಿಜ್ಞಾನಿಯ ಅಗತ್ಯವಿದೆ. ಯಾರೂ ನಿರ್ಮಿಸದೆ ತನ್ನಷ್ಟಕ್ಕೇ

ತಾನು ಚಲಿಸದು. ಒಂದು ಸುಂದರ ಸೌಧ ಊರ ಮಂದಿಯನ್ನೆಲ್ಲಾ ಆಕರ್ಷಿಸುತ್ತಿದೆ ಎಂದರೆ ಅದಕ್ಕೊಬ್ಬ ಪಳಗಿದ ಶಿಲ್ಪಿಯು (ಇಂಜಿನಿಯರ್) ಕಾರಣ ಎನ್ನುತ್ತೇವೆ. ಹೀಗೆ ಜಗತ್ತಿನ ಪ್ರತಿಯೊಂದು ಸುಂದರ ವಸ್ತುಗಳ, ಕ್ರಿಯಾಶೀಲ ಯಂತ್ರಗಳ ಅಸ್ತಿತ್ವಕ್ಕೆ ಕಾರಣೀಭೂತನಾದ ವ್ಯಕ್ತಿಯೊಬ್ಬನನ್ನು ಗುರುತಿಸುವ ನಾವು, ವ್ಯಕ್ತಿಯ ಶಕ್ತಿಯಿಂದ ಅಸ್ತಿತ್ವವನ್ನು ಪಡೆದ ವಸ್ತುಗಳ ಶಕ್ತಿ ಕುಂಠಿತವಾದರೂ ಕಾರಣೀಭೂತನಾದ ವ್ಯಕ್ತಿಯನ್ನು ಅಲ್ಲಗಳೆಯುವುದಿಲ್ಲ. ಸಮಯಸೂಚಕವಾದ ಗಡಿಯಾರ ಸೆಲ್ ಮುಗಿದರೆ ಕ್ರಿಯಾಶೂನ್ಯವಾಗುತ್ತದೆ. ಅಥವಾ ಹಾಳಾಗಿ ನಿಲ್ಲುವ ಸಂದರ್ಭವಿದೆ. ಹೀಗಿರಲು ಜಗತ್ತೆಂಬ ಗಡಿಯಾರದಲ್ಲಿ ಸೂರ್ಯ–ಚಂದ್ರರೆಂಬ ಮುಳ್ಳುಗಳ ಚಲನೆ ನಿಲ್ಲುವುದೆಂದೇ ಇಲ್ಲ. ಒಂದು ಕ್ಷಣವೂ ನಿಲ್ಲದಂತೆ ಕ್ರಮಬದ್ಧವಾಗಿ ಸೂರ್ಯಚಂದ್ರರ ಚಲನೆಯಾಗುತ್ತಿದೆ. ಒಂದು ವಸ್ತು ತನ್ನಷ್ಟಕ್ಕೆ ತಾನು ಚಲಿಸಲು ಸಾಧ್ಯವೋ? ಇಲ್ಲವೆ ಇಲ್ಲ. ಆದ್ದರಿಂದ ಇವುಗಳಿಗೆಲ್ಲ ಕಾರಣೀಭೂತನಾದ ಭಗವಂತನ ಅಸ್ತಿತ್ವವನ್ನು ಒಪ್ಪಲೇ ಬೇಕಲ್ಲವೇ?

ನಾವು ವಿಚಾರ ಸಾಗರಕ್ಕೆ ಇಳಿದು ಉದಾಹರಣೆಯಾಗಿ ನಮ್ಮ ಶರೀರವನ್ನೇ ನೋಡೋಣ. ನಮ್ಮ ಶರೀರ ಎಷ್ಟು ಕ್ರಮಬದ್ಧವಾಗಿ ರಚನೆಯಾಗಿದೆ ಎಂದು ವಿಚಾರಮಾಡೋಣ. ನಮ್ಮ ಹಲ್ಲು ಆಹಾರವನ್ನು ಪುಡಿಮಾಡುತ್ತದೆ. ಜಠರಾಗ್ನಿ ಅದನ್ನು ಪಕ್ವಗೊಳಿಸುತ್ತದೆ. ಆಹಾರದ ಸಾರಭಾಗ ನರನಾಡಿಗಳಲ್ಲೆಲ್ಲಾ ರಕ್ತವಾಗಿ ಹರಿಯುತ್ತದೆ. ಬೇಡವಾದ ಚರಟ ಮಲಮೂತ್ರವಾಗಿ ಹೊರಬೀಳುತ್ತದೆ. ಕಣ್ಣು ದೂರದ ವಸ್ತುವನ್ನು ಕಂಡರೆ ಕಿವಿಯು ಅಂತರಿಕ್ಷದ ಶಬ್ದವನ್ನು ಗ್ರಹಿಸುತ್ತದೆ. ಹೀಗೆ ವಿಚಾರಧಾರೆಗೆ ಚ್ಯುತಿ ಬಾರದಿರುವಷ್ಟು ಅದ್ಭುತವಾದ ಆಶ್ಚರ್ಯ ಸಂಗತಿಗಳನ್ನು ನಮ್ಮ ಶರೀರದಲ್ಲಿಯೇ ಕಾಣಬಹುದಾಗಿದೆ. ಹೀಗಿರಲು ಜಗತ್ತಿನ ಬಗ್ಗೆ ಹೇಳುವುದೆಂತು? ಭೂಮಂಡಲದ ರಚನೆಯ ಬಗ್ಗೆಯೇ ಅರಿಯದ ನಾವು ಬ್ರಹ್ಮಾಂಡದ ರಚನೆಯನ್ನೇನು ಅರಿತೇವು? ಗಾಳಿಯು ಬಿಡುವಿಲ್ಲದೆ ಬೀಸುತ್ತಿದ್ದರೆ; ತಡೆಯಿಲ್ಲದೆ ತೆರೆಗಳು ಸಾಗರದಲ್ಲಿ ತೂರಿ ತೂರಿ ಬರುತ್ತಿವೆ. ಬ್ರಹ್ಮಾಂಡದಲ್ಲಿ ಅದ್ಭುತವಾದ ಕೋಟಿಕೋಟಿ ಗ್ರಹಪುಂಜಗಳು ತುಂಬಿಕೊಂಡಿವೆ. ಗ್ರಹಗಳ ಚಲನೆ, ನಕ್ಷತ್ರಗಳ ರಚನೆ, ಅವುಗಳ ವ್ಯಾಪ್ತಿ, ವಿಸ್ತಾರ ಹೀಗೆ ಆಲೋಚಿಸುತ್ತಾ ಹೋದಲ್ಲಿ ಬಾಯಿಗೆ ಬೆರಳಿಟ್ಟು ಅಬ್ಬಾ!! ಎಂದು ಉದ್ಗರಿಸುತ್ತೇವೆ. ಪ್ರತಿಯೊಂದು ವಸ್ತುವಿಗೂ ಕಾರಣನಾದವ ಒಬ್ಬನಿದ್ದಾನೆ ಎಂದು ನಮ್ಮ ಅನುಭವದ ಹಿನ್ನೆಲೆಯಲ್ಲಿಯೇ ಅಂಗೀಕರಿಸುವ ನಾವು, ಇಂತಹ ಅದ್ಭುತ ಜಗತ್ತಿಗೂ ಒಬ್ಬ ಕಾರಣಪುರುಷನಿದ್ದಾನೆ ಎಂದು ಒಪ್ಪಲು ಹಿಂಜರಿಕೆ ಏಕೆ? ಅಂಜಿಕೆಯಾದರೂ ಏಕೆ?!

ಇಂತಹ ಜಗತ್ತನ್ನು ನಿರ್ಮಿಸುವವ ಒಬ್ಬನಿದ್ದಾನೆಂದಮೇಲೆ ಅವನು ಸರ್ವಶಕ್ತನೂ ಸರ್ವಜ್ಞನೂ ಸ್ವತಂತ್ರನೂ ಆಗಿರಬೇಕು. ಸಾಮಾನ್ಯರಿಂದ ಇಂತಹ ಜಗತ್ತಿನ ನಿರ್ಮಾಣ ಸಾಧ್ಯವಿಲ್ಲ.

ಹೀಗೆ ವಸ್ತುವನ್ನು ನೋಡಿ ವಿಜ್ಞಾನಿಯನ್ನು ಗುರುತಿಸುವಂತೆ ಜಗತ್ತನ್ನು ನೋಡಿ ಅನಂತಶಕ್ತನಾದ ಸರ್ವಜ್ಞನಾದ ಭಗವಂತನನ್ನು ತಿಳಿಯಬೇಕೆಂಬ ವಿಸ್ತಾರಬುದ್ಧಿ ಯಿಂದ ವ್ಯಾಸರು 'ಜನ್ಮಾದ್ಯಸ್ಯ ಯತಃ' ಎಂದರು.

ಭಗವಂತನೇ ಕಾಣದಿರುವಾಗ ಭಗವಂತನ ಗುಣಗಳನ್ನರಿಯುವ ಬಗೆ ಹೇಗೆ? ಎಂದರೆ 'ಅನ್ವಯಾತ್' 'ಇತರತಶ್ಚ' ಎಂದು ಹರಿಯ ಅರಿವಿಗೆ ಬೇಕಾದ ಎರಡು ಮಾರ್ಗಗಳನ್ನು ತಿಳಿಸಿದರು.

೧] ಅಪೌರುಷೇಯಗಳಾದ ಅನಂತವೇದಗಳು ಭಗವಂತನ ಗುಣಗಳನ್ನು ತಿಳಿಸುತ್ತಿವೆ. ಇಂತಹ ಪುರುಷನಿರ್ಮಿತವಲ್ಲದ ವೇದಗಳಿಂದ ಭಗವಂತನ ಗುಣ ಗಳನ್ನು ತಿಳಿದುಕೊಳ್ಳಬೇಕು.

ಪುರುಷನಿರ್ಮಿತ ಗ್ರಂಥಗಳಿಂದ ಭಗವಂತನ ಗುಣಗಳು ಪ್ರಮಾಣಸಿದ್ಧವಾಗ ಲಾರವು. ಸ್ವತಃ ತಮ್ಮ ಮೇಲೆ ವಿಶ್ವಾಸವಿಲ್ಲದ ಪುರುಷರು ಮತ್ತೊಬ್ಬರ ವಿಶ್ವಾಸ ವನ್ನು ಸಂಪಾದಿಸುವುದಾದರೂ ಹೇಗೆ? ಗ್ರಂಥ ಬರೆದ ವ್ಯಕ್ತಿಯಲ್ಲಿಯೇ ವಿಶ್ವಾಸ ವಿಲ್ಲದಿರುವಾಗ ಗ್ರಂಥದ ಬಗ್ಗೆಯಾದರೂ ವಿಶ್ವಾಸ ಹೇಗೆ ಹುಟ್ಟೀತು?!

ಯಾವನೋ ಒಬ್ಬ ಒಂದು ಕಾಲದಲ್ಲಿ ತನ್ನ ಪರಿಮಿತವಾದ ಬುದ್ಧಿಯಿಂದ ತನಗೆ ತೋಚಿದಂತೆ ಬರೆದಿರಬಹುದು. ಅಲ್ಪಜ್ಞನಿಂದ ರಚಿತವಾದ ಗತಕಾಲದ ಗ್ರಂಥವನ್ನು ಇಂದಿನ ಮಂದಿ ಸ್ವೀಕರಿಸಬಹುದೇ!? ಹೀಗೆಲ್ಲಾ ಸಂಶಯಗಳು ಬರುವ ಸಾಧ್ಯತೆಗಳಿದ್ದಾಗ ಪುರುಷನಿರ್ಮಿತ ಗ್ರಂಥ ಪ್ರಮಾಣವಾಗುವುದಾದರೂ ಹೇಗೆ?

ಆದರೆ ವೇದಗಳು ಯಾವ ಪುರುಷನಿಂದಲೂ ರಚಿತವಾದವುಗಳಲ್ಲ. ನಿರ್ಮಾಣ ವಾಗಿವೆ ಎನ್ನಲು ಪುರಾವೆಗಳೂ ಇಲ್ಲ. ಆದ್ದರಿಂದ ಪುರುಷರ ದೋಷಗಳಾದ ಅಜ್ಞಾನಾದಿಗಳು ವೇದಗಳಲ್ಲಿ ಪ್ರತಿಫಲಿಸಲು ಸಾಧ್ಯವಿಲ್ಲ. ಇಷ್ಟಾಗಿ ಸರ್ವಜ್ಞನಾದ ಭಗವಂತನೂ ರಚಿಸಿದ್ದಲ್ಲ. ಸಮಸ್ತ ವೇದಗಳೂ ಭಗವಂತನ ಬುದ್ಧಿಯಲ್ಲಿ ಅನಾದಿಕಾಲದಿಂದ ಇವೆ. ಆದ್ದರಿಂದ ವೇದಗಳು ಪರಮ ಪ್ರಮಾಣ. ಇಂತಹ ಅನಾದಿಯಾದ ಅಪೌರುಷೇಯವಾದ ವೇದವನ್ನವಲಂಬಿಸಿಕೊಂಡು ಹೊರಟ ಸಿದ್ಧಾಂತವನ್ನು ನಾವು ಅವಲಂಬಿಸಬೇಕು.

ವಾದಿರಾಜ ಗುರುಸಾರ್ವಭೌಮರು ಯುಕ್ತಿಮಲ್ಲಿಕೆಯಲ್ಲಿ ಒಂದು ಸುಂದರ ಮಾತನ್ನು ಹೇಳುತ್ತಾರೆ. 'ಗೃಹ್ಣೀಯಾತ್ ತಿಂತ್ರಿಣೀ ಶಾಖಾಂ ಶಿಗ್ರು ಶಾಖಾಗ್ರಹೇಣ ಕಿಮ್?' ಎಂದು. "ಬದುಕುವ ಆಸೆಯಿಂದ ಆಸರೆಯೊಂದನ್ನು ಬಯಸುವವ ಪ್ರಬಲವಾದ ಆಸರೆಯನ್ನೇ ಆಶ್ರಯಿಸಬೇಕು."

ಇಂದು ನಾವು ಅನೇಕ ಮತಗಳನ್ನು ಕಾಣುತ್ತಿದ್ದೇವೆ. ಅನೇಕ ಮತಗಳು ಹುಟ್ಟಿಕೊಳ್ಳಲು ಭಿನ್ನ ಭಿನ್ನ ವ್ಯಕ್ತಿಗಳ ಭಿನ್ನಾಭಿಪ್ರಾಯಗಳೇ ಕಾರಣ. ಮತಪ್ರವರ್ತಕ ರಲ್ಲಿಯೇ ದೋಷವಿದ್ದರೆ ಅವರು ರಚಿಸಿದ ಗ್ರಂಥಗಳಲ್ಲಿ ಅವು ಪ್ರತಿಫಲಿಸದೆ ಇರವು. ಆದರೆ ಅನಾದಿಕಾಲದಿಂದ ಹರಿದುಬಂದ ವೇದವನ್ನು ಅವಲಂಬಿಸಿಕೊಂಡು ಹೊರಟ

ಮತದಲ್ಲಿ ದೋಷಗಳಿಗೆ ಅವಕಾಶವೇ ಇಲ್ಲ. ವೇದಾಪೌರುಷೇಯತ್ವವನ್ನು ಅಂಗೀಕರಿಸಿದ ಮತವೇ ಶ್ರೇಷ್ಠವಾದ ಮತ. ಇದೇ ಸಜ್ಜನರಿಗೆ ಸಮ್ಮತ. ಇಂತಹ ಮತವನ್ನೇ ಅವಲಂಬಿಸಬೇಕು.

ಮರವನ್ನು ಏರಬೇಕೆನಿಸಿದರೆ ಘಟ್ಟಿಯಾದ ಮರವನ್ನೇ ಏರಬೇಕು. ಟೊಳ್ಳಾದ ಮರವನ್ನಾಗಲೀ ದುರ್ಬಲವಾದ ಲತೆಯನ್ನಾಗಲೀ ಏರಲು ಹೋದರೆ ಕೊಂಬೆ ಬಳ್ಳಿಗಳ ಜೊತೆಗೆ ಸೊಂಟವೂ ಮುರಿಯುವ ಅಪಾಯವಿದೆ. ಅದರಂತೆ ಮತಪ್ರವರ್ತಕರ ಸ್ವತಂತ್ರ ಗ್ರಂಥಗಳು ದುರ್ಬಲ ಮರವಿದ್ದಂತೆ. ಎಷ್ಟೇ ಸರಿಯಾಗಿ ಬರೆದಿದ್ದರೂ ಅಪ್ರಾಮಾಣ್ಯಸಂಶಯ ಇದ್ದೇ ಇರುತ್ತದೆ. ಸಾರ್ವಕಾಲಿಕ ಚಿಂತನೆಯ ಕೊರತೆಯು ಖಂಡಿತಾ ತೋರುತ್ತದೆ. ಈ ಮತಗಳನ್ನೇ ಹಿಡಿದು ನಡೆದರೆ ಒಂದು ದಿನ ಮತಗಳೇ ಜಾರಿಬೀಳುವಾಗ ನಾವು ಜಾರಿಬೀಳುವ ಅಪಾಯವಿದೆ. ಆದರೆ ವೇದವು ಘಟ್ಟಿಯಾದ ಮರವಿದ್ದಂತೆ. ಇದು ಎಂದೂ ದುರ್ಬಲವಾಗದು. ಏಕೆಂದರೆ ಇದರಲ್ಲಿ ಯಾರ ಬುದ್ಧಿದೋಷವೂ ಇಲ್ಲ. 'ಯಾವತ್ ಬ್ರಹ್ಮ ವಿಷ್ಠಿತಂ ತಾವತೀ ವಾಕ್' –"ಅನಂತ ವೇದವು ಬ್ರಹ್ಮನಂತೆಯೇ ಅನಾದಿಕಾಲದಿಂದ ಭಗವಂತನ ಬುದ್ಧಿಯಲ್ಲಿದೆ." ಇಂತಹ ಸನಾತನವಾದ ವೇದವನ್ನವಲಂಬಿಸಿಕೊಂಡ ನಮ್ಮ ಧರ್ಮವು ಸನಾತನಧರ್ಮ ವಾಗಿದೆ ಸಾರ್ವಕಾಲಿಕ ಸತ್ಯತ್ವವನ್ನು ಪ್ರತಿಪಾದಿಸುವ ಈ ಧರ್ಮದ ಟೊಂಗೆಯನ್ನು ಹಿಡಿದು ಹೊರಟರೆ ಎತ್ತರಕ್ಕೆ ಏರುತ್ತೇವೆ. ಎಂದಿಗೂ ಜಾರಿ ಬೀಳದಂತೆ ವೇದ ಮಾತೆಯು ನಮ್ಮನ್ನು ಕಾಪಾಡುತ್ತಾಳೆ. ಇಂತಹ ಅಪೌರುಷೇಯವಾದ ವೇದದ ಆಧಾರದಿಂದ ಸೃಷ್ಟಿಕರ್ತನಾದ ಭಗವಂತನನ್ನು ತಿಳಿಯಬೇಕು.

೨] ಪ್ರಾಮಾಣಿಕವಾದ ಯುಕ್ತಿಯಿಂದಲೂ ಭಗವಂತನನ್ನು ಅರಿತುಕೊಳ್ಳಬೇಕು. ಹಿಂದೆ ತಿಳಿಸಿದಂತೆ ಪ್ರಪಂಚದ ವೈಚಿತ್ರ್ಯವನ್ನರಿತು ಇಂತಹ ಸುಂದರವಾದ ಜಗತ್ತಿಗೆ ಕಾರಣನಾದ ಪ್ರತಿಭಾಶಾಲಿಯಾದ ಸರ್ವಜ್ಞನಾದ ವ್ಯಕ್ತಿ ಇದ್ದಾನೆಂದು ತಿಳಿದು ಕೊಳ್ಳಬೇಕು. ಇದೇ ಯುಕ್ತಿ. ಹೀಗೆ ವೇದಗಳಿಂದಲೂ ಯುಕ್ತಿಯಿಂದಲೂ ಜಗಜ್ಜನ್ಮಾದಿ ಕಾರಣನಾದ, ಸರ್ವಜ್ಞನಾದ, ಸ್ವತಂತ್ರನಾದ, ಅನಂತಕಲ್ಯಾಣಗುಣ ಪರಿಪೂರ್ಣನಾದ ಭಗವಂತನ ಅಸ್ತಿತ್ವವನ್ನು ಅರಿತುಕೊಳ್ಳಬೇಕು.

ಕೆಲವರಿಲ್ಲಿ ಪ್ರಶ್ನಿಸುತ್ತಾರೆ –ಪ್ರಕೃತಿಯಿಂದಲೇ ಸಹಜವಾಗಿ ಜಗತ್ತಿನ ನಿರ್ಮಾಣ ವಾಗಿರಬಾರದೇಕೆ? ದೇವರನ್ನು ಏಕೆ ಒಪ್ಪಬೇಕು? ಎಂದು.

ಇದು ತಿಳಿಗೇಡಿಗಳ ಮಾತಾದೀತು. ಆಲೋಚನಾ ಶಕ್ತಿಯೇ ಇಲ್ಲದ ಕೇವಲ ಜಡವಾದ ಪ್ರಕೃತಿಯಿಂದಲೇ ಜಗತ್ತಿನ ನಿರ್ಮಾಣ ಸಾಧ್ಯವೇ? ಚೈತನ್ಯಪೂರ್ಣವಾದ ಜಗತ್ತಿನ ನಿರ್ಮಾಣ ಚೈತನ್ಯಹೀನವಾದ ಜಡಪ್ರಕೃತಿಯಿಂದಾಗದು. ಸಕಲವನ್ನೂ ಬಲ್ಲ ವ್ಯಕ್ತಿಯೇ ಜಗನ್ನಿರ್ಮಾಣಕ್ಕೆ ಬೇಕು ಎಂದು ತಿಳಿಸಲು 'ಅರ್ಥೇಷು ಅಭಿಜ್ಞಃ' ಎಂದರು.

ಒಬ್ಬನು ವಿಚಾರಮಾಡದೆ ಅಕ್ಷರಮಾಲೆಯನ್ನು ಜೋಡಿಸತೊಡಗಿದರೆ ಅದು ಎಂದಾದರೂ ಕಾವ್ಯವಾಗಬಲ್ಲದೇ? ಸಾವಿರ ವರ್ಷಗಳ ಕಾಲ ಸುಂದರವಾದ ಅಕ್ಷರಗಳನ್ನು ಎಷ್ಟು ಜೋಡಿಸಿದರೂ ಒಂದು ಕಾವ್ಯವಿರಲಿ, ಕಾದಂಬರಿಯ ಪರಿಚ್ಛೇದವೂ ರಚಿತವಾಗದು. ಬುದ್ಧಿಯಿಂದ ಆಲೋಚಿಸಿ ಜೋಡಿಸಿದಾಗ ಮಾತ್ರ ಒಂದು ಕವಿತೆಯೋ, ಕಾದಂಬರಿಯೋ ನಿರ್ಮಾಣವಾದೀತು. ಸುಮ್ಮನೇ ಅಕ್ಷರ ಗಳನ್ನು ಟೈಪ್ ಮಾಡುವುದು ವ್ಯರ್ಥ ಪ್ರಯತ್ನವೇ ಸರಿ. ಇದರಂತೆ ಜಗತ್ತು ತನ್ನಷ್ಟಕ್ಕೆ ನಿರ್ಮಾಣಗೊಂಡಿತೆಂದರೆ; ಸುಮ್ಮನೆ ಟೈಪ್ ಮಾಡಿದರೂ ಕಾವ್ಯ ರಚನೆಯಾಗುತ್ತದೆ ಎಂದಂತಾಗುತ್ತದೆ. ಇದು ಸಾಧ್ಯವೇ? ಈ ಜಗತ್ತು, 'ದಾರದಲ್ಲಿ ಕ್ರಮಬದ್ಧವಾಗಿ ಜೋಡಿಸಿದ ಸುಂದರವಾದ ಮಣಿಮಾಲ'ಯಂತೆ ಪ್ರಕೃತಿಯಿಂದ ಹೆಣೆದುಕೊಂಡಿದೆ. 'ಸೂತ್ರೇ ಮಣಿಗಣಾ ಇವ' ಎಂದು ಶ್ರೀಕೃಷ್ಣನೇ ಸ್ವತಃ ನುಡಿದಿದ್ದಾನೆ. ಆದ್ದರಿಂದ ಸುವ್ಯವಸ್ಥಿತವಾದ ಜಗತ್ತನ್ನು ನಿರ್ಮಿಸಿದವ ಸರ್ವಜ್ಞನೆಂದೇ ಒಪ್ಪಬೇಕು. ಪ್ರತಿ ಯೊಂದರ ಒಳಹೊರಗಳನ್ನು ಅರಿತವನಿಂದಲೇ ಜಗತ್ಸೃಷ್ಟಿಯಾಗಿದೆ ಎಂದು 'ಅರ್ಥೇಷ್ವಭಿಜ್ಞಃ' ಎಂಬ ಪದದಿಂದ ತಿಳಿಸಿದ್ದಾರೆ.

ಸರ್ವಜ್ಞನಾದ ಭಗವಂತನು ಮತ್ತೊಬ್ಬರ ಸಹಕಾರವನ್ನು ಪಡೆಯದೆ ಸ್ವತಂತ್ರ ನಾಗಿದ್ದುಕೊಂಡೇ ಎಲ್ಲವನ್ನೂ ಮಾಡಬಲ್ಲ ಎಂದು 'ಸ್ವರಾಟ್' ಪದದಿಂದ ತಿಳಿಸಿ ದ್ದಾರೆ.

ಸ್ವತಂತ್ರನಾದ ಶ್ರೀಹರಿಯು ಸೃಷ್ಟಿಯನ್ನಾರಂಭಿಸಿದ. ಬ್ರಹ್ಮದೇವನನ್ನು ಮೊದಲು ಸೃಷ್ಟಿಗೆ ತಂದ. ಶ್ರುತಿಯೂ 'ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ' ಎಂದು ಇದೇ ವಿಷಯವನ್ನು ತಿಳಿಸುತ್ತಿದೆ. ಬ್ರಹ್ಮದೇವರಿಗೆ ಸಮಸ್ತವೇದಗಳ ರಹಸ್ಯಾರ್ಥ ಗಳನ್ನು ತಿಳಿಹೇಳಿದ. 'ತೇನೇ ಬ್ರಹ್ಮ ಹೃದಾ ಯ ಆದಿಕವಯೇ' ಬ್ರಹ್ಮದೇವರ ಮೂಲಕ ಜಗತ್ತಿಗೂ ಉಪದೇಶಿಸಿದ.

ಭಗವಂತನು ಸೃಷ್ಟಿಕರ್ತನಾಗಿ, ರಕ್ಷಕನಾಗಿ ಪ್ರಲಯಕಾಲದಲ್ಲಿ ವಿಶ್ರಾಂತಿದಾತನಾಗಿ ನೆರಳಿನಂತೆ ಬೆಂಬಿಡದೆ ಅನೇಕ ರೀತಿಯಲ್ಲಿ ಉಪಕರಿಸುತ್ತಿದ್ದಾನೆ. ತಾಯಿಯು ಆಟವಾಡಿ ಬಳಲಿದ ಮಕ್ಕಳನ್ನು ಜೋಜೋ ಹಾಡಿ ಮಲಗಿಸುವಂತೆ. ಮಾತೃ ಹೃದಯದ ಭಗವಂತ ಸಂಸಾರದಲ್ಲಿ ಬೆಂದ ಜೀವರಿಗೆ ಸೃಷ್ಟಿಕಾರ್ಯಗಳನ್ನು ಮಾಡಿ ಬಳಲಿದ ದೇವತೆಗಳಿಗೂ ಚುಕ್ಕುತಟ್ಟಿ ವಿಶ್ರಾಂತಿಯನ್ನು ನೀಡುತ್ತಾನೆ. ಆದ್ದರಿಂದ ಜಗತ್ಸಂಹಾರ ಎಂಬುದು ಮಹಾರೌದ್ರವಾದ ಭಯಾನಕವಾದ ಅಮಾನವೀಯ ಕ್ರಿಯೆ ಎಂದು ಭಾವಿಸಬಾರದು. ಭಗವಂತನ ಸಂಹಾರಕಾರ್ಯದಲ್ಲಿ ಕಟುಕನ ಕ್ರೌರ್ಯವಿಲ್ಲ. ತಾಯಿಯ ಕಾರುಣ್ಯ ತುಂಬಿದೆ. ತನ್ನ ಹೊಟ್ಟೆಯಲ್ಲಿಯೇ ಹಾಕಿ ಕೊಂಡು ಸೌಖ್ಯ ನೀಡುತ್ತಾನೆ.

ದೇವದೇವೋತ್ತಮನಾದ ಭಗವಂತ ತಂದೆಯಂತೆ ತನುವ ನೀಡುತ್ತಾನೆ. ತಾಯಿಯಂತೆ ಪ್ರೀತಿಯಿಂದ ಮಲಗಿಸುತ್ತಾನೆ. ಗಂಡನಂತೆ ಪೋಷಿಸುತ್ತಾನೆ. ದೇಹಕ್ಕೆ ಬೇಕಾಗುವ ಆಹಾರವನ್ನು ನೀಡಿ ಹೊರಗೆ ಬೆಳೆಸುವುದಷ್ಟೇ ಅಲ್ಲ; ತಾನೇ ಗುರು ಆಗಿ

ಜೀವನಿಗೆ ಬೇಕಾಗುವ ಜ್ಞಾನೋಪದೇಶವನ್ನು ನೀಡಿ ಒಳಗೂ ಬೆಳೆಸುತ್ತಾನೆ. ಕೊನೆಗೊಮ್ಮೆ ಸ್ವರೂಪಾನಂದ ಆವಿರ್ಭಾವರೂಪವಾದ ಮೋಕ್ಷವನ್ನೇ ನೀಡುತ್ತಾನೆ. ಅವನ ಕರುಣೆಯನ್ನು ಟೀಕಾಕೃತ್ಪಾದರು ಹೀಗೆ ಕೊಂಡಾಡಿದ್ದಾರೆ –'ತಂ ದೇವಂ ಪಿತರಂ ಪತಿಂ ಗುರುತಮಮಂ ವಂದೇ ರಮಾವಲ್ಲಭಮ್' (ವಿ. ತ. ನಿ. ಮಂಗಲಪದ್ಯ) ಎಂದು. ಇಂತಹ ಜಗದ್ಗುರುವಾದ ಶ್ರೀಕೃಷ್ಣನಿಗೆ ನಮೋನಮಃ. 'ಕೃಷ್ಣಂ ವಂದೇ ಜಗದ್ಗುರುಮ್'

ಭಗವಂತನು ತನ್ನ ಬಗ್ಗೆ ತಿಳಿಹೇಳುವ ಅಗತ್ಯವೇನಿದೆ? ವೇದಗಳಿಂದ ನಾವೇ ತಿಳಿಯಬಹುದಲ್ಲವೇ ಎಂದರೆ, ತಿಳಿಯಲಾಗದೆನ್ನುತ್ತಾರೆ –'ಮುಹ್ಯನ್ತಿ ಯಂ ಸೂರಯಃ' ಎಂದು. ಭಗವಂತನ ವಿಷಯದಲ್ಲಿ ಕೆಲವೊಮ್ಮೆ ಜ್ಞಾನಿಗಳೂ ಎಡವುತ್ತಾರೆ. ಹೀಗಿರಲು ಉಪದೇಶವೇ ಇಲ್ಲವಾದರೆ ಅನರ್ಥಜ್ಞಾನಕ್ಕೆ ಬಲಿಯಾಗುವ ಪ್ರಸಂಗವಿದೆ. ಆದಕ್ಕಾಗಿ ಬ್ರಹ್ಮದೇವರ ಮೂಲಕ ಉಪದೇಶ ಬೇಕು.

ಜಗತ್ಸೃಷ್ಟಿಯನ್ನೇಕೆ ಭಗವಂತ ಮಾಡುತ್ತಾನೆ? ಅವನಿಗೇನಾದರೂ ಪ್ರಯೋಜನ ವಿದೆಯೇ? ಪ್ರಯೋಜನವಿಲ್ಲದೆ ಯಾರೂ ಕೆಲಸಮಾಡರು. 'ಪ್ರಯೋಜನಮನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ' –"ತಿಳಿಗೇಡಿಯೂ ಸ್ವಾರ್ಥವಿಲ್ಲದೆ ಕೆಲಸಕ್ಕೆ ಕೈಹಚ್ಚ ಲಾರ". ಹೀಗಿರಲು ಸರ್ವಜ್ಞನಾದ ಹರಿ ವ್ಯರ್ಥ ಸೃಷ್ಟಿಯನ್ನೇಕೆ ಮಾಡುತ್ತಾನೆ? ಪ್ರಯೋಜನ ಇಟ್ಟುಕೊಂಡೇ ಮಾಡುತ್ತಾನೆಂದರ, ಅವನು ಅಪರಿಪೂರ್ಣನಾಗುತ್ತಾನೆ ಪ್ರತಿಯೊಂದು ಕ್ರಿಯೆಗೂ ಬಯಕೆ ಮುಂದಿಡುವವ ನಮ್ಮಂತೆ ಆದಾನೇ ಹೊರತು ಪರಿಪೂರ್ಣನಾಗಲಿ ಸರ್ವೋತ್ತಮನಾಗಲಿ ಹೇಗಾದಾನು?

ಪ್ರಯೋಜನ ಇಲ್ಲದೆಯೇ ಸೃಷ್ಟ್ಯಾದಿ ವ್ಯಾಪಾರಗಳನ್ನು ಮಾಡುತ್ತಾನೆ ಎನ್ನು ವುದೇ ನಿಮ್ಮ ಸಿದ್ಧಾಂತವಾದಲ್ಲಿ ನಿಮ್ಮ ಭಗವಂತ ತಿಳಿಗೇಡಿಯೇ ಸರಿ. ಲೋಕದಲ್ಲಿ ವ್ಯರ್ಥ ಕೆಲಸಮಾಡುವವರ ಪಟ್ಟಿಯಲ್ಲಿ ಇವನೂ ಸೇರುತ್ತಾನೆ. ಇಂತಹ ಭಗವಂತ ವಿವೇಕಿಯಾಗಲು ಹೇಗೆ ಸಾಧ್ಯ? ಎಂದು ಪ್ರಶ್ನೆ ಬಂದರೆ ಅದಕ್ಕೆ 'ಯತ್ರ ತ್ರಿಸರ್ಗೋ ಮೃಷಾ' ಎಂದುತ್ತರಿಸಿದರು.

ಭಗವಂತನಿಗೆ ಈ ಜಗತ್ತಿನ ನಿರ್ಮಾಣದಿಂದೇನೂ ಆಗಬೇಕಿಲ್ಲ. ನಿರ್ಮಾಣವು ವ್ಯರ್ಥವೂ ಅಲ್ಲ. ಅವನ ಪ್ರತಿಯೊಂದು ವ್ಯಾಪಾರವೂ ನಮ್ಮ ಪ್ರಯೋಜನಕ್ಕಾಗಿ. ಪ್ರತಿಯೊಬ್ಬ ಜೀವನೂ ತನ್ನ ನೈಜ ವ್ಯಕ್ತಿತ್ವವನ್ನು ಪಡೆಯಬೇಕು; ಸಜ್ಜನರು ನಿತ್ಯಸುಖಿ ಗಳಾಗಬೇಕೆಂಬ ಪರೋಪಕಾರಬುದ್ಧಿಯಿಂದ ಸ್ವಾರ್ಥದ ಲವಲೇಶವೂ ಇಲ್ಲದೆ ಸೃಷ್ಟ್ಯಾದಿ ವ್ಯಾಪಾರಗಳನ್ನು ಮಾಡುತ್ತಾನೆ.

ಹಗಲಿರುಳೂ ಪರರ ಹಿತಕ್ಕಾಗಿ, ಕ್ಷಣಕ್ಷಣವೂ ಕ್ರಿಯಾಶೀಲನಾದ ಭಗವಂತನ ಕರುಣೆ ಅಪಾರ! ಅವರ್ಣನೀಯ! ಅವನ ಪ್ರತಿಯೊಂದು ವ್ಯಾಪಾರವೂ ಪರಹಿತ ಚಿಂತನೆಯಲ್ಲಿಯೇ ಪರ್ಯವಸಾನವಾಗುತ್ತದೆ.

ಇಷ್ಟೇ ಅಲ್ಲದೆ, ಎಲ್ಲಿ ಶ್ರಮಪೂರ್ವಕವಾದ ಕೆಲಸವಿದೆಯೋ ಅದಕ್ಕೊಂದು ಪ್ರಯೋಜನ ಬೇಕು. ವಿನೋದದಿಂದ ಮಾಡುವ ಕ್ರಿಯೆಗಳಿಗೇನಾದರೂ ಪ್ರಯೋ

ಜನದ ಅಪೇಕ್ಷೆ ಉಂಟೇ? ಆಡುವ ಮಕ್ಕಳಿಗೆ ಆಟಕ್ಕಿಂತ ಅತಿರಿಕ್ತವಾದ ಪ್ರಯೋಜನ ವಿಲ್ಲ. ಮಾತನಾಡುವಾಗ ಕೈಗಳನ್ನು ಅನಾಯಾಸವಾಗಿ ಹಂದಾಡಿಸುತ್ತೇವೆ. ಇದಕ್ಕೇನು ಪ್ರಯೋಜನ? ಸಹಜವಾಗಿ ನಡೆಯುವ ಕ್ರಿಯೆಗಳಿಗೆ ಪ್ರಯೋಜನದ ಅಗತ್ಯವೇ ಇಲ್ಲ. ನಮಗಿಂತಲೂ ಅನಾಯಾಸವಾಗಿ ಕೆಲಸಗಳನ್ನು ಮಾಡುವ ಶ್ರೀಹರಿಗೇಕೆ ಪ್ರಯೋಜನಾಪೇಕ್ಷೆ?! ಆಪ್ತಕಾಮನಾದ ಭಗವಂತನಿಗೆಲ್ಲಿಯ ಬಯಕೆ? ಸೃಷ್ಟಿಸುವುದು ಅವನ ಸ್ವಭಾವ. 'ದೇವಸ್ಯೈ ಷಃ ಸ್ವಭಾವೋಽಯಂ ಆಪ್ತಕಾಮಸ್ಯ ಕಾ ಸ್ಪೃಹಾ''

ಇಂತಹ ಭಗವಂತನ ಸೃಷ್ಟಿಯು ಮೂರು ವಿಧವಾಗಿದೆ.

೧) ಸ್ವತಃ ತನ್ನ ಸೃಷ್ಟಿ. ೨) ಜೀವರ ಸೃಷ್ಟಿ. ೩) ಜಗತ್ತಿನ ಸೃಷ್ಟಿ.

೧) ಪ್ರತಿಯೊಂದು ಜಡವಾದ ವಸ್ತು ಆಯಾ ಆಕಾರಗಳನ್ನು ಪಡೆಯ ಬೇಕಾದರೂ ಭಗವಂತನೇ ಕಾರಣನಾಗಿದ್ದಾನೆ. ವಸ್ತುವಿನ ಆಕಾರದಲ್ಲಿ ಏಕರೂಪ ನಾಗಿ ಭಗವಂತನಿರುವುದರಿಂದಲೇ ವಸ್ತುಗಳು ಅಸ್ತಿತ್ವವನ್ನು ಪಡೆದಿವೆ. ಪ್ರತಿ ವಸ್ತು ಗಳಲ್ಲಿನ ಪ್ರಾದುರ್ಭಾವವೇ ಶ್ರೀಹರಿಯ ಜನ್ಮ. ಒಂದು ದೀಪದಿಂದ ಮತ್ತೊಂದು ದೀಪ ಬೆಳಗುವಂತೆ ಏಕರೂಪನಾದ ಭಗವಂತನ ಅನಂತರೂಪಗಳು ಜಗತ್ತಿನಲ್ಲಿ ಬೆಳಗುತ್ತಿವೆ. ಹೀಗೆ ಅನಂತರೂಪನಾದ ಅನಂತನ ಪ್ರಾದುರ್ಭಾವವನ್ನೇ –'ಯಥಾ ತೇಜೋ ವಿನಿಮಯಃ' ಎಂದರು.

೨) ಜೀವರ ಸೃಷ್ಟಿಗೆ ದೃಷ್ಟಾಂತವನ್ನಾಗಿ 'ಯಥಾ ವಾಃರಿ ವಿನಿಮಯಃ' ಎಂದರು. ನೀರಿನಲ್ಲಿ ಸೂರ್ಯನ ಪ್ರತಿಬಿಂಬ ಬೀಳುತ್ತದೆ. ಪ್ರತಿಬಿಂಬವು ಸೂರ್ಯನಂತೆಯೇ ತೋರಿದರೂ ಸೂರ್ಯನಿಗಿರುವ ತಾಪನ, ಪಾಚನ, ಶೋಷಣ ಮುಂತಾದ ಶಕ್ತಿ ಪ್ರತಿಬಿಂಬಕ್ಕಿರುವುದಿಲ್ಲ. ಇದರಂತೆ ಸಜ್ಜೀವರೂ ಸಹ ಭಗವಂತನಂತೆಯೇ ತೋರಿ ದರೂ ಭಗವಂತನಲ್ಲಿರುವ ಸ್ವಾತಂತ್ರ್ಯಾದಿಗುಣಗಳು ಇವರಲ್ಲಿರಬೇಕಿಲ್ಲ. ಸೂರ್ಯನ ಪ್ರತಿಬಿಂಬವು ಅತ್ಯಲ್ಪವಾಗಿದ್ದರೂ ಸೂರ್ಯನಂತೆಯೇ ತೋರುವಂತೆ; ಭಗವಂತ ನಿಂದ ಅತ್ಯಂತ ಭಿನ್ನನಾದ ಅತ್ಯಲ್ಪನಾದ ಜೀವ ಭಗವಂತನಂತೆಯೇ ಇದ್ದಾನೆ. ಬಿಂಬವಿಲ್ಲದಿರೆ ಪ್ರತಿಬಿಂಬವೂ ಇಲ್ಲ. ಹೀಗೆ ಬಿಂಬನಾಗಿ ಹರಿ ಇಲ್ಲದಿರೆ ಯಾವ ಜೀವರೂ ಇರಲಾಗುವುದಿಲ್ಲ. ತನ್ನ ಅಸ್ತಿತ್ವದ ಮೂಲಕ ಜೀವರ ಅಸ್ತಿತ್ವವನ್ನು ಬಯಲಿಗೆಳೆಯುತ್ತಾನೆ.

೩) ಜಗತ್ತಿನ ಸೃಷ್ಟಿ ಹೇಗೆಂದರೆ –'ಯಥಾ ಮೃದ್ವಿನಿಮಯಃ' ಎಂದರು. ಮಣ್ಣಿನಿಂದ ನಾನಾ ರೀತಿಯ ವಸ್ತುಗಳನ್ನು ನಿರ್ಮಿಸುತ್ತೇವೆ. ಇದರಂತೆ ಸೂಕ್ಷ್ಮ ಪ್ರಕೃತಿಯ ದೆಸೆಯಿಂದ ಬಣ್ಣದ ಜಗತ್ತನ್ನು ಹರಿಯು ನಿರ್ಮಿಸುತ್ತಾನೆ. ಇದೇ ಜಡ ಸೃಷ್ಟಿ ಎನಿಸುತ್ತದೆ. ಈ ಮೂರು ವಿಧದ ಸೃಷ್ಟಿಯೂ ನಮಗಾಗಿ.

ಈ ಸೃಷ್ಟಿಗಳಿಗಾಗಿ ಭಗವಂತನು ಮತ್ತೊಬ್ಬರ ಸಹಾಯಹಸ್ತವನ್ನು ಯಾಚಿಸಿಲ್ಲ. ಸ್ವತಂತ್ರನಾದ ಶ್ರೀಹರಿ ತನ್ನ ಸಹಜ ಸಾಮರ್ಥ್ಯದಿಂದಲೇ ಜಗತ್ತನ್ನು ಸೃಷ್ಟಿಸುತ್ತಿ ದ್ದಾನೆ. ಮತ್ತೊಬ್ಬರ ಸಹಾಯ ಪಡೆದಿದ್ದಾನೆಂದರೆ; ಆ ಮತ್ತೊಬ್ಬನಾದರೂ ಹೇಗೆ ಶಕ್ತಿಪ್ರದ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಅವನಿಗೂ ಮತ್ತೊಬ್ಬ ಶಕ್ತಿಪ್ರದನೆಂದರೆ

ಅನವಸ್ಥೆಗೆ ನಾಂದಿಯಾಗುತ್ತದೆ. ಇವೆಲ್ಲವನ್ನೂ ಪರಿಹರಿಸಲು 'ಸ್ವೇನ ಧಾಮ್ನಾ' ಎಂದರು. ಮತ್ತೊಬ್ಬರ ಅಪೇಕ್ಷೆ ಇವನಿಗಿಲ್ಲ. ಸ್ವಾರ್ಥವಾಗಿ ಮಾಡಬಂದರೆ ಉಪೇಕ್ಷಿಸುವುದೂ ಇಲ್ಲ. ಅವರೊಳಗೆ ತಾನಿದ್ದು ಅವರ ಮೂಲಕ ಸೃಷ್ಟ್ಯಾದಿ ವ್ಯಾಪಾರ ಮಾಡಿಸುತ್ತಾನೆಂದು ತಿಳಿಯಬೇಕು.

ಭಗವಂತನ ಸೃಷ್ಟಿಯು ಹೊಟ್ಟೆಪಾಡಿಗಾಗಿ ವೇಷಕಟ್ಟುವ ಡೊಂಬರಾಟದವ ನಂತಲ್ಲ. ಇಂದ್ರಜಾಲ ವಿದ್ಯೆ ಬಲ್ಲವ ಸುಳ್ಳಾದ ವಸ್ತುಗಳನ್ನು ಚಮತ್ಕಾರದಿಂದ ಸತ್ಯವೆನ್ನುವಂತೆ ತೋರಿಸುತ್ತಾನೆ. ಆದರೆ ಭಗವಂತನ ಸೃಷ್ಟಿಯಲ್ಲಿ ಮೋಸವಿಲ್ಲ ಕೊರತೆ ಇದ್ದವರು ಸುಳ್ಳು ಸೃಷ್ಟಿಮಾಡಿಯಾರು. ನಿತ್ಯತೃಪ್ತನಾದ ಹರಿಗೆ ಕುಹಕತನದ ಸೃಷ್ಟಿಯಿಂದಾಗುವ ಪ್ರಯೋಜನವಾದರೂ ಏನು? ಇದನ್ನೇ 'ಸದಾ ನಿರಸ್ತ ಕುಹಕಂ' ಎಂದು ತಿಳಿಸಿದರು.

ಹೀಗೆ ಭಗವಂತನ ಅರಿವಿಗೆ ದೊಡ್ಡ ಮಾಧ್ಯಮ ಜಗತ್ತು. ಜಗತ್ತನ್ನು ತಿಳಿದಷ್ಟು ಭಗವಂತನ ಮಹತ್ವದ ಅರಿವು ಉಂಟಾಗುತ್ತದೆ ಎನ್ನುವುದನ್ನು ಶ್ರೀವ್ಯಾಸರು ಸುಂದರವಾದ ಪದಗಳಿಂದ ಮನಮುಟ್ಟುವಂತೆ ನಿರೂಪಿಸಿದ್ದಾರೆ.

ನಾವೆಲ್ಲರೂ ಇಂತಹ ಸರ್ವೋತ್ತಮನಾದ, ಅನಂತಕಲ್ಯಾಣಗುಣೈಕನಿಧಿಯಾದ, ಸರ್ವಜ್ಞನಾದ, ಸ್ವತಂತ್ರನಾದ, ಕರುಣಾಮಯಿಯಾದ ಭಗವಂತನನ್ನು ನಿರಂತರ ಧ್ಯಾನಮಾಡಬೇಕು. ಅವನ ಸಾಕ್ಷಾತ್ಕಾರಕ್ಕೋಸ್ಕರ ಪ್ರಯತ್ನಶೀಲರಾಗಬೇಕು!!

## ಆತ್ಮನನ್ನು ಬೆಳೆಸುವ ಗಾಯತ್ರೀ

ಮಂಗಳ ಪದ್ಯದಲ್ಲಿ ವ್ಯಾಸರು 'ಸತ್ಯಂ ಪರಂ ಧೀಮಹಿ' ಎಂದು ಹೇಳಿದ್ದಾರೆ. ಪಾಣಿನಿ ವ್ಯಾಕರಣದಂತೆ 'ಧ್ಯಾಯೇಮ' ಎನ್ನಬೇಕಿತ್ತಲ್ಲವೇ? ಇಲ್ಲ. ಇಲ್ಲಿ ವ್ಯಾಸರು ಗಾಯತ್ರೀ ವೇದಮಂತ್ರದ ಶಬ್ದವನ್ನೇ ಬಳಸಿದ್ದಾರೆ. 'ಭರ್ಗೋ ದೇವಸ್ಯ ಧೀಮಹಿ' ಎಂಬಲ್ಲಿಯ ಪದವನ್ನು ಪ್ರಯೋಗಿಸುವ ಮೂಲಕ ಗಾಯತ್ರಿಯ ಅರ್ಥವೇ ಭಾಗವತ; 'ಗಾಯತ್ರೀ ಭಾಷ್ಯರೂಪೋಽಸೌ' ಎಂಬುದನ್ನು ವಿವರಿಸಿ 'ಧೀಮಹಿ' ಎಂದರು.

ಕೆಲವರು ಗಾಯತ್ರೀಮಂತ್ರವು ಸೂರ್ಯನನ್ನು ಸ್ತುತಿಸುತ್ತಿದೆ ಎನ್ನುತ್ತಾರೆ.

ಮತ್ತೆ ಕೆಲವರು ಗಾಯತ್ರೀಮಂತ್ರವು, ಗಾಯತ್ರೀ, ಸಾವಿತ್ರೀ, ಸರಸ್ವತೀ ಎಂಬ ಹೆಣ್ಣುದೇವತೆಗಳ ಮಂತ್ರವಾಗಿದೆ ಎನ್ನುತ್ತಾರೆ.

ಆದರೆ ಗಾಯತ್ರೀಮಂತ್ರವು ಸೂರ್ಯನನ್ನೂ ಸ್ತುತಿಸುತ್ತಿಲ್ಲ. ಗಾಯತ್ರೀ ಮುಂತಾದ ದೇವಿಯರ ಸ್ತೋತ್ರವೂ ಅಲ್ಲ. ಸೂರ್ಯಮಂಡಲದಲ್ಲಿ ನೆಲೆಸಿರುವ ಸರ್ವೋತ್ತಮನಾದ ಭಗವಂತನನ್ನು ಸ್ತೋತ್ರಮಾಡುತ್ತಿವೆ ಎಂದು ತಿಳಿಸಲೂ ಗಾಯತ್ರೀಮಂತ್ರದ ಧೀಮಹಿ ಧಾತುವನ್ನು ಸತ್ಯನಾದ ಶ್ರೀಹರಿಯ ಸ್ತೋತ್ರದಲ್ಲಿ ಸೇರಿಸಿದರು.

ಪ್ರತಿಮೆಗಳಲ್ಲಿ ಅತ್ಯಂತ ತೇಜೋಮಯವಾದ ಪ್ರತಿಮೆ ಎಂದರೆ ಸೂರ್ಯಮಂಡಲ. ಜಗತ್ತಿನಲ್ಲಿಯ ಬೆಳಗುವ ವಸ್ತುಗಳಿಗೆಲ್ಲ ಬೆಳಕನ್ನು ನೀಡಿ ಸಮಸ್ತ ಚೇಷ್ಟೆಗಳಿಗೂ ಸೂರ್ಯಮಂಡಲವು ಕಾರಣವಾಗಿದೆ. ಇಷ್ಟೂ ಅಲ್ಲದೆ ಸಮಸ್ತ ಪ್ರಜೆಗಳೂ ಆರೋಗ್ಯಪೂರ್ಣವಾದ ಬಾಳ್ವೆಯನ್ನು ಸಾಗಿಸಬೇಕೆಂದಿದ್ದರೆ ಸೂರ್ಯದೇವನಿಗೆ ಶರಣೆನ್ನಬೇಕು.

**ಆರೋಗ್ಯಂ ಭಾಸ್ಕರಾದಿಚ್ಛೇತ್ ಶ್ರಿಯಮಿಚ್ಛೇತ್ ಹುತಾಶನಾತ್ ।**
**ಜ್ಞಾನಂ ಮಹೇಶ್ವರಾದಿಚ್ಛೇತ್ ಮೋಕ್ಷಮಿಚ್ಛೇಜ್ಜನಾರ್ದನಾತ್ ॥**

ಎಂಬ ಶ್ಲೋಕ ಇದಕ್ಕೆ ಪೂರಕವಾಗಿದೆ.

'ಆರೋಗ್ಯವನ್ನು ಸೂರ್ಯನಿಂದ, (ಕಾಂತಿಯನ್ನು) ಸಂಪತ್ತನ್ನು ಅಗ್ನಿಯಿಂದ, ಜ್ಞಾನವನ್ನು ಈಶ್ವರನಿಂದ, ಮೋಕ್ಷವನ್ನು ಜನಾರ್ದನನಿಂದ ಬಯಸಬೇಕು' ಸೂರ್ಯಮಂಡಲದಿಂದ ಚೆಲ್ಲಿದ ಬೆಳಕಿನಿಂದ ಜಗತ್ತೆಲ್ಲವೂ ಬೆಳಗಬೇಕಾದರೂ ಇದಕ್ಕೆ ಕಾರಣನಾದವ ಮಂಡಲದೊಳು ಮಂಡಿಸಿದ ಶ್ರೀಮನ್ನಾರಾಯಣನೇ. ಆದ್ದರಿಂದ ಸೂರ್ಯಮಂಡಲಸ್ಥನಾದ ನಾರಾಯಣನನ್ನೇ ಗಾಯತ್ರೀಮಂತ್ರದ ಮೂಲಕ ಪ್ರಾರ್ಥಿಸಬೇಕು.

ಪ್ರತಿನಿತ್ಯವೂ ಕರಮುಗಿದು ಶಿರಃಸಾಗಿ, ಸಾಧಕನು ಬೇಡಬೇಕಾದ್ದೇನು? ಐಹಿಕ ಸುಖಸಾಮಗ್ರಿಗಳನ್ನು ಕೊಡು! ಎಂದೇ! ಅಲ್ಲ. "ಓ ದೇವದೇವ! ಬೆಳಕಿನ ಮಂಡಲದಲ್ಲಿ ಮಂಡಿಸಿದ ಭಗವಂತನೇ! ನಮ್ಮೆಲ್ಲರಿಗೂ ನಿನ್ನಲ್ಲಿ ಅವಿರತವಾದ ಭಕ್ತಿಯನ್ನು ಕೊಡು, ತತ್ವಜ್ಞಾನವೆಂಬ ಬೆಳಕನ್ನು ಕೊಡು" ಎಂದು ಪ್ರಾರ್ಥಿಸಬೇಕು.

ನಮ್ಮೆಲ್ಲರಿಗೂ ಎರಡು ಬೆಳಕುಗಳ ಅಗತ್ಯವಿದೆ. ಒಂದು ಹೊರಬೆಳಕು ಮತ್ತೊಂದು ಒಳಬೆಳಕು. ದೈನಂದಿನದ ಬದುಕಿಗಾಗಿ ಹೊರಬೆಳಕು ಬೇಕು. ಆತ್ಮನ ಬೆಳವಣಿಗೆಗಾಗಿ ಆಂತರಬೆಳಕು ಬೇಕು. ದೈನಂದಿನ ಬದುಕಿಗೆ ಬೇಕಾದ ಬೆಳಕನ್ನು ಸೂರ್ಯದೇವ ನೀಡಬಲ್ಲ. ಆದರೆ ಆತ್ಮನ ಬದುಕಿಗೆ ಬೇಕಾದ ತತ್ವಜ್ಞಾನವೆಂಬ ಬೆಳಕು ಬೇಕಾದರೆ ಹರಿಯಲ್ಲಿಯೇ ಮೊರೆಯಿಡಬೇಕು.

ನಮ್ಮ ಜೀವನದ ರಥ ನಿರ್ವಿಘ್ನವಾಗಿ ಪ್ರತಿ ಜನ್ಮಗಳಲ್ಲಿಯೂ ಸಾಗಿ ಸೌಖ್ಯವನ್ನು ಪಡೆಯಬೇಕಿದ್ದರೆ ತತ್ವಜ್ಞಾನವೆಂಬ ಬೆಳಕು ಅತ್ಯಗತ್ಯ. ವಿಶಿಷ್ಟವಾದ ಗುಣಧರ್ಮಗಳಿಂದ ಕೂಡಿದ ವ್ಯಾಪ್ತವಾದ ಪ್ರಕೃತಿಯಲ್ಲಿ ಮೈಯೊಡ್ಡಿದಾಗ ದೇಹ ಬೆಳೆಯುವಂತೆ ಜೀವರ ಹೃದಯಾಕಾಶವೆಂಬ ಮೈದಾನದಲ್ಲಿ ನೆಲೆನಿಂತ ಭಗವಂತನು ತತ್ವಜ್ಞಾನವೆಂಬ ಮಂಗಳ ಬೆಳಕಿನಿಂದ ಬೆಳೆಯುತ್ತಾನೆ. ಈ ಒಳಬೆಳಕಿಗಾಗಿ ಬೆಳಕಿನ ಲೋಕದೊಳಿರುವ ಬೆಳಕಿಗೂ ಬೆಳಕಾದ ಭಗವಂತನ ಬಳಿ ಬೇಡಬೇಕು. "ದೇವ! ಎನ್ನ ನಿತ್ಯಸುಖಕ್ಕೆ ಕಾರಣವಾದ ನಿನ್ನ ಜ್ಞಾನವನ್ನು ಕೊಡು" ಎಂದು. ಹೀಗೆ ಸಜ್ಜೀವರಿಗೆ ಅಗತ್ಯವಾದ ಪ್ರಾರ್ಥನೆಯನ್ನು ತಿಳಿಸಿಕೊಡುವ ತಾರಕಮಂತ್ರವೇ ಗಾಯತ್ರೀಮಂತ್ರ. ಶ್ರೀಮನ್ನಾರಾಯಣನ ದಿವ್ಯಮಂತ್ರ. ಮನುಜರ ಮೋಕ್ಷಮಂತ್ರ. ವೇದಕ್ಕೂ ಮೂಲವಾದ ಮಂತ್ರ. ಈ ಮಂತ್ರದ ಅರ್ಥವಿನ್ಯಾಸವೇ ಭಾಗವತಗ್ರಂಥ.

## ವ್ಯಾಸರ ದೃಷ್ಟಿಯಲ್ಲಿ ಅನುಬಂಧಚತುಷ್ಟಯ

ಧರ್ಮಃ ಪ್ರೋಜ್ಝಿತಕೈತವೋಽತ್ರ ಪರಮೋ ನಿರ್ಮತ್ಸರಾಣಾಂ ಸತಾಂ
ವೇದ್ಯಂ ವಾಸ್ತವಮತ್ರವಸ್ತು ಶಿವದಂ ತಾಪತ್ರಯೋನ್ಮೂಲನಮ್ ।
ಶ್ರೀಮದ್ಭಾಗವತೇ ಮಹಾಮುನಿಕೃತೇ ಕಿಂ ವಾಽಪರೈರೀಶ್ವರಃ
ಸದ್ಯೋ ಹೃದ್ಯವರುಧ್ಯತೇಽತ್ರ ಕೃತಿಭಿಃ ಶುಶ್ರೂಭಿಸ್ತತ್ಕ್ಷಣಾತ್ ॥ ೧-೧-೨ ॥

ಶ್ರೀಮದ್ಭಾಗವತದಲ್ಲಿ ನಿರೂಪಿತವಾಗಿರುವ ವಿಷಯ, ಪ್ರಯೋಜನ, ಅಧಿಕಾರಿ, ಸಂಬಂಧಗಳನ್ನು ಈ ಪದ್ಯವು ತಿಳಿಸುತ್ತಿದೆ. ನಿಷ್ಕಾಮಧರ್ಮ ಮತ್ತು ಭಗವಂತ –ಇವರೇ ಇಲ್ಲಿ ವಿಷಯರು. ಮಾತ್ಸರ್ಯವಿಲ್ಲದ ಸಜ್ಜನರು ಗ್ರಂಥ ಅಧ್ಯಯನಕ್ಕೆ ಅಧಿಕಾರಿಗಳು. ಮೋಕ್ಷವು ಫಲವಾಗಿದೆ. ಸಂಬಂಧವನ್ನು ಯಥಾಯೋಗ್ಯವಾಗಿ ತಿಳಿಯಬೇಕು.

ಭಾಗವತವು ನಿರೂಪಿಸಲು ಹೊರಟಿರುವ ನಿಷ್ಕಾಮಧರ್ಮ ಎಂದರೆ ಏನು? ಯಾವುದನ್ನು ಅವಲಂಬಿಸಿದಾಗ ಭಗವಂತನು ಹತ್ತಿರವಾಗುತ್ತಾನೋ ಅದೇ ನಿಜವಾದ ಧರ್ಮ.

ಇಂದು ನಾವೆಲ್ಲರೂ ಬೇರೆ ಬೇರೆ ಸ್ವಾರ್ಥಗಳಿಗಾಗಿ ಧರ್ಮವನ್ನು ದುರುಪ ಯೋಗಪಡಿಸಿಕೊಳ್ಳುತ್ತಿದ್ದೇವೆ. ಧರ್ಮವು ಕೇವಲ ಸ್ವಾರ್ಥಸಾಧನೆಗೆ ಸೀಮಿತವಾಗಿದೆ. ನುಡಿಯಲ್ಲೊಂದು ಹೇಳಿದರೆ ಮನದಲ್ಲಿ ಮಗದೊಂದನ್ನಾಲೋಚಿಸಿರುತ್ತೇವೆ. ತಪ್ಪು ನಡೆದಾಗ 'ಸರ್ವತಂತ್ರಸ್ವತಂತ್ರನಾದ ಶ್ರೀಹರಿಯೇ ಎಲ್ಲದಕ್ಕೂ ಕಾರಣ' ಎಂದು ಹೇಳುತ್ತೇವೆ. ಉತ್ತಮ ಕಾರ್ಯ ತನ್ನಿಂದ ನಡೆದರೆ 'ಎಲ್ಲವನ್ನೂ ನಾನೇ ಮಾಡಿದವ' ಎಂದು ಹಮ್ಮಿನಿಂದ ಬೀಗುತ್ತೇವೆ. ಮಾತಿನಲ್ಲಿ ಔದಾರ್ಯ ತೋರಿಸಿ, ಕೃತಿಯಲ್ಲಿ ಅಹಂಕಾರ ತೋರಿಸುತ್ತಿದ್ದೇವೆ. ಮಾತು-ಕೃತಿಗಳ ಸಂಬಂಧವನ್ನು ಮರೆತಿದ್ದೇವೆ. ಈ ವಂಚನೆಯನ್ನು ಸರ್ವಾತ್ಮನಾ ಪರಿತ್ಯಜಿಸಬೇಕು.

"ಭಗವಂತನೇ ಈ ಕೆಲಸವನ್ನು ಮಾಡಿಸುತ್ತಿದ್ದಾನೆ. ಅವನೇ ಸರ್ವಕರ್ತಾ. ಅಸ್ವತಂತ್ರನಾದ ನಾನು ಅವನ ಅಧೀನವಾದ ಶಕ್ತಿಯಿಂದಲೇ ಕೆಲಸವನ್ನು ಮಾಡುತ್ತಿದ್ದೇನೆ. ಸ್ವತಂತ್ರವಾದ ವ್ಯಕ್ತಿತ್ವವನ್ನು ನಾನೆಂದೂ ಪಡೆಯಲಾರೆ' ಎಂಬ ನಿರಂಹಂಕಾರದ ಬುದ್ಧಿಯಿಂದ ಫಲಕಾಮನೆಗಳನ್ನು ತೊರೆದು ಹರಿಪ್ರೀತಿಗಾಗಿ ಮಾಡುವ ಧರ್ಮವೇ ಉತ್ತಮವಾದ ಧರ್ಮ

ನಾವು ಸ್ವಾರ್ಥ ಅಹಂಕಾರಗಳನ್ನು ಬಿಡಬೇಕು. ಯಾವುದೇ ಕೆಲಸವನ್ನು ಮಾಡುವಾಗಲೂ ಭಗವಂತನ ಪ್ರೀತಿಯನ್ನು ಹೊರತಾಗಿ ಮತ್ತೇನನ್ನೂ ಬಯಸಬಾರದು. ಹಾಗೆಯೇ ಯಾವುದೇ ಕೆಲಸಗಳು ನಮ್ಮಿಂದ ನಡೆದಾಗಲೂ 'ನಾನು ಮಾಡಿದೆ, ನನ್ನಿಂದ ಈ ಕೆಲಸವಾಯಿತು' ಎಂದು ಹಮ್ಮಿನಿಂದ ಎದೆಯುಬ್ಬಿಸದೆ ಸರ್ವಕರ್ತೃವು ನನ್ನ ಸ್ವಾಮಿಯೇ ಆಗಿದ್ದಾನೆಂದು ಚಿಂತಿಸಬೇಕು.

ಈ ತೆರನಾದ ಕರ್ಮವನ್ನೇ ಭಗವದ್ಗೀತೆಯೂ ಬೋಧಿಸಿ ಅದಕ್ಕೆ 'ನಿಷ್ಕಾಮ ಕರ್ಮ' ಎಂದು ಹೆಸರಿಸಿದರೆ ಭಾಗವತವು 'ನಿವೃತ್ತಧರ್ಮ' ಎಂದು ಕರೆಯಿತು. ಫಲಾಪೇಕ್ಷೆ ಇಲ್ಲದೆ 'ಭಗವಂತ ಪ್ರೀತನಾಗಲಿ' ಎಂದು ಮಾಡುವ ಧರ್ಮವೇ 'ಭಾಗವತಧರ್ಮ'. ಇದನ್ನು ನಿರೂಪಿಸಲಿಕ್ಕಾಗಿಯೇ ಭಾಗವತ ಆರಂಭಗೊಂಡಿದೆ.

ಎಂದೂ ಅಳಿವಿರದ, ನಿತ್ಯನೂತನನಾದ, ಮಂಗಳಾಂಗನಾದ ಭಗವಂತನನ್ನು ಹೊಂದುವುದೇ ಜೀವನದ ಮುಖ್ಯ ಗುರಿ. ಇದಕ್ಕೆ ಸಾಧನವಾದದ್ದು ನಿಷ್ಕಾಮ ಧರ್ಮಾಚರಣೆ. ಇದರಲ್ಲಿ ಆಸಕ್ತಿ ತಾಳುವ ನಿಸ್ವಾರ್ಥಿ, ನಿರಹಂಕಾರಿಯಾದ, ಮಾತ್ಸರ್ಯರಹಿತನಾದ ಸಜ್ಜನನೇ ಇದಕ್ಕೆ ಮುಖ್ಯಾಧಿಕಾರಿ.

## ಭಗವಂತ ಸಿಗಲು ಹೃದಯಶುದ್ಧಿ ಬೇಕು

ಸಕಲ ಇಷ್ಟಾರ್ಥಗಳನ್ನು ನೀಡುವ ಭಗವಂತನನ್ನು ಹೊತ್ತುಕೊಂಡ ಈ ಭಾಗವತಗ್ರಂಥ ಕಾಮಧೇನುವಿನಂತಿದೆ. ಕಾಮಧೇನುವೇ ಬಳಿ ಇರುವಾಗ, ನೀರಾದ ಹಾಲಿಗೆ ಬಾಯೊಡ್ಡುವ ಅಗತ್ಯವಿದೆಯೇ?! ಹಾಗೆಯೇ ಸಕಲ ಇಷ್ಟಾರ್ಥದಾತನಾದ ಭಗವಂತನನ್ನೇ ನಮ್ಮ ಮನವೆಂಬ ಮನೆಯಲ್ಲಿ ಕಟ್ಟಿಹಾಕುವ ಭಾಗವತವೆಂಬ ಕಾಮಧೇನುವೇ ಸಿಕ್ಕಿರಲು ಐಹಿಕಕಾಮನೆಗಳಿಗೇಕೆ ಬಾಯ್ಬಿಡಬೇಕು!!

ಭಾಗವತಗ್ರಂಥದ ಅಧ್ಯಯನದಿಂದ ಸರ್ವೋತ್ಕೃಷ್ಟನಾದ ಭಗವಂತ, ನಿಕೃಷ್ಟರಾದ ನಮ್ಮ ಹೃದಯದಲ್ಲಿ ಮೂಡುವನೇ? ಖಂಡಿತವಾಗಿಯೂ ಮೂಡುತ್ತಾನೆ. ಇದಕ್ಕೊಂದು ದೃಷ್ಟಾಂತವನ್ನು ನೋಡೋಣ!!

'ರಾಮಚರಿತಮಾಸದ'ದಲ್ಲಿ ತುಲಸೀದಾಸರು, ರಾಮನ ಬಾಲ್ಯವನ್ನು ಸುಂದರವಾಗಿ ಬಣ್ಣಿಸಿದ್ದಾರೆ.

ಮಗುವಾಗಿದ್ದ ಶ್ರೀರಾಮಚಂದ್ರನಿಗೆ ಒಂದು ದಿನ ಆಕಾಶದಲ್ಲಿದ್ದ ಹುಣ್ಣಿಮೆ ಚಂದ್ರನನ್ನು ತನ್ನ ಪುಟ್ಟ ಕೈಯಲ್ಲಿ ಹಿಡಿಯಬೇಕೆನಿಸಿತಂತೆ. ಶ್ರೀರಾಮಚಂದ್ರನಿಗೂ ಚಂದ್ರಮನ ಬಯಕೆ. ಏನಾಶ್ಚರ್ಯ!! ಹಟಮಾಡಿದ.

ಅಮ್ಮಾ! ನನಗೆ ಚಂದ್ರನನ್ನು ಕೊಡು.

ಕೌಸಲ್ಯೆ ಹೇಳಿದಳು –"ಮಗು! ಚಂದ್ರನನ್ನು ಹಿಡಿಯಲು ಸಾಧ್ಯವಿಲ್ಲ. ಅವನು ಬಲುದೂರದಲ್ಲಿದ್ದಾನೆ. ಬಹಳ ಗಾತ್ರದವನಿದ್ದಾನೆ. ನಿನಗೆ ಹೇಗೆ ಕೊಡಲಿ!! ತಾಯಿಯು 'ಚಂದ್ರನನ್ನು ಹಿಡಿಯುವುದು ಅಸಂಭವ'ವೆಂದು ಎಷ್ಟೇ ತಿಳಿಹೇಳಿದರೂ ರಾಮಚಂದ್ರ ತನ್ನ ಮೊಂಡು ಹಟವನ್ನು ಬಿಡಲೇ ಇಲ್ಲ. ಜೋರಾಗಿ ಅಳಲಾರಂಭಿಸಿದ. ಕೌಸಲ್ಯೆಯು ಸಮಾಧಾನಪಡಿಸಲಸಮರ್ಥಳಾದಾಗ ವಸಿಷ್ಠರು ಕೊನೆಗೊಂದು ಉಪಾಯ ಹೂಡಿದರು.

ವಸಿಷ್ಠರು ಸ್ವಚ್ಛವಾದ ಕನ್ನಡಿಯೊಂದನ್ನು ತಂದರು. ಶ್ರೀರಾಮನ ಕರದಲ್ಲಿಟ್ಟು ಹೇಳಿದರು. ಶ್ರೀರಾಮ! ನೋಡು! ಚಂದ್ರಮ ನಿನ್ನ ಕೈಯಲ್ಲಿಯೇ ಇದ್ದಾನೆ ಎಂದು.

ದೂರದ ಚಂದ್ರ ರಾಮಚಂದ್ರನ ಕನ್ನಡಿಯಲ್ಲಿ ಪ್ರತಿಬಿಂಬಿತನಾಗಿ ಕೈಯಲ್ಲಿಯೇ ಕಂಡ. ಆವಾಗ ರಾಮಚಂದ್ರನ ಅಳು ನಿಂತಿತು.

ರಾಮಚಂದ್ರನ ಈ ಆಟದ ಹಟದ ಅಳುವಿನಲ್ಲೂ ಒಂದು ಸಂದೇಶದ ಪಾಠವಿದೆ.

ದೂರದ ಚಂದ್ರನು ನಮ್ಮ ಕೈಗೆ ಸಿಗಬೇಕಿದ್ದರೆ; ಒಂದು ಪರಿಶುದ್ಧವಾದ ಕನ್ನಡಿ ಬೇಕು. ಅದರಂತೆ ನಮ್ಮಿಂದ ದೂರವಿರುವ ಭಗವಂತನೆಂಬ ಚಂದ್ರಮನು ನಮಗೆ ದೊರೆಯಬೇಕಿದ್ದರೆ ನಮಗೂ ಒಂದು ಕನ್ನಡಿ ಬೇಕು. ಇಲ್ಲಿ ನಮ್ಮ ಹೃದಯವೇ ಕನ್ನಡಿ ಇದ್ದಂತೆ ಇದೆ. ಆದರೆ ಈ ಕನ್ನಡಿಯು ಕಾಮಾದಿಗಳಿಂದ ದೂಷಿತವಾಗಿದೆ. ಈ ಅಂತಃಕರಣವೆಂಬ ಕನ್ನಡಿಯು ನಿರ್ಮಲವಾದರೆ ಭಗವಂತನು ಒಡಮೂಡು ತ್ತಾನೆ. ಎಲ್ಲಿ ಪರಿಶುದ್ಧತೆ ಇದೆಯೋ ಅಲ್ಲಿ ಭಗವಂತನು ಮೂಡುತ್ತಾನೆ. ಭಗವಂತನನ್ನು ಧರಿಸಲು ಪರಿಶುದ್ಧವಾದ ಹೃದಯವಂತಿಕೆ ಬೇಕು ಎಂಬ ಸಂದೇಶವನ್ನು ನೀಡಲು ಶ್ರೀರಾಮಚಂದ್ರನು ಅಳುವಿನ ನಾಟಕವಾಡಿದನೆಂದು ಭಾವಿಸಬೇಕು.

ಹೃದಯ ಪರಿಶುದ್ಧಿಗೇನು ಮಾಡಬೇಕು?

ನಮ್ಮ ಅಂತಃಕರಣವೆಂಬ ಕನ್ನಡಿ ಪರಿಶುದ್ಧವಾಗಿ ಭಗವಂತನು ಪ್ರತಿಬಿಂಬಿಸ ಬೇಕಿದ್ದರೆ; ಶ್ರೀಮದ್ಭಾಗವತವೆಂಬ ಪವಿತ್ರವಾದ ಗಂಗೆಯಲ್ಲಿ ಮೀಯಬೇಕು. ಹೃದಯವೇದಿಕೆಯಲ್ಲಿ ಜ್ಞಾನಗಂಗೆಯು ನಾಟ್ಯವಾಡಬೇಕು. ಭಕ್ತಿಯ ನಿನಾದ ಹೊರಹೊಮ್ಮಬೇಕು. ಅನಾದಿಕಾಲದಿಂದ ಮಡುಗಟ್ಟಿದ ಅಜ್ಞಾನವೆಂಬ ಕಶ್ಮಲ ತೊಳೆದು ತೊಲಗಬೇಕು. ಬೆಳಕಿಗೂ ಬೆಳಕಾದ ಭಗವಂತನ ಆಗಮನವಾಗಬೇಕು. ಇವನ ಆಗಮನಕ್ಕಾಗಿ ಸಾಧಕನ ಸಾಧನೆ ಬೇಕು. ಸಾಧನೆಗಾಗಿ ವ್ಯಾಸರ ಮುಖದಿಂದ ಹೊರಹೊಮ್ಮಿದ ಈ ಶ್ರೀಮದ್ಭಾಗವತವೇ ಬೇಕು.

## ವೇದ ವೃಕ್ಷದ ಫಲ ಭಾಗವತ

**ನಿಗಮ ಕಲ್ಪತರೋರ್ಗಲಿತಂ ಫಲಂ**
**ಶುಕಮುಖಾದಮೃತದ್ರವಸಂಯುತಮ್ ।**
**ಪಿಬತ ಭಾಗವತಂ ರಸಮಾಲಯಂ**
**ಮುಹುರಹೋ ರಸಿಕಾ ಭುವಿ ಭಾವುಕಾಃ ॥**

ಶ್ರೀಮದ್ಭಾಗವತವನ್ನು ಕಲ್ಪವೃಕ್ಷದ ಫಲವೆಂದು ಕೊಂಡಾಡಿದ್ದಾರೆ. ವೇದಗಳೇ ಕಲ್ಪವೃಕ್ಷವೆನಿಸಿದೆ. ಕಲ್ಪವೃಕ್ಷದಲ್ಲಿ ಚಿಗುರೆಲೆ, ಎಲೆ, ಹೂವು, ಹಣ್ಣುಗಳಿವೆ. ವೇದದಲ್ಲಿಯೂ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ವಸ್ತುಗಳಿವೆ. ಕಲ್ಪವೃಕ್ಷವು ಬಯಸಿದ್ದೆಲ್ಲವನ್ನೂ ನೀಡುವಂತೆ, ವೇದವು ಶ್ರದ್ಧೆಯಿಂದ ಪಠಿಸಿದಲ್ಲಿ ಬಯಸಿದ್ದೆಲ್ಲವನ್ನು ನೀಡುತ್ತದೆ. ಹೀಗೆ ಕಲ್ಪವೃಕ್ಷಕ್ಕೂ ವೇದಗಳಿಗೂ ಸಾಮ್ಯವಿರು ವುದರಿಂದ ವೇದಗಳನ್ನು ಕಲ್ಪವೃಕ್ಷವೆಂದರು.

ವೇದವೆಂಬ ಕಲ್ಪವೃಕ್ಷದ ಚಿಗುರೆಲೆಯೇ ಕಾಮವೆನಿಸಿದೆ. ಚಿಗುರೆಲೆ ನೋಡಲು ಆಕರ್ಷಕವಾಗಿರುತ್ತದೆ. ಅದನ್ನು ನೋಡಿದ ಕೂಡಲೇ ಕೀಳುವ ಬಯಕೆ ಮೂಡುತ್ತದೆ. ಹಾಗೆಯೇ ಅನೇಕ ಸುಖಸಾಮಗ್ರಿಗಳು ಚಿಗುರೆಲೆಯಂತಿವೆ. ನೋಡಿದ ಕೂಡಲೇ ಪಡೆದುಕೊಳ್ಳಬೇಕೆಂಬ ಬಯಕೆ ಉಂಟಾಗುತ್ತದೆ. ಇದನ್ನು ವೇದದಿಂದ ಪಡೆದುಕೊಳ್ಳಬಹುದು ಇದನ್ನೇ ಕಾಮ ಎನ್ನುವರು

ಇನ್ನು ಅರ್ಥವೇ ಎಲೆಯಂತಿದೆ. ಧರ್ಮವೇ ಪುಷ್ಪದಂತಿದೆ. ಮೋಕ್ಷವೇ ಹಣ್ಣಿನಂತಿದೆ.

ಚಿಗುರೆಲೆ ಎಲೆಯಾಗಿ, ಆ ಎಲೆಯು ಹೂವಾಗಿ, ಹೂವಿನಿಂದ ಹಣ್ಣಾಗುವಂತೆ ಅರ್ಥ ಕಾಮಗಳಿಂದ ಧರ್ಮವೆಂಬ ಪುಷ್ಪ ಜೀವನದಲ್ಲಿ ಅರಳುತ್ತದೆ. ಹೂವಿನಿಂದ ಹಣ್ಣಾಗುವಂತೆ ಧರ್ಮವೆಂಬ ಪುಷ್ಪದಿಂದ ಮೋಕ್ಷವೆಂಬ ಫಲವು ದೊರೆಯುತ್ತದೆ.

ಇಲ್ಲಿ ನಮಗೊಂದು ಎಚ್ಚರ ಬೇಕು ಫಲ ದೊರೆಯುವ ಮುನ್ನ ಹೂವನ್ನು ಕಿತ್ತರೆ ಮುಂದಿನ ಫಲ ದೊರೆಯದು. ಎಲೆಯನ್ನು ಕಿತ್ತರೆ ಹೂವೂ ದೊರೆಯದು. ಫಲವೂ ದೊರೆಯದು. ಫಲಕಾಮನೆ ಬಳ್ಳಿಯ ಚಿಗುರೆಲೆ, ಎಲೆ, ಹೂವು ಯಾವುದನ್ನೂ ಮುಟ್ಟಬಾರದು. ರಕ್ಷಿಸಬೇಕು. ಅದರಂತೆ ನಿರಂತರ ಸುಖವನ್ನು ಬಯಸುವವ, ಅರ್ಥ ಕಾಮಗಳಿಗೆ ಬಾಯ್ತೆರೆಯಬಾರದು. ಧರ್ಮಪುಷ್ಪವನ್ನು ಕಿತ್ತೊಗೆಯಬಾರದು. ಹೀಗಿದ್ದಲ್ಲಿ ಮಾತ್ರ ಮೋಕ್ಷಫಲ ಪ್ರಾಪ್ತಿ ಸಾಧ್ಯ.

ಇಂದು ನಮ್ಮೆಲ್ಲರ ದೃಷ್ಟಿ ಬದಲಾಗಿದೆ. ನಮಗೆ ಫಲದ ಕಾಮನೆಯೇ ಇಲ್ಲ. ಮೋಕ್ಷವನ್ನು ಬದಿಗಿಟ್ಟಿದ್ದೇವೆ. ಧರ್ಮವನ್ನು ಆಶ್ರಯಿಸಿದ್ದರೂ ಅದು ಅರ್ಥಕ್ಕಾಗಿ ಸೀಮಿತವಾಗಿದೆ. ನಮಸ್ಕಾರ, ಪೂಜೆ, ಪ್ರಾರ್ಥನೆ ಎಲ್ಲವನ್ನೂ ಅಧಿಕಾರಕ್ಕಾಗಿ–ಕೆಲಸಕ್ಕಾಗಿ–ಲೌಕಿಕ ಕಾಮನೆಗಳಿಗಾಗಿ ಉಪಯೋಗಿಸಿಕೊಳ್ಳುತ್ತಿದ್ದೇವೆ. ಅರ್ಥದಿಂದ ಭೋಗಪ್ರಪಂಚಕ್ಕೆ ಧುಮುಕುತ್ತೇವೆ.

ಅರ್ಥಕಾಮಗಳಿಂದ ಧರ್ಮ. ಧರ್ಮದಿಂದ ಮೋಕ್ಷ ಎನ್ನುವುದು ಶಾಸ್ತ್ರದ ಸಂದೇಶ.

ಧರ್ಮದಿಂದ ಅರ್ಥ, ಅರ್ಥದಿಂದ ಕಾಮವನ್ನು ಬಯಸುವುದು ನಮ್ಮ ಉದ್ದೇಶ. ಮೋಕ್ಷ ದೂರ ಸರಿದಿದೆ.

ಇಂತಹ ಅಜ್ಞರಿಗಾಗಿ ವ್ಯಾಸರು ವೇದವೆಂಬ ಕಲ್ಪವೃಕ್ಷದಲ್ಲಿ ಬೆಳೆದ ಒಂದು ಹಣ್ಣನ್ನು ಕೆಳಗಿನ ಮಂದಿಗೆ ನೀಡಿದ್ದಾರೆ. ಈ ಒಂದು ಹಣ್ಣನ್ನು ಎಲ್ಲರೂ ಸವಿಯಬಹುದು. ರಸ ಬತ್ತುವುದಿಲ್ಲ. ಸಿಪ್ಪೆಗೊರಟೆಗಳ ರಗಳೆ ಇಲ್ಲ. ನಿರಂತರ ಭಕ್ತಿರಸವನ್ನು ಸುರಿಸುವ ಮಧುರಫಲವೇ 'ಶ್ರೀಮದ್ಭಾಗವತ'. ಇದನ್ನು ಪಡೆದವನೇ ಪರಮಭಾಗವತ.

ನೈಮಿಷಾರಣ್ಯದಲ್ಲಿ ಶೌನಕಾದಿ ಮಹರ್ಷಿಗಳು ಮೋಕ್ಷಕಾಮನೆಯಿಂದ ಸಾವಿರ ವರ್ಷಗಳ ಸತ್ರ ಒಂದನ್ನು ಕೈಗೊಂಡರು. ಈ ಸಂದರ್ಭದಲ್ಲಿ 'ಭಗವದ್ಭಕ್ತರು ಯಾವ

ರೀತಿಯಾಗಿ ನಡೆದುಕೊಳ್ಳಬೇಕು' ಎಂದು ತಿಳಿಸಲು ಶೌನಕಾದಿ ಮಹರ್ಷಿಗಳು ಸೂತರ ಬಳಿ ಅನೇಕ ಪ್ರಶ್ನೆಗಳನ್ನು ಕೇಳುತ್ತಾರೆ. ಶ್ರೀಕೃಷ್ಣನು ದೇವಕಿಯ ಗರ್ಭದಲ್ಲಿ ಅವತರಿಸಿದನೇಕೆ? ಭಗವಂತನನ್ನು ಹೊಂದಲಿಚ್ಛಿಸುವವರು ಮಾಡಬೇಕಾದ ಕರ್ತವ್ಯಗಳೇನು? ಮುಂತಾಗಿ ಪ್ರಶ್ನಿಸಿದಾಗ ಸೂತರು ಅವರ ಪ್ರಶ್ನೆಗಳಿಗೆಲ್ಲ ಉತ್ತರಿಸಿ, ಮುಂದೆ ಭಗವಂತನ ದಶಾವತಾರಗಳನ್ನೂ ಹಯಗ್ರೀವ, ಧನ್ವಂತರಿ, ದತ್ತಾತ್ರೇಯ, ಋಷಭ, ವೇದವ್ಯಾಸ ಮುಂತಾದ ರೂಪಗಳನ್ನೂ ಬಣ್ಣಿಸಿ, ಭಗವಂತನು ಭಕ್ತರನ್ನು ಹೇಗೆ ಉದ್ಧರಿಸುತ್ತಾನೆ ಎಂಬುದನ್ನು ಸೂತರು ತಿಳಿಸಿ ಕೊಟ್ಟಿದ್ದಾರೆ.

ಮುಂದೆ ಗ್ರಂಥರಚನೆಯ ಬಗ್ಗೆ ಇರುವ ಹಿನ್ನೆಲೆ ಏನೆನ್ನುವುದನ್ನು ವಿವರಿಸುತ್ತಾರೆ.

ಗ್ರಂಥಕರ್ತೃಗಳಾದ ವೇದವ್ಯಾಸರ ಉದಯವೇ ಸಜ್ಜನರ ಉಪಕಾರಕ್ಕಾಗಿ. ಅನಂತ ವೇದರಾಶಿಗಳನ್ನು ವಿಭಾಗಿಸಿ, ಮರ್ತ್ಯರು ತಿಳಿಯಲು ಎಷ್ಟು ಸಾಧ್ಯವೋ ಅಷ್ಟನ್ನು ಮಾತ್ರ ನೀಡಿದ್ದಾರೆ. ಋಗ್ವೇದದಲ್ಲಿ ಅನೇಕ ಶಾಖೆಗಳಿವೆ. ಯಜುರ್ವೇದ ಸಾಮವೇದಗಳಲ್ಲಿಯೂ ಅನೇಕ ಶಾಖೆ ಗಳಿವೆ; ಅಲ್ಪಪ್ರಜ್ಞಾವಂತರಾದ ಪುರುಷರು ಅವುಗಳಲ್ಲಿ ಒಂದೊಂದು ಶಾಖೆಯನ್ನಾದರೂ ಅಧ್ಯಯನಮಾಡಲಿ ಎಂದು ವಿಭಜಿಸಿಕೊಟ್ಟರು; ಆ ಒಂದು ಶಾಖೆಯನ್ನೂ ನಮಗೆ ಓದಲಾಗುತ್ತಿಲ್ಲ. ಇಂತಹ ದುಃಸ್ಥಿತಿಯಲ್ಲಿ ನಾವಿದ್ದೇವೆ.

ವೇದಗಳನ್ನು ವಿಭಜಿಸಿದ ಬಳಿಕ, ವ್ಯಾಸರು ಮನುಕುಲದ ಮರ್ತ್ಯರೆಲ್ಲರಿಗೂ ತತ್ವಜ್ಞಾನಾಮೃತದ ರಸದೌತಣವನ್ನು ಮಹಾಭಾರತವೆಂಬ ಮೇರುಕೃತಿಯನ್ನು ರಚಿಸುವ ಮೂಲಕ ಉಣಬಡಿಸಿದರು. ಅಷ್ಟಾದಶ ಪುರಾಣಗಳನ್ನೂ ರಚಿಸಿದರು. ಇಷ್ಟಾದರೂ 'ಅವಶ್ಯವಾಗಿ ಮಾಡಬೇಕಾದ ಇನ್ನೊಂದು ಕಾರ್ಯ ಉಳಿದಿದೆ' ಎಂಬ ಭಾವನೆ ವ್ಯಾಸರಲ್ಲಿ ಮೂಡಿತು. ಆಲೋಚನೆಯ ನೆಪಮಾಡಿ ಕುಳಿತಾಗ ಅವರ ಸಂಕಲ್ಪದಂತೆ ನಾರದರು ಬಂದರು. ಆಗಬೇಕಾದ ಕಾರ್ಯವನ್ನು ನಿವೇದಿಸಿದರು.

ವೇದವ್ಯಾಸರೇ! ನೀವು ಈಗಾಗಲೇ ಪಂಚಮವೇದವೆನಿಸಿದ ಮಹಾಭಾರತವೆಂಬ ಮೇರುಕೃತಿಯನ್ನು ನೀಡಿದ್ದೀರಿ. ಹೀಗಿದ್ದರೂ ಸುಲಭವಾಗಿ ಭಗವಂತನ ಜ್ಞಾನ ಉಂಟಾಗುವ ಗ್ರಂಥ ಒಂದನ್ನು ರಚಿಸಿರಿ. ಭಗವಂತನು ಪ್ರೀತನಾಗುವ ಕರ್ತವ್ಯವನ್ನೂ ಬೋಧಿಸಿರಿ. ಇದಕ್ಕೆ ಸಮರ್ಥರನ್ನು ನಿಮ್ಮನ್ನು ಹೊರತಾಗಿ ಮತ್ತ್ಯಾರನ್ನೂ ಕಾಣೆವು ಎಂದು ಬಿನ್ನವಿಸಿಕೊಂಡರು.

## ವ್ಯಕ್ತಿತ್ವ ಬೆಳೆಸುವ ಸಾಹಿತ್ಯ ಬೆಳೆಯಲಿ!!

ಜಗತ್ತಿನಲ್ಲಿ ನೂರಾರು ಗ್ರಂಥಗಳಿರುವಾಗ ಭಾಗವತವನ್ನೇ ಓದಬೇಕೇಕೆ?

ಓದುವುದೇ ನಮ್ಮ ಜೀವನದ ಗುರಿಯಲ್ಲ. ಕಾದಂಬರಿಯನ್ನು ಕೈಗೆತ್ತಿಕೊಂಡವ ಹತ್ತಾರು ಗಂಟೆ ಊಟ-ನಿದ್ರೆಗಳನ್ನೂ ಬಿಟ್ಟು ಓದುತ್ತಾನೆ. ಇದರಿಂದ ತಾತ್ಕಾಲಿಕವಾದ ಸುಖದ ಭ್ರಾಂತಿಯನ್ನು ಹೊಂದುವನೇ ಹೊರತು ಭವಿಷ್ಯ

ಜೀವನವನ್ನು ಸುಂದರಗೊಳಿಸಲಾರ. ಕಾದಂಬರೀ ಮುಂತಾದ ಪುಸ್ತಕಗಳು ಕಾಲ ಹಣಗಳನ್ನು ಕಳೆದಾವೇ ಹೊರತು ನಮ್ಮ ವ್ಯಕ್ತಿತ್ವವನ್ನು ಬೆಳೆಸವು. ಕುತ್ಸಿತವಾದ ಭೌತಿಕ ಸುಖದ ಕಡೆಯೇ ನಮ್ಮನ್ನು ಸೆಳೆಯುವ ಗ್ರಂಥಗಳೆಲ್ಲವೂ ಕಾಗೆಯು ಮೀಯುವ ಕೊಳಚೆ ನೀರಿನಂತೆ. 'ತದ್ವಾಯಸಂ ತೀರ್ಥಂ' (೧–೫–೧೦) ಎನ್ನುತ್ತದೆ ಭಾಗವತ.

ಹಾಗಾದಲ್ಲಿ ಉತ್ತಮವಾದ ಗ್ರಂಥಗಳು ಯಾವುವು? ಭಗವಂತನೆಡೆಗೆ ನಮ್ಮನ್ನು ಸೆಳೆದು ಅವನ ತಿಳಿವನ್ನು ತಿಳಿಸಿ ಜೀವನವನ್ನೇ ಉಜ್ವಲಗೊಳಿಸುವ ಗ್ರಂಥಗಳೇ ಉತ್ತಮವಾದವುಗಳು. ಇವುಗಳನ್ನು ಸ್ವಚ್ಛವಾದ ಮಾನಸಸರೋವರಕ್ಕೆ ಹೋಲಿಸಿದ್ದಾರೆ. ಮಾನಸಸರೋವರದ ಪಾವಿತ್ರ್ಯವನ್ನು ಮನಗಂಡ ಹಂಸಗಳು ಆ ನೀರಿನಲ್ಲಿ ವಿಹರಿಸುತ್ತವೆ. ಅದರಂತೆ ಅತ್ಯಂತ ಪವಿತ್ರವಾದ ತೀರ್ಥಗಳಂತೆ ನಮ್ಮನ್ನು ಭಗವಂತನ ಬಳಿಗೆ ಕೊಂಡೊಯ್ಯುವ ಕೃತಿಗಳಲ್ಲಿ ಪರಮಹಂಸರೂ (ಯತಿಗಳು) ಆಸಕ್ತರಾಗುತ್ತಾರೆ. ಜಗತ್ತಿನಲ್ಲಿ ವಸ್ತುಗಳು ಯೋಗ್ಯವೋ ಅಯೋಗ್ಯವೋ ಎಂದು ತೀರ್ಮಾನಿಸಲು ಮಾನದಂಡ ಸಂನ್ಯಾಸಿಗಳು. ಉತ್ತಮ ಸಂನ್ಯಾಸಿಗಳು ಸ್ವೀಕರಿಸುವಂತಿದ್ದರೆ ಅದು ಯೋಗ್ಯ ಎನ್ನಬಹುದು.

ಇಂದು ಜಗತ್ತಿನಲ್ಲಿ ಸಂನ್ಯಾಸಿಗಳು ನೋಡಬಾರದ ನಾಟಕ, ಸಿನೆಮಾ, ಕಾದಂಬರಿ, ಅಶ್ಲೀಲ ಸಾಹಿತ್ಯಗಳೇ ವ್ಯಾಪಕವಾಗಿ ತುಂಬಿಕೊಂಡಿವೆ. ದೂರದರ್ಶನ ದಲ್ಲಿ ಅತ್ಯಂತ ಕೆಳಮಟ್ಟದ ದೃಶ್ಯಗಳನ್ನು ತೋರಿಸುತ್ತಾರೆ. ಒಂದುವೇಳೆ ಸಂನ್ಯಾಸಿ ಗಳೂ ನೋಡಬಹುದಾದ ಕಾರ್ಯಕ್ರಮಗಳೇನಾದರೂ ಆಕಸ್ಮಿಕವಾಗಿ ಬಂದಲ್ಲಿ ದೂರದರ್ಶನವನ್ನು ನಿಲ್ಲಿಸುತ್ತೇವೆ. 'ಸಂನ್ಯಾಸಿಗಳ ಕಾರ್ಯಕ್ರಮ ನಮಗೇಕೆ?' ಎನ್ನುತ್ತೇವೆ. ಅಸಡ್ಡೆ ತೋರುತ್ತೇವೆ.

ಇಂದು ಜಗತ್ತಿನಲ್ಲಿ ಒಳ್ಳೆಯ ಅಭಿರುಚಿಯನ್ನು ಹುಟ್ಟಿಸುವ ಮಾಧ್ಯಮಗಳು ಅಗತ್ಯವಾಗಿವೆ. ಅಧ್ಯಾತ್ಮ ಬೆಳವಣಿಗೆಯ ಮೂಲಕ ನಮ್ಮ ವ್ಯಕ್ತಿತ್ವವನ್ನು ಎತ್ತರಿಸುವ, ಅಂತಃಕರಣದಲ್ಲಿ ಸದಭಿಲಾಷೆಗಳನ್ನು ಹುಟ್ಟಿಸುವ ಮಾಧ್ಯಮಗಳು ಬೇಕು. ಅದು ಸಾಹಿತ್ಯವೇ ಆಗಿರಬಹುದು, ನಾಟಕವೇ ಆಗಿರಬಹುದು. ಎತ್ತಲೂ ನಮ್ಮ ವ್ಯಕ್ತಿತ್ವವನ್ನು ಎತ್ತರಿಸುವಂತಿರಬೇಕು. ಭಗವಂತನೆಡೆ ಸಾಗುವಂತಹ ಉತ್ತಮ ಅಭಿರುಚಿಯನ್ನು ನಮ್ಮಲ್ಲಿ ಮೂಡಿಸಬೇಕು. ಇಂತಹ ಸಾಹಿತ್ಯಗಳು ಬೆಳೆಯಬೇಕೇ ಹೊರತು; ನಮ್ಮ ಮನಸ್ಸನ್ನು ವಿಕೃತಗೊಳಿಸುವ ಕೆಟ್ಟ ಸಾಹಿತ್ಯಗಳು ಬೆಳೆಯಬಾರದೆಂದು ನಾರದರು ವ್ಯಾಸರಲ್ಲಿ ವಿನಂತಿಸಿಕೊಂಡಿದ್ದಾರೆ.

## ಭಾಗವತಧರ್ಮ ಎಂದರೇನು?

ಭಾಗವತವು ನಿವೃತ್ತ ಧರ್ಮವನ್ನು ಬೋಧಿಸುತ್ತಿದೆ. ಸ್ವಾರ್ಥವಿಲ್ಲದ ಕರ್ತವ್ಯ ಮಾಡಿರಿ! ಎಂದು. ಇಲ್ಲಿ ಗಮನಿಸಬೇಕಾದ ಕೆಲವು ಅಂಶಗಳಿವೆ. ನಮ್ಮ ಎಲ್ಲಾ

ಕರ್ತವ್ಯಗಳು ಕೇವಲ ನಿಷ್ಕಾಮವಾದರೆ ಸಾಲದು. ಕೃಷಿಮಾಡುವವ ಕಳೆಯನ್ನು ತೆಗೆದು ಕೇವಲ ಸಸಿಗಳನ್ನು ನೆಟ್ಟರೆ ಸಾಲದು ಒಳ್ಳೆಯ ಗೊಬ್ಬರವನ್ನೂ ಹಾಕಬೇಕು. ಕಳೆ ಇಲ್ಲದಿದ್ದರೂ ಗೊಬ್ಬರ ಹಾಕದಿದ್ದರೆ ಸಸಿಯ ಬೆಳವಣಿಗೆ ಸರಿಯಾಗದು. ಫಲವು ದೊರೆಯದು.

ಇದರಂತೆ ನಿಸ್ವಾರ್ಥವಾದ ಜ್ಞಾನ, ಕರ್ತವ್ಯಗಳ ಒಟ್ಟಿಗೆ ಭಗವದ್ಭಕ್ತಿಯೂ ಸೇರಬೇಕು. ಸ್ವಾರ್ಥದ ಲೇಶವೂ ಇಲ್ಲದೆ 'ಹರಿಯು ಪ್ರೀತನಾಗಲಿ' ಎಂದು ಭಕ್ತಿಯಿಂದಾಚರಿಸುವ ಕರ್ಮವೇ ಉತ್ತಮವಾದುದು. ಭಕ್ತಿ ಗೊಬ್ಬರದಂತಿದ್ದರೆ, ಸ್ವಾರ್ಥ ತ್ಯಾಗ ಕಳೆಕಿತ್ತಂತೆ. ಭಕ್ತಿ ಸೇರದ ನಿಷ್ಕಾಮಕರ್ಮ ಕಳೆಯಿಲ್ಲದ ನಿಂತ ಸಸಿಯಂತೆ. ಫಲ ಬೇಕಾದಲ್ಲಿ ಕಳೆಯನ್ನು ಕೀಳಬೇಕು; ಗೊಬ್ಬರವನ್ನು ಹಾಕಬೇಕು. ಅದರಂತೆ ನಾವೂ ಸಹ ಸ್ವಾರ್ಥದ ಕಳೆಯನ್ನು ಕಿತ್ತು, ಕರ್ತವ್ಯದ ಬೆಳೆಯನ್ನು ಬಿತ್ತಿ, ಭಗವದ್ಭಕ್ತಿ ಎಂಬ ಗೊಬ್ಬರವನ್ನು ಹಾಕಿದರೆ ಪರಮಪದವೆಂಬ ಫಲವು ಪ್ರಾಪ್ತಿಯಾಗುತ್ತದೆ. ಇಂತಹ ಧರ್ಮವನ್ನೇ 'ನಿಷ್ಕಾಮಕರ್ಮ' ಅಥವಾ 'ಭಾಗವತಧರ್ಮ' ಎಂದು ಕರೆಯುತ್ತಾರೆ. ಈ ವಿಷಯವನ್ನು ವಾಸಿಷ್ಠಕೃಷ್ಣರು ಭಾಗವತದಲ್ಲಿ ತಿಳಿಸಿದರೆ; ಇದೇ ಭಗವಂತ ಯಾದವಕೃಷ್ಣನಾಗಿ ಗೀತೆಯಲ್ಲಿ ಸಾರಿದ್ದಾನೆ.

ಒಬ್ಬ ದೊಡ್ಡ ಉದ್ಯಮಿ. ದೊಡ್ಡ ವ್ಯಾಪಾರಕ್ಕೆ ಕೈಹಾಕಿದ. ಬಹಳಷ್ಟು ಸಂಪತ್ತನ್ನು ವಿನಿಯೋಗಿಸಿದ. ತನ್ನ ಕರ್ತವ್ಯದ ತೀರವನ್ನು ಮುಟ್ಟುವ ಮುನ್ನವೇ ಎಲ್ಲವನ್ನೂ ಕೈಬಿಟ್ಟ. ವಿನಿಯೋಗಿಸಿದ ಹಣ ಶ್ರಮ ಎಲ್ಲವೂ ವ್ಯರ್ಥವಾಯಿತು. ಮಾನಸಿಕ ಚಿಂತೆಗೆ ತುತ್ತಾದ. ಫಲದಿಂದ ವಂಚಿತನಾದ. ಇದಕ್ಕೆ ಇವನ ಅಧೈರ್ಯತೆಯೂ ಕಾರಣ ಸ್ವಾರ್ಥಬುದ್ಧಿಯೂ ಕಾರಣ. ಇಂತಹ ಪರಿಸ್ಥಿತಿ ನಿಷ್ಕಾಮಧರ್ಮದಲ್ಲಿಲ್ಲ. ಒಂದುವೇಳೆ ಭಕ್ತಿಯು ಪೂರ್ಣವಾಗದೆ ಜಾರಿದರೆ ಅನರ್ಥಕ್ಕೀಡಾಗುವ ಪ್ರಸಂಗವಿದೆಯೆ? ಖಂಡಿತವಾಗಿಯೂ ಇಲ್ಲ.

ನಾವು ಸ್ವೀಕಾರಮಾಡುವ ಔಷಧಿ ಸ್ವಲ್ಪ ಹೆಚ್ಚುಕಡಿಮೆಯಾದರೆ ಅನರ್ಥಕ್ಕೆ ಗುರಿಯಾಗುತ್ತೇವೆ ಇದರಂತೆ ಸ್ವಾರ್ಥದಿಂದ ಮಾಡುವ ಕರ್ಮದಲ್ಲಿ ಸ್ವಲ್ಪ ಉದಾಸೀನ ಮಾಡಿದರೂ ಸಹ ಮಹತ್ತರವಾದ ಹಾನಿಯನ್ನನುಭವಿಸಬೇಕಾಗುತ್ತದೆ. ಇಲ್ಲಿಗೆ ಬೇಕಾದ್ದನ್ನೂ ಪಡೆಯಲಿಲ್ಲ. ಪಾರತ್ರಿಕ ಸೌಖ್ಯವೂ ದೊರೆಯಲು ಸಾಧನ ಮಾರ್ಗಕ್ಕೆ ಇಳಿದಿಲ್ಲ. ಇಂತಹ ಅವಸ್ಥೆ ಬೇಕೆ? ನಿಷ್ಕಾಮಕರ್ಮವನ್ನು ಪ್ರಾರಂಭಿಸಿ ಅರ್ಧದಲ್ಲಿ ಕೈಬಿಟ್ಟರೂ ಹಾನಿಯಿಲ್ಲ. ಹೆಚ್ಚುಕಡಿಮೆಗಳಾದರೂ ದುಷ್ಪರಿಣಾಮವಿಲ್ಲ. ಅಪಮಾನ ಅಪಜಯ ಕಷ್ಟನಷ್ಟಗಳೆಲ್ಲವೂ ಸ್ವಾರ್ಥದ ಕರ್ಮದಲ್ಲಿ ಮಾತ್ರ.

ಕಬ್ಬಿಣದ ತಂತಿಯಿಂದ ಹೆಣೆಯಲ್ಪಟ್ಟ ಗಾಜಿನ ಮಣಿಗಳ ಮಾಲೆ ಎಷ್ಟು ಸುಂದರವಾಗಿ ಕಂಡರೂ ಅದರ ಮೌಲ್ಯ ಅಲ್ಪವೇ. ಆದರೆ ಚಿನ್ನದ ತಂತಿಯಿಂದ ನವರತ್ನಮಣಿಗಳನ್ನು ಅಂಕುಡೊಂಕಾಗಿ ಹೆಣೆದಿಟ್ಟರೂ ಅದರ ಮೌಲ್ಯ ಅಪಾರ. ಎರಡೂ ಮಣಿಗಳ ಮಾಲೆಗಳಾಗಿದ್ದರೂ ಒಂದಕ್ಕೆ ಮೂರುಕಾಸಿನ ಬೆಲೆ. ಮತ್ತೊಂದಕ್ಕೆ

ಮೂರುಸಾಸಿರ ಬೆಲೆ. ಇದರಂತೆ ಫಲಾಪೇಕ್ಷೆಯಿಂದ ಮಾಡಿದ ಕಾರ್ಯ ಗಾಜಿನ ಸರದಂತೆ. ಇದರ ಫಲ ಅತ್ಯಲ್ಪ ಅದೇ ನಿಷ್ಕಾಮನೆಯಿಂದ 'ಭಗವಂತನು ಪ್ರೀತನಾಗಲಿ' ಎಂದು ಮಾಡಿದ ಕರ್ತವ್ಯ ನವರತ್ನದ ಮಾಲೆಯಂತೆ ಅನರ್ಘ್ಯವಾದುದು. ಕರ್ಮದಲ್ಲಿ ಸ್ವಲ್ಪ ತಪ್ಪಾದರೂ ಭಗವಂತ ಕ್ಷಮಿಸಿ ಉದ್ಧರಿಸುತ್ತಾನೆ. ಇದನ್ನೇ ಮುಂದೆ ವ್ಯಾಸರು ಉಪದೇಶಿಸುತ್ತಾರೆ.

ಸ್ವಾರ್ಥ-ನಿಃಸ್ವಾರ್ಥಕರ್ಮಗಳ ವ್ಯತ್ಯಾಸವನ್ನು ದೃಷ್ಟಾಂತದ ಮೂಲಕ ಮುಂದೆ ಭಾಗವತವೇ ತಿಳಿಸುತ್ತದೆ.

ನಾವು ಮಾಡುವ ಒಂದೇ ಕರ್ಮವು ನಿಸ್ವಾರ್ಥ ಭಾವನೆಯಿಂದ -'ಹರಿಪ್ರೀತ ನಾಗಲಿ' ಎಂದು ಆಚರಿಸಲ್ಪಟ್ಟಿದ್ದರೆ ಅದು ಶುಭಫಲವನ್ನು ಕೊಡುತ್ತದೆ. ದೇವರನ್ನು ಮರೆತು ಸ್ವಾರ್ಥಭಾವನೆಯಿಂದ ಆಚರಿಸಲ್ಪಟ್ಟಾಗ ಆ ಕರ್ಮವೇ ಸಂಸಾರಬಂಧನಕ್ಕೆ ಕಾರಣವಾಗುತ್ತದೆ. ಕರ್ಮದ ಗಂಟಿನಿಂದ ತಪ್ಪಿಸಿಕೊಳ್ಳುವ ಬಗೆ ಹೇಗೆಂದು ದೃಷ್ಟಾಂತಕೊಟ್ಟು ತಿಳಿಸುತ್ತಾರೆ

**ಆಮಯೋಽಯಂ ಚ ಭೂತಾನಾಂ ಜಾಯತೇ ಯೇನ ಸುವ್ರತ ।**
**ತದೇವ ಹ್ಯಾಮಯದ್ರವ್ಯಂ ತತ್ಪುನಾತಿ ಚಿಕಿತ್ಸಿತಮ್ ॥ ೧-೫-೩೩ ॥**

ನಾವು ತುಪ್ಪ ಮುಂತಾದ ಆಹಾರಪದಾರ್ಥಗಳನ್ನು ಅತಿಯಾಗಿ ಸ್ವೀಕಾರ ಮಾಡಿದರೆ ರೋಗಕ್ಕೆ ತುತ್ತಾಗುತ್ತೇವೆ. ನಮ್ಮ ಜೀವನಕ್ಕೆ ಕಾರಣವಾದ ಆಹಾರ ಪದಾರ್ಥಗಳೇ ರೋಗ-ರುಜಿನಗಳಿಗೂ ಕಾರಣವಾಗುತ್ತವೆ ಖಾಯಿಲೆ ವಾಸಿಗೆ ಬೇಕಾದ ಹೊಸಪದಾರ್ಥಗಳು ಯಾವುದೂ ಇಲ್ಲ. ರೋಗಕ್ಕೆ ಕಾರಣವಾದ ಪದಾರ್ಥಗಳನ್ನೇ ವೈದ್ಯನೂ ಸ್ವೀಕರಿಸುತ್ತಾನೆ. ಅವುಗಳನ್ನು ಕ್ರಮವಾಗಿ ಕುಟ್ಟಿ, ಕುದಿಸಿ ಸಂಸ್ಕಾರವನ್ನು ಮಾಡಿ ಔಷಧಿಯನ್ನಾಗಿ ಮಾರ್ಪಡಿಸುತ್ತಾನೆ. ಅದನ್ನು ಸೇವಿಸಿದಾಗ ರೋಗ ಪರಿಹಾರವಾಗುತ್ತದೆ. ನಾವು ಪ್ರತಿನಿತ್ಯ ಸೇವಿಸುವ ರೋಗಕ್ಕೆ ಕಾರಣವಾದ ಆಹಾರವನ್ನೇ ವೈದ್ಯರು ಔಷಧಿಯಾಗಿ ಮಾಡಿಕೊಟ್ಟಾಗ ರೋಗ ಪರಿಹಾರವಾಗುತ್ತದೆ. ಇಲ್ಲಿ ಆಹಾರವನ್ನು ಸಂಸ್ಕರಿಸುವಲ್ಲಿ ವೈವಿಧ್ಯತೆಯೆ ವಿನಾ ಪದಾರ್ಥಗಳಲ್ಲಿ ಯಾವುದೇ ವ್ಯತ್ಯಾಸವಿಲ್ಲ. ಸಂಸ್ಕಾರ ಮಾಡಿದ್ದರಿಂದ ಗುಣಮುಖರಾಗುತ್ತೇವೆ.

ವಿಷ ಕುಡಿದರೆ ಮರಣಪ್ರಾಪ್ತಿ. ಅದೇ ವಿಷವನ್ನು ವೈದ್ಯರು ಔಷಧಿಯನ್ನಾಗಿ ಪರಿವರ್ತಿಸಿಕೊಂಡಲ್ಲಿ, ಮರಣಕ್ಕೆ ಕಾರಣವಾದ ಈ ವಿಷ ಜೀವನಕ್ಕೆ ಕಾರಣ ವಾಗುತ್ತದೆ. ಯಾವುದೇ ಉತ್ತಮ ಪದಾರ್ಥಗಳನ್ನು ನಾವು ಒಳ್ಳೆಯ ರೀತಿಯಲ್ಲಿ ಬಳಸಿಕೊಂಡೆವೆಂದಾದರೆ ಒಳ್ಳೆಯ ಆರೋಗ್ಯವನ್ನು ಹೊಂದುತ್ತೇವೆ. ಅದನ್ನೇ ಅನಷ್ಟೆಮಾಡಿ ಕೆಟ್ಟರೀತಿಯಲ್ಲಿ ಉಪಯೋಗಿಸಿಕೊಂಡಾಗ ಕೆಟ್ಟ ಪರಿಣಾಮವು ಉಂಟಾಗುತ್ತದೆ. ಅದರಂತೆ ನಾವು ಮಾಡುವ ಪ್ರತಿಯೊಂದು ಕ್ರಿಯೆಗಳಲ್ಲಿಯೂ ಭಾವನೆ ಎನ್ನುವುದು ಮುಖ್ಯವಾಗಿರುತ್ತದೆ. ಸ್ವಾರ್ಥಿಗಳಾಗಿ ಅತಿಯಾದ ಆಸೆಯಿಂದ, ಅತಿಯಾದ ಸುಖಗಳನ್ನು ನಿರೀಕ್ಷಿಸಿ ಕರ್ಮಗಳನ್ನು ಆಚರಿಸಿದಲ್ಲಿ, ಅವುಗಳೇ ನಮ್ಮ ಸಂಸಾರದ ಬಂಧನಕ್ಕೆ ಕಾರಣವಾಗುತ್ತವೆ ಅದೇ ಕ್ರಿಯೆಗಳನ್ನು ಜನರಿಗೆ

ಉಪಕಾರವಾಗಲಿ, ಅದರಿಂದ ಹರಿಯು ಪ್ರಸನ್ನನಾಗಲಿ ಎಂದು ನಿಸ್ವಾರ್ಥದಿಂದ ಮಾಡಿದಾಗ ನಾವು ಮಾಡುವ ಕೆಲಸಗಳಾಗಲಿ, ವ್ಯಾಪಾರಿಗಳ ವ್ಯಾಪಾರವಾಗಲಿ, ರೈತರ ಕೃಷಿಯಾಗಲಿ ಎಲ್ಲವೂ ಉತ್ತಮ ಫಲವನ್ನೇ ನೀಡುತ್ತವೆ.

ಇಲ್ಲಿ ನಾವು ಗಮನಿಸಬೇಕಾದದ್ದು, ಮೋಕ್ಷಕ್ಕೆ ಹೋಗಬಯಸುವವರೆಲ್ಲರೂ ಕಾಡಿಗೆ ಹೋಗಬೇಕೆಂದು ವ್ಯಾಸರಾಗಲಿ, ನಾರದರಾಗಲಿ ತಿಳಿಸುತ್ತಿಲ್ಲ. ಸ್ವಾರ್ಥವನ್ನು ತ್ಯಾಗಮಾಡಿ ಎನ್ನುತ್ತಿದ್ದಾರೆ.

## ವಿರೋಧ ಪರಿಹಾರ

ನಾರದರು ನಿವೃತ್ತಧರ್ಮವನ್ನು ಬೋಧಿಸುವ ಸಂದರ್ಭದಲ್ಲಿ ವ್ಯಾಸರ ಬಳಿ ಒಂದು ಮಾತನ್ನು ಹೇಳುತ್ತಾರೆ.

ತ್ಯಕ್ತ್ವಾ ಸ್ವಧರ್ಮಂ ಚರಣಾಂಬುಜಂ ಹರೇ-
ರ್ಭಜನ್ನಪಕ್ವೋಽಥ ಪತೇತ್ತತೋ ಯದಿ
ಯತ್ರ ಕ್ವ ವಾ ಭದ್ರಮಭೂದಮುಷ್ಯ ॥ ೧-೫-೧೭ ॥

"ಸ್ವಧರ್ಮವನ್ನು ಬಿಟ್ಟು ಹರಿಯ ಪಾದವನ್ನು ಅವಲಂಬಿಸಿದವ, ಭಕ್ತಿಯನ್ನು ಮಾಡಲಾಗದೆ ಜಾರಿದರೂ ಸಂಭವಿಸುವ ನಷ್ಟಗಳೇನು ಇಲ್ಲ" ಎಂದು. ಇಲ್ಲಿ ನಾರದರು ಸ್ವಧರ್ಮವನ್ನು ಬಿಟ್ಟು ನಡೆದವನಿಗೆ ಹಾನಿಯಿಲ್ಲ ಎನ್ನುತ್ತಿದ್ದಾರೆ. ಆದರೆ ಗೀತೆಯಲ್ಲಿ ಶ್ರೀಕೃಷ್ಣನು 'ಸ್ವಧರ್ಮ ಬಿಟ್ಟವರಿಗೆ ಒಳಿತಿಲ್ಲ'–

'ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ' –ಎಂದು ಎಚ್ಚರಿಸಿದ್ದಾನೆ. ಕೃಷ್ಣನು 'ಸ್ವಧರ್ಮ ಬಿಡಬೇಡಿರಿ!' ಎಂದರೆ ನಾರದರು ಸ್ವಧರ್ಮವನ್ನು ಬಿಡಿ! ಎನ್ನುತ್ತಿದ್ದಾರಲ್ಲ? ಎಂಬ ಸಂಶಯವು ಸಾಧಕರಿಗೆ ಸಹಜವಾಗಿ ಬರುತ್ತದೆ. ಇದಕ್ಕೆ ಉತ್ತರ–

ಇಲ್ಲಿ ನಾರದರು 'ತ್ಯಕ್ತ್ವಾ ಸ್ವಧರ್ಮಂ' ಎಂದು –'ಸ್ವಧರ್ಮವನ್ನು ಬಿಡಿ' ಎಂದದ್ದು 'ಸಹಜ ಪ್ರವೃತ್ತಿಯನ್ನು ಬಿಡಿ' ಎಂಬ ಅರ್ಥದಲ್ಲಿ. ಸಹಜ ಪ್ರವೃತ್ತಿಯನ್ನು ಇಲ್ಲಿ ಸ್ವಧರ್ಮ ಎಂಬ ಶಬ್ದದಿಂದ ತಿಳಿಸಿದ್ದಾರೆ. ಸುಡುವಿಕೆಯು ಬೆಂಕಿಯ ಸಹಜವಾದ ಧರ್ಮ. ಮಾಧುರ್ಯ ನೀರಿನ ಸಹಜವಾದ ಧರ್ಮ. ಅದರಂತೆ ಸ್ವಚ್ಛಂದ ಸುಖಕ್ಕಾಗಿ ಸ್ವಾರ್ಥದ ಪ್ರವೃತ್ತಿ ಏನಿದೆ, ಇದು ನಮ್ಮ ಸಹಜ ಧರ್ಮವಾಗಿಬಿಟ್ಟಿದೆ. ಈ ಸ್ವಾರ್ಥದ ಸಹಜ ಪ್ರವೃತ್ತಿಯನ್ನು ಬಿಡಬೇಕೆಂದು ನಾರದರು ತಿಳಿಸಿದ್ದಾರೆ.

ಶ್ರೀಕೃಷ್ಣನು 'ನಾವು ಆಚರಿಸಬೇಕಾದ ಕರ್ತವ್ಯವನ್ನು 'ಸ್ವಧರ್ಮ' ಎಂಬ ಶಬ್ದದಿಂದ ತಿಳಿಸಿದ್ದಾನೆ. ಆದ್ದರಿಂದ ನಾವು ನಾರದರು ತಿಳಿಸಿದ ಸಹಜ ಪ್ರವೃತ್ತಿ ಎಂಬ ಸ್ವಧರ್ಮವನ್ನು ಬಿಡಬೇಕು. ಶ್ರೀಕೃಷ್ಣ ತಿಳಿಸಿದ ವಿಹಿತಕರ್ತವ್ಯವೆಂಬ ಸ್ವಧರ್ಮವನ್ನು ಹಿಡಿಯಬೇಕು. ಇವುಗಳಿಂದ ಎಲ್ಲರೂ ಶ್ರೇಯೋಭಾಗಿಗಳಾಗುತ್ತಾರೆ.

## ನಾರದರ ಪೂರ್ವವೃತ್ತಾಂತ

ಭಗವತ್ತತ್ವವನ್ನು ಅರಿತವರಿಗೆ ದೊರೆಯುವ ಫಲವೇನು? ಎಂಬ ಪ್ರಶ್ನೆಗೆ ಉತ್ತರರೂಪವಾಗಿ ನಾರದರು ಸ್ವಾತ್ಮಚರಿತ್ರೆಯನ್ನೇ ವ್ಯಾಸರ ಬಳಿ ಹೇಳಿಕೊಳ್ಳುತ್ತಾರೆ.

ನಾರದರು ಹೇಳುತ್ತಾರೆ: 'ನಾನು ಪೂರ್ವಜನ್ಮದಲ್ಲಿ ಒಬ್ಬ ಶೂದ್ರದಾಸಿಯ ಸುಪುತ್ರ. ಒಮ್ಮೆ ಚಾತುರ್ಮಾಸ್ಯದ ಕಾಲ. ಅನೇಕ ಮಂದಿ ಸಂನ್ಯಾಸಿಗಳು ಆ ಊರಿನಲ್ಲಿ ಚಾತು ರ್ಮಾಸ್ಯವ್ರತಸಂಕಲ್ಪವನ್ನು ಕೈಗೊಳ್ಳಲು ಆಗಮಿಸಿದರು. ವ್ರತ ಆರಂಭವಾಯಿತು. ಪ್ರತಿನಿತ್ಯ, ಪಾಠಪ್ರವಚನಗಳು ಅವಿರತವಾಗಿ ನಡೆಯಲಾ ರಂಭಿಸಿತು.

ನನ್ನ ತಾಯಿಯಾದ ದಾಸಿಯು ಅಲ್ಲಿಯೇ ಅತಿಥಿ ಅಭ್ಯಾಗತರ ಸೇವೆಯಲ್ಲಿ ನಿರತಳಾಗಿದ್ದಳು. ಅವರು ಊಟ ಮಾಡಿದ ಬಳಿಕ ಎಂಜಲನ್ನು ಬಳಿಯುವುದು, ಕಸ ಗುಡಿಸುವುದು ಮುಂತಾದ ಕಾರ್ಯಗಳನ್ನು ನಿರ್ವಹಿಸುತ್ತಿದ್ದಳು. ನಾನಾದರೋ ಐದು ವರುಷದ ಬಾಲಕ. ಯತಿಗಳು ಪಾಠ-ಪ್ರವಚನ ನಡೆಸುವಾಗ ಅದೇ ಪರಿಸರದಲ್ಲಿ ದೂರದಲ್ಲಿ ಕುಳಿತು ಕೇಳಿ ಸಂತೋಷಪಡುತ್ತಿದ್ದೆ. ಇದರಿಂದ ಸಹಜವಾಗಿ ನನಗೆ ಹರಿಕಥೆ, ಪುರಾಣಶ್ರವಣಗಳಲ್ಲಿ ಆಸಕ್ತಿ ಬೆಳೆಯಿತು. ಕ್ರಮೇಣ ಭಕ್ತಿಭಾವ ಜಾಗ್ರತವಾಯಿತು. ಇಷ್ಟರಲ್ಲಿ ಚಾತುರ್ಮಾಸ್ಯವ್ರತ ಮುಗಿಯಿತು. ಯತಿಗಳ ಗತಿಯೂ ಸಾಗಿತು. ಹೊರಡುವಾಗ ಈ ಪುಟ್ಟ ಬಾಲಕನನ್ನು ಕಂಡರು. ಬಳಿಗೆ ಕರೆದರು. ಅವನ ಅಧ್ಯಾತ್ಮದ ಆಸಕ್ತಿಯನ್ನು ಗಮನಿಸಿದರು. ಅವನ ಪ್ರಾಮಾಣಿಕವಾದ ಅಧ್ಯಾತ್ಮ ಪ್ರವೃತ್ತಿಯನ್ನು ಕಂಡು ಅಧ್ಯಾತ್ಮಮಾರ್ಗದ ಮುನ್ನಡೆಯ ಬಗ್ಗೆ ರಹಸ್ಯ ತತ್ತ್ವಗಳನ್ನು ತಿಳಿಸಿಕೊಟ್ಟರು.''

ಇಲ್ಲಿ ನಾವು ಗಮನಿಸಬೇಕು- ಭಗವದ್ವಿಷಯಕವಾದ ಸೇವೆ, ಭಕ್ತಿ ಇವುಗಳು ಕೇವಲ ಒಂದು ವರ್ಗದವರಿಗೆ ಸೀಮಿತವಾಗಿದೆ ಎಂದು ಶಾಸ್ತ್ರಗಳು ಹೇಳುತ್ತಿಲ್ಲ. ಭಕ್ತಿಮಾರ್ಗಕ್ಕೆ ಸಜ್ಜನರೆಲ್ಲರೂ ಅಧಿಕಾರಿಗಳೇ ಆಗಿದ್ದಾರೆ. ಈ ದೃಷ್ಟಿಯಿಂದಲೇ ಸಂನ್ಯಾಸಿಗಳು ದಾಸೀಪುತ್ರನಿಗೆ ಉಪದೇಶ ನೀಡಿ ನಮಗೂ ಮಾರ್ಗದರ್ಶನ ಮಾಡಿದ್ದಾರೆ. ಮುಂದೆ ಭಾಗವತದಲ್ಲಿಯೇ ಇದನ್ನು ಹೇಳುತ್ತಾರೆ-

**ಕಿರಾತ ಹೂಣಾಂಧ್ರ ಪುಲಿಂದ ಪುಲ್ಕಸಾ**<br>**ಆಭೀರಕಂಕಾ ಯವನಾಶ್ಶಕಾದಯಃ ।**<br>**ಯೇಽನ್ಯೇ ಚ ಪಾಪಾ ಯದಪಾಶ್ರಯಾಶ್ರಯಾ-**<br>**ಚ್ಛುಧ್ಯಂತಿ ತಸ್ಮೈ ಪ್ರಭವಿಷ್ಣವೇ ನಮಃ ॥** — (೨-೪-೧೮)

"ಕಿರಾತ, ಹೂಣ, ಪುಲಿಂದ, ಪುಲ್ಕಸ, ಕಂಕ ಮುಂತಾದ ಎಲ್ಲಾ ವರ್ಗದವರು, ಬ್ರಹ್ಮಹತ್ಯಾದಿ ದುಷ್ಕರ್ಮವನ್ನು ಮಾಡಿದವರೂ ಭಗವಂತನ ಭಕ್ತರ ಸಂಪರ್ಕದಿಂದ ಉದ್ಧಾರವಾಗುತ್ತಾರೆ. ಪವಿತ್ರಾತ್ಮರಾಗುತ್ತಾರೆ'' ಎನ್ನುತ್ತದೆ ಭಾಗವತ.

"ಹೀಗೆ ಐದು ವರ್ಷದ ಬಾಲಕನಾದ ನಾನು ಋಷಿಮುನಿಗಳು ತಿಳಿಸಿಕೊಟ್ಟ ಮಾರ್ಗದಲ್ಲಿ ಮುನ್ನಡೆಯುತ್ತಿರುವಾಗ, ಒಂದು ದಿನ ರಾತ್ರಿಯಲ್ಲಿ ನನ್ನ ತಾಯಿ ಹಾಲು ಹಿಂಡಲು ಹೋಗುತ್ತಿರಲು, ಹರಿಯಿಂದ ಪ್ರೇರಿತವಾದ ಸರ್ಪ ಒಂದು ನನ್ನ ತಾಯಿಗೆ ಕಚ್ಚಿತು. ತಾಯಿ ಇಹಲೋಕದ ವ್ಯಾಪಾರ ಮುಗಿಸಿದಳು. ದೈವಾಧೀನ ಳಾದಳು. ತಾಯಿಯನ್ನು ಕಳೆದುಕೊಂಡ ಬಾಲಕ ಕಣ್ಣೀರು ಸುರಿಸುತ್ತಾ ಕುಳಿತು ಕೊಳ್ಳಲಿಲ್ಲ. ಯತಿಗಳು ತೋರಿದ ಸನ್ಮಾರ್ಗದಲ್ಲಿ ಮುನ್ನಡೆಯಲು ಇದೊಂದು ಒಳ್ಳೆಯ ಅವಕಾಶವೆಂದೇ ಭಾವಿಸಿದ. ಆಧ್ಯಾತ್ಮಿಕ ಯಾತ್ರೆಯನ್ನು ಕೈಗೊಂಡ. ಏಕಾಕಿಯಾದ ಪುಟ್ಟ ಬಾಲಕ ದಿಟ್ಟತನದಿಂದ ಮಠ–ಮನೆಗಳನ್ನೂ ಬಿಟ್ಟು ಕಾಡಿಗೇ ಕಾಲಿಟ್ಟ. ಮುನಿಗಳು ಉಪದೇಶಿಸಿದ ಮಂತ್ರಗಳನ್ನೇ ಮನನ ಮಾಡುತ್ತಾ ಧ್ಯಾನಕ್ಕೆ ಕುಳಿತ. ಮನದಲ್ಲಿ ನೆಟ್ಟ ಮಂತ್ರಬೀಜವು ಸಂಸ್ಕಾರದಿಂದ ಭಕ್ತಿಲತೆಯಾಗಿ ಚಿಗುರಿತು. ಅಷ್ಟಭಾವಪುಷ್ಪಗಳಿಂದ ಕಂಗೊಳಿಸಿತು. ಹರಿಯ ದರ್ಶನವೆಂಬ ಫಲವೂ ಹೃದಯದಲ್ಲಿ ಮೂಡಿತು. ಪುಟ್ಟ ಬಾಲಕ ಅಧ್ಯಾತ್ಮಲೋಕದ ಕದವನ್ನೇ ತಟ್ಟಿದ್ದ. ಹರಿಯ ರೂಪವನ್ನು ಕಂಡು ಪರಮಾನಂದಭರಿತನಾದ ಭಕ್ತಿಯ ಜಲದಿಂದ ಒದ್ದೆಯಾಗಿದ್ದ. ಹರಿಯ ರೂಪ ಒಂದನ್ನು ಬಿಟ್ಟು ಮತ್ತ್ಯಾವುದನ್ನೂ ಕಾಣಲಿಲ್ಲ.

**ಪ್ರೇಮಾತಿಭರನಿರ್ಭಿಣ್ಣಪುಲಕಾಂಗೋऽತಿನಿರ್ವೃತಃ ।**
**ಆನಂದ ಸಂಪ್ಲವೇ ಲೀನೋ ನಾಪಶ್ಯದುಭಯಂ ಮುನೇ ॥ ೧–೬–೨೧ ॥**

ಕೆಲವರು– 'ನಾಪಶ್ಯದುಭಯಂ ಮುನೇ' ಎನ್ನುವುದಕ್ಕೆ ಜಗತ್ತಾಗಲಿ, ಬ್ರಹ್ಮ ನಾಗಲಿ ಯಾವುದೂ ಧ್ಯಾನದಲ್ಲಿ ಕಾಣಿಸಲಿಲ್ಲ ಎಂದು ವ್ಯಾಖ್ಯಾನ ಮಾಡುತ್ತಾರೆ. ಯಾವುದೂ ಕಾಣಿಸಲಿಲ್ಲ ಎಂದು ಅರ್ಥೈಸುವುದು ಸರಿಯಲ್ಲವೆಂದು ಶ್ರೀಮದಾ ಚಾರ್ಯರು ಉಭಯಂ ಎಂದರೆ 'ದ್ವಿತೀಯಂ' ಎಂದರ್ಥ ಎಂದು ತಿಳಿಸಿಕೊಟ್ಟಿದ್ದಾರೆ. ಭಗವಂತನಿಂದ ಭಿನ್ನವಾದ ಜಗತ್ತನ್ನು ಧ್ಯಾನದಲ್ಲಿ ಮರೆತಿದ್ದ –ಭಗವಂತನನ್ನೇ ಕಾಣುತ್ತಿದ್ದ ಎಂದರ್ಥ. ನಾವು ಧ್ಯಾನಕ್ಕೆ ಕುಳಿತರೆ ನಮಗೆ ಎರಡೂ ಕಾಣಿಸುತ್ತದೆ. ಒಂದು ಕಡೆ ದೇವರು; ಮತ್ತೊಂದು ಕಡೆ ಮನೆ. ಕೆಲವರಿಗೆ ದೇವರು ಕಾಣಿಸುವುದೇ ಇಲ್ಲ. ದೇವರು ಬಿಟ್ಟ ಮತ್ತೆಲ್ಲವೂ ಕಾಣಿಸುತ್ತದೆ. ನಮ್ಮ ಸ್ಥಿತಿಯು ಹೀಗಿದ್ದರೆ, ಪುಟ್ಟ ಬಾಲಕ ಹೇಳುತ್ತಾನೆ –ಹರಿಯ ರೂಪ ಹೊರತಾಗಿ ಮತ್ತೇನೂ ಕಾಣಿಸಲಿಲ್ಲ. ಹಾಗೆಯೇ ಧ್ಯಾನನಿರತನಾಗಿದ್ದೆ. ಆದರೆ ಧ್ಯಾನದ ರೂಪ ಒಮ್ಮಿಂದೊಮ್ಮೆಲೆ ಮಾಯವಾಯಿತು. ಮಾಯವಾದ ರೂಪವನ್ನು ಮತ್ತೆ ಕಾಣುವ ಕಾತುರತೆಯಿಂದ ಚಡಪಡಿಸಿದೆ. ಏನು ಮಾಡಿದರೂ ದೊರೆಯದಿದ್ದಾಗ ಕಳವಳಗೊಂಡ ಬಾಲಕನಿಗೆ ಅಶರೀರವಾಣಿ ಕೇಳಿಬಂತು. "ಮಗು! ಈ ಜನ್ಮದಲ್ಲಿ ನಿನಗಿಷ್ಟೇ ಕಾಣಲು ಸಾಧ್ಯ. ಮುಂದಿನ ಜನ್ಮದಲ್ಲಿ ನನ್ನ ಭಕ್ತನಾಗುವಿ. ಅಲ್ಲಿ ನನ್ನನ್ನು ಕಾಣುವಿ ಎಂದು.

"ಹಿಂದಿನ ಜನ್ಮದಲ್ಲಿ ಸಂನ್ಯಾಸಿಗಳಿಂದ ಆಧ್ಯಾತ್ಮಿಕ ದೀಕ್ಷೆಯನ್ನು ಪಡೆದು ಏಕಾಗ್ರತೆಯಿಂದ ಹರಿಯನ್ನು ಅಂತರಾಳದಲ್ಲಿ ಕಂಡ ಶೂದ್ರ ಬಾಲಕನೇ ಬ್ರಹ್ಮ ದೇವರ ತನುವಿನಿಂದ ಜನ್ಮತಾಳಿ ನಾರದನಾಗಿ ಅವತರಿಸಿದ್ದಾನೆ. ತ್ರಿಲೋಕ

ಸಂಚಾರಿಯಾಗಿ ಸಮಗ್ರ ಜಗತ್ತಿಗೇ ಭಗವಂತನ ಮಹಿಮೆ, ಕರುಣೆಗಳನ್ನು ಸಾರುತ್ತಾ, ಭಕ್ತಿಯ ಸಂದೇಶಗಳನ್ನು ಉಪದೇಶಿಸುತ್ತಾ ಯೋಗಿಯಾಗಿ, ದೇವರ್ಷಿ ಯಾಗಿ ಮೆರೆಯುತ್ತಿದ್ದಾನೆ'' ಎಂದು ತಮ್ಮ ವ್ಯಕ್ತಿತ್ವದ ಬೆಳವಣಿಗೆಯ ಹಿನ್ನೆಲೆಯನ್ನು ತಿಳಿಸಿ, ವ್ಯಾಸರೇ! ನೀವು ದಯಮಾಡಿ ಜನರು ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲು ಸಹಾಯಕವಾದ, ಭಕ್ತಿಪ್ರಚುರವಾದ ಗ್ರಂಥ ಒಂದನ್ನು ದಯಪಾಲಿಸಿರಿ!! ಎಂದು ಪ್ರಾರ್ಥಿಸಿ ಹರಿನಾಮಗಳನ್ನು ಹಾಡುತ್ತಾ ಪ್ರಯಾಣ ಬೆಳೆಸಿದರು

## ಮನ ಸೆಳೆಯುವ ಶ್ರೀಹರಿ

ಅನಂತರ 'ಸಮಗ್ರ ಜಗತ್ತಿಗೇ ಭಗವಂತನ ಮಹಿಮೆ ಕರುಣೆಗಳನ್ನು?ಹಾಡುವ ಶ್ರೀಮದ್ಭಾಗವತಗ್ರಂಥವನ್ನು ವ್ಯಾಸರು ವಿರಚಿಸಿದರು. ವಿರಕ್ತನಾದ ನಿವೃತ್ತ ಧರ್ಮನಿರತನಾದ ಶುಕಮುನಿಗಳಿಗೆ ಉಪದೇಶಿಸಿದರು. ಪ್ರವಚನ ನಡೆಸುವಂತೆ ಅನುಗ್ರಹಿಸಿದರು. ಅದರಂತೆ ಶುಕಾಚಾರ್ಯರು ನಡೆದರು.

ಇಲ್ಲಿ ಶೌನಕರು ಪ್ರಶ್ನಿಸುತ್ತಾರೆ: ಶುಕಮುನಿಗಳೆಂದರೆ ಸಾಕ್ಷಾತ್ ಮಹರುದ್ರದೇವರು. ಪರಮವಿರಕ್ತರು. ಯಾವುದ ರಲ್ಲಿಯೂ ಆಸಕ್ತಿ ಆಸೆಗಳನ್ನು ಅಳವಡಿಸಿಕೊಂಡವರಲ್ಲ; ಹೀಗಿರಲು ಭಾಗವತ ಶ್ರವಣ-ಪ್ರವಚನಗಳಲ್ಲಿಯಾದರೂ ಆಸಕ್ತಿ ಹೇಗೆ ಹುಟ್ಟಿತು?

ಸೂತರ ಉತ್ತರ: ಶುಕಮುನಿಗಳ ಪ್ರವಚನ-ಶ್ರವಣಗಳು ಭೌತಿಕ ಆಕರ್ಷಣೆಗಾಗಿ ಯಲ್ಲ. ದಕ್ಷಿಣೆ ಸಂಭಾವನೆಗಳ ಉದ್ದೇಶವಿರಲಿಲ್ಲ. ಪರಮವಿರಕ್ತರಾದ ಇವರು ಕೇವಲ ಭಗವಂತನ ಗುಣಗಳಿಗೆ ಆಕರ್ಷಿತರಾಗಿ ಇವುಗಳಲ್ಲಿ ಆಸಕ್ತರಾದರು. ಭಗವಂತನ ಗುಣಗಳಲ್ಲಿ ವಿರಕ್ತರನ್ನೂ ಸೆಳೆಯುವ ಶಕ್ತಿಯಿದೆ. 'ಕುರ್ವಂತ್ಯಹೈತುಕೀಂ ಭಕ್ತಿಂ ಇತ್ಥಂ ಭೂತಗುಣೋ ಹರಿಃ'. ಪ್ರಹ್ಲಾದನೂ ಸಹ ಭಗವದ್ಗುಣಗಳಿಂದ ಆಕರ್ಷಿತನಾಗಿದ್ದ.

ನಾವು ತಿಳಿಸದ ಹರಿತತ್ವವನ್ನು ನೀನು ತಿಳಿದ ಬಗೆ ಹೇಗೆ? ಎಂದು ಶಂಡಾ ಮರ್ಕರು ಪ್ರಶ್ನಿಸಲು ಪ್ರಹ್ಲಾದ ಹೇಳುತ್ತಾನೆ- "ಭಗವಂತನು ಸೂಜಿಗಲ್ಲಿನಂತೆ. ಸೂಜಿಗಲ್ಲು ಹತ್ತಿರವಾದ ಕಬ್ಬಿಣವನ್ನು ಬಳಿಗೆ ಸೆಳೆಯುವಂತೆ ಶ್ರೀಹರಿಯು ಅವನ ಹತ್ತಿರ ಹೋದ ಭಕ್ತರನ್ನು ತನ್ನ ಗುಣಗಳಿಂದ ಸಹಜವಾಗಿ ಆಕರ್ಷಿಸುತ್ತಾನೆ'' ಎಂದರು.

## ಆತ್ಮಬಲ ಯಾವುದು?

ಭಾಗವತದ ಆರಂಭದಲ್ಲಿಯೇ ಅಶ್ವತ್ಥಾಮನ ಕತೆಯು ಉಲ್ಲೇಖವಿದೆ.

ಅಶ್ವತ್ಥಾಮನು ಪಾಂಡವರ ಮೇಲಿನ ದ್ವೇಷದಿಂದ ಪಾಂಡವರ ಶಿಬಿರವನ್ನು ವಿಧ್ವಸ್ತಗೊಳಿಸಲು ರಾತ್ರಿಯಲ್ಲಿ ಖಡ್ಗವನ್ನು ಹಿಡಿದು ನಡೆದ. ಶಿಬಿರಕ್ಕೆ ನುಗ್ಗಿದ. ಮಲಗಿದ ಹಸುಗೂಸುಗಳ ಮೇಲೆ ಖಡ್ಗ ಬೀಸಿದ. ರಕ್ತದೋಕುಳಿಯನ್ನೇ ಹರಿಸಿದ.

ಅಶ್ವತ್ಥಾಮನ ನೀಚ ಕೃತ್ಯವನ್ನರಿತ ಕೃಷ್ಣಾರ್ಜುನರು ಅಶ್ವತ್ಥಾಮನ ಬೆನ್ನಟ್ಟಿದರು. ಕೃಷ್ಣಾರ್ಜುನರನ್ನೆದುರಿಸುವ ಅದಟು ಅಶ್ವತ್ಥಾಮನಿಗಿಲ್ಲವಾಯಿತು. ಅಂಜಿದ ಅಶ್ವತ್ಥಾಮ ಅವಿವೇಕಿಯಾದ. ಭಯಂಕರ ಬ್ರಹ್ಮಾಸ್ತ್ರವನ್ನೇ ಅರ್ಜುನನ ಮೇಲೆ ಎಸೆದ.

ಅರ್ಜುನನೂ ದಾರಿಕಾಣದೆ ಕೃಷ್ಣನ ಮಾತಿನಂತೆ ಬ್ರಹ್ಮಾಸ್ತ್ರವನ್ನು ಪ್ರತಿಯಾಗಿ ಪ್ರಯೋಗಿಸಿದ. ಎರಡು ಬ್ರಹ್ಮಾಸ್ತ್ರಗಳ ಪರಸ್ಪರ ತಿಕ್ಕಾಟದಿಂದ ಜಗತ್ತೇ ಝುರ್ಝುರಿತವಾಯಿತು.

ಎಲ್ಲರ ಸಂತಾಪವನ್ನು ಕಂಡು ವೇದವ್ಯಾಸರು ಆಗಮಿಸಿ ಅರ್ಜುನ ಅಶ್ವತ್ಥಾಮರನ್ನು ಜರೆದರು. ಜಗತ್ತಿಗೇ ಹಾನಿಮಾಡುವ ಅಸ್ತ್ರವನ್ನೇಕೆ ಹುಚ್ಚರಂತೆ ಪ್ರಯೋಗಿಸಿದ್ದೀರಿ! ಈರ್ವರೂ ಅಸ್ತ್ರಗಳನ್ನು (with draw) ಹಿಂತಿಗೆದುಕೊಳ್ಳಿರಿ! ಎಂದು ಆದೇಶಿಸಿದರು.

ಅರ್ಜುನ ವ್ಯಾಸರ ಮಾತಿಗೆ ಬೆಲೆಕೊಟ್ಟು ತನ್ನ ಬ್ರಹ್ಮಾಸ್ತ್ರವನ್ನು ಹಿಂದೆಪಡೆದ. ಆದರೆ ನೈಷ್ಠಿಕ ಬ್ರಹ್ಮಚರ್ಯವನ್ನೂ, ನೈತಿಕ ಬಲವನ್ನೂ ಕಳೆದುಕೊಂಡಿದ್ದ ಅಶ್ವತ್ಥಾಮನಿಗೆ ಅಸ್ತ್ರೋಪಸಂಹಾರ ಅಸಾಧ್ಯವಾಯಿತು. ಅಪಹಾಸ್ಯಕ್ಕೆ ಗುರಿಯಾದ.

ನಾವೆಲ್ಲರೂ ಅಶ್ವತ್ಥಾಮನಂತೆಯೇ ಇದ್ದೇವೆ. ನಮ್ಮ ಇಂದ್ರಿಯಗಳೇ ಬ್ರಹ್ಮಾಸ್ತ್ರಗಳು. ಇಂದ್ರಿಯಗಳನ್ನು ವಿಷಯಪದಾರ್ಥಗಳ ಕಡೆ ಬಿಡುತ್ತೇವೆ. ನಮಗೂ ಬಿಡಲು ಮಾತ್ರ ಗೊತ್ತು. ಬೇಕಾದಾಗ with draw ಮಾಡಲು ಗೊತ್ತಿಲ್ಲ.

ನಾವು ಅಶ್ವತ್ಥಾಮನಂತಾಗಬಾರದು. ಕೂರ್ಮನಂತಾಗಬೇಕು. ಆಮೆಯು ಬೇಕಾದಾಗ ತನ್ನ ಅಂಗಗಳನ್ನು ಹೊರಚೆಲ್ಲುತ್ತದೆ. ಬೇಡವಾದಾಗ ಒಳಗೆಳೆದುಕೊಳ್ಳುತ್ತದೆ. ಇದರಂತೆ ನಾವು ಇಂದ್ರಿಯಗಳ ಮೇಲೆ ಸವಾರಿಯನ್ನು ಮಾಡಬೇಕು. ಇಂದ್ರಿಯಗಳೇ ನಮ್ಮ ಮೇಲೆ ಸವಾರಿ ಮಾಡುವಂತಾಗಬಾರದು.

ಅಶ್ವತ್ಥಾಮನು ಬ್ರಹ್ಮಚರ್ಯವೆಂಬ ಆತ್ಮಬಲವನ್ನು ಕಳೆದುಕೊಂಡಿದ್ದರಿಂದ ಅಸ್ತ್ರೋಪಸಂಹಾರದಲ್ಲಿ ಅಸಮರ್ಥನಾದ. ನಮಗೂ ಆತ್ಮಬಲ ಬ್ರಹ್ಮಚರ್ಯವೇ ಆಗಿದೆ. ಇದರ ರಕ್ಷಣೆಯಾಗಬೇಕು! ನಾವೆಲ್ಲರೂ ಹೃಷೀಕೇಶರಾಗಬೇಕು!

ಮುಂದೆ ಅಶ್ವತ್ಥಾಮನ ಅಸ್ತ್ರವನ್ನೂ ಅರ್ಜುನನೇ ಉಪಸಂಹರಿಸುತ್ತಾನೆ. ಇದೇನು ಆಶ್ಚರ್ಯ!! ಅರ್ಜುನ ಗೃಹಸ್ಥ. ಅಶ್ವತ್ಥಾಮ ಬ್ರಹ್ಮಚಾರಿ. ಅಶ್ವತ್ಥಾಮನಿಗೇ ಇಲ್ಲದ ಬ್ರಹ್ಮಚರ್ಯ ಅರ್ಜುನನಿಗೆಲ್ಲಿಂದ ಬಂತು? ಬ್ರಹ್ಮಚರ್ಯದ ರಹಸ್ಯವೇ ಇದು:

ಮದುವೆ ಆಗದವರೆಲ್ಲರೂ ಬ್ರಹ್ಮಚಾರಿಗಳಾಗಿರಲು ಸಾಧ್ಯವಿಲ್ಲ.

ಮದುವೆ ಆದವರೆಲ್ಲರೂ ಬ್ರಹ್ಮಚಾರಿಗಳಲ್ಲ ಎನ್ನಲೂ ಸಾಧ್ಯವಿಲ್ಲ.

'ತನ್ನ ಆಶ್ರಮೋಚಿತ ಕರ್ತವ್ಯಪಾಲನೆಯೇ ಬ್ರಹ್ಮಚರ್ಯ' ಎನಿಸಿದೆ.

ಅರ್ಜುನ ತನ್ನ ಪತ್ನಿಯನ್ನು ಬಿಟ್ಟು ಉಳಿದೆಲ್ಲರನ್ನೂ ತಾಯಿಯಂತೆ ಕಂಡವ.

ಊರ್ವಶಿಯು ಅರ್ಜುನನನ್ನು ಬಯಸಿಬಂದಾಗ ತಾಯಿ ಎಂದು ನಮಸ್ಕರಿಸಿದ ಧೀರ ಅರ್ಜುನ.

ಅಶ್ವತ್ಥಾಮನಾದರೋ ಧುರ್ಯೋಧನನಿಗೆ ಅವನ ಪತ್ನಿಯಲ್ಲಿ ಸಂತಾನ ಪಡೆಯುವುದಾಗಿ ಮಾತುಕೊಟ್ಟ. ಮನಸ್ಸಿನಿಂದ ಭಾವಿಸಿಯೇ ಬ್ರಹ್ಮಚರ್ಯ ಕಳೆದುಕೊಂಡ. ಹೀಗಿದ್ದಲ್ಲಿ ದುರ್ವರ್ತನೆಗಳಿಗೆ ಬಲಿಯಾಗುವ ನಮ್ಮ ಯುವಕರು ಗಂಭೀರವಾಗಿ ವಿಚಾರಮಾಡಬೇಕು. ಬ್ರಹ್ಮಚರ್ಯದ ಜೀವನ ನಡೆಸಬೇಕು. ಈ ಕಥೆಯ ಸಂದೇಶ ನಮ್ಮೆಲ್ಲರ ಕಣ್ತೆರೆಸಬೇಕು! ಇದಕ್ಕಾಗಿ ನಮ್ಮ ಪ್ರಯತ್ನ ಬೇಕು.

## ದ್ರೌಪದಿಯ ಮಾತೃಹೃದಯ

ನೀಚಕೃತ್ಯವನ್ನೆಸಗಿದ ಅಶ್ವತ್ಥಾಮನನ್ನು ಬಂಧಿಸಿ ಅರ್ಜುನನು ಕರೆದು ತಂದಿದ್ದಾನೆ. ಮಲಗಿದ ಹಸುಗೂಸುಗಳನ್ನು ನಿರಾಯುಧರಾದ ನಿರಾಗಸರಾದ ಸೈನಿಕರನ್ನು ಕೊಂದು ರಕ್ತದೋಕುಳಿಯನ್ನೇ ಹರಿಸಿ ದ್ರೌಪದಿಯ ಹೃದಯವನ್ನೇ ಕದಡಿದ ಅಶ್ವತ್ಥಾಮನನ್ನು ದ್ರೌಪದಿಯ ಮುಂದೆ ಹೆಡೆಮುರಿಕಟ್ಟಿ ನಿಲ್ಲಿಸಿದ್ದಾರೆ.

ಈ ಸಂದರ್ಭದಲ್ಲಿ, ಘೋರ ಅನ್ಯಾಯವನ್ನೇ ಮಾಡಿದ ಅಶ್ವತ್ಥಾಮನಿಗೆ ಮಹಾದಂಡನೆಯನ್ನೇ ನೀಡಬಹುದಿತ್ತು. ತನ್ನ ಮಕ್ಕಳ ತಲೆಗಳನ್ನು ತರಿದವನೆಂದು ಪ್ರತೀಕಾರ ಮಾಡಬಹುದಿತ್ತು. ಆದರೆ ದ್ರೌಪದಿಯು ಎಲ್ಲರಿಗೂ ಆಶ್ಚರ್ಯಕರವಾದ ಮಾತನ್ನು ಹೇಳುತ್ತಾರೆ.

**ಮಾ ರೋದೀದಸ್ಯ ಜನನೀ ಗೌತಮೀ ಪತಿದೇವತಾ ।**
**ಯಥಾಽಹಂ ಮೃತವತ್ಸಾಽಽರ್ತಾ ರೋದಿಮ್ಯಶ್ರುಮುಖೀ ಮುಹುಃ ॥ ೧-೭-೪೭ ॥**

"ಅಶ್ವತ್ಥಾಮನನ್ನು ಕೊಲ್ಲಬೇಡಿ, ಥಳಿಸಬೇಡಿ, ಬಿಟ್ಟುಬಿಡಿ. ಇವನ ವಂಶಕ್ಕೆ ಬೆಲೆ ಕೊಡೋಣ. ಇವನ ತಾಯಿಯ ಒಳಿತನ್ನು ಬಯಸೋಣ! ನನ್ನ ಬಸುರಿನಿಂದ ಉದಿಸಿಬಂದ ಮಕ್ಕಳೆಲ್ಲರೂ ಅಶ್ವತ್ಥಾಮನಿಂದ ಹತರಾಗಿದ್ದಾರೆ. ಮಕ್ಕಳ ವಿಯೋಗದ ದುಃಖ ಏನೆಂದು ಅನುಭವಿಸುತ್ತಿದ್ದೇನೆ. ನನ್ನಂತೆ ಇವನ ತಾಯಿಯೂ ಅಳುವಂತಾಗ ಬಾರದು." ನನಗೆ ಉಂಟಾದ ದಾರುಣವಾದ ಪುತ್ರಶೋಕ ಗೌತಮಿಗುಂಟಾಗ ದಿರಲಿ!!

ದ್ರೌಪದಿಯ ಧರ್ಮದಿಂದ, ನ್ಯಾಯದಿಂದ, ನಿರ್ವಂಚನೆ, ದಯೆ, ಸಮತೆಗಳಿಂದ ಕೂಡಿದ ಮಹತ್ವಪೂರ್ಣವಾದ ಮಾತುಗಳನ್ನು ಕೇಳಿ ಧರ್ಮರಾಜ ಅಭಿನಂದಿಸಿದ.

ಪುತ್ರಶೋಕಾಗ್ನಿಯಲ್ಲಿ ಬೇಯುತ್ತಿರುವಾಗಲೂ ವಿಶಾಲವಾದ ಹೃದಯವಂತಿಕೆಯನ್ನೇ ತೋರಿದ ಧೀರಮಾತೆ ದ್ರೌಪದಿ. ಇಂತಹ ಮಾತನ್ನು ಬೇರೆ ಯಾರಿಂದಲೂ ಕೇಳಲು ಸಾಧ್ಯವಿಲ್ಲ. ತನುಸಂಜಾತರ ಕೊರಳನ್ನು ಕೊಯಿದವರಲ್ಲಿ ದಯೆ ಯಾರಿಗೆ ಹುಟ್ಟೀತು? ಪ್ರತೀಕಾರಭಾವನೆಯೇ ಜಾಗ್ರತವಾಗುತ್ತದೆ. ಆದರೆ ದ್ರೌಪದಿ ಇದಕ್ಕೆ ಪೂರ್ಣ ವಿರುದ್ಧವಾಗಿ ನಿಂತವಳು

ರಾಮಾಯಣದಲ್ಲಿಯೂ ಇಂತಹದ್ದೇ ಒಂದು ಪ್ರಸಂಗವನ್ನು ಕಾಣಬಹುದು.

ರಾಮಚಂದ್ರನು ರಾವಣನ ಸಂಗಡ ಕದನದ ಕಣಕ್ಕಿಳಿದ. ಎಣೆ ಇರದ ತನ್ನ ಭುಜಬಲದಿಂದ ದಶಶಿರನ ಮುಂಡಗಳನ್ನು ಚೆಂಡಾಡಿದ. ಇದನ್ನು ಹನುಮಂತ ಕಂಡ. 'ರಾವಣನು ಸತ್ತ'ನೆಂಬ ಸಿಹಿಸುದ್ದಿಯನ್ನು ಸೀತೆಗಾಗಿ ಹೊತ್ತುತಂದ. ಸೀತಾ ಮಾತೆ ಸಂತಸಗೊಂಡಳು.

ಈ ಸಂದರ್ಭದಲ್ಲಿ ಹನುಮಂತ ಸೀತೆಯ ಬಳಿ ಒಂದು ಮಾತನ್ನು ಕೇಳಿದ–

"ಸೀತೇ! ಇಲ್ಲಿ ನೋಡು ರಾವಣನ ಭೃತ್ಯರ ಗುಂಪನ್ನು. ಇವರೆಲ್ಲರೂ ನಿನಗೆ ಚಿತ್ರಹಿಂಸೆ ನೀಡಿದವರು. ನಿನ್ನನ್ನು 'ಹರಿದು ತಿನ್ನುತ್ತೇನೆ' ಎಂದು ಹೆದರಿಸಿದವರು. ಪತಿವ್ರತೆಯಾದ ನಿನ್ನನ್ನು, "ರಾವಣನನ್ನು ವರಿಸು ಇಲ್ಲವಾದರೆ ಸಂಹರಿಸುತ್ತೇವೆ" ಎಂದು ಹೆದರಿಸಿದ ಈ ರಾಕ್ಷಸಸಮುದಾಯವೆಲ್ಲವನ್ನೂ ಇಂದು ನಾನು ಕ್ಷಣಮಾತ್ರದಲ್ಲಿ ಹುಡಿಗುಟ್ಟುತ್ತೇನೆ. ನನಗೊಂದು ಅವಕಾಶ ಕೊಡು!! ಎಂದ.

ಈ ಸಂದರ್ಭದಲ್ಲಿ ಬೇರೆಯಾರಾದರಾಗಿದ್ದರೂ, "ಹೌದಪ್ಪಾ!! ಇವರೆಲ್ಲರೂ ನನಗೆ ಬಹಳ ಉಪದ್ರವ ನೀಡಿದ್ದಾರೆ. ಎಲ್ಲರನ್ನೂ ಮುಗಿಸಿಬಿಡು. ನಾನು ಸಂತೋಷಪಡುತ್ತೇನೆ" ಎನ್ನುತ್ತಿದ್ದರು. ಆದರೆ ಸೀತೆಯ ಉತ್ತರವೇ ಬೇರೆ. ಸೀತೆ ಹೇಳುತ್ತಾಳೆ–

## ನ ಕಶ್ಚಿನ್ನಾಪರಾಧ್ಯತಿ!!

"ಹನುಮಂತ! ನಿರಪರಾಧಿಗಳಾದ ಅವರನ್ನು ಏಕೆ ಕೊಲ್ಲುತ್ತೀ? ಇವರೆಲ್ಲರೂ ರಾವಣನ ಸೇವಕರು. ರಾವಣ ವೇತನ ನೀಡುತ್ತಿದ್ದ. ಇವರು ಅವನು ಹೇಳಿದ ಕರ್ತವ್ಯವನ್ನು ನಿರ್ವಹಿಸುತ್ತಿದ್ದರು. ರಾವಣನ ಅಡಿಯಾಳಾದ ಇವರ ಅಪರಾಧವೇನಿದೆ? ಉಪಾಯತೋರದೆ ಹಿಂಸೆ ಕೊಟ್ಟಿರಬಹುದು. ಆದ್ದರಿಂದ ಇವರ ಮೇಲೆ ಯಾವುದೇ ಕ್ರಮವನ್ನು ಕೈಗೊಳ್ಳಬೇಡ.

"ಜಗತ್ತಿನಲ್ಲಿ ಯಾರು ಅಪರಾಧ ಮಾಡುವುದಿಲ್ಲ?" –'ನ ಕಶ್ಚಿನ್ನಾಪರಾಧ್ಯತಿ?' ನಾವು ಮತ್ತೊಬ್ಬರು ತಪ್ಪುಮಾಡಿದಾಗ ಪ್ರತೀಕಾರ ಮಾಡಲು ಮುಂದಾಗುತ್ತೇವೆ. ಅದೇ ನಾವೇ ಏನಾದರು ತಪ್ಪುಮಾಡಿದ್ದಲ್ಲಿ, ಬಹಳ ಔದಾರ್ಯದಿಂದ ಕ್ಷಮಿಸುತ್ತೇವೆ. ನಮ್ಮ ತಪ್ಪನ್ನು ಕ್ಷಮಿಸುವ ನಾವು ಅದರಂತೆ ಮತ್ತೊಬ್ಬರ ತಪ್ಪನ್ನೂ ಕ್ಷಮಿಸಬಾರದೇಕೆ? ನೀನು ರಾಕ್ಷಸರನ್ನು ಹಿಂಸಿಸಬೇಡ!! ಎಂದಳು.

ಸೀತೆಯ ನಲ್ನುಡಿಯನ್ನು ಆಲಿಸಿದ ಹನುಮಂತ ಹೇಳುತ್ತಾನೆ –"ಅಮ್ಮಾ ಸೀತೆ, ಎಂತಹ ಮಾತನ್ನು ಹೇಳಿದೆ. ಇಂತಹ ಉದಾತ್ತ ನುಡಿಗಳನ್ನು ರಾಮನ ಪತ್ನಿಯಾದ ನಿನ್ನನ್ನು ಹೊರತು ಮತ್ಯಾರೂ ಹೇಳರು" ಎನ್ನುತ್ತಾನೆ.

ಶ್ರೀರಾಮಚಂದ್ರನ ಔದಾರ್ಯವನ್ನೂ ಇಲ್ಲಿ ಸ್ಮರಿಸಿಕೊಳ್ಳಬಹುದು.

ವಿಭೀಷಣನು ರಾಮನಿಗೆ ಹೇಳಿದ "ರಾವಣ! ಸೀತೆಯನ್ನು ರಾಮನಿಗೆ ಕೊಟ್ಟು ಬಿಡು, ನಿನಗೆ ಒಳಿತಾಗುತ್ತದೆ". ವಿಭೀಷಣನ ಹಿತನುಡಿ ರಾವಣನಿಗೆ ಅಹಿತವೆನಿಸಿತು.

ಅದನ್ನು ಸಹಿಸದೆ ಸಹೋದರನನ್ನೇ ತನ್ನ ರಾಜ್ಯದಿಂದ ಹೊರ ಅಟ್ಟಿದ. ವಿಭೀಷಣ ನೇರವಾಗಿ ರಾಮನ ಬಳಿಬಂದ. ಶರಣೆಂದು ವಂದಿಸಿದ. ರಾಮನ ಸಹವರ್ತಿಗಳು 'ಅವನನ್ನು ಸ್ವೀಕರಿಸಬೇಡ' ಎಂದರು. ಆದರೆ ಶ್ರೀರಾಮಚಂದ್ರನು ಶರಣಾಗತನಾಗಿ ಬಂದ ವಿಭೀಷಣನನ್ನು ಸ್ವೀಕರಿಸಿ ಹೇಳುತ್ತಾನೆ –"ಒಂದು ವೇಳೆ ಶರಣಾಗತನಾಗಿ ನನ್ನ ಶತ್ರುವಾದ ರಾವಣನೇ ಬಂದರೂ ಅವನನ್ನು ನನ್ನವನನ್ನಾಗಿ ಸ್ವೀಕರಿಸುತ್ತೇನೆ. ಅವನಿಗೂ ಅಭಯದಾನ ಮಾಡುತ್ತೇನೆ" ಎಂದ.

ಇಂತಹ ಔದಾರ್ಯ ರಾಮನಿಗೆ ಮಾತ್ರ ಬರಲು ಸಾಧ್ಯ; ಬಿಟ್ಟರೆ ಸೀತೆಗೆ ಎನ್ನುತ್ತಾನೆ ಹನುಮಂತ.

ಇದರಂತೆ ಮಹಾಮಾತೆ ದ್ರೌಪದಿಯೂ ಅಶ್ವತ್ಥಾಮನ ವಧೆಯನ್ನು ತಡೆಯುತ್ತಾಳೆ.

## ಅಪರಾಧಕ್ಕೆ ತಕ್ಕ ಶಿಕ್ಷೆ

ಈ ಸಂದರ್ಭದಲ್ಲಿ ಭೀಮಸೇನ ಹೇಳುತ್ತಾನೆ–

"ದ್ರೌಪದಿ! ಕೃಪಿಗೆ ದುಃಖ ಆಗಬಾರದೆಂದು ನಾನೂ ಒಪ್ಪುತ್ತೇನೆ. ಆದರೆ ನಿಷ್ಕಾರಣವಾಗಿ ಘೋರ ಕೃತ್ಯವನ್ನೆಸಗಿದ ಅಶ್ವತ್ಥಾಮನಿಗೆ ಶಿಕ್ಷೆಯಾಗಲೇ ಬೇಕು. ಇವನಲ್ಲಿ ಕರುಣೆ ಸಲ್ಲದು. ಲೋಕದಲ್ಲಿ ಒಬ್ಬ ಅಪರಾಧಿಯನ್ನು ದಂಡಿಸಿದಾಗ ಅವನ ಹಿರಿಯರಿಗೆ ದುಃಖವಾಗುತ್ತದೆಯೆಂದು ಆ ಅಪರಾಧಿಗೆ ದಂಡನೆಯನ್ನೇ ನೀಡದಿದ್ದರೆ ಲೋಕವ್ಯವಸ್ಥೆಯೇ ಕುಸಿದುಹೋಗುವುದಿಲ್ಲವೇ?

ಈ ಸಂದರ್ಭದಲ್ಲಿ ಶ್ರೀಕೃಷ್ಣನು ಹೇಳುತ್ತಾನೆ–

ಅಶ್ವತ್ಥಾಮನನ್ನು ದ್ರೌಪದಿ ಹೇಳಿದಂತೆ ಕೊಲ್ಲುವುದೂ ಬೇಡ; ಭೀಮಸೇನನ ಅಭಿಪ್ರಾಯದಂತೆ ಶಿಕ್ಷಿಸದೆ ಬಿಡುವುದೂ ಬೇಡ ಅಶ್ವತ್ಥಾಮನ ಶಿರೋರತ್ನವನ್ನು ಕಿತ್ತು ತೆಗೆಯೋಣ ಎಂದು ಅರ್ಜುನನಿಗೆ ತಿಳಿಸಿದ. ಅರ್ಜುನನು ಶ್ರೀಕೃಷ್ಣನ ಮಾತಿನಂತೆ ಹಸಿವೆ ನೀರಡಿಕೆಗಳನ್ನು ಪರಿಹರಿಸುವ ಅಶ್ವತ್ಥಾಮನ ಶಿರೋರತ್ನವನ್ನು ಕಿತ್ತು ತೆಗೆದ. ಅಕೃತ್ಯವನ್ನೆಸಗಿದ ಅಪರಾಧಿ ಅಶ್ವತ್ಥಾಮ ಆಂತರ ತೇಜಸ್ಸನ್ನು ಕಳೆದುಕೊಂಡಿದ್ದ; ಬಾಹ್ಯ ತೇಜಸ್ಸನ್ನೂ ಕಳೆದುಕೊಂಡ. ಅಶ್ವತ್ಥಾಮ ಸಂಕಟಪಡು ವಂತಾಯಿತು.

## ವೀರಮಾತೆಯ ಪ್ರಾರ್ಥನೆ

ಇತ್ತ ಧೂರ್ತ ದುರ್ಯೋಧನಾದಿಗಳನ್ನೆಲ್ಲಾ ಸಂಹರಿಸಿದ ಬಳಿಕ ಭಗವಾನ್ ಶ್ರೀಕೃಷ್ಣನು ದುಃಖಿತರಾದ ಪಾಂಡವರೆಲ್ಲರನ್ನೂ ಸಮಾಧಾನಪಡಿಸಿ, ಧರ್ಮರಾಜನನ್ನು ಪಟ್ಟದಲ್ಲಿ ಕುಳ್ಳಿರಿಸಿ ದ್ವಾರಕಾ ಪಟ್ಟಣಕ್ಕೆ ಹೊರಡಲನುವಾದನು.

ಶ್ರೀಕೃಷ್ಣನು ರಥವನ್ನೇರಿ ಹೊರಡಲು ಸಿದ್ಧನಾದಾಗ ಕೃಷ್ಣ! ಕೃಷ್ಣ! ಎಂಬ ಆರ್ತನಾದ ಕೇಳಿಬಂತು. ಶ್ರೀಕೃಷ್ಣ ಅತ್ತ ನೋಡಿದ. ಅಭಿಮನ್ಯುವಿನ ಸಹಧರ್ಮಿಣಿಯಾದ

ಉತ್ತರಾದೇವಿ ಭಯದಿಂದ ಕಂಗೆಟ್ಟು ಎದುರಾಗಿ ಓಡಿಬಂದಳು. ಕೃಷ್ಣನ ಬಳಿ ಬಂದು ಆರ್ತಳಾಗಿ ಗೋಳಿಟ್ಟಳು–

"ಮಹಾಯೋಗಿಯಾದ, ದೇವದೇವನಾದ, ಜಗದ್ರಕ್ಷಕನಾದ ಶ್ರೀಕೃಷ್ಣನೇ! ನನ್ನನ್ನು ಕಾಪಾಡು ಕಾಪಾಡು. ಕಾದ ಕಬ್ಬಿಣದ ಅಲಗಿನಿಂದ ಕೂಡಿದ ಬ್ರಹ್ಮಾಸ್ತ್ರವು ನನ್ನ ಗರ್ಭವನ್ನೇ ಗುರಿಮಾಡಿಕೊಂಡು ಬರುತ್ತಿದೆ. ಪಾಂಡವವಂಶಾಂಕುರ ವನ್ನುಳಿಸು...." ಎಂದು.

ಉತ್ತರೆಯ ಗರ್ಭದ ಮೇಲೆಯೇ ಬ್ರಹ್ಮಾಸ್ತ್ರವನ್ನು ಅಶ್ವತ್ಥಾಮನು ಪ್ರಯೋಗಿಸಿದ್ದಾನೆ. ಹಿಂದೆ ಬ್ರಹ್ಮಾಸ್ತ್ರವನ್ನು ಅರ್ಜುನ ತಡೆದಿದ್ದ. ಅಶ್ವತ್ಥಾಮನ ಸೇಡು ಅಂದಿಗೆ ಮುಗಿಯಲಿಲ್ಲ. ಸಮಗ್ರ ಪಾಂಡವರ ಸಂತತಿಯನ್ನೇ ನಿರ್ಮೂಲನ ಮಾಡಬೇಕೆಂಬ ದುರಾಲೋಚನೆಯಿಂದ ಅಸ್ತ್ರ ಪ್ರಯೋಗಿಸಿದ. ಉತ್ತರೆಯು ನಾನು ಅಳಿದರೂ ಚಿಂತೆಯಿಲ್ಲ. ಪಾಂಡವರ ಸಂತತಿ ಉಳಿಯಬೇಕೆಂದು ಕಳಕಳಿಯಿಂದ ಕೇಳಿಕೊಂಡಾಗ ಶ್ರೀಕೃಷ್ಣಪರಮಾತ್ಮನು ತನ್ನ ಸಾಮರ್ಥ್ಯದಿಂದ ಗರ್ಭಸ್ಥ ಶಿಶುವನ್ನು ರಕ್ಷಿಸಿದ್ದಾನೆ.

ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ಉತ್ತರೆಯ ಗರ್ಭಸ್ಥ ಶಿಶುವನ್ನು ಕಾಪಾಡಿದವ ಶ್ರೀಕೃಷ್ಣ.

ಪಾಂಡವರ ಸಮಗ್ರ ಜೀವನದ ರಕ್ಷಣೆಯ ಹೊಣೆಗಾರಿಕೆಯನ್ನು ಹೊತ್ತುಕೊಂಡವ ಶ್ರೀಕೃಷ್ಣ.

ಹೆಜ್ಜೆಹೆಜ್ಜೆಗೂ ಶ್ರೀಕೃಷ್ಣನ ಕರುಣೆಗೆ ಪಾತ್ರಳಾದ ಕುಂತೀ ಹೃದಯತುಂಬಿ ನುಡಿದ ಸ್ತೋತ್ರ ನಮ್ಮೆಲ್ಲರ ಹೃದಯದ ಕಶ್ಮಲವನ್ನು ತೊಳೆಯಬೇಕು. ಹರಿಭಕ್ತಿ ಬೆಳೆಯಬೇಕು.

ಕುಂತಿ ನುಡಿಯುತ್ತಾಳೆ:

**ವಿಪದಃ ಸಂತು ನಃ ಶಶ್ವತ್ತತ್ರ ತತ್ರ ಜಗತ್ಪತೇ ।**
**ಭವತೋ ದರ್ಶನಂ ಯತ್ಸ್ಯಾದಪುನರ್ಭವ ದರ್ಶನಮ್ ॥** — ೧.೮.೨೮

ಶ್ರೀಹರಿಯೇ! ಯಾವ ಆಪತ್ತುಗಳು ನಿನ್ನ ಸ್ಮರಣೆಗೆ ಸಹಾಯಕವಾಗುತ್ತವೆಯೋ ಅಂತಹ ಆಪತ್ತುಗಳಿಗೆ ಸ್ವಾಗತ.

ಭಗವಂತನನ್ನು ಸ್ಮರಿಸದ ಸಿರಿವಂತಿಕೆಗಿಂತ ಭಗವಂತನನ್ನು ಸ್ಮರಿಸುವ ಆಪತ್ತುಗಳೇ ಬರಲಿ!!

ನಿನ್ನ ಸ್ಮರಣೆ–ದರ್ಶನಗಳಿಗೆ ಸಹಾಯಕವಾದ ಆಪತ್ತುಗಳನ್ನು ನಿರಂತರ ಕೊಡು ಎಂದು ಅಂಗಲಾಚುತ್ತಾಳೆ.

ಭಗವಂತನನ್ನೇ ಮರೆಸುವ ಅಹಂಕಾರ, ಅಧಿಕಾರ, ದರ್ಪದ ಶ್ರೀಮಂತಿಕೆ ಬೇಡವೇ ಬೇಡ ಎನ್ನುತ್ತಾಳೆ.

ಇಂದು ನಾವೂ ಇದ್ದೇವೆ.

ಧಾರ್ಮಿಕರಾದ ನಮ್ಮ ಜೀವನದಲ್ಲಿಯೂ ಭಗವಂತನು ಅನೇಕ ಆಪತ್ತುಗಳನ್ನು ನೀಡುತ್ತಾನೆ. ಆಪತ್ತುಗಳನ್ನು ಪಡೆದ ನಾವು ಭಗವಂತನನ್ನೇ ಧಿಕ್ಕರಿಸುತ್ತೇವೆ. ''ನಾನು ಎಷ್ಟೆಲ್ಲ ದೇವರ ಪೂಜೆ, ದಾನ, ಧರ್ಮ, ವ್ರತಗಳನ್ನು ಮಾಡಿದೆ. ಆದರೂ ಪ್ರತಿಯಾಗಿ ಸಿಕ್ಕಿದ್ದು ದುಃಖ ಮಾತ್ರ. ವ್ಯರ್ಥವಾದ ಧರ್ಮಾಚರಣೆ ಬೇಡವೇಬೇಡ ಎಂದು ಮನಸ್ಸಿನಲ್ಲಿಯೇ ಸಂಕಲ್ಪಿಸುವವರು ಅನೇಕಮಂದಿ ಇದ್ದಾರೆ. ಆದರೆ ಇದು ನಲ್ಲದು.

ನಮ್ಮ ಜೀವನದಲ್ಲಿ ಕಷ್ಟ ಬಂದಷ್ಟೂ ಭಗವಂತನ ಪಾದವನ್ನು ಗಟ್ಟಿಯಾಗಿ ಹಿಡಿಯಬೇಕು.

ಸಜ್ಜನನಾದವ ಭಗವಂತನು ನೀಡುವ ಕಷ್ಟವನ್ನು ಇಷ್ಟವೆನ್ನಬೇಕು. ಕಷ್ಟ ಕೊಟ್ಟದ್ದೇಕೆ ಎಂದು ತಿಳಿಯದ ಮಾತ್ರಕ್ಕೆ ನಮ್ಮ ಹಿತ ಹರಿಗೆ ಅಭಿಮತವೇ ಅಲ್ಲ ಎನ್ನುವುದು ಉದ್ಧಟತನವಾಯಿತು.

ಒಬ್ಬ ಶಿಲ್ಪಿ ಸುಂದರವಾದ ಮೂರ್ತಿಯೊಂದನ್ನು ಮಾಡಬಯಸಿದಾಗ ಸಾವಿರಾರು ಪೆಟ್ಟುಗಳನ್ನು ಕೊಟ್ಟೇ ತೀರುತ್ತಾನೆ. ಹೊಡೆಯುವಾಗ ಕಲ್ಲಿನಲ್ಲಿ ವಿಕಾರ ಕಾಣಿಸಬಹುದು. ಆದರೆ ಶಿಲ್ಪಿಕೊಟ್ಟ ಪ್ರತಿಯೊಂದು ಹೊಡೆತವೂ ಸುಂದರ ಮೂರ್ತಿಯ ರೂಪುಗೊಳ್ಳುವಿಕೆಯಲ್ಲಿಯೇ ಪರ್ಯವಸಾನವಾಗುತ್ತದೆ. ಪೆಟ್ಟುಕೊಟ್ಟ ಶಿಲ್ಪಿಯನ್ನು ದುಷ್ಟನೆಂದು ಯಾವ ಶಿಷ್ಟನೂ ನುಡಿಯಲಾರ.

ಅದರಂತೆ ಸಜ್ಜನನಾದವ ಭಗವಂತನು ಕೊಟ್ಟ ಪೆಟ್ಟುಗಳನ್ನೆಲ್ಲ ಇಷ್ಟವೆಂದರಿತು ಸಂತುಷ್ಟರಾಗಬೇಕು. ರೂಪಹೀನರಾದ ನಮಗೆ ರೂಪಕೊಡುವ ಶಿಲ್ಪಿ ಭಗವಂತನೆಂಬ ಅರಿವು ಬೇಕು. 'ಪ್ರಾಪ್ತಂ ಪ್ರಾಪ್ತಂ ಉಪಾಸೀತ' ಬಂದದ್ದೆಲ್ಲವನ್ನೂ ಹರಿಪ್ರಸಾದವೆಂದು ಸ್ವೀಕರಿಸಿದಾಗ ನಮ್ಮ ವ್ಯಕ್ತಿತ್ವವೂ ಪ್ರತಿಮೆಯಂತೆ ಸುಂದರವಾಗಿ ರೂಪುಗೊಳ್ಳುತ್ತದೆ.

ತಪ್ಪುಮಾಡಿದ ತನಯನಿಗೆ ತಾಯಿ ಹೊಡೆಯುತ್ತಾಳೆ. ಪೆಟ್ಟುತಿಂದ ಮಗು ತಾಯಿಯ ಸೆರಗನ್ನೇ ಗಟ್ಟಿಯಾಗಿ ಹಿಡಿದುಕೊಂಡು ಅಳುತ್ತದೆ. ನಾವೂ ಸಹ ಮಕ್ಕಳಂತಿದ್ದೇವೆ. ತಾಯಿಹೃದಯದ ಭಗವಂತ ಪೆಟ್ಟುಕೊಟ್ಟಾಗ ಅವನ ಪಾದವನ್ನೇ ಗಟ್ಟಿಯಾಗಿ ಹಿಡಿದು ನಾವೂ ಅಳೋಣ! ಹೃದಯಕರಗಿ ರಕ್ಷಣೆಮಾಡಿಯೇ ತೀರುತ್ತಾನೆ.

ಕೋಟಿ ಕಷ್ಟ ಬಂದರೂ ಭಗವಂತನನ್ನು ಬಿಡಲೇಬಾರದು.

ಸುದಾಮ ದಾರಿದ್ರ್ಯ ತಾಳಲಾರದೆ ಕೃಷ್ಣನ ಬಳಿ ಸಾಗಿದ. ಕೃಷ್ಣ ಸತ್ಕಾರವನ್ನೇನೋ ಮಾಡಿದ. ಆದರೆ ಸುದಾಮ ಹಿಂತಿರುಗುವಾಗ ಕೊಟ್ಟ ಪೀತಾಂಬರವನ್ನೆಲ್ಲ ಕಸಿದುಕೊಂಡು ಕಳುಹಿಸಿದ. ಆದರೆ ಸುದಾಮ ಇಲ್ಲಿ ತಪ್ಪಲಿಲ್ಲ. ಕೃಷ್ಣನ ಬಗ್ಗೆ ತಪ್ಪು ತಿಳಿಯಲಿಲ್ಲ. ಹರಿಪ್ರಸಾದವೆಂದೇ ಅರಿತು ನುಡಿಯುತ್ತಾನೆ.

"ಭಗವಂತ! ನಿನ್ನ ಕರುಣೆ ಅಪಾರ! ತನ್ನ ಭಕ್ತನಿಗೆ ಸಂಪತ್ತನ್ನು ನೀಡಿದರೆ ತನ್ನನ್ನೇ ಎಲ್ಲಿ ಮರೆಯುತ್ತಾನೋ ಎಂದು ಹಾಗೆಯೇ ಕಳುಹಿಸಿದ್ದಿ" ಎಂದು ಭಾವಿಸಿದ. ದಾರಿದ್ರ್ಯವನ್ನೂ ಪ್ರಸಾದವೆಂದು ತಿಳಿಯುವ ಸುದಾಮನ ಔದಾರ್ಯ ವಾಗಲೀ, ಆಲೋಚನೆಯಾಗಲೀ ಯಾರಲ್ಲಿಯೂ ಬಾರದು.

ಮನೆಗೆ ಬಂದ. ಪರ್ಣಕುಟೀರ ಅರಮನೆಯಾಗಿತ್ತು. ಆವಾಗಲೂ ಹಿಗ್ಗಲಿಲ್ಲ. "ಹರಿಕೊಟ್ಟ ಸಂಪತ್ತಿದು. ಅವನ ಸಂಪತ್ತಿಗೆ ನಾನು ಕೇವಲ ಟ್ರಸ್ಟಿ" ಎಂದು ಭಾವಿಸಿ ಭಗವತ್ಸೇವೆಗೆ ಅದನ್ನು ವಿನಿಯೋಗಿಸಿದ.

ಭಗವಂತ ಎರಡು ಪರೀಕ್ಷೆಗಳನ್ನು ಮಾಡುತ್ತಾನೆ. ದಾರಿದ್ರ್ಯಕೊಟ್ಟು ಪರೀಕ್ಷಿಸು ತ್ತಾನೆ. ಶ್ರೀಮಂತಿಕೆ ಕೊಟ್ಟು ಪರೀಕ್ಷಿಸುತ್ತಾನೆ. ಈ ಎರಡು ಪರೀಕ್ಷೆಗಳಲ್ಲಿಯೂ ನಾವು ತೇರ್ಗಡೆಯಾಗಬೇಕು.

ಭಾಗವತವನ್ನು ವ್ಯಾಖ್ಯಾನಿಸಿದ ಶ್ರೀ ವಿಜಯಧ್ವಜತೀರ್ಥರೂ ಕೊನೆಗೊಂದು ಮಾತನ್ನು ಹೇಳುತ್ತಾರೆ–

"ಭಗವಂತನೇ! ನೀನು ನನ್ನ ವ್ಯಾಖ್ಯಾನದಿಂದ ಪ್ರೀತನಾಗಿದ್ದಲ್ಲಿ ವರ ಒಂದನ್ನು ಕೊಡು" ಎಂದು ಬಿನ್ನವಿಸಿಕೊಂಡು 'ಪ್ರಾಜ್‌ನಿಶ್ಕಿಂಚನತಾಂ' ಎಂದು ಪ್ರಾರ್ಥಿಸುತ್ತಾರೆ.

"ನನ್ನ ಬಳಿ ಕಾಡಿಗಾಸೂ ಇಲ್ಲದಂತೆ ಮಾಡು" ಎಂದು.
ದೇವರ ಬಳಿ ಏನೆಲ್ಲಾ ಕೇಳುವ ಮಂದಿ ಎಲ್ಲಿ!
ದಾರಿದ್ರ್ಯವನ್ನೇ ಬಯಸುವ ಆಪತ್ತನ್ನೇ ಕೇಳುವ ಧೀರರೆಲ್ಲ!!
ನಾವು ದಾರಿದ್ರ್ಯ ಬರಲಿ ಎಂದು ಕೇಳುವುದೇನು ಬೇಕಿಲ್ಲ.
ಶ್ರೀಮಂತಿಕೆಯಲ್ಲಿದ್ದುಕೊಂಡೇ ಶ್ರೀಹರಿಸೇವೆ ಮಾಡುವ ಬುದ್ಧಿ ಬಂದರೂ ಸಾಕು.

ಇಂತಹ ಅಮೂಲ್ಯ ದೃಷ್ಟಿಗಳೆಡೆ ಗಮನಕೊಡುವ ಭಾಗವತಗ್ರಂಥದ ಹಿರಿಮೆ ಗರಿಮೆಗಳು ಅಪಾರ!! ಅದ್ಭುತ!!

## ಧರ್ಮರಾಜ ತಪ್ಪಿದ್ದೆಲ್ಲಿ?

ಧರ್ಮರಾಜನು ಯುದ್ಧ ಮುಗಿಸಿ ಅಶ್ವಮೇಧಯಜ್ಞವನ್ನಾಚರಿಸಿ ಪಟ್ಟಾಭಿಷಿಕ್ತ ನಾಗಿ ದೊರೆಯಾಗಿ ಧರೆಯನ್ನಾಳುತ್ತಿದ್ದಾನೆ. ಹೀಗಿದ್ದರೂ ಅವನಿಗೊಂದು ಅಂತರಾಳದಲ್ಲಿ ಅಳುಕು ನಿರಂತರ ಕುಟುಕಲಾರಂಭಿಸಿತು. "ನಾನು ದೊಡ್ಡ ತಪ್ಪು ಮಾಡಿದ್ದೇನೆ. ಯುದ್ಧದಲ್ಲಿ ಎಲ್ಲ ಗುರುಹಿರಿಯರನ್ನು ಬಂಧುಬಾಂಧವರನ್ನು ಲಕ್ಷಾವಧಿ ಸೈನಿಕರನ್ನೂ ಸದೆಬಡಿಯಲೂ ನಾನೇ ಕಾರಣನಾಗಿದ್ದೇನೆ. ಇದರಿಂದಾಗಿ ಸಾವಿರಾರು ವರುಷ ನರಕಕೂಪದಲ್ಲಿ ಬೀಳುವಷ್ಟು ಪಾಪ ನನ್ನನ್ನು ಅಂಟಿಕೊಂಡಿದೆ. ನಾನು ರಾಜ್ಯ ತ್ಯಜಿಸಿ ಕಾಡಿಗೆ ಹೋಗಿದ್ದರೆ ಒಳ್ಳೆಯದಿತ್ತು. ನನ್ನಿಂದಾಗಿ ರಕ್ತಪಾತ, ಹಿಂಸೆ, ಹತ್ಯೆಗಳು ನಡೆಯುವಂತಾಯಿತು." ಹೀಗೆಯೇ ನಿರಂತರ ಮಾನಸಿಕವಾಗಿ ಕೊರಗುವ

ರೋಗಿಯಾದ. ಕೃಷ್ಣ, ಭೀಮ, ವ್ಯಾಸರು ಎಲ್ಲರೂ ನೀನು ನಿರಪರಾಧಿ ಎಂದು ತಿಳಿಸಿದರೂ ಧರ್ಮರಾಜ ಒಪ್ಪಲಿಲ್ಲ

ಇದು ಧರ್ಮರಾಜನ ಒಂದು ದೋಷ

ದುರ್ಯೋಧನನು ಭಗವಂತನ ನಿಯಮಗಳೆಲ್ಲವನ್ನೂ ಉಲ್ಲಂಘಿಸಿ ಸ್ವಚ್ಛಂದವಾಗಿ ವರ್ತಿಸಿದ ಮಹಾದುಷ್ಟ. ತನ್ನ ಸ್ವಾರ್ಥಕ್ಕಾಗಿ ಎಂತಹ ಅಕೃತ್ಯವನ್ನೆನಗಲೂ ಹಿಂದೆಮುಂದೆ ನೋಡದವ. ಉಳಿದೆಲ್ಲರೂ ಇವನ ಒಟ್ಟಿಗೆ ಅಕೃತ್ಯದಲ್ಲಿ ಶಾಮೀಲಾದವರು.

ಭೀಷ್ಮ ದ್ರೋಣಾದಿಗಳು ಸಜ್ಜನರೇ ಆಗಿದ್ದರೂ ದುರ್ಯೋಧನನ ದುರ್ನಡತೆಗಳಿಗೆ ಸಮ್ಮತಿ ಸೂಚಿಸಿದ್ದಾರೆ. ಆದ್ದರಿಂದ ಭಗವದ್ವೇಷಿಗಳ ಮತ್ತು ಅವರ ಅನುಬಂಧಿಗಳ ನಿಗ್ರಹ ರಾಜನ ಮುಖ್ಯ ಕರ್ತವ್ಯ. ಇದು ಧರ್ಮವೇ ಆಗಿದೆ. ಹೀಗೆಲ್ಲ ಶ್ರೀಕೃಷ್ಣನು ಗೀತೆಯಲ್ಲಿ ತಿಳಿಸಿದ್ದರೂ ಕೃಷ್ಣನ ಮಾತಿನಲ್ಲಿಯೇ ಸಂಶಯ. ಇಲ್ಲಿ ಧರ್ಮರಾಜ ತಪ್ಪಿದ.

ಶ್ರೀಕೃಷ್ಣನು ಹಸ್ತಿನಾವತಿಗೆ ಆಗಮಿಸುವಾಗ ಕೃಷ್ಣನನ್ನು ಸ್ವಾಗತಿಸಲು ಎಲ್ಲರೂ ತುದಿಗಾಲಿನಲ್ಲಿ ನಿಂತಿದ್ದರು. ಭೀಷ್ಮ, ದ್ರೋಣ, ಕರ್ಣ. ದುರ್ಯೋಧನ ಎಲ್ಲರೂ ತಮ್ಮ ತಮ್ಮ ಮನೆಯಲ್ಲಿ ಶ್ರೀಕೃಷ್ಣನ ಆತಿಥ್ಯಕ್ಕಾಗಿ ಎಲ್ಲ ಸಿದ್ಧತೆಗಳನ್ನೂ ಮಾಡಿದ್ದರು. ಆದರೆ ಶ್ರೀಕೃಷ್ಣ ಯಾರ ಮನೆಯ ಹೊಸ್ತಿಲನ್ನೂ ದಾಟಲಿಲ್ಲ. ನೇರ ವಿದುರನ ಮನೆಗೆ ನಡೆದ. ಇದಕ್ಕೆ ಕಾರಣ, ಶ್ರೀಕೃಷ್ಣನಿಗೆ ಯಾರ ಮೇಲೂ ಸಮಾಧಾನವಿರಲಿಲ್ಲ.

ದುರ್ಯೋಧನ ಸ್ವತಃ ದುಷ್ಟ. ಭೀಷ್ಮಾದಿಗಳೆಲ್ಲರೂ ದ್ರೌಪದಿಯ ಮಾನಭಂಗದ ಸಮಯದಲ್ಲಿ ಮೌನಿಗಳಾಗಿದ್ದರೂ ವಿರೋಧಿಸಲೇ ಇಲ್ಲ (ನ್ಯೂಟ್ರಾಲ್ ಪಾಲಿಸಿ ಎಂದರು). ದ್ರೌಪದಿ ಕೇಳುತ್ತಾಳೆ: 'ಭೀಷ್ಮಾಚಾರ್ಯರೇ! ನಿಮಗಿದು ಸಮ್ಮತವೇ?' ಎಂದಾಗ 'ಧರ್ಮರಾಜನನ್ನೇ ಕೇಳು' ಎನ್ನುತ್ತಾರೆ.

ಈ ಪ್ರಸಂಗದಲ್ಲಿ ಪ್ರತಿಭಟಿಸಿದವ ವಿದುರ ಒಬ್ಬನೇ. ವಿದುರನು ಕೈಯೆತ್ತಿ ಸಾರಿ ಸಾರಿ ಹೇಳಿದ. 'ನೀವು ಮಾಡುತ್ತಿರುವುದು ಅಧರ್ಮ! ಅಧರ್ಮ!' ಎಂದು. ಇದನ್ನು ಗಮನಿಸಿದ ಶ್ರೀಕೃಷ್ಣ ಭಕ್ತನಾದ ವಿದುರನ ಮನೆಯ ಆತಿಥ್ಯವನ್ನೇ ಸ್ವೀಕರಿಸಿದ. ಈ ಮೂಲಕ 'ಭಗವದ್ವೇಷಿಗಳು ಮತ್ತು ಅವರ ಅನುಚರರನ್ನು ವಧಿಸಬೇಕೆ'ಂದೂ ಸಂದೇಶ ನೀಡಿದ.

ಹಿಂದೆ ಅರ್ಜುನನಿಗೂ ಸಂಶಯ ಬಂದಾಗ 'ನ ಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತ ಗಚ್ಛತಿ' –"ಸತ್ಕರ್ಮಶೀಲನಾದವ ನರಕಭಾಗಿಯಾಗಲಾರ" –ಮುಂತಾಗಿ ಉಪದೇಶಿಸಿ ಯುದ್ಧಕ್ಕೆ ಅಣಿಗೊಳಿಸಿದ. ಆದರೆ ಧರ್ಮರಾಜನಿಗೆ ಶ್ರೀಕೃಷ್ಣನೇ ಹತ್ತಾರುಬಾರಿ ತಿಳಿಸಿದರೂ ಅವನ ಪಾಪದ ಭೀತಿ ದೂರವಾಗಲಿಲ್ಲ. ಇಂತಹ ಸಂಶಯ ಆತ್ಮನ ಮುಳುವಿಗೆ ಹೇತುವಾಗುತ್ತದೆ. ನಿರಾಗಸನಾಗಿದ್ದ ಧರ್ಮರಾಜ

ಕೃಷ್ಣನ ಮಾತಿನಲ್ಲಿ ಅವಿಶ್ವಾಸ ತಾಳಿ ಪಾಪಕ್ಕೆ ಗುರಿಯಾದ. ಮುಂದೆ ಹೀನವಾದ ನರಕದರ್ಶನಕ್ಕೆ ಭಾಜನನಾದ.

## ಧರ್ಮರಾಜನಿಗೆ ನರಕದರ್ಶನ

ಭೂಲೋಕದ ಕೃತ್ಯಗಳೆಲ್ಲವೂ ಮುಗಿದ ಬಳಿಕ ಎಲ್ಲರೂ ಮಹಾಪ್ರಸ್ಥಾನಕ್ಕೆ ಸಿದ್ಧರಾದರು. ಭೀಮ ಅರ್ಜುನಾದಿಗಳೆಲ್ಲರೂ ಮುಂದೆ ನಡೆದರು. ಧರ್ಮರಾಜನು ಏಕಾಕಿಯಾಗಿ ಹೊರಟ. ಅವನೊಟ್ಟಿಗೆ ಒಂದು ನಾಯಿಯೂ ಹೊರಟಿತು. ಸ್ವರ್ಗಕ್ಕೇರಲು ರಥ ಬಂದಿತು. ಧರ್ಮರಾಜನಿಗೆ ರಥ ಏರಲು ಹೇಳಿದಾಗ, 'ನಾಯಿಯನ್ನು ಬಿಟ್ಟು ರಥ ಏರಲಾರೆ. ನಾಯಿಯನ್ನೂ ಕರೆತರುವೆ' ಎಂದ. ಸ್ವರ್ಗಕ್ಕೆ ನಾಯಿಗೆ ಪ್ರವೇಶವಿಲ್ಲ ಎಂದರು. 'ಹಾಗಾದರೆ ನನಗೆ ಸ್ವರ್ಗವೇ ಬೇಡ' ಎಂದ. ಇದು ಧರ್ಮಜನ ಹೃದಯವಂತಿಕೆ. ಕೀಳು ಪ್ರಾಣಿಯ ಬಗ್ಗೆಯೂ ಅನುಕಂಪ. ನಾಯಿ ರೂಪದಲ್ಲಿ ಬಂದ ಯಮಧರ್ಮ ನಿಜರೂಪ ತೋರಿದ.

ಮುಂದೆ ರಥವನ್ನೇರಿ ಸ್ವರ್ಗಕ್ಕೇರಿದ. ವೀರಸ್ವರ್ಗದಲ್ಲಿಯ ದೃಶ್ಯ ಕಂಡು ಗಾಬರಿಯಾದ. ದುರಾತ್ಮನಾದ ದುರ್ಯೋಧನ ಅವನ ಅನುಚರರೆಲ್ಲರೂ ಸುಖವಾಗಿದ್ದಾರೆ. ತನ್ನ ತಮ್ಮಂದಿರು ಅಲ್ಲಿ ಕಾಣಲಿಲ್ಲ. 'ಇಂತಹ ದುಷ್ಟರ ಒಟ್ಟಿಗೆ ನಾನಿರಲಾರೆ. ನನ್ನ ಸಹೋದರರಿರುವಲ್ಲಿಗೆ ಕರೆದೊಯ್ಯಿರಿ' ಎಂದು ಹೊರಟ. ಮುಂದೆ ನರಕ ಕಾಣಿಸಿತು. ದುರ್ಗಂಧಮಯವಾದ ಅಂಧಕಾರದ ಪ್ರದೇಶ. ಮುಂದೆ ಸಾಗಲು ಸಾಧ್ಯವಾಗಲಿಲ್ಲ. ಧರ್ಮರಾಜ ಹಿನ್ನಡೆಯಲು ಸಿದ್ಧನಾದಾಗ ತನ್ನ ಸಹೋದರರಾದ ಭೀಮ, ಅರ್ಜುನ, ಕರ್ಣ ಮುಂತಾದವರ ಆರ್ತನಾದ ಕೇಳಿತು. 'ಧರ್ಮರಾಜ! ನೀನು ಇಲ್ಲಿಯೇ ಇರು. ನಿನ್ನ ಸಹವಾಸದಿಂದ ನಮ್ಮ ದುಃಖ ಕಡಮೆಯಾಗುತ್ತಿದೆ' ಎಂದರು. ಧರ್ಮರಾಜ ದಿಗ್ಭ್ರಾಂತನಾದ. ತನ್ನ ಸಹೋದರರಿ ಗುಂಟಾದ ಕಷ್ಟವನ್ನು ಕಂಡು ಅಲ್ಲಿಯೇ ನಿಂತ. ಸಮಗ್ರ ಜೀವನವನ್ನು ಧರ್ಮಕ್ಕಾಗಿ ಮೀಸಲಿಟ್ಟ ನನ್ನ ಸಹೋದರರನ್ನು ಬಿಟ್ಟು ನಾನು ಬರಲಾರೆ. ನರಕವಾದರೂ ಇಲ್ಲಿಯೇ ನಿಲ್ಲುತ್ತೇನೆ –ಎಂದು ಹೇಳಿದಾಗ ಧರ್ಮರಾಜನ ಉದಾತ್ತ ಮನೋಭಾವ ದಿಂದ ಸಂತುಷ್ಟರಾಗಿ ಇಂದ್ರಾದಿ ದೇವತೆಗಳು ಬಂದರು. ನರಕದ ವಾತಾವರಣ ಅದೃಶ್ಯವಾಗಿ ನಿಜವಾದ ಸ್ವರ್ಗ ಗೋಚರಿಸಿತು. ದೇವತೆಗಳು ಹೇಳಿದರು –'ನಿನ್ನ ಆನೃಶಂಸ್ಯ ದಯೆ, ಸತ್ಯನಿಷ್ಠೆಗಳನ್ನು ಪರೀಕ್ಷಿಸಲು ನಾವು ಹೂಡಿದ ನಾಟಕವಿದು' ಎಂದರು. ಧರ್ಮರಾಜನ ವ್ಯಕ್ತಿತ್ವ ಇದರಿಂದ ಗೊತ್ತಾದರೂ ನರಕದರ್ಶನ ವಾದದ್ದೇಕೆ? ಎಂಬ ಪ್ರಶ್ನೆ ಹಾಗೆಯೇ ಉಳಿಯುತ್ತದೆ. ಇದಕ್ಕೆ ತಾತ್ಪರ್ಯನಿರ್ಣಯ ದಲ್ಲಿ ಶ್ರೀಮದಾಚಾರ್ಯರು ಉತ್ತರಿಸಿದ್ದಾರೆ–

**ನ ಹ್ಯಾಜ್ಞಯಾ ವಾಸುದೇವಸ್ಯ ಕಿಂಚಿತ್**
**ಪಾಪಂ ಭವೇತ್ ಸರ್ವವಿಧರ್ಮಿಣೋಽಪಿ ॥** — [ತಾ. ನಿ. ೩೨–೧೦೯]

"ಶ್ರೀಕೃಷ್ಣನ ಆದೇಶವಿದ್ದಲ್ಲಿ; ಶಾಸ್ತ್ರಗಳನ್ನು ನೋಡುವ ಅಗತ್ಯವಿಲ್ಲ. ಶಾಸ್ತ್ರ ವಿರುದ್ಧವೆನಿಸಿದರೂ ಕೃಷ್ಣನ ಆದೇಶ ಪರಿಪಾಲಿಸಿದವನಿಗೆ ಪಾಪಲೇಪವಾಗದು". ಕೃಷ್ಣನ ಮಾತಿನಲ್ಲಿಯೇ ಸಂಶಯ ತಾಳಿದರೆ ಅನರ್ಥವು ಅನಿವಾರ್ಯ.

ಧರ್ಮರಾಜನು ಕೃಷ್ಣನು ತಿಳಿಸಿ ಹೇಳಿದರೂ ಸಂಶಯ ವ್ಯಕ್ತಪಡಿಸಿದ. ದ್ರೋಣರ ಸಂಹಾರ ಸಂದರ್ಭದಲ್ಲಿಯೂ 'ಅಶ್ವತ್ಥಾಮಾ ಹತಃ' ಎಂದು ಹೇಳಲು ಕೃಷ್ಣ ಹೇಳಿದಾಗ, ಧರ್ಮರಾಜನಿಗೆ ಸಮಾಧಾನವಾಗದೆ 'ಕುಂಜರಃ' ಎಂದು ಸೇರಿಸಿ ಹೇಳಿದ. ಈ ಕಾರಣಗಳಿಂದ ಸುಳ್ಳಾದ ನಕರದರ್ಶನಕ್ಕೆ ಭಾಜನನಾದ.

## ಧರ್ಮರಾಜನಿಗೆ ಭೀಷ್ಮರ ಉಪದೇಶ

ಧರ್ಮರಾಜನಿಗೆ ಕೃಷ್ಣನ ಮಾತಿನಲ್ಲೂ ಸಂಶಯಬಂದಾಗ ಭೀಷ್ಮಾಚಾರ್ಯರ ಬಳಿ ಕರೆದುಕೊಂಡು ಹೋಗುತ್ತಾನೆ. ಶ್ರೀಕೃಷ್ಣನ ಆಗಮನದಿಂದ ಭೀಷ್ಮಾಚಾರ್ಯರು ಸಂತುಷ್ಟರಾಗಿರಲು ಧರ್ಮರಾಜನಿಗೆ ಉಪದೇಶಿಸುವಂತೆ ಶ್ರೀಕೃಷ್ಣನು ಭೀಷ್ಮಾಚಾರ್ಯರಿಗೆ ತಿಳಿಸುತ್ತಾನೆ. ಭೀಷ್ಮಾಚಾರ್ಯರು ಧರ್ಮಜನಿಗೆ ಧರ್ಮದ ಬಗ್ಗೆ ವಿಸ್ತಾರವಾಗಿ ವಿವರಿಸುತ್ತಾರೆ. ಸಮಗ್ರ ಶಾಂತಿಪರ್ವವು ಧರ್ಮದ ಮರ್ಮವನ್ನು ವಿಸ್ತರಿಸಿದೆ. ರಾಜರ ಕರ್ತವ್ಯ, ಸ್ತ್ರೀಯರ ಧರ್ಮ, ವರ್ಣಾಶ್ರಮ ಪರಿಪಾಲನೆಯ ಅಗತ್ಯ, ದಾನದ ಮಹತ್ವಗಳ ಬಗ್ಗೆ ವಿಸ್ತಾರವಾಗಿ ಭೀಷ್ಮಾಚಾರ್ಯರು ತಿಳಿಸುತ್ತಾರೆ. ಅಧ್ಯಾತ್ಮ, ಮೋಕ್ಷ, ಚತುರ್ವಿಧ ಪುರುಷಾರ್ಥಗಳ ಬಗ್ಗೆಯೂ ತುಲನಾತ್ಮಕ ವಿಮರ್ಶೆ ಮಾಡಿದ್ದಾರೆ. ಭೀಷ್ಮಾಚಾರ್ಯರು ಯುಧಿಷ್ಠಿರನಿಗೆ ಹೇಳುತ್ತಿದ್ದಾರೆ–

ಧರ್ಮರಾಜ! ನೀನು ಶ್ರೀಕೃಷ್ಣನ ಮಾತಿನ ಮೇಲೆ ಸಂಶಯ ತಾಳಬೇಡ. ಶ್ರೀಕೃಷ್ಣನ ವ್ಯಕ್ತಿತ್ವ ಬಹಳ ಸ್ವಚ್ಛವಾಗಿದೆ.

**ಸರ್ವಾತ್ಮನಃ ಸಮದೃಶೋ ಹ್ಯದ್ವಯಸ್ಯಾನಹಂಕೃತೇಃ ।**
**ತತ್ಕೃತಂ ಮತಿವೈಷಮ್ಯಂ ನಿರವದ್ಯಸ್ಯ ನ ಕ್ವಚಿತ್** ॥ ೧–೯–೨೮ ॥

"ಎಲ್ಲೆಡೆಯೂ ವ್ಯಾಪಿಸಿದ್ದಾನೆ. ಎಲ್ಲವನ್ನೂ ಅವುಗಳ ಯೋಗ್ಯತೆಗನುಗುಣವಾಗಿ ಕಾಣುತ್ತಾನೆ. ಇವನಿಗೆ ಸಮಾಧಿಕರು ಯಾರೂ ಇಲ್ಲದಿದ್ದರೂ ಅಹಂಕಾರರಹಿತನಾಗಿದ್ದಾನೆ. ರಾಗಾದಿ ದೋಷಗಳಿಂದ ಶೂನ್ಯನಾಗಿದ್ದಾನೆ. ಎಲ್ಲಿಯೂ ಸಣ್ಣಬುದ್ಧಿ ತೋರಲಾರ." ಪ್ರಕೃತಿಯ ವಿಕಾರವೇ ಇಲ್ಲದ ಶ್ರೀಕೃಷ್ಣನ ಉದ್ದೇಶ –'ಸಜ್ಜನರಿಗೆ ಹಿತವಾಗಬೇಕು. ರಜೋಗುಣ ತಮೋಗುಣಗಳ ದಮನವಾಗಬೇಕು' ಎಂದು. ಸ್ತುತಿ ನಿಂದೆಗಳಿಗೆ ಬೆಲೆಕೊಡದ ನಿಷ್ಪಕ್ಷಪಾತಿಯಾದ ಶ್ರೀಕೃಷ್ಣನ ಮಾತುಗಳಲ್ಲಿ ಶ್ರದ್ಧೆವಹಿಸು.

ಶ್ರೀಕೃಷ್ಣನು ನಿನ್ನನ್ನು ನನ್ನ ಬಳಿ ಕರೆತಂದದ್ದೇಕೆ? ಉಪದೇಶ ಕೊಡಿಸಲಿಕ್ಕಾಗಿಯಲ್ಲ. ನನಗಿಂತಲೂ ಮಿಗಿಲಾದ ಉಪದೇಶ ಅವನೇ ನೀಡಬಲ್ಲ. ಅವನ ಆಗಮದಲ್ಲಿ ಕಾರುಣ್ಯವಿದೆ. 'ಭಕ್ತ ಭೀಷ್ಮನ ಅವಸಾನಕಾಲ ಸಮೀಪಿಸಿದೆ, ಅವನಿ ಗೊಮ್ಮೆ ದರ್ಶನ ಕೊಡೋಣ' ಎಂಬ ಒಂದೇ ಕಾರಣದಿಂದ ಇಲ್ಲಿಗೆ ಬಂದಿದ್ದಾನೆ. ಅವನ

ಕಾರುಣ್ಯವನ್ನು ನೀನೇ ಪ್ರತ್ಯಕ್ಷವಾಗಿ ನೋಡುತ್ತಿರುವೆ!! ಅವನ ಕಾರುಣ್ಯ ವನ್ನು ವರ್ಣಿಸುವರಾರು!! ಪ್ರಕೃತಿಯ ಸಂಪರ್ಕದಿಂದ ದೂರವಿರುವ ಭಗವಂತ ಕೆಲವೊಮ್ಮೆ ಪ್ರಕೃತಿಯ ಸಂಪರ್ಕವನ್ನಿಟ್ಟುಕೊಂಡು ಆಟವಾಡುತ್ತಾನೆ. ಜಗತ್ತಿನ ಸೃಷ್ಟಿ ಸಂರಕ್ಷಣೆಗಳಿಂದ ಅವನಿಗಾಗಬೇಕಾದ್ದೇನೂ ಇಲ್ಲ. ಕರುಣಾಲವಾಲನಾದ ಶ್ರೀಕೃಷ್ಣನು ಗೋಪಾಲಬಾಲಕರೊಟ್ಟಿಗೆ ಅವರಂತೆ ವೇಷಭೂಷಣಗಳ ತೊಟ್ಟು ಸಂಚರಿಸಿದ. ಅವನ ಮಹಿಮೆಯನ್ನು ಭೀಷ್ಮರು ಹೀಗೆ ವಿಸ್ತಾರವಾಗಿ ಬಣ್ಣಿಸುತ್ತಾ ಮುಂದೆ ಒಂದು ಪ್ರಸಂಗವನ್ನು ನೆನಪುಮಾಡಿಕೊಳ್ಳುತ್ತಾರೆ–

## ಶ್ರೀಕೃಷ್ಣನ ಆಯ್ಕೆಯ ಕಥೆಯಲ್ಲೊಂದು ಸಂದೇಶ

ಒಮ್ಮೆ ಶ್ರೀಕೃಷ್ಣನು ಅರಮನೆಯಲ್ಲಿ ನಿದ್ರೆಯ ನಟನೆಯಲ್ಲಿ ವಿಹರಿಸುತ್ತಿದ್ದ. ಇದೇ ಸಂದರ್ಭದಲ್ಲಿ 'ಯುದ್ಧಸಹಾಯವನ್ನು ಬಯಸಿ' ಅರ್ಜುನ ದುರ್ಯೋಧನರು ಏಕಕಾಲದಲ್ಲಿ ಹೊರಟರು. ದುರ್ಯೋಧನನು ಮೊದಲು ಕೃಷ್ಣನ ಬಳಿಗೆ ಬಂದ. ಶ್ರೀಕೃಷ್ಣನು ಮಲಗಿದ್ದನ್ನು ಕಂಡು ತಾನು ರಾಜಧಿರಾಜನಾದ್ದರಿಂದ ಕೃಷ್ಣನ ಪಾದದಡಿಯಲ್ಲಿ ಕೂಡುವುದು ಉಚಿತವಲ್ಲವೆಂದು ತಲೆಯ ಬಳಿ ಕುಳಿತ. ಅನಂತರ ಅರ್ಜುನನೂ ಬಂದ. ಭಕ್ತಿಯಿಂದ ಪಾದಗಳಿಗೆ ನಮಿಸಿ ನಿಂತ. ಎಲ್ಲವನ್ನೂ ಅರಿತ ಅರವಿಂದನಯನನಾದ ಕೃಷ್ಣ ತನ್ನ ಕಣ್ಣುಗಳನ್ನರಳಿಸಿದ. ಎದುರಿಗೆ ನಿಂತ ಅರ್ಜುನ ನನ್ನು ಮೊದಲು ಕಂಡು ಕೇಳಿದ. 'ಏನು ಅರ್ಜುನ! ಆಸನ ಸ್ವೀಕರಿಸು' ಎಂದು ಸ್ವಾಗತಿಸಿದ.

ಹಿಂದಿನಿಂದ ದುರ್ಯೋಧನ ಗುಡುಗಿದ 'ಕೃಷ್ಣಾ! ನಾನು ಮೊದಲು ಬಂದವ' ಎಂದು. ಶ್ರೀಕೃಷ್ಣನು ಅವನಿಗೂ ಸ್ವಾಗತ ಹೇಳಿ ಕುಳ್ಳಿರಿಸಿದ. ಇಬ್ಬರ ಆಗಮನದ ಉದ್ದೇಶವನ್ನು ತಿಳಿದುಕೊಂಡ. ಒಬ್ಬ ಮೊದಲು ಬಂದವ, ಒಬ್ಬ ಮೊದಲು ಕಂಡವ. ಇಬ್ಬರಿಗೂ ಸಮಾನವಾಗಿ ಸಹಾಯ ಮಾಡುತ್ತೇನೆ. ಒಂದು ಕಡೆ ನಿರಾಯುಧನಾಗಿ ನಾನಿರುತ್ತೇನೆ. ಮತ್ತೊಂದು ಕಡೆ ಹತ್ತುಲಕ್ಷ ನಾರಾಯಣೀ ಸೈನ್ಯ. ನೀವೇ ಆಯ್ಕೆ ಮಾಡಿರೆಂದು ತಿಳಿಸಿ, ಮೊದಲು ಅರ್ಜುನನಿಗೆ ಕೇಳು! ಎಂದ. ದುರ್ಯೋಧನನು ಸೈನ್ಯವನ್ನು ಬಯಸಿದ್ದ. ಅರ್ಜುನ ಇದನ್ನೇ ಕೇಳಿದರೆ ಏನು ಮಾಡುವುದೆಂದು ಆಲೋಚಿಸುತ್ತಿರುವಾಗ ಅರ್ಜುನನು ಭಕ್ತಿಯಿಂದ ಶ್ರೀಕೃಷ್ಣನನ್ನೇ ಬೇಡಿದ. ದುರ್ಯೋಧನನು ಅಬ್ಬಾ! ನಾನು ಗೆದ್ದೆ. ನಾನು ಬಯಸಿದ ಸೈನ್ಯರಾಶಿ ಸಿಕ್ಕಿತೆಂದು ಸಂತೋಷದಿಂದ ನಡೆದ.

ಇದರಲ್ಲಿ ಸಂದೇಶವೊಂದು ಅಡಗಿದೆ. ನಮ್ಮ ಜೀವನದಲ್ಲಿಯೂ ಎರಡು ವಸ್ತುಗಳು ನಮ್ಮ ಮುಂದೆ ಇವೆ. ಒಂದು ಭಗವಂತ. ಮತ್ತೊಂದು ಐಹಿಕ ವಿಷಯಸಾಮಗ್ರಿಗಳು. ಈ ಎರಡರಲ್ಲಿ ನಮಗೆ ಒಂದನ್ನು ಮಾತ್ರ ಸ್ವೀಕರಿಸಲು ಅವಕಾಶ. ಭಗವಂತ ಅಥವಾ ವಿಷಯಸಾಮಗ್ರಿ. ಒಂದು ಶ್ರೇಯಸ್ಸು ಮತ್ತೊಂದು ಪ್ರೇಯಸ್ಸು. ಭೌತಿಕಸಂಪತ್ತು, ಅಧಿಕಾರ, ಕೀರ್ತಿ, ಪ್ರತಿಷ್ಠೆಗಳನ್ನು ಕೇಳಬಹುದು

ಅಥವಾ ಭಗವಂತನನ್ನೇ ಬೇಡಬಹುದು. ಈ ಎರಡರಲ್ಲಿ ಆಯ್ಕೆಮಾಡುವ ಸಂದರ್ಭಗಳು ಬರುತ್ತವೆ. ಇವೆರಡು ಬೇಡುವವನ ವ್ಯಕ್ತಿತ್ವಕ್ಕೆ ಹಿಡಿದ ಕೈಗನ್ನಡಿಗಳಂತಿವೆ. ಅರ್ಜುನನಂತೆ ಕೃಷ್ಣನನ್ನೇ ಬಯಸಿ ಭಾಗ್ಯಶಾಲಿಗಳೂ ಆಗಬಹುದು. ಸೈನ್ಯವನ್ನು ಬಯಸಿದ ದುರ್ಯೋಧನನಂತೆ ಆಮಿಷಗಳನ್ನು ಬಯಸಿ ಭವ ಕಾಂತಾರದ ಗರ್ತದಲ್ಲಿಯೂ ಬೀಳಬಹುದು. ಸಂಧ್ಯಾಕಾಲದಲ್ಲಿ ಶ್ರೀಕೃಷ್ಣನ ಮಂದಿರಗಳಿವೆ. ಸಾಗಿ ಅಲ್ಲಿ ನಡೆಯುವ ಭಾಗವತಾದಿ ಪುರಾಣಗಳನ್ನೂ ಕೇಳ ಬಹುದು. ಅಥವಾ ಮನೆಯಲ್ಲಿಯೇ ದೂರದರ್ಶನದ ಮುಂದೆ ಕುಳಿತು ಶ್ರೀಮದಾಚಾರ್ಯರ ದರ್ಶನದಿಂದ ದೂರವಾಗಿ ಶ್ರೀಕೃಷ್ಣನಿಂದಲೂ ದೂರವಾಗ ಬಹುದು. ಈ ಎರಡರಲ್ಲಿ ಒಂದನ್ನು ಆಯ್ಕೆ ಮಾಡು ವುದು ನಮ್ಮ ಕೈಯಲ್ಲಿದೆ ಎಂಬ ಸಂದೇಶವನ್ನು ಶ್ರೀಕೃಷ್ಣ ತನ್ನ ವರ್ತನೆಯಿಂದ ನಮಗೆ ತಿಳಿಸಿಕೊಟ್ಟಿದ್ದಾನೆ.

## ಹರಿಕರುಣೆಗೆ ಎಣೆ ಉಂಟೇ?!

ಅನಂತರ ಭೀಷ್ಮಾಚಾರ್ಯರು ಅರ್ಜುನನ ಬಳಿ ಶ್ರೀಕೃಷ್ಣನು ಆಡಿದ ಮಾತನ್ನು ತಿಳಿದುಕೊಂಡರು. ಶ್ರೀಕೃಷ್ಣನು 'ಆಯುಧವನ್ನೇ ಧರಿಸಲಾರೆ' ಎಂದು ಪ್ರತಿಜ್ಞೆ ಮಾಡಿದ್ದರೆ; ಭೀಷ್ಮಾಚಾರ್ಯರು 'ಶ್ರೀಕೃಷ್ಣನ ಕೈಯಲ್ಲಿ ಆಯುಧವನ್ನು ಹಿಡಿಸಿಯೇ ತೀರುತ್ತೇನೆಂದು' ಪ್ರತಿಜ್ಞೆ ಮಾಡಿದರು. ಅದರಂತೆ ರಣರಂಗದಲ್ಲಿ ಪುಂಖಾನು ಪುಂಖವಾಗಿ ಶ್ರೀಕೃಷ್ಣನ ಮೇಲೆ ಚಿತ್ರಪುಂಖಗಳನ್ನು ಪ್ರಯೋಗಿಸಿದ್ದರು. ಶ್ರೀಕೃಷ್ಣನನ್ನು ಬಾಣಗಳಿಂದ ಚುಚ್ಚಿ ಚುಚ್ಚಿ ರೊಚ್ಚಿಗೆಬ್ಬಿಸಿ ಚಕ್ರ ಹಿಡಿಸಲೇ ಬೇಕೆಂದು ಭೀಷ್ಮರ ಪ್ರಯತ್ನ. ಭೀಷ್ಮರು ತಮ್ಮ ಪ್ರತಿಜ್ಞೆಯನ್ನು ಪೂರೈಸಿಕೊಳ್ಳಬೇಕೆಂದು ನಡೆಸುತ್ತಿರುವ ಪ್ರಯತ್ನವನ್ನು ಕಂಡ ಶ್ರೀಕೃಷ್ಣನು, ತನ್ನ ಭಕ್ತನ ಬಯಕೆಯನ್ನೀಡೇರಿಸುವುದಕ್ಕಾಗಿ ತನ್ನ ಪ್ರತಿಜ್ಞೆಯನ್ನು ಸಡಿಲುಗೊಳಿಸಿದ. ರಣರಂಗದಲ್ಲಿ ನಿಂತ ಶ್ರೀರಂಗನ ಮುಖಾರವಿಂದ ರಂಗೇರಿತು. ಚಕ್ರ ಧರಿಸಿದ. ರಥದಿಂದ ಧುಮುಕಿದ. ಅರ್ಜುನನು 'ಕೃಷ್ಣ! ರಥದಿಂದ ಇಳಿಯಬೇಡ. ಭೀಷ್ಮರನ್ನು ಹೊಡೆಯಬೇಡ' ಎಂದು ತಡೆದರೂ ಅಪರಾಧಿಯ ಶಿರ ತರಿಯುವೆನೆಂದು ಬಿರುಸಿನಿಂದ ಭೀಷ್ಮರೆಡೆ ಸಾಗಿದ. ಈ ದೃಶ್ಯವನ್ನು ಭೀಷ್ಮರು ಸ್ಮರಿಸಿಕೊಳ್ಳುತ್ತಾರೆ.

**ಶಿತವಿಶಿಖಹತೋ ವಿಶೀರ್ಣದಂಶಃ**
**ಕ್ಷತಜಪರಿಪ್ಲುತ ಆತತಾಯಿನೋ ಮೇ ।**
**ಪ್ರಸಭಮಭಿಸಸಾರ ಮದ್ವಧಾರ್ಥಂ**
**ಸ ಭವತು ಮೇ ಭಗವಾನ್ ಮುದೇ ಮುಕುಂದಃ ॥** — ೧-೯-೩೮

"ನನ್ನ ತೀಕ್ಷ್ಣವಾದ ಬಾಣಗಳಿಂದ ಹೊಡೆಯಲ್ಪಟ್ಟ ಶ್ರೀಕೃಷ್ಣನು ತಾನು ಸ್ವತಃ ನಿರ್ವಿಕಾರಿಯಾಗಿದ್ದರೂ, ನನ್ನ ಮೇಲಿನ ಕರುಣೆಯಿಂದ ಕವಚ ಹರಿದುಕೊಂಡು, ರಕ್ತಸುರಿಸಿಕೊಂಡು, ಚಕ್ರಧರಿಸಿದ, 'ನಿನ್ನನ್ನು ತರಿಯುವೆ' ಎಂದು ನನಗಭಿ

ಮುಖನಾಗಿ ಓಡಿಬಂದ ಭಗವಾನ್ ಮುಕುಂದನು ನನಗೆ ಉತ್ತಮ ಗತಿಯನ್ನು ನೀಡಲಿ!!" ಎಂದು ಪ್ರಾರ್ಥಿಸುತ್ತಾರೆ.

ಭೀಷ್ಮರಿಗೆ ತಮ್ಮ ಅವಸಾನಕಾಲದಲ್ಲಿಯೂ ಪಾರ್ಥಸಾರಥಿಯ ರೂಪ ಕಣ್ಣು ಕಟ್ಟುತ್ತಿದೆ. ಕರುಣಾಮಯಿಯಾದ ಶ್ರೀಕೃಷ್ಣ ಪಾಂಡವರ ಮನೋರಥವನ್ನೀಡೇರಿಸಲು ಸಾರಥಿಯಾಗಿ ವಿಜಯನ ರಥವನ್ನೇರಿದ. ಅರ್ಜುನನ ಮಾತಿನಂತೆಯೇ ಸೇನೆಗಳ ನಡುವೆ ರಥ ನಿಲ್ಲಿಸಿದ. ದೃಷ್ಟಿ ಹಾಯಿಸಿದ. ಎಲ್ಲರ ಆಯುಷ್ಯವನ್ನೇ ಅಪಹರಿಸಿದ. ಬಂಧುಸ್ನೇಹದಿಂದ ಬಸವಳಿದ ಅರ್ಜುನನಿಗೆ 'ಹೇ ಸವ್ಯಸಾಚಿನ್! ನಿಮಿತ್ತಮಾತ್ರಂ ಭವ!' ಎಂದು ಧೈರ್ಯತುಂಬಿದ. ಕುರುಕುಲವನ್ನೇ ಪುಡಿಗುಟ್ಟಿದ. ಹೀಗೆ ಕೇವಲ ತನ್ನ ದೃಷ್ಟಿಮಾತ್ರದಿಂದಲೇ ನಮ್ಮೆಲ್ಲರ ಸೊಕ್ಕನ್ನಡಗಿಸಿದ ಶ್ರೀಕೃಷ್ಣನನ್ನು ಹೇಗೆ ಮರೆಯಲಿ!! ಅವನ ದಯೆ ಸದಾ ಇರಲಿ!!

ಲಲಿತಾಂಗಿಯರಾದ ಗೋಪಿಯರೂ ಸಹ ಯಾವ ಶ್ರೀಕೃಷ್ಣನ ಮಂದಗಮನ, ಬೆಡಗು–ವೈಯಾರ, ಮಂದಹಾಸ, ಸವಿನೋಟಗಳಿಗೆ ವಶರಾದರೋ ಅಂತಹ ದಯಾಮೂರ್ತಿಯ ಕರುಣೆ ಎಂಬ ಬೆಳಕು ನನ್ನ ಮೇಲೆ ಹರಿಯಲಿ!!

ಹೀಗೆ ಜಗದೋದ್ಧಾರನಾದ ಶ್ರೀಕೃಷ್ಣನ ಅನೇಕ ಮುಖಗಳನ್ನು ಭೀಷ್ಮರು ಭಕ್ತಿಯಿಂದ ಸ್ಮರಿಸಿಕೊಳ್ಳುತ್ತಿದ್ದಾರೆ.

ಗೀತೋಪದೇಶ ಕೃಷ್ಣ! ಗೋಪಾಲಕ ಕೃಷ್ಣ! ರಾಸಕ್ರೀಡಾ ವಿಹಾರ ಶ್ರೀಕೃಷ್ಣ! ರಾಜಸೂಯಾಧ್ವರದಲ್ಲಿ ಅಗ್ರಪೂಜೆಯನ್ನು ಸ್ವೀಕರಿಸಿದ ಜಗತ್ಪತಿಯಾದ ಶ್ರೀಕೃಷ್ಣ! ಮುಂತಾಗಿ ಸ್ಮರಿಸಿಕೊಂಡು ತಮ್ಮ 'ದ್ಯು'ನಾಮಕ ಮೂಲರೂಪವನ್ನು ಸ್ಮರಿಸಿ ಕೊಂಡು ಹರಿಯ ಅಡಿಯಲ್ಲಿಯೇ ತಮ್ಮ ಪವಿತ್ರ ಪ್ರಾಣವನ್ನರ್ಪಿಸುವ ಸೌಭಾಗ್ಯವನ್ನು ಭೀಷ್ಮರು ಪಡೆದರು.

## ಶ್ರೀಕಾಂತನ ಕಾಂತಿ ನಿತ್ಯನೂತನ

ಧರ್ಮರಾಜನು ಹಸ್ತಿನಾವತಿಯಲ್ಲಿ ರಾಜ್ಯವನ್ನು ಯೋಗ್ಯ ರೀತಿಯಲ್ಲಿ ಪರಿಪಾಲಿಸುತ್ತಿರಲು; ಭಗವಾನ್ ಶ್ರೀಕೃಷ್ಣನು ಪಾಂಡವರನ್ನು ಅನುಗ್ರಹಿಸಿ ದ್ವಾರಕೆಗೆ ಹೊರಟಿದ್ದಾನೆ. ಹಸ್ತಿನಾವತಿಯ ನಾಗರಿಕರೆಲ್ಲರೂ ಶ್ರೀಕೃಷ್ಣನ ವಿರಹವನ್ನು ಸಹಿಸಲಾರದವರಾದರು. ಕಣ್ಣೀರು ಸುರಿಸಲಾರಂಭಿಸಿದರು. ತನ್ನ ಸಹವಾಸದಿಂದ ಮೋಕ್ಷಸುಖವನ್ನುಣಬಡಿಸಿದ ಶ್ರೀಕೃಷ್ಣನ ವಿರಹವನ್ನು ಹೇಗೆತಾನೆ ಸಹಿಸಿಯಾರು?! ಇಷ್ಟು ಕಾಲ ಅವನೊಂದಿಗೇ ಇದ್ದು, ಅವನ ದರ್ಶನ, ಸ್ಪರ್ಶನ, ಶಯನ, ಆಸನ, ಭೋಜನಗಳಿಂದ ಸುಖಿಸುತ್ತಿದ್ದ ಭಕ್ತರೆಲ್ಲರೂ ದ್ವಾರಕೆಗೆ ಹೊರಟ ಶ್ರೀಕೃಷ್ಣನನ್ನೇ ಅನಿಮಿಷರಾಗಿ ನೋಡತೊಡಗಿದರು. ಅವನು ಹೊರಟದ್ದನ್ನು ಕಂಡೊಡನೆಯೇ ಅವರಿಗೆ ಹೃದಯ ಉಕ್ಕಿ ಬಂತು.

**ನ್ಯರುಂಧನ್ನುದ್ಗಲದ್ಬಾಷ್ಪಮೌತ್ಕಂಠ್ಯಾದ್ದೇವಕೀಸುತೇ ।**
**ನಿರ್ಯಾತ್ಯಗಾರಾನ್ನೋಽಭದ್ರಮಿತಿ ಸ್ಯಾದ್ಬಾಂಧವ ಸ್ತ್ರಿಯಃ ॥ ೧–೧೦–೧೫ ॥**

"ಮನೆಯಿಂದ ಕೃಷ್ಣ ಹೊರಟಾಗ, ಮನದನ್ನೆಯರು ಗೋಳಾಡಿದರು. ಪ್ರಾಣ ಕಾಂತನ ವಿರಹವನ್ನು ತಾಳಲಾರದೆ ಹೃದಯ ಬಿರಿದು ಕಣ್ಣೀರಿನ ಕೋಡಿ ಹರಿಯಿತು; ಆದರೂ ಪ್ರಯಾಣಕಾಲದಲ್ಲಿ ಕಣ್ಣೀರಿನಿಂದ ಅಮಂಗಳವಾದೀತೆಂದು ಕಷ್ಟದಿಂದ ತಡೆಹಿಡಿದರು."

ದ್ವಾರಕೆಯ ಜನರು ಇವರಿಗಿಂತಲೂ ಹೊರತಾದವರೇನಲ್ಲ. 'ಶ್ರೀಕೃಷ್ಣನು ಯಾವಾಗ ಬರುವನೋ! ಇನ್ನೂ ಬರಲೇ ಇಲ್ಲ' ಎಂಬ ವ್ಯಥೆಯಿಂದ ಮಥಿತ ರಾಗಿದ್ದರು. 'ಶ್ರೀಕೃಷ್ಣನು ಕ್ಷಣಕಾಲ ಅಗಲಿದರೂ ಯುಗ ಕಳೆದಂತೆ' ಎನ್ನುತ್ತಿದ್ದರು. ಗೋಪಿಯರೂ ಶ್ರೀಕೃಷ್ಣನಲ್ಲಿ ಹೀಗೆಯೇ ಹೇಳಿದ್ದಾರೆ. 'ತ್ರುಟಿರ್ಯುಗಾಯತೇ ತ್ವಾಮಪಶ್ಯತಾಮ್' ಎಂದು. ಅಂದಿನ ಸಜ್ಜನ ಮಂದಿಗೆಲ್ಲ ಶ್ರೀಕೃಷ್ಣನ ನೋಟವೇ ಭರ್ಜರಿ ಭೋಜನಕೂಟ. ಕೃಷ್ಣನ ನಗುಮೊಗದಲ್ಲಿ ಕ್ಷಣಕ್ಷಣಕ್ಕೂ ಹೊಸತನವನ್ನು ಕಂಡ ಭಾಗ್ಯವಂತರವರು.

ನಮಗೂ ಸಹ ಇಂದು ಉಡುಪಿ ಶ್ರೀಕೃಷ್ಣನನ್ನು ಎಷ್ಟು ನೋಡಿದರೂ ತೃಪ್ತಿ ಯಾಗದು. ಮತ್ತಷ್ಟು ನೋಡುತ್ತಲೇ ಇರೋಣವೆನ್ನಿಸುತ್ತದೆ.

ತಿರುಪತಿಯಲ್ಲಿ ಶ್ರೀನಿವಾಸನನ್ನು ಕಂಡಾಗ, ಪಂಢರಾಪುರದ ವಿಟ್ಠಲನನ್ನು ನೋಡಿದಾಗ ಅವ್ಯಕ್ತಾನಂದವನ್ನನುಭವಿಸುತ್ತೇವೆ. ದೇಹ ಬಂದರೂ ಮನಸ್ಸು ಅಲ್ಲಿಯೇ ಇರುತ್ತದೆ. ಒಂದು ಮಣ್ಣಿನ ಪ್ರತಿಮೆಯಲ್ಲಿಂಯೇ ಮಣ್ಣಿನ ಕಣ್ಣಿನಿಂದಲೇ ಕ್ಷಣಕ್ಷಣಕ್ಕೂ ಹೊಸತನವ ಸೂಸುವ ಭವ್ಯರೂಪವನ್ನು ಕಾಣುತ್ತೇವೆ. ಹೀಗಿರುವಾಗ ಸಾಕ್ಷಾತ್ ಶ್ರೀಕೃಷ್ಣಪರಮಾತ್ಮನನ್ನೇ ಕಂಡರೆ ಆಗುವ ಆನಂದ ಅನುಭವವೆಂತು? ಬಣ್ಣಿಸಲಾದೀತೆ!! ಇಂತಹ ಆನಂದದ ಮಹಲುಗಳನ್ನು ಏರಿದ ಭಾಗ್ಯವಂತರು ಅಂದಿನ ಸಜ್ಜನರು. ಅವರು ನಿರಂತರ ಶ್ರೀಕೃಷ್ಣನನ್ನು ನೋಡುತ್ತಿದ್ದರು. ತೃಪ್ತಿಯ ತೀರವನ್ನು ಮುಟ್ಟಲೇ ಇಲ್ಲ. ನೃತ್ಯ, ಗೀತ, ವಾದ್ಯಗಳಿಂದ, ಪುಷ್ಪವೃಷ್ಟಿಗಳಿಂದ, ವೇದಘೋಷಗಳಿಂದ ಶ್ರೀಕೃಷ್ಣನನ್ನು ಬೀಳ್ಕೊಟ್ಟರು.

## ವ್ಯಕ್ತಾವ್ಯಕ್ತರೂಪನಾದ ಶ್ರೀಹರಿ

ಪರಸ್ಪರ ಎಲ್ಲರೂ ಶ್ರೀಕೃಷ್ಣನನ್ನು ಕೊಂಡಾಡತೊಡಗಿದರು. ಮಹಾಪ್ರಲಯದಲ್ಲಿ ವಿಶ್ವರೂಪಿಯಾದ ಭಗವಂತನು ಜಗತ್ತೆಲ್ಲವನ್ನೂ ಸಂಹರಿಸಿ ವಟಪತ್ರಶಾಯಿ ಯಾಗಿದ್ದಾನೆ. ನಿದ್ರೆ ಎನ್ನುವುದು ಸಂಸಾರಿಗಳ ಸಂಕೇತ. ಇಲ್ಲಿ ಭಗವಂತನ ನಿದ್ರೆ ಎಂದರೆ, ತಾನು ಮಾಡಿದ ಸೃಷ್ಟಿಯನ್ನೆಲ್ಲ ಸಂಕೋಚಗೊಳಿಸಿ ಅವ್ಯಕ್ತ ರೂಪದಿಂದ ಇರುವುದು. ಅವನಲ್ಲಿರುವ ಶಕ್ತಿಯಲ್ಲಿಯೂ ವೃದ್ಧಿಹ್ರಾಸಗಳಿರುವುದಿಲ್ಲ. ಪ್ರಳಯ ಕಾಲದಲ್ಲಿ ತನ್ನ ಶಕ್ತಿಯನ್ನು ಪ್ರಕಟಗೊಳಿಸುವುದಿಲ್ಲ. ಸೃಷ್ಟಿಯ ಕಾಲದಲ್ಲಿ ತನ್ನ ಶಕ್ತಿಯನ್ನು ಪ್ರಕೃತಿಯಲ್ಲಿ ತುಂಬಿ ಅದರ ಮೂಲಕ ವಿಶಾಲವಾದ ಜಗತ್ತಿನ ನಿರ್ಮಾಣಕಾರ್ಯವನ್ನು ಮಾಡುತ್ತಾನೆ. ಚೇತನಾಚೇತನಾತ್ಮಕವಾದ ಸಮಸ್ತ ವಸ್ತುಗಳಲ್ಲಿಯೂ ಕ್ರಿಯೆ ಎನ್ನುವುದಾಗಲೀ ಅಸ್ತಿತ್ವವಾಗಲೀ ಭಗವಂತನಿಂದಲೇ

ಸಾಧ್ಯ. ಒಂದು ವಸ್ತುವಿನಲ್ಲಿ ಕ್ರಿಯೆಯು ನಡೆಯಬೇಕಿದ್ದರೆ ಅದರಲ್ಲಿ ಭಗವಂತ ಪ್ರವೇಶಿಸಿರಬೇಕು. 'ತತ್ಸೃಷ್ಟ್ವಾ ತದೇವಾನುಪ್ರಾವಿಶತ್' ಎಂಬ ಶ್ರುತಿಯೂ ಇದನ್ನೇ ನಾರುತ್ತಿದೆ. ಭಾಗವತವೂ ಇದನ್ನೇ ಸಾರಿದೆ–

ಸ ಏವ ಭೂಯೋ ನಿಜವೀರ್ಯಚೋದಿತಾಂ
ಸ್ವಜೀವಮಾಯಾಂ ಪ್ರಕೃತಿಂ ಸಿಸೃಕ್ಷತೀಮ್ ।
ಅನಾಮರೂಪಾತ್ಮನಿ ರೂಪನಾಮನೀ
ವಿಧಿತ್ಸಮಾನೋಽನುಸಸಾರ ಶಾಸ್ತ್ರಕೃತ್ ॥ ೧–೧೦–೨೨ ॥

ನಮ್ಮೆಲ್ಲರ ದೇಹದ ಆತ್ಮ ಜೀವ. ದೇಹದೊಳಗೆ ಜೀವಾತ್ಮನಿದ್ದಾಗ ದೇಹದ ಚಟುವಟಿಕೆ. ಜೀವಾತ್ಮನಿಲ್ಲದಿರೆ ದೇಹ ನಿಷ್ಕ್ರಿಯ. ಈ ದೇಹದ ಆತ್ಮ ಜೀವನಾಗಿದ್ದರೆ ಸಮಗ್ರ ಪ್ರಪಂಚದ ಆತ್ಮ ಭಗವಂತ. ಜಗತ್ತು ಭಗವಂತನ ಶರೀರವಿದ್ದಂತೆ. ಅವನು ಈ ಪ್ರಕೃತಿಯ ಒಳಗೆ ನೇರಿದಾಗ ಎಲ್ಲ ಕ್ರಿಯೆಗಳು ಆರಂಭವಾಗುತ್ತವೆ. ಭಗವಂತನಿಲ್ಲದಿರೆ ಜಗತ್ತೇ ಸ್ತಬ್ಧ. ಆದ್ದರಿಂದ ಭಗವಂತನೇ ವಿಶ್ವಾತ್ಮನಾಗಿದ್ದಾನೆ.

ಪ್ರಳಯಕಾಲದಲ್ಲಿ ಅವ್ಯಕ್ತನಾದ ಶ್ರೀಹರಿ ಸೃಷ್ಟಿಕಾಲದಲ್ಲಿ ವ್ಯಕ್ತನಾಗಿ ಚಿತ್ರ ವಿಚಿತ್ರವಾದ ಅದ್ಭುತವಾದ ಜಗತ್ತನ್ನು ನಿರ್ಮಿಸಿ, ಜಡಚೇತನರಿಂದ ನೂರಾರು ವ್ಯಾಪಾರಗಳನ್ನು ಮಾಡಿಸುತ್ತಾನೆ. ಇಂತಹ ಭಗವಂತ ಎಲ್ಲೆಡೆಯೂ ವ್ಯಾಪ್ತ ನಾಗಿದ್ದರೂ ನಮಗೆ ಕಾಣಿಸನು. ಭಕ್ತಿಯಿಂದ ಸ್ತೋತ್ರಮಾಡಿದಾಗ ನಮ್ಮ ಮೇಲಿನ ಕರುಣೆಯಿಂದ ತನ್ನನ್ನು ತೋರಿಸಿಕೊಳ್ಳುತ್ತಾನೆ. ಆದ್ದರಿಂದಲೇ ವ್ಯಕ್ತಾವ್ಯಕ್ತನೆನಿಸಿದ್ದಾನೆ.

ಇದರಂತೆ ಭಗವಂತನು ಅರೂಪನೂ ಆಗಿದ್ದಾನೆ. ರೂಪವುಳ್ಳವನೂ ಆಗಿದ್ದಾನೆ. ನಮ್ಮಂತೆ ಪಾಂಚಭೌತಿಕವಾದ ರೂಪವಿಲ್ಲವಾದ್ದರಿಂದ ಅರೂಪನೆನಿಸುತ್ತಾನೆ. ಅಪ್ರಾಕೃತ ಜ್ಞಾನಾನಂದಾತ್ಮಕ ವಿಗ್ರಹನಾದ್ದರಿಂದ ರೂಪಾತ್ಮಕನೂ ಆಗಿದ್ದಾನೆ.

ಭೌತಿಕರೂಪವು ಅಲ್ಪತೆಯನ್ನು ಅಪೂರ್ಣತೆಯನ್ನು ಸೂಚಿಸುತ್ತದೆ. ಉದಾ: ಹಂದಿ, ನಾಯಿ ಮುಂತಾದ ಪ್ರಾಣಿಗಳು ಅಶುಚಿಯಾಗಿರುತ್ತವೆ. ಅವುಗಳ ಸಂಪರ್ಕ ಆನಂದ ನೀಡದು. ಆದರೆ ಅದೇ ರೀತಿಯ ಹಂದಿ, ನಾಯಿ ಮುಂತಾದ ಪ್ರಾಣಿಗಳನ್ನು ಸಕ್ಕರೆಯಿಂದ ಮಾಡಿದಾಗ ಮಕ್ಕಳು ಸಂತೋಷದಿಂದ ಅವುಗಳನ್ನು ಸ್ವೀಕರಿಸುತ್ತಾರೆ. ಆದ್ದರಿಂದ ಕೇವಲ ಆಕೃತಿಯೇ ಹೊಲಸಲ್ಲ. ಆಕೃತಿಗೆ ಕಾರಣವಾದ ಪ್ರಕೃತಿ ಹೊಲಸು. ಅದರಂತೆ ಭಗವಂತನಿಗೆ ಆಕಾರವಿಲ್ಲ ಎಂದರೆ ಭೌತಿಕ ಆಕಾರವಿಲ್ಲವೆಂದರ್ಥವೇ ಹೊರತು ಆಕಾರವೇ ಇಲ್ಲವೆಂದಲ್ಲ. ಬಂಗಾರದ ಬಗೆಬಗೆಯ ಪ್ರತಿಮೆಗಳಂತೆ ಭಗವಂತನಿಗೆ ಚಿನ್ಮಯವಾದ ಅಪ್ರಾಕೃತವಾದ ರೂಪಗಳಿವೆ. ಆದ್ದರಿಂದ ರೂಪವಿದೆ, ರೂಪವಿಲ್ಲ ಎರಡೂ ಸರಿಯೇ.

ಇದರಂತೆ ಭಗವಂತನು ನಿರ್ಗುಣನೂ ಹೌದು. ಸಗುಣನೂ ಹೌದು. ಪ್ರಕೃತಿಯ ಸತ್ವ, ರಜಸ್ಸು, ತಮಸ್ಸುಗಳೆಂಬ ಗುಣಗಳಿಲ್ಲದವನಾದ್ದರಿಂದ ನಿರ್ಗುಣ ಎನಿಸಿದ್ದಾನೆ. ಅಪ್ರಾಕೃತವಾದ ಆನಂದ, ಶಕ್ತಿ ಮುಂತಾದ ಅನಂತಗುಣಗಳಿಂದ ತುಂಬಿದವ ನಾದ್ದರಿಂದ ಸಗುಣನೂ ಎನಿಸಿದ್ದಾನೆ. ಆದ್ದರಿಂದ ಗುಣವೇ ಇಲ್ಲವೆನ್ನುವುದು

ಸರಿಯಲ್ಲ. ಗುಣವೇ ಇಲ್ಲವಾದರೆ ನಾವು ಏನನ್ನು ಪ್ರೀತಿಸಬೇಕು? ಪ್ರೀತಿಸಬೇಕಾದರೆ ಸೌಂದರ್ಯ, ಶಕ್ತಿ, ಜ್ಞಾನ ಮುಂತಾದ ಸದ್ಗುಣಗಳಿರಲೇ ಬೇಕು. ಆದ್ದರಿಂದ ಭಗವಂತನಲ್ಲಿ ಅಪ್ರಾಕೃತಗುಣಗಳನ್ನು ಒಪ್ಪಿ, ಪ್ರಾಕೃತಗುಣಗಳಿಲ್ಲವೆಂದೇ ಹೇಳಬೇಕು.

ಭಾಗವತವು 'ಅನಾಮ' 'ಅರೂಪ' ಎನ್ನುತ್ತದೆ. ಅನಂತನಾದ ಶ್ರೀಕಾಂತನಿಗೆ ಅನಂತನಾಮಗಳಿವೆ. ನಮ್ಮ ಬುದ್ಧಿಗೆ ನಿಲುಕದಷ್ಟು ರೂಪಗಳಿವೆ. ಆ ದೃಷ್ಟಿಯಿಂದ 'ಅನಾಮ' 'ಅರೂಪ' ಎಂದದ್ದು. ಹೀಗೆ ಇತಿಮಿತಿಯೇ ಇಲ್ಲದವ ಎಂಬ ಅರ್ಥದಲ್ಲಿ ಇಂತಹ ಅನೇಕ ಶಬ್ದಗಳನ್ನು ವ್ಯಾಸರು ಪ್ರಯೋಗಿಸಿ ದ್ದಾರೆ. ಈ ಎಲ್ಲ ಶಬ್ದಗಳನ್ನು ಸರಿಯಾಗಿ ಅರಿತು, ಭಗವಂತನ ಮಹಿಮೆಗೆ ಚ್ಯುತಿಬಾರದಂತೆ ಅರ್ಥೈಸಬೇಕು.

## ಭಾಗವತ ತಾತ್ಪರ್ಯದಿಂದ ವಿರೋಧ ಪರಿಹಾರ

ಕೌರವ ಪಾಂಡವರು ಯುದ್ಧಕ್ಕೆ ಸಿದ್ಧರಾದಾಗ ಅದರಲ್ಲಿ ಅನಾಸಕ್ತನಾದ ವಿದುರ ತೀರ್ಥಯಾತ್ರೆಗೆ ಹೋಗಿದ್ದ. ಇತ್ತ ಯುದ್ಧವೆಲ್ಲವೂ ಮುಗಿದು ಧರ್ಮರಾಜನು ರಾಜ್ಯಪರಿಪಾಲನೆ ಮಾಡುವ ಸಂದರ್ಭದಲ್ಲಿ ವಿದುರ ಆಗಮಿಸಿದ. ಸಾತ್ವಿಕ ಶಿರೋಮಣಿಯಾದ ವಿದುರನನ್ನು ಕಂಡ ಪಾಂಡವರು ಸಂತೋಷದಿಂದ ಸ್ವಾಗತಿಸಿ, ಉಪಚರಿಸಿದರು. ಅನಂತರ ತೀರ್ಥಯಾತ್ರೆಯಲ್ಲಿ ಕಂಡ ಸಂಗತಿಗಳನ್ನೆಲ್ಲಾ ತಿಳಿಸಿರಿ! ಎಂದು ಧರ್ಮರಾಜನು ಕೇಳುತ್ತಾನೆ. ಅದರಂತೆ ವಿದುರನು ಎಲ್ಲಾ ವೃತ್ತಾಂತಗಳನ್ನೂ ಕಂಡಂತೆಯೇ ಕ್ರಮವಾಗಿ ಬಣ್ಣಿಸಿದ. ಆದರೆ, ಒಂದು ಘಟನೆಯನ್ನು ತಿಳಿಸುವುದೇ ಇಲ್ಲ. 'ಯಾದವರೆಲ್ಲರೂ ಕೊನೆಗೊಮ್ಮೆ ಪರಸ್ಪರ ಕಾದಾಡಿ ಮೃತರಾದರು' ಎಂಬ ವಿಷಯ ಒಂದನ್ನು ಬಿಟ್ಟು, ಉಳಿದೆಲ್ಲ ಸಂಗತಿಗಳನ್ನು ಬಣ್ಣಿಸಿದ ಎಂಬ ಮಾತು ಬಂದಿದೆ.

**ಇತ್ಯುಕ್ತೋ ಧರ್ಮರಾಜೇನ ಸರ್ವಂ ತತ್ಸಮವರ್ಣಯತ್ ।**
**ಯಥಾನುಭೂತಂ ಕ್ರಮಶೋ ವಿನಾ ಯದುಕುಲಕ್ಷಯಮ್ ॥** — ೧-೧೩-೧೨

ಇಲ್ಲಿ ಒಂದು ಸಂಶಯ ಬರುತ್ತದೆ.

ವಿದುರ, ಧೃತರಾಷ್ಟ್ರ ಇವರೆಲ್ಲರೂ ಪಾಂಡವರಿಗಿಂತಲೂ ಇಪ್ಪತ್ತಾರು ವರ್ಷಗಳ ಮೊದಲೇ ಭೂಲೋಕವನ್ನು ತೊರೆದುಹೋಗುತ್ತಾರೆ. ಇವರು ಭೂಲೋಕ ತ್ಯಜಿಸಿ ಅನೇಕ ವರ್ಷಗಳು ಕಳೆದ ಬಳಿಕ ಯಾದವರ ಕದನ ನಡೆದದ್ದು. ವಿದುರನ ಜೀವಿತಾವಧಿಯಲ್ಲಿ ನಡೆದೇ ಇಲ್ಲ. ಹೀಗಿರಲು 'ವಿದುರನು ಯದುಕುಲಕ್ಷಯದ ವಿಷಯವನ್ನು ಗುಟ್ಟಾಗಿ ಇಟ್ಟ' ಎಂಬ ಭಾಗವತದ ಮಾತು ಎಷ್ಟು ಸಮಂಜಸ? ಎಂದು ಭಾಗವತದ ಮೇಲೆ ಆಕ್ಷೇಪ ಬಂದಾಗ ಶ್ರೀಮದಾಚಾರ್ಯರು ಭಾ. ತಾತ್ಪರ್ಯದಲ್ಲಿ ಉತ್ತರಿಸುತ್ತಾರೆ.

'ಯದುಕುಲಕ್ಷಯ' ವಿದುರನ ಜೀವಿತಾವಧಿಯಲ್ಲಿ ನಡೆಯದಿದ್ದರೂ, ಮುಂದೆ ಸಂಭವಿಸುತ್ತದೆಂದು ಜ್ಞಾನಿಗಳಾದ ಮೈತ್ರೇಯರಿಂದ ತಿಳಿದುಕೊಂಡಿದ್ದ. ಮುಂದಿನ

ಸಂಗತಿ ತಿಳಿದಿದ್ದರೂ ತಿಳಿಸಲಿಲ್ಲ. 'ಅಪ್ರಿಯವಾದ ಸತ್ಯವನ್ನು ನುಡಿದು ಪಾಂಡವರಿಗೆ ದುಃಖವನ್ನುಂಟುಮಾಡಬಾರದೆಂಬುದೇ ಹೇಳದಿರಲು ಕಾರಣ'. ಹೀಗೆ ಅಲ್ಲಲ್ಲಿ ಬರುವ ಗೊಂದಲಗಳನ್ನು ಶ್ರೀಮದಾಚಾರ್ಯರು ಪ್ರಮಾಣಬದ್ಧವಾಗಿ ಪರಿಹರಿಸಿ ಉಪಕರಿಸಿದ್ದಾರೆ.

ಮುಂದೆ ವಿದುರನು ಧೃತರಾಷ್ಟ್ರನ ಸದನಕ್ಕೆ ನಡೆದ. ಧೃತರಾಷ್ಟ್ರನಿಗೆ ವಿಷಯ ವೈರಾಗ್ಯವನ್ನು ಹುಟ್ಟಿಸಬೇಕೆಂಬ ಕಾರಣದಿಂದ ಅನೇಕ ವಿಧವಾದ ಮಾರ್ಮಿಕವಾದ ವೈರಾಗ್ಯೋಪದೇಶವನ್ನು ನೀಡಿದ.

## ಕಾಲನ CALLಗೆ ತಡೆಯಿಲ್ಲ

ಧೃತರಾಷ್ಟ್ರ ದುರ್ಘಟನೆಗಳ ಸುರಿಮಳೆಯಲ್ಲಿ ಸ್ನಾನಮಾಡಿದವ. ತನ್ನ ವಂಶದ ಕುಡಿಗಳೆಲ್ಲಾ ತನ್ನ ಕಣ್ಣೆದುರಿಗೇ ಪುಡಿಪುಡಿಯಾದರೂ ತಾನು ಮಾತ್ರ ರಾಜ್ಯಸುಖ ದಲ್ಲಿಯೇ ಮೈಮರೆತಿದ್ದಾನೆ. ವೈರಾಗ್ಯದ ವಾಸನೆಯೂ ಇಲ್ಲದವನಾಗಿದ್ದಾನೆ.

ಈ ಸಂದರ್ಭದಲ್ಲಿ ನೀತಿವಂತನಾದ ವಿದುರ ಧೃತರಾಷ್ಟ್ರನ ಸದನಕ್ಕೆ ನಡೆದ. ನೀತಿಬೋಧಕ ನುಡಿಗಳನ್ನಾಡಿದ.

ಧೃತರಾಷ್ಟ್ರ! ಎಚ್ಚೆತ್ತುಕೋ! ಅಂತ್ಯಕಾಲದಲ್ಲಿಯೂ ವಿಷಯಭೋಗ ಸಲ್ಲದು. ಇನ್ನಾದರೂ ರಾಜ್ಯದಾಹವನ್ನು ಬಿಡು. ವಿರಕ್ತನಾಗಿ ಬದುಕು. ಕರಾಳ ಮೃತ್ಯುವು ನಿನ್ನಮೇಲೆ ಆಕ್ರಮಣ ನಡೆಸುತ್ತಿದ್ದರೂ ವಿಷಯಗಳಿಗೆ ವಶನಾಗಿಯೇ ಇರುವಿ ಯಲ್ಲಾ!! ಅಹೋ ನಿನ್ನ ಮೌಢ್ಯವೇ! ಭೋಗ ಸಾಕು. ವಿರಕ್ತನಾಗಿ ಕಾಡಿಗೆ ನಡೆ ಎಂದ.

ಇದು ಕೇವಲ ವಿದುರನ ಮಾತಲ್ಲ. ಶ್ರೀರಾಮಚಂದ್ರನ ಮಾತುಗಳೂ ರಾಮಾ ಯಣದಲ್ಲಿ ಹೃದಯಸ್ಪರ್ಶಿಯಾಗಿದೆ.

ಇಂದು 'ಹೊಸ ಯುಗಾದಿ' ಎಂದೊಡನೆ ನಲಿಯುತ್ತೇವೆ. ದೀಪಾವಳಿಹಬ್ಬ ಬಂದರೆ ಹೊಸ ಬಣ್ಣದ ಜಗತ್ತನ್ನೇ ನಿರ್ಮಿಸುತ್ತೇವೆ. ಹುಟ್ಟುಹಬ್ಬ ಬಂದರಂತೂ ಕೈತಟ್ಟಿ ಕುಣಿಯುತ್ತೇವೆ. ಅರುವತ್ತು ಸಂವತ್ಸರಗಳನ್ನು ಕಳೆದರೆ 'ಸಂತಸದ ತೀರ ಮುಟ್ಟಿದೆವು' ಎನ್ನುತ್ತೇವೆ.

ಆದರೆ ಇದು ಸಂತೋಷದಿಂದ ನಲಿಯುವ ಸಂದರ್ಭವಲ್ಲ. ಗಂಭೀರವಾಗಿ ಆಲೋಚಿಸಬೇಕಾದ ಸಮಯ. ಹೊಸ ಸಂವತ್ಸರಕ್ಕೆ ಕಾಲಿಟ್ಟೆವೆಂದರೆ ಮೃತ್ಯುವಿನ ಬಾಯಿಗೆ ಒಂದ್ಹೆಜ್ಜೆ ಮುಂದಿಟ್ಟೆವೆಂದರ್ಥ. ಈ ಮೃತ್ಯುವಿನ ಆಕ್ರಮಣವನ್ನರಿಯದೆ ಚಪ್ಪಾಳೆತಟ್ಟಿ ಕುಣಿಯುತ್ತೇವೆ. ಎಂತಹ ಸೋಜಿಗ! ಎನ್ನುತ್ತಾನೆ ಶ್ರೀರಾಮ.

ವಿದುರನ ಮಾತುಗಳೂ ಇದಕ್ಕೆ ಹೊರತಾಗಿಲ್ಲ.

**ಪ್ರತಿಕ್ರಿಯಾ ನ ಯಸ್ಯೇಹ ಕುತಶ್ಚಿತ್ಕರ್ಹಿಚಿತ್ಪ್ರಭೋ ।**
**ಸ ಏವ ಭಗವಾನ್ ಕಾಲಃ ಸರ್ವೇಷಾಂ ನಃ ಸಮಾಗತಃ ॥** — (೧-೧೩-೧೯)

ಪರಿಹಾರವೇ ಇಲ್ಲದ ಅಂತ್ಯಕಾಲ ಸಮೀಪಿಸುತ್ತಿದೆ ಎಚ್ಚೆತ್ತುಕೋ ಎಂದ. ದಾಸರಾಯರ ಮಾತೂ ಇದಕ್ಕೆ ಹೊರತಾಗಿಲ್ಲ.

**'ಅಂತಕನ ದೂತರಿಗೆ ಕಿಂಚಿತ್ತು ಭಯವಿಲ್ಲ**
**ಚಿಂತೆಯನು ಬಿಟ್ಟು ಶ್ರೀಹರಿಯ ನೆನೆ ಮನವೆ'**
**ಪುತ್ರ ಹುಟ್ಟಿದ ದಿವಸ ಹಾಲು ಊಟದ ಹಬ್ಬ**
**ಮತ್ತೊಬ್ಬ ಮಗನ ಉಪನಯನ ನಾಳೆ**
**ಅರ್ತಿಯಾಗಿದೆ ಬದುಕು ಸಾಯಲಾರೆನು ಎನಲು**
**ಮೃತ್ಯು ಹೆಡ ತಲೆಯಲ್ಲಿ ನಗುತಿರ್ಪುದರಿಯೆ**

–ಎಂದಿದ್ದಾರೆ. ಯಮನ ಕಾಲವೆಂದರೆ ಅಪರಿಹಾರ್ಯ CALL ಎಂದರ್ಥ. ಈ CALLಗೆ ತಡೆ ಇಲ್ಲವೇ ಇಲ್ಲ. ಕಾಲನ CALLಗೆ ನಾವೆಲ್ಲರೂ ಬದ್ಧರು.

ಕಾಡಿನಲ್ಲಿ ಚಿಗರೆಯೊಂದು ಚಿಗುರೆಲೆಯ ಮೇಯುತ್ತಾ ಮತ್ತೊಂದು ಚಿಗುರೆಲೆಯನ್ನು ತಿನ್ನಬಯಸುವಾಗ ತೋಳದ ಬಯಕೆಗೆ ಆಹಾರವಾಗಿರುತ್ತದೆ. ಸಂಸಾರವೆಂಬ ಕಾಡಿನಲ್ಲಿ ಸುಖಕ್ಕಾಗಿ ಅಲೆಯುವ ನಮ್ಮ ಸ್ಥಿತಿಯೂ ಹೀಗೆಯೇ ಆಗಿದೆ. ವಿಷಯಮಗ್ನರಾದ ನಮಗೆ ಮೃತ್ಯುವಿನ ಆಕ್ರಮಣದ ಅರಿವೇ ಇಲ್ಲ. ಮೃತ್ಯುವಿನ ಆಕ್ರಮಣಕ್ಕೆ ತುತ್ತಾಗುವುದರೊಳಗೆ ಸಾಧನೆಯ ಸೋಪಾನಗಳನ್ನೇರಬೇಕು. ಸಾರ್ಥಕ ಬಾಳ್ವೆಯನ್ನು ನಡೆಸಬೇಕು.

## ಇಂದಿನ ರಾಜಕಾರಣಿಗಳಿಗೆ ಭೀಮಸೇನನ ಎಚ್ಚರಿಕೆ!!

ವಿದುರನ ವೈರಾಗ್ಯಪೂರ್ಣವಾದ ಮಾತುಗಳನ್ನಾಲಿಸಿದ ಧೃತರಾಷ್ಟ್ರನು ಬಹಳ ದೀರ್ಘಕಾಲದಿಂದ ತನ್ನನ್ನು ಬಂಧಿಸಿದ್ದ ಅಭಿಮಾನವೆಂಬ ಪಾಶವನ್ನು ಕಿತ್ತೊಗೆದನು. ಪರಮ ವಿರಕ್ತನಾಗಿ ಕಾಡಿಗೆ ಸಾಗಬೇಕೆಂದು ನಿರ್ಧರಿಸಿದನು. ಹೊರಡುವ ಸಂದರ್ಭದಲ್ಲಿಯ ಒಂದು ಸಣ್ಣ ಘಟನೆಯನ್ನು ಶ್ರೀಮದಾಚಾರ್ಯರು ಮ.ತಾ. ನಿರ್ಣಯದಲ್ಲಿ ಉಲ್ಲೇಖಿಸಿದ್ದಾರೆ.

ಕಾಡಿಗೆ ಹೊರಡಲು ಸಿದ್ಧನಾದ ಧೃತರಾಷ್ಟ್ರನು ಧರ್ಮರಾಜನಿಗೆ ವಿದುರನ ಮೂಲಕ ಒಂದು ವಿಷಯವನ್ನು ಹೇಳಿ ಕಳುಹಿಸುತ್ತಾನೆ.

"ಧರ್ಮರಾಜ! ನಾನು ರಾಜ್ಯದ ದಾಹ, ವಿಷಯಭೋಗಾಸಕ್ತಿ ಎಲ್ಲವನ್ನೂ ತೊರೆದು ಕಾಡಿಗೆ ಹೊರಡುವ ಮುನ್ನ ನನ್ನದೊಂದು ಅಪೇಕ್ಷೆ ಇದೆ. ನೀನು ಉಪಕರಿಸು. ನನ್ನ ಮಕ್ಕಳೆಲ್ಲರೂ ಮೃತರಾಗಿದ್ದಾರಷ್ಟೇ! ಅವರ ಆತ್ಮಹಿತಕ್ಕಾಗಿ ದೊಡ್ಡ ಸತ್ಕರ್ಮ ಒಂದನ್ನು ಕೈಗೊಂಡು ಬ್ರಾಹ್ಮಣರನ್ನೆಲ್ಲಾ ಅನ್ನಾರಾಧನೆ, ದಾನ, ದಕ್ಷಿಣೆಗಳಿಂದ ಸತ್ಕರಿಸಬೇಕು. ಅವರನ್ನುದ್ದೇಶಿಸಿ ಶ್ರಾದ್ಧವನ್ನಾಚರಿಸಬೇಕು" ಎಂದು ಕೊಂಡಿದ್ದೇನೆ. ಅದಕ್ಕಾಗಿ ನೀನು ಧನವನ್ನು ಮಂಜೂರು ಮಾಡಬೇಕು" ಎಂದು ವಿನಂತಿಸಿಕೊಂಡ.

ಧರ್ಮರಾಜನು ಸಮ್ಮತಿಯನ್ನು ನೀಡಿ, ಬೊಕ್ಕಸದ ಅಧಿಕಾರಿಯಾದ ಭೀಮನಿಗೆ ತಿಳಿಸಿದ. 'ಪುತ್ರ-ಪೌತ್ರರಿಗೆ ಆಪ್ತ ಬಂಧು ಸಹೋದರರಿಗೆ ಶ್ರಾದ್ಧವನ್ನಾಚರಿಸಲು ಹಣವನ್ನು ನೀಡು' ಎಂದು. ಆದರೆ ಭೀಮ ಸಮ್ಮತಿಸಲಿಲ್ಲ. ದುರ್ಯೋಧನ, ದುಶ್ಶಾಸನ ಇವರೆಲ್ಲರೂ ಮಹಾದುಷ್ಟರು. ಲೋಕಕಂಟಕರು. ಹಂತಕರೂ ಕೂಡ. ಸಮಗ್ರ ಜೀವನದಲ್ಲಿ ಒಮ್ಮೆಯೂ ಸತ್ಕಾರ್ಯವನ್ನು ಮಾಡದೆ ನಿರಂತರ ಕೃಷ್ಣದ್ವೇಷಿಗಳಾದ ದುರಾತ್ಮರಿಗಾಗಿ ಹಣ ಕೊಡೆನು.

**ಕಷ್ಟಾತ್ ಕಷ್ಟತರಂ ಯಾಂತು ಸರ್ವೇ ದುರ್ಯೋಧನಾದಯಃ ।**

— [ಮ. ತಾ. ನಿ. ೩೧-೩೪]

"ದುರ್ಯೋಧನ ದುಶ್ಶಾಸನ ಮುಂತಾದವರೆಲ್ಲರೂ ಕಷ್ಟಕ್ಕಿಂತ ಅಧಿಕ ಕಷ್ಟಕರವಾದ ದುರ್ಗತಿಯನ್ನೇ ಹೊಂದಲಿ!" ಎಂದು ನಿಷ್ಠುರವಾಗಿಯೇ ಭೀಮಸೇನ ನುಡಿದ.

ನಮಗಿಲ್ಲಿ 'ಭೀಮನ ನೈಷ್ಠುರ್ಯ ಅತಿ ಆಯಿತೆ'ನ್ನಿಸಬಹುದು. ಆದರೆ ಭೀಮಸೇನನ ಉದ್ದೇಶವನ್ನು ನಾವಿಲ್ಲಿ ಮನಗಾಣಬೇಕು. ಧರ್ಮರಾಜ ಕೇಳುತ್ತಿರುವ ಹಣ, ರಾಜ್ಯದ ಬೊಕ್ಕಸ ಅದು ಪ್ರಜೆಗಳ ಹಿತಕ್ಕೇ ಮೀಸಲಾದದ್ದು. ಹೊರತು ಸ್ವಾರ್ಥಕ್ಕಾಗಿಯಾಗಲೀ, ಸ್ವಾರ್ಥಿಗಳಾದ ದುಷ್ಟರಿಗಾಗಲೀ ವ್ಯಯಿಸಲು ಸಾಧ್ಯವೇ ಇಲ್ಲ ಎಂದ. ಮುಂದೆ ಧರ್ಮರಾಜ ತನ್ನದ್ದೇ ಆದ ಧನವನ್ನು ನೀಡಿದ. ಪ್ರಜೆಗಳ ಧನ ಅವರ ಕಲ್ಯಾಣಕ್ಕೇ ಮೀಸಲು ಹೊರತು ಪಾಪಿಗಳಿಗಾಗಲಿ ತಮ್ಮವರಿಗಾಗಲಿ ಸಲ್ಲತಕ್ಕದ್ದಲ್ಲ -ಎಂಬುದು ಭೀಮನ ಉದಾತ್ತ ಚಿಂತನೆ. ಇಂದಿನ ರಾಜಕಾರಣಿಗಳಿಗೆ 'ಸ್ವಂತ ಹಣ', 'ರಾಜ್ಯದ ಹಣ' ಎಂಬ ವ್ಯತ್ಯಾಸವೇ ಗೊತ್ತಿಲ್ಲ. ರಾಜ್ಯದ ಹಣವೆಲ್ಲ ತಮ್ಮದೇ ಎಂಬ ರೀತಿಯಲ್ಲಿ ವರ್ತಿಸುತ್ತಾರೆ. ಭೀಮಸೇನ ಈ ವ್ಯತ್ಯಾಸವನ್ನು ತಿಳಿಸಿಕೊಟ್ಟ. ರಾಜಕಾರಣಿಗಳಿಗೆಲ್ಲ ಪ್ರಜೆಗಳ ಹಿತಕ್ಕಲ್ಲದೆ ನಿಮ್ಮ ಸ್ವಂತ ಏಳಿಗೆಗಾಗಿ ಬೊಕ್ಕಸಕ್ಕೆ ಕೈಹಾಕಬೇಡಿ!!' ಎಂದು ಎಚ್ಚರಿಕೆ ನೀಡಿದ ನಿಷ್ಠುರತೆಯಲ್ಲಿಯೂ ಉದಾತ್ತಚಿಂತನೆ, ಉತ್ತಮ ಆದರ್ಶ ವ್ಯಕ್ತಿತ್ವವನ್ನು ತೋರಿಸಿಕೊಟ್ಟಿದ್ದಾರೆ.

## ಧೃತರಾಷ್ಟ್ರನ ಪಶ್ಚಾತ್ತಾಪ-ಅರಣ್ಯಗಮನ-ವಿರೋಧಪರಿಹಾರ

ಅನಂತರ ಧೃತರಾಷ್ಟ್ರನು ಧರ್ಮರಾಜ ಮತ್ತು ಅರ್ಜುನ ಕೊಟ್ಟ ಧನದಿಂದ ಹತ್ತುದಿನಗಳ ಕಾಲ ನಿರಂತರ ಧಾನಧರ್ಮಾದಿಗಳನ್ನಾಚರಿಸಿದ. ಉತ್ತಮ ವೈರಾಗ್ಯವನ್ನು ಹೊಂದಿ ಕಾಡಿಗೆ ಧೃತರಾಷ್ಟ್ರನು ಹೊರಡುವಾಗ ಸಮಸ್ತ ಪ್ರಜೆಗಳೂ ಅವನನ್ನು ಅಭಿನಂದಿಸುತ್ತಾರೆ.

ಆ ಸಂದರ್ಭದಲ್ಲಿ ಧೃತರಾಷ್ಟ್ರನು ಹೇಳುತ್ತಾನೆ-

ಸಜ್ಜನರೇ! ನಮ್ಮ ಹಿಂದಿನ ರಾಜರ್ಷಿಗಳೆಲ್ಲರೂ ಬಹಳಷ್ಟು ಚೆನ್ನಾಗಿ ಧರ್ಮದಿಂದ ರಾಜ್ಯಪರಿಪಾಲನೆಯನ್ನು ಮಾಡಿದ್ದಾರೆ. ಆದರೆ ನಾನು ಮಾತ್ರ ಸರಿಯಾಗಿ

ರಾಜ್ಯಪರಿಪಾಲನೆಯನ್ನು ಮಾಡಲಿಲ್ಲ. ಆದರೂ ಸಜ್ಜನರಾದ ನೀವು ತಪ್ಪಿಯೂ ಯಾವುದೇ ಕೆಟ್ಟ ಮಾತುಗಳನ್ನು ನನ್ನ ಕುರಿತು ಆಡಿಲ್ಲ. ಒಳ್ಳೆಯ ಪ್ರೀತಿಯನ್ನೇ ತೋರಿಸಿದ್ದೀರಿ. ನಾನು ತಪ್ಪಿನಡೆದಾಗಲೂ ನನ್ನ ವಿರುದ್ಧ ಪ್ರತಿಭಟನೆ ಮಾಡದೆ ಒಳ್ಳೆಯ ಔದಾರ್ಯದಿಂದ, ಸದ್ಭಾವನೆಯಿಂದಲೇ ನೋಡಿದ್ದೀರಿ.

ದುರ್ಬುದ್ಧಿಯಾದ ನನ್ನ ಮಗ ಶ್ರೀಕೃಷ್ಣನಿಗೆ ವಿರುದ್ಧವಾಗಿ ಕೆಟ್ಟ ರೀತಿಯಲ್ಲಿ ವರ್ತಿಸಿದ. ಅದರಿಂದಾಗಿಯೇ ದುರಂತಯುದ್ಧ ಏರ್ಪಟ್ಟಿತು. ಅವರ ಸಂಸರ್ಗದಿಂದ ನಾನೂ ಪಾಂಡವರ ವಿರುದ್ಧವಾಗಿ ಎಷ್ಟೋ ದುಷ್ಟಕಾರ್ಯಗಳನ್ನು ಮಾಡಿದ್ದೇನೆ. ಈಗ ನನಗೆ ಪಶ್ಚಾತ್ತಾಪವಾಗಿದೆ. ನನ್ನ ಕ್ರೂರವಾದ ಈ ಪಾಪಕರ್ಮವನ್ನು ತೊಳೆದುಕೊಳ್ಳಲು ಅರಣ್ಯಕ್ಕೆ ನಿರ್ಗಮಿಸುತ್ತೇನೆ. ನೀವು ನನ್ನ ತಪ್ಪುಗಳನ್ನೆಲ್ಲಾ ಔದಾರ್ಯದಿಂದ ಕ್ಷಮಿಸಿರಿ! ಅರಣ್ಯಕ್ಕೆ ಹೋಗಲು ಅನುಮತಿ ನೀಡಿರಿ! ಎಂದು ಪ್ರಾರ್ಥಿಸಿದಾಗ ಪ್ರಜೆಗಳೆಲ್ಲರೂ ಕಣ್ಣೀರಿಟ್ಟರು.

ಅನಂತರ ಸಂಜಯ ವಿದುರರೂ ಧೃತರಾಷ್ಟ್ರನನ್ನು ಹಿಂಬಾಲಿಸಿದರು. ಧೃತರಾಷ್ಟ್ರ ಗಾಂಧಾರಿ ಇಬ್ಬರೂ ಕುರುಡರು. ಧೃತರಾಷ್ಟ್ರ ಹುಟ್ಟುಕುರುಡನಾದರೆ; ಗಾಂಧಾರಿ ಸ್ವೇಚ್ಛೆಯಿಂದ ಪತಿವ್ರತಾಧರ್ಮವನ್ನನುಸರಿಸಿ ಕುರುಡಿಯಾಗಿದ್ದಾಳೆ. ಇವರಿಗೆ ಮಾರ್ಗದರ್ಶಕಳಾಗಿ ಕುಂತಿಯೂ ಅರಣ್ಯಕ್ಕೆ ಹೊರಡಲನುವಾದಳು. ಮಕ್ಕಳೆಲ್ಲರೂ ತಡೆದರೂ ಅವರನ್ನು ಕಷ್ಟವಿಂದ ಸಮಾಧಾನಪಡಿಸಿ ಕಾಡಿಗೆ ನಡೆದಳು. ಕುಂತಿಯ ಹೆಗಲನ್ನು ಗಾಂಧಾರಿಯೂ ಗಾಂಧಾರಿಯ ಹೆಗಲನ್ನು ಧೃತರಾಷ್ಟ್ರನೂ ಅವಲಂಬಿಸಿ ನಡೆದರು.

ಅಧ್ಯಾತ್ಮದ ದಾರಿಯಲ್ಲಿ ನಡೆಯುವ ಮಾರ್ಗದರ್ಶನವನ್ನು ವಿದುರನು ನೀಡಿದರೆ; ಕಾಡಿನ ದಾರಿಯಲ್ಲಿ ಸಾಗುವ ಬಗೆ ಹೇಗೆಂಬುದನ್ನು ಕುಂತಿಯು ತೋರಿಸಿದಳು. ಹೀಗೆ ಎಲ್ಲರೂ ಕಾಡಿಗೆ ಹೋಗಿ, ಅಲ್ಲಿ ವಿಶೇಷವಾಗಿ ಭಗವಂತನ ಸ್ತೋತ್ರ-ಧ್ಯಾನಗಳನ್ನು ನಡೆಸಿದ್ದಾರೆ.

ಅನಂತರ ಕಾಲಾಂತರದಲ್ಲಿ ಪಾಂಡವರು ಧೃತರಾಷ್ಟ್ರ, ತಾಯಿ ಕುಂತಿ ಮೊದಲಾದವರನ್ನು ಕಾಣಬೇಕೆಂದು ಬರುತ್ತಿದ್ದಾರೆ. ಧರ್ಮರಾಜನನ್ನು ಕಂಡ ವಿದುರ ಓಡಿಹೋಗಿ ಒಂದು ಮರದಡಿಯಲ್ಲಿ ನಿಂತನು ಧರ್ಮರಾಜನು ಅಲ್ಲಿಗೆ ಸಾಗಲು ವಿದುರ ಶವವಾಗಿದ್ದನು. ಯಮನ ಎರಡು ರೂಪಗಳು ಧರ್ಮರಾಜ ಮತ್ತು ವಿದುರ. ವಿದುರನು ಧರ್ಮರಾಜನಲ್ಲಿಯೇ ಯೋಗಸಿದ್ಧಿಯ ಬಲದಿಂದ ಐಕ್ಯಹೊಂದಿ ಜೀವನಯಾತ್ರೆಯನ್ನು ಮುಗಿಸಿದನು.

ಇದೇ ಸಂದರ್ಭದಲ್ಲಿ ಶ್ರೀವೇದವ್ಯಾಸರು ಇವರಿದ್ದಲ್ಲಿ ಪ್ರಾದುರ್ಭವಿಸಿದರು. ಅವರನ್ನು ಎಲ್ಲರೂ ಶ್ರದ್ಧೆಯಿಂದ ಪೂಜಿಸಿದರು. ಅನಂತರ ಎಲ್ಲರೂ ತಮ್ಮ ಅಭೀಪ್ಸಿತಗಳನ್ನು ಅವರಿಂದ ಹೊಂದಿದ ಬಳಿಕ ಧೃತರಾಷ್ಟ್ರನು ಯುದ್ಧದಲ್ಲಿ ಮಡಿದವರೆಲ್ಲರನ್ನೂ ಕಾಣಬೇಕೆಂದು ಬಯಸಿದ. ಅದರಂತೆಯೇ ಅವನ ಮಕ್ಕಳು,

ಭೀಷ್ಮ, ಕರ್ಣ ಎಲ್ಲರೂ ಒಂದು ರಾತ್ರಿ ಇವರೊಟ್ಟಿಗೆ ವಾಸಮಾಡಿದರು ವ್ಯಾಸರ ಶಕ್ತಿಯಿಂದ ಇದೆಲ್ಲವೂ ನಡೆಯಿತು.

ಭಾಗವತದಲ್ಲಿ ಇದೇ ಪ್ರಸಂಗ ಸ್ವಲ್ಪ ವಿಪರೀತವಾಗಿ ಕಾಣಿಸುತ್ತದೆ.

ಒಂದು ದಿನ ಧರ್ಮರಾಜನು ಎಂದಿನಂತೆ ಧೃತರಾಷ್ಟ್ರನ ಅರಮನೆಗೆ ನಮಸ್ಕರಿಸಲು ಹೋಗಿದ್ದಾನೆ. ಅಲ್ಲಿ ತನ್ನ ದೊಡ್ಡಪ್ಪನನ್ನಾಗಲೀ ಗಾಂಧಾರಿಯನ್ನಾಗಲೀ ಕಾಣಲಿಲ್ಲ.

**ಗೃಹಂ ಪ್ರವಿಷ್ಟೋ ಗುರುವಂದನಾಯ**
**ನ ಚಾಪಶ್ಯತ್ ಪಿತರೌ ಸೌಬಲೀಂ ಚ ॥** — [೧-೧೨-೩೧]

ಅನಂತರ ಧರ್ಮರಾಜನು ಸಂಜಯನನ್ನು ಅಲ್ಲಿ ಕಂಡ. ಗಾಬರಿಯಿಂದ ಅವನ ಬಳಿ ಕೇಳಿದ. "ಸಂಜಯ! ಕುರುಡನಾದ ನನ್ನ ತಂದೆ ಧೃತರಾಷ್ಟ್ರನೆಲ್ಲಿ? ತಾಯಿ ಗಾಂಧಾರಿ ಎಲ್ಲಿ?" ಎಂದು ಕೇಳಿದಾಗ, ಸಂಜಯನು ಕಣ್ಣೀರು ಸುರಿಸಲಾರಂಭಿಸಿದ ಎಂದಿದೆ.

ಇಲ್ಲಿಯ ವಿಷಯಕ್ಕೂ ಭಾರತಕ್ಕೂ ವಿರೋಧವಿರುವಂತೆ ಕಾಣಿಸುತ್ತದೆ. ಭಾರತದ ಪ್ರಕಾರ ಧೃತರಾಷ್ಟ್ರನು ಎಲ್ಲರ ಅನುಮತಿಯನ್ನು ಪಡೆದು ಕಾಡಿಗೆ ಹೋದನೆಂದಿದ್ದರೆ, ಭಾಗವತದಲ್ಲಿ ಒಂದುದಿನ ಧರ್ಮರಾಜನು ನಮಸ್ಕರಿಸಲು ಬಂದಾಗ ಧೃತರಾಷ್ಟ್ರಗಾಂಧಾರಿಯರು ಕಾಣಸಲಿಲ್ಲ. ಆವಾಗ ಗೊಂದಲಕ್ಕೀಡಾದ ಎಂದಿದೆ.

ಪ್ರಾಮಾಣಿಕವಾದ ಭಾರತ–ಭಾಗವತ ಗ್ರಂಥಗಳಲ್ಲಿಯೇ ಈ ರೀತಿಯಾದ ವಿರುದ್ಧ ಹೇಳಿಕೆ ಬಂದಾಗ, ಓದುಗರು ಯಾವುದನ್ನು ಅಂಗೀಕರಿಸಬೇಕು? ಹೇಗೆ ಪರಿಹರಿಸಿಕೊಳ್ಳಬೇಕು? ಎಂಬ ಗೊಂದಲ ಉಂಟಾದಾಗ ಶ್ರೀಮದಾಚಾರ್ಯರು ಪರಿಹಾರದ ಕ್ರಮವನ್ನು ಭಾಗವತತಾತ್ಪರ್ಯದಲ್ಲಿ ತಿಳಿಸಿಕೊಟ್ಟಿದ್ದಾರೆ.

ಮಹಾಭಾರತದಲ್ಲಿ ಉಲ್ಲೇಖಿಸಿದ ಘಟನೆಯೇ ಸತ್ಯವಾದದ್ದು. ಧೃತರಾಷ್ಟ್ರನು ಎಲ್ಲರ ಅನುಮತಿಯನ್ನು ಪಡೆದೇ ಕಾಡಿಗೆ ಹೋಗಿದ್ದ. ಕಾಡಿಗೆ ಹೋದನಂತರವೂ ಧರ್ಮರಾಜನು ಧೃತರಾಷ್ಟ್ರನ ಅರಮನೆಗೆ ಬಂದು; ಅವನು ಕುಳಿತುಕೊಳ್ಳುತ್ತಿದ್ದ ಸಿಂಹಾಸನಕ್ಕೆ ಅವನನ್ನು ಸ್ಮರಿಸಿಕೊಂಡು ನಮಿಸುತ್ತಿದ್ದ. ಇದು ಧರ್ಮರಾಜನ ಪ್ರತಿನಿತ್ಯದ ದಿನಚರಿ. ಹೀಗೆ ನಮಸ್ಕರಿಸುವಾಗ ಒಂದುದಿನ ಅವನ ದಿವ್ಯಜ್ಞಾನಕ್ಕೆ ಗೋಚರವಾಯಿತು –'ಧೃತರಾಷ್ಟ್ರನು ಮೃತನಾಗಿದ್ದಾನೆ' ಎಂದು ಸ್ಫುರಣವಾಯಿತು. ತತ್ಕ್ಷಣ ಕಳವಳಗೊಂಡ ಧರ್ಮರಾಜನು ಅಲ್ಲಿಯೇ ಸಂಜಯನನ್ನು ಕಂಡನು. ಸಂಜಯನು ಬದರಿಕಾಶ್ರಮದಿಂದ ಹಿಂತಿರುಗಿ ಬಂದಿದ್ದನು. ಕಳೆಗುಂದಿದ ಮುಖದಿಂದ ಸಪ್ಪಗೆ ಕುಳಿತುಕೊಂಡಿದ್ದನು. ಇದನ್ನು ಕಂಡು ಮತ್ತೂ ಕಳವಳಗೊಂಡು 'ಧೃತರಾಷ್ಟ್ರನಿಗೆ ಏನಾಯಿತೆಂದು' ಪ್ರಶ್ನಿಸಿದಾಗ ಸಂಜಯನು ನಡೆದ ಘಟನೆಗಳನ್ನು ವಿವರಿಸಲು ಅಸಮರ್ಥನಾದಾಗ ಅದೆ ಸಂದರ್ಭಕ್ಕೆ ನಾರದರು ಬಂದು 'ಧೃತರಾಷ್ಟ್ರ,

ಗಾಂಧಾರಿ, ಕುಂತಿ ಇವರೆಲ್ಲರೂ ಯೋಗಾಗ್ನಿಯಿಂದ ದೇಹವನ್ನು ಪರಿತ್ಯಜಿಸಿ ಪರಲೋಕಕ್ಕೆ ಹೋದರು' ಎಂದು ತಿಳಿಸಿದರು.

ಆದ್ದರಿಂದ ಭಾಗವತದಲ್ಲಿ ಹೇಳಿದ್ದೂ ಸರಿ. ಭಾರತದಲ್ಲಿ ಹೇಳಿದ್ದೂ ಸರಿಯೇ. ಭಾರತದಲ್ಲಿ ಮೊದಲನೆಯ ಘಟನೆಯನ್ನು ಹೇಳಿದ್ದಾರೆ. ಭಾಗವತದಲ್ಲಿ ಅನಂತರದ ಘಟನೆಯನ್ನು ತಿಳಿಸಿದ್ದಾರೆ. ಆದ್ದರಿಂದ ಧರ್ಮರಾಜನ 'ಪಿತೃವ್ಯಃ', 'ಕ್ವ ಗತಃ', 'ಕ್ವ ನಸ್ತಾತಃ' ಎಂಬ ಪ್ರಶ್ನೆ ಉಚಿತವೇ ಆಗಿದೆ. ಹೀಗೆ ಸಮನ್ವಯ ಮಾಡಿಕೊಂಡು ಅಧ್ಯಯನ ಮಾಡಬೇಕೆಂದು ಶ್ರೀಮದಾಚಾರ್ಯರು ತಿಳಿಸಿಕೊಟ್ಟಿದ್ದಾರೆ.

ಧೃತರಾಷ್ಟ್ರ, ತಾಯಿ ಕುಂತಿ, ಗಾಂಧಾರಿ ಇವರೆಲ್ಲರ ಮರಣವಾರ್ತೆಯನ್ನು ತಿಳಿದ ಧರ್ಮರಾಜನು ಅವರಿಗೆ ಸಲ್ಲಿಸಬೇಕಾದ ಕರ್ತವ್ಯಗಳನ್ನೆಲ್ಲಾ ಸಲ್ಲಿಸಿದ.

## ವೈಕುಂಠಕ್ಕೆ ತೆರಳಿದ ಶ್ರೀಕೃಷ್ಣ

ಅರ್ಜುನನು ಶ್ರೀಕೃಷ್ಣಪರಮಾತ್ಮನನ್ನು ಕಾಣಬೇಕೆಂಬ ಹಂಬಲದಿಂದ ದ್ವಾರಕೆಗೆ ಹೋಗಿದ್ದನು. ಅವನು ಹೋಗಿ ಏಳು ದಿವಸಗಳಲ್ಲಿಯೇ ಧರ್ಮರಾಜನು ಅನೇಕ ಘೋರ ಶಕುನಗಳನ್ನು ಕಂಡನು. ಅಂಗಗಳ ಸ್ಫುರಣ, ಭೂಕಂಪ, ಉತ್ಪಾತಗಳೇ ಮುಂತಾದ ದಶ್ಶಕುನಗಳಿಂದ ಹೆದರಿದ ಧರ್ಮರಾಜ ಭೀಮಸೇನನ ಬಳಿ ಉಸುರುತ್ತಿದ್ದಾಗ, ಅದೇ ಸಂದರ್ಭದಲ್ಲಿ ದ್ವಾರಕೆಯಿಂದ ಅರ್ಜುನನು ಬಂದನು.

ದುಗುಡ ತುಂಬಿಕೊಂಡು, ಕಣ್ಣೀರಿಡುತ್ತಾ, ದುಃಖಾಕ್ರಾಂತನಾಗಿ ಅರ್ಜುನ ಬರುತ್ತಿರುವುದನ್ನು ಕಂಡ ಧರ್ಮರಾಜನಿಗೆ ಮತ್ತಷ್ಟು ಗಾಬರಿಯಾಯಿತು. ಬಳಿಬಂದ ಅರ್ಜುನನಿಗೆ ಏನಾಯಿತು! 'ಅರ್ಜುನ ಏನಾಯಿತು!! ಹೇಳು' ಎಂದು ಪ್ರಶ್ನಿಸಿದಾಗ ಅರ್ಜುನನು ಮನಸ್ಸನ್ನು ಗಟ್ಟಿಮಾಡಿಕೊಂಡು ಹೇಳಿದ–

**ವಂಚಿತೋಽಹಂ ಮಹಾರಾಜ ಹರಿಣಾ ಬಂಧುರೂಪಿಣಾ ।**
**ಯೇನ ಮೇಽಪಹೃತಂ ತೇಜೋ ದೇವವಿಸ್ಮಾಪನಂ ಮಹತ್ ॥** — [೧–೧೪–೫]

'ಮಹಾರಾಜನೇ! ಬಂಧುರೂಪಿಯಾದ ಶ್ರೀಕೃಷ್ಣನಿಂದ ರಹಿತನಾಗಿದ್ದೇನೆ. ಅವನು ದೇವತೆಗಳನ್ನೂ ಆಶ್ಚರ್ಯಪಡಿಸುವ ನನ್ನ ತೇಜಸ್ಸನ್ನು ಅಪಹರಿಸಿಕೊಂಡು ಹೋಗಿದ್ದಾನೆ. ತನ್ನ ಅವತಾರಕಾರ್ಯಗಳನ್ನೆಲ್ಲಾ ಮುಗಿಸಿ ಅದೃಶ್ಯನಾಗಿ ಹೋಗಿದ್ದಾನೆ. ಕೃಷ್ಣನನ್ನು ಕಳೆದುಕೊಂಡ ನನ್ನ ಶಕ್ತಿಯೆಲ್ಲವೂ ಉಡುಗಿಹೋಗಿದೆ. ಪ್ರತಿ ಕ್ಷಣವೂ ನಮ್ಮನ್ನು ಅನುಗ್ರಹಿಸುತ್ತಿದ್ದ ಶ್ರೀಕೃಷ್ಣ ಪರಂಧಾಮಕ್ಕೆ ತೆರಳಿದ.' ಎಂದು ಮುಂತಾಗಿ ದುಃಖಿಸುತ್ತಾ ಕೃಷ್ಣನು ತಮಗೆ ಮಾಡಿದ ಉಪಕಾರವನ್ನೆಲ್ಲಾ ಸ್ಮರಿಸಿಕೊಳ್ಳುತ್ತಿದ್ದಾನೆ–

'ದ್ರೌಪದೀಸ್ವಯಂವರದಲ್ಲಿ ವಿಜಯವನ್ನು ನೀಡಿದ. ಖಾಂಡವವನವನ್ನು ಹೋರಾಡಿ ಪಡೆದುಕೊಂಡು ಅಗ್ನಿಗೆ ಕೊಡುವಂತೆ ಮಾಡಿದ. ಭೀಮನ ಮೂಲಕ ಮಾಗಧನನ್ನು ಸೀಳಿ ರಾಜಸೂಯಾಧ್ವರವನ್ನು ಮಾಡಿಸಿದ. ಕಾಡಿನಲ್ಲಿ ಹತ್ತುಸಾವಿರ

ಶಿಷ್ಯರೊಟ್ಟಿಗೆ ಊಟಕ್ಕೆ ಬಂದ ದುರ್ವಾಸರಿಗೆ, ಸೊಪ್ಪು ತಿಂದು ಹೊಟ್ಟೆ ತುಂಬಿಸಿದ. ಈಶ್ವರನಿಂದ ಪಾಶುಪತಾಸ್ತ್ರವ ಕೊಡಿಸಿದ. ನನ್ನನ್ನು 'ಗಾಂಢೀವಧಾರೀ' ಎನ್ನಿಸಿದ. ಕೌರವಸೇನಾಸಾಗರವನ್ನು ಕಾಡ್ಗಿಚ್ಚಿನಂತೆ ಸುಡಿಸಿದ. ಕುರುಕ್ಷೇತ್ರದಲ್ಲಿ ನನ್ನೆದುರು ಸಂಚರಿಸುವ ಮಹಾರಥಿಕರಾದ ಕರ್ಣ, ದ್ರೋಣ, ಭೀಷ್ಮರೇ ಮೊದಲಾದವರ ಆಯುಸ್ಸು, ಮನಸ್ಸುಗಳನ್ನು ಕೇವಲ ತನ್ನ ಚಕ್ಷುಸ್ಸುಗಳಿಂದಲೇ ಅಪಹರಿಸಿದ. ನನಗೆ ಸಾರಥಿಯಾಗುವ ಔದಾರ್ಯ ತೋರಿಸಿದ. ನಾನು ಉನ್ಮತ್ತನಾದ ಸಂದರ್ಭ ದಲ್ಲಿಯೂ ಸೈರಿಸಿದ. ತಾನು ಪುರುಷೋತ್ತಮನಾಗಿದ್ದರೂ ಈ ನರನ ಕೈಹಿಡಿದ. ಬೆಳಗುವ ಸೌಂದರ್ಯ, ಸರಳಮಾತು, ಉದಾರಹೃದಯ ಇವುಗಳಿಂದ ಸುಜನರ ಹೃದಯ ವನ್ನು ಸೂರೆಗೊಂಡ. ದೈನಂದಿನ ಚಟುವಟಿಕೆಗಳಲ್ಲಿ ಮಿತ್ರನಂತೆಯೇ ವರ್ತಿಸಿದ ಇಂತಹ ಶ್ರೀಕೃಷ್ಣನನ್ನು ಹೇಗೆ ಮರೆಯಲಿ!! ಹೀಗೆ ಭಾವುಕನಾದ ಅರ್ಜುನನ ಮಾತಿನ ಸರಣಿ ಗಂಗಾಪ್ರವಾಹದಂತೆ ಹರಿಯುತ್ತದೆ. ಅರ್ಜುನನ ಮಾತು ನಿಲ್ಲಬಹುದು; ಆದರೆ ಹರಿಕರುಣೆ ನಿಲ್ಲುವುದುಂಟೇ?!

ಶ್ರೀಕೃಷ್ಣನು ಅರ್ಜುನನನ್ನು ಎಲ್ಲಾ ಕಾಲದಲ್ಲಿಯೂ ಬೆಂಬಿಡದೆ ರಕ್ಷಿಸಿದ್ದಾನೆ.

## ಶ್ರೀಕೃಷ್ಣ ಪ್ರತಿಷ್ಠೆ ಮಾಡಿರಿ

ಭಾರತದ ಯುದ್ಧವೆಲ್ಲವೂ ಮುಗಿದು ಕೃಷ್ಣಾರ್ಜುನರು ರಥದಿಂದ ಕೆಳಗಿಳಿಯುವ ಸಂದರ್ಭ. ಅಂದು ಶ್ರೀಕೃಷ್ಣ ಅರ್ಜುನನಿಗೆ ಹೇಳಿದ–

ಅರ್ಜುನ! ಇಂದು ನೀನೇ ಮೊದಲು ರಥದಿಂದ ಕೆಳಗಿಳಿ. ಅನಂತರ ನಾನು ಇಳಿಯುತ್ತೇನೆ.

ಅರ್ಜುನನಿಗೆ ಕೃಷ್ಣನ ಮಾತಿನ ಮರ್ಮ ತಿಳಿಯಲಿಲ್ಲ. ಹಾಗೆಯೇ ಆಗಲೆಂದು ರಥದಿಂದ ಕೆಳಗೆ ಇಳಿದ. ಅನಂತರ ಕೃಷ್ಣನೂ ಕೆಳಕ್ಕಿಳಿದ. ಶ್ರೀಕೃಷ್ಣನು ರಥದಿಂದ ಕೆಳಕ್ಕಿಳಿಯುವುದೇ ತಡ, ರಥವು ಸುಟ್ಟು ಭಸ್ಮವಾಯಿತು. ಅರ್ಜುನ ಗಾಬರಿಯಿಂದ ಬೆರಗಾಗಿ ನಿಂತ. ಕೃಷ್ಣನ ಸರ್ವಜ್ಞತ್ವ ಸರ್ವಪಾಲಕತ್ವ ಮುಂತಾದ ಗುಣಗಳನ್ನು ಕಂಡು ಮೂಕವಿಸ್ಮಿತನಾದ.

ಅರ್ಜುನನ ಬೆನ್ನುತಟ್ಟಿ ಕೃಷ್ಣ ಹೇಳಿದ: "ನೋಡಿದೆಯಾ ಅರ್ಜುನ! ರಥದಿಂದ ನಾನೇ ಮೊದಲು ಇಳಿದಿದ್ದರೆ ನೀನು ಇಂದು ಭಸ್ಮಾವಶೇಷನಾಗುತ್ತಿದ್ದಿ". ಮಹಾಭಾರತ ಯುದ್ಧದಲ್ಲಿ ಭೀಷ್ಮ ದ್ರೋಣಾದಿಗಳ ಬಾಣಗಳಿಂದ ರಥವು ಸುಟ್ಟು ಭಸ್ಮವಾಗಬೇಕಿತ್ತು. ನನ್ನ ಸನ್ನಿಧಾನದಿಂದ ಇಷ್ಟುಕಾಲ ಉಳಿದುಕೊಂಡಿತ್ತು. ನಾನು ಇಳಿದೊಡನೆಯೇ ನಾಶವಾಯಿತು."

ಈ ಪ್ರಸಂಗವನ್ನು ಸರಿಯಾಗಿ ಆಲೋಚಿಸಬೇಕು.

ನಮ್ಮ ದೇಶವೂ ಕ್ಷೇಮವಾಗಿರಬೇಕಿದ್ದರೆ ಶ್ರೀಕೃಷ್ಣನು ಇಲ್ಲಿ ನೆಲೆಸಬೇಕು. ಶ್ರೀಕೃಷ್ಣನು ನೆಲೆಸಿದಾಗ ಮಾತ್ರ ದೇಶವೆಂಬ ರಥದ ಸುಭದ್ರತೆ ಸಾಧ್ಯ. ದೇಶದಿಂದ ಶ್ರೀಕೃಷ್ಣನನ್ನು ಇಳಿಸಿದರೆ ದೇಶವೂ ಉಳಿಯಲಾರದು.

ಹಾಗೆಯೇ ದೇಶದಲ್ಲಿ ಮಾತ್ರವಲ್ಲ, ಪ್ರತಿಯೊಬ್ಬರ ದೇಹವೆಂಬ ರಥದಲ್ಲಿಯೂ ಶ್ರೀಕೃಷ್ಣನ ಅಸ್ತಿತ್ವ ರೂಪಿತಗೊಳ್ಳಬೇಕು. ಜೀವನ ರಥವೂ ನಿರಂತರ ಕ್ಷೇಮದಿಂದ ಸಾಗಲು ಶ್ರೀಕೃಷ್ಣನ ಪ್ರತಿಷ್ಠೆ ಹೃದಯಮೈದಾನದಲ್ಲಿ ಆಗಬೇಕು. ಹೀಗಾದಾಗ ಮಾತ್ರ ನಮ್ಮ ದೇಶ ಮತ್ತು ಜೀವನ ಸುಭದ್ರವಾಗುತ್ತದೆ ಎಂಬ ಸಂದೇಶವನ್ನು ಇದರಿಂದ ಅರಿಯಬೇಕು.

## ದೇವಕೀಸುತನನ್ನು ಕಳೆದುಕೊಂಡ ವಿಜಯ

ಅರ್ಜುನನು ಈ ಪ್ರಸಂಗದಲ್ಲಿ ಮತ್ತೊಂದು ಘಟನೆಯನ್ನು ಸ್ಮರಿಸಿಕೊಳ್ಳುತ್ತಾನೆ.

ಶ್ರೀಕೃಷ್ಣನು ಪರಂಧಾಮಕ್ಕೆ ತೆರಳಿದ ಬಳಿಕ ಹದಿನಾರು ಸಾವಿರದ ನೂರುಮಂದಿ ಸ್ತ್ರೀಯರನ್ನು ರಕ್ಷಿಸುತ್ತಾ ದಾರಿಯಲ್ಲಿ ಬರುತ್ತಿದ್ದೆ. ದಾರಿಯ ಮಧ್ಯೆ ಕೆಲವು ದುಷ್ಟರಾದ ಸಾಮಾನ್ಯ ಗೊಲ್ಲರು ನನ್ನನ್ನು ಎದುರಿಸಿದರು. ಬಲಿಷ್ಠರಾದ ವೀರರನ್ನು, ನಿವಾತಕವಚರನ್ನು ಸೀಳಿ ಸದೆಬಡಿದ ನನಗೆ ಸಾಮಾನ್ಯ ;ಗೊಲ್ಲರು ಯಾವ ಲೆಖ್ಖ —ಎಂದು ಯುದ್ಧಕ್ಕೆ ಸಿದ್ಧನಾದೆ. ಆದರೆ ನನ್ನ ದುರ್ದೈವವನ್ನೇನು ಹೇಳಲಿ!! ಅವರು ನನ್ನನ್ನು ಸಾಮಾನ್ಯ ಸ್ತ್ರೀಯರಂತೆ ಸೋಲಿಸಿದರು.'' ಅಸ್ತ್ರಶಸ್ತ್ರಗಳಿಂದ ಸಹಿತನಾಗಿ ರಥದಲ್ಲಿ ಕುಳಿತು ಯುದ್ಧ ಮಾಡಿದರೂ ತಾನು ಸೋಲನ್ನನುಭವಿಸಲು ಕಾರಣ ವೇನೆಂದು ಅರ್ಜುನನೇ ತಿಳಿಸುತ್ತಾನೆ–

**ತದ್ವೈ ಧನುಸ್ತ ಇಷವಃ ಸ ರಥೋ ಹಯಾಸ್ತೇ**
**ಸೋಽಹಂ ರಥೀ ನೃಪತಯೋ ಯತ ಆಮನಂತಿ ।**
**ಸರ್ವಂ ಕ್ಷಣೇನ ತದಭೂದಸದೀಶರಿಕ್ತಂ**
**ಭಸ್ಮನ್ ಹುತಂ ಕುಹಕರಾದ್ಧಮಿವೋಪ್ತಮೂಷೇ ॥** — [೧-೧೫-೨೧]

"ಅದೇ ಗಾಂಡೀವ ಧನುಸ್ಸು. ಹಿಂದಿನ ಬಾಣಗಳಂತೆಯೇ ಬಾಣಗಳು. ಅದೇ ರೀತಿಯ ರಥ. ಅದೇ ಗೆಲುವಿನ ಕುದುರೆಗಳು. ಗಾಂಢೀವ ಧನುರ್ಧಾರಿಯಾದ ಅದೇ ಅರ್ಜುನ. ಇವೆಲ್ಲವೂ ಇದ್ದರೂ ಶ್ರೀಕೃಷ್ಣನೊಬ್ಬ ಇರಲಿಲ್ಲ. ಆದ್ದರಿಂದಲೇ ಏನೂ ಮಾಡಲಾಗಲಿಲ್ಲ. ನನ್ನೆಲ್ಲ ಪ್ರಯತ್ನವೂ ಭಸ್ಮದಲ್ಲಿ ಹೋಮಿಸಿದಂತೆ, ಐಂದ್ರಜಾಲಿಕನ ವಸ್ತುವಿನಂತೆ, ಮರುಭೂಮಿಯಲ್ಲಿ ಬಿತ್ತಿದ ಬೀಜದಂತೆ ಎಲ್ಲವೂ ನಿಷ್ಫಲವಾಯಿತು'' ಎಂದು ಗೋಳಾಡುತ್ತಾನೆ. ವಿದ್ಯುತ್‌ರಹಿತ ಯಂತ್ರದಂತಾಗಿದೆ ಅರ್ಜುನನ ಸ್ಥಿತಿ. ವಿದ್ಯುತ್ ಇಲ್ಲದಿರೆ ಭಾರೀ ಗಾತ್ರದ ಯಂತ್ರವಿದ್ದರೂ ಅದರಿಂದ ಸಣ್ಣಕೆಲಸವೂ ನಡೆಯದು. ಅದರಂತೆ ವಿದ್ಯುತ್‌ನಂತಿರುವ ಶ್ರೀಕೃಷ್ಣನನ್ನು ಕಳೆದುಕೊಂಡ ಯಂತ್ರದಂತಿರುವ ಅರ್ಜುನನು ನಿಷ್ಕ್ರಿಯನಾದನು.

ಯುದ್ಧದ ಸಂದರ್ಭದಲ್ಲಿ ಶ್ರೀಕೃಷ್ಣನು ನೀರಡಿಸಿದ ಕುದುರೆಗಳಿಗೆ ನೀರು ಕುಡಿಸಲು ರಥ ಬಿಟ್ಟಿ ಕುದುರೆಗಳನ್ನು ನೀರಿನತ್ತ ನೆಳೆದೊಯ್ದ. ಇತ್ತ ಅರ್ಜುನ ಏಕಾಕಿಯಾಗಿದ್ದಾನೆ. ಬಲಿಷ್ಠರಾದ ಕೌರವರಿಂದ ಸುತ್ತುವರೆದಿದ್ದಾನೆ. ಹೀಗಿದ್ದರೂ ಅಂದು ಶ್ರೀಕೃಷ್ಣನ ಪ್ರಭಾವ–ತೇಜಸ್ಸುಗಳಿಂದ ಎಲ್ಲರೂ ಸ್ತಬ್ಧರಾಗಿದ್ದರು. ಇಲ್ಲವಾದರೆ ಏಕಾಕಿಯಾದ ಅರ್ಜುನ ಭೀಷ್ಮ–ಕರ್ಣರ ನಿಶಿತಾಸ್ತ್ರಗಳಿಂದ ಬದುಕಿ ಉಳಿಯು ವುದಾದರೂ ಹೇಗೆ? ಹೀಗೆ ಪ್ರತಿಕ್ಷಣವೂ ಶ್ರೀಕೃಷ್ಣನ ಪಾದವೆಂಬ ನಾವೆಯನ್ನು ಆಶ್ರಯಿಸಿ ಆಪತ್ತೆಂಬ ಪ್ರಳಯ ಸಾಗರವನ್ನೇ ದಾಟಿ ಉಳಿದವ ಅರ್ಜುನ. ಇಂದು ಕೃಷ್ಣನಿಲ್ಲದೆ ಪರಿತಪಿಸುತ್ತಿದ್ದಾನೆ.

ಹೀಗೆ ಯಾದವರ ಕದನ–ಮರಣಗಳನ್ನು ಶ್ರೀಕೃಷ್ಣನ ವೈಕುಂಠಯಾತ್ರೆಯನ್ನು ತಿಳಿಸುತ್ತಿರಲು ಧರ್ಮರಾಜಾದಿಗಳು ತಮ್ಮ ಅವತಾರಕಾರ್ಯವೂ ಮುಗಿಯಿತೆಂದು ಭಾವಿಸಿದರು. ತಮ್ಮ ಮೊಮ್ಮಗನಾದ ಅಭಿಮನ್ಯುವಿನ ಪುತ್ರನಾದ ಪರೀಕ್ಷಿದ್ರಾಜನಿಗೆ ರಾಜ್ಯವನ್ನು ಒಪ್ಪಿಸಿ, ಪಾಂಡವರೆಲ್ಲರೂ ಮಹಾಪ್ರಸ್ಥಾನಕ್ಕೆ ಸಿದ್ಧರಾದರು.

## ಧರ್ಮದೇವತೆಯ ವಿಲಾಪ

ಅನಂತರ ಪರಮಭಗವದ್ಭಕ್ತನಾದ ಪರೀಕ್ಷಿದ್ರಾಜನು ಧರ್ಮದಿಂದ ರಾಜ್ಯಪರಿ ಪಾಲನೆಯನ್ನು ಮಾಡುತ್ತಿದ್ದನು. ಹೀಗಿರಲು ಒಂದು ದಿನ 'ತನ್ನರಾಜ್ಯದಲ್ಲಿ ಕಲಿಯ ಪ್ರವೇಶವಾಗಿದೆ' ಎಂಬ ಅಪ್ರಿಯ ವಾರ್ತೆಯನ್ನು ಕೇಳಿದನು. ಸುದ್ದಿತಿಳಿದ ಪರೀಕ್ಷಿತ ಸುಮ್ಮನೆ ಕುಳಿತುಕೊಳ್ಳಲಿಲ್ಲ. ಕಲಿಯ ನಿಗ್ರಹವನ್ನೇ ಮಾಡುತ್ತೇನೆಂದು ರಥ ಏರಿ ಹೊರಟ. ಕಲಿ ಉಚ್ಚಾಟನೆಗಾಗಿ ಶೋಧಿಸಿದ. ಆ ಸಂದರ್ಭದಲ್ಲಿ ದೃಶ್ಯ ಒಂದನ್ನು ಕಂಡ.

ಒಂದು ವೃಷಭ, ಒಂದು ಹಸು, ಒಬ್ಬ ಶೂದ್ರ ಮೂವರನ್ನು ಕಂಡ. ವೃಷಭವು ಮೂರು ಕಾಲನ್ನು ಕಳೆದುಕೊಂಡು ಕಳೆಗುಂದಿದ ಮುಖದಿಂದ ನಡುಗುತ್ತಾ ಏಕಪಾದದಲ್ಲಿ ನಿಂತಿದೆ. ಹಸು ತನ್ನ ಕರುವನ್ನು ಕಳೆದುಕೊಂಡು ಕಣ್ಣೀರಿಡುತ್ತಿದೆ. ಶೂದ್ರನಾದರು ಕತ್ತಿಯನ್ನು ಎತ್ತಿ ಎತ್ತನ್ನು ಕೊಲ್ಲಲು ಉದ್ಯುಕ್ತನಾಗಿದ್ದಾನೆ. ಇಂತಹ ಭಯಾನಕ ದೃಶ್ಯವನ್ನು ಪರೀಕ್ಷಿತನು ನೋಡಿದ.

ಇದೇ ಕಲಿಯುಗದ ದೃಶ್ಯ. ಕಲಿಯು ಎಲ್ಲಿದ್ದಾನೆ? ಎಲ್ಲಿ ಸಾತ್ವಿಕ ಗೋಮಾತೆಗೆ ಅನ್ಯಾಯ ನಡೆಯುತ್ತಿದೆಯೋ ಅಲ್ಲಿಯೇ ಕಲಿ ಇದ್ದಾನೆ. ಒಂದು ಗೋವಿನ ಹತ್ಯೆಗೆ ಉದ್ಯುಕ್ತನಾದ ಶೂದ್ರನನ್ನು ಕಂಡು ಕಲಿಯ ಕಾರ್ಯವೆಂದು ಪರೀಕ್ಷಿತ ಗುರುತಿಸಿದ. ಇಂದು ನಮ್ಮ ನಾಡಿನಲ್ಲಿ ಲಕ್ಷ ಲಕ್ಷ ಗೋವುಗಳನ್ನು ಊರು ಊರುಗಳಲ್ಲಿ ನಾಶ ಮಾಡುತ್ತಿದ್ದಾರೆ. ಕಟುಕರ ತಾಣಕ್ಕೆ ಕೊಂಡೊಯ್ಯುತ್ತಿದ್ದಾರೆ. ಇಷ್ಟು ಅಸಂಖ್ಯ ಸಂಖ್ಯೆಯ ಗೋಹತ್ಯೆ ನಡೆಯುತ್ತಿದೆ ಎಂದರೆ ಕಲಿಯ ತಾಂಡವವೇ ನಡೆಯುತ್ತಿದೆ ಎಂದರ್ಥ.

ಪರೀಕ್ಷಿತನು ಕಂಡ ವೃಷಭವೇ ಧರ್ಮದೇವತೆ. ಇಂದೂ ಕಲಿಯುಗದಲ್ಲಿ ಧರ್ಮವು ತೆವಳುತ್ತಾ ಸಾಗಿದೆ. ಧರ್ಮದ ಪಾದಗಳೆಲ್ಲವೂ ತುಂಡಾಗಿ ಸ್ವಲ್ಪ ಮಾತ್ರ ಉಳಿದಿದೆ. ಚೈತನ್ಯವಿದ್ದರೂ ಚಾಲನೆಯಿಲ್ಲವಾಗಿದೆ.

ಮ್ಲೇಚ್ಛನ ಆಕ್ರಮಣದಿಂದ ರೋದಿಸುತ್ತಿರುವ ಗೋಮಾತೆ ಎಂದರೆ ಭೂಮಾತೆ. ಕಲಿ ಪುರುಷರ ಆಕ್ರಮಣದಿಂದ ಸಹನೆ ಎನಿಸಿದ ಭೂಮಾತೆಯೂ ಅಸಹನೆಯಿಂದ ಕಣ್ಣೀರು ಸುರಿಸುತ್ತಿದ್ದಾಳೆ.

ಪ್ರತಿನಿತ್ಯ ನಮ್ಮೆಲ್ಲರನ್ನೂ ಸಲಹುವ ಮಹಾತಾಯಿ ಭೂಮಾತೆಗೆ ಅನ್ಯಾಯ ವನ್ನು ಮಾಡುತ್ತಿದ್ದಾರೆ. ಅವಳನ್ನು ಮಾತೃತ್ವದ ಚಿಂತನೆಯಿಂದ ನಾವೆಲ್ಲರೂ ಸ್ಮರಿಸಬೇಕು–

ಸಮುದ್ರವಸನೇ ದೇವೀ ಪರ್ವತಸ್ತನಮಂಡಿತೇ ।
ವಿಷ್ಣುಪತ್ನಿ ನಮಸ್ತುಭ್ಯಂ ಪಾದಸ್ಪರ್ಶಂ ಕ್ಷಮಸ್ವ ಮೇ ॥

–ಎಂದು ಪ್ರಾರ್ಥಿಸಬೇಕು. ಪರ್ವತಗಳೆಂಬ ಸ್ತನಗಳಿಂದ ಯುಕ್ತಳಾದ, ಸಮುದ್ರ ವೆಂಬ ವಸನವನ್ನು ಧರಿಸಿದ ಭೂತಾಯಿಯ ಮಕ್ಕಳು ನಾವು. ಪರ್ವತಗಳೆಂಬ ಅವಳ ಸ್ತನಗಳಿಂದ ಹರಿದುಬರುವ ಕಾವೇರಿ, ಗಂಗಾ, ತುಂಗಾ, ಯಮುನೇ ಮುಂತಾದ ಜೀವನದಿಗಳಿಂದ ಜೀವಿಸುತ್ತಿದ್ದೇವೆ. ಕಾಲಿನಿಂದ ತುಳಿಯುತ್ತೇವೆ. ಕಶ್ಮಲವನ್ನು ವಿಸರ್ಜಿಸುತ್ತೇವೆ. ಇವೆಲ್ಲವನ್ನೂ ಮನ್ನಿಸು ಎಂದು ವಿಷ್ಣುಪತ್ನಿಯಾದ ಭೂಮಾತೆಯ ಬಳಿ ಕೈಮುಗಿದು ಪ್ರಾರ್ಥಿಸಬೇಕು. ಈ ಎಲ್ಲ ಅಪರಾಧಗಳನ್ನು ಭೂಮಾತೆಯು ಕ್ಷಮಿಸುತ್ತಾಳೆ. ಆದರೆ ಜನರು ಮಾಡುತ್ತಿರುವ ಹಿಂಸೆ, ಅಕೃತ್ಯ, ವಂಚನೆ, ಧರ್ಮಾತಿಕ್ರಮಣ ಇವುಗಳನ್ನು ಎಂದೂ ಕ್ಷಮಿಸಳು.

ಇಂತಹ ಭೂಮಾತೆಯನ್ನು ಸಾಂತ್ವನಗೊಳಿಸಿ, ಧರ್ಮದೇವತೆಯ ದುಃಖಕ್ಕೆ ಕಾರಣವೇನು? ಎಂದು ಪ್ರಶ್ನಿಸಲು ಭೂಮಾತೆಯು ಉತ್ತರಿಸುತ್ತಾಳೆ.

ಧರ್ಮದೇವತೆಯಾದ, ಧರ್ಮಸಂಸ್ಥಾಪಕನಾದ ಶ್ರೀಕೃಷ್ಣನೇ ಪರಂಧಾಮಕ್ಕೆ ತೆರಳುತ್ತಿರಲು ಸದ್ಗುಣಗಳೂ ಅವನನ್ನೇ ಅನುಸರಿಸಿ ಹೋಗಿವೆ. ಅವನ ಗುಣಗಳಿಗೆ ಎಣೆಯುಂಟೇ? ಔದಾರ್ಯ, ಧೈರ್ಯ, ಶೌರ್ಯ, ಕರುಣೆ, ಪ್ರೇಮ, ಪ್ರಭುತ್ವ, ಪ್ರಶ್ರಯ, ಶೀಲ, ಬಲ, ಗಾಂಭೀರ್ಯ, ಸ್ಥೈರ್ಯ, ಆಸ್ತಿಕ್ಯ, ಕೀರ್ತಿ, ಮಾನ, ಅನಹಂಕಾರ, ಸತ್ಯ, ಶೌಚ, ತ್ಯಾಗ, ಸಂತೋಷ, ಆರ್ಜವ, ಶಮ, ದಮ, ತಪಸ್ಸು, ತಿತಿಕ್ಷಾ –ಮುಂತಾದ ಗುಣಸಮುದ್ರನಾದ ಶ್ರೀಕೃಷ್ಣನನ್ನು ಕಳೆದುಕೊಂಡು ಭೂಲೋಕವೇ ಕಳೆಗುಂದಿದೆ. ಹೀಗಿರಲು ನಾನು ಹೇಗೆ ಜೀವಿಸಲಿ?!

**ತೇನಾಹಂ ಗುಣಪಾತ್ರೇಣ ಶ್ರೀನಿವಾಸೇನ ಸಾಂಪ್ರತಮ್ ।**
**ಶೋಚಾಮಿ ರಹಿತಂ ಲೋಕಂ ಪಾಪ್ಮನಾ ಕಲಿನೇಕ್ಷಿತಮ್ ॥** – [೧-೧೬-೩೧]

ಅನಂತಕಲ್ಯಾಣಗುಣಗಳಿಗೆ ನೆಲೆಯಾದ, ಉರದಲ್ಲಿ ರಮೆಯನ್ನವ್ರುಚಿದ, ಶ್ರೀನಿವಾಸನ ದರ್ಶನವಿಲ್ಲದೆ, ಕಲಿಯ ದರ್ಶನದಿಂದ ಸಂತ್ರಸ್ತವಾದ ಜಗತ್ತನ್ನು ಕಂಡು ದುಃಖಿಸುತ್ತಿದ್ದೇನೆ.''

ಹೀಗೆ ಪರಸ್ಪರ ದುಃಖ ಸಂಭಾಷಣೆಯಲ್ಲಿ ನಿರತರಾದ ವೃಷಭ, ಧೇನುಗಳ ಬಳಿ ಪರೀಕ್ಷಿತನು ಬಂದು 'ಅಂಗವೈಕಲ್ಯಕ್ಕೆ ಕಾರಣರು ಯಾರು ಹೇಳು! ನಾನು ಶಿಕ್ಷಿಸುತ್ತೇನೆ' ಎಂದು ಅಭಯದಾನ ಮಾಡಿದಾಗ ಧರ್ಮದೇವತೆಯಾದ ವೃಷಭವು ಹೇಳಿತು–

ಪರೀಕ್ಷಿತ! ಜಗತ್ತಿನಲ್ಲಿ ದುಃಖಕ್ಕೆ ಕಾರಣವನ್ನು ಒಬ್ಬೊಬ್ಬರು ಒಂದೊಂದು ತೆರನಾಗಿ ಬಣ್ಣಿಸುತ್ತಾರೆ. ಕೆಲವರು ಭಗವಂತನೆಂದು, ಕೆಲವರು ಅದೃಷ್ಟವೆಂದು, ಮತ್ತೆ ಕೆಲವರು ಅಜ್ಞಾನವನ್ನೂ ಕಾರಣವೆನ್ನುತ್ತಾರೆ. ನನ್ನ ದುಃಖದ ಕಾರಣ ನೀನೇ ವಿಚಾರಮಾಡು ಎಂದು ಒಗಟಿನ ಮಾತನ್ನು ಆಡಿತು.

## ಧರ್ಮದ ಅವನತಿಯ ಕಾರಣಗಳು

ಪರೀಕ್ಷಿತ ವಿಚಾರಮಾಡಿದ– 'ಸಜ್ಜನರಿಂದೇನಾದರೂ ತಪ್ಪುನಡೆದರೆ ಅದನ್ನು ಹೇಳದೆ ಮುಚ್ಚಿಡಬೇಕು' ಎಂಬ ತತ್ತ್ವವನ್ನು ತಿಳಿಸಲೋಸುಗ ನೇರ ಕಾರಣ ಹೇಳುತ್ತಿಲ್ಲ. ಆದ್ದರಿಂದ ಇದು ಧರ್ಮದೇವತೆಯೇ ಸರಿ. ಎಲ್ಲದಕ್ಕೂ ಭಗವಂತನೇ ಮುಖ್ಯ ಕಾರಣನಾಗಿದ್ದಾನೆ. ಧರ್ಮದೇವತೆಯ ಮೂರು ಕಾಲು ನಾಶವಾಗಲೂ ಕಾರಣವಿದೆ ಎಂದು ತಿಳಿಸುತ್ತಾನೆ.

ಧರ್ಮಕ್ಕೆ ನಾಲ್ಕು ಕಾಲುಗಳು. 'ತಪಸ್ಸು, ಶೌಚ, ದಯಾ, ಸತ್ಯ' ಎಂದು. ನಾವು ಮಾಡುವ ಎಲ್ಲ ಸದ್ಧರ್ಮಗಳು –ಪ್ರಾರ್ಥನೆ, ಪೂಜೆ, ಧ್ಯಾನ ಎಲ್ಲವೂ ತಪಸ್ಸು ಎನಿಸಿದರೆ; ಒಳಗೆ ಹೊರಗೆ ಶುದ್ಧರಾಗಿರುವುದು ಶೌಚವೆನಿಸುತ್ತದೆ. ಸರ್ವ ಪ್ರಾಣಿಗಳಲ್ಲಿ ತೋರುವ ಕರುಣೆಯೆ ದಯೆ ಎನಿಸಿದರೆ, ಪ್ರಾಮಾಣಿಕವಾದ ನಡೆನುಡಿಗಳೇ ಸತ್ಯ ಎನಿಸಿವೆ. ಧರ್ಮದ ಈ ನಾಲ್ಕು ಪಾದಗಳನ್ನೂ ನಾಶಪಡಿಸುವ ಅಧರ್ಮದ ನಾಲ್ಕು ಪಾದಗಳಿವೆ.

ಅಹಂಕಾರದಿಂದ ತಪಸ್ಸು ನಾಶವಾಗುತ್ತದೆ. ಇದಕ್ಕೊಂದು ನಿದರ್ಶನ.

ಯಯಾತಿ ಎಂಬ ಚಕ್ರವರ್ತಿಯು ಸತ್ಕರ್ಮಾಚರಣಶೀಲನಾಗಿದ್ದ. ಉತ್ತಮ ತಪಸ್ಸು ಯಜ್ಞಯಾಗಾದಿಗಳನ್ನಾಚರಿಸಿ ಸ್ವರ್ಗವನ್ನೇರಿದ.

ಒಮ್ಮೆ ದೇವೇಂದ್ರನು ಯಯಾತಿ ರಾಜನ ಬಳಿ ಪ್ರಶ್ನೆಯೊಂದನ್ನು ಕೇಳಿದ. ಯಯಾತಿ ರಾಜ! ನೀನು ಭೂಲೋಕದಲ್ಲಿ ಮೆರೆದವ. ಅನೇಕ ಮಂದಿ ರಾಜಾಧಿರಾಜರನ್ನು ಕಂಡವ. ನೀನು ನೋಡಿದ ಮಹಾನುಭಾವರಲ್ಲಿ ಉತ್ತಮ ತಪಸ್ವಿಗಳಾದವರು ಯಾರು? ಯಯಾತಿಯು ವಿಚಾರಮಾಡದೆ ಉತ್ತರಿಸಿದ. 'ಭೂಲೋಕದಲ್ಲಿ ನನ್ನನ್ನು ಹೊರತಾಗಿ ಹೆಚ್ಚು ತಪಸ್ಸು ಮಾಡಿದವರು ಯಾರಿದ್ದಾರೆ?!

ನಾನೇ ಉತ್ತಮ ತಪಸ್ವಿ ಎಂದು ಉನ್ಮತ್ತನಾಗಿ ನುಡಿದ. ಇಷ್ಟು ಹೇಳಿದ ಕೂಡಲೇ ಸ್ವರ್ಗದಿಂದ ಅವನನ್ನು ಕೆಳಕ್ಕೆ ದೂಡಿದರು. ಅಹಂಕಾರಕ್ಕೆ ಗುರಿಯಾದ ಯಯಾತಿಯ ಪುಣ್ಯವೆಲ್ಲವೂ ಕರಗಿಹೋಯಿತು. ಆದ್ದರಿಂದ ಎಷ್ಟೇ ಉತ್ತಮಕಾರ್ಯ ಮಾಡಿದರೂ ಅಹಂಕಾರಕ್ಕೆ ತುತ್ತಾಗಬಾರದು. ಇದಕ್ಕೆ ಹನುಮಂತನನ್ನು ಆದರ್ಶವಾಗಿಟ್ಟುಕೊಳ್ಳಬೇಕು.

ಸೀತಾಮಾತೆಯನ್ನು ಕಾಣಲು ಹನುಮಂತನು ಲಂಕೆಗೆ ಹಾರಿ ಬಂದಿದ್ದಾನೆ. ಬಳಿಬಂದ ಹನುಮಂತನನ್ನು ಸೀತೆಯು ಪ್ರಶ್ನಿಸುತ್ತಾಳೆ.

ಹನುಮಂತನೇ! ಸಮರ್ಥನಾದ ನೀನೊಬ್ಬ ಹೇಗೋ ಲಂಕೆಗೆ ಬಂದಿರುವಿ. ಉಳಿದ ಕಪಿಗಳು ಬರುವುದಾದರೂ ಹೇಗೆ? ಎಂದು ಕೇಳಿದಾಗ ಹನುಮಂತ ಉತ್ತರಿಸುತ್ತಾನೆ –'ಅಮ್ಮಾ ಸೀತೆ! ಸುಗ್ರೀವನ ಸೈನ್ಯದಲ್ಲಿ ಎಲ್ಲರಿಗಿಂತಲೂ ನಾನೇ ಕಿರಿಯ. ಎಲ್ಲರೂ ನನ್ನನ್ನು ಮೀರಿದವರೇ ಇದ್ದಾರೆ. 'ಮತ್ತಃ ಪ್ರತ್ಯವರಃ ಕಶ್ಚಿನ್ನಾಸ್ತಿ ಸುಗ್ರೀವಸನ್ನಿಧೌ' ಎಂದು ಹೇಳಿ, ನಾನೇ ಬಂದಮೇಲೆ ಉಳಿದವರು ಬರುವುದೇನು ಮಹಾ! ಎನ್ನುತ್ತಾನೆ.

ಎಣೆಯಿರದ ಪೌರುಷದ ಗಂಡುಗಲಿಯಾದ ಹನುಮಂತನ ಪ್ರತಾಪವೆಲ್ಲಿ! ಇತರ ಶಾಖಾಮೃಗಗಳೆಲ್ಲಿ! ಹಾಗಿದ್ದರೂ ಸ್ವಲ್ಪವೂ ಅಹಂಕಾರಗೊಳ್ಳದೆ ವರ್ತಿಸುತ್ತಾನೆ. ಆದರೆ ಯಯಾತಿ ನನಗಿಂತ ಮಿಗಿಲಾದವರ್ಯಾರು? ಎಂದು ಹಮ್ಮಿನಿಂದ ಬೀಗಿದ; ಸ್ವರ್ಗಚ್ಯುತನಾದ. ಇವೆರಡು ದೃಷ್ಟಾಂತಗಳನ್ನು ಮುಂದಿಟ್ಟುಕೊಂಡು ನಾವೂ ಸಹ ಹನುಮಂತನ ಆದರ್ಶವನ್ನು ಅಳವಡಿಸಿಕೊಳ್ಳಬೇಕು.

ಹೀಗೆ ಅಹಂಕಾರದಿಂದ ತಪಸ್ಸು ನಾಶಹೊಂದುವಂತೆ ದುಷ್ಟರ ಸಂಗದಿಂದ ಶೌಚ ನಾಶವಾಗುತ್ತದೆ. ಇದಕ್ಕೊಂದು ಸಂವಾದಿಯಾಗಿ ರಾಮಾಯಣದಲ್ಲಿ ಮತ್ತೊಂದು ಪ್ರಸಂಗವನ್ನು ನೋಡೋಣ.

ಸೀತಾದೇವಿಯು ಶ್ರೀರಾಮಚಂದ್ರನಿಗೊಂದು ಕಥೆ ಹೇಳುತ್ತಾಳೆ.

ಒಬ್ಬ ಬ್ರಾಹ್ಮಣಕುಮಾರನಿದ್ದ. ತಪಸ್ಸಿಗಾಗಿ ಕಾಡಿಗೆ ನಡೆದ. ಆಂತರ–ಬಾಹ್ಯ ಶುದ್ಧಿ ಗಳನ್ನು ಕಾಪಾಡಿಕೊಂಡು ತಪೋನಿರತನಾದ. ಕಾಲ ಕಳೆದಂತೆ ಇವನ ತಪಸ್ಸಿನ ತೀಕ್ಷ್ಣತೆಯನ್ನು ಪರೀಕ್ಷಿಸಲೆಂದು ದೇವೇಂದ್ರನು ಬ್ರಾಹ್ಮಣವೇಷ ಧರಿಸಿ ಬಂದ. ಒಂದು ಹರಿತವಾದ ಕತ್ತಿಯನ್ನು ಕೊಟ್ಟು ಹೇಳಿದ 'ಪೂಜ್ಯರೇ! ಕತ್ತಿಯನ್ನು ನಿಮ್ಮ ಬಳಿ ಇಟ್ಟುಕೊಳ್ಳಿರಿ. ಸ್ವಲ್ಪ ಸಮಯದ ಅನಂತರ ನಾನು ಮರಳಿ ಬಂದು ತಿರುಗಿ ಪಡೆಯುತ್ತೇನೆ. ಇದೊಂದು ಸಣ್ಣ ಉಪ ಕಾರಮಾಡಿರಿ! ಆದರೆ ಒಂದು ಮಾತು. ನನ್ನ ಕತ್ತಿ ಬಹಳ ಹರಿತವಾಗಿದೆ. ನಾನು ಮರಳಿ ಪಡೆಯುವಾಗಲೂ ಹೀಗೇ ಇದ್ದರೆ ಸರಿ' ಎಂದು ಪ್ರಾರ್ಥಿಸಿದ.

ಬ್ರಾಹ್ಮಣಕುಮಾರನು ಸಣ್ಣ ಕೆಲಸವೆಂದು ಒಪ್ಪಿದ. ಇಂದ್ರನು ತಪಸ್ಸು ತಪ್ಪಿಸಿ ಸ್ವರ್ಗಕ್ಕೆ ನಡೆದ. ಕೆಲಸ ಬ್ರಾಹ್ಮಣಕುಮಾರ ತಿಳಿದಷ್ಟು ಸಣ್ಣ ಕೆಲಸವಾಗಿರಲಿಲ್ಲ. ಅವನು

ಆಶ್ರಮ ಬಿಟ್ಟು ಗೆಡ್ಡೆಗೆಣಸುಗಳನ್ನು ತರಲು ಹೋಗಬೇಕಾದರೆ ಕತ್ತಿಯನ್ನು ಆಶ್ರಮದಲ್ಲಿಯೇ ಬಿಡುವಂತಿರಲಿಲ್ಲ. ಅದರ ಸಂರಕ್ಷಣೆಯ ಹೊಣೆಯನ್ನು ಹೊತ್ತ ಋಷಿಕುಮಾರ ಎಲ್ಲಿ ಹೋಗುವಾಗಲೂ ಕತ್ತಿಯನ್ನು ಹೊತ್ತುಕೊಂಡೇ ಹೋಗುತ್ತಿದ್ದ. ಇಷ್ಟೇ ಅಲ್ಲದೆ ಕತ್ತಿಯು ಹರಿತವಾಗಿರಬೇಕೆಂದು ದೇವೇಂದ್ರ ತಿಳಿಸಿದ್ದ. ಅದಕ್ಕಾಗಿ ಪ್ರತಿನಿತ್ಯವೂ ಕತ್ತಿಗೆ ಸಾಣೆಯ ಹಿಡಿಯಲಾರಂಭಿಸಿದ. ಹರಿತವಾದ ಬಳಿಕ ಅದರ ತೈಕ್ಷ್ಣವನ್ನು ಪರೀಕ್ಷಿಸಲು ಮರಗಿಡಗಳ ಮೇಲೆ ಪ್ರಯೋಗಿಸಿದ. ಅವನ ಈ ಪ್ರಯೋಗ ಮುಂದುವರಿಯಿತು. ಜಿಂಕೆ, ಮೊಲ ಮುಂತಾದ ಸಾಧುಪ್ರಾಣಿಗಳ ಮೇಲೆ ನಡೆಯಲಾರಂಭಿಸಿತು.

ಒಬ್ಬ ದೊಡ್ಡ ತಪಸ್ವಿಯಾಗಬೇಕೆಂದು ಕಾಡಿಗೆ ಬಂದ ಬ್ರಾಹ್ಮಣಕುಮಾರ ಕಠೋರವಾದ ಕತ್ತಿಯ ಸಂಪರ್ಕದಿಂದ ಯಾರಿಗೂ ಬೇಡದವನಾದ ಒಬ್ಬ ಬೇಡನಾಗಿ ಪರಿವರ್ತನೆಗೊಂಡ.

ಒಬ್ಬ ಉತ್ತಮ ಸಾಧಕ ದುಷ್ಟ ವಸ್ತುಗಳ ಸಂಪರ್ಕವನ್ನು ಹೊಂದಿದ್ದರೆ ಹೇಗೆ ಚಾರಿತ್ರ್ಯಹೀನನಾಗುತ್ತಾನೆ –ಎನ್ನುವುದಕ್ಕೆ ನಮ್ಮ ಸೀತಾಮಾತೆಯ ಕಥೆ ಉತ್ತಮ ನಿದರ್ಶನವಾಗಿದೆ.

ಇಂದು ಕಲಿಯುಗದಲ್ಲಿ ದುಷ್ಟವಸ್ತುಗಳ ಸಂಪರ್ಕದಿಂದ ಏನೆಲ್ಲಾ ಅನರ್ಥಗಳು ಸಂಭವಿಸುತ್ತಿವೆ ಎಂದು ನಾವೆಲ್ಲರೂ ಪ್ರತ್ಯಕ್ಷವಾಗಿ ನೋಡುತ್ತಿದ್ದೇವೆ. ನಮ್ಮ ಮಕ್ಕಳು, ಧರ್ಮ, ಸಂಸ್ಕೃತಿ ಎಲ್ಲವೂ ಅಧಃಪತನಕ್ಕೆ ಗುರಿಯಾಗುತ್ತಿವೆ. ಕೆಟ್ಟ ವಿಷಯ ಗಳ ಸಂಗದಿಂದ ಶೌಚವೇ ಭಗ್ನವಾಗುತ್ತದೆ.

ಮೂರನೆಯದ್ದಾದ ದಯೆಯು ಐಶ್ವರ್ಯ ಅಧಿಕಾರಗಳ ಮದದಿಂದ ಮರೆ ಯಾಗುತ್ತದೆ. ಹಿರಣ್ಯಕಶಿಪು, ರಾವಣ ಇವರೆಲ್ಲರೂ ಅಧಿಕಾರದ ಮದದಿಂದ ನಿಷ್ಪಾಪಿಗಳಾದ ಸಜ್ಜನರನ್ನೆಲ್ಲಾ ಹಿಂಸಿಸಿದರು. ಧರ್ಮಕ್ಕೆ ಕಂಟಕರಾದರು. ಮದದಿಂದ ದಯೆ ನಾಶವಾಗಿ ಕ್ರೌರ್ಯವು ಜನ್ಮತಾಳುತ್ತದೆ ಎನ್ನುವುದಕ್ಕೆ ಇವರೇ ದೃಷ್ಟಾಂತ.

ನಾಲ್ಕನೆಯದ್ದಾದ ಸತ್ಯವು ಸುಳ್ಳಿನಿಂದ ನಾಶವಾಗುತ್ತದೆ. ಕಲಿಯುಗದಲ್ಲಿ ಕಲಿಯ ಆಕ್ರಮಣ ಸತ್ಯದ ಮೇಲೆ ಮೊದಲಾಗುತ್ತದೆ. ಪ್ರತಿನಿತ್ಯವೂ ಸತ್ಯದ ಮೇಲೆ ಆಕ್ರಮಣ ನಡೆದು ಸತ್ಯವು ನಾಗಾಲೋಟಕಿತ್ತಿದೆ. ಹೀಗೆ ಮಿಥ್ಯವಚನಗಳೇ ಸತ್ಯದ ಹತ್ಯೆಗೆ ಹೇತುಗಳಾಗಿವೆ.

ಹೀಗೆ ಧರ್ಮದೇವತೆಯ ಅಂಗಗಳೆಲ್ಲವೂ ಭಗ್ನವಾಗಿ ಸತ್ಯವೆಂಬ ಕಾಲು ಕಾಲುಭಾಗ ಉಳಿದಿದೆ. ಅದನ್ನು ಅವಲಂಬಿಸಿಕೊಂಡು ಧರ್ಮವು ತೆವಳುತ್ತಾ ಸಾಗಿದೆ. ಸತ್ಯದ ಪಾದವನ್ನೂ ಮುರಿಯಬೇಕೆಂದು ಕಲಿಯು ಪ್ರಯತ್ನ ನಡೆಸಿದ್ದಾನೆ' ಎಂದು ಪರೀಕ್ಷಿತನು ವಿಮರ್ಶೆಮಾಡಿ ಅರ್ಥಮಾಡಿಕೊಂಡ.

## ಕಲಿನಿಗ್ರಹ

ಕಲಿಯ ದುರತಿಕ್ರಮಣವನ್ನು ಮನಗಂಡ ಪರೀಕ್ಷಿತ ಮಹಾರಾಜನು ಧನುಷ್ಪಾಣಿಯಾಗಿ ಕಲಿಯನ್ನು ನಿಗ್ರಹಿಸುತ್ತೇನೆಂದು ಶರವೇಗದಲ್ಲಿ ಹೊರಟ. ಮಹಾದುಷ್ಟನಾದ ಬಲಿಷ್ಠನಾದ ಕಲಿಯನ್ನು ಎದುರಿಸುವ ಶಕ್ತಿ ವಾಯುದೇವರ ಸನ್ನಿಧಾನದಿಂದ ಪರೀಕ್ಷಿತನಿಗೆ ಬಂದಿದೆ. ಖಡ್ಗ ಎತ್ತಿದ್ದಾನೆ. ಇದನ್ನು ಕಂಡ ಕಲಿಪುರುಷ ಕಾಲಿಗೆ ಎರಗಿದ. ಪರೀಕ್ಷಿತನು ರಾಜ್ಯದಿಂದಲೇ ತೊಲಗುವಂತೆ ಎಚ್ಚರಿಸಿದ. ಯಮನಂತೆ ಬೆನ್ನಟ್ಟಿದ. ಕಲಿಯು ಬೇರೆ ಮಾರ್ಗವನ್ನು ಕಾಣದೆ ಪರೀಕ್ಷಿತನ ಬಳಿಯೇ ಪ್ರಾರ್ಥಿಸಿದ. 'ರಾಜನ್! ನಾನು ಎಲ್ಲಿ ಹೋದರೂ ನೀನು ಧನುರ್ಬಾಣಧಾರಿಯಾಗಿ ಕರಾಳ ರೂಪದ ಮೃತ್ಯುವಿನಂತೆ ಬೆನ್ನಟ್ಟಿ ಬರುತ್ತಿರುವೆ. ನಿನ್ನ ಮುಷ್ಟಿಯಿಂದ ಮೋಕ್ಷವೇ ಇಲ್ಲದಂತಾಗಿದೆ. ಆದ್ದರಿಂದ ನೀನೇ ದಯಮಾಡಿ ನನ್ನ ವಸತಿಗೆ ಅನುಕೂಲವಾದ ಸ್ಥಳವನ್ನು ಒದಗಿಸಿಕೊಡು' ಎಂದು ಅಂಗಲಾಚಿದಾಗ, ಪರೀಕ್ಷಿತನು ಕಲಿಗೆ ನಾಲ್ಕು ಸ್ಥಾನಗಳನ್ನು ನೀಡಿದ.

**ಅಭ್ಯರ್ಥಿತಸ್ತದಾ ತಸ್ಮೈ ಸ್ಥಾನಾನಿ ಕಲಯೇ ದದೌ ।**
**ದ್ಯೂತಂ ಪಾನಂ ಸ್ತ್ರಿಯಃ ಸೂನಾ ಯತ್ರಾಧರ್ಮಶ್ಚತುರ್ವಿಧಃ ॥** — [೧-೧೭-೩೭]

ಮೊದಲನೆಯದ್ದು ದ್ಯೂತ. ಇಂದು ಎಲ್ಲೆಡೆಯೂ ಇದರ ಹಾವಳಿಯೇ ತುಂಬಿದೆ. ಒಂದಂಕಿಯ ಲಾಟರಿ, ಕುದುರೆ ರೇಸ್, ಇಸ್ಪೀಟ್ ಎಲ್ಲವೂ ದ್ಯೂತ ದಲ್ಲಿಯೇ ಸೇರಿವೆ. ಇವುಗಳಲ್ಲಿ ತೊಡಗುವವರೆಲ್ಲರೂ ಕಲಿಯ ಪ್ರಭಾವಕ್ಕೆ ತುತ್ತಾಗುತ್ತಾರೆ. ಇಂದು ಇವೆಲ್ಲವೂ ಶ್ರೀಮಂತರ ಪ್ರತಿಷ್ಠೆಗೆ ಮೆರಗು ತರುವ ಕೃತ್ಯಗಳಾಗಿವೆ. ಇದು ಕಲಿಯ ವಿಜೃಂಭಣೆ.

ಎರಡನೆಯದ್ದು ಸುರಾಪಾನ. ನಗರ ಹಳ್ಳಿಗಳಲ್ಲಿ ಇದರ ಅಂಗಡಿಗಳೇ ಹೆಚ್ಚಾಗಿವೆ. ದೇವಸ್ಥಾನಕ್ಕೆ ಹೋಗುವ ರಸ್ತೆಗಳ ಇಕ್ಕೆಲಗಳಲ್ಲಿಯೂ ಇವುಗಳದ್ದೇ ಹಾವಳಿ. ಜನರೆಲ್ಲರೂ ಶಾಂತಿ ಸಜ್ಜನಿಕೆಯ ಪ್ರತೀಕವಾದ ಗಾಂಧಿಯನ್ನು ಮರೆತು ಶೇಂದಿಯನ್ನೇ ಮೆರೆಸುತ್ತಿದ್ದಾರೆ.

ಒಮ್ಮೆ ಒಬ್ಬ ಉಪಕುಲಪತಿಗಳು ನನ್ನ ಬಳಿ ಬಂದು ಪ್ರಸಂಗವನ್ನು ಹೇಳಿದ್ದರು. ಅವರು ಒಂದು ಕಡೆ ಮದುವೆಯ ನಿಶ್ಚಿತಾರ್ಥಕ್ಕೆಂದು ಹೋಗಿದ್ದರಂತೆ. ನಿಶ್ಚಿತಾರ್ಥದ ಕೊನೆಯಲ್ಲಿ ಎಲ್ಲರೂ ಕಲ್ಯಾಣಮಂಟಪದ ಉಪ್ಪರಿಗೆಗೆ ನಡೆದರು. ಇವರು ಕೆಳಗೆ ಇದ್ದರು. ಇವರನ್ನೊಬ್ಬರು 'ಮೇಲೆ ಬನ್ನಿ! ಮದ್ಯ-ಮಾಂಸಗಳ ಔತಣವನ್ನು ಬಿಟ್ಟು ಕೆಳಗೇಕೆ ಕುಳಿತಿರುವಿರಿ!' ಎಂದು ಆಹ್ವಾನಿಸಿದಾಗ ದಿಗ್ಭ್ರಮೆಗೊಂಡರಂತೆ. 'ಮೇಲ್ಪಂಕ್ತಿಯ ಬ್ರಾಹ್ಮಣರೇ ಹೀಗೆ ಅನ್ಯಾಯಮಾರ್ಗ ತುಳಿದರೆ ನಮ್ಮ ದೇಶದ ಸ್ಥಿತಿಗತಿಗಳೆಲ್ಲಿಗೆ ಬಂದವು!' ಎಂದು ನನ್ನ ಬಳಿ ಕೊರಗಿದರು.

ಹೀಗೆ ಎಲ್ಲೆಡೆಯೂ ಪಾನದ ಪ್ರವೃತ್ತಿ ಬೆಳೆಯುತ್ತಿದೆ. ವೃದ್ಧರು ತರುಣರು ಎಲ್ಲರೂ ನೀರು ಕುಡಿಯುವಂತೆ ಬೀರು ಕುಡಿಯಲಾರಂಭಿಸಿದ್ದಾರೆ. ಹಿಂದೆ ನಮ್ಮ

ಗುರುಕುಲದಲ್ಲಿ ಕಾಫಿ, ಚಹಾ ಕುಡಿಯಬೇಡಿ; ಹಾಲನ್ನು ಕುಡಿಯಿರಿ!! ಎಂದು ಹೇಳುತ್ತಿದ್ದೆವು. ಇಂದು ನಮ್ಮ ಯುವಕರು ಆಲಕೋಹಾಲನ್ನು ಕುಡಿಯಲಾರಂಭಿಸಿದ್ದಾರೆ. ಪಾನವೆಂಬ ಪತನದ ಹಾದಿಯನ್ನು ತುಳಿಯುತ್ತಿದ್ದಾರೆ. ಕಾಫಿ, ಚಹಾಗಳನ್ನು ಇಂದು ನಿರಾಕರಿಸುವುದಿರಲಿ ಬೀರು ಕುಡಿಯದಿರಿ! ಎಂದು ತಡೆಯುವುದೇ ಕಠಿಣವಾಗಿದೆ. ಈ ವ್ಯಸನವನ್ನು ಸರ್ವಾತ್ಮನಾ ತ್ಯಜಿಸಬೇಕು.

ಮೂರನೆಯ ಕಲಿಯ ಸ್ಥಾನ ಸ್ತ್ರೀಯರು

ಭಾಗವತದಲ್ಲಿ 'ಸ್ತ್ರೀಯರೆಲ್ಲರನ್ನೂ ಕಲಿಯ ಸ್ಥಾನ' ಎಂದು ನಿಕೃಷ್ಟವಾಗಿ ಬಣ್ಣಿಸಬಹುದೇ? ಎಂಬ ಪ್ರಶ್ನೆ ಬರುತ್ತದೆ. ಇಲ್ಲಿ ಸ್ತ್ರೀಯರನ್ನು ನಿಂದಿಸುತ್ತಿಲ್ಲ ಪುರುಷರಿಗೆ ಪರಸ್ತ್ರೀಯರು ಕಲಿ. ಅಂದರೆ ಪುರುಷರು ಶಾಸ್ತ್ರೋಕ್ತಮಾರ್ಗಕ್ಕಿಂತಲೂ ಅತಿರಿಕ್ತವಾದ ಅತಿಯಾದ ಭೋಗಲಾಲಸೆಯನ್ನು ತೋರಿದರೆ ಅಲ್ಲಿ ಕಲಿ ಪ್ರವೇಶವಾಗುತ್ತದೆ. ಅಥವಾ ನೀಚಸ್ತ್ರೀಯರು ಕಲಿಸ್ಥಾನವೆನಿಸಿದ್ದಾರೆ.

ನಾಲ್ಕನೆಯದು ಹಿಂಸೆ. ಇಂದು ಎಲ್ಲಿ ನೋಡಿದರೂ ಹಿಂಸಾಪ್ರವೃತ್ತಿಗಳೇ ತೋರುತ್ತವೆ. ಹಿಂಸೆ ಮಾಡದೆ ಬದುಕಲಿಕ್ಕೇ ಆಗದು ಎನ್ನುವಷ್ಟು ಜಗತ್ತಿನಲ್ಲಿ ಹಿಂಸಾ ಪ್ರವೃತ್ತಿಗಳು ಕಂಡುಬರುತ್ತಿವೆ. ಪ್ರತಿನಿತ್ಯ ಸಮಾಚಾರ ದಿನಪತ್ರಿಕೆಗಳಲ್ಲಿ ಇದರದ್ದೇ ಸುದ್ದಿ. ಇದು ಕಲಿಯ ಪ್ರಭಾವದಿಂದಲೇ ಹೆಚ್ಚುತ್ತಿದೆ.

ಈ ನಾಲ್ಕು ಸ್ಥಾನಗಳನ್ನು ನೀಡಿದರೂ ತೃಪ್ತನಾಗದ ಕಲಿ ಐದನೆಯದ್ದಾಗಿ ಬಂಗಾರದಲ್ಲಿ ವಾಸಮಾಡಲು ಅಪ್ಪಣೆ ಕೊಟ್ಟನು. ಇದರ ಮೂಲಕ ಸುಳ್ಳು, ಮದ, ಕಾಮ, ರಾಗ, ವೈರಗಳನ್ನು ಬೆಳೆಸಿಕೊಳ್ಳಬಹುದೆಂದು ನೀಡಿದನು.

ಹೀಗೆ ಕಲಿಯ ಸ್ಥಾನಗಳನ್ನು ಅರಿತುಕೊಂಡು ಇವೆಲ್ಲವನ್ನೂ ಸಂಪೂರ್ಣ ತ್ಯಾಗ ಮಾಡಬೇಕು. ಇಂದು ಸಮಾಜದಲ್ಲಿ ಅತಿಯಾಗಿ ದುರಾಚಾರಗಳು ನಡೆಯುತ್ತಿವೆ. ಒಂದು ಕಡೆ ಹಿಂಸಾಚಾರ, ಮತ್ತೊಂದು ಕಡೆ ವ್ಯಭಿಚಾರ, ಇನ್ನೊಂದು ಕಡೆ ದುಶ್ಚಟಗಳಿಂದ ಕೂಡಿದ ದುರಾಚಾರ, ಕೊನೆಯದಾಗಿ ಭ್ರಷ್ಟಾಚಾರ –ಇವೆಲ್ಲದರಿಂದ ನಮ್ಮ ಸಮಾಜದ ವಾತಾವರಣವೇ ಕಲುಷಿತವಾಗಿದೆ.

ಪರೀಕ್ಷಿತ ಮಹಾರಾಜನು ಅಂದು ಕಲಿಯ ವಿರುದ್ಧ ಉಗ್ರವಾದ ಪ್ರತಿಭಟನೆಯನ್ನೇ ಮಾಡಿದ. ಇಂದೂ ಸಹ ನಮ್ಮ ದೇಶದಲ್ಲಿ ಕಲಿಯ ವಿರುದ್ಧವಾದ ದೊಡ್ಡ ಅಭಿಯಾನ ನಡೆಯಬೇಕಿದೆ. ದುಶ್ಚಟಗಳಿಂದ ದೂರವಾಗುವಂತೆ ಎಚ್ಚರಿಸಬೇಕಿದೆ. ನಾವೆಲ್ಲರೂ ಕಲಿಯ ವಿರುದ್ಧ ಹೋರಾಡಲು ಪರೀಕ್ಷಿತನಿಂದ ಸ್ಫೂರ್ತಿಯನ್ನು ಪಡೆಯಬೇಕು.

## ಪರೀಕ್ಷಿತನೂ ಎಡವಿದ

ಉತ್ತಮ ರೀತಿಯಲ್ಲಿ ರಾಜ್ಯಪರಿಪಾಲನೆಯನ್ನು ಮಾಡುತ್ತಿದ್ದ ಪರೀಕ್ಷಿತ ಮಹಾರಾಜನು ಒಂದು ದಿವಸ ಧನುರ್ಬಾಣಧಾರಿಯಾಗಿ ಬೇಟೆಗಾಗಿ ಕಾಡಿಗೆ

ನಡೆದನು. ಅಲ್ಲಿ ಅನೇಕ ಮೃಗಗಳನ್ನು ಸಂಹರಿಸಿ ಬಳಲಿದನು. ಹಸಿವೆ ನೀರಡಿಕೆಗಳಿಂದ ಕಂಗಾಲಾದ ಅರಸನು ನೀರನ್ನರಸುತ್ತಾ ಆಶ್ರಮ ಒಂದನ್ನು ಕಂಡನು. ಶ್ರಮ ಪರಿಹಾರಕ್ಕೆಂದು ಶಮೀಕರ ಆಶ್ರಮವನ್ನು ಪ್ರವೇಶಿಸಿದನು. ಅಲ್ಲಿ ಶಮೀಕ ಋಷಿಗಳು ಅಸಂಪ್ರಜ್ಞಾತ ಸಮಾಧಿಯನ್ನೇರಿದ್ದರು. ಬಾಹ್ಯಜಗತ್ತಿನ ಪರಿವೇ ಇರಲಿಲ್ಲ. ಇದು ಪರೀಕ್ಷಿತನಿಗೆ ಅರಿಯಲಿಲ್ಲ. ಬಾಹ್ಯಪ್ರಪಂಚದ ಅರಸನಿಗೆ ಹಾರ್ದಪ್ರಪಂಚ ಗೊತ್ತಿರಲೇ ಇಲ್ಲ. 'ಋಷಿಗಳೇ! ನೀರು ಕೊಡಿರಿ!' ಎಂದ. ಅವರಿಂದ ಉತ್ತರ ಬರಲಿಲ್ಲ. ರಾಜನೆಂಬ ಅಹಂ ಬುದ್ಧಿಕೆ ಸಿತು. ಕೋಪ ಹೆಡೆಬಿಚ್ಚಿತು. ರಾಜನಿಗೆ ಉಪಚರಿಸದ ಇವ ಡಾಂಭಿಕಋಷಿ. ಅಂತರ್ದರ್ಶನವಿಲ್ಲದ ಪ್ರದರ್ಶನದ ಋಷಿ ಎಂದು ನಿಂದಿಸಿದ.

ಪರೀಕ್ಷಿತರಾಜನು ಇಲ್ಲಿಯ ತನಕ ಬಹಳ ಚೆನ್ನಾಗಿ ರಾಜ್ಯವನ್ನು ಪರಿಪಾಲಿಸುತ್ತಾ ಕಲಿಯನ್ನು ನಿಗ್ರಹಿಸಿದ್ದ. ತನ್ನ ರಾಜ್ಯದಿಂದಲೇ ಕಲಿಯನ್ನು ನಿಗ್ರಹಿಸಿದ ಪರೀಕ್ಷಿತನಿಗೆ ತನ್ನೊಳಗೆ ಕಲಿ ಸೇರಿದ್ದು ತಿಳಿಯಲೇ ಇಲ್ಲ. ಹೊರಬಾಗಿಲಿನಿಂದ ಓಡಿಸಿದ ಪಿಶಾಚಿ ಕಿಟಕಿಯಿಂದ ನುಗ್ಗಿ ಒಳಬಂದಂತೆ, ಕಲಿಯು ರಾಜನ ಒಳಗೇ ಪ್ರವೇಶಿಸಿದ. ಕಲಿಪ್ರಭಾವಕ್ಕೆ ತುತ್ತಾದ ರಾಜ ಅಲ್ಲಿ ಬಿದ್ದಿದ್ದ ಮೃತಸರ್ಪವನ್ನು ಋಷಿಯ ಕೊರಳಿಗೇರಿಸಿ ಅವಮಾನಿಸಿದ. ಭಗವದ್ಭಕ್ತನ ವಿಷಯದಲ್ಲಿ ಅಭಕ್ತನಾಗಿದ್ದುಕೊಂಡು ಅನ್ಯಾಯಮಾಡಿ ರಾಜ್ಯದೆಡೆ ನಡೆದ

ಇಷ್ಟಾದರೂ ಋಷಿ ಶಮೀಕನಿಗೆ ಎಚ್ಚರವೇ ಇಲ್ಲ. ಶಮೀಕನಿಗೊಬ್ಬ ಶೃಂಗಿ ಎಂಬ ಮಗನಿದ್ದ. ಅವನು ಉತ್ತಮ ತಪಸ್ವಿಯಾದ ತೇಜಸ್ವಿ ಬಾಲಕ. ಮಕ್ಕಳೊಟ್ಟಿಗೆ ಆಟಕ್ಕೆ ಹೋದವ ಆಶ್ರಮಕ್ಕೆ ಬಂದ. ಸ್ನೇಹಿತರು ಶಮೀಕನ ಕೊರಳಲ್ಲಿ ಹಾವೊಂದನ್ನು ಕಂಡರು. ಗೇಲಿಮಾಡಿದರು. ಇದನ್ನು ನೋಡಿದ ಬಾಲಕನು ಸಿಡಿದೆದ್ದ. ಬ್ರಾಹ್ಮಣೋತ್ತಮನಿಗಾದ ಅನ್ಯಾಯಕ್ಕೆ ದಂಡನೆ ನೀಡಲು ಮುಂದಾದ. ಆಚಮನ ಮಾಡಿ ಶಪಿಸಿದ–

**ಇತೋ ಲಂಘಿತಮರ್ಯಾದಂ ತಕ್ಷಕಃ ಸಪ್ತಮೇಽಹನಿ ।**
**ಧಕ್ಷ್ಯತಿ ಸ್ಮ ಕುಲಾಂಗಾರಂ ಚೋದಿತೋ ಮೇ ಪಿತೃದ್ರುಹಮ್ ॥** – [೧-೧೮-೩೭]

ಎಲ್ಲೆ ಮೀರಿ ವರ್ತಿಸಿ ನನ್ನ ತಂದೆಗೆ ದ್ರೋಹವೆಸಗಿದ ಕುಲಕಳಂಕನಾದ ಪರೀಕ್ಷಿತನನ್ನು ಇಂದಿನಿಂದ ಏಳನೇ ದಿನ ತಕ್ಷಕನೆಂಬ ಸರ್ಪವು ಕಚ್ಚಿ ಕೊಲ್ಲಲಿ' ಎಂದು ವಾಗ್ವಜ್ರವನ್ನೇ ಪ್ರಯೋಗಿಸಿದ.

## ತಾತ್ಪರ್ಯ ಸ್ವಾರಸ್ಯ

ಭಾಗವತದಲ್ಲಿ 'ಕೌಶಿಕ್ಯಪ ಉಪಸ್ಪೃಶ್ಯ ವಾಗ್ವಜ್ರಂ ವಿಸಸರ್ಜಹ' ಎಂಬ ಮಾತಿದೆ. ಈ ವಾಕ್ಯಕ್ಕೆ ಕೆಲವರು 'ಕೌಶಿಕೀನದಿಯ ತೀರ್ಥದಲ್ಲಿ ಆಚಮನವನ್ನು ಮಾಡಿ ಶಪಿಸಿದ' ಎಂದು ಅನುಮಾನಮಾಡಿದ್ದಾರೆ.

ಅಲ್ಲಿ ಕೌಶಿಕೀನದಿ ಇದ್ದದ್ದೇ ಆದಲ್ಲಿ ಪರೀಕ್ಷಿತನು ತೃಷೆಯಿಂದ ಆಶ್ರಮಕ್ಕೆ ಬರುವ ಸಂದರ್ಭವೇ ಇರಲಿಲ್ಲ. ಅಕೃತ್ಯವನ್ನೆಸಗುವ ಪ್ರಸಂಗವೂ ಇರುತ್ತಿರಲಿಲ್ಲ. ಆದ್ದರಿಂದ ಜಲರಾಶಿ ಇರಲಿಲ್ಲವೆನ್ನುವುದು ಸ್ಪಷ್ಟ.

ಹಾಗಾದರೆ 'ಕೌಶಿಕ್ಯಪ ಉಪಸ್ಪೃಶ್ಯ' ಎಂದರೆ ಅರ್ಥವೇನು? ಎಂದು ಪ್ರಶ್ನೆ ಬರುತ್ತದೆ. ಇದಕ್ಕೆ ಶ್ರೀಮದಾಚಾರ್ಯರು 'ಕೌಶಿಕೀ = ಕುಶಪಾಣಿಃ' ಎಂದು ಬಹಳ ಸರಳವಾಗಿ ಅರ್ಥವನ್ನು ನೀಡಿ ಸಮಸ್ಯೆಯನ್ನು ಪರಿಹರಿಸಿದ್ದಾರೆ. ಕೌಶಿಕೀ ಎಂದರೆ ಕುಶವನ್ನು ಧರಿಸಿಕೊಂಡು, ಆಚಮನಮಾಡಿ ಶಪಿಸಿದ ಎಂದರ್ಥ. ಸಂದರ್ಭ ನೋಡಿಕೊಂಡು ವ್ಯಾಖ್ಯಾನ ಮಾಡಬೇಕೆಂಬ ಅರಿವನ್ನೂ ಮೂಡಿಸಿದ್ದಾರೆ.

## ಪೂರ್ವಜರ ಹೃದಯವಂತಿಕೆ

ತಂದೆಗಾದ ಅವಮಾನವನ್ನು ಸಹಿಸಲಾರದೆ ಶೃಂಗಿಯು ಜೋರಾಗಿ ರೋದಿಸಿದ. ರೋದನ ಶಬ್ದದಿಂದ ಸಮಾಧಿಸ್ಥನಾದ ಋಷಿ ಎಚ್ಚೆತ್ತ. ಮೃತ ಸರ್ಪವನ್ನು ಕೆಳಗೆ ಒಗೆದ. ಮಗನ ಬಳಿ ಕೇಳಿದ 'ಏಕೆ ಅಳುತ್ತಿರುವಿ?' ಶೃಂಗಿಯು ನಡೆದ ಸಂಗತಿಗಳನ್ನು ತಿಳಿಸಿದ. ಶಪಿಸಿದ್ದೇನೆ ಎಂದೂ ಹೇಳಿದ.

ಇಂತಹ ಸಂದರ್ಭದಲ್ಲಿ ಬೇರೆ ಯಾರಾಗಿದ್ದರೂ ಮಗನ ಬೆನ್ನುತಟ್ಟಿ 'ಮೆಚ್ಚಿದೆ ಮಗನೇ!' ಎನ್ನುತ್ತಿದ್ದರು. ಆದರೆ ಶಮೀಕರು ಹೀಗೆ ಹೇಳಲಿಲ್ಲ. ಮಗನೇ! ಎಂತಹ ಅಪರಾಧವನ್ನೆಸಗಿಬಿಟ್ಟೆ! ಕ್ಷಣಕಾಲ ತಪ್ಪಿ ನಡೆದ ಮಹಾರಾಜನನ್ನು ಏಕೆ ಶಪಿಸಿದೆ. ವಿಚಾರಮಾಡದೆ ಏಕೆ ಹೀಗೆ ಮಾಡಿದೆ? ಸಮಗ್ರ ಜಗತ್ತಿನ ಹಿತವನ್ನೇ ಬಯಸುವ ರಾಜನಿಗೆ ಅನ್ಯಾಯಮಾಡಿಬಿಟ್ಟೆ. ಕಲಿಯನ್ನೇ ನಿಗ್ರಹಿಸಿದ ಧರ್ಮಾತ್ಮನಾದ ರಾಜ ಒಂದು ಸಣ್ಣ ಅಪರಾಧ ಮಾಡಿದ್ದಕ್ಕೆ ಸಾಯುವಂತೆ ಶಪಿಸುವುದು ಧರ್ಮವೇ? ಎಂದು ಮಗನನ್ನೇ ಜರೆಯುತ್ತಾನೆ. ತನಗಾದ ಅಪಮಾನವನ್ನು ಕಡೆಗಾಣಿಸಿ, ಲೋಕೋಪ ಕಾರಿಯಾದ ರಾಜನಿಗೆ ಅನ್ಯಾಯಮಾಡಿದ್ದೀ! ಎಂದು ಹೇಳುವ ಶಮೀಕನ ವ್ಯಕ್ತಿತ್ವ ಉನ್ನತವಾದದ್ದು. ಇದೇ ದೊಡ್ಡವರ ದೊಡ್ಡಸ್ತಿಕೆ.

ದೇಶದ ಕಡೆ ನಡೆದ ರಾಜನಿಗೆ ಕಲಿ ಆವೇಶ ಇಳಿಯಿತು. ಅನಂತರ ಆಲೋಚಿಸುತ್ತಾನೆ –ಅಯ್ಯೋ! ನಾನು ಮಹಾಪರಾಧಮಾಡಿದೆ. ಎಂದೂ ಒಬ್ಬ ಬ್ರಾಹ್ಮಣನನ್ನು ಅಪಮಾನಿಸಿದವನಲ್ಲ. ಹೀಗಿರಲು ಒಬ್ಬ ಬ್ರಹ್ಮಜ್ಞಾನಿಯನ್ನು ಕೆಟ್ಟ ರೀತಿಯಲ್ಲಿ ಅಪಮಾನಿಸಿದೆ. ಸಮಾಧಿಸ್ಥನಾದ ಋಷಿಯ ಕೊರಳಿಗೆ ಸತ್ತ ಸರ್ಪವನ್ನು ಅವಮಾನದ ಮಾಲೆಯನ್ನಾಗಿ ಹಾಕಿ ಬಂದೆನಲ್ಲಾ ಎಂದು ಪಶ್ಚಾತ್ತಾಪಪಡುತ್ತಿದ್ದಾನೆ.

ಆಶ್ರಮದಲ್ಲಿ ಶಮೀಕರು ತನ್ನ ಮಗನ ಅಪಚಾರದಿಂದ ದುಃಖಿಸುತ್ತಿದ್ದರೆ; ಇತ್ತ ಪರೀಕ್ಷಿತ 'ಬ್ರಹ್ಮಜ್ಞಾನಿಗೆ ಅವಮಾನಿಸಿದೆನಲ್ಲಾ' ಎಂದು ಗೋಳಿಡುತ್ತಿದ್ದಾನೆ. 'ಇನ್ನೆಂದೂ ಇಂತಹ ಕೆಟ್ಟ ಬುದ್ಧಿ ಬಾರದಿರಲಿ! ರಾಜನೆಂಬ ಅಭಿಮಾನವೇ ಸುಟ್ಟು ಹೋಗಲಿ. ಇದಕ್ಕಾಗಿ ನಾನಿಂದು ಸರ್ವಸ್ವವನ್ನು ತ್ಯಜಿಸುತ್ತೇನೆ' ಎನ್ನುತ್ತಾನೆ–

ಅದ್ಯೈವ ರಾಜ್ಯಂ ಬಲವೃದ್ಧಕೋಶಂ
ಪ್ರಕೋಪಿತ ಬ್ರಹ್ಮ ಕುಲಾನಲೋ ಮೇ ।
ದಹತ್ವಭದ್ರಸ್ಯ ಪುನರ್ನ ಮೇಽಭೂತ್
ಪಾಪೀಯಸೀ ಧೀರ್ದ್ವಿಜದೇವತಾಸು ॥ — [೧-೧೯-೩]

"ನಾನು ಕೆಣಕಿಬಂದ ಬ್ರಹ್ಮಕುಲದಿಂದ ಉದ್ಭವಿಸುವ ಶಾಪಾಗ್ನಿಯು, ಈಗಲೇ ನನ್ನ ರಾಜ್ಯವನ್ನೂ ಸೇನೆಯನ್ನೂ ಸಮೃದ್ಧವಾದ ಭಂಡಾರವನ್ನೂ ಸುಟ್ಟುಹಾಕಲಿ! ಮುಂದೆ ಎಂದೂ ಇಂತಹ ಬ್ರಾಹ್ಮಣ, ದೇವತೆಗಳ ವಿಷಯದಲ್ಲಿ ಕೆಟ್ಟ ಬುದ್ಧಿ ಬಾರದಿರಲಿ! ಎಂದೂ ಮರೆಯಲಾಗದ ಶಿಕ್ಷೆ ನನಗಾಗಲಿ!" ಎಂದು ಕೊರಗಿದ. ಪ್ರಾಮಾಣಿಕರ ವರ್ತನೆಯೇ ಹೀಗೆ. ಇದಕ್ಕೊಂದು ಸಂವಾದಿ.

ಒಂದೂರಿನಲ್ಲಿ ಶಂಖ ಲಿಖಿತರೆಂಬ ಸಹೋದರರಿದ್ದರು. ನಿಯಮಶೀಲರೂ, ಪ್ರಾಮಾಣಿಕರೂ ಆಗಿದ್ದರು. ಎಂದೂ ಅನ್ಯಾಯವನ್ನು ಮಾಡಿದವರಲ್ಲ. ಒಂದು ದಿನ ಲಿಖಿತನು ಹೀಗೆ ಸಾಗುವಾಗ ಒಂದು ಸುಂದರವಾದ ಮಾವಿನ ತೋಟವನ್ನು ಕಂಡ. ಮಧುರ ಫಲಗಳ ರಸಸವಿಯುವ ಮನಸ್ಸನ್ನೂ ಮಾಡಿದ. ತೋಟಕ್ಕೆ ಲಗ್ಗೆ ಇಟ್ಟು ಬೇಕಾದಷ್ಟು ಹಣ್ಣುಗಳನ್ನು ತಿಂದು ತೇಗಿದ. ಅನಂತರ ಮನೆಗೆ ಬಂದು ತನ್ನ ಸಹೋದರನಿಗೆ ಹೇಳಿದ. 'ಅಣ್ಣ! ಸಮೀಪ ತೋಟದಲ್ಲಿ ಮಧುರ ಫಲಗಳು ಬೆಳೆದಿವೆ ನೀನು ತಿನ್ನಲು ಬಾ!' ಎಂದ. ಪ್ರಾಮಾಣಿಕನಾದ ಶಂಖ ಪ್ರಶ್ನಿಸಿದ. ಲಿಖಿತ! ನೀನು ಹಣ್ಣನ್ನು ತಿನ್ನುವ ಮೊದಲು ಆ ತೋಟದ ಮಾಲಿಕನ ಅಪ್ಪಣೆ ಪಡೆದಿದ್ದೀಯಾ? ಅದಕ್ಕೆ ಲಿಖಿತ ಹೇಳಿದ. 'ವಿಶಾಲ ತೋಟದಲ್ಲಿ ಲಕ್ಷಾಧಿಕ ಹಣ್ಣುಗಳು ತುಂಬಿವೆ. ದಾನೊಬ್ಬ ನಾಲ್ಕಾರು ಹಣ್ಣನ್ನು ತಿನ್ನಲು ದೊಣ್ಣೇರಾಯನ ಅಪ್ಪಣೆ ಬೇಕೆ?' ಎಂದ.

ತಮ್ಮನ ಅಪ್ರಾಮಾಣಿಕತನ ಶಂಖನಿಗೆ ಹಿಡಿಸಲಿಲ್ಲ. ಅಪಚಾರಮಾಡಿದ ನಿನ್ನ ಮುಖಾವಲೋಕನವನ್ನೇ ಮಾಡಲಾರೆ! ಎಂದ. ಅಪರಾಧದಲ್ಲಿ ಸಣ್ಣದು ದೊಡ್ಡದು ಎಂಬ ತಾರತಮ್ಯವಿಲ್ಲ. ಪ್ರಾಯಶ್ಚಿತ್ತವಾಗದೆ ನಿನ್ನ ಕೂಡ ಮಾತನಾಡಲಾರೆ ಎಂದು ಪ್ರಾಮಾಣಿಕತನದ ಮುಂದೆ ಭ್ರಾತೃತ್ವವನ್ನೂ ಮರೆತ.

ಲಿಖಿತನು ಪಶ್ಚಾತ್ತಾಪದಗ್ಧನಾಗಿ ರಾಜನ ಬಳಿ ಹೋದ. ರಾಜನು ಲಿಖಿತನನ್ನು ಕಂಡು ಸ್ವಾಗತಿಸಿದ. ಧನ, ಕನಕ, ಮುತ್ತು ರತ್ನಗಳನ್ನು ಕೊಡಲು ಸಿದ್ಧನಾದ. ಲಿಖಿತ ಎಲ್ಲವನ್ನೂ ಪರಿತ್ಯಜಿಸಿ ನಾನು ಕೇಳಿದ್ದು ನೀಡು ಎಂದ. ಅದರಂತೆ ರಾಜನು ಒಪ್ಪಲು 'ನಿನ್ನ ಸೇವಕರನ್ನು ಕರೆಸಿ ನನ್ನ ಬಲಗೈಯನ್ನು ಕತ್ತರಿಸಲು ಹೇಳು' ಎಂದ. ಇಲ್ಲಿಯ ತನಕ ರಾಜನ ಬಳಿ ಇಂತಹ ಬೇಡಿಕೆ ಬಂದಿರಲಿಲ್ಲ. ಯಜಮಾನನ ಬಳಿ ಕೇಳದೆ ತೋಟದ ಹಣ್ಣುಗಳನ್ನು ಕಿತ್ತಿದ್ದೇನಾದ್ದರಿಂದ ನನ್ನ ಕೈಯನ್ನು ಕಡಿಯಿರಿ' ಎಂದು ಲಿಖಿತ ಹಟಹಿಡಿದ. ರಾಜನು ಉಪಾಯವಿಲ್ಲದೆ ಅವನ ಕೈಯನ್ನು ಕತ್ತರಿಸಿದ.

ಲಿಖಿತನು ಅಣ್ಣನ ಬಳಿ ಬಂದ. ಅಣ್ಣ! ರಾಜನ ಬಳಿ ಶಿಕ್ಷೆಯನ್ನು ಸ್ವೀಕರಿಸಿ ಪಶ್ಚಾತ್ತಾಪದಗ್ಧನಾಗಿ ಬಂದಿದ್ದೇನೆ, ನನ್ನನ್ನು ಕ್ಷಮಿಸು. ನನ್ನ ಮುಖ ನೋಡು ಎಂದು ಬೇಡಿದ. ಶಂಖನ ಹೃದಯ ತುಂಬಿಬಂತು. ತಮ್ಮನ ನಡತೆಯನ್ನು ಮೆಚ್ಚಿದ.

ಪಶ್ಚಾತ್ತಾಪದಗ್ಧನಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಪಾಪ ಕಳೆದುಕೊಂಡ ಲಿಖಿತನನ್ನು ಅಭಿನಂದಿಸಿದ.

ಇದು ನಮ್ಮ ಪ್ರಾಚೀನರ ನಡತೆ ತಿಳಿಯದೇ ಅಪರಾಧ ಮಾಡಿದ್ದರೂ ತಿಳಿದ ಬಳಿಕ ತಾವಾಗಿಯೇ ರಾಜರ ಬಳಿ ಹೋಗಿ ಅಪರಾಧಕ್ಕನುಗುಣವಾಗಿ ಶಿಕ್ಷೆ ಪಡೆಯುತ್ತಿದ್ದರು.

ಮುಂದೆ ತಮ್ಮನ ನಡತೆಯಿಂದ ಸಂತುಷ್ಟನಾದ ಶಂಖನು ಲಿಖಿತನಿಗೆ ಒಂದು ನದಿಯನ್ನು ತೋರಿಸಿ 'ಅದರಲ್ಲಿ ಸ್ನಾನಮಾಡಿ ಬಾ!' ಎಂದ. ಸ್ನಾನಮಾಡಿದ ಕೂಡಲೆ ಲಿಖಿತನ ಕೈ ಚಿಗುರಿತು.

ಪಾಪಪ್ರಜ್ಞೆಯಿಂದ ಶಿಕ್ಷೆಯನ್ನು ತಾನಾಗಿಯೇ ಬಯಸಿದ ಲಿಖಿತನಂತೆ ಪರೀಕ್ಷಿತನೂ ತಾನಾಗಿಯೇ ಶಿಕ್ಷೆಯನ್ನು ಬಯಸಿದ. ಸರ್ವಸ್ವವನ್ನೂ ತ್ಯಜಿಸಲು ಸಿದ್ಧನಾದ.

## ಶೃಂಗಿಯ ಶಾಪವು ವರವಾಯಿತು

ಇತ್ತ ಶೃಂಗಿಯ ಶಾಪದ ವಿಷಯುವನ್ನು ಶಮೀಕರು ಹೇಳಿ ಕಳುಹಿಸಿದರು. ಪರೀಕ್ಷಿತನಿಗೆ ಸುದ್ದಿ ಮುಟ್ಟಿತು. ತನ್ನ ಸಾವನ್ನು ತಿಳಿದರೂ ಸ್ವಲ್ಪವೂ ಉದ್ವಿಗ್ನ ನಾಗಲಿಲ್ಲ. ತನ್ನ ಪಾಪಕ್ಕೆ ತಕ್ಕ ಶಿಕ್ಷೆ ದೊರೆಯಿತೆಂದು ಶಾಪವನ್ನು ಆನಂದದಿಂದ ಸ್ವಾಗತಿಸಿದ. ರಾಜನ ಈ ವರ್ತನೆ ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡಿತು.

ಪರೀಕ್ಷಿತನು ಅಪರಾಧದಿಂದ ಮತ್ತಷ್ಟು ದೊಡ್ಡವನಾದ. ರಾಜ್ಯವನ್ನೆಲ್ಲಾ ತೊರೆದು ನಾರುಮಡಿ ಧರಿಸಿ ನೇರ ಗಂಗಾನದಿಯ ದಡಕ್ಕೆ ಬಂದ. 'ಆದದ್ದೆಲ್ಲ ಒಳಿತೇ ಆಯಿತು. ನಮ್ಮ ಶ್ರೀಧರನ ಸೇವೆಗೆ ಸಾಧನ ಸಂಪತ್ತಾಯಿತೆಂದು' ಭಾವಿಸಿದ. ಪರಮ ಭಾಗವತೊತ್ತಮರ ವರ್ತನೆಯೇ ಹೀಗಿರುತ್ತದೆ. ಭಾಗವತಕ್ಕೆ ಟಿಪ್ಪಣಿಯನ್ನು ಬರೆದ ವಿಜಯಧ್ವಜತೀರ್ಥರೂ ಸಹ ಭಗವಂತನ ಬಳಿ ಹೀಗೆಯೇ ಪ್ರಾರ್ಥಿಸುತ್ತಾರೆ.

ಭಗವಂತನೇ! ನಿನ್ನ ಪ್ರೀತಿಯ ಕಾಮನೆಯಿಂದ ಭಾಗವತಕ್ಕೆ ವ್ಯಾಖ್ಯಾನವನ್ನು ಬರೆದಿದ್ದೇನೆ.

**ವ್ಯಾಖ್ಯಾ ಭಾಗವತಸ್ಯ ಕೃಷ್ಣ! ರಚಿತಾ ತ್ವತ್ಪ್ರೀತಿ ಕಾಮಾತ್ಮನಾ**

ನೀನು ನನ್ನ ಕೃತಿಯಿಂದ ಪ್ರೀತನಾಗಿದ್ದಲ್ಲಿ ಮೂರು ವರಗಳ ಕೊಡು. ಮೊದಲನೆಯದಾಗಿ "ನನ್ನಲ್ಲಿ ಏನಾದರೂ ಅಲ್ಪಸ್ವಲ್ಪ ಸಂಪತ್ತಿದ್ದರೆ ಅವೆಲ್ಲವೂ ನಾಶವಾಗಿ ದಾರಿದ್ರ್ಯ ಬರುವಂತೆ ಅನುಗ್ರಹಿಸು" ಎಂದು ಬೇಡಿದರು.

ದಾರಿದ್ರ್ಯವನ್ನು ಬೇಡುವುದು ಇಂದಿನ ಮಂದಿಗೆ ಹುಚ್ಚು ಬೇಡಿಕೆ ಅನ್ನಿಸೀತು! ಮಹಾನುಭಾವರ ಚಿಂತನೆ ನಮಗೆಲ್ಲಿ ತಿಳಿಯುತ್ತದೆ?!

ಇನ್ನೊಬ್ಬ ಭಕ್ತ ರಂತಿದೇವ ದೇವರ ಬಳಿ ಪ್ರಾರ್ಥಿಸುತ್ತಾನೆ. ನೀನು ಪ್ರಸನ್ನನಾಗಿದ್ದರೆ ನನ್ನದೊಂದು ಪ್ರಾರ್ಥನೆಯಿದೆ. "ಜನರೆಲ್ಲರೂ ಅನುಭವಿಸುವ ದುಃಖ ನನಗೊಬ್ಬನಿಗೇ ಬರಲಿ" –'ಆರ್ತಿಂ ಪ್ರಪದ್ಯೇಽಖಿಲ ದೇಹ ಭಾಜಾಮ್' ಎನ್ನುತ್ತಾನೆ. ನಮ್ಮ ದುಃಖವೇ ದಂಡಿಯಾಗಿರಲು ಮತ್ತೊಬ್ಬರ ದುಃಖವನ್ನು ಕೇಳುವ ಎದೆಗಾರಿಕೆ ಯಾರಿಗಿದೆ?

ಪ್ರಹ್ಲಾದನಿಗೆ ನರಸಿಂಹದೇವರು ಮೋಕ್ಷಕ್ಕೆ ಬಾ! ಎಂದು ಕರೆದರೆ; ದೀನ ಜನರನ್ನು ಬಿಟ್ಟು ನಾನೊಬ್ಬನೇ ಮೋಕ್ಷಕ್ಕೆ ಬರಲಾರೆ! –ಎನ್ನುತ್ತಾನೆ. ಹೀಗೆ ನಮ್ಮನ್ನು ಬೆರಗುಗೊಳಿಸುವ ಭಕ್ತರ ಯಾದಿಯೇ ಪುರಾಣಗಳಲ್ಲಿ ಕಾಣಸುತ್ತದೆ. ವಿಪತ್ತು, ದುಃಖ, ದಾರಿದ್ರ್ಯ, ಮೃತ್ಯು ಯಾವುದನ್ನೂ ಲೆಕ್ಕಿಸದ ಭಕ್ತರ ಸರಣಿಯಲ್ಲಿ ಪರೀಕ್ಷಿತನೂ ಒಬ್ಬನಾಗಿದ್ದಾನೆ.

ಇಂತಹ ಪರೀಕ್ಷಿತನ ತ್ಯಾಗ ಔದಾರ್ಯಗಳನ್ನು ಕಂಡು ಲೋಕವನ್ನೇ ಪವಿತ್ರಗೊಳಿಸುವ ಋಷಿಗಳ ಸಮೂಹವೇ ಅಲ್ಲಿ ನೇರಿತು. ಅತ್ರಿ, ವಸಿಷ್ಠ, ಚ್ಯವನ, ಕೃಪ, ಅರಿಷ್ಟನೇಮಿ, ಭೃಗು, ಅಂಗಿರಸ್ಸು, ಪರಾಶರ, ಗಾಧಿಯ ಮಗ ವಿಶ್ವಾಮಿತ್ರ, ಪರಶುರಾಮ, ಉಚಥ್ಯ, ಇಂದ್ರಪ್ರಮದ, ಇಧ್ಮವಾಹ, ಮೇಧಾತಿಥಿ, ದೇವಲ, ಆರ್ಷ್ಟಿಷೇಣ, ಭರದ್ವಾಜ, ಗೌತಮ, ಪಿಪ್ಪಲಾದ, ಮೈತ್ರೇಯ, ಔರ್ವ, ಕವಷ, ಅಗಸ್ತ್ಯ, ವ್ಯಾಸಮಹರ್ಷಿ, ನಾರದ –ಎಲ್ಲರೂ ದೇವರ್ಷಿ, ಬ್ರಹ್ಮರ್ಷಿ, ರಾಜರ್ಷಿಗಳೂ ಅಲ್ಲಿಗೆ ಬಂದು ನೇರಿದರು.

ಜ್ಞಾನಿಗಳನ್ನು ಕಂಡ ಪರೀಕ್ಷಿತ ತನ್ನ ಜೀವಿತವೇ ಧನ್ಯ! ಧನ್ಯ! ಎಂದು ಉದ್ಗರಿಸಿದ. ನನಗೆ ಶೃಂಗಿಯ ಶಾಪ ಬಂದಿಲ್ಲ. ಸಜ್ಜನ ಸಂಗದ ವರ ದೊರೆತಿದೆ ಎಂದು ಹಿರಿಹಿಗ್ಗಿದ.

ರಾಜ್ಯ ವೈಭವ, ಮನೆ, ಮಡದಿ ಮುಂತಾದ ಅಸಾರಭೋಗದಲ್ಲಿಯೇ ಮಗ್ನವಾದ ನನ್ನ ಮನಸ್ಸನ್ನು ಋಷಿಯ ಶಾಪವೆಂಬ ಬಲೆಯು ಬೀಸಿ ಭಗವಂತನ ಕಡೆಗೆ ಸಾಗುವಂತೆ ಮಾಡಿದೆ. ಇಂತಹ ಸುವರ್ಣಾವಕಾಶ ಒದಗಿಬಂದದ್ದು ನನ್ನ ಸುಕೃತ ಎಂದು ಭಾವಿಸಿದ.

ಋಷಿಗಣಕ್ಕೆ ಕೈಮುಗಿದು ಬೇಡಿದ. ಜ್ಞಾನಿವರ್ಯರೇ! ಭಗವಂತನಲ್ಲಿ ಆಸಕ್ತನಾದ ನಾನು ನಿಮ್ಮ ಸೇವಕನಾಗಿದ್ದೇನೆ. ನನ್ನ ಜನ್ಮಾಂತರದ ಸುಕೃತವೆಲ್ಲವೂ ಇಂದು ಒಟ್ಟುಗೂಡಿದೆ. ಬ್ರಾಹ್ಮಣನಿಂದ ಪ್ರೇರಿತನಾದ ವಂಚಕನಾದ ತಕ್ಷಕನೇ ಬಂದು ಕಚ್ಚಿ ಸಾಯಿಸಲಿ, ನನಗೆ ಚಿಂತೆಯಿಲ್ಲ. ತಾವು ಮಾತ್ರ ದಯಮಾಡಿ ಭಗವಂತನ ದಿವ್ಯ ಮಂಗಳಕೀರ್ತನೆಗಳನ್ನು ಹಾಡಿರಿ!!

**ದ್ವಿಜೋಪಸೃಷ್ಟಃ ಕುಹಕಸ್ತಕ್ಷಕೋ ವಾ**
**ದಶತ್ವಲಂ ಗಾಯತ ವಿಷ್ಣುಗಾಥಾಃ** — (೧.೧೯.೧೫)

–ಎನ್ನುತ್ತಾನೆ. ಮತ್ತೂ ಭಾವುಕನಾಗಿ ನುಡಿಯುತ್ತಾನೆ–

ಪುನಶ್ಚ ಭೂಯಾದ್ಭಗವತ್ಯನಂತೇ
ರತಿಃ ಪ್ರಸಂಗಶ್ಚ ತದಾಶ್ರಯೇಷು ।
ಮಹತ್ಸು ಯಾಂ ಯಾಮ್ ಉಪಯಾಮಿ ಸೃಷ್ಟಿಂ
ಮೈತ್ರ್ಯಸ್ತು ಸರ್ವತ್ರ ನಮೋ ದ್ವಿಜೇಭ್ಯಃ ॥ — [೧-೧೯-೧೬]

"ಮತ್ತೆ ನಾನು ಯಾವ ಯಾವ ಜನ್ಮಗಳನ್ನು ಪಡೆಯುತ್ತೇನೋ ಅವೆಲ್ಲ ಜನ್ಮಗಳಲ್ಲಿಯೂ ಭಗವಂತನ ಅನಂತವಾದ ಪ್ರೇಮವು ಬೆಳೆಯಲಿ. ನನಗಿಂತ ಉತ್ತಮರಾದವರಲ್ಲಿ ಭಕ್ತಿಯು, ಸಮಾನರಲ್ಲಿ ಸ್ನೇಹವೂ, ಅಧಮರಲ್ಲಿ ದಯೆಯೂ ಎಂದೆಂದಿಗೂ ಇರಲಿ! ವಿಪ್ರೋತ್ತಮರೆಲ್ಲರಿಗೂ ನನ್ನ ಹಾರ್ದಿಕವಾದ ವಂದನೆಗಳು" ಎಂದು ಉತ್ತಮವಾದ ಪ್ರಾರ್ಥನೆಯನ್ನು ಸಲ್ಲಿಸುವಾಗ, ಪರೀಕ್ಷಿತನ ಧೀರತನವನ್ನು ಕಂಡ ದೇವತೆಗಳು ಭೂಮಿಯ ಮೇಲೆ ಹೂಮಳೆಗರೆದರು. ದೇವ ದುಂದುಭಿಗಳು ಮೊಳಗಿದವು.

## ಪರೀಕ್ಷಿತನ ಕಥೆಯಲ್ಲಡಗಿದ ಸಂದೇಶ

ಪರೀಕ್ಷಿತನು ಅಪರಾಧಿಯಾಗಿದ್ದರೂ ತನ್ನ ಅಪರಾಧದ ಅರಿವಿನಿಂದ ಔನ್ನತ್ಯದ ಸ್ಥಾನವನ್ನೇ ಅಲಂಕರಿಸಿದ. ಪಶ್ಚಾತ್ತಾಪದಿಂದಲೂ ಉತ್ತಮ ಸ್ಥಾನವನ್ನು ಪಡೆಯ ಬಹುದೆಂಬುದಕ್ಕೆ ಪರೀಕ್ಷಿತಮಹಾರಾಜನೇ ನಮಗೆ ಜ್ವಲಂತ ದೃಷ್ಟಾಂತ.

ನಾವೂ ಸಹ ನಮ್ಮ ಜೀವನದಲ್ಲಿ ಇಂತಹ ಅಪರಾಧಗಳನ್ನು ಮಾಡುತ್ತೇವೆ. ಪರೀಕ್ಷಿತನು 'ನೀರಡಿಕೆಯಾಗಿದೆ. ನೀರು ಕೊಡು' ಎಂದಾಗ ಋಷಿಯು ಉತ್ತರಿಸಲೇ ಇಲ್ಲ. ಕಾರಣ ಅರಿಯದೆ ರಾಜನು ಅವಮಾನಿಸಿದ. ಮೃತ್ಯುವಿಗೇ ಗುರಿಯಾದ.

ನಾವೂ ಪರೀಕ್ಷಿತನಂತೆಯೇ ಇದ್ದೇವೆ. ನಾವೂ ಹಸಿದಿದ್ದೇವೆ. ತೃಷೆಯಿಂದ ಬಳಲಿದ್ದೇವೆ. ಇವುಗಳನ್ನು ಇಂಗಿಸಿಕೊಳ್ಳಲು ಧರ್ಮವನ್ನು ಆಶ್ರಯಿಸುತ್ತೇವೆ. ಸರಿಯಾಗಿ ಸಾಧನೆಮಾಡದೆ ತಾಳ್ಮೆ ಕಳೆದುಕೊಂಡು ಪ್ರತಿಫಲ ಅಪೇಕ್ಷಿಸುತ್ತೇವೆ. ಅದಕ್ಕೆ ತಕ್ಕಂತೆ ಪ್ರತಿಫಲ ದೊರೆಯದಿದ್ದಾಗ, ಅಯ್ಯೋ! ನಾನು ಎಷ್ಟೆಲ್ಲಾ ದಾನ–ಧರ್ಮಗಳನ್ನಾಚರಿಸಿದೆ. ಆದರೂ ಕಷ್ಟಗಳೆಂಬ ಸರಪಳಿಯಿಂದ ಮುಕ್ತ ನಾಗಲಿಲ್ಲ. ನಿಷ್ಫಲವಾದ ಧರ್ಮವೇ ಬೇಡ. ದೇವರ ಪೂಜೆಯೂ ಸಾಕು ಎಂದು ಪರೀಕ್ಷಿತನು ಋಷಿಯನ್ನು ತಿರಸ್ಕರಿಸಿದಂತೆ ನಮ್ಮ ಧರ್ಮವನ್ನೂ ನಮ್ಮ ಜೀವನದಲ್ಲಿ ಅವಮಾನಪಡಿಸುತ್ತಿದ್ದೇವೆ. ಭೌತಿಕ ದಾಹವನ್ನು ತಣಿಸದ ಧರ್ಮವನ್ನೇ ಹಳಿಯುತ್ತಿದ್ದೇವೆ. ಇದರ ಪರಿಣಾಮವಾಗಿ ದುರಂತಕ್ಕೀಡಾಗಿದ್ದೇವೆ. ಆದ್ದರಿಂದ ಧರ್ಮವನ್ನು ಅವಮಾಪಡಿಸಿದರೆ ಪರೀಕ್ಷಿತನಂತೆ ಅನರ್ಥಕ್ಕೆ ಗುರಿಯಾಗುತ್ತೇವೆ ಎಂಬುದೇ ಈ ಕಥೆಯ ಸಂದೇಶ.

ಪರೀಕ್ಷಿತನು ಕೆಟ್ಟದ್ದನ್ನು ಮಾಡಿದರೂ ಪಶ್ಚತ್ತಾಪದಿಂದ ಸರಿಪಡಿಸಿಕೊಂಡ. ಶಿಕ್ಷೆ ದೊರೆತಾಗ ತ್ಯಾಗಿಯಾಗಿ ಯೋಗಿಯಾಗಿ ಧ್ಯಾನನಿರತನಾದ. ಸಜ್ಜನರ ಕೃಪೆಗೆ ಪಾತ್ರನಾದ. ತಪ್ಪು ಮಾಡಿಯೂ ದೊಡ್ಡವನಾದ. ಇದಕ್ಕೊಂದು ಸಂವಾದಿ

ಒಬ್ಬ ಯೋಗಿ ಸಂಧ್ಯಾಸಮಯದಲ್ಲಿ ನಿದ್ರೆ ಮಾಡುತ್ತಿದ್ದ. ಸಂಧ್ಯಾಸಮಯ ಬಂದಿದ್ದರೂ ಸುಷುಪ್ತಿಯಲ್ಲಿಯೇ ಇದ್ದ ಯೋಗಿಯನ್ನು ಕಲಿ ನೋಡಿದ. ಕಲಿಯೇ ಬಂದು ಎಬ್ಬಿಸಿದ. ಎಲೈ! ಯೋಗಿನ್! ಸಂಧ್ಯಾಕಾಲ ಬಂದಿದೆ, ಎದ್ದೇಳು!! ಸಂಧ್ಯಾವಂದನೆಯನ್ನು ಮಾಡು!! ಎಂದ. ಎಚ್ಚೆತ್ತ ಯೋಗಿಗೆ ಆಶ್ಚರ್ಯವಾಯಿತು. ಕಲಿಯ ಬಳಿ ಪ್ರಶ್ನಿಸಿದ–

ಎಲೈ ಕಲಿಯೇ! ನೀನು ಎಲ್ಲರನ್ನೂ ಕೆಟ್ಟ ಕೆಲಸದಲ್ಲಿಯೇ ಆಸಕ್ತರನ್ನಾಗಿ ಮಾಡುವವ. ಹೀಗಿರಲು ನಿನಗೆ ಇಂತಹ ಒಳ್ಳೆಯ ಬುದ್ಧಿ ಹೇಗೆ ಬಂತು?! ಸಂಧ್ಯಾವಂದನೆ ಮಾಡು ಎನ್ನುತ್ತಿದ್ದಿ!! ಇದೆಂತಹ ವಿಪರ್ಯಾಸ!! ಎಂದು ಆಶ್ಚರ್ಯದಿಂದ ಪ್ರಶ್ನಿಸಿದಾಗ ಕಲಿಯು ತನ್ನ ಉದ್ದೇಶವನ್ನು ವಿವರಿಸಿದ.

ಈ ಯೋಗಿಯನ್ನು ಎಬ್ಬಿಸದಿದ್ದರೆ ಸಂಧ್ಯಾಕಾಲವನ್ನು ತಪ್ಪಿಸಿಕೊಳ್ಳುತ್ತಾನೆ. ಸಂಧ್ಯಾಕಾಲ ಕಳೆದ ಬಳಿಕ ಎಚ್ಚರಗೊಳ್ಳುತ್ತಾನೆ. ಇದನ್ನು ಕಂಡ ಋಷಿಯು 'ಅಯ್ಯೋ! ಸಂಧ್ಯಾಕಾಲದಲ್ಲಿ ಅರ್ಘ್ಯಕೊಡುವುದನ್ನು ಬಿಟ್ಟು ನಿದ್ರಿಸಿ ದೊಡ್ಡ ತಪ್ಪುಮಾಡಿದ್ದೆ' ಎಂದು ಪಶ್ಚಾತ್ತಾಪದಿಂದ ದುಃಖಿಸುತ್ತಾನೆ. ಅದರಿಂದ ದೇವರಿಗೆ ಅವನ ಮೇಲೆ ಮತ್ತಷ್ಟೂ ಪ್ರೀತಿ ಹೆಚ್ಚಾಗುತ್ತದೆ. ಅದನ್ನು ನಾನು ಸಹಿಸಲಾರೆ. ಪಶ್ಚಾತ್ತಾಪದಿಂದ ದೇವರಿಗೆ ಮತ್ತಷ್ಟು ಇಷ್ಟವಾಗುತ್ತಾನಲ್ಲ –ಎಂದು ಸಕಾಲದಲ್ಲಿಯೇ ಎಬ್ಬಿಸಿದೆ ಎಂದನಂತೆ.

ಇದರ ಭಾವ– 'ಸಜ್ಜನರು ಅಕಸ್ಮಾತ್ ಪಾಪಕರ್ಮವನ್ನು ಮಾಡಿದರೂ ಪಶ್ಚಾತ್ತಾಪದಿಂದ ತಮ್ಮನ್ನು ಮತ್ತಷ್ಟು ಬೆಳೆಸಿಕೊಳ್ಳುತ್ತಾರೆ' ಎಂದು. ಇದಕ್ಕೆ ಪರೀಕ್ಷಿತಮಹಾರಾಜನೇ ಜ್ವಲಂತ ದೃಷ್ಟಾಂತವಾಗಿದ್ದಾನೆ.

## ಪರೀಕ್ಷಿತನ ಪ್ರಶ್ನೆ

ಅನಂತರ ಎಲ್ಲೆಡೆಯಿಂದಲೂ ಆಗಮಿಸಿದ ಋಷಿಮುನಿಗಳ ಬಳಿ ಪರೀಕ್ಷಿತನು ಪ್ರಶ್ನೆಯೊಂದನ್ನು ಕೇಳಿದ.

ಜ್ಞಾನಿಗಳೇ! ಸಾಯುವ ಘಟ್ಟ ಮುಟ್ಟಿದಾಗ ಜೀವನು ಏನು ಮಾಡಬೇಕು? ಚರ್ಚಿಸಿರಿ ಎಂದ. ವಿಚಾರಗೋಷ್ಠಿಯು ಆರಂಭವಾಗುವ ಶುಭಸಂದರ್ಭದಲ್ಲಿಯೇ ಆ ಪರಿಸರಕ್ಕೆ ಶ್ರೀಶುಕಮುನಿಗಳ ಆಗಮನವಾಗಿದೆ.

ಸಾಧನೆಯು ಪಕ್ವವಾದಾಗ ನಮ್ಮ ಸ್ವರೂಪೋದ್ಧಾರ ಗುರುಗಳೇ ನಮ್ಮನ್ನು ಹುಡುಕಿಕೊಂಡು ಬರುತ್ತಾರೆ ಎನ್ನುವುದಕ್ಕೆ ಶುಕಾಚಾರ್ಯರ ಆಗಮನವೇ ಸಾಕ್ಷಿಯಾಗಿದೆ.

ಅನಿರೀಕ್ಷಿತವಾಗಿ ಶುಕಮುನಿಗಳ ಆಗಮನವಾದಾಗ ಋಷಿಗಳೆಲ್ಲರೂ ಎದ್ದು ನಿಂತು ಗೌರವಿಸಿ ಸ್ವಾಗತಿಸಿದರು.

ಶುಕಮುನಿಗಳಲ್ಲಿ ವಾಯುದೇವರ ವಿಶೇಷ ಆವೇಶವಿದೆ. ಸಾಕ್ಷಾತ್ ರುದ್ರಾವತಾರಿಗಳು ಸೌಂದರ್ಯಶಿಖಾಮಣಿಗಳೂ ಆಗಿದ್ದಾರೆ. ಅವರ ಮುಖಕಮಲವು ಸೌಂದರ್ಯದ ಕಡಲಿನಂತಿದೆ. ಅವರ ಆಗಮನದಿಂದ ಸೌಂದರ್ಯದ ಕಡಲು ಭೂಮಂಡಲಕ್ಕೆ ಧುಮುಕಿದಂತಾಯಿತು. ಅವರನ್ನು ಉತ್ತಮ ರೀತಿಯಿಂದ ಸತ್ಕರಿಸಿ ಎತ್ತರವಾದ ಆಸನದಲ್ಲಿ ಕುಳ್ಳಿರಿಸಿದ್ದಾರೆ.

ಪರೀಕ್ಷಿತನು ಶುಕರ ಆಗಮನದಿಂದ ಪರಮ ಸಂತುಷ್ಟನಾಗಿ ಪ್ರಶ್ನೆಯನ್ನು ಕೇಳಿದ.

**ಯಚ್ಛ್ರೋತವ್ಯಮಥೋ ಜಾಪ್ಯಂ ಯತ್ಕರ್ತವ್ಯಂ ನೃಭಿಃ ಸದಾ ।**
**ಸ್ಮರ್ತವ್ಯಂ ಭಜನೀಯಂ ವಾ ಬ್ರೂಹಿ ಯದ್ವಾ ವಿಪರ್ಯಯಮ್ ॥**

— [೨೦-೧-೧೪]

ಸ್ವಾಮಿ! ಮರಣಕ್ಕೆ ಹತ್ತಿರವಾದ ಮನುಷ್ಯನು ಏನನ್ನು ಶ್ರವಣಮಾಡಬೇಕು? ಏನನ್ನು ಸ್ಮರಿಸಬೇಕು? ಯಾವುದನ್ನು ಭಜಿಸಬೇಕು? ಏನನ್ನು ತ್ಯಜಿಸಬೇಕು? ಅಥವಾ ಇದಕ್ಕಿಂತಲೂ ವ್ಯತಿರಿಕ್ತವಾದ ವಿಷಯಗಳಿದ್ದಲ್ಲಿ ದಯಮಾಡಿ ತಿಳಿಸಿರಿ!! ಎಂದ.

ಶುಕಾಚಾರ್ಯರು ಒಂದು ಕಡೆ ಸ್ಥಿರವಾಗಿ ನಿಲ್ಲುವವರೇ ಅಲ್ಲ. ಯಾರಿಗೂ ನೋಡಲೂ ಸಿಗುವುದಿಲ್ಲ. ಅಂತಹ ಶುಕರು ಪರೀಕ್ಷಿತನ ತಾತ್ವಿಕ ಜಿಜ್ಞಾಸೆಗೆ ಬೆಲೆಕೊಟ್ಟು ಏಳು ದಿವಸ ಅಲ್ಲಿಯೇ ನಿಂತು ಸಮಗ್ರ ತಾತ್ವಿಕ ರಹಸ್ಯಗಳನ್ನರುಹಿದರು.

ಸಾಯುವ ಘಟ್ಟ ಬಂದಾಗ ನಾವೆಲ್ಲರೂ ಏನುಮಾಡಬೇಕೆಂಬ ಪ್ರಶ್ನೆಗೆ ಉತ್ತರವಾಗಿ ವ್ಯಾಸರಿಂದ ಭಾಗವತಗಂಗೆ ಹರಿದುಬಂದಿದೆ. ಇವನಿಂದಲೇ ಮತ್ತೊಂದು ಗಂಗೆಯೂ ಹರಿದುಬಂದಿದೆ. ವಾಮನನು ತ್ರಿವಿಕ್ರಮನಾದಾಗ ಅವನ ಉಂಗುಟದ ತುದಿ ತಾಕಿ ಬ್ರಹ್ಮಾಂಡ ಖರ್ಪರವೇ ಸೀಳಿ ಹೋಯಿತು. ಆ ಸಂದರ್ಭದಲ್ಲಿ ಬಾಹ್ಯಾವರಣದ ಜಲ ಬ್ರಹ್ಮಾಂಡದೊಳನುಸುಳಿತು. ಇವನ ಅಂಗಸಂಗದಿಂದ ಗಂಗೆ ಎನಿಸಿತು.

ಹೀಗೆ ಹರಿಯಿಂದ ಹರಿದುಬಂದ ಎರಡು ಗಂಗೆಗಳಲ್ಲಿ; ನಖದಿಂದ ಹರಿದು ಬಂದ ಗಂಗೆ ಮೂರುಲೋಕಗಳಲ್ಲಿಯೂ ಹರಿದು ನಮ್ಮೆಲ್ಲರನ್ನೂ ಪವಿತ್ರಗೊಳಿಸುತ್ತಿದ್ದರೆ, ಭಗವಂತನ ಮುಖಕಮಲದಿಂದ ಹರಿದುಬಂದ ಭಾಗವತಗಂಗೆ, ಹೇಳುಗರು-ಕೇಳುಗರನ್ನು-ಪೃಚ್ಛಕರನ್ನು ಈ ಮೂವರನ್ನೂ ಪವಿತ್ರಗೊಳಿಸುತ್ತಿದೆ.

## ಶುಕಮುನಿಯು ಬರಲು ಕಾರಣವೇನು?

ಪರೀಕ್ಷಿತನು ಗರ್ಭದಲ್ಲಿದ್ದಾಗ ಕೊಲ್ಲಲು ಹವಣಿಸಿದವ ಅಶ್ವತ್ಥಾಮ. ಅದೇ ಅಶ್ವತ್ಥಾಮನೇ ಈಗ ಶುಕಮುನಿಯಾಗಿದ್ದಾನೆ. ಅಶ್ವತ್ಥಾಮ, ಶುಕಮುನಿ ಇಬ್ಬರೂ

ರುದ್ರಾವತಾರಿಗಳೇ. ಅಶ್ವತ್ಥಾಮನಾಗಿ ಪರೀಕ್ಷಿತನನ್ನು ಬ್ರಹ್ಮಾಸ್ತ್ರದಿಂದ ಕೊಲ್ಲಲು ಪ್ರವೃತ್ತಿಮಾಡಿದ ವ್ಯಕ್ತಿಯೇ ಈಗ ಶುಕಮುನಿಯಾಗಿ ಬಂದು ಸಾಯಲು ಸಿದ್ಧನಾದ ಪರೀಕ್ಷಿತನಿಗೆ ಅಮೃತತ್ವವನ್ನು ದೊರಕಿಸಿಕೊಡಲು ಬಂದಿದ್ದಾನೆ. ಬ್ರಹ್ಮಾಸ್ತ್ರದಿಂದ ಕೊಲ್ಲಲು ಬಂದಂತೆ ಈಗ ಬ್ರಹ್ಮಸಂಬಂಧಿಯಾದ 'ವಾಕ್' ಎಂಬ ಅಸ್ತ್ರದಿಂದ ಬದುಕಿಸಲು ಬಂದಿದ್ದಾನೆ.

ಹಿಂದೆ ದುಷ್ಟನಾದ ದುರ್ಯೋಧನನು ಕೊಟ್ಟ ಹಾಲನ್ನು ಅಶ್ವತ್ಥಾಮನು ಸ್ವೀಕರಿಸಿದ್ದರಿಂದ ಸಜ್ಜನರನ್ನು ಸಂಹರಿಸುವ ದುರ್ಬುದ್ಧಿ ಬಂದಿತ್ತು. ಅದೇ ಅಶ್ವತ್ಥಾಮ ಈಗ ಮರುಹುಟ್ಟನ್ನು ಪಡೆದು ಶುಕರಾಗಿದ್ದಾರೆ. ಈಗ ವೇದವ್ಯಾಸರು ಕೊಟ್ಟ ತತ್ತ್ವಜ್ಞಾನಾಮೃತವೆಂಬ ಕ್ಷೀರವನ್ನು ಪಾನಮಾಡಿದ್ದಾರೆ. ಇದರಿಂದ ಸಾತ್ವಿಕತೆ ಮನೆಮಾಡಿಕೊಂಡಿದೆ. ಆದ್ದರಿಂದಲೇ ಸಜ್ಜನನಿಗೆ ಹಿಂದೆ ದ್ರೋಹಮಾಡಿದ್ದೆನಲ್ಲ ಎಂದು ಬಹಳ ಖೇದದಿಂದ ಯಾರ ಆಹ್ವಾನವಿಲ್ಲದೆಯೇ ಬಂದಿದ್ದಾರೆ.

ಪರೀಕ್ಷಿತನಿಗೆ ಅಮೃತತ್ವವನ್ನು ನೀಡಲು ಅಣಿಯಾಗಿದ್ದಾರೆ ಎಂಬಲ್ಲಿ ಪ್ರಥಮ ಸ್ಕಂದವು ಲಕ್ಷ್ಮೀಹಯಗ್ರೀವನಿಗೆ ಸಮರ್ಪಿತವಾಯಿತು.

ಮಧ್ವೇಶಾರ್ಪಣಮಸ್ತು

# ಅಥ ದ್ವಿತೀಯ ಸ್ಕಂಧಃ

## ಶ್ರೀಶುಕಮುನಿಗಳ ಮೊದಲ ಮಾತು

ಶುಕಮುನಿಗಳು ಪರೀಕ್ಷಿತನ ಪ್ರಶ್ನೆಯಿಂದ ಸಂತುಷ್ಟರಾಗಿ ಹೇಳುತ್ತಾರೆ: ಪರೀಕ್ಷಿತ! ಬಹಳ ಉತ್ತಮವಾದ ಪ್ರಶ್ನೆಯನ್ನು ಕೇಳಿದ್ದೀಯ. ಪ್ರತಿಯೊಬ್ಬರೂ ತಿಳಿದುಕೊಳ್ಳಲೇ ಬೇಕಾದ ಪ್ರಶ್ನೆಯಿದು. ಸಂಸಾರದಲ್ಲಿಯೇ ಆಸಕ್ತರಾದ ಎಷ್ಟು ಮಂದಿಗೆ ಈ ಪ್ರಶ್ನೆ ಬಂದಿದೆ?!

**ಶ್ರೋತವ್ಯಾನೀಹ ರಾಜೇಂದ್ರ ನೃಣಾಂ ಸಂತಿ ಸಹಸ್ರಶಃ ।**
**ಅಪಶ್ಯತಾಮಾತ್ಮತತ್ತ್ವಂ ಗೃಹೇಷು ಗೃಹಮೇಧಿನಾಮ್ ॥** — ೨-೧-೨

ನಾವು ಭೌತಿಕ ವಿಷಯದಲ್ಲಿಯೇ ನಿರಂತರ ಮಗ್ನರಾಗಿದ್ದೇವೆ. ಬೇಡವಾದ ನೂರಾರು ಸಮಸ್ಯೆಗಳಿಗೆ ಬೇಕುಬೇಕೆಂದೇ ತಲೆಹಾಕಿದ್ದೇವೆ. ಕೇಳಬೇಕಾದ್ದು ಸಾಕಷ್ಟಿದೆ. ಆದರೆ ಕೇಳಲೇ ಬೇಕಾದ್ದನ್ನು ಕೇಳಲು ನಮಗೆ ಸಮಯವೇ ಇಲ್ಲ. ಸಂಸಾರದಲ್ಲಿಯೇ ಆಸಕ್ತರಾಗಿ ಕಂಸಾರಿಯನ್ನು ಮರೆತಿದ್ದೇವೆ. ಅಜ್ಞಾನದ ಗಾಢ ನಿದ್ರೆಯಲ್ಲಿ ತನ್ನನ್ನೇ ಕಾಣದವ ತನ್ನ ಅಂತರ್ಯಾಮಿಯನ್ನಾದರೂ ಹೇಗೆ ಕಂಡಾನು?

ನಿದ್ರೆ ಭರದಿಂದ ಇರುಳು ನೆನೆಯಲಿಲ್ಲ. ವಿಷಯಭೋಗದಲ್ಲಿ ಆಸಕ್ತರಾಗಿ ತಾರುಣ್ಯದಲ್ಲಿಯೂ ನೆನೆಯಲಿಲ್ಲ. ಹಗಲೆಲ್ಲ ದುಡ್ಡಿಗಾಗಿ ಮೈಯೊಡ್ಡಿ ಕಾಲಕಳೆದೆವು. ಬೇಡವಾದ ಸಂಸಾರದಲ್ಲಿ ಆಸಕ್ತಿಯನ್ನು ತಳೆದೆವು. ವೃದ್ಧಾಪ್ಯದಲ್ಲಿ ನೂರಾರು ಚಿಂತೆಗಳನ್ನು ಮೈಗೂಡಿಸಿಕೊಂಡೆವು. ಹೀಗಾಗಿ ಎಂದೂ ಹರಿಚಿಂತನೆಗೆ ನಮಗೆ ಸಮಯವೇ ಸಿಗಲಿಲ್ಲ. ಇನ್ನು ಸಾಯುವ ಘಟ್ಟ ಮುಟ್ಟಿದಾಗಲಾದರೂ 'ಹರಿ' ಎನ್ನೋಣವೆಂದರೆ ನಾಲಿಗೆಗೆ ಬಲವಿಲ್ಲ. ನಮ್ಮ ಅನರ್ಘ್ಯವಾದ ಜೀವನ ಗೊಂದಲಗಳ ನಡುವೆ ಸಿಕ್ಕಿಬಿದ್ದಿದೆ.

ಸಮುದ್ರದಲ್ಲಿ ಹೆಣವೊಂದು ತೇಲಿಹೋಗುತ್ತಿದೆ. ಬಾನಿನಲ್ಲಿ ಹಾರಾಡುವ ಹಕ್ಕಿಯೊಂದು ಆ ಹೆಣವನ್ನು ಕಂಡಿತು. ರಕ್ತಮಾಂಸಗಳ ಆಸೆಯಿಂದ ಹೆಣವನ್ನು ಸಮೀಪಿಸಿತು. ಕೊಕ್ಕಿನಿಂದ ಹೆಣವನ್ನು ಕುಕ್ಕಿ ರಕ್ತಮಾಂಸಗಳನ್ನು ಚಪ್ಪರಿಸುತ್ತಿರುವ ಹಕ್ಕಿಗೆ ಜಗತ್ತಿನ ಎಚ್ಚರವೇ ಇಲ್ಲವಾಯಿತು. ಕುಣಪ ಕಡಲಿನ ನಡುವೆ ಬಂದಾಗ ಹೊಟ್ಟೆ ತುಂಬಿಸಿಕೊಂಡ ಹಕ್ಕಿಗೆ ಎಚ್ಚರ ಬಂದಿತು. ಗೂಡಿಗೆ ಹಾರಿಹೋಗಬೇಕೆಂದು ಆಲೋಚಿಸಿತು. ತೀರ ಮುಟ್ಟುವ ಬಯಕೆಯಿಂದ ಎಷ್ಟು ಹಾರಿದರೂ ದೂರದ ತೀರವನ್ನು ಮುಟ್ಟಲಾಗದೆ ಜವನ ಸದನಕ್ಕೆ ಪಯಣ ಬೆಳೆಸಿತು.

ಭೋಗನಿರತವಾದ ಹಕ್ಕಿ 'ತಾನು ತೀರದಿಂದ ದೂರ ಸಾಗುತ್ತಿದ್ದೇನೆ' ಎಂಬ ಎಚ್ಚರವನ್ನೇ ಕಳೆದುಕೊಂಡಿತು. ನಮ್ಮ ಬದುಕೂ ಇದಕ್ಕೆ ಹೊರತಾಗಿಲ್ಲ. ನಾವೂ ಸಹ

ಭೌತಿಕ ಸುಖದಲ್ಲಿಯೇ ತಲ್ಲೀನರಾಗಿದ್ದೇವೆ. ಬದುಕೆಂಬ ಸಾಗರವೂ ನಮ್ಮನ್ನು ಬಹುಕಾಲ ಮೂರ್ಖರನ್ನಾಗಿಸಿದೆ. ಈ ಎಚ್ಚರ ಬರುವಾಗ ಯೌವ್ವನ ದೂರವಾಗಿ ರುತ್ತದೆ. ಸಾವಿನ ತೀರವನ್ನು ಸಮೀಪಿಸಿರುತ್ತೇವೆ. ಶ್ರೀಮದಾಚಾರ್ಯರು ಕೃಷ್ಣಾಮೃತ ಮಹಾರ್ಣವದಲ್ಲಿ ಇದನ್ನು ಹೇಳಿದ್ದಾರೆ–

**ಸ್ಮರ್ಯತಾಂ ತು ಹೃಷೀಕೇಶೋ ಹೃಷೀಕೇಷು ದೃಢೇಷು ಚ ।**
**ಅದೃಢೇಷು ಹೃಷೀಕೇಷು ಹೃಷೀಕೇಶಂ ಸ್ಮರಂತಿ ಕೇ ॥** — (ಕೃ. ಮ. ೧೫೩)

"ಇಂದ್ರಿಯಗಳೇ ದುರ್ಬಲವಾದಾಗ ಹೃಷೀಕೇಶನನ್ನು ಯಾರು ಸ್ಮರಿಸುತ್ತಾರೆ? ಇಂದ್ರಿಯಗಳು ಬಲಿಷ್ಠವಾಗಿದ್ದಾಗಲೂ ವಿಷಯಗಳಿಗೆ ಬಲಿಯಾದವರು ಹೃಷೀಕೇಶ ನನ್ನು ಮರೆಯುತ್ತಾರೆ." ಹೀಗೆ ನಮ್ಮ ಸಮಗ್ರ ಜೀವನವೇ ಭಗವಂತನಿಂದ ವಿಮುಖವಾಗಿ ಕಡೆಗೆ ಪಶ್ಚಾತ್ತಾಪಕ್ಕೆ ಗುರಿಯಾಗುತ್ತೇವೆ. ಸಾಗರದ ನಡುವೆ ಇರುವ ಹಕ್ಕಿಯ ಯಾವ ಸಂಕಲ್ಪಕ್ಕೂ ಬೆಲೆಯಿಲ್ಲ; ಅದರಂತೆ ಕೊನೆಗೆ ಮೂಡಿದ ಪಶ್ಚಾತ್ತಾಪಕ್ಕೂ ಬೆಲೆಯಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ ಅಧ್ಯಾತ್ಮ ಬದುಕಿಗೆ ತಾಕತ್ತಿಲ್ಲ. ಹಾಗೆಯೇ ಸಾಯಲು ಮನಸ್ಸಿಲ್ಲ. ಕರ್ತವ್ಯ ಮಾಡದೆ ಕೇವಲ ಪಶ್ಚಾತ್ತಾಪಪಟ್ಟರೆ ಅದಕ್ಕೆ ಬೆಲೆಯೂ ಇಲ್ಲ.

ನಾವೆಲ್ಲರೂ ಮನೆ, ಮಡದಿ, ಮಕ್ಕಳು ಎಂಬ ಮಮಕಾರದ ಸಂಸಾರ ಸುಳಿಯಲ್ಲಿ ಸಿಲುಕಿಕೊಂಡಿದ್ದೇವೆ. ನಮ್ಮ ಪರಿಸ್ಥಿತಿ ಇರುಳು ಕಂಡ ಬಾವಿಗೆ ಹಗಲೇ ಬೀಳುವವ ನಂತಾಗಿದೆ ಗೊಂದಲಕ್ಕೆ ಸಿಲುಕಿದ ನಮ್ಮ ಜೀವನದ ಕರ್ತವ್ಯ ಏನೆಂಬುದನ್ನು ಶುಕಮುನಿಗಳು ತಿಳಿಸಿಕೊಡುತ್ತಾರೆ–

**ತಸ್ಮಾದ್ ಭಾರತ ಸರ್ವಾತ್ಮಾ ಭಗವಾನ್ ಹರಿರೀಶ್ವರಃ ।**
**ಶ್ರೋತವ್ಯಃ ಕೀರ್ತಿತವ್ಯಶ್ಚ ಸ್ಮರ್ತವ್ಯಶ್ಚೇಚ್ಛತಾಽಭಯಮ್ ॥** — (೨–೧–೫)

"ಪರೀಕ್ಷಿತನೇ! ಸರ್ವಾಂತರ್ಯಾಮಿಯಾದ ಭಗವಂತನ ಬಗ್ಗೆ ಶ್ರವಣಮಾಡು. ಶ್ರೀಹರಿಯನ್ನೇ ಕೊಂಡಾಡು. ಅಂತರಾಳದಲ್ಲಿ ಚಿಂತಿಸು. ಭವಭಯದಿಂದ ಮುಕ್ತನಾಗು."

## ಮೃತ್ಯುವಿಗೆ ಮುನ್ನ ಭಗವತ್ಪ್ರಜ್ಞೆ ಬೇಕು!

ಪ್ರತಿಯೊಬ್ಬ ಜೀವಿಯು ತನ್ನ ಜೀವನದ ಕೊನೆಯಲ್ಲಿ ವಿಶೇಷವಾಗಿ ಹರಿಧ್ಯಾನ ನಿರತನಾಗಬೇಕು. ವಿಷಯಗಳಲ್ಲಿ ವಿರಕ್ತನಾಗಿ ವಿಶ್ವೇಶನಲ್ಲಿ ಆಸಕ್ತನಾಗಬೇಕು. ಕೊನೆಯ ಘಳಿಗೆಯಲ್ಲಿ ನಿರ್ಮಲ ಹೃದಯದಿಂದ ಆಚರಿಸಿದ ಭಗವಧ್ಯಾನವೇ ಮುಕ್ತಿಗೆ ಸೋಪಾನ.

ಹಾಗಾದಲ್ಲಿ "ಜೀವನದ ಕೊನೆಯಲ್ಲಷ್ಟೇ ಧ್ಯಾನಮಾಡಿದರಾಯಿತು. ಸಮಗ್ರ ಜೀವನವನ್ನೂ ಧ್ಯಾನಕ್ಕಾಗಿ ಮೀಸಲಿಡುವ ಅಗತ್ಯವಿದೆಯೇ? ಸಮಗ್ರ ಜೀವನವನ್ನು

ವಿಷಯಾಸ್ತಕನಾಗಿ ಕಳೆದು ಕೊನೆಗೆ ಹರಿಧ್ಯಾನ ಮಾಡಿದರಾಯಿತು'' ಎಂದು ಭಾವಿಸಬಾರದು.

ಕೊನೆಯ ಘಳಿಗೆಯಲ್ಲಿ ಪರಿಪೂರ್ಣವಾದ ಭಗವದ್ಧ್ಯಾನ ಕೈಗೂಡಬೇಕಿದ್ದರೆ; ಸಮಗ್ರ ಜೀವನದಲ್ಲಿ ಅದಕ್ಕೆ ಬೇಕಾದ ಸಿದ್ಧತೆಯನ್ನು ಮಾಡಿಕೊಳ್ಳಬೇಕು. ಬಲವತ್ತರವಾದ ಅಧ್ಯಾತ್ಮ ಸಂಸ್ಕಾರವೇ ಅಂತ್ಯಕಾಲದ ಸ್ಮರಣೆಗೆ ಹೇತುವಾಗುತ್ತದೆ ಹೊರತು ಕೊನೆಯಲ್ಲಿ ಒಮ್ಮಿಂದೊಮ್ಮೆಲೆ ಧ್ಯಾನದ ಚಮತ್ಕಾರ ನಡೆಯಲು ಸಾಧ್ಯವಿಲ್ಲ. ಆದ್ದರಿಂದ ಶ್ರವಣ, ಕೀರ್ತನ, ಮನನಗಳನ್ನು ನಿರಂತರ ನಡೆಸಬೇಕು ಎಂದರು ಶುಕಾಚಾರ್ಯರು.

ನಾವೆಲ್ಲರೂ ಪ್ರತಿನಿತ್ಯವೂ ಅನೇಕ ಕೆಲಸಗಳನ್ನು ಮಾಡುತ್ತೇವೆ. ಅವೆಲ್ಲವೂ ರಾತ್ರಿ ಮಲಗುವ ಮುನ್ನವೇ ಮರೆತಿರುತ್ತವೆ. ಶ್ರದ್ಧೆಯಿಂದ ಮಾಡಿದ ಕೆಲಸ ಮಾತ್ರ ನೆನಪುಳಿದಿರುತ್ತದೆ. ಅಥವಾ ಯಾರಾದರು ನಮ್ಮನ್ನು ನಿಂದಿಸಿದ್ದರೆ, ಹೊಡೆದಿದ್ದರೆ, ಅದೃಷ್ಟದಿಂದ ಧನಸಂಪಾದಿಸಿದ್ದರೆ ಸ್ಮರಿಸಿಕೊಳ್ಳುತ್ತೇವೆ. ಯಾವುದು ಹೆಚ್ಚು ಪರಿಣಾಮ ಬೀರಿರುತ್ತದೋ ಅದು ನೆನಪಿರುತ್ತದೆ.

ಇದರಂತೆ ಒಂದು ಸಂವತ್ಸರದಲ್ಲಿ ಸಾವಿರಾರು ಕೆಲಸಗಳನ್ನು ಮಾಡಿರುತ್ತೇವೆ. ಮಾಡಿದ ಕಾರ್ಯಗಳೆಲ್ಲವೂ ನೆನಪಿರುವುದಿಲ್ಲ. ವಿವಾಹ, ಗೃಹನಿರ್ಮಾಣ, ಧನಾಗಮ ಮುಂತಾದ ವಿಶೇಷ ಸನ್ನಿವೇಶಗಳು ನೆನಪಿನ ಆಳಕ್ಕೆ ಹೊಕ್ಕಿರುತ್ತವೆ. ಪ್ರಭಾವ ಬೀರಿದ ಕೆಲವು ಘಟನೆಗಳನ್ನು ಮಾತ್ರ ಸ್ಮರಿಸಿಕೊಳ್ಳುತ್ತೇವೆ.

ಹಾಗೆಯೇ, ನಮ್ಮ ಜೀವನದಲ್ಲಿ ಯಾವ ಚಿಂತನೆ ಬಹಳ ಪ್ರಭಾವವನ್ನು ಬೀರಿರುತ್ತದೋ ಅದು ಮಾತ್ರ ಕೊನೆಗೆ ಸ್ಫುರಿಸುತ್ತದೆ. ಧ್ಯಾನವು ಕೈಗೂಡಬೇಕಿದ್ದರೂ ಸಮಗ್ರ ಜೀವನದಲ್ಲಿ ಅಧ್ಯಾತ್ಮಸಂಸ್ಕಾರ ಒದಗಿರಬೇಕು. ಅದು ದೃಢವಾಗಿರಬೇಕು. ಈ ದೃಷ್ಟಿಯಿಂದಲೇ ಶ್ರೀಮದಾಚಾರ್ಯರು 'ಸಂತತಂ ಚಿಂತಯೇಽನಂತಂ ಅಂತ್ಯಕಾಲೇ ವಿಶೇಷತಃ' ಎಂದರು. ನಮ್ಮ ಸಮಗ್ರ ಜೀವನದ ಫಲಶ್ರುತಿಯೇ ಅಂತ್ಯಕಾಲ. ಪ್ರತಿಯೊಬ್ಬನ ಸಾವಿನಿಂದ ಅವನ ಜೀವನದ ಸಾರ್ಥಕತೆಯನ್ನು ಗುರುತಿಸಬಹುದು. ಆದ್ದರಿಂದ ಸ್ವೇಚ್ಛೆಯಿಂದ ಜೀವನ ಕಳೆದು, ಕೊನೆಗೆ ಶ್ರವಣಾದಿಗಳನ್ನು ನಡೆಸಿ, ಮೋಕ್ಷಕ್ಕೆ ಹೋಗಬಹುದೆಂಬ ಚಿಂತನೆ ಸಲ್ಲದು. ಮೋಕ್ಷದ ಮಾರ್ಗ ತಿಳಿದಷ್ಟು ಸುಲಭವಲ್ಲ.

ಒಬ್ಬ ಜಿಪುಣನಿದ್ದ. ಅವನು ತನ್ನ ಜೀವನದಲ್ಲಿ 'ದೇಹಿ' ಎಂದವರಿಗೆ ಬಿಡಿಗಾಸೂ ಕೊಟ್ಟವನಲ್ಲ. ಅವನಿಗೆ ಕೆಲವು ಮಕ್ಕಳಿದ್ದರು. ಯಮಲೋಕದ ಪಯಣಕ್ಕೆ ಸಿದ್ಧನಾಗಿದ್ದ. ಹಾಸಿಗೆ ಹಿಡಿದ ಜಿಪುಣ ಪ್ರಯತ್ನಪೂರ್ವಕವಾಗಿ ಏನೋ ಹೇಳಬಯಸಿದ. ಮಕ್ಕಳೆಲ್ಲರೂ ಓಡೋಡಿ ಬಂದರು. ಅಂತ್ಯಕಾಲದ ಸಂದೇಶಕ್ಕಾಗಿ ಕಿವಿಗೊಟ್ಟರು. ಜಿಪುಣನು ಕಷ್ಟಪಟ್ಟು ಅಸ್ಪಷ್ಟವಾಗಿ ನುಡಿದ– ''ಮಕ್ಕಳೇ! ದೂರದಲ್ಲಿ ದೀಪ ಉರಿಯುತ್ತಿದೆ. ಅದರ ಬತ್ತಿ ದೊಡ್ಡದಾಗಿದೆ. ತೈಲವು ಬೇಗ ತೀರಿಹೋಗುತ್ತದೆ. ದೀಪ ಸ್ವಲ್ಪ ಸಣ್ಣದುಮಾಡಿ!'' ಎಂದ. ತನ್ನ ಜೀವನದೀಪವೇ ಆರಿಹೋಗುತ್ತಿದೆ. ಈ

ದೀಪದಿಂದೇನು? ಎಂಬ ಎಚ್ಚರ ಕೊನೆಗೂ ಬರಲಿಲ್ಲ. ಸಮಗ್ರ ಜೀವನವನ್ನು ಲೋಭದಿಂದ ಕಳೆದವನಿಗೆ ಕೊನೆಗೆ ಸ್ಮರಣೆಗೆ ಬಂದದ್ದು ಲೋಭತನವೇ. ಇದರಂತೆ, ಭಗವಂತನ ಸ್ಮರಣೆಯೇ ನಮ್ಮ ಸಮಗ್ರ ಜೀವನದ ಉಸಿರಾಗಿದ್ದರೆ; ಕೊನೆಕಾಲ ದಲ್ಲಿಯೂ ಭಗವಂತನೆಂಬ ಜ್ಯೋತಿಯನ್ನು ಹೃದಯಗುಹೆಯಲ್ಲಿ ಬೆಳಗಿಸುವ ಭಾಗ್ಯವಂತರು ನಾವಾಗುತ್ತೇವೆ. ಇಲ್ಲವಾದರೆ 'ದೀಪ ಸಣ್ಣದಾಗಿಸಿ!' ಎಂದು ಹೇಳಿದ ಜಿಪುಣನಂತೆ ಏನೋ ಚಿಂತಿಸಿ ಕೊನೆಯುಸಿರೆಳೆಯುತ್ತೇವೆ.

ಹೀಗೆ ಶುಕಾಚಾರ್ಯರು ಸಾಧಕರಿಗೆ ಸಾಧನೆಯ ಸಂದೇಶಗಳನ್ನು ನೀಡಿದ್ದಾರೆ.

ಈ ಸಂದರ್ಭದಲ್ಲಿ ಪರೀಕ್ಷಿತನು ಪ್ರಶ್ನಿಸುತ್ತಾನೆ, "ಮುನಿವರ್ಯ! ನನಗೆ ಮೃತ್ಯು ಹತ್ತಿರವಾಗಿದೆ. ಏಳನೇ ದಿನದಲ್ಲಿ ತಕ್ಷಕ ಕಚ್ಚಿ ಸಾಯುತ್ತೇನೆ. ಹೀಗಿರಲು ಸಾಧನೆ ಮಾಡಲಾದೀತೇ?" ಎಂದಾಗ ಶುಕಾಚಾರ್ಯರು ಉತ್ತರಿಸುತ್ತಾರೆ–

ಪರೀಕ್ಷಿತ! ಹಿಂದೆ 'ಖಟ್ವಾಂಗ'ನೆಂಬ ರಾಜನಿದ್ದ. ಅವನಿಗೆ ಒಂದು ಮುಹೂರ್ತ ದಲ್ಲಿ ನಾನು ಸಾಯುತ್ತೇನೆಂದು ತಿಳಿಯಿತು. ಒಂದು ಮುಹೂರ್ತದಲ್ಲಿಯೇ ಉತ್ತಮವಾದ ಹರಿಧ್ಯಾನಮಾಡಿ ಶ್ರೇಯೋಭಾಗಿಯಾದ.

**ಮುಹೂರ್ತಾತ್ಸಂಗಮುತ್ಸೃಜ್ಯ ಗತವಾನಭಯಂ ಹರಿಮ್ ।** — (೨–೧–೧೩)

ಹಿಂದೆ ಮಾಡಿದ ಸಾಧನೆಯು, ಒಂದು ಮುಹೂರ್ತದಲ್ಲಿ ಫಲಿಸಿಗಲು ಹೇತುವಾಯಿತು. ನಿನಗೆ ಏಳು ದಿವಸ ಅವಕಾಶವಿದೆ. ಹಿಂದೆಯೂ ಧರ್ಮದಿಂದ ರಾಜ್ಯವಾಳಿದ್ದೀ. ಅಧ್ಯಾತ್ಮಸಂಸ್ಕಾರವನ್ನು ಪಡೆದುಕೊಂಡಿರುವಿ. ನೀನೇ ಭಾಗ್ಯಶಾಲಿ –ಎಂದು ಅಭಿನಂದಿಸುತ್ತಾರೆ. ನಾವು ಏಳು ದಿವಸದಲ್ಲಿ ಪರೀಕ್ಷಿತ ಸಾಯುತ್ತಾನೆ ಎಂದು ದುಃಖಿಸುತ್ತೇವೆ. ಆದರೆ ಏಳು ದಿನಗಳಲ್ಲಿ ನಿರಂತರ ಭಗವಚ್ಚಿಂತನೆ ನಡೆಸುವ ಯೋಗ ನಿನ್ನದಾಗಿದೆ ಎಂದು ಶುಕರು ಅಭಯದಾನ ಮಾಡುತ್ತಾರೆ. ಭಗವದ್ಧ್ಯಾನದ ಕ್ರಮವನ್ನೂ ತಿಳಿಸಿಕೊಡುತ್ತಾರೆ.

## ಧ್ಯಾನ ಎಂದರೇನು?

ಭಗವಂತನ ಬಗ್ಗೆ ಸರಿಯಾದ ತಿಳಿವಳಿಕೆಯನ್ನು ಪಡೆದು, ಭಕ್ತಿಪೂರ್ವಕವಾಗಿ ನಿರಂತರ ಸ್ಮರಿಸುವುದೇ ಧ್ಯಾನ. ಭಗವಂತನ ಧ್ಯಾನವನ್ನು ಒಮ್ಮೆಲೆ ಮಾಡಲಾಗ ದಿದ್ದರೆ, ಕ್ರಮವಾಗಿ ಭಗವಂತನ ಒಂದೊಂದೇ ಅವಯವಗಳನ್ನು ಧ್ಯಾನಿಸಬೇಕು. ದ್ವಾದಶಸ್ತೋತ್ರದಲ್ಲಿ ಶ್ರೀಮದಾಚಾರ್ಯರೂ ಇದೇ ಕ್ರಮದಲ್ಲಿ ಒಂದೊಂದು ಅವಯವಗಳನ್ನು ಬಣ್ಣಿಸಿದ್ದಾರೆ. ವಿಷಯಗಳ ಕಡೆ ಗಮನ ಹರಿಸದೆ ಧ್ಯಾನನಿರತರಾಗ ಬೇಕು.

**ತತ್ರೈಕಾವಯವಂ ಧ್ಯಾಯೇದವ್ಯುಚ್ಛಿನ್ನೇನ ಚೇತಸಾ ।**
**ಮನೋ ನಿರ್ವಿಷಯಂ ಯುಂಕ್ತ್ವಾ ತತಃ ಕಿಂಚಿನ್ನ ಸಂಸ್ಮರೇತ್ ।**
**ಪದಂ ತತ್ಪರಮಂ ವಿಷ್ಣೋಃ ಮನೋ ಯತ್ರ ಪ್ರಸೀದತಿ ॥** — (೨–೧–೧೯)

ಮನೋ ನಿರ್ವಿಷಯಂ.. ಎಂಬ ಮಾತಿಗೆ ಕೆಲವರು 'ಮನಸ್ಸಿನಲ್ಲಿ ಏನನ್ನೂ ಚಿಂತಿಸದಿರುವುದೇ ಧ್ಯಾನ' ಎನ್ನುತ್ತಾರೆ. ಇಂದು ಎಲ್ಲೆಡೆಯೂ ಈ ಧ್ಯಾನವನ್ನೇ ವ್ಯಾಪಕವಾಗಿ ಪ್ರಚಾರಮಾಡುತ್ತಿದ್ದಾರೆ. ಇದು ಅವೈದಿಕ ಮತ್ತು ಅವೈಜ್ಞಾನಿಕ ಕಲ್ಪನೆ. ಏನೂ ವಿಷಯವಿಲ್ಲದೆ ಧ್ಯಾನಮಾಡಲು ಸಾಧ್ಯವೇ ಇಲ್ಲ. ಧ್ಯಾನ ಎಂದರೆ ಒಂದು ವಸ್ತುವಿನ ಗುಣಚಿಂತನೆ ಎಂದೇ ಅರ್ಥ ಏನನ್ನೂ ಗ್ರಹಿಸದ ಧ್ಯಾನದ ಸ್ವರೂಪವಾದರೂ ಏನು? ಇದು ಅವ್ಯವಹಾರ್ಯ.

ಆದ್ದರಿಂದ 'ಮನೋನಿರ್ವಿಷಯಂ....' ಎಂಬ ಮಾತಿಗೆ 'ಭಗವಂತನನ್ನು ಬಿಟ್ಟು ಇತರ ವಿಷಯಗಳನ್ನು ಸ್ಮರಿಸಬಾರದೆಂದೇ' ಅರ್ಥ ವಿಷಯಗಳಿಂದ ಮನಸ್ಸು ಕಲುಷಿತವಾಗುತ್ತದೆ. ಅಶುದ್ಧ ಮನದಲ್ಲಿ ಹರಿ ಮೂಡಿಬರುವುದಿಲ್ಲ.

ಪಾತ್ರೆಯಲ್ಲಿಯ ಹಾಲು ಹಾಳಾಗದೆ ಸ್ವಚ್ಛವಾಗಿ ಉಳಿಯಬೇಕಿದ್ದರೆ, ಮೊದಲು ಪಾತ್ರೆಯನ್ನು ಸ್ವಚ್ಛಗೊಳಿಸಬೇಕು. ಕಶ್ಮಲ ತುಂಬಿದ ಪಾತ್ರೆಗೆ ಹಾಲು ಹಾಕಿದರೆ ಹಾಲು ಹಾಳಾಗುತ್ತದೆ ಅದರಂತೆ ಭಗವಂತನೆಂಬ ಹಾಲು, ನಮ್ಮ ಹೃದಯವೆಂಬ ಪಾತ್ರೆಯಲ್ಲಿ ನಿಲ್ಲಬೇಕಿದ್ದರೆ ನಮ್ಮ ಹೃದಯವನ್ನು ಮೊದಲು ತೊಳೆಯಬೇಕು. ಇಂತಹ ಸ್ವಚ್ಛವಾದ ಹೃದಯದಲ್ಲಿ ಭಗವಂತನನ್ನು ಮಾತ್ರ ಸ್ಮರಿಸಬೇಕು.

ಅದರಂತೆ 'ನಿರ್ವಿಕಲ್ಪಕಧ್ಯಾನ' ಎಂದರೆ; 'ಭಗವಂತನಿಗೆ ಯಾವುದೇ ಆಕಾರವಿಲ್ಲ' ಎಂದರ್ಥವಲ್ಲ. ಭಗವಂತನಿಗೆ ಆಕಾರವಿದೆ–ಆಕಾರವಿಲ್ಲ –ಎರಡೂ ಸರಿ. ಅಪ್ರಾಕೃತವಾದ ಚಿನ್ಮಯ ಆಕಾರವಿದೆ; ಭೌತಿಕ ಆಕಾರವಿಲ್ಲ. ಭಗವಂತನ ಸುಂದರ ಆಕೃತಿಯನ್ನು ಭಾಗವತವೇ ಹೃದ್ಯವಾಗಿ ಬಣ್ಣಿಸಿದೆ. ಅಸತ್ಯದ ಉಪಾಸನೆಯಿಂದ ಸತ್ಯನಾದ ಭಗವಂತನನ್ನು ಹೊಂದಲು ಸಾಧ್ಯವಿಲ್ಲ. ಅಣುರೇಣುತೃಣಕಾಷ್ಠಗಳಲ್ಲೆಲ್ಲಾ ಪರಿಪೂರ್ಣನಾಗಿ ನೆಲೆಗೊಂಡಿರುವ ಭಗವಂತನಿಗೆ ಸಕಲವಿಧ ಆಕಾರಗಳೂ ಇವೆ. ವಿಕಾರದ ಆಕಾರವಿಲ್ಲ. ನೀರನ್ನು ಆವಾವ ಪಾತ್ರೆಗಳಲ್ಲಿ ತುಂಬಿದಾಗ ಆವಾವ ಪಾತ್ರೆಗಳ ಆಕಾರವನ್ನು ಹೊಂದುವಂತೆ, ಎಲ್ಲರ ಒಳಗಿರುವ ಭಗವಂತನಿಗೆ ಎಲ್ಲ ಆಕಾರಗಳೂ ಇವೆ. ಜಡನೂ ಅಲ್ಲ, ಅಸ್ವತಂತ್ರಚೇತನನೂ ಅಲ್ಲ. ಸ್ವತಂತ್ರನಾಗಿ ಅಪ್ರಾಕೃತವಾದ ಚೈತನ್ಯರೂಪದಿಂದಿದ್ದಾನೆ.

ಅಸ್ಥಿ, ಮಾಂಸಗಳಿಂದ ಪುಷ್ಟವಾದ ಪ್ರಾಣಿಗಳ ದೇಹದಲ್ಲಿ ಒಂದು ಆಕೃತಿಯಿದೆ. ಸಕ್ಕರೆಯಿಂದ ರಚಿಸಿದ ಬೊಂಬೆಯಲ್ಲಿಯೂ ಪ್ರಾಣಿಯ ಆಕೃತಿಯಿದೆ. ಆಕೃತಿಯಲ್ಲಿ ಸಾದೃಶ್ಯವಿದ್ದರೂ ಗುಣಧರ್ಮಗಳು ಭಿನ್ನವಾಗಿವೆ. ಸಕ್ಕರೆಯ ಪ್ರಾಣಿಯಲ್ಲಿ ಸಕ್ಕರೆ ಬಿಟ್ಟು ಬೇರೆ ಏನಿಲ್ಲ. ನಿಜಪ್ರಾಣಿಯಲ್ಲಿ ಮಾಂಸ–ರಕ್ತ ಬಿಟ್ಟು ಬೇರೆ ಇಲ್ಲ. ಅದರಂತೆ ಭಗವಂತನದ್ದು ಚಿನ್ಮಯಾಕಾರ. ಅಪ್ರಾಕೃತ ಚೈತನ್ಯ ಆನಂದಗಳೇ ಹೊರತಾಗಿ ಪ್ರಾಕೃತವಾದ ಯಾವ ದೋಷಗಳೂ ಇಲ್ಲ. ಆದ್ದರಿಂದ ರೂಪವೇ ಇಲ್ಲದ ಚಿಂತನೆ ಅವೈಜ್ಞಾನಿಕ ಎನ್ನುವುದನ್ನು ಶ್ರೀಮದಾಚಾರ್ಯರು ಮನದಟ್ಟುಮಾಡಿಕೊಟ್ಟಿದ್ದಾರೆ.

## ‘ಹರಿ’ ಎಂಬ ಗುರಿಯನ್ನು ಮಾತ್ರ ಕಾಣಿರಿ!!

ನಿರ್ದಿಷ್ಟವಾದ ಗುರಿಯನ್ನು ಮುಟ್ಟಬೇಕಾದರೆ ಸರಿಯಾದ ಮಾರ್ಗದಲ್ಲಿ ಸಾಗಬೇಕು. ಧ್ಯಾನಮಾರ್ಗಕ್ಕೆ ಭಗವಂತನೇ ಗುರಿ. ಮಾರ್ಗಕ್ಕೆ ಪ್ರತಿಬಂಧಕವಾದವು ವಿಷಯಪದಾರ್ಥಗಳು. ಇವುಗಳನ್ನು ತೊರೆದಾಗ ಮಾತ್ರ ಭಗವಂತನನ್ನು ಮುಟ್ಟಲು ಸಾಧ್ಯವಾಗುತ್ತದೆ. ಇದಕ್ಕೆ ಸಂವಾದಿಯಾಗಿ ಮಹಾಭಾರತದ ಕಥೆಯನ್ನು ನೋಡೋಣ!

ದ್ರೋಣಾಚಾರ್ಯರ ಸಮ್ಮುಖದಲ್ಲಿ ಪಾಂಡವ-ಕೌರವರು ಶಸ್ತ್ರಾಸ್ತ್ರವಿದ್ಯೆ ಗಳಿಸಿದರು. ವಿದ್ಯಾಭ್ಯಾಸ ಪೂರ್ಣವಾದ ಬಳಿಕ ಅವರ ಸಾಧನೆಯ ಪರೀಕ್ಷೆ ಏರ್ಪಡಿಸಿದರು. ಪರೀಕ್ಷೆಗಾಗಿ ಒಂದು ಮರದಲ್ಲಿ ಹಕ್ಕಿಯ ಬೊಂಬೆಯನ್ನು ಕಟ್ಟಿದರು. ದ್ರೋಣಾಚಾರ್ಯರು ಹೇಳಿದರು, “ಮರದ ಮೇಲಿನ ಹಕ್ಕಿಯ ಕಣ್ಣಿಗೆ ಸರಿಯಾಗಿ ಗುರಿಯಿಟ್ಟು ಯಾರು ಬಾಣವನ್ನು ಪ್ರಯೋಗಿಸುತ್ತಾರೋ ಅವರೇ ಉತ್ತಮ ಅಭ್ಯಾಸ ಮಾಡಿದವರು, ಅವರು ಅಭಿನಂದನಾರ್ಹರು” ಎಂದು ಘೋಷಿಸಿದರು.

ದುಶ್ಶಾಸನ, ದುರ್ಯೋಧನರೆಲ್ಲರೂ ಹಮ್ಮಿನಿಂದ ಬಂದರು. ಹೆದೆ ಏರಿಸಿ ನಿಂತಾಗ ದ್ರೋಣರು ‘ನಿಮಗೇನು ಕಾಣಿಸುತ್ತಿದೆ’ ಎಂದರು. ಒಬ್ಬ ‘ಮರ’ ಎಂದ. ಮತ್ತೊಬ್ಬ ‘ಹಣ್ಣು, ಹಕ್ಕಿ ಎಲ್ಲವೂ ಕಾಣಿಸುತ್ತಿದೆ’ ಎಂದ. ಹೀಗೆ ಎಲ್ಲರೂ ಪುಷ್ಕಳವಾಗಿ ಬೆಳೆದ ಮರ, ಹಣ್ಣು, ಹೂವು ಎಲ್ಲವೂ ಕಾಣಿಸುತ್ತಿದೆ ಎಂದರು.

ದ್ರೋಣಾಚಾರ್ಯರು ಹೇಳಿದರು, “ಧನುಸ್ಸು ಬಾಣಗಳನ್ನು ಇಲ್ಲಿ ಇಟ್ಟು ಪ್ರೇಕ್ಷಕರಾಗಿ ಕುಳಿತುಕೊಳ್ಳಿರಿ! ಹೋಗಿ!” ಎಂದು ಕಳುಹಿಸಿದರು. ಕೊನೆಗೆ ಅರ್ಜುನ ಬಂದ. ದ್ರೋಣರು “ಅರ್ಜುನ! ನಿನಗೇನು ಕಾಣಿಸುತ್ತಿದೆ?” ಎಂದರು. ಅರ್ಜುನ ಹೇಳಿದ, “ಗುರುವರ್ಯ! ನನಗೆ ಒಂದು ಹಕ್ಕಿಯ ಕಣ್ಣು ಮಾತ್ರ ಕಾಣಿಸುತ್ತಿದೆ. ಮತ್ತೇನೂ ಕಾಣಿಸುತ್ತಿಲ್ಲ” ಎಂದ. ದ್ರೋಣರು ಅರ್ಜುನನ ಬೆನ್ನುಚಪ್ಪರಿಸಿದರು. ಅರ್ಜುನ! ನೀನು ಮಾತ್ರ ಗುರಿಗೆ ಸರಿಯಾಗಿ ಬಾಣಬಿಡಲು ಸಮರ್ಥನಾಗಿದ್ದಿ’ ಎಂದರು.

ಇಂದೂ ನಾವೆಲ್ಲರೂ ಭಗವಂತನನ್ನು ಗುರಿಯಾಗಿಟ್ಟುಕೊಂಡು ಧ್ಯಾನಕ್ಕೆಂದು ಕುಳಿತುಕೊಳ್ಳುತ್ತೇವೆ. ನಮ್ಮ ಸ್ಥಿತಿಯೂ ಕೌರವರಂತೆಯೇ ಆಗಿದೆ. ಅವರೆಲ್ಲರೂ ಗುರಿಯನ್ನು ಬಿಟ್ಟು ಮತ್ತೆಲ್ಲವನ್ನೂ ನೋಡಿದಂತೆ ನಾವೂ ಸಹ ಜೀವನದ ಗುರಿಯಾದ ಭಗವಂತನೊಬ್ಬನನ್ನು ಬಿಟ್ಟು ಮತ್ತೆಲ್ಲವನ್ನೂ ನೋಡುತ್ತಿದ್ದೇವೆ. ಆದ್ದರಿಂದ ದೇವರು ನಮಗೆ ತೋರುತ್ತಲೇ ಇಲ್ಲ.

ಆದರೆ ಅರ್ಜುನನು ಗುರಿಯಾದ ಹಕ್ಕಿಯನ್ನು ಬಿಟ್ಟು ಮತ್ತೇನನ್ನೂ ಕಾಣಲಿಲ್ಲ. ಅದರಂತೆ ನಿಜವಾದ ಭಕ್ತನಿಗೆ ಭಗವಂತನ ಹೊರತಾಗಿ ಯಾವ ಭೌತಿಕ ವಿಷಯಗಳೂ ತೋರವು.

ಅನೇಕರು ನಾವು ಧ್ಯಾನಮಾಡಬೇಕು! ಎಂಬ ಆಸಕ್ತಿಯನ್ನು ತೋರಿಸುತ್ತಾರೆ. ಆದರೆ ಧ್ಯಾನಕ್ಕೆ ಬೇಕಾದ (ಆತ್ಮಬಲ) ಇಂದ್ರಿಯನಿಗ್ರಹ, ಭಗವಂತನಲ್ಲಿ ಪ್ರೇಮ ಇವುಗಳನ್ನು ಹೊಂದಿರುವುದಿಲ್ಲ. ಇತರ ಭೌತಿಕ ವಿಷಯಗಳಲ್ಲಿಯೇ ಆಸಕ್ತಿಯನ್ನು ತುಂಬಿಕೊಂಡು ಕಣ್ಣುಮುಚ್ಚಿದರೂ ತೋರುವುದು ವಿಷಯಗಳೇ ಹೊರತು ಭಗವಂತನಲ್ಲ. ಇದಕ್ಕೆ ಕಾರಣ ಪರಮಾತ್ಮನಲ್ಲಿ ನಮಗೆ ಪ್ರೇಮದ ಕೊರತೆಯಿದೆ. ಆದ್ದರಿಂದಲೇ ಏಕಾಗ್ರತೆ ಇಲ್ಲ. ಧ್ಯಾನದ ಕ್ರಮವನ್ನು ಉಪನಿಷತ್ತುಗಳಂತೆ ಭಾಗವತವೂ ನಿರೂಪಿಸುತ್ತಿದೆ.

ಭಗವಂತನೆಂಬ ಗುರಿಯನ್ನು ಮುಟ್ಟಲು ವೇದಶಾಸ್ತ್ರಗಳೇ ಧನುಸ್ಸು. ಮನಸ್ಸೇ ಬಾಣ. ಗುರಿ ಇಡದೆ ಬಾಣವನ್ನು ಹಾಗೆ ಬಿಸುಟರೆ ಗುರಿಮುಟ್ಟದು. ಅದಕ್ಕೊಂದು ಧನುಸ್ಸು ಬೇಕು. ಧನುಸ್ಸಿನ ನೆಲೆಯಲ್ಲಿ ಬಾಣವನ್ನು ಪ್ರಯೋಗಿಸಿದರೆ ಅದಕ್ಕೆ ವೇಗ ಶಕ್ತಿ ಬಂದು ನಿರ್ದಿಷ್ಟ ಗುರಿಯನ್ನು ಮುಟ್ಟುತ್ತದೆ. ಅದರಂತೆ ಮನಸ್ಸೆಂಬ ಬಾಣವನ್ನು ವೇದಶಾಸ್ತ್ರಗಳೆಂಬ ಧನುಸ್ಸಿನಲ್ಲಿ ಸಂಯೋಜಿಸಿ ಪ್ರಯೋಗಿಸಿದರೆ ಉದ್ದಿಷ್ಟನಾದ ಭಗವಂತನೆಂಬ ಗುರಿಯನ್ನು ಮುಟ್ಟಬಲ್ಲದು. ವೇದಶಾಸ್ತ್ರಗಳ ಹಿನ್ನೆಲೆ ಇಲ್ಲದೆ (ಓದದೆ) ಕೇವಲ ಮನಸ್ಸನ್ನು ಪರಮಾತ್ಮನ ಕಡೆ ಹಾಯಿಸಲಾಗದು. ಭಗವಂತನಲ್ಲಿ ಮನಸ್ಸು ನಿಲ್ಲಬೇಕಾಗಿದ್ದರೆ ಭಕ್ತಿ ಮತ್ತು ವೈರಾಗ್ಯಗಳು ಸೇರಬೇಕು. ಆವಾಗ ನಾವು ಅರ್ಜುನನಂತೆ ಭಗವಂತನೆಂಬ ಗುರಿಯನ್ನು ಪರಿಪೂರ್ಣವಾಗಿ ಮುಟ್ಟುತ್ತೇವೆ.

## ಧ್ಯಾನದ ಎರಡು ಮಜಲು

ನಾವು ಧ್ಯಾನದ ಮೂಲಕ ಭಗವಂತನನ್ನು ಕಾಣಬೇಕು. ಧ್ಯಾನದಲ್ಲಿ ಭಗವಂತನು ನೇರವಾಗಿ ನಮ್ಮ ಕಣ್ಣಿಗೆ ಕಾಣಿಸಲಾರ. ಒಂದು ಪ್ರತಿಮೆಯ ಮೂಲಕವೇ ಭಗವಂತನನ್ನು ಕಾಣಬೇಕು. ಅಪರೋಕ್ಷಜ್ಞಾನ ಬಂದ ಬಳಿಕ ಸಾಕ್ಷಾತ್ತಾಗಿ ಗೋಚರಿಸುತ್ತಾನೆ. ಅದಕ್ಕೆ ಮುನ್ನ ಸುಂದರ ಪ್ರತಿಮೆಯಲ್ಲಿ ಶ್ರೀಹರಿಯ ಅಪ್ರಾಕೃತವಾದ ಚಿದಾನಂದ ವಿಗ್ರಹವನ್ನು ಧ್ಯಾನಿಸಬೇಕು. ಈ ಉಪಾಸನೆಯನ್ನು ಎರಡು ರೀತಿಯಲ್ಲಿ ಬಣ್ಣಿಸಿದ್ದಾರೆ. ಒಂದು ಸ್ಥೂಲ ರೂಪೋಪಾಸನೆ. ಮತ್ತೊಂದು ಸೂಕ್ಷ್ಮರೂಪೋಪಾಸನೆ.

ಅ) ಸ್ಥೂಲರೂಪದ ಉಪಾಸನೆ: ಬ್ರಹ್ಮಾಂಡದಲ್ಲಿ ವ್ಯಾಪ್ತನಾದ ಭಗವಂತನ ವಿಭೂತಿರೂಪವನ್ನು ಧ್ಯಾನಿಸುವುದು. ಪಾತಾಲಲೋಕವನ್ನು ಭಗವಂತನ ಪಾದತಲ ದಲ್ಲಿ ಚಿಂತಿಸಬೇಕು. ಪಾದಾಗ್ರ, ಪಾರ್ಶ್ವಗಳಲ್ಲಿ ರಸಾತಳ, ಪಾದದ ಗಂಟಿನಲ್ಲಿ ಮಹಾತಲ, ಕಣಕಾಲಿನಲ್ಲಿ ತಲಾತಲ, ಮೊಣಕಾಲಿನಲ್ಲಿ ಸುತಲ, ತೊಡೆಗಳಲ್ಲಿ ವಿತಳ–ಅತಳ, ಕಟಿಯಲ್ಲಿ ಭೂಃ, ನಾಭಿಯಲ್ಲಿ ಭುವಃ, ಎದೆಯಲ್ಲಿ ಸುವಃ, ಕುತ್ತಿಗೆಯಲ್ಲಿ ಮಹಃ, ಮುಖದಲ್ಲಿ ಜನಃ, ಹಣೆಯಲ್ಲಿ ತಪೋಲೋಕ, ತಲೆಯಲ್ಲಿ ಸತ್ಯಲೋಕ. ಹೀಗೆ ವ್ಯಾಪ್ತನಾದ ಶ್ರೀಹರಿಯ ಶರೀರವನ್ನು ಸಮಸ್ತಲೋಕಗಳೂ ಆಶ್ರಯಿಸಿಕೊಂಡಿವೆ –ಎಂದು ಪಾತಾಳಲೋಕದಿಂದ ಸತ್ಯಲೋಕದ ತನಕ ಭಗವಂತನ

ವ್ಯಾಪ್ತವಾದ ಸ್ಥೂಲ ಶರೀರವನ್ನು ಚಿಂತಿಸಬೇಕು. ಬ್ರಹ್ಮಾಂಡವೆಂಬ ಭಾಂಡದಲ್ಲಿ ಭಗವಂತ ವ್ಯಾಪ್ತನಾಗಿದ್ದಾನೆ ಎಂದು ಚಿಂತಿಸುವುದೇ ಸ್ಥೂಲರೂಪ ಧ್ಯಾನ ಎನಿಸುತ್ತದೆ.

ಆ) ಸೂಕ್ಷ್ಮರೂಪದ ಉಪಾಸನೆ: ನಮ್ಮ ಹೃದಯಾಕಾಶದಲ್ಲಿ ನಿರ್ದೋಷಿಯಾದ ಭಗವಂತನನ್ನು 'ಸಚ್ಚಿದಾನಂದ ಆತ್ಮಾ' ಎಂದು ಧ್ಯಾನಿಸುವುದು. ಇದು ಅತ್ಯಂತ ಸೂಕ್ಷ್ಮರೂಪದ ಉಪಾಸನೆ.

ನಮ್ಮಲ್ಲಿ ಅತ್ಯಂತ ಸೂಕ್ಷ್ಮವಾದ ಸಂಸ್ಕಾರಗಳಿವೆ. ಈ ಸಂಸ್ಕಾರದ ಬಲದಿಂದಲೇ ಅನೇಕ ವಿಧವಾಗಿ ಕಲ್ಪನಾಲೋಕದಲ್ಲಿ ವಿಹರಿಸಿ ಬರುತ್ತೇವೆ. ವೈಭವ ಜೀವನ ನಡೆಸುತ್ತೇವೆ. ವಿಮಾನದಲ್ಲಿ ವಿಶ್ವವನ್ನೆಲ್ಲಾ ತಿರುಗಿ ಬರುತ್ತೇವೆ. ಭಾರೀ ಮೊತ್ತದ ಬಂಗಲೆಯನ್ನು ನಿರ್ಮಿಸುತ್ತೇವೆ. ಬಿಲಿಯನ್ ಅಧಿಪತಿಗಳಾಗಿ ಮೆರೆಯುತ್ತೇವೆ. ಸೂಕ್ಷ್ಮ ಸಂಸ್ಕಾರದ ಬಲದಿಂದ ಹಗಲುಗನಸುಗಳನ್ನು ಕಾಣುತ್ತೇವೆ. ಈ ಸಂಸ್ಕಾರದಿಂದಲೇ ಶಾಸ್ತ್ರಗಳು ಭಗವಂತನ ರೂಪವನ್ನು ಬಣ್ಣಿಸಿದ ಕ್ರಮದಲ್ಲಿ ಹೃದಯದಲ್ಲಿ ಧ್ಯಾನಿಸಬೇಕು. ಹೊರಗೆ ಭಿತ್ತಿಚಿತ್ರವನ್ನು ಬಣ್ಣದಿಂದ ನಿರ್ಮಿಸುವಂತೆ ಹೃದಯ ಭಿತ್ತಿಯಲ್ಲಿ ಸಂಸ್ಕಾರವೆಂಬ ಬಣ್ಣದಿಂದ ಭಗವಂತನ ಸೂಕ್ಷ್ಮರೂಪವನ್ನು ಚಿತ್ರಿಸಬೇಕು. ಚತುರ್ಭುಜನಾದ, ಚಕ್ರಶಂಖಾದಿಗಳನ್ನು ಧರಿಸಿದ, ಸರ್ವಾಂಗಸುಂದರನಾದ ಹರಿಯನ್ನು ಸ್ಮರಿಸಬೇಕು.

## ಪ್ರತಿಮೆಯೇ ದೇವರಲ್ಲ

ಇಲ್ಲಿ ಒಂದು ಎಚ್ಚರ ಬೇಕು. ಸಂಸ್ಕಾರದಿಂಧ ಚಿತ್ರಿತವಾದ ಭಗವದ್ರೂಪವನ್ನೇ ಭಗವಂತನೆಂದು ಭಾವಿಸಬಾರದು. ಕೆಲವರು ವಾಸನಾಕಲ್ಪಿತ ಭಗವದ್ರೂಪವನ್ನು ಕಂಡು, "ನಾನು ಭಗವಂತನನ್ನೇ ಕಂಡೆ!" ಎಂದು ಉದ್ಗರಿಸುತ್ತಾರೆ. ಭಗವಂತನು ಸ್ವಪ್ನದಲ್ಲಿ ಕಾಣುವ ವಸ್ತುವಲ್ಲ. ಎಚ್ಚರದಲ್ಲಿದ್ದಾಗ ಕಂಡ ಭಗವಂತನ ಚಿತ್ರಗಳೇ ಸಂಸ್ಕಾರದಲ್ಲಿ ಪಡಿಮೂಡಿರುತ್ತವೆ. ಅದರ ಬಲದಿಂದ ಸ್ವಪ್ನ ಕಾಣುತ್ತೇವೆ. ಅದೇ ದೇವರಲ್ಲ. ಸಂಸ್ಕಾರದಿಂದ ದೇವರ ರೂಪ ಚಿತ್ರಿಸಬಹುದು. ಶಾಸ್ತ್ರೋಕ್ತಕ್ರಮದಲ್ಲಿ ಚಿತ್ರಿಸಿ ಅದರೊಳಗೆ ಅಪ್ರಾಕೃತನಾದ ಭಗವಂತನಿದ್ದಾನೆಂದು ನಿರಂತರ ಸ್ಮರಿಸಬೇಕು.

ಪಂಚೇಂದ್ರಿಯಗಳಿಗೆ ತೋರದ, ಕೇವಲ ಮನಸ್ಸಿನಲ್ಲಿ ಮಾತ್ರ ತೋರುವ ಸಂಸ್ಕಾರದ ರೂಪದಲ್ಲಿ ಧ್ಯಾನಿಸಬೇಕು. ಇದು ಸುಳ್ಳಲ್ಲ. ಗೋಡೆಯಲ್ಲಿ ಬರೆದ ಚಿತ್ರದಂತೆ ಮನಸ್ಸೆಂಬ ಗೋಡೆಯಲ್ಲಿ ಬರೆದ ಚಿತ್ರವಿದು. ಚಿತ್ರವನ್ನೇ ದೇವರೆಂದು ಭಾವಿಸಿದರೆ ತಪ್ಪಾಗುತ್ತದೆ. ನಾವೆಲ್ಲರೂ ತಪ್ಪುವುದು ಇಲ್ಲಿಯೇ. ಮನಸ್ಸಿನಲ್ಲಿ ದೇವರ ಸಂಸ್ಕಾರ ರೂಪ ಕಂಡರೆ ನನಗೆ ಸಾಕ್ಷಾತ್ ಭಗವಂತನೇ ಕಂಡ ಎಂದು ಭ್ರಮಿಸುತ್ತೇವೆ. ಪ್ರತೀಕವೇ ದೇವರೆಂದು ಭಾವಿಸುವುದು ಶುದ್ಧ ತಪ್ಪು.

ಘನ ವಿದ್ವಾಂಸರಾದ ದಯಾನಂದ ಸರಸ್ವತಿಯವರು ಚಿಕ್ಕವರಿದ್ದಾಗ ಶಿವರಾತ್ರಿಯ ದಿವಸ ಶಿವಾಲಯಕ್ಕೆ ಹೋದರು. ಅವರು ಶಿವಾಲಯಕ್ಕೆ ಹೋದಾಗ ಶಿವಲಿಂಗದ ಮೇಲೆ ಇಲಿಯೊಂದು ಕುಳಿತು ಬಿಲ್ವಪತ್ರೆ ಕೆದಕುತ್ತಿತ್ತು. ದಯಾನಂದ ಸರಸ್ವತಿಯವರ ಕಣ್ಣಿಗೆ ಈ ದೃಶ್ಯ ಬಿತ್ತು. ಅವರು ಚಕಿತರಾದರು. ಇದೆಂತಹ ದೇವರು. ತನ್ನ ಮೇಲೆ

ಕುಳಿತುಕೊಂಡ ಸಾಮಾನ್ಯ ಪ್ರಾಣಿಯಾದ ಇಲಿಯನ್ನೇ ಓಡಿಸಲು ಸಾಮರ್ಥ್ಯವಿಲ್ಲದ ಈ ದೇವರು ನಮ್ಮ ಸಂಸಾರದ ಭೀತಿಯನ್ನು ಹೇಗೆ ಪರಿಹರಿಸಿಯಾನು? 'ಜಡವಾದ ಲಿಂಗಕ್ಕೆ ಪೂಜೆ ಏಕೆ' ಎಂದು ಪೂಜೆ ಬಿಟ್ಟು ಬಂದರು. 'ಅಸಂಬದ್ಧವಾದ ಮೂರ್ತಿ ಪೂಜೆಯನ್ನು ಮಾಡಬೇಕಿಲ್ಲ!' ಎಂದು ಘೋಷಿಸಿದರು. ಪ್ರತಿಮೆಯನ್ನೇ ದೇವರೆಂದು ತಿಳಿದು, ಮೂರ್ತಿಪೂಜೆ ತಪ್ಪೆಂದು ಆರ್ಯ ಸಮಾಜದ ಮುಖಾಂತರ ಭಾರೀ ಪ್ರಚಾರಮಾಡಿದರು.

ಇದು ಮೂರ್ತಿಯನ್ನೇ ದೇವರೆಂದು ಭ್ರಮಿಸಿದ ಪರಿಣಾಮ.

ಬ್ರಹ್ಮಸೂತ್ರದಲ್ಲಿ ವೇದವ್ಯಾಸರು ಇದನ್ನು ಸ್ಪಷ್ಟಪಡಿಸಿದ್ದಾರೆ. ಕಣ್ಣಿಗೆ ಕಾಣುವ ಮೂರ್ತಿಯನ್ನೇ ದೇವರೆಂದು ಭಾವಿಸಿದರೆ ಅನರ್ಥಕ್ಕೆ ತುತ್ತಾಗುತ್ತೇವೆ. ಕಣ್ಣಿಗೆ ಕಾಣುವ ಶಿವಲಿಂಗವೇ ಶಿವನಲ್ಲ. ಶಿವನ ಸ್ಮರಣೆಗೊಂದು ಮಾಧ್ಯಮವಾಗಿ ಶಿವಲಿಂಗವಿದೆ. ಹೀಗೆ ಎಲ್ಲ ದೇವತೆಗಳಿಗೆ ಮಾಧ್ಯಮವಾಗಿ ಆಯಾ ಪ್ರತಿಮೆಗಳನ್ನು ಪೂಜಿಸಬೇಕೇ ವಿನಾ ಪ್ರತೀಕವೇ ದೇವರೆಂದು ಭಾವಿಸಬಾರದು ಎಂದು 'ನ ಪ್ರತೀಕೇ ನ ಹಿ ಸಃ' ಎಂಬ ಸೂತ್ರದಲ್ಲಿ ತಿಳಿಸಿದ್ದಾರೆ. ಶ್ರೀಮದಾಚಾರ್ಯರೂ ಈ ಸೂತ್ರವನ್ನು ವ್ಯಾಖ್ಯಾನಿಸುತ್ತಾ ಸಂವಾದಿಯಾಗಿ ಅನೇಕ ಪ್ರಮಾಣಗಳನ್ನು ಉದಾಹರಿಸಿದ್ದಾರೆ–

**ಯೋಽನ್ಯಥಾ ಸಂತಮಾತ್ಮಾನಮನ್ಯಥಾ ಪ್ರತಿಪದ್ಯತೇ ।**
**ಕಿಂ ತೇನ ನ ಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ ॥**

**ಯೋಽನ್ಯಥೈವ ಸ್ಥಿತಂ ವಿಷ್ಣುಮನ್ಯಥಾ ಪ್ರತಿಪದ್ಯತೇ ।**
**ಕಿಂ ತೇನ ನ ಕೃತಂ ಪಾಪಂ ಚೋರೇಣ ಬ್ರಹ್ಮಹಾರಿಣಾ ॥**

**ಸ್ವಾತ್ಮಾನಂ ಪ್ರತಿಮಾಂ ವಾಽಪಿ ದೇವತಾಂತರಮೇವ ವಾ ।**
**ಚೇತನಾಚೇತನಂ ವಾಽನ್ಯದ್ ಧ್ಯಾಯೇದ್ ಯಃ ಕೇಶವಸ್ತ್ವಿತಿ ।**
**ಕಿಂ ತೇನ ನ ಕೃತಂ ಪಾಪಂ ಚೋರೇಣೇಶಾಪಹಾರಿಣಾ ॥**

– (ಬ್ರ. ಸೂ. ೪–೧–೪)

ಮುಂತಾದ ಅನೇಕ ಪ್ರಮಾಣಗಳು ಪ್ರತಿಮೆಯನ್ನೇ ದೇವರೆಂದು ಭಾವಿಸಿದವರಿಗೆ ಆಗಬಹುದಾದ ಅನರ್ಥಗಳನ್ನು ತಿಳಿಸುತ್ತಿವೆ. ಜೊತೆಗೆ ಭಗವಂತನ ನೈಜ ಸ್ವರೂಪವನ್ನು ಮುಚ್ಚಿ ಬೇರೆ ರೀತಿ ಚಿತ್ರಿಸುವವರಿಗೂ ಆಗಬಹುದಾದ ಅನರ್ಥಗಳನ್ನು ಸಾರಿ ಹೇಳುತ್ತಿವೆ. ಚೈತನ್ಯರೂಪಿಯಾದ ಭಗವಂತನನ್ನು ಒಂದು ಕಲ್ಲೆಂದು ಹೇಳಿದರೆ ಭಗವಂತನಾದರೂ ಹೇಗೆ ಕ್ಷಮಿಸುತ್ತಾನೆ!

ರಾಷ್ಟ್ರದ ಪ್ರಜೆಗಳಾದ ನಾವೆಲ್ಲರೂ ರಾಷ್ಟ್ರಧ್ವಜಕ್ಕೆ ವಂದಿಸುತ್ತೇವೆ. ಧ್ವಜದ ಮುಂದೆ ನಿಂತು ಗೌರವ ಸಲ್ಲಿಸಿ, 'ರಾಷ್ಟ್ರಕ್ಕೆ ಗೌರವ ಸಲ್ಲಿಸಿದೆ' ಎನ್ನುತ್ತೇವೆ. ಇಲ್ಲಿ ಧ್ವಜವೇ ರಾಷ್ಟ್ರವೋ? ಖಂಡಿತಾ ಅಲ್ಲ. ಧ್ವಜ ಕೇವಲ ಒಂದು ಬಟ್ಟೆಯ ತುಂಡು. ಅದನ್ನೇ 'ರಾಷ್ಟ್ರ' ಎಂದು ಯಾರೂ ಭಾವಿಸರು. ಧ್ವಜವನ್ನು ಕಂಡಾಗ ರಾಷ್ಟ್ರೀಯತೆಯ ಸ್ಫೂರ್ತಿ ಬರುತ್ತದೆ. ರಾಷ್ಟ್ರದ ಪ್ರತೀಕವೆಂದು ವಂದಿಸುತ್ತಾರೆ. ಹಾಗೆಯೇ

ಪ್ರತಿಮೆಯೇ ದೇವರಲ್ಲ. ಪ್ರತಿಮೆಯನ್ನು ಕಂಡಾಗ ಭಗವತ್ಪ್ರಜ್ಞೆ ಜಾಗೃತವಾಗುತ್ತದೆ. ಪ್ರತಿಮೆಯನ್ನು ಮಾಧ್ಯಮವನ್ನಾಗಿಟ್ಟುಕೊಂಡು ದೇವರಿಗೆ ವಂದಿಸುತ್ತೇವೆ.

ಬ್ರಹ್ಮಾಂಡವೂ ದೇವರ ಪ್ರತಿಮೆ. ಅಂತರಂಗದಲ್ಲಿ ಕಾಣುವ ಸಂಸ್ಕಾರದ ಚಿತ್ರವೂ ದೇವರ ಪ್ರತಿಮೆ. ದೇವಮಂದಿರದಲ್ಲಿ ಪೂಜೆಗೊಳ್ಳುವ ಶಿಲಾ ಮೂರ್ತಿಯೂ ಭಗವಂತನ ಪ್ರತಿಮೆಯೇ ಆಗಿದೆ. ಸ್ಥೂಲ ಸೂಕ್ಷ್ಮ ಚಿಂತನೆಯನ್ನೂ ಮಾಡಲಾಗದವರು ದೇವಾಲಯದ ಪ್ರತಿಮೆಯನ್ನೇ ಮಾಧ್ಯಮವನ್ನಾಗಿಟ್ಟುಕೊಂಡು ಅದರಲ್ಲಿ ಭಗವಂತನ ಅಪ್ರಾಕೃತ ವಿಗ್ರಹವನ್ನು ಸ್ಮರಿಸಿ ಪೂಜಿಸಬೇಕು.

ಪ್ರತಿಮೆಯಲ್ಲಿ ದೇವರನ್ನು ಚಿಂತಿಸುವಂತೆ ಪ್ರಾಣಿಗಳಲ್ಲಿಯೂ ಮಾನವರಲ್ಲಿಯೂ ದೇವರನ್ನು ಸ್ಮರಿಸಬೇಕು. ಪ್ರಾಣಿಗಳಲ್ಲಿ ದಯೆತೋರಿ ಪ್ರಾಣಿಗಳ ಅಂತರ್ಯಾಮಿಯಾದ ಭಗವಂತನು ತೃಪ್ತನಾಗಲೆಂದು ಭಾವಿಸಬೇಕು. 'ಜನತಾಸೇವೆಯೇ ಜನಾರ್ದನನ ಸೇವೆ' –ಎಂದರೆ ಜನರೇ ಜನಾರ್ದನ ಎಂದರ್ಥವಲ್ಲ. ಜನರಲ್ಲಿರುವ ಜನಾರ್ದನನ ಸೇವೆ ಎಂದರ್ಥ. ಹೀಗೆ ಎಲ್ಲೆಡೆಯೂ ಮರ್ಮವನ್ನರಿತು ಚಿಂತಿಸಬೇಕು. ಪ್ರತೀಕಗಳನ್ನೇ ದೇವರೆಂದು ಭಾವಿಸಿದರೆ ಸರ್ವೋತ್ತಮನಾದ ಭಗವಂತನಿಗೆ ಜಡರೂಪತ್ವವನ್ನು ನೀಡಿದಂತಾಗುತ್ತದೆ. ಇದರಿಂದ ಮತ್ತಷ್ಟು ಅನರ್ಥಕ್ಕೆ ಭಾಜನರಾಗುತ್ತೇವೆ.

ಶ್ರೀಮದಾಚಾರ್ಯರೂ ತಂತ್ರಸಾರದಲ್ಲಿ ಧ್ಯಾನದ ಕ್ರಮಗಳನ್ನು ನಿರೂಪಿಸಿದ್ದಾರೆ.

**ಖಂಡಸ್ಮೃತಿರ್ಧಾರಣಾ ಸ್ಯಾದಖಂಡಾ ಧ್ಯಾನಮುಚ್ಯತೇ ।**
**ಅಪ್ರಯತ್ನಾತ್ ಸಮಾಧಿಶ್ಚ ದರ್ಶನಂ ಚಿರಯಾ ತಯಾ ।**
**ಅಥವಾ ಸತತಂ ಶಾಸ್ತ್ರವಿಮರ್ಶೇನ ಭವಿಷ್ಯತಿ ॥** — (೪-೧೫೭)

ಧ್ಯಾನ, ಧಾರಣಾ, ಸಮಾಧಿ, ಶಾಸ್ತ್ರಾಧ್ಯಯನ ಇವೆಲ್ಲವನ್ನೂ ಅಳವಡಿಸಿಕೊಳ್ಳಬೇಕು. ಭಗವಂತ ಮತ್ತು ಅವನ ಅವಯವಗಳಲ್ಲಿ ಜಗತ್ತು ಹೀಗೆ ಎರಡೂ ಕಡೆಯ ಚಿಂತನೆಯೇ ಧಾರಣಾ ಎನಿಸಿದರೆ ನಿರಂತರ ಸಮಗ್ರ ಹರಿಸ್ಮರಣೆ ಧ್ಯಾನ ಎನಿಸುತ್ತದೆ. ಸಕಲ ಇಂದ್ರಿಯಗಳನ್ನು ಅಂತರ್ಮುಖಗೊಳಿಸಿ ಪ್ರಯತ್ನಪೂರ್ವಕವಾಗಿ ಸಾಧಿಸಬೇಕಾದದ್ದು ಧ್ಯಾನವಾದರೆ ಇದಕ್ಕೂ ಮಿಗಿಲಾದದ್ದು ಸಮಾಧಿ. ಪ್ರಯತ್ನವಿಲ್ಲದೆ ನಿರಂತರ ಹರಿಸ್ಮರಣೆ ಮಾಡುವವರು ಸಮಾಧಿಪುರುಷರೆನಿಸುತ್ತಾರೆ. ಅಥವಾ ನಿರಂತರ ಶಾಸ್ತ್ರ ಅಧ್ಯಯನ ಮಾಡುವುದರಿಂದಲೂ ಹರಿ ಒಲಿಯುವನು.

ಚಿಕ್ಕ ಮಗು, ನಡೆಯಲು ಬಹಳ ಶ್ರಮಪಡುತ್ತದೆ. ದೊಡ್ಡವರಿಗೆ ತಮ್ಮ ನಡೆಯ ಬಗ್ಗೆ ಆಲೋಚನೆಯೇ ಇರುವುದಿಲ್ಲ. ಅನಾಯಾಸವಾಗಿ ನಡೆಯುತ್ತಾರೆ. ಅದರಂತೆ ನಮಗೆ ಧ್ಯಾನ ಸಮಾಧಿಗಳಲ್ಲಿ ಮುನ್ನಡೆಯುವ ಕ್ರಮವೇ ಗೊತ್ತಿಲ್ಲ. ಜ್ಞಾನಿಗಳು ಹರಿಸ್ಮರಣೆಯನ್ನು ನಿರಂತರ ಲೀಲಾಜಾಲವಾಗಿ ನಡೆಸುತ್ತಾರೆ. ಒಂದುವೇಳೆ ನಿಮಗೆ ಖಂಡಸ್ಮೃತಿಯೂ ಬಾರದಿದ್ದಲ್ಲಿ; ಸ್ಮರಣೆಗಾಗಿ ಒಂದು ಘಳಿಗೆ ಪ್ರಯತ್ನವನ್ನಾದರೂ ಮಾಡಿರಿ! ಅದರಿಂದಲೇ ನಿಮ್ಮ ಸಕಲ ಪಾಪಗಳೂ ಪರಿಹಾರವಾಗುತ್ತವೆ ಎನ್ನುತ್ತಾರೆ. ಶ್ರೀಮದಾಚಾರ್ಯರು,

"ಯತತತೋಽಪಿ ಹರೇಃ ಪದಸಂಸ್ಮರಣೇ ಸಕಲಂ ಹ್ಯಘಮಾಶು ಲಯಂ ವ್ರಜತಿ"
— (ದ್ವಾ.ಸ್ತೋತ್ರ. ೩-೩)

# ಹರಿಚಿಂತನೆ ಮತ್ತು ಘನವೈರಾಗ್ಯ

ಪರಿಶುದ್ಧ ಭಕ್ತರ ವ್ಯಾಪಾರಗಳೆಲ್ಲವೂ ಭಗವಂತನ ಕಡೆಗೆ ಹರಿಯುತ್ತಿರುತ್ತವೆ. ಅವರ ಮಾತುಗಳೆಲ್ಲವೂ ಸ್ತೋತ್ರರೂಪವಾಗಿರುತ್ತವೆ (ಸ್ತೋತ್ರಾಃ ಸಮಸ್ತಾ ಗಿರಃ) ಲೋಕವ್ಯವಹಾರಕ್ಕೆ ಬೇಕಾಗುವಷ್ಟು ಮಾತ್ರ ಮಾತನಾಡುತ್ತಾರೆ. ನಿರಂತರ ಸರ್ವಶಬ್ದ ವಾಚ್ಯನಾದ ಭಗವಂತನನ್ನೇ ಸ್ಮರಿಸುತ್ತಾ; ಮನುಷ್ಯರ ಮಾತು, ಶುಕಪಿಕಾದಿಗಳ ಕಲರವ, ಸ್ತ್ರೀಯರ ಕಳಕಂಠದ ಗಾನ, ಗೆಜ್ಜೆಯ ನಾದ, ಸಮುದ್ರದ ಘೋರ್ಗರೆತ, ಗಾಳಿ ಬೀಸುವ ಶಬ್ದ, ಹಲ್ಲಿಯು ಲೊಚಗುಟ್ಟುವ-ಕಪ್ಪೆಯು ವಟ ಗುಟ್ಟುವ, ಕೋಳಿ ಕೂಗುವ -ಸಮಸ್ತ ಶಬ್ದಗಳನ್ನೂ ಭಗವಂತನ ಗುಣಚಿಂತನೆಗಾಗಿ ಉಪಯೋಗಿಸಿ ಕೊಳ್ಳುತ್ತಾರೆ. ಕಾಣುವ ಪದಾರ್ಥಗಳಲ್ಲಿ ಭಗವದ್ರೂಪ ಕಾಣುತ್ತಾರೆ. ಕೇಳುವ ಪದಗಳಲ್ಲಿ ಭಗವದ್ಗುಣಗಳನ್ನು ಚಿಂತಿಸುತ್ತಾರೆ. ಎಲ್ಲದರಲ್ಲಿಯೂ ಇರುವ ಸಾರರೂಪ ನಾದ ಭಗವಂತನನ್ನೇ ಕಾಣುತ್ತಾರೆ.

ನಾವು ಪುಸ್ತಕ, ವಸ್ತ್ರ, ಹಗ್ಗ, ಹಣ್ಣು, ಹಾವು ಮುಂತಾದ ಶಬ್ದಗಳಿಂದ ಆಯಾ ವಸ್ತುಗಳನ್ನು ಮಾತ್ರ ತಿಳಿದರೆ; ಜ್ಞಾನಿಗಳು ವಸ್ತುಗಳ ಅಸ್ತಿತ್ವಕ್ಕೆ ಕಾರಣನಾದ ಭಗವಂತನನ್ನೇ ಆಯಾ ಶಬ್ದಗಳಿಂದ ಅರಿತುಕೊಳ್ಳುತ್ತಾರೆ. ರೂಪವುಳ್ಳ ಯಾವುದೇ ವಸ್ತುವನ್ನು ಕಂಡಾಗಲೂ ವಸ್ತುವಿನಲ್ಲಿರುವ ಹರಿಯ ರೂಪವನ್ನೇ ಕಾಣುತ್ತಾರೆ. ಹೀಗೆ ಜ್ಞಾನಿಗಳಾದವರು ನಾಮ-ರೂಪಗಳ, ಶಬ್ದ-ಅರ್ಥಗಳ ಚಿಂತನೆಯನ್ನು ಬಹಳ ಸುಂದರವಾಗಿ ನಡೆಸುತ್ತಾರೆ. ಇಂತಹ ಅಂತರ್‌ದರ್ಶನವುಳ್ಳ ಜ್ಞಾನಿಗಳ ಘನ ವೈರಾಗ್ಯ ವನ್ನು ಶುಕಮುನಿಗಳು ರೋಚಕವಾಗಿ ಚಿತ್ರಿಸಿದ್ದಾರೆ.

ಜ್ಞಾನಿಗಳ ನಡೆ-ನುಡಿಗಳು ಹೀಗಿರುತ್ತವೆ-

**ಸತ್ಯಾಂ ಕ್ಷಿತೌ ಕಿಂ ಕಶಿಪೋಃ ಪ್ರಯಾಸೈಃ**

ಮಲಗಲು ಭೂಮಡಿಲಿರಲು ಹೊರೆಯಾದ ಹಾಸಿಗೆ ಯಾರಿಗೆ ಬೇಕು?

**ಬಾಹೌ ಸ್ವಸಿದ್ಧೇ ಹ್ಯುಪಬರ್ಹಣೈಃ ಕಿಮ್ ।**

ಬಾಹುಗಳೇ ದಿಂಬಾಗಿರಲು ಪ್ರತ್ಯೇಕ ದಿಂಬಿನಿಂದೇನಾಗಬೇಕು?

**ಸತ್ಯಂಜಲೌ ಕಿಂ ಪುರುಪರ್ಣಪಾತ್ರ್ಯೈಃ**

ಬೊಗಸೆಯಿಂದಲೇ ನೀರಡಿಕೆಯ ದಣಿವಾರಿಸಬರುತ್ತಿರಲು ದೊನ್ನೆಯಾದರೂ ಏಕೆ?

**ದಿಗ್ವಸ್ತ್ರಲಾಭೇ ಸತಿ ಕಿಂ ದುಕೂಲೈಃ ॥** — (೨-೨-೪)

ದಿಗ್ವಸನವೇ ಏರ್ಪಟ್ಟಿರಲು ಪ್ರತ್ಯೇಕ ಪಟದ ಚಿಂತೆ ಏಕೆ?

ಅಪಕ್ವ ಯೋಗಿಗಳೂ ಬದುಕಲು ಶ್ರಮಪಡಬೇಕಿಲ್ಲ ಎನ್ನುತ್ತಾರೆ–

**ಚೀರಾಣಿ ಕಿಂ ಪಥಿ ನ ಸಂತಿ?**

ಹರಿದ ವಸ್ತ್ರಗಳು ದಾರಿಯಲ್ಲಿ ದೊರೆಯುವುದಿಲ್ಲವೇ!?

**ಪರಭೃತಃ ಅಂಘ್ರಿಪಾಃ ಭಿಕ್ಷಾಂ ನೋ ದಿಶಂತಿ ವಾ?**

ಪರರಿಗಾಗಿ ಫಲ ಹೊತ್ತ ವೃಕ್ಷಗಳೇನಾದರೂ ಹಣ್ಣು ನೀಡೆವು ಎಂದವೆ?

**ಸರಿತಃ ಅಶುಷ್ಯನ್ನಪಿ ಕಿಂ?**

ನದಿಗಳೇನಾದರೂ ಬತ್ತಿಹೋಗಿವೆಯೆ?

**ಗುಹಾಃ ರುದ್ಧಾಃ ಪಿಹಿತಾಃ ಕಿಂ?**

ಮನೆಗಳಂತಿರುವ ಪರ್ವತಗುಹೆಗಳನ್ನು ಯಾರಾದರೂ ಮುಚ್ಚಿರುವರೆ?

**ಕೃಷ್ಣಃ ಅವಧೂತಾನಾಂ ಸುಹೃನ್ನ ಕಿಂ?**

ಕೃಷ್ಣನೇ ಸಂಗಾತಿಯಾಗಿರಲು ಭಯವಾದರೂ ಏಕೆ?

**ಕಸ್ಮಾದ್ಭಜಂತಿ ಕವಯೋ ಧನದುರ್ಮದಾಂಧಾನ್ ॥** — (೨-೨-೫)

ಜ್ಞಾನಿಗಳಾದವರು ಧನ ಮದಾಂಧರ ಬಳಿ ಎಂದೂ ಕೈ ಒಡ್ಡರು.

ಹೀಗೆ ಅನೇಕ ಮಾತುಗಳಿಂದ ಧೈರ್ಯ ತುಂಬುತ್ತಾರೆ. ಯಾರ ತೆಕ್ಕೆಗೂ ಸಿಕ್ಕಿಕೊಳ್ಳದೆ ಯಾವ ಭೋಗಸಾಮಗ್ರಿಗಳಿಗೂ ನಮ್ಮನ್ನು ಮಾರಿಕೊಳ್ಳದೆ, ಯಾರಿಗೂ ತಲೆಬಾಗದೆ, ಯಾರ ಬಳಿಯೂ ದೀನರಾಗಿ 'ದೇಹಿ' ಎನ್ನದೆ, ಭಗವಂತನಿಂದ ಸೃಷ್ಟವಾದ ವಿಶಾಲವಾದ ಪ್ರಕೃತಿಯಲ್ಲಿ ಸಹಜವಾಗಿ ಬೆಳೆದ ಪದಾರ್ಥಗಳನ್ನು ಬಳಸಿಕೊಂಡು ಬದುಕಬಹುದು. ನಮ್ಮ ಭರತಖಂಡದಲ್ಲಿ ಈ ರೀತಿಯ ವೈರಾಗ್ಯವನ್ನಳವಡಿಸಿಕೊಂಡು ಬದುಕಿದ ಸಾವಿರಾರು ಸಾಧಕರು ಬಂದುಹೋಗಿದ್ದಾರೆ. ಸಿಕ್ಕಿದ್ದನ್ನೇ ಹರಿಪ್ರಸಾದವೆಂದು ಸ್ವೀಕರಿಸಿ ಸಂತೃಪ್ತಿಯ ಜೀವನವನ್ನು ನಡೆಸಿದ ವೈರಾಗ್ಯ ಶಿಖಾಮಣಿಗಳು ಹಲವರಿದ್ದಾರೆ. ಅವರಂತೆ ನಮಗೆ ಜೀವನ ನಡೆಸಲು ಸಾಧ್ಯವಾಗದಿದ್ದರೂ ಅವರ ಆದರ್ಶವನ್ನು ನೆನಪಿಸಿಕೊಂಡಾಗ ನಮಗೆ ಧೈರ್ಯ ಬರುತ್ತದೆ.

ಸಾವಿರಾರು ಯೋಜನಗಳ ದೂರದಲ್ಲಿ ಧ್ರುವನಕ್ಷತ್ರ ರಾರಾಜಿಸುತ್ತಿದೆ. ಧ್ರುವ ನಕ್ಷತ್ರವನ್ನು ಮುಟ್ಟಲು ಸಾಧ್ಯವೇ ಇಲ್ಲ. ಹಾಗಿದ್ದರೂ ಸಮುದ್ರದಲ್ಲಿಯ ನಾವಿಕರಿಗೆ ಧ್ರುವನಕ್ಷತ್ರ ಮಾರ್ಗದರ್ಶಕವಾಗಿದೆ. ಧ್ರುವನಕ್ಷತ್ರವನ್ನು ಮುಂದಿಟ್ಟು ಕೊಂಡು ದಿಕ್ಕನ್ನು ಗುರುತಿಸಿ ಗುರಿ ಮುಟ್ಟುತ್ತಾರೆ. ಅದರಂತೆ ಜ್ಞಾನಿಗಳೆಲ್ಲರೂ ಧ್ರುವನಕ್ಷತ್ರದಂತಿದ್ದಾರೆ. ನಾವು ಅವರ ಸಾಧನೆಯನ್ನು ಮುಟ್ಟಲಾಗದು. ಆದರೂ ಜ್ಞಾನಿಗಳೆಂಬ ಧ್ರುವನಕ್ಷತ್ರಗಳು ನಮ್ಮ ಕಣ್ಣಮುಂದಿದ್ದರೆ ಅನರ್ಥದ ಹಾದಿ ಹಿಡಿಯದೆ ಸರಿಯಾದ ದಿಕ್ಕಿನಲ್ಲಿ ಸಾಗಬಹುದು. ಸಾಧ್ಯವಾದಷ್ಟು ವೈರಾಗ್ಯವನ್ನು, ತೃಪ್ತಿಯನ್ನು ಜೀವನದಲ್ಲಿ ಅಳವಡಿಸಿಕೊಂಡು ಮುನ್ನಡೆಯಬಹುದು. ನೀತಿ, ತ್ಯಾಗ, ವೈರಾಗ್ಯಗಳಿಂದ ಬದುಕಲು ಧೈರ್ಯ ಬರುತ್ತದೆ.

ಉಪನಿಷತ್ತೂ ಸಹ 'ಮಾ ಗೃಧಃ ಕಸ್ಯಸ್ವಿದ್ ಧನಂ' –ಯಾರ ಬಳಿಯೂ ದುಡ್ಡನ್ನು ಬೇಡಬೇಡ ಎನ್ನುತ್ತದೆ. ಇದೇ ಅಭಿಪ್ರಾಯದ ಬ್ರಹ್ಮಾಂಡಪುರಾಣದ ವಚನವನ್ನು ಶ್ರೀಮದಾಚಾರ್ಯರು ಉಲ್ಲೇಖಿಸಿದ್ದಾರೆ. 'ತದ್ದತ್ತೇನೈವ ಭುಂಜೀಥಾಃ ಅತೋ ನಾನ್ಯಂ ಪ್ರಯಾಚಯೇತ್' ಎಂದು. ದೇವರು ಕೊಟ್ಟದ್ದರಲ್ಲಿ ಸಂತೃಪ್ತನಾಗ ಬೇಕು. ಯಾರ ಬಳಿಯೂ ಬೇಡಬಾರದು. ಬೇಡುವುದಾಗಿದ್ದರೆ ಭಗವಂತನ ಬಳಿಯೇ ಬೇಡಬೇಕು. ಮಹಾಭಕ್ತರು ದೇವರನ್ನೂ ಬೇಡುವುದಿಲ್ಲ. ಬೇಡಿಕೆ ಎನಿಸದ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಮಾತ್ರ ಬೇಡುತ್ತಾರೆ. ಸ್ವಾರ್ಥಕ್ಕಾಗಿ ದೇವರನ್ನೂ ಬೇಡದಿರು ವುದು ಜ್ಞಾನಿಗಳಿಗೆ ಮಾತ್ರ ಸಾಧ್ಯ. ಉಳಿದವರು ಬೇರೆಯವರನ್ನು ಬೇಡುವುದಕ್ಕಿಂತ ದೇವರನ್ನು ಬೇಡುವುದೇ ಲೇಸು. ದಾಸರೂ ಸಹ 'ಬೇಡಿದರೆ ಎನ್ನೊಡೆಯನ ಬೇಡುವೆ' ಎನ್ನುತ್ತಾರೆ.

ದೇವರು ಕೊಡುವುದು ಎಂದರೇನು? ದೇವರೇ ಸ್ವತಃ ಎದುರಿಗೆ ಬಂದು 'ಇವರಿಗಿಷ್ಟು ಅವರಿಗಿಷ್ಟು' ಎಂದು ಹಂಚಲಾರ. ನ್ಯಾಯಮಾರ್ಗದಿಂದ ಗಳಿಸಿದ ಹಣವೇ ಭಗವಂತ ಕೊಟ್ಟದ್ದು. ಅನ್ಯಾಯಮಾರ್ಗದಿಂದ ಗಳಿಸಿದ ಹಣ ನಾವು ಕದ್ದದ್ದು. ನಾವು ಋಷಿಮುನಿಗಳಂತೆ ಬೆಟ್ಟ, ಅರಣ್ಯ, ಗುಹೆ, ನದಿಗಳಿಂದಲೇ ಬದುಕುವಷ್ಟು ಕಠಿಣ ಜೀವನವನ್ನು ಸಾಗಿಸದಿದ್ದರೂ, ನ್ಯಾಯಮಾರ್ಗದಲ್ಲಿ ನಡೆದು ಸಿಕ್ಕಿದ್ದನ್ನು ಹರಿಪ್ರಸಾದವೆಂದು ಸ್ವೀಕರಿಸುವಷ್ಟು ಔದಾರ್ಯವಾದರೂ ಬೇಕು. ಅತಿ ಆಸೆಯಿಂದ ಅನ್ಯಾಯಮಾರ್ಗವನ್ನನುಸರಿಸಬಾರದು.

ಒಬ್ಬ ಸಾಮಾನ್ಯ ಬಡವನಿದ್ದ. ಅವನಿಗೆ ತನ್ನ ಮಗಳ ವಿವಾಹಮಾಡುವ ಸಂದರ್ಭ ಒದಗಿ ಬಂತು. ಅದಕ್ಕಾಗಿ ಹಣದ ಕೊರತೆಯೂ ಕಂಡುಬಂತು. ಅದನ್ನು ನೀಗಿಸಿಕೊಳ್ಳಲು ಶ್ರೀಮಂತ ರಾಜನ ಬಳಿ ಹೋಗಿ ಕೇಳೋಣವೆಂದು ನಿರ್ಧರಿಸಿದ. ಅದರಂತೆ ರಾಜನ ಬಳಿ ಹೋದ. ಅವನನ್ನು ಕಂಡ. ಅವನ ಬಳಿ ಏನೂ ಕೇಳದೆ ಬರಿಗೈಲಿ ಬಂದ.

ಸ್ನೇಹಿತರು ಕೇಳಿದರು: ರಾಜನ ಬಳಿ ಹೋದವ ಅವನ ಬಳಿ ಏನೂ ಕೇಳದೆ ಹಾಗೆಯೇ ಏಕೆ ಬಂದೆ? ಕೇಳಿದರೆ ಏನಾದರೂ ಕೊಡುತ್ತಿದ್ದ ಎಂದರು. ಬಡವ ಹೇಳಿದ –ನಾನು ರಾಜನ ಬಳಿ ಹೋದದ್ದೇ ಕೇಳಬೇಕೆಂದು. ಆದರೆ ರಾಜನ ಬಳಿ ನಾನು ಹೇಗೆ ಕೇಳಲಿ! ಆ ರಾಜನು ನನಗಿಂತಲೂ ಹೆಚ್ಚಿನ ದಾರಿದ್ರ್ಯದಲ್ಲಿ ಮುಳುಗಿದ್ದಾನೆ.

ಕೋಟ್ಯಧೀಶನನ್ನು ಬಡವನೆಂದರೆ ನಿನ್ನನ್ನು ಹುಚ್ಚನೆನ್ನರೆ? ಎಂದರು. ಬಡವ ಉತ್ತರಿಸಿದ: ನಾನು ರಾಜನ ಬಳಿ ಹೋದಾಗ ರಾಜನು ದೇವರಲ್ಲಿ ಪ್ರಾರ್ಥನೆ ಮಾಡುತ್ತಿದ್ದ –ಓ ದೇವ! ನನಗೆ ಲಕ್ಷ ಕೋಟಿ ರೂ.ಗಳನ್ನು ನೀಡು. ಡಿಪಾಜಿಟ್ ಭರ್ತಿಮಾಡು ಎನ್ನುತ್ತಿದ್ದ. ನನಗಿರುವುದು ಸಾವಿರ ರೂಗಳ ಕೊರತೆ. ಅವನಿಗೆಷ್ಟೋ ಲಕ್ಷ ಕೋಟಿಯ ಕೊರತೆ. ಯಾರಿಗೆ ಹೆಚ್ಚು ಕೊರತೆ ಇದೆಯೋ ಅವರು ಹೆಚ್ಚು ಬಡವರು. ನನಗಿಂತಲೂ ಅವನಿಗೆ ಹೆಚ್ಚು ಕೊರತೆ ಇದ್ದ ಬಳಿಕ ಅವನು ನನಗಿಂತಲೂ

ದೊಡ್ಡ ದರಿದ್ರನಾದ. ಹೀಗಿರಲು ಅವನಲ್ಲಿ ಕೇಳುವುದೇನು? ಅವನು ಯಾವ ದೇವರ ಬಳಿ ಕೇಳುತ್ತಿದ್ದನೋ ಆ ದೇವರನ್ನೇ ಕೇಳೋಣವೆಂದು ಬಂದೆ ಎಂದ.

ಹೀಗೆ ಜಗತ್ತಿನ ಶ್ರೀಮಂತರೆಲ್ಲರೂ ಬೇಡುವವರೇ ಆಗಿರಲು ನಾವು ಬೇಡುವುದಿದ್ದರೆ ಹರಿಯಲ್ಲಿಯೇ ಬೇಡಬೇಕು. ಸಾಧ್ಯವಾದಷ್ಟು ಇದ್ದದ್ದರಲ್ಲಿಯೇ ಸಂತೃಪ್ತ ಜೀವನವನ್ನು ನಡೆಸಬೇಕು.

## ಜ್ಯೇಷ್ಠತೆಗೆ ಭಕ್ತಿಯೇ ಮಾಪಕ

ಭಗವಂತನು ಸರ್ವೋತ್ತಮನಾಗಿದ್ದಾನೆ. ಅವನ ಸ್ಮರಣೆ ಒಂದಿದ್ದರೆ ಸಾಕು. ನಾವು ಕೇಳಿದ್ದನ್ನು ಕೇಳದಿದ್ದನ್ನು ಎಲ್ಲವನ್ನೂ ನೀಡುತ್ತಾನೆ. ಅಪರಿಮಿತ ಇಷ್ಟಾರ್ಥಪ್ರದ ನಾಗಿದ್ದಾನೆ. ಇತರ ದೇವತೆಗಳು ಪರಿಮಿತಫಲದಾಯಕರು. ಯಾವ ಯಾವ ದೇವತೆಗಳು ಏನೇನು ಫಲಗಳನ್ನು ನೀಡುತ್ತಾರೆಂದು ಶುಕಾಚಾರ್ಯರು ವಿವರಿಸಿ, ಕೊನೆಗೆ ಭಗವಂತನು ಏನು ಕೊಡುತ್ತಾನೆಂದು ವಿವರಿಸಿದ್ದಾರೆ–

**ಅಕಾಮಃ ಸರ್ವಕಾಮೋ ವಾ ಮೋಕ್ಷಕಾಮ ಉದಾರಧೀಃ ।**
**ತೀವ್ರೇಣ ಭಕ್ತಿಯೋಗೇನ ಯಜೇತ ಪುರುಷಂ ಪರಮ್ ॥** — (೨–೩–೧೦)

ಲೌಕಿಕವನ್ನು ಬಯಸದೆ ಕೇವಲ ಭಗವಂತನನ್ನೇ ಬಯಸುವ ಏಕಾಂತಭಕ್ತನಾಗಿ ನಿವೃತ್ತಧರ್ಮದ ಕಾಮುಕನಾಗಲಿ ಅಥವಾ ಹಿಂದೆ ಹೇಳಿದ ಹೇಳದಿರುವ ಕಾಮುಕರೇ ಆಗಲಿ, ಭಗವಂತನನ್ನೇ ಪೂಜಿಸಿರಿ!

ಒಬ್ಬೊಬ್ಬ ದೇವತೆಗಳಲ್ಲಿ ಒಂದೊಂದು ಫಲವನ್ನು ಪಡೆಯುವುದಕ್ಕಿಂತ, ಭಗವಂತನನ್ನು ಆಶ್ರಯಿಸಿ ಎಲ್ಲಾ ಫಲಗಳನ್ನೂ ಹೊಂದಬಹುದು. ನಮಗೇನು ಬೇಕೋ ಅದನ್ನು ಭಗವಂತನು ದಯಪಾಲಿಸುತ್ತಾನೆ.

ಪರಮಾತ್ಮನ ಎಚ್ಚರ ದೃಢವಾದಾಗ ನಮ್ಮ ಜೀವನದಲ್ಲಿ ಸತ್ತ್ವ ರಜಸ್ತಮೋಗುಣ ಗಳ ವಿಕಾರದಿಂದ ಉಂಟಾಗುವ ತಾಪತ್ರಯಗಳೆಂಬ ಅಲೆಗಳೆಲ್ಲವೂ ನಾಶವಾಗಿ ನಮ್ಮ ಹೃದಯವು ಶಾಂತ ಸರೋವರದಂತೆ ಪ್ರಸನ್ನವಾಗುತ್ತದೆ. ಮನಶ್ಶಾಂತಿಗೆ ಭಗವದ್‌ಜ್ಞಾನವು ಅತ್ಯಗತ್ಯ. ಅನಂತರ ವಿಷಯಗಳಲ್ಲಿ ವೈರಾಗ್ಯ. ಕರುಣೆಯ ನಾಕಾರನಾದ ಹರಿಯ ಅರಿವು ಬಂದ ಬಳಿಕ ಭೌತಿಕ ಚಾಪಲ್ಯ ತೊಡೆದುಹೋಗು ತ್ತದೆ. ಜ್ಞಾನ–ವೈರಾಗ್ಯಗಳು ತುಂಬಿದಾಗ ಪ್ರೇಮ ದೃಢವಾಗುತ್ತದೆ. ಭಕ್ತಿಯೋಗದಲ್ಲಿ ನಿರತನಾಗುತ್ತಾನೆ. ಹರಿಕಥಾ ಶ್ರವಣಸುಖವನ್ನನುಭವಿಸಿದವ ಯಾವನು ತಾನೆ ಹರಿಕಥೆಯಲ್ಲಿ ಆಸಕ್ತಿಯನ್ನು ಕಳೆದುಕೊಳ್ಳುತ್ತಾನೆ? 'ಕೋ ನಿರ್ವೃತೋ ಹರಿಕಥಾಸು ರತಿಂ ನ ಕುರ್ಯಾತ್'? ಎನ್ನುತ್ತದೆ ಭಾಗವತ.

ಜ್ಞಾನಿಗಳು ಈ ಭಗವತ್ಪ್ರಜ್ಞೆಗೆ ಹೆಚ್ಚು ಬೆಲೆ ಕೊಡುತ್ತಾರೆ. ಪುರಾಣದಲ್ಲಿ ಒಂದು ಕಥೆ ಇದೆ.

ಒಬ್ಬ ದೊಡ್ಡ ಋಷಿಯು ಚಿಕ್ಕ ಬಾಲಕನಾದ ಮಾರ್ಕಂಡೇಯರ ಬಳಿ ಬಂದ. ವಯೋಜ್ಯೇಷ್ಠನಾದ ಋಷಿ ಬಾಲಕಋಷಿಗೆ ನಮಸ್ಕರಿಸಿದ. ಎಲ್ಲರೂ ಆಶ್ಚರ್ಯ ಪಟ್ಟರು. ಇಂತಹ ಚಿಕ್ಕ ಬಾಲಕನಿಗೆ ನಿಮ್ಮಂತಹ ಹಿರಿಯರು ನಮಿಸುವುದು ಎಂದರೇನು? ಇದೇನು ವಿಚಿತ್ರ? ಎಂದು ಪ್ರಶ್ನಿಸಿದಾಗ ಆ ಋಷಿಗಳು ಉತ್ತರಿಸಿದರು–

ನಮ್ಮ ಜ್ಯೇಷ್ಠತೆಗೆ ಮಾನದಂಡ ವಯಸ್ಸಲ್ಲ. ಭಗವಚ್ಚಿಂತನೆ. ಇವನು ಬಾಲಕನಾಗಿದ್ದು ನಾನು ವಯೋಜ್ಯೇಷ್ಠನಾಗಿರಬಹುದು. ಆದರೆ 'ನಮ್ಮ ಜೀವನದಲ್ಲಿ ಎಷ್ಟು ಕಾಲ ಭಗವಚ್ಚಿಂತನೆ ನಡೆಸಿದ್ದೇವೆ' ಎಂದು ಆತ್ಮಾವಲೋಕನ ಮಾಡಿಕೊಳ್ಳ ಬೇಕು. ಭಗವಚ್ಚಿಂತನೆಯ ಕ್ಷಣಗಳು ಮಾತ್ರ ನಮ್ಮ ನಿಜವಾದ ಜೀವನ, ಹೊರತು ಎಷ್ಟು ವರ್ಷ ಬದುಕಿದ್ದೇವೆ' ಎನ್ನುವುದು ಮುಖ್ಯವಲ್ಲ. ಭಗವಂತನನ್ನು ಸೇವಿಸಿದ ಕ್ಷಣವನ್ನು ಮಾತ್ರ ಜೀವನದ ಲೆಕ್ಕಕ್ಕೆ ಸೇರಿಸಿಕೊಳ್ಳಬೇಕು. ಅದನ್ನು ಕೂಡಿಸಿದಾಗ ಬರುವ ದಿನಗಳಿಂದ ವಯಸ್ಸೆಷ್ಟೆಂದು ತೀರ್ಮಾನಿಸಬೇಕು ಹೀಗೆ ವಿಚಾರಮಾಡಿದಾಗ ನಾವು ಆರು ತಿಂಗಳೋ ಅಥವಾ ಮೂರು ತಿಂಗಳಿನ ಮಕ್ಕಳೋ ಆಗಿದ್ದೇವೆ. ಮಾರ್ಕಂಡೇಯ ಬಾಲ್ಯದಿಂದಲೇ ಭಗವದ್ಭಕ್ತಿಯನ್ನು ಮೈಗೂಡಿಸಿಕೊಂಡಿದ್ದಾನೆ. ಆದ್ದರಿಂದ ನಮಿಸಿದೆ ಎಂದು ಎಲ್ಲರ ಕಣ್ಣು ತೆರೆಸುವ ಉತ್ತರವನ್ನು ಋಷಿಗಳು ನೀಡಿದರು.

ಋಷಿಗಳೇ ಬಾಲಕರಾದ ಮೇಲೆ ನಮ್ಮಂಥವರ ಸ್ಥಿತಿ ಏನು? ನಮ್ಮನ್ನು ಎಲ್ಲಿ ಸೇರಿಸಿಕೊಳ್ಳಬೇಕು? ಎನ್ನುವುದನ್ನು ವಿಚಾರಮಾಡಬೇಕು.

ಹನುಮಂತನಿಗೆ ಶ್ರೀರಾಮ ಚಿರಂಜೀವಿಯಾಗು ಎಂದು ಅನುಗ್ರಹಿಸಿದ. ಆ ಸಂದರ್ಭದಲ್ಲಿ ಹನುಮಂತ ನುಡಿದ. ಯಾರು ಚಿರಂಜೀವಿ? ದೀರ್ಘಕಾಲ ಬದುಕಿ ದವನೇ ಚಿರಂಜೀವಿಯಲ್ಲ. ಯಾರು ಯಾವ ಕ್ಷಣಗಳನ್ನು ಹರಿಕಥಾಶ್ರವಣ ದಲ್ಲಿ ವಿನಿಯೋಗಿಸಿಕೊಳ್ಳುತ್ತಾನೋ ಅವನ ಬದುಕೇ ಬದುಕು. ಇಂತಹ ಬದುಕಿಗಾಗಿ ನಾನು ಚಿರಂಜೀವಿಯಾಗಬೇಕು. ನಿನ್ನ ಸೇವೆಯಲ್ಲಿಯೇ ಮಗ್ನನಾಗಬೇಕು. ಅಂತಹ ದೀರ್ಘ ಜೀವನ ನನ್ನದಾಗಲಿ 'ತಜ್ಜೀವನಂ ಮೇ ಅಸ್ತ್ವಧಿಕಂ' ಅನುಗ್ರಹಿಸು ಎನ್ನುತ್ತಾನೆ.

ಶುಕಾಚಾರ್ಯರ, ಋಷಿಗಳ, ಹನುಮಂತನ ಸಂದೇಶಗಳನ್ನು ಮಾನವರಾದ ನಾವು ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬೇಕು. [ಮಾನವನ ಶ್ರೇಷ್ಠತೆಯು ಯಾವುದೇ ವೇಷಭೂಷಣಗಳಿಂದಾಗಲೀ ಸಿರಿವಂತಿಕೆಯಿಂದಾಗಲೀ ಅಲ್ಲ. ಪ್ರಾಣಿ ಗಳಿಗಿರುವ ಭೋಗಸಾಮಗ್ರಿಗಳಿಗಿಂತ ಹತ್ತುಪಟ್ಟು ಹೆಚ್ಚು ಮಾನವರಿಗಿದೆ. ಆದ್ದರಿಂದ ಮನುಷ್ಯ ಉತ್ತಮ; ಇದು ಸರಿಯಲ್ಲ. ಇದರಿಂದ ಮಾನವ ದೊಡ್ಡವನಾಗುವುದಿಲ್ಲ. ಪಶುಗಳಿಗಿಂತ ಹತ್ತುಪಟ್ಟು ಹೆಚ್ಚು ಭೋಗಸಾಮಗ್ರಿಗಳು ಮನುಷ್ಯನಿಗಿದ್ದುದರಿಂದ ಏನಾಯಿತೆಂದರೆ, ಪಶುಗಳಲ್ಲಿ ಎಷ್ಟು ಪ್ರಮಾಣದ ಪಶುತ್ವವಿದೆಯೋ ಅದಕ್ಕಿಂತ ಹತ್ತುಪಟ್ಟು ಹೆಚ್ಚು ಪಶುತ್ವ ಮಾನವನಲ್ಲಿ ಬಂದಂತಾಯಿತು. ಇದರಿಂದ ನಮ್ಮ ಅವಸ್ಥೆ –ನೀನೇನು ಪಶು? ನಿನಗಿಂತ ನಾನು ದೊಡ್ಡ ಪಶು ಎಂದು ಪಶುತ್ವದಲ್ಲಿಯೇ ಸ್ಪರ್ಧೆ ನಡೆಸಿದಂತಾಗಿದೆ.]

ಭಕ್ತಿಯೇ ಉತ್ತಮ ಜೀವನದ ಭದ್ರ ಬುನಾದಿ. ಹೇಗೆ ಸೂರ್ಯನ ಸುತ್ತಲೂ ಗ್ರಹಗಳು ಸುತ್ತುತ್ತವೆಯೋ ಅದರಂತೆ ಭಗವಂತನ ಭಕ್ತಿಯೆಂಬ ಕೇಂದ್ರದ ಸುತ್ತಲೂ ಎಲ್ಲ ಸದ್ಗುಣಗಳೂ ಸುತ್ತುತ್ತವೆ. ಭಕ್ತಿಯೇ ಮಾನವತ್ವದ ಮೂಲಸೂತ್ರ. ಅದಿಲ್ಲದೆ ಹೋದರೆ ನಾವೂ ಪಶುಗಳ ಗುಂಪಿಗೆ ಸೇರಬೇಕಾಗುತ್ತದೆ ಎಚ್ಚರ! ಎಂದು ಎಚ್ಚರಿಸಿ, ಅರಿವೆಂಬ ಕಿಚ್ಚನ್ನು ಹೊತ್ತಿಸಿದ್ದಾರೆ. ಇಂತಹ ಶುಕಮುನಿಗಳ ಉಪದೇಶ ನಮ್ಮನ್ನು ಮಾನವತ್ವದ ಕಡೆಗೆ ಕೊಂಡೊಯ್ಯಲಿ!!

## ಪ್ರಾಣಿಗಳಿಗೂ ಮನುಷ್ಯರಿಗೂ ಇರುವ ವ್ಯತ್ಯಾಸ

ಸೃಷ್ಟಿಕರ್ತನಾದ ಬ್ರಹ್ಮದೇವನು ಪ್ರಾಣಿ, ಪಕ್ಷಿ, ಮೃಗ, ಮರಗಿಡಗಳೆಲ್ಲವನ್ನೂ ಸೃಷ್ಟಿಮಾಡಿದರೂ ತೃಪ್ತಿ ಹೊಂದದೆ ಕೊನೆಗೆ ಮನುಷ್ಯನನ್ನು ಸೃಷ್ಟಿಸಿ ಸಂತೋಷಗೊಂಡನಂತೆ. ಯಾರಲ್ಲಿಯೂ ಕಾಣದ ವೈಶಿಷ್ಟ್ಯವೇನಿದೆ ಈ ಮನುಷ್ಯರಲ್ಲಿ?! ಎಂದರೆ, ಭೋಗವಿಲಾಸದಲ್ಲಿ ಮನುಷ್ಯರಿಗೂ ಪ್ರಾಣಿಗಳಿಗೂ ವ್ಯತ್ಯಾಸ ತೋರದಿದ್ದರೂ 'ಭಗವತ್ಪ್ರಜ್ಞೆ' ಎಂಬ ವಿಶೇಷ ಮನುಷ್ಯರಲ್ಲಿದೆ. ಇದು ಪ್ರಾಣಿಗಳಲ್ಲಿಲ್ಲ. ಆದ್ದರಿಂದ ಮಾನವನಿಗೆ ಮಹತ್ವ ಬಂದಿದ್ದು ಭೋಗವಿಲಾಸ ಗಳಿಂದಲ್ಲ; ಭಗವತ್ಪ್ರಜ್ಞೆಯಿಂದ. ಭಗವತ್ಪ್ರಜ್ಞೆ ಹೆಚ್ಚಿದಂತೆಲ್ಲಾ ಎತ್ತರಕ್ಕೇರುತ್ತಾನೆ. ಮಾನವತ್ವದ ಮಾನದಂಡ ಭಗವತ್ಪ್ರಜ್ಞೆ.

ನಮ್ಮನ್ನು ಅಗಲಿದ ಪ್ರಾತಃಸ್ಮರಣೀಯರಾದ ಗುರುಗಳಾದ ಶ್ರೀಶ್ರೀ ವಿದ್ಯಾ ಮಾನ್ಯತೀರ್ಥರು ಅಂತಹ ದೊಡ್ಡ ಮಹಾನುಭಾವರು. ನಿರಂತರ ಭಗವತ್ಪ್ರಜ್ಞೆಯನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿದ್ದರು. ವ್ಯರ್ಥವಾಗಿ ಕಾಲಹರಣಮಾಡುವವನ ಜೀವನವೇ ವ್ಯರ್ಥ. ಸೂರ್ಯನು ಎಲ್ಲರ ಆಯುಷ್ಯವೆಂಬ ಸಂಪತ್ತನ್ನು ಪ್ರತಿನಿತ್ಯವೂ ಕಿತ್ತೊಯ್ಯುತ್ತಾನೆ. ಸಾಧನೆಯ ಮಾರ್ಗ ಹಿಡಿಯದಿದ್ದರೆ ವ್ಯರ್ಥವಾಗಿ ಕೊನೆಯುಸಿ ರೆಳೆಯಬೇಕಾಗುತ್ತದೆ.

ಭೋಗವಿಲಾಸ ಜೀವನವೇ ಬದುಕಿನ ಉದ್ದೇಶ ಎಂದಾದರೆ ಮನುಷ್ಯನಾಗಿಯೇ ಹುಟ್ಟಬೇಕೇಕೆ? ಎನ್ನುತ್ತದೆ ಭಾಗವತ.

**ತರವಃ ಕಿಂ ನ ಜೀವಂತಿ ಭಸ್ತ್ರಾಃ ಕಿಂ ನ ಶ್ವಸಂತ್ಯುತ ।**
**ನ ಖಾದಂತಿ ನ ಮೇಹಂತಿ ಕಿಂ ಗ್ರಾಮಪಶವೋಽಪರೇ ॥** — (೨-೩-೧೮)

ಮರಗಳೂ ಬದುಕುವುದಿಲ್ಲವೇ? ಉಸಿರಾಡುವುದಿಲ್ಲವೇ?

ಹಂದಿ ನಾಯಿ ನರಿಗಳೂ ಸುಖಪಡುವುದಿಲ್ಲವೇ?

ಹೀಗೆ ಭೋಗಕ್ಕಾಗಿ ಜೀವನವನ್ನು ಚೆಲ್ಲುವವರನ್ನು ನಿರ್ದಾಕ್ಷಿಣ್ಯವಾಗಿ ನಿಂದಿಸುತ್ತದೆ.

**ಶ್ವವಿಡ್ವರಾಹೋಷ್ಟ್ರಖರೈಃ ಸ ತುಲ್ಯಃ ಪುರುಷಃ ಪಶುಃ ।**

ಅಸಾರವಾದ ಭೋಗಗಳನ್ನೇ ಭುಂಜಿಸುವವ ನಾಯಿ ಹಂದಿಗಳಿಗೆ ಸಮಾನ. ಕಶ್ಮಲವಾದುವುಗಳನ್ನೇ ಬಯಸುವ ಈ ಪ್ರಾಣಿಗಳಂತೆ ದೋಷಯುಕ್ತ ವಿಷಯವನ್ನು ತಿನ್ನುತ್ತಾನೆ. ಮುಳ್ಳಿನಂತೆ ದುಃಖಕ್ಕೆ ಹೇತು ಎಂದು ಗೊತ್ತಿದ್ದರೂ ಒಂಟೆಯಂತೆ ಮೆಯ್ಯುತ್ತಿದ್ದಾನೆ. ವ್ಯರ್ಥ ಭಾರವೆಂದು ತಿಳಿದಿದ್ದರೂ ಕತ್ತೆಯಂತೆ ಸಂಸಾರಭಾರವನ್ನು ಹೊತ್ತುಕೊಂಡಿದ್ದಾನೆ.

ಜೀವನದಲ್ಲಿ ನೀತಿ, ಸದ್ಗುಣ, ಮಾನವೀಯ ಪ್ರಜ್ಞೆ ಮುಂತಾದ ಅತ್ಯಮೂಲ್ಯ ಸದ್ಗುಣಗಳು ಬೆಳೆಯಲು ಮೂಲಸೂತ್ರ ಭಗವದ್ಭಕ್ತಿ. ಭಗವದ್ಭಕ್ತಿ ಇಲ್ಲದವ ಮನುಷ್ಯಾಕೃತಿಯ ಪಶು ಎನ್ನುತ್ತದೆ.

ಒಂದು ದೃಷ್ಟಿಯಲ್ಲಿ ನೋಡಿದರೆ ನಾವು ಪಶುಗಳಿಗಿಂತಲೂ ಕೆಳಮಟ್ಟದಲ್ಲಿದ್ದೇವೆ. ಏಕೆಂದರೆ ಪಶುಗಳಿಗೆ ತಮ್ಮ ಯಜಮಾನನ ಬಗ್ಗೆ ಕೃತಜ್ಞತೆಯಿದೆ. ಹಸು, ಆನೆ, ನಾಯಿ, ಬೆಕ್ಕುಗಳೂ ತಮ್ಮ ಯಜಮಾನನನ್ನು ಪ್ರೀತಿಯಿಂದ ಕಾಣುತ್ತವೆ. ಆದರೆ ಮಾನವರಾದ ನಮಗೆ ನಮ್ಮ ಅಸ್ತಿತ್ವಕ್ಕೆ ಕಾರಣೀಪುರುಷನಾದ ಪುರುಷೋತ್ತಮನನ್ನು ಸ್ಮರಿಸಿಕೊಳ್ಳಲಿಕ್ಕೆ ಅವಕಾಶವಿಲ್ಲವಾಗಿದೆ. ಹೀಗಾಗಿ ಪಶುಗಳಿಗಿಂತಲೂ ಕೀಳಾಗಿ ವರ್ತಿಸುತ್ತಿದ್ದೇವೆ.

## ಹೃದಯಶುದ್ಧಿ ಬೇಕು

ಲೋಕದಲ್ಲಿ ಕೆಲವು ಜನರು ದಿವಸವೂ ಪೂಜೆ ಏಕೆ ಬೇಕು? ಧ್ಯಾನ ಏಕೆ ಬೇಕು? ಎಂದೆಲ್ಲಾ ಪ್ರಶ್ನಿಸುತ್ತಾರೆ. ಅವರನ್ನು ಕುರಿತು ನಮ್ಮದೊಂದು ಪ್ರಶ್ನೆ.

ದಿನವೂ ಸ್ನಾನವನ್ನೇಕೆ ಮಾಡುತ್ತೀರಿ? ದೇಹದ ಕಶ್ಮಲ ತೊಳೆಯಲು ಸ್ನಾನ. ಸ್ನಾನ ಮಾಡದಿದ್ದಲ್ಲಿ ಮೈಯಲ್ಲಿ ಕೊಳೆ ಅಂಟಿ ದುರ್ವಾಸನೆ ಹೊರಹೊಮ್ಮುತ್ತದೆ. ಅದಕ್ಕಾಗಿ ಸ್ನಾನಮಾಡುತ್ತೇವೆ. ದಿನಕ್ಕೆ ಹತ್ತಾರು ಬಾರಿ ಮುಖ ಮೈ ತೊಳೆದುಕೊಳ್ಳುತ್ತೇವೆ. ಹಾಗಿದ್ದಲ್ಲಿ ಬಾಹ್ಯಶುದ್ಧಿಗೆ ನೀರಿನಿಂದ ಮೀಯುವಂತೆ, ಆಂತರ್ಯಶುದ್ಧಿಗೂ ಮೀಯಬೇಕು. ಹೃದಯದಲ್ಲಿ ಅಂಟಿದ ಕಾಮಕ್ರೋಧಾದಿಗಳೆಂಬ ಕೊಳೆಯನ್ನು ಪ್ರತಿನಿತ್ಯವೂ ತೊಳೆಯಬೇಕು. ಭಗವಂತನ ಕಥಾಶ್ರವಣ ಮಾಡಿದಾಗ ನಮಗೇನು ಕಣ್ಣೀರು ಸುರಿಯುತ್ತದೆ, ಅದರಿಂದ ಹೃದಯವನ್ನು ತೊಳೆಯಬೇಕು. ಕಥಾಶ್ರವಣದಿಂದ ಉದ್ಭವಿಸಿದ ಭಕ್ತಿಗಂಗೆ ಹೃದಯದ ಕಶ್ಮಲವನ್ನು ತೊಳೆಯುತ್ತದೆ. ಪ್ರತಿನಿತ್ಯವೂ ಸ್ನಾನ ನಡೆಯಲೇ ಬೇಕು. ಭಗವತ್ಕಥಾಶ್ರವಣದಿಂದ ಹೃದಯ ಕರಗಬೇಕು. ಆನಂದಬಾಷ್ಪದ ಧಾರೆ ಹರಿಯಬೇಕು. ಹರಿಕಥೆಗೆ ಕರಗದ ಹೃದಯ ಹೃದಯವಲ್ಲ– ಕಠಿಣವಾದ ಕಬ್ಬಿಣ. ನಮ್ಮ ಹೃದಯ ಕಬ್ಬಿಣವಾಗ ಬಾರದು– ಕನ್ನಡಿಯಾಗಬೇಕು.

ಕನ್ನಡಿಯಲ್ಲಿ ಎಷ್ಟು ಮಾಲಿನ್ಯವಿದ್ದರೂ ನೀರು ಹಾಕಿದಾಗ ಸ್ವಚ್ಛವಾಗುತ್ತದೆ. ಅದರಂತೆ ಹೃದಯದಲ್ಲಿ ಕಾಮಾದಿ ಕಶ್ಮಲ ಭಕ್ತಿಜಲದಿಂದ ತೊಳೆದುಹೋಗುತ್ತದೆ. ನಮ್ಮ ಸಕಲ ಇಂದ್ರಿಯಗಳನ್ನು ಹರಿಸೇವೆಗಾಗಿ ಮೀಸಲಿಡಬೇಕು.

ಹರಿಕಥೆ ಕೇಳದ ಕಿವಿ ಹಾವು ಚೇಳು ತುಂಬಿದ ಗವಿ ಇದ್ದಂತೆ.
ಹರಿಯ ಹೊಗಳದ ನಾಲಿಗೆ ಮಳೆಗಾಲದಿ ವಟಗುಟ್ಟುವ ಕಪ್ಪೆಯ ನಾಲಿಗೆ.
ಹರಿಗೆ ನಮಿಸದ ಶಿರ ಕುತ್ತಿಗೆಮೇಲಿಟ್ಟ ಭಾರ.
ಹರಿಯ ಕಾಣದ ಕಣ್ಣು ನವಿಲ್ಗರಿಯ ಜಡಕಣ್ಣು.
ಹರಿಯ ಮಂದಿರಕ್ಕೆ ಸಾಗದ ಕಾಲು ಜಡಮರದ ಕಾಲು

–ಮುಂತಾಗಿ ಕಠೋರ ಸತ್ಯಗಳನ್ನು ನುಡಿಯುವ ಮೂಲಕ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೆಲ್ಲವನ್ನೂ ಭಗವಂತನ ಸೇವೆಗೆ ಮೀಸಲಿಡಬೇಕೆಂದು ಎಚ್ಚರಿಸಿದ್ದಾರೆ.

ಹರಿಕೀರ್ತನೆ, ಹರಿಕಥಾಶ್ರವಣ, ಹರಿವೀಕ್ಷಣೆ, ಹರಿವಂದನೆ, ಹರಿಸ್ಮರಣೆ, ಹರಿ ಅರ್ಚನೆಗಳಿಂದ ಸಕಲ ಸಜ್ಜನರ ಸಕಲ ಪಾಪಗಳೂ ನಾಶವಾಗುತ್ತವೆ. ಅಂತಹ ಶ್ರೀಹರಿಗೆ ನಮೋ ನಮಃ ಎನ್ನುತ್ತಾರೆ ಶುಕಾಚಾರ್ಯರು.

ಯತ್ಕೀರ್ತನಂ ಯಚ್ಛ್ರವಣಂ ಯದೀಕ್ಷಣಂ
ಯದ್ವಂದನಂ ಯತ್ಸ್ಮರಣಂ ಯದರ್ಹಣಮ್ ।
ಲೋಕಸ್ಯ ಸದ್ಯೋ ವಿಧುನೋತಿ ಕಲ್ಮಶಂ
ತಸ್ಮೈ ಸುಭದ್ರಶ್ರವಸೇ ನಮೋ ನಮಃ ॥ — (೨.೪.೧೫)

ನಮ್ಮೆಲ್ಲರ ಕ್ರಿಯೆಗಳೂ ಹರಿಪೂಜೆಯೇ ಆಗುವಂತೆ ಹರಿಯು ಹರಸಲಿ!!

## ನಾವು ಮಾನವರಾಗಬೇಕು

'ಕಪಿಗಳೇ ಬೆಳೆದು ಬೆಳೆದು ಮಾನವರಾಗಿದ್ದಾರೆ' ಎಂಬುದು ಡಾರ್ವಿನ್ ವಿಕಾಸವಾದ. ಇಂದು ನಮ್ಮೆಲ್ಲರ ಕೃತಿಗಳನ್ನು ನೋಡುವಾಗ ಡಾರ್ವಿನ್ ವಾದವೇ ತಿರುವುಮುರುವಾದಂತಿದೆ. ಕಪಿಗಳೇ ಮಾನವರಾಗಿದ್ದಾರೋ ಮಾನವರೇ ಕಪಿತ್ವದ ಕಡೆಗೆ ಸಾಗುತ್ತಿದ್ದಾರೋ! ಎಂದು ವಿಚಾರಮಾಡುವ ಪರಿಸ್ಥಿತಿ ಬಂದಿದೆ. ದಿನದಿನಕ್ಕೂ ನಮ್ಮಲ್ಲಿ ಪಶುತ್ವವು ಬೆಳೆಯುತ್ತಲೇ ಇದೆ. ಸ್ವಾರ್ಥ, ಭೋಗ, ಆಲಸ್ಯಗಳೇ ಪಶುತ್ವದ ಸಂಕೇತ. ಇಂತಹ ಪಶುತ್ವದಿಂದ ದೂರವಾಗಬೇಕಿದ್ದರೆ, ಭಗವದ್ಭಕ್ತಿಯನ್ನು ಸರ್ವದಾ ಜೀವನದಲ್ಲಳವಡಿಸಿಕೊಳ್ಳಬೇಕು.

ನಾವು ಪ್ರತಿನಿತ್ಯ ಒಂದು ಗಂಟೆ ದೇವತಾರ್ಚನೆ ಮಾಡಿ ನಮ್ಮ ಕರ್ತವ್ಯ ಮುಗಿಯಿತೆಂದು ಭಾವಿಸುತ್ತೇವೆ. ಆದರೇ ಒಂದು ಗಂಟೆ ಮಾಡಿದ ದೇವರ ಪೂಜೆಯಲ್ಲಿಯೇ ನಮ್ಮ ಕರ್ತವ್ಯವು ಮುಗಿಯಲಿಲ್ಲ. ನಾವು ಮಾಡುವ ಪ್ರತಿನಿತ್ಯದ ಪ್ರತಿಯೊಂದು ಕ್ರಿಯೆಗಳನ್ನು ಭಗವಂತನು ತೃಪ್ತನಾಗುವಂತೆ ಮಾಡಬೇಕು. 'ಪ್ರಾಮಾಣಿಕ ಕರ್ತವ್ಯಗಳಿಂದ ಭಗವಂತನು ಪ್ರಸನ್ನನಾಗುತ್ತಾನೆ' ಎಂಬ ಚಿಂತನೆ ಮೂಡಿದರೆ ಭ್ರಷ್ಟಾಚಾರ ಅವ್ಯವಹಾರಗಳಿಗೆ ಖಂಡಿತ ಅವಕಾಶವಿರುವುದಿಲ್ಲ. ನಮ್ಮ ಪ್ರತಿಯೊಂದು ಕ್ರಿಯೆಗಳೂ ಮೋಕ್ಷಕ್ಕೆ ಕಾರಣವಾಗುವಂತಿರಬೇಕು.

ಭಾಗವತ ಮತ್ತು ಭಗವದ್ಗೀತೆಗಳಲ್ಲಿ ಹೇಳಿದ ಕರ್ತವ್ಯಗಳು ಕೇವಲ ಮೋಕ್ಷಕ್ಕೆ ಮಾತ್ರ ಸೀಮಿತವಾಗಿಲ್ಲ. ನಮ್ಮ ಸಾಮಾಜಿಕ ಜೀವನವನ್ನೂ ಉದಾತ್ತಗೊಳಿಸುವ

ದೃಷ್ಟಿಯಿಂದ ಕರ್ತವ್ಯಗಳನ್ನು ಹೇಳಿದ್ದಾರೆ. ನಮ್ಮ ಕರ್ತವ್ಯಗಳು ದುರಾಚಾರರಹಿತ ವಾಗದಿದ್ದಲ್ಲಿ ಅವುಗಳು ಭಗವಂತನ ಸೇವೆ ಆಗಲಾರವು. ಪ್ರತಿಯೊಂದು ಕ್ರಿಯೆಗಳಲ್ಲಿ ಕೇವಲ ಸ್ವಾರ್ಥವನ್ನು ಬಯಸದೇ 'ಭಗವಂತನು ತೃಪ್ತನಾಗಲಿ' ಎಂಬ ಅನುಸಂಧಾನ ವನ್ನು ಅಳವಡಿಸಿಕೊಳ್ಳಬೇಕು. ಈ ದೃಷ್ಟಿ ಬಂದಾಗ ಸಾಮಾಜಿಕ ಜೀವನದಲ್ಲಿ ಭ್ರಷ್ಟಾಚಾರ, ವಂಚನೆ, ಲಂಚಗುಳಿತನ ಯಾವುದಕ್ಕೂ ಅವಕಾಶವಿಲ್ಲ. ಆದ್ದರಿಂದ 'ಪೂಜಾರೂಪವಾಗಿ ಕರ್ತವ್ಯಮಾಡಿರಿ' ಎಂಬ ಸಂದೇಶ ಕೇವಲ ಆಧ್ಯಾತ್ಮಿಕಸಾಧನೆ, ಮೋಕ್ಷ ಇಷ್ಟನ್ನು ಮಾತ್ರ ಉದ್ದೇಶವಾಗಿಟ್ಟುಕೊಂಡು ಹೇಳಿದ್ದಲ್ಲ. ನಮ್ಮ ಪ್ರತ್ಯಕ್ಷಜೀವನವನ್ನೂ ಉದಾತ್ತಗೊಳಿಸಬೇಕೆಂಬ ಚಿಂತನೆಯಿಂದ ಕರ್ಮ ಯೋಗವನ್ನು ಬಣ್ಣಿಸಿದ್ದಾರೆ.

ಇಂದು ದೇವರ ಪೂಜೆಯಾದ ಬಳಿಕ ದೇವರ ಒಟ್ಟಿಗೆ ಧರ್ಮವನ್ನೂ ಕಟ್ಟಿಡುತ್ತೇವೆ. ನಾಳೆಯ ತನಕ ದೇವರ–ಧರ್ಮದ ಸಂಪರ್ಕವೇ ನಮಗಿರದು. ಒಂದು ಗಂಟೆ ಪೂಜಿಸಿದ್ದೇವೆ. ನಾಳೆಯ ತನಕ ದೇವರ ಸುದ್ದಿಗೆ ಹೋಗೆವು, ದೇವರೂ ನಮ್ಮ ಸುದ್ದಿಗೆ ಬಾರದಿರಲಿ. ದೇವರದ್ದು ನಮ್ಮದು ಕಾಂಟ್ರಾಕ್ಟ್ ಮುಗಿದು ಹೋಗಿದೆ' ಎಂಬ ರೀತಿಯಲ್ಲಿ ವರ್ತಿಸುತ್ತಿದ್ದೇವೆ. 'ನಮ್ಮ ಸಕಲ ಕ್ರಿಯೆಗಳನ್ನೂ ಭಗವನ್ಮಯವಾಗಿ ರೂಪಿಸಿಕೊಳ್ಳದ ಹೊರತು ಜೀವನ ಸಾರ್ಥಕವಾಗಲಾರದು' ಎಂಬ ಸಂದೇಶವನ್ನು ಭಾಗವತ ನಮಗೆ ನೀಡಿದೆ.

## ವಿಶ್ವಾತ್ಮನ ಅರಿವು ಅಗತ್ಯ

ಭಾಗವತವು ಮುಂದೆ ನಾರದರಿಗೆ ಮತ್ತು ಬ್ರಹ್ಮದೇವರಿಗೆ ನಡೆದ ಸಂವಾದವನ್ನು ನಿರೂಪಿಸುತ್ತದೆ.

ಪರಮಾತ್ಮನಲ್ಲಿ ಭಕ್ತಿ ಹುಟ್ಟಬೇಕಿದ್ದರೆ, ಅವನ ಮಹಿಮೆ ಅವನ ವ್ಯಾಪಾರಗಳ ಅರಿವು ಬೇಕು. ಅದಕ್ಕಾಗಿ ಸೃಷ್ಟಿಯ ನಿರೂಪಣೆ. ಸೃಷ್ಟಿಯನ್ನು ನಿರೂಪಿಸಿದಾಗ, 'ಪಂಚಭೂತಗಳಿಂದ ಕೂಡಿದ ಜಗತ್ತು, ಈ ದೇಹ ಮುಂತಾದವುಗಳನ್ನು ನಿರ್ಮಿಸಿದ ಭಗವಂತನ ಕರುಣೆ ಅಪಾರ' ಎಂಬ ಅರಿವು ಬಾರದಿರದು.

ಪುರಾಣ, ಉಪನಿಷತ್ತು, ಮತ್ತಿತರ ಯಾವುದೇ ಆಸ್ತಿಕ ಗ್ರಂಥಗಳಾಗಲಿ ಭಗವಂತ ನನ್ನು ಚಿತ್ರಿಸುವಾಗ ಮೊದಲು ಅವನಿಂದ ಸೃಷ್ಟವಾದ ಪ್ರಪಂಚವನ್ನು ಚಿತ್ರಿಸುತ್ತಾರೆ. ಏನೂ ಸ್ವಾರ್ಥವಿಲ್ಲದೆ ನಮ್ಮ ಒಳಿತಿಗಾಗಿ ಪ್ರಪಂಚವನ್ನು ಸೃಷ್ಟಿಸಿದನೆಂಬ ಚಿಂತನೆ ಜಾಗೃತವಾಗಬೇಕು ಎಂಬುದೇ ಇವುಗಳ ಭಾವ.

ನಮ್ಮದೂ ವಿಕಾಸವಾದವೇ ಆಗಿದೆ. ವೇದಪ್ರತಿಪಾದ್ಯನಾದ ಭಗವಂತನ ಅಂಗಾಂಗಗಳಿಂದ ದೇವತೆಗಳು ಜನಿಸಿದರು. ಸೂಕ್ಷ್ಮವಾದ ಜಡಪ್ರಕೃತಿಯಿಂದ ಮಹತ್ತತ್ತ್ವ. ಅದರಿಂದ ಅಹಂಕಾರತತ್ತ್ವ, ಅನಂತರ ಪಂಚಭೂತಗಳು, ಏಕಾದಶ ಇಂದ್ರಿಯಗಳು –ಹೀಗೆ ಸೃಷ್ಟಿ ಮುಂದುವರೆಯುತ್ತದೆ.

ಎಲ್ಲವೂ ಪರಮಾತ್ಮನ ಇಚ್ಛಾಶಕ್ತಿಯಿಂದ ನಿಯತವಾಗಿದೆ. ಪ್ರತಿಯೊಂದು ವಸ್ತುಗಳಲ್ಲಿಯೂ ಯಾವುದೇ ವಿಧದ ಚಲನವಲನಗಳು ನಡೆಯಬೇಕಿದ್ದರೂ ಅಲ್ಲಿ ಭಗವಂತನ ಪ್ರವೇಶವಾಗಬೇಕು. ಆತ್ಮನ ಪ್ರವೇಶವಿಲ್ಲದ ದೇಹ ನಿಷ್ಕ್ರಿಯ. ಅದರಂತೆ ವಿಶ್ವಾತ್ಮನ ಪ್ರವೇಶವಿಲ್ಲದಿದ್ದರೆ ಜಗತ್ತೂ ಸ್ತಬ್ಧ. ಆತ್ಮನ ಪ್ರವೇಶದಿಂದ ಶರೀರದ ವ್ಯಾಪಾರಗಳು ನಡೆಯುವಂತೆ ವಿಶ್ವದ ಒಳಗೆ ಪರಮಾತ್ಮನು ಪ್ರವೇಶಿಸಿದಾಗ ಮಾತ್ರ ಸಮಸ್ತ ಚೇಷ್ಟೆಯೂ ನಡೆಯಲು ಸಾಧ್ಯ. ಈಶಾವಾಸ್ಯ ಉಪನಿಷತ್ತೇ ಹೇಳಿದ ಮಾತಿದು: 'ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್' ಎಂದು. ಸೂಕ್ಷ್ಮ ಜಡ ಪ್ರಕೃತಿಯ ಪರಿಣಾಮವೇ ಜಗತ್ತಾಗಿದ್ದರೂ, ಆ ಪ್ರಕೃತಿಯಲ್ಲಿ ಚಲನವಲನಗಳಾಗಬೇಕಿದ್ದರೂ ಅದರ ಒಳಗೆ ಭಗವಂತ ಪ್ರವೇಶಮಾಡಬೇಕು.

ವಿದ್ಯುತ್ ಇಲ್ಲದಿದ್ದರೆ ದೊಡ್ಡ ದೊಡ್ಡ ಯಂತ್ರಗಳೂ ಸ್ತಬ್ಧ. ವಿದ್ಯುತ್ ಬಂದರೆ ಎಲ್ಲಾ ಯಂತ್ರಗಳಲ್ಲಿಯೂ ಚಲನೆ ಆರಂಭವಾಗುತ್ತದೆ. ಅದರಂತೆ ಜಗತ್ತೆಂಬ ಯಂತ್ರದ ನಿಯಂತೃ ಕಮಲಾಕಾಂತನಾಗಿದ್ದಾನೆ.

ಇಂದಿನ ವಿಜ್ಞಾನಿಗಳು ಜಗತ್ತನ್ನು ಸಂಶೋಧಿಸುವುದಕ್ಕಿಂತಲೂ ಸೂಕ್ಷ್ಮವಾಗಿ ನಮ್ಮ ಪ್ರಾಚೀನ ಯೋಗಿಗಳು ಸಂಶೋಧಿಸಿದ್ದಾರೆ. ಜಡಪ್ರಕೃತಿ, ಮಹತ್ತತ್ತ್ವ ಅಹಂಕಾರತತ್ತ್ವ ಮುಂತಾದ ಸೂಕ್ಷ್ಮ ಪ್ರಕೃತಿಯಿಂದ ದೃಶ್ಯವಾದ ಪಂಚಭೂತಗಳ ಕ್ರಮಿಕವಾದ ಉತ್ಪತ್ತಿಯನ್ನು ಬೆಳವಣಿಗೆಯನ್ನು ತಿಳಿಸಿದ್ದಾರೆ.

## ಯಜ್ಞದಲ್ಲಿನ ಅನುಸಂಧಾನ ಹೇಗಿರಬೇಕು?

ಪುರುಷಸೂಕ್ತದಲ್ಲಿ ಹೇಳಿದಂತೆಯೇ ಭಗವಂತನ ವಿಭೂತಿರೂಪವನ್ನು ಭಾಗವತದಲ್ಲಿ ಬಣ್ಣಿಸಿದ್ದಾರೆ. ಬ್ರಹ್ಮಾಂಡದ ಒಳ ಹೊರಗೆ ವ್ಯಾಪಿಸಿದ ಭಗವಂತನ ಒಂದೊಂದು ಅವಯವಗಳಿಂದ ಬ್ರಹ್ಮಾಂಡದ ಒಂದೊಂದು ಪದಾರ್ಥಗಳ ನಿರ್ಮಾಣವಾಯಿತು. ಅನಂತರ ದೇವತೆಗಳು ಯಜ್ಞಮಾಡಬೇಕೆಂದು ಬಯಸಿದರು. ಯಜ್ಞಭೋಕ್ತೃವಾದ ಭಗವಂತನ ಪೂಜೆಗೆ ವಿನಿಯೋಗಿಸುವ ವಸ್ತುಗಳು ಯಾವವು? ಎಂದು ವಿಚಾರಮಾಡಿ ಅವನ ಅವಯವಗಳಿಂದಲೇ ಹುಟ್ಟಿದ ವಸ್ತುಗಳಿಂದ ಹೋಮಿಸಿದರು. ಬ್ರಹ್ಮದೇವರು ಹೇಳುತ್ತಾರೆ–

**ಇತಿ ಸಂಭೃತ ಸಂಭಾರಃ ಪುರುಷಾವಯವೈರಹಮ್ ।**
**ತಮೇವ ಪುರುಷಂ ಯಜ್ಞಂ ತೇನೈವಾಯಜಮೀಶ್ವರಮ್ ॥** — (೨–೬–೨೬)

ಭಗವಂತನ ಅವಯವಗಳಿಂದ ರೂಪುಗೊಂಡ ಭಗವಂತನದ್ದೇ ಆದ ವಸ್ತುಗಳಿಂದ ಭಗವಂತನನ್ನು ಕುರಿತು ಅವನ ಪೂಜಾರೂಪವಾದ ಯಜ್ಞವನ್ನು ಅರ್ಪಿಸಿದೆವು ಎನ್ನುತ್ತಾರೆ. ದೇವತೆಗಳಿಗೆ ಭಗವಂತನಿಂದ ನಿರ್ಮಿತಗೊಂಡ ವಸ್ತುಬಿಟ್ಟು ಬೇರೆ ವಸ್ತುಗಳೇ ದೊರೆಯಲಿಲ್ಲ.

ನಾವು ಮಾಡುವ ಯಜ್ಞಗಳಲ್ಲಿಯೂ ಇದೇ ಅನುಸಂಧಾನವಿರಬೇಕು. 'ದೇವರಿಗೆ ಯಜ್ಞದ ಮೂಲಕ ದೊಡ್ಡ ದಾನ ಮಾಡಿದೆ' ಎಂಬ ಅಹಂಕಾರ ಬಂದರೆ, ಯಜ್ಞ ಪೂರ್ಣ ವ್ಯರ್ಥವಾಯಿತು. ನೀರಿನಲ್ಲಿ ಹೋಮಿಸಿದಂತಾಯಿತು. ಇದಾವುದೂ ನನ್ನದಲ್ಲ. ಎಲ್ಲವೂ ಭಗವಂತನ ಸೊತ್ತು. ಭಗವಂತ ಕೊಟ್ಟದ್ದನ್ನು ಅವನಿಗೇ ಅರ್ಪಿಸುತ್ತಿದ್ದೇನೆ –ಎಂಬ ಚಿಂತನೆ ಮೂಡಿದಾಗಲೇ ನಾವು ಮಾಡಿದ ಯಜ್ಞ ಸಾರ್ಥಕ.

ಯಜ್ಞ ಅಂದರೆ ತ್ಯಾಗ. ತನ್ನದ್ದು ಯಾವುದೂ ಇಲ್ಲ. ಎಲ್ಲವೂ ಅವನದ್ದೇ ಎಂಬ ಚಿಂತನೆಯೇ ಯಜ್ಞ.

ನದಿಗೆ ಅರ್ಘ್ಯವನ್ನು ಕೊಡುತ್ತೇವೆ. ಸಮುದ್ರಕ್ಕೆ ಅರ್ಘ್ಯವನ್ನೆಸಗುತ್ತೇವೆ. ಅಲ್ಲಿ ಅರ್ಘ್ಯಕ್ಕೆ ನೀರು ಯಾವುದು? ನದಿ ಸಮುದ್ರಗಳ ನೀರನ್ನೇ ತೆಗೆದು ನದಿ ಸಮುದ್ರಗಳಿಗೆ ಅರ್ಘ್ಯ ಎಂದು ಭಾವಿಸಿ ಕೊಡುತ್ತೇವೆ. ಭಗವಂತನ ಪೂಜೆಯೂ ಹೀಗೆಯೇ. ಅವನದ್ದನ್ನೇ ಅವನಿಗರ್ಪಿಸುವುದು. ಈ ಅನುಸಂಧಾನದಿಂದ ಯಜ್ಞಮಾಡೋಣ!!

## ೨೫ ಅವತಾರಗಳು ಮತ್ತು ಸಂದೇಶಗಳು

ಬ್ರಹ್ಮದೇವರು ಎರಡನೇ ಸ್ಕಂಧದ ಏಳನೇ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ಭಗವಂತನ ಅನೇಕ ಅವತಾರಗಳನ್ನು ಬಣ್ಣಿಸಿದ್ದಾರೆ.

೧) **ವರಾಹಾವತಾರ:** ಕಶ್ಯಪರ ಪತ್ನಿಯಾದ ದಿತಿಯಲ್ಲಿ ಹುಟ್ಟಿದ ಹಿರಣ್ಯಾಕ್ಷನು ಭೂಮಿಯನ್ನೇ ಚಾಪೆಯಂತೆ ಸುತ್ತಿಕೊಂಡು ಸಮುದ್ರದೊಳಗೆ ಪ್ರವೇಶಿಸಿದ. ಇಂತಹ ಭೂಮಿಯನ್ನು ರಕ್ಷಿಸಲು ದಯಾಸಾಗರನಾದ ಭಗವಂತನು ಯಜ್ಞವರಾಹನಾಗಿ ಅವತರಿಸಿದ. ದೈತ್ಯ ಹಿರಣ್ಯಾಕ್ಷನನ್ನು ತನ್ನ ಕೋರೆದಾಡೆಯಿಂದ ಸೀಳಿ ಭೂಮಿಯನ್ನುದ್ಧರಿಸಿದ.

ವರಾಹನನ್ನು ವಾದಿರಾಜರು 'ಶಾರ್ದೂಲದಂತ'ನೆಂದು ಬಣ್ಣಿಸಿದ್ದಾರೆ. ಸಿಂಹವು ತನ್ನ ಉಗ್ರವಾದ ದಂತಗಳಿಂದ ಪ್ರಾಣಿಗಳನ್ನು ಸಿಗಿದುಹಾಕುತ್ತದೆ. ಆದರೆ ಅದೇ ಹಲ್ಲುಗಳಿಂದ ತನ್ನ ಮರಿಗಳನ್ನು ಕಚ್ಚಿಕೊಂಡು ಸ್ಥಳಾಂತರಿಸಿ ಸಂರಕ್ಷಿಸುತ್ತದೆ. ಭಗವಂತನು ಸೃಷ್ಟಿಸಿದ ಯಃಕಶ್ಚಿತ್ ಪ್ರಾಣಿಯೇ ತನ್ನ ಹಲ್ಲಿನಿಂದ ಉಗ್ರ ಮತ್ತು ಸೌಮ್ಯಗಳೆಂಬ ವಿರುದ್ಧ ಕರ್ಮಗಳನ್ನಾಚರಿಸುತ್ತದೆ. ಹೀಗಿರಲು ಸರ್ವಸ್ವಾಮಿಯಾದ ಭಗವಂತ ತನ್ನ ದಾಡೆಯಿಂದ ದುಷ್ಟ ನಿಗ್ರಹ, ಶಿಷ್ಟ ಪರಿಗ್ರಹಗಳೆಂಬ ಕಾರ್ಯಗಳನ್ನು ಮಾಡಿದನೆಂಬುದು ಸೋಜಿಗವೆ?' ಎಂದು ವರ್ಣಿಸಿದ್ದಾರೆ. ಹೀಗೆ ಭೂಮಿಯನ್ನು ರಕ್ಷಿಸಿ ಭೂಮಿಯಲ್ಲಿ ಸಕಲ ಸತ್ಕರ್ಮಗಳೂ ಉಳಿಯುವಂತೆ ಅನುಗ್ರಹಿಸಿದ.

೨) **ಯಜ್ಞಾವತಾರ:** ರುಚಿ ಪ್ರಜಾಪತಿಯ ಪತ್ನಿಯಾದ ಆಕೂತಿಯಲ್ಲಿ 'ಸುಯಜ್ಞ'ನಾಗಿ ಭಗವಂತ ಅವತರಿಸಿದ. ಸ್ವಾಯಂಭುವ ಮನುವನ್ನು ರಾಕ್ಷಸರು

ನುಂಗಲು ಬಂದಾಗ ಅವರನ್ನು ಶಿಕ್ಷಿಸಿ ಮನುವನ್ನು ರಕ್ಷಿಸಿದ. ಮಾನವಕುಲದ ಮೂಲಪುರುಷನಾದ ಸ್ವಾಯಂಭುವ ಮನುವನ್ನು ರಕ್ಷಿಸುವ ಮೂಲಕ ಸಮಗ್ರ ಮಾನವಕುಲವನ್ನೇ ರಕ್ಷಿಸಿದ ರೂಪವಿದು.

೩) **ಕಪಿಲಾವತಾರ:** ಕರ್ದಮರ ಪತ್ನಿ ದೇವಹೂತಿಯಲ್ಲಿ ಕಪಿಲನಾಗಿ ಅವತರಿಸಿದ. ತನ್ನ ತಾಯಿಗೆ ಮೋಕ್ಷಕ್ಕೆ ಕಾರಣವಾದ ಸಾಂಖ್ಯಶಾಸ್ತ್ರವನ್ನುಪದೇಶಿಸಿದ. 'ಬಂಧನಕ್ಕೇನು ಕಾರಣ? ಬಿಡುಗಡೆಗೆ ಏನು ಕಾರಣ?' ಎಂದು ತಾಯಿಯನ್ನು ನಿಮಿತ್ತಮಾಡಿಕೊಂಡು ಸಮಗ್ರ ಲೋಕಕ್ಕೆ ಜ್ಞಾನಸಂದೇಶ ನೀಡಿದ ರೂಪವಿದು.

೪) **ದತ್ತಾತ್ರೇಯಾವತಾರ:** ಅತ್ರಿ–ಅನಸೂಯಾ ಇವರ ತಪಸ್ಸಿಗೆ ಮೆಚ್ಚಿ ದತ್ತಾತ್ರೇಯನಾಗಿ ಬಂದ. ಜ್ಞಾನವೇ ಮೂರ್ತಿಮತ್ತಾಗಿ ಬಂದ. ಕೆಲವರು 'ದತ್ತಾತ್ರೇಯ'ನೆಂದರೆ ತ್ರಿಮೂರ್ತಿಗಳೆಂದು ಚಿತ್ರಿಸುತ್ತಾರೆ. ಇದು ಸರಿಯಲ್ಲ. ಸಾಕ್ಷಾತ್ ವಿಷ್ಣುವೇ ಜ್ಞಾನೋಪದೇಶಕ್ಕಾಗಿ ದತ್ತಾತ್ರೇಯನಾಗಿ ಅವತರಿಸಿದ.

೫) **ವಿಷ್ಣು ಅವತಾರ:** ಬ್ರಹ್ಮನು ಹರಿಯನ್ನುದ್ದೇಶಿಸಿ ತಪಸ್ಸು ಮಾಡಿದಾಗ ಅವನಿಗೆ ಬೇಕಾದ ತತ್ತ್ವೋಪದೇಶವನ್ನು ನೀಡಿದ ಅವತಾರ.

೬–೭) **ನರ–ನಾರಾಯಣಾವತಾರ:** ಧರ್ಮನೆಂಬ ಮುನಿಯ ಪತ್ನಿಯಾದ ಮೂರ್ತಿಯಲ್ಲಿ ನರ–ನಾರಾಯಣರೂಪದಿಂದವತರಿಸಿದನು. ನಾರಾಯಣನು ಸಾಕ್ಷಾತ್ ಭಗವಂತನೇ ಆಗಿದ್ದರೂ ನರನಾಮಕನು ಶೇಷನು. ಅವನಲ್ಲಿ ಭಗವಂತನ ವಿಶೇಷ ಸನ್ನಿಧಾನದಿಂದ ಇರುವುದರಿಂದ ಇದು ಆವೇಶಾವತಾರವೆನಿಸಿದೆ–

**ಅನಂತೋ ನರನಾಮಾತ್ರ ತಸ್ಮಿಂಸ್ತು ನರನಾಮವಾನ್ ।**
**ವಿಶೇಷೇಣ ಸ್ವಯಂ ವಿಷ್ಣುರ್ನಿವಸತ್ಯಂಬುಜೇಕ್ಷಣಃ ॥**

— (ಭಾ. ತಾ. ನಿ. ೨–೭–೬)

ಅಮೋಘವೀರ್ಯನಾದ ನಾರಾಯಣನು ಅಗಾಧ ತಪಸ್ಸಿನಲ್ಲಿ ನಿರತನಾದಾಗ ಭಯಗೊಂಡ ದೇವೇಂದ್ರನು ಅನೇಕ ಅಪ್ಸರೆಯರನ್ನು ತಪೋಭಂಗಕ್ಕಾಗಿ ಕಳುಹಿಸಿದ ಅವರಿಂದ ವಿಚಲಿತನಾಗದೆ ಅವರೆದುರಿನಲ್ಲಿಯೇ ತನ್ನ ತೊಡೆಯಿಂದ ಅವರಿಗಿಂತಲೂ ಅತ್ಯಧಿಕ ಸೌಂದರ್ಯವುಳ್ಳ ಊರ್ವಶಿಯನ್ನು ಸೃಷ್ಟಿಸಿದ. ಅಪ್ಸರೆಯರು ನಾಚಿ ಓಡಿದರು. ಇಂತಹ ಸಾವಿರಾರು ಸ್ತ್ರೀಯರನ್ನು ಇಚ್ಛಾಮಾತ್ರದಲ್ಲಿ ಸೃಷ್ಟಿಸಬಲ್ಲ ಯೋಗೇಶ್ವರನ ನಿರ್ವಿಕಾರನ ಮಹಿಮೆ ಅಪಾರ ಮತ್ತು ಅನಂತ.

ಇತರ ಸಾಧಕರಿಗಿಂತಲೂ ವೈಲಕ್ಷಣ್ಯವನ್ನು ಈ ನಾರಾಯಣ ಅವತಾರದಲ್ಲಿ ಕಾಣಬಹುದು. ರುದ್ರದೇವನೂ ತಪಸ್ಸಿಗೆ ಕುಳಿತಿದ್ದ. ಅವನನ್ನು ಮೋಹಗೊಳಿಸಲು ಸಾಕ್ಷಾತ್ ಮನ್ಮಥನೇ ಬಂದ. ಆದರೂ ಕಾಮಕ್ಕೆ ವಶನಾಗಲಿಲ್ಲ. ಆದರೆ ಕ್ರೋಧಕ್ಕೆ ತುತ್ತಾಗಿ ಉರಿಗಣ್ಣಿನಿಂದ ಮನ್ಮಥನನ್ನು ದಹಿಸಿಬಿಟ್ಟ. ಕಾಮವನ್ನು ಗೆದ್ದು ಕ್ರೋಧಕ್ಕೆ ಗುರಿಯಾದ.

ವಿಶ್ವಾಮಿತ್ರರು ತಪಸ್ಸಿಗೆ ಕುಳಿತುಕೊಂಡಾಗ ಮೇನಕೆ ಮೋಹಿಸಬಂದಳು ಅವಳಿಗೆ ವಶನಾದ. ಕಾಮಕ್ಕೆ ತುತ್ತಾದೆನಲ್ಲ! ಎಂದು ಮತ್ತೆ ತಪಸ್ಸಿಗೆ ಕುಳಿತ. ರಂಭೆ ಬಂದಳು. 'ತಪಸ್ಸು ಕೆಡಿಸಲು ಬಂದೆಯಾ, ಕಲ್ಲಾಗಿ ಹೋಗು' ಎಂದು ಶಪಿಸಿದ. ಕಾಮವನ್ನು ಗೆದ್ದರೂ ಕ್ರೋಧಕ್ಕೆ ಬಲಿಯಾದ. ಹೀಗೆ ಒಂದನ್ನು ಗೆದ್ದಾಗ ಅವರಿಗೆ ತಿಳಿಯದೆ ಇನ್ನೊಂದಕ್ಕೆ ಗುರಿಯಾದರು. ಆದರೆ ನಮ್ಮ ನಾರಾಯಣ ಯಾವುದೇ ರೀತಿಯ ವಿಕಾರಗಳಿಗೂ ಒಳಗಾಗದೆ, ಎಲ್ಲ ದೇವತೆಗಳಿಗಿಂತಲೂ ಮಿಗಿಲಾಗಿ ವರ್ತಿಸಿದ ಯೋಗಿಯಾದವ ಹೇಗಿರಬೇಕೆಂಬುದನ್ನು ಜಗತ್ತಿಗೆ ತೋರಿಸಿಕೊಟ್ಟ.

೮) **ವಾಸುದೇವಾವತಾರ:** ಉತ್ತಾನಪಾದರಾಜನ 'ಸುನೀತಿ' ಎಂಬ ಪತ್ನಿಯಲ್ಲಿ 'ಧ್ರುವ'ನೆಂಬ ಭಗವದ್ಭಕ್ತ ಜನಿಸಿದ. 'ಸುರುಚಿ' ಎಂಬ ಮಲತಾಯಿಯಿಂದ ಅವಮಾನಿತನಾದ ಧ್ರುವ ವಿರಕ್ತನಾಗಿ ತಪಸ್ಸು ಮಾಡುವೆನೆಂದು ಕಾಡಿಗೆ ನಡೆದು ನಾರದರ ಉಪದೇಶದಂತೆ ವಾಸುದೇವಮಂತ್ರವನ್ನು ಜಪಿಸಿದ. ಬಾಲಕನ ತಪಸ್ಸಿಗೆ ಮೆಚ್ಚಿ ಪರಮಾತ್ಮ ವಾಸುದೇವನಾಗಿ ಬಂದ ಭಕ್ತನಿಗೋಸ್ಕರವೇ ಆದ ಅವತಾರವಿದು.

೯) **ಪೃಥುವಿನ ಅವತಾರ:** ವೇನನೆಂಬ ರಾಜನು ಅತ್ಯಂತ ದುಷ್ಟತನದಿಂದ ವರ್ತಿಸಿದಾಗ ಋಷಿಗಳೆಲ್ಲರೂ ಹೂಂಕಾರದಿಂದ ಅವನನ್ನು ಸಂಹರಿಸಿದರು. ರಾಜ್ಯಪರಿಪಾಲನೆಗೆಂದು ರಾಜನನ್ನು ಬಯಸಿ ಭಗವಂತನನ್ನು ಚಿಂತಿಸಿ ವೇನನ ಮೃತದೇಹವನ್ನು ಋಷಿಗಳು ಮಥಿಸಿದರು. ಪೃಥುರಾಜನು ಹುಟ್ಟಿದ. ಅವನಿಂದ ಪೂರ್ವಜನ್ಮದಲ್ಲಿ ಪ್ರಾರ್ಥಿತನಾದ ಭಗವಂತ ಪೃಥು ಎಂಬ ಹೆಸರಿನಿಂದಲೇ ಅವನಲ್ಲಿ ಪ್ರವೇಶಿಸಿದ.

ಪೃಥುರ್ನಾಮ ಮಹಾರಾಜಸ್ತತ್ರ ವಿಷ್ಣುಃ ಸ್ವಯಂ ಪ್ರಭುಃ ।
ಪೃಥುನಾಮಾ ಚತುರ್ಬಾಹುಃ ಪ್ರವಿಷ್ಟಸ್ತೇನಚಾರ್ಥಿತಃ ॥
— (ಭಾ. ತಾ. ನಿ. ೨-೭-೯)

ಪೃಥುವಿನಲ್ಲಿ ಆವಿಷ್ಟನಾದ ಭಗವಂತನು ಪೃಥಿವಿಯಿಂದ ಸಂಪತ್ತನ್ನು ಪಡೆದು ಜಗತ್ತಿಗೆ ನೀಡಿದನು. ಸಕಲವಿಧವಾದ ವೈಜ್ಞಾನಿಕ ಸಾಮಗ್ರಿಗಳಿಂದಲೂ ಜಗತ್ತನ್ನು ಸಮೃದ್ಧಿಗೊಳಿಸಿದ. ಭೌತಿಕ ಸಂಪತ್ತಿನ ಒಟ್ಟಿಗೆ ಆಧ್ಯಾತ್ಮಿಕ ಸಂಪತ್ತನ್ನೂ ಬೆಳೆಸಿದ ಪೃಥುರಾಜನು ಲೋಕವಿಖ್ಯಾತನಾದ.

೧೦) **ಋಷಭಾವತಾರ:** ನಾಭಿರಾಜನ ಭಾರ್ಯೆಯಾದ ಸುದೇವಿಯಲ್ಲಿ 'ಋಷಭ'ನಾಮದಿಂದ ಹರಿ ಅವತರಿಸಿದ. 'ಭೋಗಾಸಕ್ತಿಯನ್ನು ತ್ಯಜಿಸಿ ನಿರಂತರ ಹರಿಧ್ಯಾನಾಸಕ್ತರಾಗಬೇಕೆಂ'ದು ಉಪದೇಶಿಸಲು ಅವತರಿಸಿದ ರೂಪವಿದು.

೧೧) **ಹಯಗ್ರೀವಾವತಾರ:** ಹರಿಯು ಬ್ರಹ್ಮನ ಯಜ್ಞದಲ್ಲಿ ಹಯಗ್ರೀವನಾಗಿ ಅವತರಿಸಿದ. ಬದರಿಯ ಸಮೀಪದ 'ವಸುಧಾರಾ' ಸ್ಥಳದಲ್ಲಿ ಹಯಗ್ರೀವಾವತಾರವಾಗಿದೆ. ಹಯಗ್ರೀವನ ನಾಸಿಕಾರಂಧ್ರಗಳಿಂದ ಹೊರಡುವ ನಿಶ್ವಾಸವೇ ವಿಶ್ವಾಸಾರ್ಹವಾದ ವೇದಗಳು. ಜ್ಞಾನದ ಪ್ರಚಂಡ ಮಾರ್ತಾಂಡ ಹಯಗ್ರೀವ.

೧೨) **ಮತ್ಸ್ಯಾವತಾರ:** ಪ್ರಳಯಸಮುದ್ರದಲ್ಲಿ ಭೂಮಿಯನ್ನೇ ನಾವೆಯನ್ನಾಗಿ ಮಾಡಿ, ಸೃಷ್ಟಿಗೆ ಬೇಕಾದ ಸಮಗ್ರ ಸಾಮಗ್ರಿಗಳನ್ನು ತುಂಬಿಕೊಂಡು ಬಂದ ರೂಪವಿದು. ವೈವಸ್ವತ ಮನುವಿನ ಪ್ರಾರ್ಥನೆಯಂತೆ ಸಕಲ ಜನರ ಜೀವನಕ್ಕೆ ಹೇತುವಾದ ಸಂಪತ್ತನ್ನು ನೀಡಿದ. ಹಯಗ್ರೀವನೆಂಬ ದೈತ್ಯನು ವೇದವನ್ನೆಲ್ಲ ಅಪಹರಿಸಿರಲು, ಅವನನ್ನು ಸಂಹರಿಸಿ ವೇದಗಳನ್ನೂ ಉದ್ಧರಿಸಿದ. ಹೀಗೆ ಪ್ರಳಯಸಮುದ್ರ, ವೇದಸಮುದ್ರ ಎರಡರಲ್ಲಿಯೂ ವಿಹರಿಸಿ ಭೌತಿಕ ಮತ್ತು ಆಧ್ಯಾತ್ಮಿಕ ಸಂಪತ್ತನ್ನು ನೀಡಿದ ಅವತಾರ ಮತ್ಸ್ಯಾವತಾರ.

೧೩) **ಕೂರ್ಮಾವತಾರ:** ಅಮೃತಕ್ಕಾಗಿ ದೇವಾಸುರರು ಕ್ಷೀರಸಮುದ್ರವನ್ನು ಮಥಿಸುತ್ತಿರಲು ಮಂದರಗಿರಿಯು ಮುಳುಗಲಾರಂಭಿಸಿತು. ಆ ಸಂದರ್ಭದಲ್ಲಿ ಹರಿಯು ಕೂರ್ಮನಾಗಿ ಅವತರಿಸಿ, ಮಂದರಗಳನ್ನು ಬೆನ್ನಮೇಲೆತ್ತಿ ಮಥನಕಾರ್ಯ ವನ್ನು ಅಬಾಧಿತವಾಗಿ ನಡೆಸಿ ಕೊಟ್ಟ. ಮಂದರಗಿರಿಯು ಕೂರ್ಮಪೃಷ್ಠದಲ್ಲಿ ತಿರುಗುವಾಗ ಹರಿಗೆ ತುರಿಸಿದಂತಾಗಿ ಅಲ್ಲಿಯೇ ತೂಕಡಿಕೆ ಬಂದಿತಂತೆ. 'ನಿದ್ರೇಕ್ಷಣೋಽದ್ರಿಪರಿವರ್ತ ಕಷಾಣಕಂಡೂಃ' ಎನ್ನುತ್ತದೆ ಭಾಗವತ. ಮಂದರಗಿರಿಯ ಭಾರವನ್ನೇ ಕಂಡೂಯನ ಸಮಾನವೆಂದರೆ ಶ್ರೀಹರಿಯ ಅಬಾಧಿತವಾದ ಶಕ್ತಿ–ಸಾಮರ್ಥ್ಯಗಳ ಅಗಾಧತೆ ಎಷ್ಟು?

೧೪) **ನರಸಿಂಹಾವತಾರ:** ಕಶ್ಯಪ–ದಿತಿಯರ ಪುತ್ರನಾದ ಹಿರಣ್ಯಕಶಿಪುವಿನ ಸಂಹಾರ, ಭಕ್ತಪ್ರಹ್ಲಾದನ ಸಂರಕ್ಷಣೆ –ಹೀಗೆ ಎರಡೂ ಕಾರ್ಯಕ್ಕಾಗಿ ನರಸಿಂಹನಾಗಿ ಅವತರಿಸಿದ.

೧೫) **ಗಜೇಂದ್ರ ವರದಾವತಾರ:** ಅಗಸ್ತ್ಯರ ಶಾಪದಿಂದ ಆನೆಯಾದ ಇಂದ್ರ ದ್ಯುಮ್ನರಾಜನು ತ್ರಿಕೂಟಪರ್ವತದಲ್ಲಿಯ ಸರೋವರಕ್ಕೆ ವಿಹಾರಕ್ಕೆಂದು ಹೋದ. ಆ ಸರೋವರದ 'ಹೂಹೂ' ಎಂಬ ಗಂಧರ್ವ ಮೊಸಳೆಯಾಗಿ ಹುಟ್ಟಿದ್ದ. ಗಜರಾಜನು ಸರೋವರಕ್ಕೆ ಕಾಲಿಟ್ಟಾಗ ಅವನನ್ನು ಈ ಮೊಸಳೆ ಕಚ್ಚಿ ಸೆಳೆಯಿತು. ಬಹುಕಾಲ ಕರಿ–ಮಕರಿಗಳ ಹೋರಾಟ ನಡೆಯಿತು. ಬಿಡುಗಡೆಯ ಯಾವ ಉಪಾಯವನ್ನೂ ಕಾಣದೆ ಗಜೇಂದ್ರನು ಆರ್ತ ಭಕ್ತನಾಗಿ ಸರೋವರದ ಕಮಲವನ್ನು ಕೈಗೆತ್ತಿಕೊಂಡು ಉಚ್ಚಕಂಠದಿಂದ ಹರಿಯನ್ನು ಕೂಗಿ ಕರೆದ. "ಹೇ ಆದಿಪುರುಷ! ಹೇ! ಅಖಿಲ ಲೋಕನಾಥ! ಹೇ! ಪಾವನಕೀರ್ತೇ! ಜಗನ್ಮಂಗಲಮೂರ್ತೇ! ಮಾಂ ರಕ್ಷ ರಕ್ಷ!" ಎಂದ.

ಭಕ್ತನ ಆರ್ತನಾದವನ್ನು ಆಲಿಸಿದ, ಅಪ್ರಮೇಯನಾದ, ಗರುಡಾಂಸಮಂಡಿತ ನಾದ, ಚಕ್ರಧಾರಿಯಾದ ಶ್ರೀಹರಿಯು ಧಾವಿಸಿಬಂದು, ಚಕ್ರದಿಂದ ನಕ್ರನ ವದನವನ್ನು ಕತ್ತರಿಸಿ ಗಜೇಂದ್ರನನ್ನು ಉದ್ಧರಿಸಿದ.

ಕೆಳಗಿನ ಎರಡು ಮಂತ್ರಗಳಿಂದ ಪ್ರಾತಃಕಾಲದಲ್ಲಿ ಹರಿಯನ್ನು ನೆನೆದರೆ ಭವದಲ್ಲಿ ಅತಂತ್ರರಾದ ನಮ್ಮನ್ನೂ ಉದ್ಧರಿಸಿ ಸ್ವತಂತ್ರರನ್ನಾಗಿಸುತ್ತಾನೆ. ಮೋಕ್ಷ ನೀಡುತ್ತಾನೆ.

ಅಂತಃಸರಸ್ಯುರುಬಲೇನ ಪದೇ ಗೃಹೀತೋ
ಗ್ರಾಹೇಣ ಯೂಥಪತಿರಂಬುಜಹಸ್ತ ಆರ್ತಃ ।
ಆಹೇದಮಾದಿಪುರುಷಾಖಿಲಲೋಕನಾಥ-
ತೀರ್ಥಶ್ರವಃ ಶ್ರವಣಮಂಗಲನಾಮಧೇಯ ॥

ಸ್ಮೃತ್ವಾ ಹರಿಸ್ತಮರಣಾರ್ಥಿನಮಪ್ರಮೇಯ-
ಶ್ಚಕ್ರಾಯುಧಃ ಪತಗರಾಜಭುಜಾಧಿರೂಢಃ ।
ಚಕ್ರೇಣ ನಕ್ರವದನಂ ವಿನಿಪಾಟ್ಯ ತಸ್ಮಾದ್ಧ-
ಸ್ತೇ ಪ್ರಗೃಹ್ಯ ಭಗವಾನ್ಕೃಪಯೋಜ್ಜಹಾರ ॥
— (೨-೭-೧೫-೧೬)

೧೬) **ವಾಮನಾವತಾರ:** ಸರ್ವಪ್ರಾಣಿಗಳ ಹೃದಯ ಗುಹಾವಾಸಿಯಾಗಿದ್ದು ಅಧಿಯಜ್ಞನೆನಿಸಿದ ಭಗವಂತನು ಸರ್ವಗುಣಜ್ಯೇಷ್ಠನಾಗಿದ್ದರೂ ದೇವೇಂದ್ರನ ತಮ್ಮನಾಗಿ ಉಪೇಂದ್ರನೆಂದೆನಿಸಿದ. ಇಂತಹ ಉಪೇಂದ್ರನು ವಾಮನನಾಗಿ ಬಲಿಯ ಬಳಿ ಬಂದ. ಮೂರು ಪಾದ ಭೂಮಿ ಬೇಡಿದ.

ವ್ಯಗ್ರಚಿತ್ತರಾದ ಉಗ್ರರನ್ನೆಲ್ಲ ನಿಗ್ರಹಮಾಡಿ ಸಜ್ಜನರನ್ನೆಲ್ಲ ಅನುಗ್ರಹಿಸುವ ಶ್ರೀಹರಿಯು ಯಾವ ರೂಪದಲ್ಲಿಯೂ ಏನೂ ಬೇಡದೆ ವಾಮನಾವತಾರದಲ್ಲಿ ಬೇಡಿದನೇಕೆ? ಭಗವಂತನು ಬೇಡುವುದು ನೀಡುವುದಕ್ಕಾಗಿಯೇ. ದುಷ್ಟರ ಬಳಿ ಎಂದೂ ಬೇಡನು. ಬಲಿಯು ಸಜ್ಜನ. ಅದಕ್ಕಾಗಿ ಅವನ ಬಳಿ ಕೇಳಿದ. ಬಲಿಯಿಂದ ಬೇಡಿ ಪಡೆದದ್ದು ಎಷ್ಟೋ ಅದಕ್ಕಿಂತಲೂ ಹೆಚ್ಚು ಹೆಚ್ಚು ಮರಳಿ ಕೊಟ್ಟಿದ್ದಾನೆ. ಹರಿಗಾಗಿ ಆತ್ಮಾರ್ಪಣೆಯನ್ನೇ ಮಾಡಿದ ಬಲಿರಾಜನಿಗೆ ಭಾವಿ ಇಂದ್ರನಾಗೆಂದು ಹರಸಿದ. ರಸಾತಳಾಧಿಪತ್ಯ ನೀಡಿದ. ಇಷ್ಟಕ್ಕೆ ಭಕ್ತನಿಗೆ ಕೊಟ್ಟದ್ದು ಸಾಕೆನಿಸದೆ ಸ್ವತಃ ತಾನೇ ಬಲಿಯ ಮನೆಯ ದ್ವಾರಪಾಲಕನಾಗುವೆ ಎಂದ. ಹರಿಕರುಣೆಗೆ ಎಣೆ ಉಂಟೆ? ಬಲಿ ಕೊಟ್ಟದ್ದು ಮೂರು ಹೆಜ್ಜೆಯಾದರೆ, ಪ್ರತಿಯಾಗಿ ಅಪಾರಮಹಿಮನಾದ ಶ್ರೀಹರಿ ತನ್ನನ್ನೇ ಕೊಟ್ಟ. ಬಲಿಯನ್ನೂ ಉದ್ಧರಿಸಿದ. ದೇವೇಂದ್ರನ ಸ್ಥಾನವನ್ನೂ ಭದ್ರಗೊಳಿಸಿದ.

ದುಷ್ಟರಿಗೂ ಶಿಷ್ಟರಿಗೂ ಕದನ ಏರ್ಪಟ್ಟರೆ ಹರಿಗಾವ ಸಮಸ್ಯೆಯೂ ಇಲ್ಲ. ದುಷ್ಟರನ್ನು ಮುಷ್ಟಿಯಿಂದ ಪಿಷ್ಟಮಾಡಿ ಶಿಷ್ಟರನ್ನು ತುಷ್ಟಿಗೊಳಿಸುವ. ಆದರೆ ಬಲಿ ಮತ್ತು ದೇವೇಂದ್ರ ಈರ್ವರೂ ಭಕ್ತರು. ಒಂದೇ ಸ್ಥಾನಕ್ಕಾಗಿ ಇಬ್ಬರ ಸ್ಪರ್ಧೆ ಏರ್ಪಟ್ಟಾಗ ಸುಂದರ ಮಗುವಾಗಿ ಬಂದು ತ್ರಿವಿಕ್ರಮನಾಗಿ ಮೆರೆದು ಈರ್ವರನ್ನೂ ಅನುಗ್ರಹಿಸಿದ.

೧೭) **ಐತರೇಯಾವತಾರ:** ಇತರಾದೇವಿಯ ಮಗನಾಗಿ ಅವತರಿಸಿದ ಮಹಿದಾಸರೂಪಿ ಭಗವಂತನು ಲಕ್ಷ್ಮೀ-ಬ್ರಹ್ಮ-ನಾರದಾದಿಗಳಿಗೆ ಕರ್ಮಯೋಗ ಮತ್ತು ಜ್ಞಾನಯೋಗವನ್ನು ಉಪದೇಶಿಸಿದನು. ಭಗವಂತನ ಜ್ಞಾನವನ್ನು ಭಕ್ತರೇ ಹೊಂದುತ್ತಾರೆ ಹೊರತು ಅಭಕ್ತರಲ್ಲ. ನಾರದರಿಗೆ ಐತರೇಯನು ಉಪದೇಶಿಸಿದ್ದಾನೆಂದು ಶ್ರೀಮದಾಚಾರ್ಯರು ಪುರಾಣಪ್ರಮಾಣದಿಂದ ತಿಳಿಸಿದ್ದಾರೆ-

ಐತರೇಯೋ ಹರಿಃ ಪ್ರಾಹ ನಾರದಾಯ ಸ್ವಕಾಂ ತನುವಮ್ ।
ಯತ್ಪ್ರಾಪುರ್ವೈಷ್ಣವಾ ನಾನ್ಯೇ ಯದ್ವೃತೇ ನ ಸುಖಂ ಪರಮ್ ॥
— (೨-೭-೧೯)

೧೮) **ರಾಜರಾಜೇಶ್ವರಾವತಾರ:** 'ರಾಜರಾಜೇಶ್ವರ' ಎಂಬ ಹೆಸರಿನಿಂದ ಅವತರಿಸಿದ ಶ್ರೀಹರಿಯು ಸ್ವಾಯಂಭುವಮನುವಿನ ವಂಶೋತ್ಪನ್ನರಾದ ರಾಜರಲ್ಲಿದ್ದು ವಿಶೇಷ ಶಕ್ತಿದಾತನಾಗಿ ಅನುಗ್ರಹಿಸಿದ. ಸತ್ಯ-ಧರ್ಮಗಳನ್ನು ಸಂರಕ್ಷಿಸುವವನಾಗಿ ಪ್ರಿಯವ್ರತಾದಿ ರಾಜರನ್ನೂ ಚಕ್ರದಿಂದ ಸಂರಕ್ಷಿಸಿದ. 'ಮನ್ವಂತರೇಷು ಭಗವಾನ್ ಚಕ್ರವರ್ತಿಷು ಸಂಸ್ಥಿತಃ'. ದುಷ್ಟರಾಜರನ್ನು ದಂಡಿಸಿದ. ಹೀಗೆ ಲೋಕ-ಧರ್ಮಗಳ ಸಂರಕ್ಷಕನಾಗಿ ಹತ್ತೂ ದಿಕ್ಕುಗಳಲ್ಲಿಯೂ ರಾಜರಾಜೇಶ್ವರನಾಗಿ ಮೆರೆದ.

೧೯) **ಧನ್ವಂತರ್ಯವತಾರ:** ಸಾಕ್ಷಾತ್ ಭಗವಂತನು 'ಧನ್ವಂತರಿ' ಎಂಬ ಹೆಸರಿನಿಂದ ಅವತರಿಸಿ, ಲೋಕದ ರೋಗನಿವಾರಣೆ, ಆಯುಷ್ಯಾಭಿವೃದ್ಧಿ ಎರಡನ್ನೂ ಮಾಡಿದ್ದಾನೆ. ಜ್ಞಾನಕಾರ್ಯಕ್ಕೆ ಬೇಕಾದ ದೈಹಿಕಬಲವನ್ನು ನೀಡಲೋಸುಗ ಆಯುರ್ವೇದ ಪ್ರವರ್ತಕನಾಗಿ ಧನ್ವಂತರಿಯು ಅವತರಿಸಿದ್ದಾನೆ.

೨೦) **ಪರಶುರಾಮಾವತಾರ:** ಅವನಿಯ ತುಂಬ ದುಷ್ಟ ಕ್ಷತ್ರಿಯರೇ ತುಂಬಿರಲು ಧರ್ಮಲೋಪವಾಗುತ್ತಿರಲು, ಪರಶುರಾಮರೂಪಿ ಭಗವಂತನು ಅವತರಿಸಿದನು. ಇಪ್ಪತ್ತೊಂದು ಬಾರಿ ಭೂಪ್ರದಕ್ಷಿಣೆಯನ್ನು ಮಾಡಿ ಸಮಸ್ತ ದುಷ್ಟಶಕ್ತಿಗಳನ್ನು ದಮನಗೈದು ಧರ್ಮಸಂರಕ್ಷಣೆಯ ಕಾರ್ಯ ಮಾಡಿದ.

ಉತ್ತಮ ರಾಜರಿಗೆ ಶಕ್ತಿ ನೀಡಿ ಅನುಗ್ರಹಿಸಲು ರಾಜರಾಜೇಶ್ವರನಾಗಿ ಬಂದ ಶ್ರೀಹರಿ, ದುಷ್ಟ ಕ್ಷತ್ರಿಯರು ಧರ್ಮಕಂಟಕರಾಗಿ ಬೆಳೆದಾಗ, ಅವರನ್ನು ತರಿಯಲು ಪರಶುರಾಮನಾಗಿ ಬಂದ.

೨೧) **ರಾಮಾವತಾರ:** ನಡೆ-ನುಡಿಗಳಿಂದ ಧರ್ಮವನ್ನು ಸಂರಕ್ಷಿಸಲು, ರಾವಣ ಕುಂಭಕರ್ಣ ಮಾರೀಚಾದಿ ನೀಚರನ್ನು ದಮನಮಾಡಲು ಯಜ್ಞದ ಪಾಯಸದಿಂದ ಕೌಸಲ್ಯೆ-ದಶರಥರ ಆನಂದಕಂದನಾಗಿ ಶ್ರೀರಾಮಚಂದ್ರನೆಂಬ ಹೆಸರಿನಿಂದ ಅವತರಿಸಿದ. ಭಾಗವತವು ಮೂರು ಶ್ಲೋಕದಿಂದ ಇಲ್ಲಿ ರಾಮಾವತಾರವನ್ನು ಬಣ್ಣಿಸಿದೆ. ನವಮಸ್ಕಂಧದಲ್ಲಿ ವಿಸ್ತಾರವಾಗಿ ಬಣ್ಣಿಸಲಾಗಿದೆ.

೨೨) **ಕೃಷ್ಣಾವತಾರ:** ಭೂಭಾರ ಪರಿಹಾರಕನಾಗಿ ಧರ್ಮಸ್ಥಾಪನೆಗಾಗಿ ನಂದಗೋಪ-ಯಶೋದೆ, ವಸುದೇವ-ದೇವಕಿಯರ ಆನಂದಕಂದನಾಗಿ ಜಗತ್ತನ್ನೇ ತನ್ನೆಡೆ ಆಕರ್ಷಿಸಲೋಸುಗ 'ಕೃಷ್ಣ' ಎಂಬ ಹೆಸರಿನಿಂದ ವೃಷ್ಣಿವಂಶಪ್ರದೀಪನಾಗಿ ಅವತರಿಸಿದ. ಪರಿಪೂರ್ಣಕಾಮನಾದ ಕೃಷ್ಣನನ್ನು ಇಲ್ಲಿ ದಶಶ್ಲೋಕಗಳಿಂದ ಬಣ್ಣಿಸಿದ್ದಾರೆ.

೨೩) **ವೇದವ್ಯಾಸಾವತಾರ:** ಸತ್ಯವತೀ-ಪರಾಶರರಲ್ಲಿ ವೇದವ್ಯಾಸನೆಂದು ಅವತರಿಸಿದ. ಇಪ್ಪತ್ತೆಂಟನೇ ದ್ವಾಪರದಲ್ಲಿ ವಿಶೇಷವಾಗಿ ವೇದಗಳನ್ನು ವಿಂಗಡಿಸಿ

ದನು. ಅಷ್ಟಾದಶ ಪುರಾಣಗಳನ್ನೂ ಮಹಾಭಾರತವನ್ನೂ ರಚಿಸಿದನು. ಈ ಮೂಲಕ ಮಂದಮತಿಗಳಿಗೆ ಉದ್ಧಾರದ ಮಾರ್ಗವನ್ನು ತೋರಿದನು.

೨೪) **ಬುದ್ಧಾವತಾರ:** ದೇವದ್ವೇಷಿಗಳಾದ ಅಸುರರಿಗೆ ವಂಚಿಸಲು ಬಾಲ ರೂಪದ ಮೋಹಕ ವೇಷವನ್ನು ತೊಟ್ಟ. ಪಾಷಂಡಧರ್ಮವನ್ನು ಬೋಧಿಸುವ ಶಾಸ್ತ್ರವನ್ನು ದುಷ್ಟರಿಗೆ ಉಪದೇಶಿಸಿದ. ಅವರಿಂದ ತತ್ವಜ್ಞಾನವನ್ನು ಉಳಿಸಿದ ವೇದವ್ಯಾಸ ಮತ್ತು ಬುದ್ಧಾವತಾರಗಳು, ಪರಶುರಾಮ ಮತ್ತು ರಾಜರಾಜೇಶ್ವರ ರೂಪ ಗಳಂತೆಯೇ ವ್ಯಾಸರಾಗಿ ಅವತರಿಸಿ ವೇದಗಳನ್ನು ವಿಭಾಗಿಸಿ ಅಜ್ಞಾನವೆಂಬ ಕತ್ತಲೆಯನ್ನು ಓಡಿಸಿ ತತ್ವಪ್ರಸಾರವನ್ನು ನಡೆಸಿದರೆ; ಜ್ಞಾನದ ದುರುಪಯೋಗ ವಾದಾಗ ದುಷ್ಟರೆಲ್ಲರೂ ಧರ್ಮಭ್ರಷ್ಟರಾಗುವಂತಹ ಮೋಹಕ ಶಾಸ್ತ್ರವನ್ನುಪದೇಶಿಸಿ ಅವರಿಂದ ವೇದಗಳನ್ನು ಸಂರಕ್ಷಿಸಿದ. ಬುದ್ಧನ ಉಪದೇಶವು ಸುಳ್ಳಲ್ಲ. ದುಷ್ಟರಿಗಷ್ಟೇ ಅಪಾರ್ಥವಾಯಿತು. ದೇವತೆಗಳು ಸರಿಯಾಗಿಯೇ ಅರಿತರು. ಇದಕ್ಕೆ ಶ್ರೀಮದಾ ಚಾರ್ಯರು 'ಪ್ರಶಾಂತವಿದ್ಯಾ' ಎಂದು ಹೆಸರಿಸಿದ್ದಾರೆ. ಅಂದಿನಿಂದಲೇ ಬುದ್ಧದರ್ಶನ ಆರಂಭವಾಯಿತು.

೨೫) **ಕಲ್ಕ್ಯವತಾರ:** ಜಗತ್ತಿನಾದ್ಯಂತ ಅಧರ್ಮವೇ ವಿಜೃಂಭಿಸುತ್ತಿರಲು ಭಗವಂತನು ಕಲ್ಕಿಯಾಗಿ ಅವತರಿಸಿ, ಎಲ್ಲವನ್ನೂ ಎಲ್ಲರನ್ನೂ ಧ್ವಂಸಗೊಳಿಸುತ್ತಾನೆ. ಧರ್ಮಸ್ಥಾಪಕನಾಗುತ್ತಾನೆ.

## ಭಗವದವತಾರದ ಉದ್ದೇಶಗಳು

* ಭಾಗವತ ಬೋಧಿಸಿದ ೨೫ ಅವತಾರಗಳಲ್ಲಿ ಕೇವಲ ಜ್ಞಾನಕಾರ್ಯಕ್ಕೋಸ್ಕರವೇ ಆದ ಅವತಾರಗಳು–

೧. ಕಪಿಲ ೨. ದತ್ತಾತ್ರೇಯ ೩. ನಾರಾಯಣ ೪. ಋಷಭ ೫. ಹಯಗ್ರೀವ ೬. ಮಹಿದಾಸ ೭. ವೇದವ್ಯಾಸ.

**'ದತ್ತವ್ಯಾಸಾದಿ ರೂಪೇಷು ಜ್ಞಾನಕಾರ್ಯಸ್ತಥಾ ಪ್ರಭುಃ'** — (ತಾ. ನಿ. ೨–೨೪)

* ದುಷ್ಟನಿಗ್ರಹಕ್ಕಾಗಿ ಆದ ಅವತಾರಗಳು–

೮. ಮತ್ಸ್ಯ ೯. ವರಾಹ ೧೦. ಯಜ್ಞ ೧೧. ನರಸಿಂಹ ೧೨. ಪರಶುರಾಮ ೧೩. ಕಲ್ಕಿ.

೧೪. ರಾಜರಾಜೇಶ್ವರನಾಗಿ ಜ್ಞಾನ–ಬಲ ಎರಡೂ ಕಾರ್ಯಗಳನ್ನು ಮಾಡಿದ್ದಾನೆ.

* ಕೇವಲ ಭಕ್ತರ ಅನುಗ್ರಹಕ್ಕಾಗಿ ಅವತರಿಸಿದ ರೂಪಗಳು–

೧೫. ವಾಸುದೇವ (ಧ್ರುವ) ೧೬. ಹರಿ (ಗಜೇಂದ್ರ) ೧೭. ವಾಮನ (ಇಂದ್ರ ಮತ್ತು ಬಲಿ).

* ದೇವತೆಗಳ ಹಿತಕ್ಕಾಗಿ ಆದ ಅವತಾರಗಳು–

೧೮. ಕೂರ್ಮ ೧೯. ಧನ್ವಂತರಿ. ೨೦. ವಿಷ್ಣು.

* ಭಗವಂತನ ಆವೇಶಾವತಾರಗಳು–

೨೧. ನರ ೨೨. ಪೃಥು.

* ೨೩. ಬುದ್ಧಾವತಾರ. ಇದು ಎಲ್ಲದಕ್ಕಿಂತಲೂ ವಿಲಕ್ಷಣವಾದ ಅವತಾರ. ಜ್ಞಾನಾವತಾರ ಎಂದೂ ಹೇಳಬಹುದು. ಮೋಹಾವತಾರವೆನ್ನಲೂ ಬಹುದು.

* ೨೪. ರಾಮ ೨೫. ಕೃಷ್ಣ –ಈ ಎರಡು ರೂಪಗಳಲ್ಲಿ ಬಲಕಾರ್ಯವು ನಡೆದಿದೆ. 'ರಾಮ ಕೃಷ್ಣಾದಿ ರೂಪೇಷು ಬಲಕಾರ್ಯೋ ಜನಾರ್ದನಃ' –ಎಲ್ಲಾ ಮೂಲ ಅವತಾರಗಳಿಗೂ ಐಕ್ಯವೇ ಇದೆ ಎಂದು ಚಿಂತಿಸಿದಾಗ ಎಲ್ಲಾ ಅವತಾರ ಗಳಲ್ಲಿಯೂ ಎಲ್ಲ ಕಾರ್ಯಗಳು ಇವೆ. ವ್ಯಕ್ತಾವ್ಯಕ್ತತೆಯನ್ನಿಟ್ಟುಕೊಂಡು ವಿಭಾಗ ಮಾಡಿದ್ದು.

ರಾಮ–ಕೃಷ್ಣ ಅವತಾರಗಳಲ್ಲಿ ಭಕ್ತರ ರಕ್ಷಣೆ, ದುಷ್ಟನಿಗ್ರಹ, ಗೀತೋಪದೇಶ, ತತ್ತ್ವೋಪದೇಶ ಎಲ್ಲವೂ ನಡೆದಿವೆ.

ಹೀಗೆ ಹರಿಯ ಅವತಾರಗಳು ಯಾವುವು. ಯಾವುವು ಹರಿಯ ಅವತಾರಗಳಲ್ಲ. ಹರಿಯ ಆವೇಶರೂಪಗಳಾವುವು? ಇಷ್ಟನ್ನು ಸರಿಯಾಗಿ ಅರಿತಾಗಲೇ ಮೋಕ್ಷ, ಹೊರತು ಬೇರೆ ರೀತಿಯಿಂದ ಸಾಧ್ಯವಿಲ್ಲ ಎನ್ನುತ್ತಾರೆ ಶ್ರೀಮದಾಚಾರ್ಯರು–

**ಅವತಾರಾನ್ ಹರೇರ್ಜ್ಞಾತ್ವಾ ನಾವತಾರಾ ಹರೇಶ್ಚ ಯೇ ।**
**ತದಾವೇಶಾಂಸ್ತಥಾ ಸಮ್ಯಗ್ ಜ್ಞಾತ್ವಾ ಮುಕ್ತಿರ್ನ ಚಾನ್ಯಥಾ ॥**

— (ತಾ.ನಿ. ೧–೮೧)

ಮುಂದೆ ಬ್ರಹ್ಮದೇವರ ಸೃಷ್ಟಿಯಾದ ಬಳಿಕ ಮುಂದಿನ ಸೃಷ್ಟಿ ಹೇಗಾಯಿತು ಎಂಬ ವಿಚಾರ, ವಿಷ್ಣುವಿನಿಂದ ಕೇಳಿದ 'ಚತುಃಶ್ಲೋಕೀಭಾಗವತ'ದ ವಿವರಣೆ ಎಲ್ಲವೂ ವಿಸ್ತಾರವಾಗಿದೆ. ದ್ವಿತೀಯ ಸ್ಕಂಧದ ಕೊನೆಯ ಅಧ್ಯಾಯದಲ್ಲಿ ಭಾಗವತದ ಹತ್ತು ಪುರಾಣಲಕ್ಷಣಗಳನ್ನು ತಿಳಿಸಿದ್ದಾರೆ. ಹತ್ತನೆಯದ್ದು ಆಶ್ರಯ –ಎಂದರೆ ಭಗವಂತ. ಹತ್ತನೆಯದ್ದನ್ನು ವಿಶೇಷವಾಗಿ ತಿಳಿಯಬೇಕೆಂಬ ದೃಷ್ಟಿಯಿಂದ ಒಂಭತ್ತು ಹೇಳಲ್ಪಟ್ಟಿವೆ. 'ದಶಮಸ್ಯ ವಿಶುದ್ಧ್ಯರ್ಥಂ ನವಾನಾಮಿಹ ಲಕ್ಷಣಂ ವರ್ಣಯಂತಿ' ಇತರ ಲಕ್ಷಣಗಳನ್ನು ಸಂಗ್ರಹವಾಗಿ ಹೇಳುತ್ತಾರೆ–

**ಅತ್ರ ಸರ್ಗೋ ವಿಸರ್ಗಶ್ಚ ಸ್ಥಾನಂ ಪೋಷಣಮೂತಯಃ ।**
**ಮನ್ವಂತರೇಶಾನುಕಥಾ ನಿರೋಧೋ ಮುಕ್ತಿರಾಶ್ರಯಃ ॥** — (೨–೧೦–೧)

೧. **ಸರ್ಗ** = ಜಡವಾದ ಸೂಕ್ಷ್ಮಪ್ರಕೃತಿಯಿಂದ ಆರಂಭಿಸಿ ಮಹತ್ತತ್ತ್ವ, ಅಹಂಕಾರತತ್ತ್ವ, ಪಂಚಭೂತಗಳು, ಇಂದ್ರಿಯಗಳು, ಶಬ್ದಾದಿ ವಿಷಯಗಳ ಸೃಷ್ಟಿ ಮತ್ತು ಬ್ರಹ್ಮಾಂಡದ ಸೃಷ್ಟಿಗೆ ಸರ್ಗ ಎಂದು ಹೆಸರು.

೨. **ವಿಸರ್ಗ** = ಬ್ರಹ್ಮಾಂಡಾಂತರ್ಗತನಾದ ವಿರಾಡ್ರೂಪಿಯಾದ ಭಗವಂತನ ದೆಸೆಯಿಂದ ನಡೆಯುವ ಜೀವ–ಜಡಗಳ ಸೃಷ್ಟಿ.

೩. **ಸ್ಥಾನ** = ವೈಕುಂಠನಾಮಕನಾದ ಶ್ರೀಹರಿಯು ದುಷ್ಟನಿಗ್ರಹದ ಮೂಲಕ ಶಿಷ್ಟರನ್ನು ಪರಿಪಾಲಿಸುವುದು. 'ಸ್ಥಿತಿಃ ವೈಕುಂಠವಿಜಯಃ'

೪. **ಪೋಷಣ** = 'ಪೋಷಣಂ ತದನುಗ್ರಹಃ' ಭಗವಂತನು ಮಾಡುವ ಅನುಗ್ರಹ.

೫. **ಮನ್ವಂತರ** = ಬೇರೆ ಬೇರೆ ಮನ್ವಂತರಗಳಲ್ಲಿ ಇರುವ ಸಜ್ಜನರಿಗೆ ಧಾರಕಗಳಾದ ಧರ್ಮಗಳ ವಿವರಣೆ.

೬. **ಊತಿ** = ಅನೇಕ ವಿಧ ಸೃಷ್ಟಿಗೆ ಬೇಕಾದ ಸಂಸ್ಕಾರಗಳು, ಅನಾದಿ ಕರ್ಮಗಳು.

೭. **ಈಶಕಥಾ** = ಮತ್ಸ್ಯಾದಿ ಅವತಾರಗಳಲ್ಲಿ ಭಗವಂತನು ಏನೇನು ಕಾರ್ಯಗಳನ್ನು ಮಾಡಿದ್ದಾನೆ ಎಂದು ವಿವರಿಸುವುದು.

೮. **ನಿರೋಧ** = ಪ್ರಳಯಕಾಲದಲ್ಲಿ ಜೀವರು ಪರಮಾತ್ಮನ ಉದರವನ್ನು ಪ್ರವೇಶಿಸಿ ನಿದ್ರಿಸುವುದು.

'ಅನುಪ್ರವಿಶ್ಯ ಪರಮಂ ಜೀವಸ್ಯ ಶಯನಂ ತು ಯತ್ । ..........
ಸನ್ನಿರೋಧ ಇತಿ ಪ್ರೋಕ್ತಃ..........॥

೯. **ಮುಕ್ತಿ** = ಸಂಸಾರಿ ಜೀವರು ಪ್ರಕೃತಿಯ ಸಂಪರ್ಕವನ್ನು ಕಳಚಿಕೊಂಡು ಜ್ಞಾನಾನಂದರೂಪದಿಂದ ಇರುವಿಕೆ.

೧೦. **ಆಶ್ರಯ** = ಭಗವಂತ.

## ಮೋಕ್ಷ ಎಂದರೇನು?

ನೈಜ ಸ್ವರೂಪದ ಅಭಿವ್ಯಕ್ತಿಯೇ ಮುಕ್ತಿ.

'ಮುಕ್ತಿರ್ಹಿತ್ವಾನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ'

"ಜೀವನು ತನ್ನದಲ್ಲವನ್ನು ಬಿಟ್ಟು ತನ್ನತನವನ್ನು ಹೊಂದುವುದೇ ಮುಕ್ತಿ".

ಶ್ರೀಮದಾಚಾರ್ಯರು ಇದರ ಬಗ್ಗೆ 'ಪ್ರಮಾದಾತ್ಮಕತ್ವಾತ್ ಬಂಧಸ್ಯ' ಎಂದು ಹೇಳಿದ್ದಾರೆ.

ಜೀವರೆಲ್ಲರೂ ತಮ್ಮದಲ್ಲದ್ದನ್ನು ತಮ್ಮ ಮೇಲೆ ಹೇರಿಕೊಂಡು ಬವಣೆಪಡುತ್ತಿದ್ದಾರೆ. ದುಃಖ, ಪ್ರೀತಿ, ರಾಗ, ದ್ವೇಷ ಇವೆಲ್ಲವೂ ನಮ್ಮ ಸ್ವರೂಪವಲ್ಲ. ಅಂತಃಕರಣದ ವಿಕಾರಗಳಿವು. ಇವುಗಳನ್ನೇ ನಮ್ಮದ್ದೆಂದು ಭಾವಿಸಿಕೊಂಡಿದ್ದೇವೆ. ಸಂಬಂಧವೇ ಇಲ್ಲದುದರ ಸಂಬಂಧವನ್ನು ಗಂಟುಹಾಕಿಕೊಂಡಿದ್ದೇವೆ. ನಿರಂತರ ಕಷ್ಟಭಾಗಿಗಳಾಗಿದ್ದೇವೆ. ಹುಚ್ಚರಾಗಿದ್ದೇವೆ. ಅತ್ಯಂತ ಹೀನ ಪರಿಸ್ಥಿತಿಯಲ್ಲಿದ್ದೇವೆ.

ಮೋಕ್ಷವೆಂದರೆ ಹೊಸದಾಗಿ ಪಡೆಯಬೇಕಾದುದೇನೂ ಇಲ್ಲ. ಇದ್ದದ್ದನ್ನೇ ಪಡೆಯುವುದು.

ಉದಾ: ಸ್ವಚ್ಛವಾದ ಬಟ್ಟೆಯೊಂದಿದೆ ಇದೇ ಬಟ್ಟೆಗೆ ಮಣ್ಣಿನ ಸಂಪರ್ಕವಾದಾಗ ಕೊಳಕಾಗಿ ಕಾಣಿಸುತ್ತದೆ. ಈ ಕೊಳಕಿನ ಬಟ್ಟೆಯನ್ನು ಕಂಡು 'ಬಟ್ಟೆ ಕಪ್ಪಾಗಿದೆ' ಎನ್ನುತ್ತೇವೆ. ಇಲ್ಲಿ ಕಪ್ಪಾಗಿರುವುದು ಯಾವುದು? ಬಟ್ಟೆಯೋ? ಅಲ್ಲವೇ ಅಲ್ಲ. ಬಟ್ಟೆಯು ಬಿಳಿಯಾಗಿಯೇ ಇದೆ. ಇಲ್ಲಿ ಕಪ್ಪಾಗಿರುವುದು ಬಟ್ಟೆಗಂಟಿದ ಮಣ್ಣು. ಇದನ್ನರಿಯದೆ ಬಟ್ಟೆಯನ್ನೇ ಕಪ್ಪು ಎನ್ನುತ್ತೇವೆ. ಬಟ್ಟೆಯಲ್ಲಿನ ಕೊಳೆಯನ್ನು ಹಾಗೆಯೇ ಬಿಟ್ಟರೆ ದುರ್ಗಂಧ, ಕ್ರಿಮಿಕೀಟಗಳು ಹುಟ್ಟಿಕೊಳ್ಳುತ್ತವೆ. ಬಟ್ಟೆ ತೊಳದರೆ ಇವುಗಳು ಬಾರವು. ಬಟ್ಟೆ ತೊಳೆದಾಗ ಬಟ್ಟೆ ತನ್ನ ಸಹಜವಾದ ಶುಭ್ರತೆಯನ್ನು ಪ್ರಕಟ ಪಡಿಸುತ್ತದೆ. ಇಲ್ಲಿ ಬಟ್ಟೆ ತೊಳೆದನಂತರ ಹೊಸದಾದ ಶುಭ್ರತೆ ಬಟ್ಟೆಗೆ ಬಂದದ್ದಲ್ಲ. ಮೊದಲೇ ಇದ್ದ ಶುಭ್ರತೆ ನೀರಿನಿಂದ ತೊಳೆದಾಗ ವ್ಯಕ್ತವಾಯಿತು. ಈ ಶುಭ್ರತೆಗೆ ಪ್ರತಿಬಂಧಕ ಕೊಳೆ.

ಬಟ್ಟೆಯಂತೆಯೇ ನಾವೆಲ್ಲರೂ ಶುಭ್ರ ಚೈತನ್ಯಸ್ವರೂಪಿಗಳಾಗಿದ್ದೇವೆ.

ಬಟ್ಟೆಗೆ ಹಿಡಿದ ಮಣ್ಣಿನಂತೆ ಪಂಚಭೂತಗಳೆಂಬ ಮಣ್ಣು ಜೀವರಿಗೆ ಅಂಟಿಕೊಂಡಿದೆ. ಇದರ ಸಂಪರ್ಕದಿಂದಾಗಿ ನಮ್ಮದ್ದೇ ಆದ ನಿಜಸ್ವರೂಪವನ್ನು ಕಾಣಲಾಗುತ್ತಿಲ್ಲ. ನಮ್ಮದ್ದಲ್ಲದ ವಿಕಾರರೂಪವನ್ನು ಕಾಣುತ್ತಿದ್ದೇವೆ. ಈ ವಿಕಾರರೂಪವೇ ನಮ್ಮ ಸಂಸಾರ. ಸಂಸಾರವೆಂಬ ಕಶ್ಮಲ ನಾಶವಾಗಬೇಕಿದ್ದರೂ ಜೀವರ ಹೃದಯದಲ್ಲಿ ಭಗವದ್ಭಕ್ತಿಯೆಂಬ ಜ್ಞಾನದ ಜಲಧಾರೆ ಹರಿಯಬೇಕು. ಹರಿಯ ಅರಿವೆಂಬ ಪನ್ನೀರಿನ ಅಭಿಷೇಕ ಜೀವನಿಗಾಗಬೇಕು ಇದರ ಮೂಲಕ ಸಂಸಾರವೆಂಬ ಕಶ್ಮಲ ತೊಳೆದುಹೋಗಿ ನೈಜ ಸ್ವರೂಪ ಪ್ರಕಟಗೊಳ್ಳುತ್ತದೆ.

**'ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ'**

ತಾನು ತಾನಾಗುವುದೇ ಮೋಕ್ಷ ಹೊರತು, ಬ್ರಹ್ಮಭಾವವನ್ನು ಹೊಂದುವುದೂ ಮೋಕ್ಷವಲ್ಲ. ಹೀಗೆ ತಿಳಿದಾಗಲೇ ಭಗವಂತನ ಬಗ್ಗೆ ಸರಿಯಾದ ಜ್ಞಾನ ಬರಲು ಸಾಧ್ಯ. ಇಂತಹ ಅನೇಕ ತತ್ವಸ್ವರೂಪಗಳನ್ನು ವ್ಯಾಸರು ನಮಗೆ ನೀಡಿ ಉಪಕರಿಸಿ ದ್ದಾರೆ.

ಭಾಗವತದಲ್ಲಿ ಒಂಭತ್ತರ ಬಗ್ಗೆ ವಿಸ್ತಾರವಾಗಿ ವಿವರಿಸಲಾಗಿದೆ. ಒಂಭತ್ತು ವಿಷಯಗಳೂ ಹತ್ತನೆಯ ಭಗವಂತನಿಗಾಗಿ. ಭಗವಂತನ ಸರಿಯಾದ ಅರಿವು ಬರಬೇಕಿದ್ದರೆ ಒಂಭತ್ತು ಸರಿಯಾಗಿ ತಿಳಿಯಬೇಕು. ಜೀವ–ಜಡಗಳ ಸೃಷ್ಟಿ. ಪರಮಾತ್ಮನ ವ್ಯಾಪಾರವನ್ನು ಸರಿಯಾಗಿ ತಿಳಿದಾಗ ನಮಗೆ 'ನಾನು ಯಾರು?' ಎಂಬುದು ತಿಳಿಯುತ್ತದೆ. 'ದಾಸೋಽಹಂ' ಎಂಬ ಪ್ರಜ್ಞೆ ಜಾಗೃತವಾದಾಗ ಬಂಧನವು ಪರಿಹಾರವಾಗುತ್ತದೆ ಎಂಬಲ್ಲಿಗೆ ದ್ವಿತೀಯ ಸ್ಕಂಧವು ಲಕ್ಷ್ಮೀಹಯಗ್ರೀವನಿಗೆ ಸಮ ರ್ಪಿತವಾಯಿತು.

* * *

# ಅಥ ತೃತೀಯ ಸ್ಕಂಧಃ

## ಸತ್ಯಸಂಧ ವಿದುರ

ಮೂರನೇ ಸ್ಕಂಧದ ಆರಂಭದಲ್ಲಿ ನೀತಿಪ್ರಜ್ಞನಾದ ವಿದುರನ ಉಲ್ಲೇಖವಿದೆ ಧೃತರಾಷ್ಟ್ರನು ಪುತ್ರವ್ಯಾಮೋಹಕ್ಕೆ ಸಿಕ್ಕಿ ಬಿದ್ದು ಪಾಂಡವರಿಗೂ ಅನ್ಯಾಯಮಾಡತೊಡಗಿದಾಗ ಇದನ್ನು ನೋಡಲಾಗದೆ ಯುದ್ಧಕ್ಕೆ ಮುನ್ನವೇ ವಿದುರ ತೀರ್ಥಯಾತ್ರೆಗೆ ಹೊರಟ.

ಮಕ್ಕಳ ವ್ಯಾಮೋಹದ ಬಲೆಗೆ ಸಿಕ್ಕಿಬಿದ್ದ ಧೃತರಾಷ್ಟ್ರನು ಪಾಂಡವರಿಗೆ ಬಹಳ ಅನ್ಯಾಯಮಾಡಿದ ಪಾಂಡವರನ್ನು ಅರಗಿನ ಮನೆಯಲ್ಲಿ ಸುಡಲು ಪ್ರಯತ್ನಿಸಿದ. ಸಭೆಯಲ್ಲಿ ದುಶ್ಶಾಸನನು ಏಕವಸ್ತ್ರಳಾದ ದ್ರೌಪದಿಯನ್ನು ಸೆಳೆದು ತಂದಾಗ, ಅವಳು ಕಣ್ಣೀರಿಟ್ಟರೂ ತಡೆಯುವ ಸೌಜನ್ಯವನ್ನು ತೋರಲಿಲ್ಲ. ಕಪಟದ್ಯೂತವನ್ನು ತಡೆಯಲಿಲ್ಲ. ವನವಾಸಮಾಡಿ ಬಂದರೂ ರಾಜ್ಯ ಕೊಡಲಿಲ್ಲ. ಸಾಕ್ಷಾತ್ ಶ್ರೀಕೃಷ್ಣಪರಮಾತ್ಮನೇ ಬಂದು ರಾಜ್ಯ ಕೊಡಲು ಹೇಳಿದಾಗಲೂ ಕೇಳಲಿಲ್ಲ.

ಧೃತರಾಷ್ಟ್ರನ ದೌರ್ಬಲ್ಯ ದುರ್ಯೋಧನನ ದುರಹಂಕಾರ ಹಠಮಾರಿತನಗಳನ್ನು ಮನಗಂಡ ವಿದುರನು ಧೃತರಾಷ್ಟ್ರನಿಗೆ ಬಗೆಬಗೆಯಾಗಿ ಉಪದೇಶಿಸಿದ. ಧೃತರಾಷ್ಟ್ರ! ಶ್ರೀಕೃಷ್ಣನ ಆದೇಶದಂತೆ ನೀನು ಧರ್ಮರಾಜನಿಗೆ ಅವನ ಹಕ್ಕಿನ ರಾಜ್ಯವನ್ನು ಕೊಡಬೇಕು. ಆ ಧರ್ಮರಾಜನ ಜತೆಯಲ್ಲಿ ಭೀಮಸೇನನಿದ್ದಾನೆ. ಭೀಮಸೇನನನ್ನೆದುರಿಸುವ ಶಕ್ತಿ ಯಾರಿಗೂ ಇಲ್ಲ. ಶ್ರೀಭೀಮಸೇನನ ಹಿಂದೆ ಶ್ರೀಕೃಷ್ಣನಿದ್ದಾನೆ. ಭಗವಂತನಿಂದ ವಿಮುಖರಾದವರು ಯಾರೇ ಇರಲಿ ಅವರನ್ನು ನಾವು ದೂರವಿಡಬೇಕು. ದುರ್ಯೋಧನನು ಪರಮಾತ್ಮನಿಂದ ವಿಮುಖನಾಗಿದ್ದಾನೆ. ಆದ್ದರಿಂದ ಮಗನೆಂಬ ಮೋಹವನ್ನು ತೊರೆದು ಕುಲಕಂಟಕನಾದ ದುರ್ಯೋಧನನನ್ನು ಹೊರಗೆ ಅಟ್ಟು. ಶ್ರೀಕೃಷ್ಣನ ಮಾತಿಗೆ ಬೆಲೆ ಕೊಡು! ಧರ್ಮರಾಜನಿಗೆ ರಾಜ್ಯವನ್ನು ಒಪ್ಪಿಸು ಎಂದು ತಿಳಿಹೇಳಿದ.

ಒಳಿಯಲ್ಲಿಯೇ ನಿಂತು ವಿದುರನ ಮಾತನ್ನು ಕೇಳಿಸಿಕೊಂಡುಬಂದ ದುರ್ಯೋಧನನು ಕೋಪದಿಂದ ಸಿಡಿದೆದ್ದು ಬಂದ. ನೀಚ ನುಡಿಗಳಿಂದ ಧಿಕ್ಕರಿಸಿದ

ಕ ಏನಮತ್ರೋಪಜುಹಾವ ಜಿಹ್ಮಂ ದಾಸ್ಯಾಃ ಸುತಂ ಯದ್ಬಲಿನೈವ ಪುಷ್ಟಃ ।
ತಸ್ಮಿನ್ಪ್ರತೀಪಃ ಪರಕೃತ್ಯ ಆಸ್ತೇ ನಿರ್ವಾಸ್ಯತಾಮಾಶು ಪುರಾಚ್ಛ್ವಸಾನಃ ॥

— (೩-೧-೧೫)

"ಕಪಟಿಯಾದ ಈ ದಾಸೀಪುತ್ರನನ್ನು ಇಲ್ಲಿಗೆ ಕರೆದವರಾರು? ನಾವು ಕೊಟ್ಟ ಅನ್ನ ಉಂಡು ಬೆಳೆದು ನಮಗೇ ವಿರೋಧ ಮಾಡುತ್ತಿದ್ದಾನೆ. ಪಾಂಡವರ ಚಾಕರಿ ಮಾಡುತ್ತಿದ್ದಾನೆ. ಇವನನ್ನು ಹೊರಗೆ ಅಟ್ಟಿರಿ!! ಹೊಡೆಯಿರಿ! ಉಸಿರು ಮಾತ್ರ

ಉಳಿಯುವಷ್ಟು ಹಿಂಸಿಸಿರಿ!'' ಎಂದ ಹೀಗೆ ಸಾತ್ವಿಕ ವಿದುರನ ವಿಷಯದಲ್ಲಿ ಅತ್ಯಂತ ನೀಚ ವಚನಗಳನ್ನಾಡಿದ.

ದುರ್ಯೋಧನನ ಕಟುನಿಂದನೆಯಿಂದ ವಿದುರನು ತನ್ನ ಮನಃಸ್ವಾಸ್ಥ್ಯವನ್ನು ಕಳೆದುಕೊಳ್ಳಲಿಲ್ಲ. ಭಗವಂತನ ಮಾಯೆಯನ್ನು ಕಂಡು ವಿಸ್ಮಿತನಾಗಿ ನಗುತ್ತಲೇ ದ್ವಾರದಲ್ಲಿ ಧನುಸ್ಸನ್ನಿಟ್ಟು ತೀರ್ಥಯಾತ್ರೆಗೆ ನಡೆದ.

ಅನ್ಯಾಯ ನಡೆದಾಗ ನಾವು ತಾಟಸ್ಥ್ಯವನ್ನು ಹೊಂದಬಾರದು. ಅಥವಾ ಅಡ್ಡಗೋಡೆಯ ಮೇಲೆ ದೀಪವಿಟ್ಟಂತೆ ಮಾತನಾಡಬಾರದು. ಅನ್ಯಾಯದ ವಿರುದ್ಧ ಸೆಣಸಾಡಬೇಕು. ಎಲ್ಲಾ ಪ್ರಸಂಗಗಳಲ್ಲಿಯೂ ಈ ಎದೆಗಾರಿಕೆಯನ್ನು ವಿದುರನೊಬ್ಬನೇ ತೋರಿಸಿದ ಆದ್ದರಿಂದಲೇ ಶ್ರೀಕೃಷ್ಣನು ಹಸ್ತಿನಾವತಿಗೆ ಹೋದಾಗ ಭೀಷ್ಮದ್ರೋಣಾದಿಗಳ ಆತಿಥ್ಯಕ್ಕೆ ಬೆಲೆಕೊಡದೆ ವಿದುರನ ಆತಿಥ್ಯವನ್ನೇ ಸ್ವೀಕರಿಸಿದ. ಬಾಹ್ಯವಾದ ಸಂಭ್ರಮ ಸಡಗರಗಳಿಗಿಂತ ಹಾರ್ದಿಕ ಸಡಗರಕ್ಕೆ ಭಗವಂತ ಮೆಚ್ಚುತ್ತಾನೆ. ಭೀಷ್ಮ ದ್ರೋಣಾದಿಗಳು ಭಗವದ್ವೇಷಿಯಾದ ದುರ್ಯೋಧನನ ಅನುಬಂಧಿಗಳಾಗಿದ್ದಾರೆ. ಸತ್ಯ–ಅಸತ್ಯ, ನ್ಯಾಯ–ಅನ್ಯಾಯಗಳ ಸಂದರ್ಭದಲ್ಲಿ ತಾಟಸ್ಥ್ಯ(ನ್ಯೂಟ್ರಲ್ ಪಾಲಿಸಿ) ವನ್ನು ವಹಿಸಬಾರದು. ಅಧರ್ಮ ಅನ್ಯಾಯಗಳನ್ನು ಖಂಡಿಸಬೇಕು. ದ್ರೌಪದಿಯ ಮಾನಾಪಹಾರ, ಮತ್ತಿತರ ಸಂದರ್ಭಗಳಲ್ಲಿ ಭೀಷ್ಮಾದಿಗಳು ಮೌನವಹಿಸಿದರು. ಆದರೆ ವಿದುರನೊಬ್ಬನೇ ತಪ್ಪೆಂದು ಸಾರಿ ಹೇಳಿದ. ಇದೆಲ್ಲವನ್ನೂ ಗಮನಿಸಿಯೇ ಹಿಂದೆ ಶ್ರೀಕೃಷ್ಣ ವಿದುರನ ಮನೆಗೆ ಹೋಗಿದ್ದು.

## ಮೈತ್ರೇಯರ ಉಪದೇಶ

ಅನಂತರ ವಿದುರನು ಅನೇಕ ತೀರ್ಥಕ್ಷೇತ್ರಗಳನ್ನು ಸಂದರ್ಶಿಸುತ್ತಾ ಪ್ರಭಾಸಕ್ಕೆ ಬಂದನು. ಅಲ್ಲಿ ಬ್ರಾಹ್ಮಣರಿಂದ ಮುಂದಾಗುವ ಯದುಕುಲಕ್ಷಯವನ್ನು ಸಂಕ್ಷಿಪ್ತವಾಗಿ ತಿಳಿದುಕೊಂಡನು. ಮುಂದೆ ಸಂಚರಿಸುತ್ತಾ ಯಮುನಾತೀರದಲ್ಲಿ ಉದ್ಧವನನ್ನು ಕಂಡ. ಭಗವದ್ಭಕ್ತರಾದ ವಿದುರ ಮತ್ತು ಉದ್ಧವರು ಪರಸ್ಪರ ಒಬ್ಬರನ್ನೊಬ್ಬರು ಆಲಿಂಗಿಸಿಕೊಂಡರು. ಬಳಿಕ ಉದ್ಧವರ ಬಳಿ ವಿದುರನು 'ಭಗವತ್ತತ್ವವನ್ನು ಉಪದೇಶಿಸಿ'ರೆಂದು ಕೇಳಿದಾಗ ಮೈತ್ರೇಯರ ಬಳಿ ಹೋಗಲು ಸಲಹೆ ನೀಡಿದರು. ಮೈತ್ರೇಯ ಉದ್ಧವರಿಗೆ ಭಗವಂತನು ಸ್ವತಃ ತನ್ನ ತತ್ವವನ್ನು ಉಪದೇಶಿಸಿ, ಮೈತ್ರೇಯರಿಗೆ "ನೀವು ವಿದುರನಿಗೆ ಈ ತತ್ವವನ್ನುಪದೇಶಿಸಿರಿ!'' ಎಂದು ಆದೇಶ ನೀಡಿದ್ದನು. ಇದನ್ನು ಉದ್ಧವನು ತಿಳಿಸಿದಾಗ ಗಂಗಾತೀರ ನಿವಾಸಿಗಳಾದ ಮೈತ್ರೇಯರನ್ನು ಬಳಿಗೆ ವಿದುರನು ಬಂದವ ಮೈತ್ರೇಯರನ್ನು ಚೆನ್ನಾಗಿ ಸೇವಿಸಿ, 'ಉಪದೇಶಿಸಿರಿ!' ಎಂದು ವಿಜ್ಞಾಪಿಸಿಕೊಂಡ. ಮೈತ್ರೇಯರ ಬಳಿ ವಿದುರನು ಪ್ರಶ್ನಿಸುತ್ತಾನೆ.

ಸುಖಾಯ ಕರ್ಮಾಣಿ ಕರೋತಿ ಲೋಕೋ
ನ ತೈಃ ಸುಖಂ ವಾನ್ಯದುಪಾರಮಂ ವಾ ।
ವಿಂದೇತ ಭೂಯಸ್ತತ ಏವ ದುಃಖಂ
ಯದತ್ರ ಯುಕ್ತಂ ಭಗವಾನ್ ವದೇನ್ನಃ — (೩-೫-೨)

"ಮೈತ್ರೇಯರೇ! ಜಗತ್ತಿನಲ್ಲಿ ಜನರೆಲ್ಲರೂ ಸುಖವನ್ನು ಬಯಸುತ್ತಾ ಕಷ್ಟಕರ್ಮ ಗಳನ್ನು ಮಾಡುತ್ತಿದ್ದಾರೆ. ಎಲ್ಲರೂ ಸುಖಕ್ಕಾಗಿಯೇ ಕಷ್ಟಪಡುತ್ತಾರೆ ಸುಖಪಡೆದ ಬಳಿಕ ಪುನಃ ಕಷ್ಟಕ್ಕೇ ಗುರಿಯಾಗುತ್ತಾರೆ. ಸುಖದ ಹಿಂದೆಯೇ ದುಃಖವಿದೆ ಸುಖದ ಮೊದಲೂ ದುಃಖ ಅನಂತರವೂ ದುಃಖ ದುಃಖದ ಸಂಪುಷ್ಟದಲ್ಲಿ ಸುಖವಿದೆ. ಇಂತಹ ಸುಖ ಯಾರಿಗೆ ಬೇಕು? ಶಾಶ್ವತ ಸುಖದ ಬಗ್ಗೆ ವಿವರಿಸಿರಿ!!!" ಎನ್ನುತ್ತಾನೆ

ಇದಕ್ಕೆ ಉತ್ತರವಾಗಿ ಮೈತ್ರೇಯರು ಭಗವಂತನ ಮಹಿಮಾ, ಜಗತ್ತಿನ ಸೃಷ್ಟಿ, ದೇವತೆಗಳ ಸೃಷ್ಟಿಯನ್ನು ವಿಸ್ತಾರವಾಗಿ ತಿಳಿಸುತ್ತಾರೆ.

ಬಿಡಿಬಿಡಿಯಾದ ಪ್ರಪಂಚದ ರಚನೆಯನ್ನು ಹೇಗೆ ಮಾಡುವುದೆಂದು ದೇವತೆ ಗಳೆಲ್ಲರೂ ಚಿಂತಾಕ್ರಾಂತರಾಗಿ ಪುನಃ ಭಗವಂತನ ಬಳಿಯೇ ಪ್ರಾರ್ಥಿಸಲು, ಅವರ ಪ್ರಾರ್ಥನೆಯಂತೆ ಲಕ್ಷ್ಮೀಸಹಿತನಾದ ನಾರಾಯಣನು ದೇವತೆಗಳ ಒಳಗೆ ಪ್ರವೇಶ ಮಾಡಿ ವ್ಯವಸ್ಥಿತವಾದ ಪ್ರಪಂಚದ ರಚನೆಯನ್ನು ಮಾಡಿದ. ಹೆಜ್ಜೆಹೆಜ್ಜೆಗೂ ಹರಿಯ ಆಸರೆ, ಅನುಗ್ರಹಗಳನ್ನು ಹೊಂದಿ ದೇವತೆಗಳು ಪ್ರಪಂಚವನ್ನು ಜೋಡಿಸಿದರೇ ವಿನಾ ಸಹಜಶಕ್ತಿಯಿಂದಲ್ಲ. ದೇವತೆಗಳಿಗೆ, ಜಡಗಳಿಗೆ ಎಲ್ಲದಕ್ಕೂ ಶಕ್ತಿದಾತನಾಗಿ ಭಗವಂತನು ವಿಶ್ವದ ಅದ್ಭುತ ವ್ಯಾಪಾರಗಳನ್ನೆಲ್ಲಾ ನಿರ್ವಹಿಸುತ್ತಿ ದ್ದಾನೆ.

## ವಿದುರನ ಪ್ರಶ್ನೆ, ಮೈತ್ರೇಯರ ಸಮಾಧಾನ:

ಮೈತ್ರೇಯರು ವಿದುರನಿಗೆ ಭಗವತ್ಸೃಷ್ಟಿಯ ವೈಶಿಷ್ಟ್ಯವನ್ನು ನಿರೂಪಿಸುವಾಗ ಜಿಜ್ಞಾಸುವಾದ ವಿದುರನು ಪ್ರಶ್ನೆಯೊಂದನ್ನು ಕೇಳಿದ.

ಮೈತ್ರೇಯರೇ! ಭಗವಂತ ಸೃಷ್ಟಿಮಾಡಿದನೆಂದರೆ ಅವನಿಗೆ ಪ್ರಕೃತಿಯ ಸಂಬಂಧ ಬಂದಂತಾಯಿತಲ್ಲವೇ? ಸರ್ವಜ್ಞನಾದ ಪರಿಪೂರ್ಣಾನಂದಸಾಗರನಾದ ಇವನಿಗೇಕೆ ಈ ಸೃಷ್ಟಿಯ ಒಡನಾಟ. ವ್ಯರ್ಥವಾಗಿ ಭೌತಿಕವಸ್ತುಗಳ ಸಂಪರ್ಕ ಬೆಳೆಸಿಕೊಳ್ಳು ವುದು– ಇಷ್ಟಪಟ್ಟು ಮುಳ್ಳಿನಿಂದ ಚುಚ್ಚಿಕೊಂಡವನಂತಾಗಲಿಲ್ಲವೇ? ವಿವೇಕಿಯು ಅನರ್ಥಕ್ಕೆ ಗುರಿಯಾಗುವನೇ?

**ಭಗವಾನೇಕ ಏವೈಷ ಸರ್ವಕ್ಷೇತ್ರೇಷ್ವವಸ್ಥಿತಃ ।**
**ಅಮುಷ್ಯ ದುರ್ಭಗತ್ವಂ ವಾ ಕ್ಲೇಶೋ ವಾ ಕರ್ಮಭಿಃ ಕುತಃ ॥** — (೩–೭–೬)

ಸೃಷ್ಟಿಯೂ ಒಂದು ಆಟ ಎನ್ನುವುದೂ ಎಷ್ಟು ಸರಿ!! ಕಂಟಕಗಳಿಂದ ಘಾಸಿ ಪಡಿಸಿಕೊಳ್ಳುವುದೂ ಆಟವಾಗಬಲ್ಲುದೇ? ದೋಷಯುಕ್ತ ಪದಾರ್ಥಗಳ ಸಂಪರ್ಕ ಪಡೆದು ಅವುಗಳಿಂದ ಹಿಂಸೆ ಅನುಭವಿಸುವುದೂ ಆಟವೇ? ಆಟವೆಂದು ಅಂಗೀಕರಿಸಿದರೂ ಪರಿಪೂರ್ಣನಿಗೆ ಇದು ಹೊಂದೀತೇ?

ಆಟವು ಆನಂದಕ್ಕಾಗಿ, ಭಗವಂತನ ಸೃಷ್ಟಿಯು ಆಟವೆಂದಾದರೆ ಆಟಕ್ಕೆ ಮುನ್ನ ಆನಂದದ ಕೊರತೆ ಎದ್ದುಕಾಣುವುದಿಲ್ಲವೇ?

ಪ್ರಪಂಚವು ಕಾಲ್ಪನಿಕ. ಆದ್ದರಿಂದ ದುಃಖವೂ ಕಾಲ್ಪನಿಕ. ದುಃಖ ವಾಸ್ತವಿಕವಾಗಿಲ್ಲ ಎಂದೂ ಹೇಳಲಾಗದು 'ಯಾಥಾತಥ್ಯತೋ ಅರ್ಥಾನ್ ವ್ಯಧದಾತ್ ಶಾಶ್ವತೀಭ್ಯಃ ಸಮಾಭ್ಯಃ' ಮುಂತಾದ ಶ್ರುತಿಗಳು ಜಗತ್ಸತ್ಯತ್ವವನ್ನು ಸಾರುತ್ತಿವೆ. ಹೀಗಿದ್ದರೂ ಸತ್ಯ ಜಗತ್ತಿನಲ್ಲಾಗುವ ದುಃಖಾದಿ ಸಂಪರ್ಕಗಳು ಭಗವಂತನಿಗಿದೆ ಎಂದಾಯಿತಲ್ಲವೇ?

ಮೈತ್ರೇಯರ ಉತ್ತರ–

ವಿದುರನೇ! ಭಗವಂತನು ಅಣುರೇಣು–ತೃಣ–ಕಾಷ್ಠಪರಿಪೂರ್ಣನಾಗಿದ್ದರೂ ಅವುಗಳ ಲೇಪ ಇವನಿಗಿರುವುದಿಲ್ಲ.

ನಾವೆಲ್ಲರೂ ಒಂದು ಸಣ್ಣ ಸಮಾರಂಭ ನಡೆಸಲು Tension ಮಾಡಿಕೊಳ್ಳುತ್ತೇವೆ. ಜಗತ್ತಿನ ಸೃಷ್ಟಿ ರಕ್ಷಣೆಯ ಜವಾಬ್ದಾರಿ ಹೊತ್ತ ಭಗವಂತ ಎಷ್ಟು ಕಷ್ಟಪಡಬಹುದು!! ಇಂತೆಲ್ಲಾ ಭಾವಿಸಬಾರದು.

ನಮಗೆ ಕಷ್ಟವಾಗಲು ಕಾರಣ ಪರಾಧೀನತೆ. ನಮ್ಮ ಇಚ್ಛೆಗನುಗುಣವಾಗಿ ವಸ್ತುಗಳು ವ್ಯಕ್ತಿಗಳು ದೊರೆಯದಿದ್ದಾಗ ಉದ್ವೇಗಕ್ಕೆ ಬಲಿಯಾಗುತ್ತೇವೆ. ಎಲ್ಲ ವಿಷಯದಲ್ಲಿಯೂ ನಾವು ಅಪರಿಪೂರ್ಣರು. ಅಸ್ವತಂತ್ರರು. ನಾವು ಹೇಳಿದಂತೆ ಮತ್ತೊಬ್ಬ ನಡೆಯದಿದ್ದಾಗ ಉದ್ವಿಗ್ನರಾಗುತ್ತೇವೆ. ಪೂರ್ಣತೆ ಇದ್ದಲ್ಲಿ ಉದ್ವಿಗ್ನತೆಯೇ ಇಲ್ಲ.

ಭಗವಂತ ನಮ್ಮಂತೆ ಅಲ್ಲ. ಸರ್ವಾಂತರ್ಯಾಮಿ, ಸರ್ವಪ್ರೇರಕ, ಸರ್ವಸ್ವತಂತ್ರ. ಪ್ರತಿಯೊಂದು ವಸ್ತುವನ್ನು ಪ್ರತಿಯೊಬ್ಬ ವ್ಯಕ್ತಿಯನ್ನು ನಿಯಂತ್ರಿಸುವ ಶಕ್ತಿ ಭಗವಂತನಿಗಿದೆ. ಅವನಿಚ್ಛೆಗೆ ವಿರುದ್ಧವಾಗಿ ಎಂದೂ ಯಾವ ವಸ್ತುವೂ ಆಚೆ ಈಚೆ ಚಲಿಸದು.

ಜೈಲಿನಲ್ಲಿ ಖೈದಿಗಳೂ ಇದ್ದಾರೆ. ಅಧಿಕಾರಿಯೂ ಇದ್ದಾನೆ. ಒಂದೇ ಜೈಲಿನಲ್ಲಿ ಇಬ್ಬರೂ ಇದ್ದರೂ. ಖೈದಿಗಳು ದುಃಖಭಾಗಿಗಳು. ಅಧಿಕಾರಿಗಳು ನಿರ್ದುಃಖರು. ನಿಯಂತ್ರಿಸುವ ಅಧಿಕಾರಿ ಸುಖವಾಗಿಯೇ ಇರುತ್ತಾನೆ. ಅದರಂತೆ ಜಗತ್ತೆಂಬ ಜೈಲಿನಲ್ಲಿ ಜೀವರೂ ಇದ್ದಾರೆ. ಭಗವಂತನೂ ಇದ್ದಾನೆ. ಅಸ್ವತಂತ್ರರಾದ್ದರಿಂದ ಜೀವರು ದುಃಖಭಾಗಿಗಳು. ಸರ್ವಸ್ವತಂತ್ರನಾದ್ದರಿಂದ ಹರಿಯು ನಿರ್ದುಃಖಿ.

ಇದನ್ನು ಸರಿಯಾಗಿ ಅರಿತುಕೊಳ್ಳಬೇಕು. 'ಅಯ್ಯೋ, ಭಗವಂತನೂ ನಮ್ಮೊಟ್ಟಿಗೇ ಇದ್ದು ಎಷ್ಟು ಕಷ್ಟಪಡುತ್ತಿದ್ದಾನಲ್ಲಾ ಪಾಪ! ಎಂಬ ಕನಿಕರ ಬೇಡ. ನಮ್ಮೊಟ್ಟಿಗಿದ್ದರೂ ನಿರ್ಲೇಪನಾಗಿದ್ದಾನಲ್ಲ, ಎಂತಹ ಅದ್ಭುತ ಶಕ್ತಿ ಎಂದರಿತು ಭಕ್ತಿಯನ್ನು ಮಾಡಬೇಕು. ಇದೇ ಮುಕ್ತಿಗೆ ಸೋಪಾನ.

ಪ್ರಾಕೃತಿಕವಾದ ಸುಖದುಃಖಗಳೆಲ್ಲವೂ ಜೀವನಿಗೆ ಹೊರತು ಪರಮಾತ್ಮನಿಗಲ್ಲ. ನಮಗೆ ಇದ್ದದ್ದೂ ತೋರುತ್ತದೆ. ಇಲ್ಲದಿರುವುದೂ ತೋರುತ್ತದೆ. ಪರಮಾತ್ಮನ ಸೊತ್ತುಗಳನ್ನೆಲ್ಲಾ ತನ್ನದೆಂದು ಭ್ರಮಿಸುತ್ತಾನೆ. ಹಮ್ಮಿನಿಂದ ಸ್ವತಂತ್ರನೆಂದು ಬೀಗುತ್ತಾನೆ. ತನ್ನಲ್ಲಿರದ ಸ್ವಾತಂತ್ರ್ಯವನ್ನು, ತನ್ನದಲ್ಲದ ವಸ್ತುಗಳನ್ನು ತನ್ನದ್ದೆಂದು

ಭ್ರಮಿಸಿದ್ದಾನೆ, ತನ್ನಲ್ಲಿರುವ ದುಃಖವನ್ನೂ ತಿಳಿದಿರುತ್ತಾನೆ. ಈ ದುಃಖವು ಅನುಭವಸಿದ್ಧವಾದ್ದರಿಂದ ಕಾಲ್ಪನಿಕವೆನ್ನಲಾಗದು ಸ್ವಾತಂತ್ರ್ಯವು ಜೀವನಲ್ಲಿ ಕಲ್ಪಿತ. ಏಕೆಂದರೆ ತಾನು ಬಯಸಿದ ಇಷ್ಟವನ್ನಾಗಲೀ ಬಯಸದ ಕಷ್ಟವನ್ನಾಗಲೀ ಪಡೆಯಲಾರ ತಡೆಯಲಾರ. ದುಃಖವನ್ನು ನಿರಂತರ ಅನುಭವಿಸುತ್ತಿದ್ದಾನೆ. ಆದ್ದರಿಂದ ಇದು ಸತ್ಯ. ಆದರೆ ಇದು ನಿತ್ಯವಲ್ಲ.

ಕನ್ನಡಿಯ ಮುಂದೆ ದಾಸವಾಳದ ಹೂವನ್ನು ಇಟ್ಟಾಗ ಕನ್ನಡಿಯೂ ಕೆಂಪಾಗಿ ತೋರುತ್ತದೆ. ಅದು ಸುಳ್ಳಲ್ಲ. ಆದರೆ ತಾತ್ಕಾಲಿಕ. ಅದರಂತೆ ಸಂಸಾರಾವಸ್ಥೆಯಲ್ಲಿ ಜೀವನಿಗಾಗುವ ದುಃಖ ಕನ್ನಡಿಯಲ್ಲಿ ತೋರುವ ಕೆಂಪು ಬಣ್ಣದಂತೆ ತಾತ್ಕಾಲಿಕ. ಸುಳ್ಳೂ ಅಲ್ಲ. ಕನ್ನಡಿಯ ಸಹಜಧರ್ಮವೂ ಅಲ್ಲ ಸಂಸಾರದಲ್ಲಿ ನಾವು ಅನುಭವಿಸುವ ದುಃಖವನ್ನು ತಾತ್ಕಾಲಿಕವಾಗಿ ಸತ್ಯವಾಗಿದ್ದರೂ ನನ್ನ ಸಹಜಧರ್ಮವಲ್ಲ ಎಂದರಿತು ನಮ್ಮ ಸಹಜಧರ್ಮದ ಅಭಿವ್ಯಕ್ತಿಗೆ ಪ್ರಯತ್ನಿಸಬೇಕು ಭಗವತ್ಸೇವೆ, ಭಗವದ್ಭಕ್ತಿಗಳಿಂದ ಸ್ವರೂಪಾನಂದ ಅಭಿವ್ಯಕ್ತವಾಗುವುದು. ನಿರ್ದುಃಖನಾದವ ಶ್ರೀಹರಿಯೊಬ್ಬನೇ. ಜೀವರೆಲ್ಲರೂ ದುಃಖಿಗಳು ಎಂಬ ಎಚ್ಚರವು ದೃಢವಾದಾಗ ಸ್ವರೂಪಾನಂದವು ಭಗವದನುಗ್ರಹದಿಂದ ದೊರೆಯುತ್ತದೆ ಎಂದು ಮೈತ್ರೇಯರು ವಿದುರನಿಗೆ ಉಪದೇಶಿಸಿದರು. ಮೈತ್ರೇಯರ ಉತ್ತರದಿಂದ ವಿದುರನು 'ನನಗೆ ಪೂರ್ಣ ಸಮಾಧಾನವಾಯಿತೆಂ'ದ.

ಮುಂದೆ ಮೈತ್ರೇಯರು ವಿದುರನಿಗೆ ವಿಶದವಾಗಿ ಪಾದ್ಮಸೃಷ್ಟಿಯನ್ನು ಉಪದೇಶಿಸುತ್ತಾರೆ.

ಬ್ರಹ್ಮಾಂಡ ಸೃಷ್ಟಿಯ ಮುನ್ನ ಪ್ರಕೃತಿಯು ಭಗವಂತನ ಉದರದಲ್ಲಿರುತ್ತದೆ. ಪ್ರಳಯಕಾಲದಲ್ಲಿ ಸಮಗ್ರ ಪ್ರಪಂಚವನ್ನೂ ಭಗವಂತನು ನುಂಗಿಬಿಡುತ್ತಾನೆ. ಜೇಡರ ಹುಳವು ತನ್ನ ಧಾತುವಿನಿಂದ ಬಲೆಯನ್ನು ಸೃಷ್ಟಿಸಿ ತನ್ನ ಉದ್ದೇಶ ಸಿದ್ಧಿಯಾದ ಅನಂತರ ಪುನಃ ತನ್ನ ಬಲೆಯನ್ನು ಕಬಳಿಸುವಂತೆ ಭಗವಂತನೂ ಸೂಕ್ಷ್ಮಪ್ರಕೃತಿಯ ಮೂಲಕ ಜಗತ್ತನ್ನು ಸೃಷ್ಟಿಸಿ, ಆಯಾ ಜೀವರ ಸಾಧನೆಯು ಸಿದ್ಧಿಸಿದ ಬಳಿಕ ಪುನಃ ಪ್ರಪಂಚವನ್ನು ತನ್ನ ಉದರದ ಒಳಗೆ ಹಾಕಿಕೊಳ್ಳುತ್ತಾನೆ. ಪ್ರಪಂಚವೇ ಅವನಿಗೆ ಆಹಾರವಾಗುತ್ತದೆ. ಪ್ರಕೃತಿಯೂ ಸೂಕ್ಷ್ಮರೂಪತಾಳಿ ಅವನ ಉದರದಲ್ಲಿರುತ್ತದೆ. ಉದರಸ್ಥ ಧಾತುವಿನಿಂದ ಪುನಃ ಜೇಡವು ಬಲೆಯನ್ನು ನಿರ್ಮಿಸುವಂತೆ ಶ್ರೀಹರಿಯೂ ಸೂಕ್ಷ್ಮರೂಪವನ್ನು ತಳೆದ ಪ್ರಕೃತಿಯಿಂದ ವಿಸ್ತಾರಾದ ಪ್ರಪಂಚವನ್ನು ನಿರ್ಮಿಸುತ್ತಾನೆ.

## ಅಂತರಂಗದಲ್ಲಿ ಅಂತರ್ಯಾಮಿಯನ್ನು ಕಾಣಿರಿ!!

ಪ್ರಳಯಕಾಲದಲ್ಲಿ ಭಗವಂತನು ನುಂಗಿದ ಬ್ರಹ್ಮಾಂಡವೇ ಸೂಕ್ಷ್ಮಸ್ಥಿತಿಗೆ ಬಂದು ಭಗವಂತನ ನಾಭಿಯಿಂದ ಕಮಲವಾಗಿ ಅರಳಿತು. ಅರಳಿದ ಕಮಲದಲ್ಲಿ ಬ್ರಹ್ಮದೇವ ಉದಿಸಿದ. ಎಲ್ಲೆಡೆಯೂ ನೋಡಬಯಸಿದ. ನಾಲ್ಕು ಮುಖಗಳಿಂದ ಎಲ್ಲೆಡೆಯೂ ನೋಡಿದ. ತನ್ನನ್ನು ಸೃಷ್ಟಿಗೆ ತಂದ ತಂದೆ ಯಾರು? ಎಂದು ಕಣ್ಣರಳಿಸಿ ನೋಡಿದ;

ಕಾಣಲಿಲ್ಲ. ಕಮಲದ ನಾಳದ ಒಳಗೇ ಇಳಿದ. ಅಲ್ಲಿಯೂ ಕಾಣಲಿಲ್ಲ. ತಂದೆಯನ್ನು ನೋಡಬಯಸಿ ಧ್ಯಾನಕ್ಕೆ ಇಳಿದ. ತನ್ನೊಳಗೇ ತಂದೆಯನ್ನು ಕಂಡ. ಹಿರಿಹಿರಿ ಹಿಗ್ಗಿದ. ಸಂತಸದಿಂದ ಉದ್ಗರಿಸಿದ.

ಜ್ಞಾತೋಽಸಿ ಮೇಽದ್ಯ ಸುಚಿರಾನ್ನನು ದೇಹಭಾಜಾಂ
ನ ಜ್ಞಾಯತೇ ಭಗವತೋ ಗತಿರಿತ್ಯವದ್ಯಮ್ ।

'ಜನರಿಗೆ ದೇವರನ್ನು ಕಾಣಲಾಗದು ಎನ್ನುವುದು ಸುಳ್ಳು' ಎಂದ.

ಬ್ರಹ್ಮದೇವನ ಈ ಮಾತು ಬುಡುಬುಡಿಕೆಯವನ ಮಾತಿನಂತಲ್ಲ. ವಿಮರ್ಶೆಮಾಡಿ ನುಡಿದ ಮಾತು. ಬ್ರಹ್ಮದೇವರು ವಿಚಾರ ಮಾಡಿದರು. ಕಮಲ ಎಲ್ಲಿಂದ ಬಂತು? ನೀರು ಎಲ್ಲಿಂದ ಸುರಿಯಿತು? ಕಮಲದಿಂದ ನಾನು ಹೇಗೆ ಬಂದೆ? ನನ್ನನ್ನು ತಂದ ತಂದೆ ಯಾರು? ಎಂದು ಕಮಲದ ಬಗ್ಗೆ ಜಿಜ್ಞಾಸೆ ನಡೆಸಿ ನಿರ್ಮಲ ಹೃದಯಕಮಲ ದಲ್ಲಿಯೇ ಭಗವಂತನನ್ನು ಕಂಡರು.

ಭಗವಂತನು ತನ್ನ ನಾಭಿಕಮಲದಲ್ಲಿ ಬ್ರಹ್ಮದೇವರನ್ನು ಹೊತ್ತಿದ್ದರೆ; ಬ್ರಹ್ಮದೇವರು ತಮ್ಮ ಹೃದಯಕಮಲದಲ್ಲಿ ಭಗವಂತನನ್ನು ಹೊತ್ತಿದ್ದಾರೆ. 'ಮಯಿ ತೇ ತೇಷು ಚಾಪ್ಯಹಂ' ಎಂಬ ಕೃಷ್ಣನ ಮಾತಿಗೆ ಇವರೇ ಸಾಕ್ಷಿ.

ಸರ್ವಜ್ಞರಾದ ಬ್ರಹ್ಮದೇವರ ಈ ವರ್ತನೆ ನಮ್ಮೆಲ್ಲರಿಗೂ ಉಪದೇಶವಾಗಿದೆ. ನಾವೂ ಸಹ ಭಗವಂತನನ್ನು ಕಾಣಬಯಸುತ್ತೇವೆ. ಕಣ್ಗಳರಳಿಸಿ ಹೊರ ಜಗತ್ತನ್ನು ನೋಡುತ್ತೇವೆ. ಜಗತ್ತಿನಲ್ಲಿ ಭಗವಂತನನ್ನು ಕಾಣದೆ; ಬಣ್ಣದ ಜಗತ್ತನ್ನೇ ಕಾಣು ತ್ತಿದ್ದೇವೆ. ನಾವೂ ಧ್ಯಾನಕ್ಕೆ ಕುಳಿತುಕೊಳ್ಳಬೇಕು. ಅಂತರಂಗದಲ್ಲಿನ ಅಂತರ್ಯಾಮಿ ಯನ್ನು ಕಾಣಬೇಕು. ಇದು ಅಸಂಭವವೇನಲ್ಲ. ದಾಸರೂ ಇದನ್ನೇ ನುಡಿದರು.

'ಒಳಗಣ್ಣಿನೊಳಗೆ ನೋಡೋ ಮೂಜಗದೊಡೆಯನ' ಎಂದು. ಬ್ರಹ್ಮದೇವರ ಕೃತಿ ಮತ್ತು ಮಾತು ನಮ್ಮೆಲ್ಲರ ಒಳಗಣ್ಣನ್ನು ತೆರಸಲಿ!

## ಸಾರ್ಥಕ ಜೀವನ!!

ನಾವು ಮಾಡುವ ಜಪ, ತಪ, ಯಜ್ಞ, ಯಾಗ, ಸತ್ಕರ್ಮಾಚರಣೆಗಳೆಲ್ಲವೂ ಭಗವತ್ಪೂಜೆ ಎನಿಸಬೇಕಿದ್ದರೆ ಅವುಗಳನ್ನು ಭಗವಂತನಲ್ಲಿ ಸಮರ್ಪಿಸಬೇಕು. ಭಗವದರ್ಪಣೆ ಇಲ್ಲದ, 'ನಾನು ಮಾಡಿದೆ' ಎಂಬ ಹಮ್ಮಿನಿಂದ ಕೂಡಿದ ಕರ್ಮ ಗಳೆಲ್ಲವೂ ವ್ಯರ್ಥ. ಅಹಂಕಾರ, ಸ್ವಾತ್ಮಪ್ರತಿಷ್ಠೆ, ಲೌಕಿಕಲಾಭ ಇವುಗಳನ್ನು ಮನದಲ್ಲಿ ಬಯಸಿ ಏನೆಲ್ಲ ಕರ್ಮಗಳನ್ನು ಮಾಡಿದರೂ ಸಾರ್ಥಕವೆನಿಸವು. ಎಲ್ಲವೂ ಪರಿಪೂರ್ಣತೆಯನ್ನು ಪಡೆಯಬೇಕಿದ್ದರೆ ಭಕ್ತಿಮುದ್ರೆ ಒತ್ತಬೇಕು.

ಒಂದೆಡೆ ಕಾಗದದ ರಾಶಿ ಬಿದ್ದಿದ್ದರೂ ಅದು ಕಸವೆನಿಸೀತೇ ವಿನಾ ಬಿಡಿಕಾಸೂ ಎನಿಸದು. ಆದರೆ ಒಂದು ಸಣ್ಣ ಕಾಗದದಲ್ಲಿ ರಾಜಮುದ್ರೆ ಬಿದ್ದರೆ ಅಮೂಲ್ಯ ಧನ ಎನಿಸುತ್ತದೆ. ಅದರಿಂದ ಬೇಕಾದ್ದನ್ನು ಪಡೆದುಕೊಳ್ಳುತ್ತೇವೆ. ಅದರಂತೆ ಭಗವದ್ಭಕ್ತಿ

ಯಿಲ್ಲದೆ, ಸಮರ್ಪಣಾರಹಿತವಾದ ಸಾವಿರ ಕರ್ಮಗಳೂ ವ್ಯರ್ಥವೆನಿಸುವವು. ಅದೇ ಒಂದು ಕರ್ಮವು 'ಭಗವತ್ಪೂಜೆ' ಎಂಬ ಭಗವದ್ಭಕ್ತಿಯ ಹಿನ್ನೆಲೆಯಲ್ಲಿ ಆಚರಿಸಲ್ಪಟ್ಟಾಗ ರಾಜಮುದ್ರೆ ಒತ್ತಿದ ನೋಟಿನಂತೆ ಅನಂತಫಲಕ್ಕೆ ನಾಂದಿಯಾಗುತ್ತದೆ 'ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್' ಎಂದು ಶ್ರೀಕೃಷ್ಣನು ಗೀತೆಯಲ್ಲಿ ಹೇಳಿದಂತೆ ಫಲಪ್ರದವಾಗುತ್ತದೆ. ಸಣ್ಣ ಕಾಗದವೂ ರಾಜಮುದ್ರೆಯಿಂದ ಭಾರೀ ಬೆಲೆಬಾಳುವಂತೆ ಭಕ್ತಿ ಎಂಬ ರಾಜಮುದ್ರೆಯಿಂದ ಕೂಡಿದ ಸಣ್ಣ ಕರ್ಮವೂ ಅನಂತ ಫಲಕ್ಕೆ ಹೇತುವಾಗುತ್ತದೆ. ಭಕ್ತಿ ಇಲ್ಲದೆ ಕರ್ತವ್ಯಗಳನ್ನು ಮಾಡಿ ಹರಿ ಪ್ರೀತನಾಗಲಿ! ಎಂದರೆ ಕರ್ಮವು ಎಷ್ಟೇ ಕ್ರಮಬದ್ಧವಾಗಿ ಆಚರಿಸಲ್ಪಟ್ಟಿದ್ದರೂ ಅದು ಪರಿಪೂರ್ಣತೆಯನ್ನು ಹೊಂದಲಾರದು; ಭಗವಂತನೂ ಪ್ರೀತನಾಗಲಾರ. ಅದರಿಂದ ಉತ್ತಮ ಫಲವನ್ನೂ ಪಡೆಯಲಾರೆವು. ಆದ್ದರಿಂದ ನಮ್ಮ ಬದುಕಿನ ಸಮಗ್ರ ಕರ್ತವ್ಯಗಳನ್ನು ಭಕ್ತಿಯ ಹಿನ್ನೆಲೆಯಿಂದ ಆಚರಿಸಿ ಹರಿಯು ಪ್ರೀತನಾಗಲೆಂದು ಸ್ವಾರ್ಥ ತೊರೆದು ಹರಿಗರ್ಪಿಸಿದಾಗ ನಮ್ಮ ಜೀವನವು 'ಪವಿತ್ರ ಯಜ್ಞ' ಎನಿಸುವುದು.

## ಎಲ್ಲೆಡೆಯೂ ಅನುಸಂಧಾನ ಮುಖ್ಯ

ಭಗವಂತನನ್ನು ಕೇವಲ ನಮ್ಮೊಳಗೆ ಕಂಡರೆ ಸಾಲದು. ಜಗತ್ತಿನ ಸಮಸ್ತ ವಸ್ತುಗಳಲ್ಲಿಯೂ ಕಾಣಬೇಕು. ಜನರಲ್ಲಿರುವ ಹರಿಯನ್ನು ಕಂಡು ಜನರಿಗೆ ಉಪಕರಿಸಬೇಕು. ಇದರಿಂದ ಭಗವಂತ ಪ್ರಸನ್ನನಾಗುವಷ್ಟು ಉಳಿದ ಕ್ರಿಯಾಕಲಾಪಗಳಿಂದಾಗುವುದಿಲ್ಲ ಎನ್ನುತ್ತದೆ ಭಾಗವತ–

**ನಾತಿಪ್ರಸೀದತಿ ತಥೋಪಚಿತೋಪಹಾರೈಃ**
**ಆರಾಧಿತಃ ಸುರಗಣೈರ್ಹೃದಿ ಬದ್ಧಕಾಮೈಃ ।**
**ಯತ್ಸರ್ವಭೂತದಯಯಾಸದಲಭ್ಯಯೈಕೋ**
**ನಾನಾಜನೇಷ್ವವಹಿತಃ ಸುಹೃದಂತರಾತ್ಮಾ ॥** — (೩-೯-೧೨)

ಜನರಲ್ಲಿರುವ ಭಗವಂತನನ್ನು ಕಂಡು ಜನರನ್ನು ಉಪಕರಿಸುವುದು ಕರ್ತವ್ಯದಲ್ಲಿ ಸೇರಿದೆ.

ಶ್ರೀಮದಾಚಾರ್ಯರೇ ನುಡಿದ ಮಾತಿದು–

**'ನಾನಾಜನಸ್ಯ ಶುಶ್ರೂಷಾ ಕರ್ಮಾಖ್ಯಾ ಕರವನ್ಮಿತೇಃ'**

'ಬಹುಜನರ ಶುಶ್ರೂಷೆ ಕರದಂತೆ (Tax) ಕಡ್ಡಾಯ' ಎಂದು ಆದೇಶ ನೀಡಿದ್ದಾರೆ. ಕಂದಾಯ ಕಟ್ಟದವ ಶಿಕ್ಷೆಗೆ ಗುರಿಯಾಗುವಂತೆ, ಜನರ ಹಿತ ಬಯಸದವ ಭಗವಂತನ ಶಿಕ್ಷೆಗೆ ಗುರಿಯಾಗುತ್ತಾನೆ. ಜನರನ್ನು ತೃಪ್ತಿಗೊಳಿಸಲು ಸಾಧ್ಯವಿಲ್ಲ. ಆದ್ದರಿಂದ ಜನರ ಅಂತರ್ಯಾಮಿಯು ತೃಪ್ತನಾಗಲೆಂದು ಜನರಿಗೆ ಉಪಕರಿಸಬೇಕು.

ಲೋಕದಲ್ಲಿ ಅನೇಕ ಮಂದಿ ಹರಿಯನ್ನು ಕಾಣದೆ ಕೇವಲ ಜನಸೇವೆ ಎಂದು ಮಾಡುತ್ತಾರೆ. ಕಾಲಾಂತರದಲ್ಲಿ ಉಪಕಾರಪಡೆದವ ಮರೆಯುತ್ತಾನೆ. ಜರೆಯುತ್ತಾನೆ. 'ಎಷ್ಟೆಲ್ಲಾ ಮಾಡಿದೆ, ನನ್ನನ್ನೇ ಮರೆತ' ಎಂದು ಕೊರಗುತ್ತಾರೆ.

ಜನರನ್ನು ಮಾತ್ರ ಕಂಡಾಗ ಬೇಸರಕ್ಕೆ ಅವಕಾಶವಿದೆ. ಅದಕ್ಕಾಗಿ ಜನರೊಳಗಿನ ಹರಿಯ ಸೇವೆ ಎಂದು ಉಪಕಾರಮಾಡಬೇಕು. ಈಗ ವ್ಯಕ್ತಿ ಏನೇ ಮಾಡಲಿ. ಅದು ನಮಗೆ ಸಂಬಂಧವೇ ಇಲ್ಲ. ಜನಮೆಚ್ಚುಗೆಗೆ ಬೆಲೆಯಿಲ್ಲ. ಅಚ್ಯುತ ಮೆಚ್ಚಿದರೆ ಸಾಕು. ಇದಕ್ಕೆ ಬೆಲೆಕಟ್ಟಲು ಸಾಧ್ಯವಿಲ್ಲ.

ಲೋಕದಲ್ಲಿ ಕೆಲವು ಸ್ತ್ರೀಯರೂ ಸಹ "ಅಧಾರ್ಮಿಕರಾದ ತಮ್ಮ ಗಂಡಂದಿರನ್ನು ಏಕೆ ಸೇವಿಸಬೇಕು?" ಎಂದು ಅಸಡ್ಡೆಯಿಂದ ಕಾಣುತ್ತಾರೆ. ಇದು ಸರಿಯಲ್ಲ. ಸತಿಯರು ಪತಿಯೊಳಗಿರುವ ಭಗವಂತನ ಸೇವೆ ಎಂದು ಮಾಡಬೇಕು. ಅವನು ಹೇಗಿದ್ದರೇನು? ಅವನ ಒಳಗಿರುವ ಭಗವಂತ ಶುದ್ಧನಿಲ್ಲವೇ?!

ಈ ಚಿಂತನಾಗಂಗೆಯು ಎಲ್ಲೆಡೆಯೂ ಹರಿಯಬೇಕು. ಒಬ್ಬ ವ್ಯಕ್ತಿಗೆ ನಮಸ್ಕರಿಸು ವಾಗಲೂ ಒಳಗಿನ ಸರ್ವಶಕ್ತನಾದ ಹರಿಯನ್ನೇ ನಮಿಸುವೆನೆಂದು ಅನುಸಂಧಾನ ಮಾಡಬೇಕು. ಈ ಅನುಸಂಧಾನವಿದ್ದಲ್ಲಿ ಯಾವ ಸಂದರ್ಭದಲ್ಲಿಯೂ ಅಸಮಾಧಾನ ಅತೃಪ್ತಿಗಳಿಗೆ ಅವಕಾಶವೇ ಇಲ್ಲ. ಇಂತಹ ಅದ್ಭುತವಾದ ಅನುಸಂಧಾನತತ್ತ್ವವನ್ನು ಬ್ರಹ್ಮದೇವರು ನಮಗೆ ಉಪದೇಶಿಸಿ ಉಪಕರಿಸಿದ್ದಾರೆ.

ಪ್ರಾಣಿಗಳಿಗೆ ಮೇವುಣಿಸಬೇಕಾದರೂ ಅಂತರ್ಯಾಮಿಯಾದ ಭಗವಂತನು ತೃಪ್ತನಾಗಲಿ ಎಂಬ ಅನುಸಂಧಾನವಿರಬೇಕು. ಹೀಗೆ ಅನುಸಂಧಾನತತ್ತ್ವವನ್ನು ಬ್ರಹ್ಮ ದೇವರು ವಿವರವಾಗಿ ವಿವರಿಸಿ ಭಗವತ್ಪ್ರಾರ್ಥನೆಯನ್ನು ಸಲ್ಲಿಸಲು ಪ್ರೀತನಾದ ಭಗವಂತನು ಬ್ರಹ್ಮದೇವನಿಗೆ 'ಸೃಷ್ಟಿಮಾಡು' ಎಂದು ಆದೇಶಿಸಿದ.

ಈ ಸಂದರ್ಭದಲ್ಲಿ ಭಾಗವತವು ಬ್ರಹ್ಮದೇವರಿಂದ ಸೃಷ್ಟವಾದ ಒಂಭತ್ತು ವಿಧವಾದ ಸೃಷ್ಟಿಯನ್ನು ನಿರೂಪಿಸುತ್ತದೆ. ಮಹತ್ತತ್ತ್ವ, ಅಹಂಕಾರತತ್ತ್ವ, ಪಂಚಭೂತ ಗಳು, ಏಕಾದಶ ಇಂದ್ರಿಯಗಳು, ವೈಕಾರಿಕ ಸೃಷ್ಟಿ (ಇಂದ್ರಿಯಾಭಿಮಾನಿ ದೇವತೆಗಳ ಸೃಷ್ಟಿ), ತಮೋಗುಣ ಸೃಷ್ಟಿ, ಸ್ಥಾವರ ಸೃಷ್ಟಿ, ತಿರ್ಯಕ್ ಸೃಷ್ಟಿ, ಒಂಭತ್ತನೆಯದ್ದಾಗಿ ಮಾನವರ ಸೃಷ್ಟಿ.

**ಅರ್ವಾಕ್‌ಸ್ರೋತಸ್ತು ನವಮಃ ಕ್ಷತ್ತರೇಕವಿಧೋ ನೃಣಾಮ್ ।**
**ರಜೋಽಧಿಕಾಃ ಕರ್ಮಪರಾಃ ದುಃಖೇ ಚ ಸುಖಮಾನಿನಃ ॥** — (೩-೧೧-೨೫)

## ನವವಿಧಸೃಷ್ಟಿ

ಬ್ರಹ್ಮನಿಂದ ಸೃಷ್ಟವಾದ ಸ್ಥಾವರಗಳ ಸೃಷ್ಟಿಗೆ ಭಾಗವತವು 'ಉತ್‌ಸ್ರೋತಗಳು' ಎಂದಿದೆ. ಇದಕ್ಕೆ ಕಾರಣವಿದೆ. ಮರಗಳಿಗೆ ನಾವು ಬುಡದಲ್ಲಿ ನೀರೆರೆದಾಗ ಹಾಕಿದ ನೀರನ್ನು ಮೇಲೆಳೆದುಕೊಂಡು ಮೇಲಕ್ಕೆ ಬೆಳೆಯುತ್ತವೆ. ಮರದ ಎಲ್ಲ ಕೊಂಬೆ

ರೆಂಬೆಗಳಲ್ಲಿ ಆಹಾರವು ವಿನಿಯೋಗವಾಗಿ ಫಲಪುಷ್ಪಗಳ ಸಮೃದ್ಧಿಯುಂಟಾಗುತ್ತದೆ ಮರಗಿಡಗಳು ದೇವತೆಗಳಂತೆ ಏನೂ ಸ್ವಾರ್ಥವಿಲ್ಲದೆ ಉಪಕರಿಸುತ್ತವೆ. ಮಾನವರ ಉಪಕಾರಕ್ಕಾಗಿಯೇ ಮರಗಿಡಗಳ ಸೃಷ್ಟಿಯಾಗಿದೆ. ಭೇದಭಾವವಿಲ್ಲದೆ ಎಲ್ಲರಿಗೂ ಹಣ್ಣು, ಹೂವು, ನೆರಳುಗಳನ್ನು ವನಸ್ಪತಿಗಳು ನೀಡುತ್ತವೆ. ಇವುಗಳಿಂದಲೇ ನಾಡಿಗೆ ಮಳೆ, ಬೆಳೆ, ಶುದ್ಧ ಗಾಳಿ, ಉತ್ತಮ ಆರೋಗ್ಯ ಲಭಿಸುತ್ತದೆ.

ಎಂಟನೆಯ ಸೃಷ್ಟಿ ಪ್ರಾಣಿಗಳದ್ದು. ಇವುಗಳು ತಿರ್ಯಕ್‌ಸ್ರೋತಗಳೆನಿಸಿವೆ ಹಸು ನಾಯಿ ಮುಂತಾದ ಪ್ರಾಣಿಗಳಿಗೆ ಆಹಾರವನ್ನು ಕೊಟ್ಟರೆ ಕೊಟ್ಟ ಆಹಾರವು ಅಡ್ಡವಾಗಿ ಹೋಗುತ್ತದೆ ಆದ್ದರಿಂದ ತಿರ್ಯಕ್‌ಸ್ರೋತಗಳೆನಿಸಿವೆ.

ಕೊನೆಯ ಸೃಷ್ಟಿ ಮನುಷ್ಯನದ್ದು. ಇವನು ತಿರ್ಯಕ್‌ಸ್ರೋತನೂ ಅಲ್ಲ, ಊರ್ಧ್ವ ಸ್ರೋತನೂ ಅಲ್ಲ. ಅರ್ವಾಕ್‌ಸ್ರೋತನೆನಿಸಿದ್ದಾನೆ. ಇವನು ತಿಂದ ಆಹಾರವೆಲ್ಲ ಕೆಳಗೆ ಹೋಗುತ್ತದೆ. ಇದು ಆಹಾರದಲ್ಲಿ ಮಾತ್ರವಲ್ಲ ಮನುಷ್ಯನ ವ್ಯವಹಾರಗಳೂ ಅಧೋಗತಿ ಉಳ್ಳವುಗಳು. ಮನುಷ್ಯಪ್ರಾಣಿ ಅನರ್ಥದ ಹಾದಿಯನ್ನೇ ತುಳಿಯುತ್ತಾನೆ. ಮಾಡಬಾರದ ಅಕೃತ್ಯಗಳನ್ನು ಮಾಡಿ ಜಗತ್ತಿಗೆ ಕಂಟಕಪ್ರಾಯರಾದ ನೀಚ ಮಂದಿ ಎಷ್ಟಿಲ್ಲ!? ನೀಚೋಚ್ಚ, ತಾರತಮ್ಯವೆಲ್ಲವೂ ಮನುಷ್ಯನನ್ನೇ ಆವರಿಸಿಕೊಂಡಿವೆ ಆದ್ದರಿಂದಲೇ 'ಅರ್ವಾಕ್ ಸ್ರೋತರು ಮಾನವರು' ಎಂದಿದೆ ಭಾಗವತ.

## ತ್ಯಾಗ–ಭಕ್ತಿಗಳಿಂದಲೇ ಜಗತ್ತಿನ ಸಂರಕ್ಷಣೆ

ಮುಂದೆ ಬ್ರಹ್ಮನು ಸೃಷ್ಟಿಸಿದ ವಿಸ್ತಾರವಾದ ಪ್ರಪಂಚ ನೀರಿನಲ್ಲಿ ಮುಳುಗಿ ಹೋಯಿತು. ಮುಳುಗಿದ ಭೂಮಿಯನ್ನು ರಕ್ಷಿಸುವುದು ಹೇಗೆ? ಎಂದು ಅಜ್ಞಜನರಂತೆ ಕಮಲೋದ್ಭವನು ಚಿಂತಿಸುತ್ತಿರಲು ಬ್ರಹ್ಮದೇವನ ನಾಸಾಪುಟದಿಂದ ವರಾಹರೂಪಿ ಶ್ರೀಹರಿ ಪ್ರಕಟಗೊಂಡ. ನೀರಿನಲ್ಲಿ ಮುಳುಗುತ್ತಿದ್ದ ಬ್ರಹ್ಮನ ಸೃಷ್ಟಿರೂಪವಾದ ಭೂಮಿಯನ್ನು ಉದ್ಧರಿಸಿದ. ಜಗತ್ತಿನ ಆಪತ್ತನ್ನು ಪರಿಹರಿಸಿದ ಯಜ್ಞವರಾಹನ ಕರುಣೆ ಅಪಾರ.

ಯಜ್ಞ ಎಂದರೆ 'ದೇವತಾ ಉದ್ದೇಶೇನ ದ್ರವ್ಯತ್ಯಾಗಃ' ಎಂದರೆ ಕೇವಲ ಹವಿಸ್ಸನ್ನು ಅಗ್ನಿಗೆ ಅರ್ಪಿಸುವುದೇ ಯಜ್ಞ –ಎಂದಿಷ್ಟೇ ಅರ್ಥವಲ್ಲ. ನಮ್ಮ ದೈನಂದಿನದ ಎಲ್ಲ ಕ್ರಿಯೆಗಳೂ ಯಜ್ಞವಾಗಬೇಕು. ಭಗವತ್ಪ್ರೀತಿಯನ್ನು ಉದ್ದೇಶ ವಾಗಿಟ್ಟುಕೊಂಡು ಮಾಡುವ ಪರೋಪಕಾರರೂಪವಾದ ತ್ಯಾಗವೇ 'ಯಜ್ಞ' ಎನಿಸಿದೆ. ಸ್ವಾರ್ಥರಹಿತ ತ್ಯಾಗ ಮತ್ತು ಭಗವದ್ಭಕ್ತಿಗಳು ಬದುಕಿನಲ್ಲಿ ಸಮ್ಮಿಲನಗೊಂಡಾಗ ಜೀವನವೂ ಯಜ್ಞ ಎನಿಸುತ್ತದೆ. ಭಕ್ತಿ ತ್ಯಾಗರೂಪವಾದ ಯಜ್ಞವೇ ಭಗವಂತನ ಶರೀರ. ಇಂತಹ ಯಜ್ಞವರಾಹ ಪ್ರಕಟಗೊಂಡಾಗ ಮುಳುಗುವ ಪ್ರಪಂಚ ಮತ್ತೆ ಉಳಿಯಿತು–ಬೆಳೆಯಿತು.

ಇಂದು ನಮ್ಮ ಜಗತ್ತೂ ಮುಳುಗುತ್ತಿದೆ. ನೀರಿನಲ್ಲಿ ಮುಳುಗದಿದ್ದರೂ ಅನೈತಿಕತೆ, ಅನ್ಯಾಯಗಳ ತೆರೆಗಳಲ್ಲಿ ತೂರಿಕೊಂಡು ಅಧಃಪತನಕ್ಕೆ ತುತ್ತಾಗುತ್ತಿದೆ. ಜಗತ್ತೆಲ್ಲವೂ ಮುಳುಗಿಹೋಗುವಷ್ಟು ಅನರ್ಥದ ಸ್ಥಿತಿಯಲ್ಲಿದ್ದೇವೆ ಆದರೆ ಈ ಜಗತ್ತು ಮುಳುಗಬಾರದು. ಬೆಳೆಯಬೇಕು ಬೆಳೆಯಬೇಕಾದರೆ ಇದಕ್ಕೆ ಒಂದೇ ಮಾರ್ಗ! ಯಜ್ಞ!. ಬ್ರಹ್ಮಸೃಷ್ಟಿಯನ್ನು ಉಳಿಸಿಕೊಳ್ಳಲು ಯಜ್ಞವರಾಹನ ಅನುಗ್ರಹ ಬೇಕಾದಂತೆ ಅಧಃಪತನದ ಮುಂಚೂಣಿಯಲ್ಲಿರುವ ನಮ್ಮ ಜಗತ್ತು ಮೇಲೆ ಬರಬೇಕಾದರೆ ಆ ಯಜ್ಞವರಾಹನ ಅನುಗ್ರಹವೇ ಬೇಕು. ನಮ್ಮ ಜೀವನದಲ್ಲಿ ಭಕ್ತಿ ತ್ಯಾಗಗಳೆಂಬ ಯಜ್ಞದ ದೃಷ್ಟಿಯೂ ಇರಬೇಕು. ಇವೆರಡನ್ನು ನಮ್ಮ ಜೀವನದಲ್ಲಿ ಅಳವಡಿಸಿಕೊಂಡಾಗ ಮಾತ್ರ ನಮ್ಮ ಜಗತ್ತು ಉಳಿಯಲು ಸಾಧ್ಯ.

ಭಾಗವತವು ಮುಂದೆ ಪುನಃ ಹಿರಣ್ಯಾಕ್ಷನನ್ನು ಸಂಹರಿಸಿದ ವರಾಹರೂಪಿ ಭಗವಂತನನ್ನೇ ಬಣ್ಣಿಸುತ್ತದೆ ಮೊದಲು ಭಾಗವತವು ನಿರೂಪಿಸಿದ ಹಿರಣ್ಯಾಕ್ಷನು ಯಾರು? ಅನಂತರವೂ ಹಿರಣ್ಯಾಕ್ಷನ ಸಂಹಾರವು ಪ್ರತಿಪಾದಿತವಾಗಿದೆಯಲ್ಲವೇ? ಹೀಗೆ ಎರಡು ಬಾರಿ ವರಾಹರೂಪಿಯ ಅವತಾರವನ್ನು ಭಾಗವತವು ನಿರೂಪಿಸಿದಾಗ ಜಿಜ್ಞಾಸುಗಳಿಗೆ ಸರಿಯಾದ ತಿಳಿವಳಿಕೆ ಬಾರದಿರುವ ಸಂದರ್ಭವಿದೆ. ಈ ಸಂದರ್ಭದಲ್ಲಿ ಶ್ರೀಮದಾಚಾರ್ಯರು ಸರಿಯಾದ ಪರಿಕಲ್ಪನೆಯನ್ನು ತಾತ್ಪರ್ಯದಲ್ಲಿ ಪ್ರಮಾಣಾಧಾರವಾಗಿ ನೀಡಿದ್ದಾರೆ.

ಬ್ರಹ್ಮಜಸ್ತು ಹಿರಣ್ಯಾಕ್ಷಃ ಪ್ರಥಮಂ ದಂಷ್ಟ್ರಯಾ ಹತಃ ।
ಸ ಏವ ಪಾರ್ಷದಾವಿಷ್ಟೋ ದ್ವಿತೀಯಃ ಕರ್ಣತಾಡನಾತ್ ॥

ಪೂರ್ವಂ ಲಯೋದಕೇ ಮಗ್ನಾಂ ದ್ವಿತೀಯಂ ತೇನ ಮಜ್ಜಿತಾಮ್ ।
ಭುವಮುದ್ಧರತ್ಯೈವಾಸೌ ಹರಿಣಾ ಕ್ರೋಡಮೂರ್ತಿನಾ ॥ — (೩-೧೪-೫೨)

ಹಿರಣ್ಯಾಕ್ಷರು ಇಬ್ಬರು. ಒಬ್ಬ ಆದಿ ಹಿರಣ್ಯಾಕ್ಷ. ಇವನು ಬ್ರಹ್ಮನ ಪುತ್ರ. ದುರಾತ್ಮನಾದ ಇವನನ್ನು ವರಾಹರೂಪಿ ಶ್ರೀಹರಿ ತನ್ನ ದಾಡೆಯಿಂದ ಕೊಂದನು. ಎರಡನೆಯವ ದಿತಿಪುತ್ರ. ವೈಕುಂಠ ದ್ವಾರಪಾಲಕನಾದ ವಿಜಯನಿಂದ ಆವಿಷ್ಟನು. ಇವನನ್ನು ಹರಿಯು ಕೈಯಲ್ಲಿ ಹೊಡೆದು ಕೊಂದನು. ಆದಿವರಾಹ ಪ್ರಳಯಜಲದಲ್ಲಿ ಮುಳುಗಿದ ಭುವಿಯನ್ನುದ್ಧರಿಸಿದ. ಎರಡನೇ ವರಾಹ ದಿತಿಯ ಮಗ ಸಮುದ್ರದಲ್ಲಿ ಭೂಮಿಯನ್ನು ಮುಳುಗಿಸಿದಾಗ ಹೊತ್ತುತಂದ ಎಂದು ಸಮಸ್ಯೆಯನ್ನು ಪರಿಹರಿಸಿದ್ದಾರೆ.

ವಿದುರನು ಭಗವತ್ಕಥೆಯನ್ನು ಮತ್ತೂ ಹೇಳಿರೆಂದು ಮೈತ್ರೇಯರ ಬಳಿ ಪ್ರಾರ್ಥಿಸಿದಾಗ ದಿತಿ ಕಶ್ಯಪರ ಕಥೆಯನ್ನು ಮುಂದುವರೆಸುತ್ತಾರೆ.

ದಿತಿಯ ಮಕ್ಕಳಾದ ದೈತ್ಯರೆಲ್ಲರೂ ದೇವತೆಗಳಿಂದ ಸಂಹೃತರಾಗಲು ದಿತಿಯು ದೇವತೆಗಳ ಮೇಲೆ ಸಿಟ್ಟಾದಳು. ತನ್ನ ಮಕ್ಕಳು 'ಭಗವದ್ವೇಷಿಗಳಾಗಿ ಅನ್ಯಾಯ ಅಕೃತ್ಯಗಳನ್ನೆಸಗಿ ಲೋಕಕಂಟಕರಾದಾಗ ದೇವತೆಗಳು ಅವರನ್ನು ದಮನ

ಮಾಡಿದ್ದಾರೆ' ಎಂಬುದನ್ನು ಅರಿಯದ ದೇವತೆಗಳ ಮೇಲೆ ಪ್ರತೀಕಾರಬುದ್ಧಿ ಹೊಂದಿದಳು

ಒಂದುದಿನ ಕಶ್ಯಪರು ಸಂಧ್ಯಾಕಾಲದಲ್ಲಿ ನಿತ್ಯಾಹ್ನಿಕಾದಿಗಳಿಗೆ ಅನುವಾಗುತ್ತಿರಲು ದಿತಿಯು ಕಾಮಾಕ್ರಾಂತಳಾಗಿ ಕಶ್ಯಪನ ಸಂಗ ಬಯಸಿದಳು. ಕಶ್ಯಪರು 'ಅನುಚಿತ ಕಾಲದಲ್ಲಿ ಇಂತಹ ಕಾಮನೆ ಸಲ್ಲದು ಒಂದು ಮುಹೂರ್ತವಾದರೂ ತಡೆ' ಎಂದು ಶಾಸ್ತ್ರೋಕ್ತದೋಷಗಳೆಲ್ಲವನ್ನೂ ವಿವರಿಸಿದರೂ ಕಾಮದ ಕಾತರತೆಯಿಂದ ಲಜ್ಜಾ ಹೀನಳಾಗಿ ಕಶ್ಯಪರನ್ನು ಬಲಾತ್ಕರಿಸಿದಳು. ಅದರ ಪರಿಣಾಮವಾಗಿ ಕಶ್ಯಪರಿಂದ ದಿತಿಯಲ್ಲಿ ಅಧಮರಾದ ಇಬ್ಬರು ಮಕ್ಕಳು ಜನಿಸಿದರು ಅವರೇ ಹಿರಣ್ಯಾಕ್ಷ ಮತ್ತು ಹಿರಣ್ಯಕಶಿಪುಗಳೆಂದು ಕುಖ್ಯಾತರಾದರು. ಇವರೀರ್ವರು ಹರಿಮಂದಿರದ ದ್ವಾರ ಪಾಲಕರಾದ ಜಯ–ವಿಜಯರಿಂದ ಆವಿಷ್ಟರು.

ಒಮ್ಮೆ ಬ್ರಹ್ಮದೇವರ ಮಾನಸಪುತ್ರರಾದ ಸನಕಾದಿಗಳು ವೈಕುಂಠದಲ್ಲಿ ಅಮುಕ್ತ ಸ್ಥಾನಕ್ಕೆ ಹೋದರು. ಅಲ್ಲಿ ಯಾರ ತಡೆಯೂ ಇಲ್ಲದೆ ಏಳನೇ ದ್ವಾರಕ್ಕೆ ಹೋದರು. ಹರಿದರ್ಶನಾಕಾಂಕ್ಷಿಗಳಾಗಿ ಮುಂದೆ ಬರುತ್ತಿರುವ ಸನಕಾದಿಗಳನ್ನು ಅಲ್ಲಿಯ ದ್ವಾರಪಾಲಕರಾದ ಜಯ ವಿಜಯರು ಬಂಗಾರದ ಕೋಲಿನಿಂದ ತಡೆದರು. ಜಯ ವಿಜಯರು ಸನಕಾದಿಗಳನ್ನು ರಾಜದಂಡದಿಂದ ತಡೆದರು. ಸನಕಾದಿಗಳ ಮಂತ್ರ ದಂಡಕ್ಕೆ ಸಿಕ್ಕಿಬಿದ್ದರು. ಕುಪಿತರಾದ ಸನಕಾದಿಗಳು ಶಪಿಸಿದರು, 'ಭಕ್ತರಿಗೂ ಭಗವಂತನಿಗೂ ಸಂಪರ್ಕವಾಗದಂತೆ ತಡೆಯುವ ನೀವು ಭಗವದ್ವಿರೋಧಿಗಳು. ನಿಮಗಿಲ್ಲಿ ಸ್ಥಾನವಾದರೂ ಹೇಗೆ ದೊರಕಿತು? ನಿಮಗೆ ಅಧಃಪಾತವಾಗಲಿ. ದುಷ್ಟ ರಾದ ನೀವು ಸ್ಥಾನಭ್ರಷ್ಟರಾಗಿರಿ. ದುಷ್ಟವಾದ ಆಸುರೀಯೋನಿಯಲ್ಲಿ ಹುಟ್ಟಿರಿ!' ಎಂದು ಶಾಪ ಕೊಟ್ಟರು. ಕ್ಷಣಕಾಲ ಹರಿಭಕ್ತರಿಗೆ ತಡೆ ನೀಡಿದ ತಪ್ಪಿಗೆ ಭಯಂಕರವಾದ ರಾಕ್ಷಸಯೋನಿಯಲ್ಲಿ ಹುಟ್ಟುವ ಪರಿಸ್ಥಿತಿ ಒದಗಿಬಂತು. ಶಾಪಗ್ರಸ್ತ ರಾದ ಜಯ–ವಿಜಯರು ಕಾಂತಿಹೀನರಾಗಿ ಕೆಳಗೆ ಬಿದ್ದರು. ದಿತಿಯ ಗರ್ಭವನ್ನು ಪ್ರವೇಶಿಸಿದರು.

ದಿತಿಯು ನೂರು ವರ್ಷ ಧರಿಸಿದ ಗರ್ಭವನ್ನು ಹಡೆದಳು. ಅವಳಲ್ಲಿ ಅವಳಿ ಮಕ್ಕಳು ಹುಟ್ಟಿದರು. ಹಿರಣ್ಯಕಶಿಪು, ಹಿರಣ್ಯಾಕ್ಷ ಎಂದು. ಪ್ರಳಯಾಗ್ನಿ ಸದೃಶವಾದ ಭಯಂಕರ ರೂಪವುಳ್ಳ ಇವರೀರ್ವರೂ ಪ್ರಳಯದ ಕರಾಳ ಮೃತ್ಯುವಿನಂತಿಸಿದ್ದರು. ತಮ್ಮನಾದ ಹಿರಣ್ಯಾಕ್ಷ ಸ್ವರ್ಗಕ್ಕೆ ಲಗ್ಗೆಯಿಟ್ಟನು. ದೇವತೆಗಳು ಅಡಗಿಕುಳಿತರು. ಎದುರಾಳಿಗಳೇ ಇಲ್ಲವೆಂದು ಗರ್ವಿತನಾದ ಹಿರಣ್ಯಾಕ್ಷ ನಾರದರ ವಚನದಂತೆ ಪಾತಾಳ ಲೋಕಕ್ಕೆ ಹೋದನು. ಅಲ್ಲಿರುವ ವರಾಹರೂಪ ಹರಿಯನ್ನು ಯುದ್ಧಕ್ಕೆ ಆಹ್ವಾನಿಸಿದ. ಉನ್ಮತ್ತನಾದ ಹಿರಣ್ಯಾಕ್ಷನನ್ನು ಶ್ರೀಹರಿಯು ತನ್ನ ಕೈಯಿಂದ ಅವನ ಕಿವಿಯ ಬುಡಕ್ಕೆ ಬಡಿದು ಸಂಹರಿಸಿದ. ದಿತಿಯ ಸ್ತನದಲ್ಲಿ ರಕ್ತವು ಸುರಿಯಿತು. ತ್ರಿಲೋಕಕಂಟಕನಾದ ಹಿರಣ್ಯಾಕ್ಷನ ಉತ್ಪಾಟನದಿಂದ ಬ್ರಹ್ಮಾದಿಗಳು ಸಂತುಷ್ಟರಾ ದರು. ಭಕ್ತಿಯಿಂದ ಮುಕ್ತಕಂಠದಿಂದ ಸ್ತುತಿಗೈದರು.

ಅನಂತರ ಬ್ರಹ್ಮದೇವರು ಯಕ್ಷ, ರಾಕ್ಷಸ, ದೇವ, ಗಂಧರ್ವರನ್ನೆಲ್ಲ ಸೃಷ್ಟಿಸಿ ಕೊನೆಗೆ ಮನುಗಳನ್ನು ಸೃಷ್ಟಿಸಿದರು.

ಕರ್ದಮ ಪ್ರಜೇಶ್ವರರಿಗೆ ಬ್ರಹ್ಮದೇವ ಪ್ರಜೆಗಳನ್ನು ಸೃಷ್ಟಿಸಲು ಆಜ್ಞಾಪಿಸಿದ. ಅದರಂತೆ ಕರ್ದಮರು ಹತ್ತುಸಾವಿರವರ್ಷ ಸರಸ್ವತೀ ತೀರದಲ್ಲಿ ಉಗ್ರ ತಪಗೈದರು ಇವರ ತಪಸ್ಸಿಗೆ ಮೆಚ್ಚಿದ ಅಚ್ಯುತ ಪ್ರತ್ಯಕ್ಷನಾದ. 'ಪ್ರಜಾಸಂತತಿಗಾಗಿ ಕನ್ಯೆಯೊಬ್ಬಳನ್ನು ಕೈಹಿಡಿಯಲು ಅನುಗ್ರಹಿಸೆಂ'ದು ಕರ್ದಮರು ಪ್ರಾರ್ಥಿಸಲು ಹರಿಯು ವರನೀಡಿ ಹೊರಟುಹೋದ.

## ಕನ್ಯಾಮಣಿಗಳಿಗೊಂದು ಕಿವಿಮಾತು

ಕರ್ದಮ ಪ್ರಜಾಪತಿಗಳು ತಮ್ಮ ಆಶ್ರಮದಲ್ಲಿ ದೈನಂದಿನ ಅನುಷ್ಠಾನಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ನಿರಂತರ ಹರಿಸ್ಮರಣೆಯಲ್ಲಿ ರತರಾಗಿದ್ದಾರೆ. ಹೀಗೇ ಇರಲು ಒಂದು ದಿನ ಮನುಮಹಾರಾಜ, ಶತರೂಪಾದೇವಿ ಇವರೀರ್ವರ ಮಗಳಾದ ದೇವಹೂತಿ ಕರ್ದಮರ ಆಶ್ರಮಕ್ಕೆ ಆಗಮಿಸಿದರು.

ಬಂದವರನ್ನು ಕರ್ದಮರು ಆದರದಿಂದ ಸ್ವಾಗತಿಸಿದರು.

ಆಶ್ರಮಕ್ಕೆ ರಾಜರು ಆಗಮಿಸುವುದು ರಾಜರ ಉತ್ತಮಗುಣ ಎಂದು ಪ್ರಶಂಸೆ ಮಾಡಿದರು. ಉಪಚರಿಸಿದರು. ಬಂದ ಕಾರಣವಾದರೂ ಏನೆಂದು ಪ್ರಶ್ನಿಸಿದರು.

ಮನುಮಹಾರಾಜ ಹೇಳಿದ–

ಕರ್ದಮರೇ! ನನ್ನ ಮಗಳಾದ ದೇವಹೂತಿಯು ನಿಮ್ಮ ಗುಣ, ನಿಮ್ಮ ತ್ಯಾಗ, ಚಾರಿತ್ರ್ಯ, ಜ್ಞಾನ, ತಪಸ್ಸು ಮುಂತಾದವುಗಳನ್ನು ಕೇಳಿದ ಬಳಿಕ ನಿಮ್ಮನ್ನೇ ಪತಿಯನ್ನಾಗಿ ಸ್ವೀಕರಿಸಬೇಕೆಂದು ಬಯಸಿದ್ದಾಳೆ. ಅವಳನ್ನು ನೀವು ಸ್ವೀಕರಿಸಿರಿ. ನಮ್ಮನ್ನು ಅನುಗ್ರಹಿಸಿರಿ ಎಂದು ಕೈಮುಗಿದು ಕೇಳಿಕೊಂಡ–

ಅಹಂ ತ್ವಾಶೃಣವಂ ವಿದ್ವನ್ ವಿವಾಹಾರ್ಥಂ ಸಮುದ್ಯತಮ್ ।
ಅತಸ್ತ್ವಮುಪಕುರ್ವಾಣಃ ಪುತ್ರೀಂ ಪ್ರತಿಗೃಹಾಣ ಮೇ ॥ — (೩-೨೨-೧೪)

ಎಂದು. ಚಕ್ರವರ್ತಿಯ ತನುಜೆಯಾದ ದೇವಹೂತಿ ನಿಷ್ಕಿಂಚನನಾದ ಕರ್ದಮನೇ ನನ್ನರಸನೆಂದು ಅರಸಿ ಬಂದಿದ್ದಾಳೆ. ರೂಪ, ಯೌವನ, ಶೀಲ ಮುಂತಾದ ಸದ್ಗುಣಗಳಿಂದ ತುಂಬಿದ ದೇವಹೂತಿ ತಾನು ಬಯಸಿದ ಶ್ರೀಮಂತ ರಾಜಕುಮಾರನನ್ನು ವರಿಸಬಹುದಿತ್ತು. ಆದರೆ ಅದೆಲ್ಲವನ್ನೂ ಬಿಟ್ಟು ಕಾಡಿನಲ್ಲಿರುವ ನಾರುಮಡಿಯನ್ನುಟ್ಟು, ಜಡೆಬಿಟ್ಟು, ಯಷ್ಟಿಯಂತಿರುವ ಎಲುಬಿನ ದೇಹದ ಶಿಷ್ಟ ಋಷಿಯೇ ಎನಗಿಷ್ಟವೆಂದು ಬಯಸಿ ಬಂದಳು. ಎಂತಹ ತ್ಯಾಗ.

ಮಗಳ ಮನೋಭಾವಕ್ಕನುಗುಣವಾಗಿ ಕನ್ಯಾದಾನ ಮಾಡಲು ಆಗಮಿಸಿದ ಮನು ಮತ್ತು ಶತರೂಪಾದೇವಿಯರ ಔದಾರ್ಯವೂ ಮೆಚ್ಚಬೇಕಾದುದೇ.

ಕರ್ದಮ ಪ್ರಜಾಪತಿಯೂ ಮನುವಿನಿಂದ ಯಾವುದೇ ಸಂಪತ್ತನ್ನೂ ಬಯಸದೆ ದೇವಹೂತಿಯ ಕೈಹಿಡಿದ. ಮುಂದಿನ ಜೀವನವನ್ನು ತ್ಯಾಗದಿಂದಲೇ ನಡೆಸಿದ ಕರ್ದಮ ದೇವಹೂತಿಯರು ಆದರ್ಶ ದಂಪತಿಗಳಾಗಿ ಬದುಕಿದರು. ಇವರ ತ್ಯಾಗಕ್ಕೆ ಮೆಚ್ಚಿದ ಭಗವಂತ ಕಪಿಲನಾಗಿ ಇವರಲ್ಲಿ ಅವತರಿಸಿದ ದೇವರನ್ನೇ ಮಗನನ್ನಾಗಿ ಪಡೆದ ಭಾಗ್ಯವಂತರಿವರು ಇಂತಹ ಆದರ್ಶ ದಾಂಪತ್ಯ ಇಂದು ನೋಡಲೂ ಸಿಗದು.

ದೇವಹೂತಿ ಭಕ್ತಿಯ ಸಂಕೇತವಾದರೆ ಕರ್ದಮರು ವೈರಾಗ್ಯದ ಸಂಕೇತ

ಕರ್ದಮ ದೇವಹೂತಿಯರ ವಿವಾಹವೆಂದರೆ ಭಕ್ತಿ ವೈರಾಗ್ಯಗಳ ಸಂಗಮ ವೆಂದರ್ಥ.

"ಭಕ್ತಿ ವೈರಾಗ್ಯಗಳು ಸೇರಿದಲ್ಲಿ ನಾ ಬರುವೆ" ಎಂದು ಕಪಿಲ ಇವರಲ್ಲಿ ಅವತರಿಸಿ ಸೂಚಿಸಿದ.

ದೇವಹೂತಿ ಕರ್ದಮರ ಕಥೆ. ನಾವೆಲ್ಲಿಯೂ ನೋಡದ ಕೇಳದ ಕಥೆ ಇದು. ಸಂತೋಷ ಮತ್ತು ಆಶ್ಚರ್ಯಗಳ ಸಂಗತಿ

ನಮ್ಮ ಕನ್ಯೆಯರೆಲ್ಲರೂ ಚಕ್ರವರ್ತಿಯ ಮಗಳಾದ ದೇವಪೂತಿಯ ಕಡೆ ತಮ್ಮ ದೃಷ್ಟಿಯನ್ನು ಹಾಯಿಸಬೇಕು. ಇಂದಿನ ಹೆಣ್ಮಕ್ಕಳೆಲ್ಲರೂ "ಮದುವೆ ಆಗದಿದ್ದರೂ ಚಿಂತೆಯಿಲ್ಲ. ಜುಟ್ಟುಬಿಟ್ಟ ವರನನ್ನು ಕಟ್ಟಿಕೊಳ್ಳಲಾರೆ" ಎಂದು ಪಟ್ಟುಹಿಡಿದು ಕುಳಿತುಕೊಳ್ಳುತ್ತಾರೆ. ಆಚರಣಶೀಲನಾದ ವ್ಯಕ್ತಿಗೆ ತಮ್ಮನ್ನು ವರಿಸಲು ಅರ್ಹತೆಯೇ ಇಲ್ಲ (Disqualification) ಎನ್ನುತ್ತಾರೆ. ತಾನಾಗಿಯೇ ಹುಡುಕಿಕೊಂಡು ಬಂದು ತಪಸ್ವಿಯಾದ ಕರ್ದಮನೇ ಪತಿಯಾಗಬೇಕೆನ್ನುವ ದೇವಹೂತಿಯ ಧಾರ್ಮಿಕ ಮನೋಭಾವವನ್ನು ಇಂದಿನ ಕನ್ಯೆಯರೂ ಅಳವಡಿಸಿಕೊಳ್ಳಬೇಕು. ತಮ್ಮ ನಿಲುವನ್ನು ಸ್ವಲ್ಪ ಸಡಿಲುಗೊಳಿಸಬೇಕು. ಚಾರಿತ್ರ್ಯ, ಜ್ಞಾನ, ಆಚರಣೆ ಇವುಗಳ ಕಡೆಗೂ ಗಮನಹರಿಸಬೇಕು. ಧಾರ್ಮಿಕ ಉನ್ನತಿಗೆ ಈ ಮೂಲಕ ನೆರವಾಗಬೇಕು ಎನ್ನುವ ಸಂದೇಶವನ್ನು ದೇವಹೂತಿ ತನ್ನ ನಡತೆಯ ಮೂಲಕ ತಿಳಿಸಿದ್ದಾಳೆ. ಇದನ್ನು ಅರ್ಥಮಾಡಿಕೊಂಡು ಸಾರ್ಥಕ ಬಾಳ್ವೆಯನ್ನು ಸಾಗಿಸೋಣ!!

ದೇವಹೂತಿಯು ಕರ್ದಮರ ಸೇವೆಯನ್ನು ಬಹಳ ನಿಷ್ಠೆಯಿಂದ ಮಾಡಿದಳು. ತಾನು ಸ್ವತಃ ರಾಜಕುಮಾರಿಯಾಗಿದ್ದರೂ ಒಬ್ಬ ಆಶ್ರಮವಾಸಿಯಾದ ಋಷಿಯ ಕೈಹಿಡಿದು ಲೋಕಕ್ಕೆ ಆದರ್ಶಪ್ರಾಯವಾದ ಸೇವೆಯನ್ನು ಸಲ್ಲಿಸಿದಳು. ಸೇವೆ ಮಾಡುತ್ತಾ ಯಷ್ಟಿಯಂತಾದ ಸತಿಯನ್ನು ಕಂಡು ಸಂತುಷ್ಟರಾದ ಕರ್ದಮರು ಅಭೀಷ್ಟವನ್ನು ಕೇಳಿಕೋ ಎಂದರು. ಭೋಗಪ್ರಪಂಚವನ್ನೇ ನಿರ್ಮಿಸಿದರು. ತಾವೂ ತಾರುಣ್ಯ ಧರಿಸಿ ನೂರು ವರುಷ ವಿಹರಿಸಿದರು. ದೇವಹೂತಿಯು ಒಂಭತ್ತು ಹೆಣ್ಮಕ್ಕಳನ್ನು ಹಡೆದಳು. ಕೊನೆಗೆ ವಿಷಯವೈರಾಗ್ಯವನ್ನು ಹೊಂದಿ ಸಂಸಾರದಿಂದ ಬಿಡುಗಡೆ ಹೊಂದುವ ಬಗೆ ಹೇಗೆ? ಎಂದು ಚಿಂತಿಸಲು ಕರ್ದಮರು ಅಭಯದಾನ ಮಾಡಿದರು. ಶ್ರದ್ಧಾಭಕ್ತಿಯಿಂದ ಭಗವಂತನನ್ನು ಭಜಿಸಹೇಳಿದರು. ಅವನೇ ನಿನಗೆ

ಮಗನಾಗುತ್ತಾನೆಂದೂ ಹೇಳಿದರು. ಅದರಂತೆ ದೇವಹೂತಿಯು ಶ್ರದ್ಧೆಯಿಂದ ಪರಮಾತ್ಮನನ್ನು ಪೂಜಿಸಿದಳು.

## ಎಲ್ಲರೂ ತಾಯಂದಿರಾಗಬೇಕು

ದೇವಹೂತಿಯ ಭಕ್ತಿಗೆ ಮೆಚ್ಚಿದ ಭಗವಂತ ಕಪಿಲನಾಗಿ ಅವಳ ಉದರದಲ್ಲಿ ಅವತರಿಸಿದ. ಭಗವಂತನಿಗೆ ಭಕ್ತರನ್ನು ಕಂಡರೆ ಎಲ್ಲಿಲ್ಲದ ಪ್ರೀತಿ. ಭಕ್ತರಿಗಾಗಿ ಏನನ್ನೂ ತ್ಯಾಗಮಾಡಬಲ್ಲ. 'ತನ್ನ ಕೈಯನ್ನು ಬೇಕಾದರೂ ಕತ್ತರಿಸಿಕೊಡಬಲ್ಲೆ' ಎನ್ನುತ್ತಾನೆ ಶ್ರೀಹರಿ.

ಭಕ್ತರ ಮಹತ್ವವನ್ನು ಬಣ್ಣಿಸುವುದಕ್ಕಾಗಿ ಕಥೆಯೊಂದನ್ನು ಹೇಳುವುದುಂಟು.

ಒಮ್ಮೆ ಚರ್ಚೆಯೊಂದು ನಡೆಯಿತು.

ಜಗತ್ತಿನಲ್ಲಿ ಯಾರು ಶ್ರೇಷ್ಠ?

ಅದಕ್ಕೊಬ್ಬ ಹೇಳಿದ: 'ಜಗತ್ತಿನಲ್ಲಿ ಆಕಾಶವೇ ದೊಡ್ಡದು ಇದಕ್ಕಿಂತ ದೊಡ್ಡ ವಸ್ತುವೇ ಇಲ್ಲ.

ಪ್ರತಿಯಾಗಿ ಮತ್ತೊಬ್ಬ ಹೇಳಿದ: ಆಕಾಶವು ದೊಡ್ಡದಲ್ಲ ವ್ಯಾಪ್ತವಾದ ಆಕಾಶವನ್ನೂ ಮೋಡವು ಮುಚ್ಚಿಬಿಡುತ್ತದೆ. ಆದ್ದರಿಂದ ಆಕಾಶವನ್ನು ಮುಚ್ಚಬಲ್ಲ ಮೋಡವೇ ಶ್ರೇಷ್ಠ.

ಕೆಲವರು ಮೇಘವೂ ದೊಡ್ಡದಲ್ಲವೆಂದರು.

ಮೇಘಮಂಡಲವು ಗಾಳಿಬೀಸಿದರೆ ಚಲ್ಲಾಪಿಲ್ಲಿಯಾಗುತ್ತದೆ. ಎಷ್ಟೇ ಮೋಡ ಕವಿದಿದ್ದರೂ ಜೋರಾಗಿ ಗಾಳಿ ಬೀಸಿದರೆ ಮೋಡ ಚದುರಿ ಹೋಗುತ್ತದೆ. ಆದ್ದರಿಂದ ಮೇಘಮಂಡಲವನ್ನು ವಿಚ್ಛಿದ್ರಗೊಳಿಸುವ ಗಾಳಿಯೇ ಶ್ರೇಷ್ಠ.

ವಾಯುವೂ ಶ್ರೇಷ್ಠವಲ್ಲವೆಂದರು:

ವಾಯುವಿಗೆ ಎಷ್ಟೇ ಶಕ್ತಿಯಿದ್ದರೂ ಬೆಟ್ಟದ ಮುಂದೆ ಇದರ ಆಟ ನಡೆಯದು. ಆದ್ದರಿಂದ ವಾಯುವನ್ನು ತಡೆಯುವ ಪರ್ವತವೇ ಶ್ರೇಷ್ಠ ಎಂದರು

ಇದಾದರೂ ಹೇಗೆ? ಈ ಬೆಟ್ಟ ಎಲ್ಲಿದೆ? ಭೂಮಿಯಲ್ಲಿದೆ. ಬೆಟ್ಟವನ್ನು ಹೊತ್ತ ಭೂಮಾತೆಯೇ ಶ್ರೇಷ್ಠವಲ್ಲವೇ? ಅಲ್ಲವೆಂದರು.

ಈ ಭೂಮಂಡಲವನ್ನು ಹೊತ್ತವರಾರು? ಭಗವಂತ. ಸಮಗ್ರ ಲೋಕಗಳನ್ನು ಹೊತ್ತ ಭಗವಂತನೇ ಶ್ರೇಷ್ಠ ಎಂದು ತೀರ್ಮಾನಮಾಡಿದರು.

ಆದರೆ ಇವರ ತೀರ್ಮಾನವನ್ನು ಭಗವಂತ ಒಪ್ಪಲಿಲ್ಲ. "ಸಮಗ್ರ ಭೂಮಂಡಲ ವನ್ನು ಧರಿಸಿದ ನನ್ನನ್ನೂ ನನ್ನ ಭಕ್ತರು ತಮ್ಮ ನಿರ್ಮಲ ಹೃದಯಕಮಲದಲ್ಲಿ ಧರಿಸಿದ್ದಾರೆ. ಆದ್ದರಿಂದ ನನಗಿಂತಲೂ ನನ್ನ ಭಕ್ತನೇ ಶ್ರೇಷ್ಠ" ಎಂದನಂತೆ ಶ್ರೀಹರಿ.

ಇಂತಹ ಔದಾರ್ಯದ ಮೂರ್ತಿಯಾದ ಭಗವಂತನನ್ನು ತನ್ನ ಉದರದಲ್ಲಿ ಧರಿಸಿದ ಮಹಾಮಾತೆ ದೇವಹೂತಿ

ನಾವೂ ಇಂತಹ ಭಗವಂತನಿಗೆ ತಾಯಂದಿರಾಗಬೇಕು! ಅಂದರೆ 'ಗರ್ಭ ಇವ ಸುಭೃತೋ ಗರ್ಭಿಣೀಭಿಃ' ಎಂಬ ಉಪನಿಷತ್ತಿನ ಮಾತಿನಂತೆ 'ಗರ್ಭಿಣಿಯರು ಗರ್ಭವನ್ನು ಧರಿಸುವಂತೆ, ಜ್ಞಾನಿಗಳೂ ತಮ್ಮ ಹೃದಯಗಹ್ವರದಲ್ಲಿ ಭಗವಂತನನ್ನು ಧರಿಸಬೇಕು.

ಗರ್ಭಿಣಿಯರು ತಮ್ಮ ಗರ್ಭಕ್ಕೆ ಏನೂ ಘಾಸಿಯಾಗದಂತೆ ಎಲ್ಲ ವಿಧದ ನಿಯಮಗಳಿಗೂ ಬದ್ಧರಾಗಿದ್ದುಕೊಂಡು ಸುಪುತ್ರನಿಗೆ ಜನ್ಮಕೊಡುತ್ತಾರೆ. ಇವರಂತೆ ನಾವೂ ಸಹ ಭಗವಂತನು ಹೃದಯದಲ್ಲಿ ಮೂಡಲು ಬೇಕಾದ ನಿಯಮಗಳಿಗೆ ಬದ್ಧರಾಗಬೇಕು. ಭಕ್ತಿ ಎಂಬ ಗರ್ಭವನ್ನು ಬೆಳೆಸಬೇಕು. ಅದರಿಂದ ಭಗವಂತನು ಪ್ರಕಟವಾಗುತ್ತಾನೆ.

**ಆತ್ಮತತ್ತ್ವಾವಬೋಧೇನ ವೈರಾಗ್ಯೇಣ ದೃಢೇನ ಚ ।**
**ಈಯತೇ ಭಗವಾನೇಭಿಃ ಸುಗುಣೋ ನಿರ್ಗುಣಃ ಸ್ವದೃಕ್ ॥** — (೩-೨೨-೩೬)

ಎನ್ನುತ್ತದೆ ಭಾಗವತ.

ಗರ್ಭಿಣಿಯರು ಸ್ವೇಚ್ಛಾಚಾರಿಗಳಾದರೆ ಉತ್ತಮ ಗರ್ಭ ಬೆಳೆಸಲಾಗದು. ಅದರಂತೆ ನಾವು ಭಗವಂತನ ಆಜ್ಞಾರೂಪವಾದ ಆಚಾರ-ವಿಚಾರಗಳನ್ನು ಗಾಳಿಗೆ ತೂರಿ ನಡೆದರೆ ಕೃಷ್ಣನೆಂಬ ಮಗುವನ್ನು ಬೆಳೆಸಲಾಗದು. ಆದ್ದರಿಂದ ನಮ್ಮ ಜೀವನದಲ್ಲಿ ಜ್ಞಾನ, ಭಕ್ತಿ. ವಿರಕ್ತಿಗಳೆಂಬ ನಿಯಮವನ್ನು ಹಾಕಿಕೊಳ್ಳಬೇಕು. ಶ್ರೀಕೃಷ್ಣನೆಂಬ ಮಗನನ್ನು ಪಡೆಯುವ ತಾಯಂದಿರಾಗೋಣ!!

ಕರ್ದಮರು ಬ್ರಹ್ಮದೇವರ ಆಜ್ಞೆಯಂತೆ ಕರ್ತವ್ಯಗಳನ್ನು ನೆರವೇರಿಸಿದಾಗ ಬ್ರಹ್ಮದೇವರು ಪ್ರತ್ಯಕ್ಷರಾಗಿ ಬಂದು ಕರ್ದಮರನ್ನು ಅನುಗ್ರಹಿಸಿದರು. ಕರ್ದಮರ ಒಂಭತ್ತುಮಂದಿ ಕನ್ಯೆಯರನ್ನು ತನ್ನ ಮಕ್ಕಳಾದ ಮರೀಚಿ, ಅತ್ರಿ, ಅಂಗೀರಸ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ, ಭೃಗು, ದಕ್ಷರಿಗೆ ಕೊಟ್ಟು ವಿವಾಹಮಾಡಲು ಹೇಳಿದ. ಅದರಂತೆ ಕರ್ದಮರು ಮದುವೆಮಾಡಿಕೊಟ್ಟರು. ಕರ್ದಮರಿಂದ ಆದೃತರಾದ ಮರೀಚ್ಯಾದಿಗಳು ತಮ್ಮ ತಮ್ಮ ಪತ್ನಿಯರೊಡಗೂಡಿ ಸಂತೋಷದಿಂದ ಆಶ್ರಮಕ್ಕೆ ತೆರಳಿದರು.

ತರುವಾಯ ಕರ್ದಮರು ಒಂದುದಿನ ಏಕಾಂತದಲ್ಲಿ ಕಪಿಲದೇವರ ಬಳಿಗೆ ಹೋಗಿ 'ನಾನು ಸನ್ಯಾಸವನ್ನು ಸ್ವೀಕರಿಸಿ ನಿನ್ನನ್ನೇ ಧ್ಯಾನಿಸುತ್ತಾ ಸಂಚರಿಸುವೆನು' ಎಂದು ಹೇಳಿದರು. 'ತಾಯಿಯ ಉದ್ಧಾರದ ಹೊಣೆಗಾರಿಕೆ ನನ್ನದು, ನೀವು ತೆರಳಿರಿ' ಎಂದನು ಕಪಿಲ. ಅದರಂತೆ ಹರಿಗೆ ವಂದಿಸಿ ಕರ್ದಮರು ಕಾಡಿಗೆ ನಡೆದರು.

## ಕಪಿಲನ ಸಂದೇಶಗಳು

ಕರ್ದಮರು ತಮ್ಮ ಕರ್ತವ್ಯಗಳನ್ನೆಲ್ಲಾ ಪೂರೈಸಿ ಕಾಡಿಗೆ ಹೊರಟಾಗ ನಿರ್ವಿಣ್ಣಳಾದ ದೇವಹೂತಿಯು ತನ್ನ ಮಗನಾದ ಕಪಿಲನ ಬಳಿ ಪ್ರಾರ್ಥಿಸುತ್ತಿದ್ದಾಳೆ.

ಕತ್ತಲೆಯನ್ನು ಹೊಡೆದೋಡಿಸುವ ಜ್ಞಾನಸೂರ್ಯನಂತೆ ಪ್ರಕಟನಾದ ಕಪಿಲನೇ, ನನ್ನ ಮೌಢ್ಯವನ್ನೆಲ್ಲಾ ಪರಿಹರಿಸು. ಹೃದಯದಲ್ಲಿ ಅರಿವೆಂಬ ಗಂಗೆಯನ್ನು ಹರಿಸು ಎಂದು ಪ್ರಾರ್ಥಿಸಿದಾಗ ಕಪಿಲರು ತಾಯಿಯನ್ನು ಮುಂದಿಟ್ಟುಕೊಂಡು ಸಮಸ್ತ ಜಗತ್ತಿಗೇ ಉತ್ತಮ ಸಂದೇಶಗಳನ್ನು ನೀಡುತ್ತಿದ್ದಾರೆ–

'ಜಗತ್ತಿನಲ್ಲಿ ಬಂಧನಕ್ಕೂ ಬಿಡುಗಡೆಗೂ ಮನಸ್ಸೇ ಕಾರಣವಾಗಿದೆ'.

ಒಂದೇ ಬೀಗದಕೈಯಿಂದ ಪೆಟ್ಟಿಗೆಯನ್ನು ಮುಚ್ಚಲೂಬಹುದು. ತೆರೆಯಲೂ ಬಹುದು. ಒಂದೆಡೆ ತಿರುಗಿಸಿದಾಗ ಕದ ಮುಚ್ಚಿಕೊಳ್ಳುತ್ತದೆ. ಮತ್ತೊಂದು ಕಡೆ ತಿರುಗಿಸಿದಾಗ ತೆರೆದುಕೊಳ್ಳುತ್ತದೆ. ಮನಸ್ಸೂ ಹೀಗೆಯೇ. ಸಂಸಾರದ ಕಡೆ ಮನ ತಿರುಗಿಸಿದಾಗ ಮುಕ್ತಿಯ ಕದ ಮುಚ್ಚಿಕೊಳ್ಳುತ್ತದೆ. ಭಗವಂತನ ಕಡೆ ತಿರುಗಿಸಿದಾಗ ಕದವು ತೆರೆದುಕೊಳ್ಳುತ್ತದೆ.

ಸಂಸಾರದಲ್ಲಿನ ಆಸಕ್ತಿಯೇ ಬಂಧನ.
ಕಂಸಾರಿಯಲ್ಲಿ ಆಸಕ್ತಿಯೇ ಭವಮೋಚನ.

* * *

ಮನಸ್ಸು ಕನ್ನಡಿಯಂತೆ....

ಮನಸ್ಸನ್ನು ಕನ್ನಡಿಯಂತೆ ಭಾವಿಸಬೇಕು. ಕನ್ನಡಿ ಸ್ವಚ್ಛವಾದಾಗ ಪದಾರ್ಥಗಳು ತೋರುತ್ತವೆ. ಕನ್ನಡಿಯೇ ಮಲಿನವಾದಾಗ ಏನೂ ತೋರದು. ಅದರಂತೆ ಮನಸ್ಸು ಸ್ವಚ್ಛವಾದಾಗ ಸದ್ಗುಣಗಳು ಪ್ರಕಾಶಿಸುತ್ತವೆ. ವಿಷಯಗಳ ಸಂಪರ್ಕದಿಂದ ದೂಷಿತ ವಾದಾಗ ಅಜ್ಞಾನವೆಂಬ ಕತ್ತಲೆ ತುಂಬಿಕೊಳ್ಳುತ್ತದೆ. ಇಂತಹ ಮನಸ್ಸನ್ನು ಸ್ವಚ್ಛ ಗೊಳಿಸಬೇಕಾದರೆ ಸಜ್ಜನರ ಸಂಪರ್ಕ ಬೇಕು. ಕನ್ನಡಿಯ ಕಶ್ಮಲವನ್ನು ನೀರಿನಿಂದ ತೊಳೆಯುವಂತೆ ಹೃದಯಕನ್ನಡಿಯ ಕಶ್ಮಲವನ್ನು ತೊಳೆಯುವ ನೀರೇ ಜ್ಞಾನಿಗಳ ಉಪದೇಶ. ಪ್ರಕೃತಿಸಂಪರ್ಕದಿಂದಂಟಿದ ದುರ್ಗುಣಗಳನ್ನು ಭಗವತ್ಕಥೆಗಳಿಂದ ತೊಳೆಯುತ್ತಾರೆ. ಇಂತಹ ಜ್ಞಾನಿಗಳನ್ನು ಕೊಂಡಾಡುತ್ತಾರೆ.

**ತಿತಿಕ್ಷವಃ ಕಾರುಣಿಕಾಃ ಸುಹೃದಃ ಸರ್ವದೇಹಿನಾಮ್ ।**
**ಅಜಾತಶತ್ರವಃ ಶಾಂತಾಃ ಸಾಧವಃ ಸಾಧುಭೂಷಣಾಃ ॥** — (೩–೨೫–೨೧)

ಇಂದ್ರಿಯನಿಗ್ರಹವುಳ್ಳವರು, ಸ್ವಾರ್ಥವಿಲ್ಲದೆ ಪ್ರತ್ಯುಪಕರಿಸುವವರು, ಕರುಣಾ ಮೂರ್ತಿಗಳು, ಶತ್ರುಗಳೇ ಇಲ್ಲದವರು, ಸಜ್ಜನರಿಗೂ ಸಜ್ಜನರಾದವರು –ಇಂತಹ ಸಜ್ಜನರು ನಿರಂತರ ಭಗವಚ್ಚಿಂತನೆಯಲ್ಲಿಯೇ ತಮ್ಮನ್ನು ತೊಡಗಿಸಿಕೊಂಡಿರುತ್ತಾರೆ. ಈ ನಿಸ್ಸಂಗಿಗಳ ಸಂಗದಿಂದ ಸರ್ವದೋಷಗಳೂ ಪರಿಹಾರವಾಗುತ್ತವೆ.

ಶತ್ರುಗಳು ಎಲ್ಲಿದ್ದಾರೆ?

**ಚೇತಃ ಖಲ್ವಸ್ಯ ಬಂಧಾಯ ಮುಕ್ತಯೇ ಚಾತ್ಮನೋ ಮತಮ್ ।**
**ಗುಣೇಷು ಸಕ್ತಂ ಬಂಧಾಯ ರತಂ ವಾ ಪುಂಸಿ ಮುಕ್ತಯೇ ॥**

— (೩-೨೫-೧೫)

ಬಿಡುಗಡೆ ಬಂಧನಗಳಿಗೆ ಮನಸ್ಸೇ ಕಾರಣ. ವಿಷಯಾಸಕ್ತಿಯಿಂದ ಬಂಧನ. ಪರಮಪುರುಷನಲ್ಲಿ ಆಸಕ್ತಿಯಿಂದ ಮೋಚನ. ಇದಕ್ಕೊಂದು ಕಥೆಯಿದೆ–

ಒಬ್ಬ ದೇವರ ಬಳಿ ಪ್ರಾರ್ಥಿಸಿದ. ದೇವರೇ ನನ್ನನ್ನು ಶತ್ರುಗಳಿಂದ ಕಾಪಾಡು. ಅವರ ಉಪದ್ರವ ಸಹಿಸಲಾರೆ. ನಿನ್ನ ಶಸ್ತ್ರಾಸ್ತ್ರಗಳನ್ನೆಲ್ಲಾ ನನ್ನ ಶತ್ರುಗಳ ಮೇಲೆ ಎಸೆ ಎಂದು ಅಂಗಲಾಚಿದ.

ಭಗವಂತನ ಅಸ್ತ್ರಗಳು ಶತ್ರುಗಳ ಮೇಲೆ ಬೀಳಲೇ ಇಲ್ಲ. ಬಹಳ ದುಃಖಿತನಾದ. ಪುನಃ ಆಗ್ರಹದ ಪ್ರಾರ್ಥನೆ ಸಲ್ಲಿಸಿದ. ಪ್ರಾರ್ಥನೆ ಅತಿಯಾದಾಗ ದೇವರ ಶಸ್ತ್ರಗಳು ಇವನ ತಲೆಯಮೇಲೇ ಬೀಳತೊಡಗಿದವು.

ಇದನ್ನು ಕಂಡು ಕಂಗಾಲಾದ. ದೇವನೇ! ಶತ್ರುಗಳ ಮೇಲೆ ಆಯುಧಗಳನ್ನೆಸೆ ಎಂದರೆ ನನ್ನ ತಲೆಯಮೇಲೇ ಎಸೆಯುತ್ತಿರುವಿಯಲ್ಲಾ!! ನಿನ್ನ ಗುರಿಯೂ ತಪ್ಪಿತೆ? ಎಂದು ಗೋಳಾಡಿದ.

ದೇವರು ಪ್ರತ್ಯಕ್ಷನಾಗಿ ನುಡಿದ. ಮಗು! ನಾನು ಮೊದಲು ಸಂಕೋಚಪಟ್ಟೆ. ನಿನ್ನ ಮೇಲೆ ಆಯುಧ ಎಸೆಯಲು ಹಿಂಜರಿದೆ. ನಿನ್ನ ಅತಿಯಾದ ಪ್ರಾರ್ಥನೆಯಿಂದ ಹೀಗೆ ಮಾಡಲೇಬೇಕಾಯಿತು. ನೀನು 'ನನ್ನ ಶತ್ರುಗಳ ಮೇಲೆ ಆಯುಧ ಎಸೆ' ಎಂದೆಯಲ್ಲವೇ. ಆ ನಿನ್ನ ಶತ್ರುಗಳು ಹೊರಗೆ ಎಲ್ಲಿಯೂ ಇಲ್ಲ. ನಿನ್ನ ಒಳಗೇ ಇದ್ದಾರೆ. ನಿನ್ನ ಅಂತಃಕರಣದಲ್ಲಡಗಿದ ಕಾಮ, ಕ್ರೋಧಾದಿಗಳೇ ನಿನ್ನ ಶತ್ರುಗಳು. ನಿನ್ನೊಳಗೆ ಇಂತಹ ಶತ್ರುಗಳ ಸಾಮ್ರಾಜ್ಯವೇ ನಿರ್ಮಾಣವಾಗಿದೆ. ಅವರನ್ನು ಸಂಹರಿಸಬೇಕಾದರೆ ನಿನ್ನನ್ನೇ ಹೊಡೆಯುವುದು ಅನಿವಾರ್ಯ ಎಂದ.

ಜಿಜ್ಞಾಸುವಿಗೆ ಜ್ಞಾನೋದಯವಾಯಿತು. ಶತ್ರುವು ತನ್ನ ಮನಸ್ಸೇ ಆಗಿದೆ. ಮಿತ್ರನೂ ಮನವೇ ಆಗಿದೆ ಎಂದು ತಿಳಿದ. ಇದು ನಮ್ಮೆಲ್ಲರ ಕಥೆ. ನಮ್ಮ ಕಣ್ಣೂ ತೆರೆಯಬೇಕು.

* * *

ಸಂಸಾರದ ಬಿಡುಗಡೆ ಹೇಗೇ?

ಜ್ಞಾನ, ಭಕ್ತಿ, ವೈರಾಗ್ಯಗಳಿಂದಲೇ ಪ್ರಕೃತಿಯ ಬಂಧನದಿಂದ ಬಿಡುಗಡೆ. ನಮ್ಮ ಮೈಗೆ ಅಂಟಿದ ಮಣ್ಣು, ಕಶ್ಮಲ, ದುರ್ಗಂಧಗಳು ನೀರಿನಿಂದ ತೊಳೆದರೆ ಪರಿಹಾರವಾಗುತ್ತವೆ. ಆದರೆ ಚರ್ಮಕ್ಕೆ ಅಂಟಿದ ಮಚ್ಚೆ, ಸ್ವಚ್ಛ ನೀರಿನಿಂದ ಎಷ್ಟು ತಿಕ್ಕಿತೊಳೆದರೂ ಅಳಿಸದು. ಮತ್ತಷ್ಟು ಕಪ್ಪಾಗಿ ಮಿಂಚುತ್ತದೆ. ಹಾಗೆಯೇ

ಪ್ರಕೃತಿಬಂಧನ ಎಂಬುದು ಶರೀರಕ್ಕೆ ಅಂಟಿಕೊಂಡ ಮಚ್ಚೆಯಂತೆ. ಅನಾದಿಕಾಲದ ಕತ್ತಲನ್ನು ಬೆಳಕು ಕಳೆಯುವಂತೆ ಅನಾದಿಕಾಲದ ಈ ಪ್ರಕೃತಿಬಂಧನವನ್ನು ಅಜ್ಞಾನದ ಕತ್ತಲೆಯನ್ನು ಹರಿಯ ಅರಿವೆಂಬ ಬೆಳಕಿನಿಂದ ಪರಿಹರಿಸಿಕೊಳ್ಳಬೇಕು. ಹೀಗೆ ನಮ್ಮೆಲ್ಲರ ಕಣ್ತೆರೆದು ಅನೇಕ ಸಂದೇಶಗಳನ್ನು ಕಪಿಲರು ನೀಡಿದ್ದಾರೆ.

ಮನಸ್ಸು ಕೀಲಿಕೈ ಇದ್ದಂತೆ ಬಂಧಮೋಕ್ಷಗಳಿಗೆ ಕಾರಣ.
ನಿಸ್ಸಂಗಿಗಳ ಸಂಗದಿಂದ ಸಂಗದೋಷ ಪರಿಹಾರ.
ನಮ್ಮ ಶತ್ರುಗಳೆಲ್ಲ ನಮ್ಮೊಳಗೇ ಅಡಗಿದ್ದಾರೆ.
ಪ್ರಕೃತಿಯು ಬಂಧನ ಶರೀಕ್ಕಂಟಿದ ಮಚ್ಚೆಯಂತೆ.

ದೇವರು ಕೆಲವರಿಗೆ ಹಣಕ್ಕಾಗಿ, ಕೆಲವರಿಗೆ ಮೋಕ್ಷಕ್ಕಾಗಿ. ಶ್ರೇಷ್ಠ ಜ್ಞಾನಿಗಳಿಗೆ ದೇವರಿಗಾಗಿ ಮೋಕ್ಷ.

* * *

ದೇವಹೂತಿಯು ಕಪಿಲನ ಬಳಿ ಮತ್ತೆ ಭಕ್ತಿಯ ಪ್ರಕಾರಗಳನ್ನು ತಿಳಿಸಬೇಕೆಂದು ಪ್ರಾರ್ಥಿಸಲು ಕಪಿಲನು ಉತ್ತರಿಸುತ್ತಾನೆ.

ಭಕ್ತರಲ್ಲಿ ಭಿನ್ನತೆಗಳಿವೆ. ಫಲಕಾಮನೆಯಿಂದ ಭಗವದಾರಾಧನೆಯನ್ನು ಮಾಡುವ ಭಕ್ತ ರಾಜಸಭಕ್ತ. ಇವನು ಭಕ್ತಿಯನ್ನೇನೋ ಮಾಡುತ್ತಾನೆ. ಆದರೆ ಇದರಲ್ಲಿ ಅನೇಕ ಲೋಪದೋಷಗಳಿವೆ.

**ವಿಷಯಾನಭಿಸಂಧಾಯ ಯಶ ಐಶ್ವರ್ಯಮೇವ ಚ ।**
**ಅರ್ಚಾದಾವರ್ಚಯೇದ್ ಯೋ ಮಾಂ ಪೃಥಗ್ಭಾವಃ ಸ ರಾಜಸಃ ॥**
— (೩–೩೦–೯)

ಪ್ರೇಯಸ್ಸುಗಳನ್ನು ಬಯಸಿ ಐಶ್ವರ್ಯ, ಸಂಪತ್ತು, ಕೀರ್ತಿ, ವೈಭವ ಇವುಗಳನ್ನು ಉದ್ದೇಶವಾಗಿಟ್ಟುಕೊಂಡು ಕರ್ತವ್ಯಗಳನ್ನು ಮಾಡುತ್ತಾನೆ. ಹರಿಪೂಜೆಯನ್ನು ಗುಡಿಯಲ್ಲಿರುವ ಪ್ರತಿಮೆಗೆ ಮಾತ್ರ ಸಲ್ಲಿಸುತ್ತಾನೆ. ದೇವರನ್ನು ದೇವಸ್ಥಾನದಲ್ಲಿಯೇ ಕಟ್ಟಿಹಾಕಿರುತ್ತಾನೆ. ತನ್ನ ಅಂತರ್ಯಾಮಿಯಾಗಿ ಸರ್ವಾಂತರ್ಯಾಮಿಯಾಗಿ ಭಗವಂತ ನಿದ್ದಾನೆ' ಎಂಬ ಕಲ್ಪನೆಯೇ ಇವನಿಗಿರುವುದಿಲ್ಲ. ಅಲ್ಲದೆ 'ನನಗೆ ಶ್ರೀರಾಮ ಇಷ್ಟ. ಕೃಷ್ಣ ಅಷ್ಟು ಇಷ್ಟನಲ್ಲ'ವೆಂದು ಸ್ಪಷ್ಟವಾಗಿ ನುಡಿಯುತ್ತಾನೆ. ರಾಮ–ಕೃಷ್ಣ– ವೇದವ್ಯಾಸರೂಪಗಳಿಗೆ ಭೇದವಿಲ್ಲದಿದ್ದರೂ ಭೇದವೆಣಿಸುತ್ತಾನೆ. ಹೀಗೆ ಚಿಂತಿಸುವ ನರನು ರಾಜಸಭಕ್ತನೆನಿಸುತ್ತಾನೆ.

ಇದ್ಯಾವುದನ್ನೂ ಬಯಸದೆ ನಿಷ್ಕಾಮನೆಯಿಂದ ಭಗವದಾರಾಧನೆಯನ್ನು ಮಾಡುವವ ಸಾತ್ವಿಕಭಕ್ತನೆನಿಸುತ್ತಾನೆ. ಅವನ ಲಕ್ಷಣವನ್ನೂ ಭಾಗವತ ನಿರೂಪಿಸಿದೆ.

**ಕರ್ಮನಿರ್ಹಾರಮುದ್ದಿಶ್ಯ ಪರಸ್ಮಿನ್ ವಾ ತದರ್ಪಣಮ್ ।**
**ಯಜೇದ್ ಯಷ್ಟವ್ಯಮಿತಿ ವಾ ಪೃಥಗ್ಭಾವಃ ಸ ಸಾತ್ತ್ವಿಕಃ ॥** — (೩–೩೦–೧೦)

ಸಾತ್ವಿಕನಾದವನು ಕರ್ಮಗಳು ತನಗೆ ವಿಹಿತವೆಂದು ಆಚರಿಸುತ್ತಾನೆ ಹೊರತು ಅವುಗಳಿಗೊಂದು ಪ್ರಯೋಜನವನ್ನು ಬಯಸುವುದಿಲ್ಲ. ಪಾಪವೂ ಅಳಿಯಬೇಕು, ಹರಿಯು ಹೃದಯದಲ್ಲಿ ಬೆಳೆಯಬೇಕೆಂಬ ಮೌಲಿಕ ಚಿಂತನೆಯಿಂದ ಕರ್ತವ್ಯಗಳನ್ನಾ ಚರಿಸುತ್ತಾನೆ. ತಾಯಿಯು ತನ್ನ ತನಯನನ್ನು ಬೆಳೆಸುವಾಗ ಪ್ರತಿಫಲವನ್ನು ಅಪೇಕ್ಷಿಸುವುದಿಲ್ಲ. ದೊಡ್ಡವನಾದ ಬಳಿಕ ಏನಾದರೂ ಅವನಿಂದ ಬಯಸಿಯಾಳು! ಆದರೆ ಮಗುವಾಗಿದ್ದಾಗ ಕೇವಲ ತನ್ನ ಕರ್ತವ್ಯವೆಂದರಿತು ತನಗೆ ಸಂಬಂಧಿಸಿದ್ದೆಂದು ಸಂತೋಷದಿಂದ ಲಾಲನೆಪಾಲನೆಗಳನ್ನಾಚರಿಸುತ್ತಾಳೆ. ಅದರಂತೆ ಸಾತ್ವಿಕ ಭಕ್ತನು ಸರ್ವವಿಧದ ಕಾಮನೆಗಳನ್ನೂ ತೊರೆದು ಸಹಜವಾಗಿ ಹರಿಪ್ರೀತನಾಗಲೆಂದು ಭಗವದಾರಾಧನೆ ಮಾಡುತ್ತಾನೆ. ತಾಯಿಗೆ ಮಗುವು ಅತ್ಯಂತ ಪ್ರೀತಿಯ ವಸ್ತು. ಆದ್ದರಿಂದಲೇ ಯಾವ ಫಲಕಾಮನೆಗಳೂ ಇಲ್ಲದೆ ನಿರ್ಮಲ ಪ್ರೀತಿಯಿಂದ ಪೋಷಿಸುತ್ತಾಳೆ. ಪ್ರೀತಿಯ ಸಾಂದ್ರತೆ ಇರುವಲ್ಲಿ ಇತರ ಬಯಕೆಗಳು ಅಂಕುರಿಸವು. ಅದರಂತೆ ಸಾತ್ವಿಕರಿಗೆ ಪರಮಪ್ರಿಯವಾದ ವಸ್ತು ಭಗವಂತ. ಆದ್ದರಿಂದಲೇ ಫಲ ಬಯಸದೆ ಕರ್ತವ್ಯ ಮಾಡುತ್ತಾರೆ.

ಶ್ರೀಮದಾಚಾರ್ಯರೂ ಉಡುಪಿಯಲ್ಲಿ ಶ್ರೀಕೃಷ್ಣನ ಬಾಲರೂಪದ ಪ್ರತಿಮೆಯನ್ನೇ ಪ್ರತಿಷ್ಠೆಮಾಡಿದ್ದಾರೆ. ಬಾಲಕೃಷ್ಣನನ್ನು ಸ್ಥಾಪಿಸುವ ಮೂಲಕ ನಮಗೊಂದು ಸಂದೇಶವನ್ನು ನೀಡಿದ್ದಾರೆ. 'ತಾಯಿಯು ಮಗುವನ್ನು ನಿಃಸ್ವಾರ್ಥ ಮತ್ತು ಕರ್ತವ್ಯವೆಂದು ಪ್ರೀತಿಸುವಂತೆ ಭಗವಂತನನ್ನೂ ನಿಃಸ್ವಾರ್ಥಭಾವನೆಯಿಂದ ಕರ್ತವ್ಯ ಎಂದು ಭಜಿಸಿರಿ!' ಎಂದು.

ಹರಿಪ್ರೀತಿಕರವಾದ ಕರ್ತವ್ಯಗಳನ್ನು ನಾವು ಮಾಡಿದಾಗ ನಾವು ಏನೂ ಬಯಸದಿದ್ದರೂ ಎಲ್ಲವೂ ಒದಗಿಬರುತ್ತವೆ. ಆದ್ದರಿಂದ ಹರಿಯು ಯಾವುದರಿಂದ ಪ್ರಸನ್ನನಾಗುತ್ತಾನೆಂದು ಪರ್ಯಾಲೋಚಿಸಬೇಕು. ಲಕ್ಷ್ಮೀಪತಿಯಾದ ಶ್ರೀಹರಿಗೆ ಧನ, ಕನಕ, ಇತರ ಯಾವ ಸಂಪತ್ತೂ ಬೇಕಿಲ್ಲ. ಹೇರಳವಾಗಿ ಇವುಗಳನ್ನು ಕೊಟ್ಟರೂ ಅವನು ಸಂತುಷ್ಟನಾಗಲಾರ. ಭಗವಂತನೇ ಹೇಳಿದ ಕರ್ತವ್ಯಗಳನ್ನು ಮಾಡಿದಾಗ 'ನಾನು ಹೇಳಿದ ಕೆಲಸ ಮಾಡಿದ್ದಾನೆಂದು' ನಮ್ಮ ವಿಷಯದಲ್ಲಿ ಸಂತುಷ್ಟನಾಗುತ್ತಾನೆ.

ಒಬ್ಬ ತಂದೆ ತನ್ನ ಮಗನಿಗೆ ಪತ್ರ ಒಂದನ್ನು ಬರೆಯುತ್ತಾನೆ. 'ನಾನು ಇಂತಹ ದಿವಸ ಇಂತಹ ರೈಲಿನಲ್ಲಿ ಇಂತಹ ಪ್ಲಾಟ್‌ಫಾರಂಗೆ ಇಷ್ಟು ಗಂಟೆಗೆ ಬರುತ್ತೇನೆ. ನೀನು ಅಲ್ಲಿಗೆ ಆ ಸಮಯಕ್ಕೆ ಬಾ' ಎಂದು ಬರೆದು ಪೋಸ್ಟ್ ಮಾಡುತ್ತಾನೆ. ಮಗನ ಕೈಗೆ ಅಪ್ಪನ ಪತ್ರ ತಲುಪುತ್ತದೆ. ತಂದೆಯ ಪತ್ರವನ್ನು ನೋಡಿದ ಈ ಸುಪುತ್ರನಿಗೆ ಆನಂದವೋ ಆನಂದ. ಇದು ತಂದೆಯ ಪತ್ರವೆಂದು ತಿಳಿದು ದೇವರ ಕೋಣೆಯಲ್ಲಿಟ್ಟು ಗಂಧ, ಪುಷ್ಪ, ಕುಂಕುಮ ಎಲ್ಲವನ್ನೂ ಏರಿಸಿದ. ಆದರೆ ಪತ್ರದಲ್ಲಿ ಬರೆದ ವಿಷಯವನ್ನು ಓದಲೇ ಇಲ್ಲ. ಆ ದಿನ ಟ್ರೈನೂ ಬಂತು ಅಪ್ಪನೂ ಬಂದ. ಆದರೆ ರೈಲ್ವೆ ನಿಲ್ದಾಣದಲ್ಲಿ ಅಪ್ಪನನ್ನು ಕರೆದೊಯ್ಯಲು ಯಾವ ಬೆಪ್ಪನೂ

ಬಂದಿರಲಿಲ್ಲ. ತಾನು ತಿಳಿಸಿದಂತೆ ಆಚರಿಸದ ಪುತ್ರನ ಬಗ್ಗೆ ಅಪ್ಪ ಬೇಸರಗೊಂಡ. ಅಪ್ಪನ ಬಗ್ಗೆ ಸುಪುತ್ರ ಅಭಿಮಾನ ಹೊಂದಿ ಪತ್ರಿಕೆಗಳಿಂದ ಪತ್ರಪೂಜೆ ಮಾಡಿದ್ದರೂ ಕರ್ತವ್ಯಮಾಡದೆ ತಂದೆಯ ಅಪ್ರೀತಿಯನ್ನೆ ಗಳಿಸಿದ.

ಅದರಂತೆ ಜಗತ್ತಿಗೆ ತಂದೆಯಾದ ಭಗವಂತನೂ ನಮ್ಮೆಲ್ಲರಿಗೂ ಕಾಗದ ಬರೆದಿದ್ದಾನೆ. ಸ್ವತಃ ತಾನೇ ಬರೆದಿದ್ದಾನೆ. ಏನು ಮಾಡಬೇಕು ಏನು ಮಾಡ ಬಾರದೆಂದು ವಿವರಿಸಿದ್ದಾನೆ. ಶ್ರುತಿಸ್ಮೃತಿಗಳೇ ಭಗವಂತನು ಬರೆದ ಪತ್ರಗಳು. ಅವುಗಳನ್ನು ಮೀರಿ ನಡೆದರೆ 'ನನ್ನ ಭಕ್ತನಾದರೂ ನನಗೆ ಪ್ರಿಯನಲ್ಲ' ಎಂದು ಅದರ ದುಷ್ಪರಿಣಾಮವನ್ನು ತಿಳಿಸಿದ್ದಾನೆ.

**ಶ್ರುತಿಸ್ಮೃತೀ ಹರೇರಾಜ್ಞೇ ಯ ಉಲ್ಲಂಘ್ಯ ಪ್ರವರ್ತತೇ ।**
**ಆಜ್ಞಾಛೇದೀ ಮಮ ದ್ವೇಷೀ ಮದ್ಭಕ್ತೋಽಪಿ ನ ವೈಷ್ಣವಃ ।**

ಎಂದು. ನಾವು ಅವನು ತಿಳಿಸಿದ್ದನ್ನು ಗಮನಿಸದೆ ವರುಷಕ್ಕೊಮ್ಮೆ ನವರಾತ್ರಿಯಲ್ಲಿ ಪುಸ್ತಕಗಳನ್ನು ಸರಸ್ವತೀಪೂಜೆಗೆ ಇಡುತ್ತೇವೆ. ಷೋಡಶೋಪಚಾರಪೂಜೆ ಸಲ್ಲಿಸುತ್ತೇವೆ ಎಂದೂ ಅವುಗಳಲ್ಲಡಗಿದ ತತ್ವಚಿಂತನೆ ಕರ್ತವ್ಯಗಳ ಬಗ್ಗೆ ಗಮನವನ್ನೇ ಹರಿಸು ವುದಿಲ್ಲ. ಒಂದು ದಿನ ಅನರ್ಘ್ಯವಾದ ನಮ್ಮ ಜೀವನರತ್ನವೇ ನಾಶವಾಗಿ ಹೋಗುತ್ತದೆ. ನಾವು ಸಲ್ಲಿಸುವ ಪುಸ್ತಕ ಪೂಜೆಯೇ ಭಕ್ತಿಯಲ್ಲ. ಪರಮಾತ್ಮನು ಏನೇನು ಕರ್ತವ್ಯಗಳನ್ನು ಮಾಡಲೇಬೇಕೆಂದು ತಿಳಿಸಿದ್ದಾನೋ, ಜಗತ್ತನ್ನು ಸೃಷ್ಟಿಮಾಡಿ ಜಗತ್ತಿನ ಜನರ ಅಭಿವೃದ್ಧಿಗೆ ಏನು ಕರ್ತವ್ಯಗಳನ್ನು ಮಾಡಬೇಕೆಂದು ಬೋಧಿಸಿ ದ್ದಾನೋ ಅವುಗಳನ್ನು ಶ್ರದ್ಧೆಯಿಂದ ಮಾಡಿದಾಗ ಮಾತ್ರ ಭಗವಂತನು ಪ್ರಸನ್ನನಾಗು ತ್ತಾನೆ. ಇದೇ ನಿಜವಾದ ಭಕ್ತಿ ಎನಿಸುತ್ತದೆ. ಇದರಿಂದ ಭಗವಂತನು ಪ್ರಸನ್ನನಾಗು ವಷ್ಟು ಮತ್ತ್ಯಾವುದರಿಂದಲೂ ಪ್ರಸನ್ನನಾಗುವುದಿಲ್ಲ. ಸಮಾಜದಲ್ಲಿ ಮಾಡಬೇಕಾದ ತನ್ನ ಕರ್ತವ್ಯಗಳನ್ನು ಮಾಡಿ ಹರಿಗರ್ಪಿಸಿದಾಗ ನಮ್ಮ ಉದ್ದೇಶವು ಸಿದ್ಧಿಸುತ್ತದೆ. ಇದೇ ನಿಜವಾದ ಹರಿಪೂಜೆ ಎನಿಸುತ್ತದೆ. ಗೀತೆಯಲ್ಲಿಯೂ ಸ್ವತಃ ಶ್ರೀಕೃಷ್ಣನೇ ನುಡಿದ 'ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ' ಎಂದು. ದಾಸರಾಯರೂ ಇದೇ ಭಾವನೆಯನ್ನು ನಮ್ಮ ಮುಂದಿಡುತ್ತಾರೆ.

**ಕಾಗದ ಬಂದಿದೆ ನಮ್ಮ ಕಮಲನಾಭನದು ಈ**
**ಕಾಗದವನ್ನು ಓದಿಕೊಂಡು ಕಾಲವ ಕಳೆಯಿರೋ ॥**
**ಕಾಮಕ್ರೋಧವ ಬಿಡಿರೆಂಬೋ ಕಾಗದ ಬಂದಿದೆ.....**
**ಹೆಣ್ಣಿನಾಸೆ ಬಿಡಿರೆಂಬೋ ಕಾಗದ ಬಂದಿದೆ.....**
**ಗೆಜ್ಜೆ ಕಾಲ್ಕಟ್ಟಿರೆಂಬೋ ಕಾಗದ ಬಂದಿದೆ.....**
**ನಮ್ಮ ಪುರಂದರವಿಟ್ಠಲ ತಾನೇ ಬರೆದ ಕಾಗದ ಬಂದಿದೆ.....**

ಹೀಗೆ ಪ್ರತಿಯೊಬ್ಬನೂ ತನಗೆ ವಿಹಿತವಾದ ಕರ್ತವ್ಯಗಳನ್ನು ಮಾಡಿ ಫಲ ಬಯಸದೆ ಅವುಗಳನ್ನು ಹರಿಪಾದಗಳಲ್ಲಿ ಸಮರ್ಪಿಸಿದಾಗ ಭಗವಂತನು ಅವನ ವಿಷಯದಲ್ಲಿ ಪ್ರಸನ್ನನಾಗುತ್ತಾನೆ. ನಿಜವಾದ ಭಕ್ತನಿವನಾಗುತ್ತಾನೆ. ಇದರೊಟ್ಟಿಗೆ ಇನ್ನೊಂದು ಅಂಶವನ್ನೂ ಅಳವಡಿಸಿಕೊಳ್ಳಬೇಕೆಂದು 'ಅಪೃಥಗ್ಭಾವಃ' ಎಂದರು.

ಭಗವಂತನ ಎಲ್ಲಾ ರೂಪಗಳಲ್ಲಿಯೂ ಏಕರೂಪತೆಯನ್ನು ಯಾರು ಕಾಣುತ್ತಾನೋ ಅವನು ಅಪೃಥಗ್ಭಾವನೆನಿಸುತ್ತಾನೆ. 'ಏಕನಾದ ಭಗವಂತ ರಾಮ, ಕೃಷ್ಣ, ವೇದವ್ಯಾಸ ಮುಂತಾದ ಸಹಸ್ರರೂಪಗಳಿಂದ ಪ್ರಕಟನಾಗಿದ್ದಾನೆ' ಎಂದು ತಿಳಿಯುವವ ಸಾತ್ವಿಕ ಭಕ್ತನೆನಿಸುತ್ತಾನೆ. ಹೀಗೆ ಕಪಿಲದೇವರು 'ಸಾತ್ವಿಕ ಭಕ್ತನಾರು? ರಾಜಸ ಭಕ್ತನಾರು?' ಎಂಬ ವಿವೇಚನೆಯನ್ನು ಬಹಳ ಮಾರ್ಮಿಕವಾಗಿ ನಮಗೆ ತಿಳಿಸಿ ಮತ್ತೊಂದು ವಿಷಯವನ್ನು ತಿಳಿಸುತ್ತಾರೆ.

**ಅಹಂ ಸರ್ವೇಷು ಭೂತೇಷು ಭೂತಾತ್ಮಾವಸ್ಥಿತಃ ಸದಾ ।**
**ತಮವಜ್ಞಾಯ ಮಾಂ ಮರ್ತ್ಯಃ ಕುರುತೇಽರ್ಚಾವಿಡಂಬನಮ್ ॥**

— (೩-೩೦-೨೧)

ಭಗವಂತನನ್ನು ಎಲ್ಲೆಡೆಯೂ ಇದ್ದಾನೆಂದು ಚಿಂತಿಸಬೇಕು ಸಕಲ ಪ್ರಾಣಿಗಳ ಒಳಗೂ ಭಗವಂತನಿದ್ದಾನೆಂದು ತಿಳಿದು ಅವುಗಳಿಗೆ ಉಪಕರಿಸಬೇಕು. ಅವುಗಳ ಉಪಕಾರದಿಂದ ಭಗವಂತನು ಪ್ರಸನ್ನನಾಗುತ್ತಾನೆ. 'ತಸ್ಯ ಪ್ರಾಣ್ಯುಪಕಾರೇಣ ಪ್ರೀತೋ ಭವತಿ ಕೇಶವಃ' ಅಲ್ಲಿಯೂ ಸಲ್ಲಿಸುವ ಪೂಜೆ ವ್ಯಕ್ತಿಗಲ್ಲ ಹೊರತು ಭಗವಂತನಿಗೇ ಸಲ್ಲುತ್ತದೆ. ನಾವುಗಳು ಇದನ್ನರಿಯದೆ ಕೇವಲ ಪ್ರತಿಮೆ ಪೂಜೆ ಯನ್ನು ಮಾಡುತ್ತೇವೆ. ಪ್ರತಿಮೆ ಪೂಜೆಮಾಡುವಾಗಲೂ ಪ್ರತಿಮೆಯ ಒಳಗಿರುವ ಭಗವಂತನ ಅನುಸಂಧಾನ ಬೇಕೇ ಬೇಕು. ಇಲ್ಲದಿದ್ದರೆ ಅದೊಂದು ಡೊಂಬರಾಟವಾದೀತು.

ಇಂದು ನಮ್ಮ ಮಕ್ಕಳಿಗೂ ನಮ್ಮ ಅಜ್ಞಾನವನ್ನು ಹಂಚುತ್ತಿದ್ದೇವೆ. ಪ್ರತಿಮೆಯೇ ದೇವರೆಂದು ಬೋಧಿಸುತ್ತಿದ್ದೇವೆ. ವ್ಯಾಪ್ತನಾದ ಅಂತರ್ಯಾಮಿಯಾದ ಹರಿಯನ್ನ ರ್ಚಿಸದೆ ಏಕದೇಶದ ಪ್ರತಿಮೆಯನ್ನೇ ಹರಿ ಎಂದರ್ಚಿಸುವವ ಅಧಮನೆನಿಸುತ್ತಾನೆ.

ಸಾಲಿಗ್ರಾಮದಲ್ಲಿ ಹರಿ ಸನ್ನಿಹಿತನಾಗಿದ್ದಾನೆಂದು ಸಾಲಿಗ್ರಾಮಗಳಿಗೆ ಮಾತ್ರ ಪೂಜೆಯನ್ನು ಸಲ್ಲಿಸೋಣ! ಪ್ರತಿಮೆಯ ಗೊಡವೆಯೇ ಬೇಡ ಎನ್ನಕೂಡದು. ಬ್ರಹ್ಮಾದಿ ಪ್ರತೀಕದಲ್ಲಿ ಹರಿಯನ್ನು ಚಿಂತಿಸದಿರುವುದು ಒಂದು ದೋಷವೇ ಆಗುವುದು. 'ಪ್ರಾಣಿಗಳಿಗೆ ಉಪಕರಿಸಿ ಹರಿಯು ತೃಪ್ತನಾಗಲಿ' ಎನ್ನದೆ ಹರಿಯು ಒಲಿಯಲಾರ. ಸ್ವತಃ ತಾನೇ ಈ ಮಾತನ್ನು ಆಡಿದ್ದಾನೆ. ಲೋಕೋಪಕಾರದ ಮೂಲಕ ನಡೆಯುವ ಕರ್ತವ್ಯಾಚರಣೆಯೇ ಹರಿಪೂಜೆ ಎನ್ನುತ್ತಾನೆ.

**'ನೈವ ತೃಪ್ಯೇಽರ್ಚಿತೋಽರ್ಚಾಯಾಂ ಭೂತಗ್ರಾಮಾವಮಾನಿನಃ'** — (೩.೧೯.೨೪)

—"ಮನುಷ್ಯರು ಪ್ರಾಣಿಗಳನ್ನು ಕಡೆಗಣಿಸಿ ಅವರಿಗೇನೂ ಉಪಕರಿಸದೆ ಅವರ ಕಷ್ಟಗಳಿಗೆ ಸ್ಪಂದಿಸದೇ ಕೇವಲ ದೇವಸ್ಥಾನದಲ್ಲಿಯ ನನ್ನ ಪ್ರತಿಮೆಗಳಿಗೆ ಬಂಗಾರದ ಕವಚ ಆಭರಣ ಎಲ್ಲವನ್ನೂ ಹಾಕಿ ಎಷ್ಟೇ ಪೂಜಿಸಿದರೂ ಅದನ್ನು ನಾನು ಸ್ವೀಕರಿಸ ಲಾರೆ" ಎಂದು ತನ್ನ ತಾಯಿಯಾದ ದೇವಹೂತಿಗೆ ಕಪಿಲದೇವನೇ ಸ್ಪಷ್ಟವಾಗಿ ತಿಳಿಸಿದ್ದಾನೆ.

ಭಕ್ತಿಯ ಜೊತೆ ಮಾನವೀಯ ಪ್ರಜ್ಞೆಯೂ ಬೇಕು. ಅಂತಃಕರಣಪೂರ್ವಕವಾದ ಸ್ಪಂದನ ಬೇಕು. ಜನರಿಗೆ ಉಪಕರಿಸದ ಕೇವಲ ಭಗವದ್ಭಕ್ತಿಯೂ ಅಪೂರ್ಣ. ದೇವರನ್ನು ಸ್ಮರಿಸದ ಕೇವಲ ಜನಶುಶ್ರೂಷೆಯೂ ಅಪೂರ್ಣ. ಇಂದಿನ ರಾಜಕಾರಣಿಗಳು ಎಂ. ಪಿ., ಎಂ. ಎಲ್. ಎ. ಪದವಿಗಳಿಗಾಗಿ ಜನರನ್ನೇ ದೇವರೆಂದು ಸ್ತುತಿಗೆಯ್ಯುತ್ತಾರೆ. ತಮ್ಮ ಸ್ವಾರ್ಥಸಾಧನೆ ಮಾಡುವ ಜನಸೇವೆಯೂ ಸೇವೆ ಎನಿಸದು. ಜನರನ್ನು ಮಾತ್ರ ಉದ್ದೇಶವಾಗಿಟ್ಟುಕೊಂಡು ನಿಃಸ್ವಾರ್ಥಸೇವೆ ಮಾಡಿದರೆ ಇದು ಅಪರಿಪೂರ್ಣ. ಜನರಿಗೆ ಉಪಕರಿಸುವುದು ಕೀರ್ತಿ ಪ್ರತಿಷ್ಠೆಗಳಿಗಾಗಿ ಮಾತ್ರವೆಂದಾದರೆ ಭಗವಂತನ ಪೂಜೆ ಎನಿಸದು. ಒಟ್ಟಿನಲ್ಲಿ ಕಪಿಲರು ಹೇಳುವುದು "ಸೇವೆ ಇಲ್ಲದ ಭಕ್ತಿ; ಭಕ್ತಿಯಿಲ್ಲದ ಸೇವೆ ಎರಡೂ ಅಪರಿಪೂರ್ಣ" ಎಂದು. ಹರಿಭಕುತಿ ಇಲ್ಲದೆ ಸಲ್ಲಿಸಿದ ಸೇವೆ ವಹ್ನಿವರ್ಜಿತ ಧೂಮದಲ್ಲಿ ಹೋಮಿಸಿದ ಹವಿಸ್ಸಿನಂತೆ" –'ಭಸ್ಮನ್ಯೇವ ಜುಹೋತಿ ಸಃ' ಎನ್ನುತ್ತಾರೆ.

ಹಾಗೆಯೇ ರಾಮಕೃಷ್ಣಾದಿ ಅವತಾರಗಳಲ್ಲಿಯೂ ಭೇದವನ್ನು ತಿಳಿಯಬಾರದು. ಇಲ್ಲಿ ಅದ್ವೈತವನ್ನೇ ಕಾಣಬೇಕು. ನಾನು ಮತ್ತು ಭಗವಂತ ಎಂದು ನಿಯಮ್ಯ ನಿಯಾಮಕಭಾವವಿರುವುದರಿಂದ ಇಲ್ಲಿ ದ್ವೈತದ ಸಂವೇದನೆಯೂ ಬೇಕು. ಜಗತ್ತು–ಜಡ–ಈಶರಿಗೆ ಪರಸ್ಪರ ಭೇದವನ್ನೊಪ್ಪುವವರು ಸುಜ್ಞಾನಿಗಳೆನಿಸುತ್ತಾರೆ.

ಹೀಗೆ ಕಪಿಲರ ಉದಾತ್ತ ಚಿಂತನೆಗಳನ್ನು ನಮ್ಮ ಸಮಗ್ರ ಜೀವನದಲ್ಲಳವಡಿಸಿಕೊಂಡಾಗ ಇಲ್ಲಿಯೂ ಸ್ವರ್ಗಸುಖ. ಮುಂದೆಯೂ ಸುಖ. ಇಲ್ಲವಾದಲ್ಲಿ ಇಲ್ಲಿಯೂ ನರಕ ಪರತ್ರದಲ್ಲಿಯೂ ನರಕ. ಜ್ಞಾನ, ಭಕ್ತಿ, ವೈರಾಗ್ಯ, ಕರ್ತವ್ಯಗಳೆಂಬ ನಾಲ್ಕು ಸ್ತಂಭಗಳಿಂದ ಜೀವನಸೌಧವನ್ನು ಕಟ್ಟಿಕೊಳ್ಳಬೇಕು ಮುಂತಾದ ಮೌಲ್ಯಯುತವಾದ ಅಧ್ಯಾತ್ಮಚಿಂತನೆಗಳನ್ನು ಕಪಿಲನು ದೇವಹೂತಿಯನ್ನು ನಿಮಿತ್ತವಾಗಿಟ್ಟುಕೊಂಡು ಸಮಗ್ರ ಮಾನವಕುಲಕ್ಕೆ ಉಪದೇಶಿಸುತ್ತಾನೆ. ತಾಯಿಯಾದ ದೇವಹೂತಿಯೂ ಮೋಕ್ಷದ ದಾರಿಯನ್ನು ತುಳಿಯುವಂತೆ ಅನುಗ್ರಹಿಸುತ್ತಾನೆ.

ಲೋಕದ ದೃಷ್ಟಿಯಲ್ಲಿ ದೇವಹೂತಿಯು ಕಪಿಲನಿಗೆ ತಾಯಿಯಾಗಿದ್ದರೆ; ಅಧ್ಯಾತ್ಮ ಮಾರ್ಗದರ್ಶನದಲ್ಲಿ ಕಪಿಲನೇ ದೇವಹೂತಿಗೆ ತಾಯಿಯಾದ. ಕಪಿಲನ ಉಪದೇಶದಿಂದ ದೇವಹೂತಿ ಆನಂದಭರಿತಳಾದಳು. ಅಧ್ಯಾತ್ಮದ ಕಣ್ಣುಗಳನ್ನರಳಿಸಿದಳು. ಬ್ರಹ್ಮಾಂಡದೊಡೆಯನಾದ ಕಪಿಲನನ್ನು ಮಗನೆ! ಎನ್ನಲು ನಾಚಿಕೊಂಡಳು. ಹರಿ! ನಿನ್ನ ವಿಡಂಬನೆ ಏನೆಂದು ಬಣ್ಣಿಸಲಿ ಎಂದು ಭಾವಪರವಶಳಾಗಿ ಕಪಿಲದೇವನನ್ನು ವಿಸ್ತಾರವಾಗಿ ಸ್ತುತಿಗೈದಳು ಎಂಬಲ್ಲಿಗೆ ತೃತೀಯ ಸ್ಕಂಧವು ಲಕ್ಷ್ಮೀಹಯಗ್ರೀವನಿಗೆ ಸಮರ್ಪಿತವಾಯಿತು.

ಮಧ್ವೇಶಾರ್ಪಣಮಸ್ತು

* * *

# ಅಥ ಚತುರ್ಥ ಸ್ಕಂಧಃ

## ಅತ್ರಿಗೊಲಿದ ಅನಂತ

ಸ್ವಾಯಂಭುವ ಮನು ಮತ್ತು ಶತರೂಪಾದೇವಿಯರ ಸುಪುತ್ರಿಯಾದ ದೇವಹೂತಿಯಲ್ಲಿ ಕರ್ದಮರಿಂದ ಒಂಭತ್ತು ಮಂದಿ ಹೆಣ್ಣುಮಕ್ಕಳ ಜನನವಾಯಿತು. ಅವರಲ್ಲಿ ಒಬ್ಬಳಾದ ಅನಸೂಯೆಯನ್ನು ಅತ್ರಿ ಋಷಿಗಳು ಕೈಹಿಡಿದರು. ಸೃಷ್ಟಿ ಮುಂದುವರಿಸಲು ಅನಸೂಯೆಯಿಂದೊಡಗೂಡಿ ಋಕ್ಷಪರ್ವತಕ್ಕೆ ತಪಸ್ಸುಮಾಡಲು ಹೊರಟರು.

ಅತ್ರಿ ಮಹರ್ಷಿಗಳು ಅತಿ ಕಠಿನವಾದ ತಪವನ್ನಾರಂಭಿಸಿದರು. ತ್ರಿಮೂರ್ತಿಗಳಿಗೆ ಸಮಾನನಾದ ಸುಪುತ್ರನನ್ನು ಪಡೆಯುವುದೇ ಅತ್ರಿ ಋಷಿಗಳ ತಪಸ್ಸಿನ ಉದ್ದೇಶ ವಾಗಿತ್ತು. ಆದರೆ ಇವರು ತಪಸ್ಸು ಮಾಡುವಾಗ ಬ್ರಹ್ಮ, ವಿಷ್ಣು, ಮಹೇಶ್ವರ ಹೀಗೆ ಪ್ರತ್ಯೇಕವಾಗಿ ತಪಸ್ಸನ್ನು ಮಾಡಲಿಲ್ಲ. ಏಕನಾದ ವಿಷ್ಣುವನ್ನು ಅನೇಕ ಅಧಿಷ್ಠಾನ ಗಳಲ್ಲಿ ಧ್ಯಾನಿಸಿದರು.

ಇದು ಬುದ್ಧಿವಂತರ ಲಕ್ಷಣ. ಲೋಕದಲ್ಲಿಯೂ ಉನ್ನತ ಪದವಿಯನ್ನು ಬಯಸಿದ ಪ್ರತಿಭಾವಂತರು ತಮ್ಮ ಕೆಲಸಕ್ಕಾಗಿ ಪ್ರತಿಯೊಬ್ಬ ಅಧಿಕಾರಿಯ ಬಳಿಯೂ ದಮ್ಮಯ್ಯ ಹಾಕುವುದಿಲ್ಲ. ಎಲ್ಲದಕ್ಕೂ ಮುಖ್ಯ ನೇತಾರನಾರು? ಎಂದು ವಿಮರ್ಶಿಸಿ ಅಂತಹ ಮುಖ್ಯಮಂತ್ರಿಯನ್ನೇ ಹಿಡಿದು ತಮ್ಮ ಕಾರ್ಯವನ್ನು ನೆರವೇರಿಸಿಕೊಳ್ಳು ತ್ತಾರೆ. ಅದರಂತೆ ಅತ್ರಿ ಮಹರ್ಷಿಗಳೂ ಕೂಡ ಎಲ್ಲರಿಗೂ ನಿಯಾಮಕನಾದ ವಿಷ್ಣುವನ್ನೇ ಮೊರೆಹೊಕ್ಕರು. ಬ್ರಹ್ಮವೈವರ್ತವೂ ಇದನ್ನು ಹೇಳುತ್ತದೆ.

**ಬ್ರಹ್ಮಸ್ಥಶ್ಚೈವ ರುದ್ರಸ್ಥಃ ಸ್ವಯಂ ಚಾಪಿ ಹರಿಃ ಪ್ರಭುಃ ।**
**ಪ್ರಜಾಂ ತ್ರಿಪುರುಷಸಮಾಂ ಯಚ್ಛತ್ವಿತ್ಯತ್ರಿರೈಚ್ಛತ ॥**

— (ಭಾ. ತಾ. ಏ. ೪. ೩೦)

ಬ್ರಹ್ಮನಲ್ಲಿ ಬ್ರಹ್ಮರೂಪದಿಂದ, ರುದ್ರನಲ್ಲಿ ರುದ್ರರೂಪದಿಂದ, ಅವರವರಲ್ಲಿ ಆಯಾ ರೂಪಗಳಿಂದ ಭಗವಂತನು ಇದ್ದುಕೊಂಡು ಎಲ್ಲರನ್ನೂ ನಿಯಂತ್ರಣ ಮಾಡುತ್ತಾನೆ. ದೇವತೆಗಳಲ್ಲಿ ದೇವತೆಗಳ ರೂಪದಿಂದ, ದೈತ್ಯರಲ್ಲಿ ದೈತ್ಯಾಕಾರದಿಂದ ಇರುತ್ತಾನೆ. ಹೀಗೆಂದ ಮಾತ್ರಕ್ಕೆ ಅವನಿಗೆ ಅವರವರ ಸ್ವಭಾವ ಬರುವುದಿಲ್ಲ. ಅವನದ್ದು ಚಿನ್ಮಯರೂಪ. ನೀರಿಗೆ ಒಂದು ರೂಪವಿದೆ. ರೂಪವಿಲ್ಲದ ವಸ್ತು ನೋಡಲೂ ಸಾಧ್ಯವಿಲ್ಲ. ರೂಪವಿದ್ದರೂ ಒಂದು ನಿಯಮಿತವಾದ ಆಕಾರವಿಲ್ಲ. ನೀರನ್ನು ಯಾವುದರಲ್ಲಿ ಹಾಕುತ್ತೇವೆಯೋ ಆ ನೀರು ಆ ವಸ್ತುವಿನ ಆಕಾರವನ್ನೇ ತಾಳುತ್ತದೆ. ಬಿಂದಿಗೆ, ತಂಬಿಗೆ, ಗಿಂಡಿ ಇದೇ ನೀರಿನ ಆಕಾರ. ಇದರಂತೆ ಭಗವಂತ ನಿಗೂ ಒಂದು ಪ್ರತ್ಯೇಕ ಆಕಾರವೆಂಬುದಿಲ್ಲ. ಎಲ್ಲೆಡೆಯೂ ಎಲ್ಲಾ ಆಕಾರಗಳಿಂದ ಇದ್ದು ವಿಕಾರಕ್ಕೊಳಗಾಗದೆ ನಿಯಂತ್ರಿಸುತ್ತಾನೆ. ಬ್ರಹ್ಮದೇವರಲ್ಲಿ ಚತುರ್ಮುಖಿಯಾಗಿದ್ದರೆ,

ರುದ್ರನಲ್ಲಿ ಮುಕ್ಕಣ್ಣನಾಗಿದ್ದಾನೆ. ಇಂದ್ರನಲ್ಲಿ ಸಹಸ್ರಾಕ್ಷನಾಗಿಯೂ ಇದ್ದಾನೆ. ಅನಂತನು ಅನಂತರೂಪನಾದ್ದರಿಂದ ಅನಂತನಾಮಗಳಿಂದ ಕರೆಸಿಕೊಳ್ಳುತ್ತಾನೆ. ಎಲ್ಲಾ ನಾಮಗಳೂ ಅವನದ್ದೇ. ಒಂದು ಹೆಸರಿನವನಿವನಲ್ಲ. ಹೀಗೆ ಭಗವಂತನು ನಾಮರೂಪಾತ್ಮಕವಾದ ಪ್ರಪಂಚವನ್ನು ವ್ಯಾಪಿಸಿಕೊಂಡಿದ್ದಾನೆ.

ಇಂತಹ ಭಗವಂತನನ್ನು ಅಮಲವಾದ ಹೃದಯಕಮಲದಲ್ಲಿ ಧ್ಯಾನಿಸಲು ಅತ್ರಿ ಮಹರ್ಷಿಗಳ ತಪಸ್ಸಿಗೆ ಮೆಚ್ಚಿ ತ್ರಿಮೂರ್ತಿಗಳು ಪ್ರತ್ಯಕ್ಷರಾದರು.

ಹರಿಯು ವರ ಕೇಳಿಕೋ! ಎಂದ. ಅತ್ರಿಗಳಿಗೆ ಭಗವಂತ ನೀನೇ ನನ್ನ ಮಗನಾಗು ಎನ್ನಲು ಸ್ವಲ್ಪ ಸಂಕೋಚವಾಯಿತು. ಅದಕ್ಕೆ ಪರ್ಯಾಯವಾಗಿ ನಿನ್ನಂತಹ ಮಗನನ್ನು ಕರುಣಿಸು ಎಂದು ಬೇಡಿದರು. ಭಗವಂತನಂಥ ಮಗ ಬೇರೆ ಯಾರಿದ್ದಾನೆ? ಅದು ಭಗವಂತನೇ.

**'ಗಗನಂ ಗಗನಾಕಾರಂ ಸಾಗರಃ ಸಾಗರೋಪಮಃ ।**
**ರಾಮರಾವಣಯೋರ್ಯುದ್ಧಂ ರಾಮರಾವಣಯೋರಿವ ॥'**

ಎಂಬಂತೆ. ಭಗವಂತನಂತಿರುವವ ಭಗವಂತನೇ ಆಗಿದ್ದಾನೆ. ಬ್ರಹ್ಮನ ಅಂಶದಿಂದ ಚಂದ್ರ, ರುದ್ರಾಂಶನಾಗಿ ದುರ್ವಾಸ, ದತ್ತಾತ್ರೇಯನಾಗಿ ಭಗವಂತ –ಹೀಗೆ ತ್ರಿಮೂರ್ತಿಗಳನ್ನು ಮಕ್ಕಳನ್ನಾಗಿ ಪಡೆದ ಭಾಗ್ಯವಂತ ಅತ್ರಿ.

ಅತ್ರಿ–ಅನಸೂಯೆಯರ ತಪಸ್ಸಿನ ಫಲವಾಗಿ ಭಗವಂತ ದತ್ತನಾಗಿ ಬಂದ.

ಈ ಕಥೆಯಿಂದ ನಾವು ತಿಳಿಯಬೇಕಾದ್ದು ಬಹಳಷ್ಟಿದೆ. ಅತ್ರಿ–ಅನಸೂಯೆಯರಂತೆ 'ಭಗವಂತನು ನಮಗೂ ಮಗನಾಗಲಿ' ಎಂದು ಜಪಿಸಬೇಕು. ಭಗವಂತ ನಮಗೆ ಮಗನಾಗಬೇಕಿದ್ದರೆ ನಾವು ಅವನಿಗೆ ತಂದೆಯಂದಿರಾಗಬೇಕು. ವಾದಿರಾಜರು ಹೇಳುತ್ತಾರೆ–

**ಯದೀಯರೂಪಂ ಪ್ರಕಟೀಕರೋತಿ ಪಿತಾ ಸ ತಸ್ಯೇತಿ ಹಿ ವೇದವಾದಃ**

–ಮಗನನ್ನು ಪ್ರಕಟಗೊಳಿಸುವವ ತಂದೆ ಎನಿಸುತ್ತಾನೆ. ಭಗವಂತನನ್ನು ಜಗತ್ತಿನಲ್ಲಿ ಪ್ರಕಟಗೊಳಿಸುವವರು ಭಗವಂತನ ಭಕ್ತರು. ಭಗವಂತನನ್ನು ಪ್ರಸಾರಮಾಡುವ ಜ್ಞಾನಿಗಳೆಲ್ಲರೂ ಭಗವಂತನ ತಂದೆಯಂದಿರು. ನಾವೂ ಭಗವಂತನನ್ನು ಪ್ರಸಾರಗೊಳಿಸಿದರೆ ದೇವರೇ ಮಗನಾಗಿ ಅನುಗ್ರಹಿಸುತ್ತಾನೆ.

ಅತ್ರಿಯು ತ್ರಿಮೂರ್ತಿಗಳನ್ನು ಪಡೆಯುವ ಮುನ್ನ 'ತ್ರಿ' ಬಿಟ್ಟ. 'ತ್ರಿ' ಎಂದರೆ ಕಾಮ, ಕ್ರೋಧ, ಲೋಭ ಇವುಗಳಿದ್ದಲ್ಲಿ ಭಗವಂತ ಬರಲಾರ. ಶ್ರೀಕೃಷ್ಣನೇ ಗೀತೆಯಲ್ಲಿ ಹೇಳಿದ ಮಾತಿದು– 'ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ' 'ಕಾಮಃ ಕ್ರೋಧಸ್ತಥಾ ಲೋಭಃ ತಸ್ಮಾದೇತತ್ತ್ರಯಂ ತ್ಯಜೇತ್' –ಕಾಮಾದಿ ಮೂರು, ನರಕದ ಮೂರು ಬಾಗಿಲುಗಳು. ತನ್ನ ನಾಶದ ಹೆಬ್ಬಾಗಿಲುಗಳು. ಆದ್ದರಿಂದ ಅವುಗಳನ್ನು ಬಿಡಬೇಕು. ಈ 'ತ್ರಿ' ಇದ್ದರೆ 'ತ್ರಿಮೂರ್ತಿ'ಗಳು ಬಾರರು.

ತ್ರಿ ಇದ್ದವರ ಬಳಿ ತ್ರಿಮೂರ್ತಿಗಳೇಕೆ ಬರಬೇಕು? ಎನ್ನುತ್ತಾರೆ. ಇದನ್ನರಿತ ಅತ್ರಿ 'ತ್ರಿ' ಬಿಟ್ಟ ಬಿಟ್ಟದ್ದರಿಂದ ಭಕ್ತಿಪಾಶಕ್ಕೆ ಕಟ್ಟುಬಿದ್ದ.

ಕೇವಲ ಅತ್ರಿಯಾದರೂ ಸಾಲದು. ಅನಸೂಯೆಯ ಕೈಯನ್ನು ಹಿಡಿಯಬೇಕು. ಅಸೂಯೆ ಎಂದರೆ –ಹೊಟ್ಟೆಕಿಚ್ಚು. ಅಸೂಯೆಯ ಕೈಹಿಡಿದ ನಮ್ಮ ಬಳಿ ಬಾರನು. ಅನಸೂಯೆಯ ಕೈಹಿಡಿಯಬೇಕು. ಅನಸೂಯೆಯ ಕೈಹಿಡಿದ ಅತ್ರಿಗೆ ದತ್ತ ತನ್ನನ್ನೇ ದತ್ತ (=ಕೊಟ್ಟ) ಎಂಬ ಉತ್ತಮ ಸಂದೇಶ ಈ ಕಥೆಯಲ್ಲಡಗಿದೆ.

## ದಕ್ಷಾಧ್ವರ ಪ್ರಸಂಗದಲ್ಲಿ ಮೂಡಿಬಂದ ಸಂದೇಶಗಳು

ಸ್ವಾಯಂಭುವ ಮನುವಿನ ಕೊನೆಯ ಮಗಳಾದ ಪ್ರಸೂತಿಯನ್ನು ದಕ್ಷಪ್ರಜಾ ಪತಿಯು ವರಿಸಿದ. ಅವಳಲ್ಲಿ ಹದಿನಾರು ಹೆಣ್ಣುಮಕ್ಕಳನ್ನು ಪಡೆದ. ಹದಿಮೂರು ಮಂದಿಯನ್ನು ಯಮಧರ್ಮನಿಗೆ ನೀಡಿದ. ಅಗ್ನಿ ಪಿತೃಗಳಿಗೆ ಇಬ್ಬರನ್ನು ನೀಡಿದ. ಉಳಿದ ಸತಿಯೊಬ್ಬಳನ್ನು ಪಶುಪತಿಗೆ ನೀಡಿದ.

ದಕ್ಷಪ್ರಜಾಪತಿಯು ಒಮ್ಮೆ ಸತ್ರಯಾಗ ಒಂದನ್ನು ಕೈಗೊಂಡನು. ಇವನ ಯಾಗಕ್ಕೆ ಸಕಲ ದೇವಾನುದೇವತೆಗಳೂ ಆಗಮಿಸಿದರು. ಎಲ್ಲರೂ ನೆರೆದಿದ್ದ ಸಭೆಗೆ ದಕ್ಷನು ಕಾಂತಿವಿಶಿಷ್ಟನಾಗಿ ಬಂದ. ಅವನು ಬಂದಕೂಡಲೆ ಬ್ರಹ್ಮ–ರುದ್ರರನ್ನು ಬಿಟ್ಟು ಉಳಿದವರೆಲ್ಲರೂ ಎದ್ದುನಿಂತರು. ದಕ್ಷನು ಬ್ರಹ್ಮದೇವರಿಗೆ ನಮಿಸಿ ಕುಳಿತನು. ಆದರೆ 'ರುದ್ರನು ಎದ್ದುನಿಂತು ತನ್ನನ್ನು ಗೌರವಿಸಲಿಲ್ಲ' ಎಂಬ ಆತ್ಮಪ್ರತಿಷ್ಠೆ– ಕ್ರೋಧಕ್ಕೆ ನಾಂದಿಯಾಯಿತು. ದಕ್ಷನು ಸಿಡಿಸಿಟ್ಟಿನಿಂದ ನಡುಗಿದ. ಕರಾಳವಾದ ಕಣ್ಣಾಲಿಗಳಿಂದ ರುದ್ರನನ್ನು ದಿಟ್ಟಿಸಿದ. ಶಿಷ್ಟರಿಗೆ ಅನುಚಿತವಾದ ದುಷ್ಟ ವಚನ ಗಳಿಂದ ಮಹರುದ್ರದೇವನನ್ನು ನಿಂದಿಸಿದ. 'ಅಧಮನಾದ ಮದನರಿಪುವಿಗೆ ಯಜ್ಞ ಭಾಗವು ಲಭಿಸದಿರಲಿ' ಎಂದು ಶಪಿಸಿದ. ಶಿವನ ಮುಖವು ನನಗೆ ಅಶಿವವನ್ನುಂಟು ಮಾಡುತ್ತದೆಂದು ಗೊಣಗುತ್ತಾ ಸಭೆಯಿಂದ ಎದ್ದು ನಡೆದ.

ದಕ್ಷನು ರುದ್ರದೇವರನ್ನು ಅವಮಾನಪಡಿಸಬೇಕು; ದೊಡ್ಡ ಸತ್ರ ಒಂದನ್ನು ಏರ್ಪಡಿಸಿ ಅದರಲ್ಲಿ ಎಲ್ಲರಿಗೂ ಸ್ಥಾನಕೊಟ್ಟು ರುದ್ರನಿಗೆ ಮಾತ್ರ ಸ್ಥಾನ ಕೊಡಬಾರದೆಂದು ತೀರ್ಮಾನಿಸಿ ಯಾಗವನ್ನು ಕೈಗೊಂಡ. ಎಲ್ಲರಿಗೂ ಆಹ್ವಾನ ನೀಡಿ ರುದ್ರದೇವರನ್ನು ಮಾತ್ರ ಕರೆಯಲಿಲ್ಲ ಸಮಸ್ತ ಋಷಿಮುನಿಗಳು ದೇವತೆಗಳು ಜನರುಗಳು ಎಲ್ಲರೂ ದಕ್ಷನು ಏರ್ಪಡಿಸಿದ ಯಾಗಕ್ಕೆ ಹೊರಟರು. ಈ ಸುದ್ದಿ ತಿಳಿದ ಸತೀದೇವಿಯು ತಾನೂ ತನ್ನ ತಂದೆಯು ನಡೆಸುತ್ತಿರುವ ಯಾಗಕ್ಕೆ ಹೋಗಬೇಕೆಂದು ಗಂಡನ ಬಳಿ ತಿಳಿಸುತ್ತಾಳೆ. ಆದರೆ ದಕ್ಷನ ಅಂತರ್ಯವನ್ನರಿತ ರುದ್ರದೇವ ಸಮ್ಮತಿಯನ್ನು ನೀಡುವುದಿಲ್ಲ.

ಇಲ್ಲಿ ನಮಗೊಂದು ಸಂಶಯ ಬರುತ್ತದೆ. 'ದಕ್ಷಪ್ರಜಾಪತಿಯ ಅಳಿಯನಾದ ರುದ್ರದೇವ ಅವನಿಗೆ ಎದ್ದುನಿಂತು ಗೌರವ ನೀಡಲಿಲ್ಲ! ಅಳಿಯನಾದವ ಮಾವನಿಗೆ ನಮಸ್ಕರಿಸುವುದು ಅಧರ್ಮವಲ್ಲವಷ್ಟೇ?' ಎಂದು. ಹೌದು. ಆದರೆ ನಮಸ್ಕಾರವನ್ನು

ವ್ಯಕ್ತಿಗಿಂತಲೂ ಮುಖ್ಯವಾಗಿ ಅಂತರ್ಯಾಮಿಯಾದ ಭಗವಂತನಿಗೆ ಸಲ್ಲಿಸಬೇಕು. ಈ ದಕ್ಷನ ಹೃದಯದಲ್ಲಿ ಭಗವಂತನ ಸನ್ನಿಧಾನವೇ ಇರಲಿಲ್ಲ. ರಾಗ–ದ್ವೇಷ, ಕಾಮ–ಕ್ರೋಧಾದಿಗಳ ಅಡಗುದಾಣವಾಗಿತ್ತು. ಇವುಗಳಿರುವಲ್ಲಿ ಹರಿ ಇರುವುದಿಲ್ಲ. ಹರಿಸನ್ನಿಧಾನ ಇಲ್ಲದಿರುವಲ್ಲಿ ನಮಿಸುವುದೂ ತರವಲ್ಲ. ಹೀಗೆಂದಮಾತ್ರಕ್ಕೆ ಹರಿ ಸನ್ನಿಧಾನ ಇಲ್ಲದಿರುವ ಸಂದರ್ಭವೂ ಇದೆ ಎಂದರ್ಥವಲ್ಲ. ಎಲ್ಲೆಡೆಯೂ ಹರಿಯ ಸನ್ನಿಧಾನವಿದ್ದರೂ ದುರ್ಗುಣಗಳು ತುಂಬಿದಲ್ಲಿ ಅದರ ಅಭಿವ್ಯಕ್ತಿ ಇರದು. ಸದ್ಗುಣ ಗಳಿದ್ದಲ್ಲಿ ವ್ಯಕ್ತವಾಗುವುದು. ಆದ್ದರಿಂದ ಗುಣಗಳೇ ಇಲ್ಲದ ದಕ್ಷನಿಗೆ ನಮಿಸು ವುದಾದರೂ ಹೇಗೆ? ಎಂದು ರುದ್ರದೇವರು ನಮಿಸಲಿಲ್ಲ.

ಇನ್ನೊಂದು ಕಾರಣವೂ ಇದೆ. ಉತ್ತಮರು ಅಧಮ ಅಧಿಷ್ಠಾನಕ್ಕೆ ನಮಿಸುವುದು ತರವಲ್ಲ. ಅವರ ಅಂತರ್ಯಾಮಿಯಾದ ಭಗವಂತನನ್ನು ಮನದಲ್ಲಿಯೇ ತುತಿಸಿ ನಮಿಸಬೇಕು. ಸ್ವರೂಪತಃ ಯೋಗ್ಯರೇ ಆಗಿದ್ದಲ್ಲಿ ಅಂತರ್ಯಾಮಿಗೂ ನಮಿಸಬೇಕು. ಅವರಿಗೂ ನಮಿಸಬೇಕು. ನಮಸ್ಕಾರ ಗೌರವ ಎಲ್ಲವೂ ಆಯಾಯ ವ್ಯಕ್ತಿಗಳ ಅಂತರ್ಯಾಮಿಯಾದ ಭಗವಂತನಿಗೇ ಹೊರತು ದೇಹಾಭಿಮಾನವುಳ್ಳ ಜೀವರಿಗಲ್ಲ. ನಾನಾದರೂ ದಕ್ಷನ ಅಂತರ್ಯಾಮಿಯಾದ ಹರಿಗೆ ಮನಸ್ಸಿನಿಂದ ನಮಿಸಿದ್ದೇನೆ ಎನ್ನುತ್ತಾರೆ ರುದ್ರದೇವರು–

ಪ್ರತ್ಯುದ್ಗಮಪ್ರಶ್ರಯಣಾಭಿವಾದನಂ
ವಿಧಿಯತೇ ಸಾಧು ಮಿಥಃ ಸುಮಧ್ಯಮೇ ।
ಪ್ರಾಜ್ಞೈಃ ಪರಸ್ಮೈ ಪುರುಷಾಯ ಚೇತಸಾ
ಗುಹಾಶಯಾಯೈವ ನ ದೇಹಮಾನಿನೇ ॥ — (೪-೩-೨೨)

ಇಷ್ಟೇ ಅಲ್ಲದೆ, ರುದ್ರದೇವರ ಬಳಿ ಬ್ರಹ್ಮದೇವರಂತಹ ಜೀವೋತ್ತಮರು ಕುಳಿತುಕೊಂಡಿದ್ದಾರೆ. ಬ್ರಹ್ಮದೇವರಲ್ಲಿ ಭಗವಂತನ ಪೂರ್ಣ ಸನ್ನಿಧಾನವಿದೆ. ದಕ್ಷನಿಗೆ ವಿರುದ್ಧವಾದ, ಸದ್ಗುಣಗಳಿಂದ ಸದಾ ತುಂಬಿದ, ನಿತ್ಯ ಹರಿಧ್ಯಾನಾಸಕ್ತರಾದ ಜ್ಞಾನ ಸಾಗರವೇ ಕಣ್ಮುಂದೆ ಇರಲು ನೀಚ ಅಧಿಷ್ಠಾನಕ್ಕೆ ನಮಿಸುವುದು ಎಷ್ಟು ಉಚಿತ? ಆದ್ದರಿಂದಲೇ ರುದ್ರದೇವರು ಸತಿಗೆ ಹೇಳುತ್ತಾರೆ "ಯಾವ ಬ್ರಹ್ಮದೇವರಲ್ಲಿ ನಿರಂತರವೂ ಹರಿವಾಸುದೇವನ ಪೂರ್ಣ ಸನ್ನಿಧಾನವಿದೆಯೋ ಅಂತಹ ಅಧಿಷ್ಠಾನ ವನ್ನು ಬಿಟ್ಟು ಬೇರೆ ಕಡೆ ನನ್ನ ಮನಸ್ಸು ಚಲಿಸದು" ಎಂದು. ಹೀಗೆ ನಿರಂತರ ಹರಿಧ್ಯಾನರತರಾದ ರುದ್ರದೇವರಿಗೆ ದಕ್ಷನನ್ನು ನಮಿಸದ ದೋಷ ಇಲ್ಲವೇ ಇಲ್ಲ.

ಬ್ರಹ್ಮ–ವಾಯುಗಳು ಹರಿಧ್ಯಾನಕ್ಕೆ ಉತ್ತಮವಾದ ಅಧಿಷ್ಠಾನವೆಂದು ಉಪನಿಷತ್ತುಗಳೂ ಬಣ್ಣಿಸಿವೆ.

ಒಮ್ಮೆ ದೇವತೆಗಳೆಲ್ಲರೂ 'ಭಗವಂತನನ್ನು ಎಲ್ಲಿ ಧ್ಯಾನಿಸಬೇಕು' ಎಂದು ವಿಚಾರಮಾಡಿದರು. ಬೇರೆ ಬೇರೆ ದೇವತೆಗಳಲ್ಲಿ ಭಗವಂತನ ಧ್ಯಾನಮಾಡಬೇಕೆಂದು ಪ್ರಯತ್ನಿಸಿದರು. ಆದರೆ ಸಾಧ್ಯವಾಗಲಿಲ್ಲ. ಧ್ಯಾನಿಸಲು ಹೊರಟಾಗ ದೈತ್ಯಶಕ್ತಿಯು ಆಕ್ರಮಣಮಾಡಿ ದೇವತೆಗಳ ಮನಸ್ಸನ್ನೆಲ್ಲಾ ಕೆಡಿಸಿತು. ಕಲುಷಿತ ಮನಸ್ಸಿನಿಂದ

ಹರಿಯನ್ನು ಕಾಣಲು ದೇವತೆಗಳಿಗೆ ಸಾಧ್ಯವಾಗಲಿಲ್ಲ. ಕಲುಷಿತವಾದ ನೀರಿನಲ್ಲಿ ಹೇಗೆ ಸೂರ್ಯನು ಕಾಣಲು ಸಾಧ್ಯವಿಲ್ಲವೋ ಅದರಂತೆ ಕಲುಷಿತವಾದ ಮನಸ್ಸಿನಲ್ಲಿ ದೇವರನ್ನು ಕಾಣಲಿಕ್ಕಾಗಲಿಲ್ಲ. ಕೊನೆಗೆ ದೇವತೆಗಳು ವಾಯುದೇವರಲ್ಲಿ ಹರಿಯನ್ನು ಧ್ಯಾನಿಸಬಯಸಿದರು. ಧ್ಯಾನವು ಕೈಗೂಡಿತು. ವಾಯುದೇವರ ಮನಸ್ಸನ್ನು ಕೆಡಿಸಲು ಕಲಿಗೆ ಸಾಧ್ಯವಾಗಲಿಲ್ಲ. ಬ್ರಹ್ಮ–ವಾಯುಗಳ ಮನಸ್ಸನ್ನು ಯಾವ ದುಷ್ಟಶಕ್ತಿಗೂ ಹಾಳುಗೆಡಹಲಾಗದು. ಅಚ್ಛೇದ್ಯ ಅಭೇದ್ಯವಾದ ಆತ್ಮಶಕ್ತಿ ಇವರದು.

ಒಂದು ದೊಡ್ಡ ಕಲ್ಲಿನ ಗೋಡೆಗೆ ಮಣ್ಣಿನ ನೂರಾರು ಹೆಂಟೆಗಳಿಂದ ಹೊಡೆದರೂ ಮಣ್ಣಿನ ಹೆಂಟೆಗಳೇ ಪುಡಿಯಾದವೇ ಹೊರತು ಕಲ್ಲಿನ ಗೋಡೆಗೆ ಏನೂ ಆಗದು. ಅದರಂತೆ ಬ್ರಹ್ಮ–ವಾಯುಗಳು ಕಲ್ಲಿನ ಗೋಡೆಯಂತಿದ್ದಾರೆ. ಇತರ ಎಲ್ಲ ಜೀವರೂ ಇವರ ಎದುರು ಮಣ್ಣಿನ ಹೆಂಟೆಗಳಂತಿದ್ದಾರೆ. ಇವರ ಮೇಲೆ ಆಕ್ರಮಣ ಮಾಡಲು ಬಂದರೆ ತಾವೇ ಘಾಸಿಗೊಳಗಾಗುತ್ತಾರೆ. ಆದ್ದರಿಂದಲೇ 'ಆಖಣಾಶ್ಮಸಮ' ಎಂದು ವಾಯುದೇವರಿಗೆ ಹೆಸರು. ಇವರಲ್ಲಿ ಭಗವಂತನ ಸನ್ನಿಧಾನ ಯಾವಾಗಲೂ ಇರುತ್ತದೆ. ಜ್ಞಾನಿಗಳು ಪ್ರಾಣಪ್ರತೀಕದಲ್ಲಿ ಹರಿಧ್ಯಾನ ಮಾಡುತ್ತಾರೆ. ಪ್ರಕೃತ ದಕ್ಷಪ್ರಜಾಪತಿಯ ಮನಸ್ಸು ಕಾಮಾದಿ ದುಷ್ಟಶಕ್ತಿಗಳಿಂದ ದೂಷಿತವಾಗಿದೆ. ಇಲ್ಲಿ ಇವರಲ್ಲಿ ಹರಿಸನ್ನಿಧಾನವಿಲ್ಲ. ಆದ್ದರಿಂದಲೇ ರುದ್ರದೇವರು ಇವನಲ್ಲಿ ಭಗವಂತನನ್ನು ಕಾಣದೆ ಮುಖ್ಯ ಪ್ರತೀಕರಾದ ಬ್ರಹ್ಮದೇವರಲ್ಲಿಯೇ ತನ್ಮಯತೆಯಿಂದ ಹರಿಯನ್ನು ಧ್ಯಾನಿಸುತ್ತಿದ್ದರು. ಈ ಕಾರಣದಿಂದ ಹರಿಧ್ಯಾನ ನಿರತರಾದ ರುದ್ರದೇವರು ದಕ್ಷ ಬಂದಾಗ ಎದ್ದು ನಿಲ್ಲಲಿಲ್ಲವೆಂಬ ದೋಷಕ್ಕೆ ಭಾಗಿಗಳಾಗುವುದಿಲ್ಲ.

ಏಕಾಗ್ರತೆಯಿಲ್ಲದ ಕರ್ಮಠರಿಗೆ ಇರುವ ವಿಧಿನಿಷೇಧಗಳು ಏಕಾಗ್ರ ಮನಸ್ಸಿನಿಂದ ಅವಿರತ ಧ್ಯಾನನಿರತರಾದ ಜ್ಞಾನಿಗಳಿಗೆ ಇರುವುದಿಲ್ಲ. ಶ್ರೀಕೃಷ್ಣನೇ ಭಗವದ್ಗೀತೆಯಲ್ಲಿ ಈ ವ್ಯವಸ್ಥೆಯನ್ನು ಮಾಡಿದ್ದಾನೆ.

**ಯಸ್ತ್ವಾತ್ಮರತಿರೇವಸ್ಯಾತ್ ಆತ್ಮ ತೃಪ್ತಶ್ಚ ಮಾನವಃ ।**
**ಆತ್ಮನ್ಯೇವ ಚ ಸಂತುಷ್ಟಃ ತಸ್ಯ ಕಾರ್ಯಂ ನ ವಿದ್ಯತೇ ॥** — (ಗೀತಾ– ೩–೧೭)

ಭಗವಂತನ ಅಪರೋಕ್ಷವನ್ನು ಹೊಂದಿದ ಜ್ಞಾನಿಯು ನಿರಂತರ ಹರಿಧ್ಯಾನರತನಾಗಿದ್ದಾಗ, ಇತರ ಸುಖ ಬಯಸದೆ ಹರಿದರ್ಶನಸುಖವನ್ನೆ ಅನುಭವಿಸುತ್ತಿರುವಾಗ, ಇವನಿಗೆ ಸಂಧ್ಯಾವಂದನಾದಿ ಯಾವುದೇ ಲೋಕವಿಹಿತವಾದ ಕರ್ಮವನ್ನು ಮಾಡಬೇಕೆಂದಿಲ್ಲ. ಹರಿಯ ಅನುಗ್ರಹಕ್ಕೆ ಪಾತ್ರನಾದವನಿಗೆ ಕರ್ಮವು ಘಾಸಿಗೊಳಿಸದು.

ರುದ್ರದೇವನೂ ದಕ್ಷಪ್ರಜಾಪತಿ ಬರುವ ಕಾಲಕ್ಕೆ ಬ್ರಹ್ಮದೇವರಲ್ಲಿ ಸನ್ನಿಹಿತನಾದ ಭಗವಂತನನ್ನು ಧ್ಯಾನಿಸುತ್ತಲೇ ಇದ್ದ. ಆದ್ದರಿಂದ ನಮಸ್ಕರಿಸದ ದೋಷ ಇವನಿಗಿಲ್ಲ. ಹೀಗೆ ವಿವರವಾಗಿ ರುದ್ರದೇವರೇ ತನ್ನ ಸತಿಗೆ ತಿಳಿಸಿ ಹೇಳುತ್ತಾರೆ.

ಸತಿ! ವಿನಾ ಕಾರಣ ನನ್ನ ಮೇಲೆ ಹಗೆತನ ಸಾಧಿಸುತ್ತಿರುವ, ಅಹಂಕಾರಿಯಾದ ಆ ದಕ್ಷನ ಮನೆಗೆ ಆಹ್ವಾನವಿಲ್ಲದೆ ಹೋಗಬೇಡ. ಹೋಗಿ ಅವನಿಂದ ಅಪಮಾನಗೊಂಡು ದುಃಖಿತಳಾಗಬೇಡ' ಎಂದು ಶಂಕರನು ಹೇಳಿ ಸುಮ್ಮನಾದ.

ಇತ್ತ ಸತಿಯು ಚಿತ್ತವ್ಯಾಕುಲತೆಗೆ ತುತ್ತಾದಳು. ಒಂದೆಡೆ ತನ್ನ ತಂದೆಯ ಮನೆಯ ವ್ಯಾಮೋಹ; ಮತ್ತೊಂದೆಡೆ ತನ್ನ ಪತಿಯ ಆದೇಶ. ಇದರಿಂದ ಸತಿಯ ಮನ ಉಯ್ಯಾಲೆಯಂತೆ ಹೊಯ್ದಾಡಿತು. ಒಮ್ಮೆ ಮನೆಯಿಂದ ಹೊರಗೆ ಹೊರಡುತ್ತಿದ್ದಳು. ಪುನಃ ಪತಿಯ ಮಾತನ್ನು ಅತಿಕ್ರಮಿಸಬಾರದೆಂದು ಒಳಗೆ ಬರುತ್ತಿದ್ದಳು. 'ನಿಷ್ಕ್ರಾಮತೀ ನಿರ್ವಿಶತೀ ದ್ವಿಧಾ ಚ ಸಾ' ಎನ್ನುತ್ತದೆ ಭಾಗವತ.

ಸತಿಯು ದ್ವಂದ್ವದಲ್ಲಿ ಸಿಲುಕಿ ಗೊಂದಲಕ್ಕೀಡಾದಂತೆ ನಾವೂ ಇಂತಹ ದ್ವಂದ್ವ ದಲ್ಲಿ ಸಿಲುಕಿಕೊಳ್ಳುತ್ತೇವೆ. 'ಇಂದು ದೇವಸ್ಥಾನಕ್ಕೆ ಹೋಗಬೇಕೋ? ಅಥವಾ ಮನೆಯಲ್ಲಿಯೇ ಟಿ. ವಿ. ನೋಡುತ್ತಾ ಕುಳಿತುಕೊಳ್ಳುವುದೋ?' ಎಂದು ಗೊಂದಲ ಕ್ಕೀಡಾಗುತ್ತೇವೆ. ಆದರೆ ಇಲ್ಲಿ ಜಯ ಅಧರ್ಮಕ್ಕೆ. ಇಂದು ಟಿ.ವಿ.ಯಲ್ಲಿ ಒಳ್ಳೆಯ ಕಾರ್ಯಕ್ರಮವಿದೆ. ದೇವಸ್ಥಾನಕ್ಕೆ ಅಥವಾ ಪ್ರವಚನಕ್ಕೆ ನಾಳೆಯೂ ಹೋಗ ಬಹುದೆಂದು ತೀರ್ಮಾನಿಸಿ ಟಿ.ವಿ. ಮುಂದೆಯೇ ಕುಳಿತುಕೊಳ್ಳುತ್ತೇವೆ. ನಮ್ಮಲ್ಲಿ ದುಷ್ಕರ್ಮಕ್ಕೇ ಜಯ. ಸತ್ಕರ್ಮಕ್ಕೆ ನಿತ್ಯ ಪರಾಜಯ. ಸತೀದೇವಿಯೂ ಒಮ್ಮೆ ತನ್ನ ಪತಿಯ ಆದೇಶವನ್ನು ಪಾಲಿಸೋಣ ಎಂದು ಒಳಗೆ ಬರುವುದು; ಇನ್ನೊಮ್ಮೆ ತಂದೆಯ ಮೇಲಿನ ವ್ಯಾಮೋಹದಿಂದ ಹೊರಗೆ ಹೋಗುವುದು. ಕೊನೆಗೂ ವ್ಯಾಮೋಹಕ್ಕೇ ಬಲಿಯಾಗಿ ಪತಿಯ ಆದೇಶವನ್ನು ಲೆಕ್ಕಿಸದೇ ತಂದೆಯ ಮನೆಗೇ ಹೋದಳು.

ಸತೀದೇವಿಯು ದಕ್ಷನ ಯಜ್ಞಶಾಲೆಗೆ ಪ್ರವೇಶಿಸಿದಳು. ಯಾರೂ ಇವಳನ್ನು ಸ್ವಾಗತಿಸಲೇ ಇಲ್ಲ. ಪರಿಜನರು, ಪುರೋಹಿತರು ಯಾರೂ ಮಾತನಾಡಿಸಲಿಲ್ಲ. ದಕ್ಷಪ್ರಜಾಪತಿಗೆ ಹೆದರಿ ಎಲ್ಲರೂ ಅಪರಿಚಿತರಂತೆ ಕಂಡರು. ದಕ್ಷಪ್ರಜಾಪತಿಯೂ 'ಬಾ' ಎನ್ನಲಿಲ್ಲ. ಸಹೋದರಿಯರು ಮತ್ತು ತನ್ನ ತಾಯಿ ಕುಶಲಪ್ರಶ್ನೆ ಮಾಡಿ ಆಲಿಂಗಿಸಿ ಸ್ವಾಗತಿಸಿದರು. ತಂದೆಯ ತಿರಸ್ಕಾರ ಸತಿಯ ಮನಸ್ಸನ್ನು ಮುರಿದು ಹಾಕಿತ್ತು. ಆದ್ದರಿಂದ ಅವರು ನೀಡಿದ ಯಾವ ಉಪಕಾರವನ್ನೂ ಸ್ವೀಕರಿಸಲಿಲ್ಲ. ಸಂತಪ್ತ ಮನಸ್ಸಿನಿಂದ ನಿಂತುಕೊಂಡೆ ಯಜ್ಞವನ್ನು ವೀಕ್ಷಿಸಿದಳು. ಆ ಯಜ್ಞದಲ್ಲಿ ತನ್ನ ಪತಿಯಾದ ಮಹರುದ್ರದೇವನಿಗೆ ಆಹುತಿಯನ್ನೇ ನೀಡಲಿಲ್ಲ. ಪ್ರತ್ಯಕ್ಷದಲ್ಲಿಯೇ ತನ್ನ ಗಂಡನಿಗಾದ ಅವಮಾನವನ್ನು ಪತಿವ್ರತೆಯಾದ ಸತೀದೇವಿಗೆ ಸಹಿಸಿಕೊಳ್ಳಲಾಗಲಿಲ್ಲ. ಪತಿವ್ರತೆಯಾದ ಸತೀದೇವಿಯು ಲೋಕಗಳನ್ನೆಲ್ಲಾ ಸುಡುವ ಪ್ರಳಯಾಗ್ನಿ ಯಂತೆ ಪ್ರಜ್ವಲಿಸತೊಡಗಿದಳು.

ಉತ್ತಮರಾದ ರುದ್ರದೇವರೆಲ್ಲಿ? ಅಧಮನಾದ ದಕ್ಷನೆಲ್ಲಿ? ರುದ್ರದೇವರು ಅಪರೋಕ್ಷಜ್ಞಾನಿಗಳು. ಸ್ಥಿತಪ್ರಜ್ಞರು. ಅವರಿಗೆ ಒಬ್ಬ ವ್ಯಕ್ತಿಯನ್ನು ಎದ್ದುನಿಲ್ಲದೆ ಅವಮಾನಿಸಬೇಕೆಂಬ ಕ್ಷುಲ್ಲಕ ಕಾಮನೆಯಿಲ್ಲ. ಅಪರೋಕ್ಷಜ್ಞಾನಿಗಳಿಗೆ ಭಗವಂತನ ಆದೇಶವೇ ಬೇರೆ ಇದೆ. ಬಂಧುಗಳನ್ನು ಎದ್ದುನಿಂತು ಗೌರವಿಸಬೇಕೆಂಬುದು ಸಾಮಾನ್ಯರಿಗಿರುವ ನಿಯಮ. ಅಪರೋಕ್ಷಜ್ಞಾನಿಗಳು ಹರಿಯ ಆದೇಶವನ್ನಷ್ಟೇ ಪಾಲಿಸಿದರೆ ಸಾಕು. ಇದನ್ನು ಗಮನಿಸದೆ 'ಎದ್ದುನಿಲ್ಲಲಿಲ್ಲ' ಎಂಬ ಸಣ್ಣ ಕಾರಣಕ್ಕೆ

ಸಿಟ್ಟಾಗುವುದು ಎಷ್ಟು ಉಚಿತ? ರುದ್ರದೇವರ ಅಪರೋಕ್ಷಜ್ಞಾನಕ್ಕೆ, ವೈರಾಗ್ಯಕ್ಕೆ, ಹರಿಭಕ್ತಿಗೆ, ಸಮಭಾವಕ್ಕೆ ಬೆಲೆಕೊಡದೆ ದ್ವೇಷ ಸಾಧಿಸುವುದೇ ಘನತೆಯೋ? ಇದಕ್ಕೊಂದು ದೃಷ್ಟಾಂತವಿದೆ.

ಒಂದು ಜರಡಿಯಿದೆ. ಆ ಜರಡಿಯಲ್ಲಿ ಅನೇಕ ಧಾನ್ಯಗಳನ್ನು ಹಾಕುತ್ತೇವೆ. ಜರಡಿ ಹಿಡಿಯುತ್ತೇವೆ. ಜರಡಿಯಲ್ಲಿ ಹಾಕಿದ ಧಾನ್ಯಗಳೆಲ್ಲವೂ ಕೆಳಗೆ ಬಿದ್ದು ಕಲ್ಲು ಮಣ್ಣು ಕಸಕಡ್ಡಿಗಳು ಮಾತ್ರ ಜರಡಿಯಲ್ಲಿ ಉಳಿಯುತ್ತದೆ. ಹೊಟ್ಟೆ ತುಂಬಿಸುವ ಧಾನ್ಯಗಳನ್ನು ಬಿಟ್ಟು ಕಸಕಡ್ಡಿಗಳನ್ನು ಮಾತ್ರ ಉಳಿಸಿಕೊಳ್ಳುವ ಜರಡಿಯನ್ನು ದೋಷಗಳನ್ನೇ ಕಾಣುವ ಜನರಿಗೆ ಉದಾಹರಣೆಯಾಗಿ ಹೇಳಬಹುದು. ಇವರು ಮತ್ತೊಬ್ಬರಲ್ಲಿರುವ ಆತ್ಮೋನ್ನತಿಗೆ ಕಾರಣವಾಗುವ ಗುಣಗಳೆಲ್ಲವನ್ನೂ ಬಿಟ್ಟು ಕೇವಲ ಕೆಟ್ಟಗುಣಗಳನ್ನು ಮಾತ್ರ ಗ್ರಹಿಸುವರು. ಇವರು ಜರಡಿಯ ಸ್ವಭಾವದವರು.

ಇನ್ನು ಕೆಲವರು ಮೊರದಂತೆ ಇರುತ್ತಾರೆ. ಮೊರದಲ್ಲಿ ಧಾನ್ಯಗಳನ್ನು ಹಾಕಿ ಕೇರಿದಾಗ ಧಾನ್ಯದಲ್ಲಿನ ಕಸಕಡ್ಡಿಗಳೆಲ್ಲವೂ ದೂರವಾಗುತ್ತವೆ ಉತ್ತಮವಾದ ಧಾನ್ಯದ ಕಣಗಳು ಮಾತ್ರ ಉಳಿದುಕೊಳ್ಳುತ್ತವೆ. ಈ ಮೊರವನ್ನು ಸಜ್ಜನರಿಗೆ ಹೋಲಿಸ ಬಹುದು. ಸಜ್ಜನರು ಇನ್ನೊಬ್ಬರ ಒಳ್ಳೆಯ ಗುಣಗಳನ್ನು ಮಾತ್ರ ಸ್ವೀಕಾರಮಾಡಿ ದೋಷಗಳನ್ನು ನಿರ್ಲಕ್ಷಿಸುತ್ತಾರೆ. ಮಹರುದ್ರದೇವರು ಮೊರದಂತೆ ಇದ್ದಾರೆ. ಇದಕ್ಕೊಂದು ಸಂವಾದಿಯಾಗಿ ಸುಭಾಷಿತವನ್ನು ಕಾಣಬಹುದು.

**ಗುಣದೋಷೌ ಬುಧೋ ಗೃಹ್ಣನ್ ಇಂದುಕ್ಷ್ವೇಲಾವಿವೇಶ್ವರಃ ।**
**ಶಿರಸಾ ಶ್ಲಾಘತೇ ಪೂರ್ವಂ ಪರಂ ಕಂಠೇ ನಿಯಚ್ಛತಿ ॥**

ಸಮುದ್ರಮಥನದಲ್ಲಿ ಚಂದ್ರಮ ಮೂಡಿಬಂದ. ಲೋಕಸಂತಾಪಹಾರಿಯಾದ ಚಂದ್ರನನ್ನು ಶಂಕರನು ತಲೆಯ ಮೇಲಿಟ್ಟು ಮೆರೆಸಿದ. ಜಗತ್ತಿನ ಗುಣವೆನಿಸಿದ ಚಂದ್ರಮನನ್ನು ಎಲ್ಲರಿಗೂ ತೋರಿಸಿದ. ಸಜ್ಜನರಾದವರು ಎಲ್ಲೆಡೆಯೂ ಗುಣವನ್ನೇ ಕಾಣುತ್ತಾರೆ. ಸಮುದ್ರಮಥನದ ಸಂದರ್ಭದಲ್ಲಿ ಹಾಲಾಹಲವು ಉಕ್ಕಿ ಬಂತು. ಜಗತ್ತಿಗೆ ಅಹಿತವನ್ನುಂಟುಮಾಡುವ ಹಾಲಾಹಲ ವಿಷವನ್ನು ಶಂಕರನು ಕುಡಿದು ಬಿಟ್ಟ. ದೋಷವೆನಿಸಿದ ವಿಷವನ್ನು ಕಂಠದ ಒಳಗೆ ಹಾಕಿಕೊಂಡು ಮುಚ್ಚಿಟ್ಟ.

ಹಾಲು ನೀರು ಒಟ್ಟಾದಾಗ ಹಂಸವು ಹಾಲನ್ನು ಮಾತ್ರ ಸ್ವೀಕರಿಸಿ ನೀರನ್ನು ಪರಿತ್ಯಜಿಸುತ್ತದೆ. ಇದರಂತೆ ಸಜ್ಜನನಾದವನೂ ಗುಣವನ್ನು ಮಾತ್ರ ಗ್ರಹಿಸಿ ದೋಷವನ್ನು ಬಿಟ್ಟುಬಿಡುತ್ತಾನೆ. ಇದಕ್ಕೆ ವ್ಯತಿರಿಕ್ತವಾಗಿ ದುಷ್ಟರಿರುತ್ತಾರೆ.

ದಕ್ಷನ ಸುಪುತ್ರಿಯಾದ ಸತೀದೇವಿಯು ದಕ್ಷನಿಗೆ ಹೇಳುತ್ತಾಳೆ –"ದಕ್ಷನೇ! ಗುಣಗಳಿಂದ ಉತ್ತುಂಗ ಸ್ಥಾನವನ್ನೇರಿದ ರುದ್ರದೇವನನ್ನು ಅವಮಾನಿಸುವಂತಹ ದುಷ್ಕೃತ್ಯಕ್ಕೆ ಇಳಿದಿರುವೆ. ಮಹಾದೇವನ ಅನರ್ಘ್ಯಗುಣಗಳನ್ನು ಗಮನದಲ್ಲಿಟ್ಟು ಕೊಳ್ಳದೆ ಚಿಕ್ಕ ದೋಷವನ್ನೇ ಮಹತ್ತಾಗಿ ತಿಳಿದು ನನ್ನ ಪತಿಯನ್ನೇ ನಿಂದಿಸುತ್ತಿರುವ ನಿನ್ನ ಸಂಬಂಧಿಯಾದ ಈ ತನುವನ್ನು ಈ ಕ್ಷಣವೇ ತೊರೆಯುತ್ತೇನೆ. ಯಾರಾದರೂ ನನ್ನನ್ನು ದಾಕ್ಷಾಯಣೀ! ಎಂದು ಸಂಬೋಧಿಸಿದರೆ ನನಗದು ಸೈರಿಸಲಾಗದು.

ವೈಷ್ಣವಾಗ್ರಣಿಯಾದ ನನ್ನ ಪತಿಯ ದ್ವೇಷಿಯಾದ ದಕ್ಷನ ಪುತ್ರಿಯಾಗಿ ನಾನು ಹೇಗೆ ಜೀವಿಸಲಿ! ಆದ್ದರಿಂದ ದಕ್ಷನಿಂದ ಪಡೆದ ದೇಹವನ್ನು ಇಲ್ಲಿಯೇ ಪರಿತ್ಯಜಿಸುತ್ತೇನೆ'' ಎಂದು ಸತೀದೇವಿಯು ಸಂಕಲ್ಪಿಸಿದಳು. ಪತಿವ್ರತೆಯಾದ ಸತೀದೇವಿಯು ತನ್ನ ಪತಿಗಾದ ಅಪಮಾನವನ್ನು ಸಹಿಸಲಾಗದೆ ಯೋಗಾಗ್ನಿಯಿಂದ ತನ್ನ ದೇಹವನ್ನೇ ಪರಿತ್ಯಾಗಮಾಡಿದಳು. ಪರಮಪವಿತ್ರವಾದ ಪಾತಿವ್ರತ್ಯದ ಪರಾಕಾಷ್ಠೆಯಿಂದ ಲೋಕದಲ್ಲಿಯೇ ವಿಖ್ಯಾತಳಾದಳು.

ಕೆಲವರು ಆತ್ಮಾಹುತಿ ಪ್ರಕರಣವು ಪುರಾಣಕಾಲದಿಂದಲೂ ನಡೆದುಬಂದಿದೆ –ಎಂದು ಸಮರ್ಥಿಸುತ್ತಾ ಸತಿಯ ಪ್ರಕರಣವನ್ನು ಉಲ್ಲೇಖಿಸುತ್ತಾರೆ. ಆದರೆ ಸತೀದೇವಿಯ ಆತ್ಮಾಹುತಿಗೂ ಇಂದಿನವರ ಆತ್ಮಾಹುತಿಗೂ ಬಹಳ ವೈಲಕ್ಷಣ್ಯವಿದೆ. ಸತೀದೇವಿಯ ಆತ್ಮಾಹುತಿಯು ಇಂದಿನ ಜನರಂತೆ ಧರ್ಮದ ನೆಲೆಯಿಲ್ಲದೆ ಸೀಮೆ ಎಣ್ಣೆ ಪೆಟ್ರೋಲ್ ಮುಂತಾದವುಗಳಿಂದ ಹೀನವಾಗಿ ಆಚರಿಸುವ ಆತ್ಮಾಹುತಿ ಯಂತಲ್ಲ.

ಸತಿಯ ದೇಹವು ಪಾತವಾಗುತ್ತಿರಲು ಆಕಾಶ ಭೂಮಿಗಳಲ್ಲಿ ಕಿವಿಗಡಚಿಕ್ಕುವ ಭಯಂಕರವಾದ ಕೋಲಾಹಲವುಂಟಾಯಿತು.

**'ತತ್ ಪಶ್ಯತಾಂ ಖೇ ಭುವಿ ಚಾದ್ಭುತಂ ಮಹತ್ ।**
**ಹಾಹೇತಿ ವಾದಃ ಸುಮಹಾನಜಾಯತ' ।**

ಈ ಘಟನೆಯಿಂದ ಎಲ್ಲರೂ ದಿಙ್ಮೂಢರಾದರು. ದಕ್ಷಪ್ರಜಾಪತಿಯೂ ಬಹಳ ಖಿನ್ನನಾದನು 'ನಾನು ಅಕೃತ್ಯವನ್ನೆಸಗಿದೆ' ಎಂದು ಪರಿತಪಿಸಿದ.

ಇತ್ತ ಸತಿಯು ಯೋಗಾಗ್ನಿಯಿಂದ ಗತಿಸಿದ ವಿಚಾರ ಪಶುಪತಿಗೆ ತಿಳಿಯಿತು. ಸತಿಯ ವಿರಹ, ದಕ್ಷ ಮಾಡಿದ ಅವಮಾನಗಳಿಂದ ಕೃತ್ತಿವಾಸನು ಕ್ರುದ್ಧನಾದನು.

**ಕ್ರುದ್ಧಃ ಸುದಷ್ಟೋಷ್ಠಪುಟಃ ಸ ಧೂರ್ಜಟಿಃ**
**ಜಟಾಂ ತಟಿದ್ವಹ್ನಿಸಟೋಗ್ರರೋಚಿಷಮ್ ।**
**ಉತ್ಕೃತ್ಯ ರೌದ್ರಃ ಸಹಸೋತ್ಥಿತೋ ಹಸನ್**
**ಗಂಭೀರನಾದೋ ವಿಸಸರ್ಜ ತಾಂ ಭುವಿ ॥** — (೪-೬-೨)

ಧೂರ್ಜಟಿಯು ಕಟಕಟನೆ ಹಲ್ಕಡಿದು ತುಟಿಕಚ್ಚಿ ಜಟೆಯನ್ನು ಧರೆಗೆ ಅಪ್ಪಳಿಸಿದನು. ಕೂಡಲೇ ಅದರಿಂದ ಮಿಂಚಿನಂತೆ ಹೊಳೆಯುವ, ಬೆಂಕಿಯಂತಿರುವ ಕೆಂಜಟೆಯಿಂದ ರುದ್ರಾಂಶಸಂಯುಕ್ತನಾದ ವೀರಭದ್ರನು ಪ್ರಕಟನಾದ. ಬೃಹದ್ಗಾತ್ರನಾದ, ಸಹಸ್ರನೇತ್ರನಾದ, ಕರಾಳ ಕೋರೆದಾಡೆಗಳಿಂದ ಕೂಡಿದ ವೀರಭದ್ರನಿಗೆ ರುದ್ರದೇವ, ದಕ್ಷನ ದಕ್ಷತೆಯನ್ನೇ ಅಡಗಿಸಿ ಯಜ್ಞಶಾಲೆಯನ್ನೇ ವಿಧ್ವಂಸಗೊಳಿಸಲು ಆದೇಶಿಸಿದ.

ಭಯಂಕರ ದೇಹದ ವೀರಭದ್ರನು ಯಜ್ಞಶಾಲೆಯ ಕಡೆಗೆ ನಡೆದುಕೊಂಡು ಬರುವಾಗ ಮಹಾಧೂಳಿಯೇ ಮೇಲೆದ್ದಿತು. ಎಲ್ಲೆಡೆಯೂ ಕತ್ತಲೆ ತುಂಬಿತು. ಯಜ್ಞಶಾಲೆಯಲ್ಲಿ ಕುಳಿತವರೆಲ್ಲರೂ ಕಂಗಾಲಾದರು. ಅರೆ! ಗಾಳಿ ಇಲ್ಲ. ಕಳ್ಳರ

ಉಪದ್ರವಕ್ಕೆ ಅವಕಾಶವಿಲ್ಲ. ಏಕೆಂದರೆ ಉಗ್ರಪ್ರತಾಪಿಯಾದ ಪ್ರಾಚೀನಬರ್ಹಿಯು ರಾಜನಾಗಿದ್ದಾನೆ. ಇನ್ನು ಹಸುಗಳು ಬರುವ ಸಮಯವೂ ಅದಾಗಿರಲಿಲ್ಲ. ಹೀಗಿರಲು ಧೂಳು ಭುಗಿಲೆದ್ದ ಬಗೆ ಹೇಗೆ? ಪ್ರಳಯಕಾಲವೇ ಒದಗಿಬಂದಿತೋ! ಎಂದು ಎಲ್ಲರೂ ಗಾಬರಿಯಾಗಿದ್ದಾರೆ. ಕೆಲವರು ಸತಿಗಾದ ಅವಮಾನಕ್ಕಾಗಿ ತಕ್ಕ ಶಿಕ್ಷೆಯಾಗುತ್ತದೆ ಎಂದರು.

ಭೂತಪ್ರಮಥಗಣಗಳಿಂದೊಡಗೂಡಿ ಬಂದ ವೀರಭದ್ರ ಯಜ್ಞವೇದಿಕೆಯನ್ನೆಲ್ಲ ವಿಧ್ವಂಸಗೊಳಿಸಿದ. ಎಲ್ಲರೂ ಯಜ್ಞಶಾಲೆಯನ್ನು ಮುರಿದುಹಾಕಿದರು. ಹವಿಸ್ಸಿನ ಪಾತ್ರೆಗಳನ್ನು ಒಡೆದರು. ಮಂತ್ರಾಗ್ನಿಯನ್ನು ನಂದಿಸಿದರು. ದುಷ್ಕೃತ್ಯಗಳನ್ನೆಸಗಿ ಭಯಂಕರವಾದ ಕೋಲಾಹಲವನ್ನುಂಟುಮಾಡಿದರು. ಹಿಂದೆ ಶಾಪದ ಸಂದರ್ಭದಲ್ಲಿ ಗಡ್ಡ ನೀವಾಳಿಸುತ್ತ ಅಪರಾಧವೆಸಗಿದ ಭೃಗುಋಷಿಯ ಗಡ್ಡವನ್ನೇ ಹಿಡಿದು ಜಗ್ಗಿದರು. ಕಣ್ಣಿನಿಂದ ಅಕೃತ್ಯವನ್ನು ಅನುಮೋದಿಸಿದ ಭಗನೆಂಬ ಆದಿತ್ಯನ ಕಣ್ಣುಗಳನ್ನು ಗೂಟದಿಂದ ಮೀಟಿದರು. ಹಲ್ಲು ತೋರಿ ಅಣಕಿಸಿದ ಪೂಷನೆಂಬ ಆದಿತ್ಯನ ಹಲ್ಲು ಮುರಿದರು. ಯಜ್ಞವನ್ನೆಲ್ಲ ಅಸ್ತವ್ಯಸ್ತಗೊಳಿಸಿದ ವೀರಭದ್ರನು ದಕ್ಷನ ವಕ್ಷಸ್ಥಳವನ್ನೇರಿ ಆತನ ಕತ್ತನ್ನು ಕತ್ತರಿಸಲು ಪ್ರಯತ್ನಿಸಿದ. ವಿಫಲನಾದ. ಅನಂತರ ರುದ್ರದೇವನೇ ಬಂದ. ಅವನೂ ದಕ್ಷನ ಶಿರವನ್ನು ತರಿಯಲು ಯತ್ನಿಸಿ ವಿಫಲನಾದ. ವೈಫಲ್ಯಕ್ಕೆ ಕಾರಣ ವಾದದ್ದು ತನ್ನಲ್ಲಿರುವ ದ್ವೇಷವೆಂಬ ದೋಷವೆಂದೂ ಅರಿತ. ಅನಂತರ 'ದಕ್ಷನ ಸಂಹಾರಕ್ರಿಯೆಯು ಭಗವತ್ಪ್ರೀತಿಕರವಾದ ಯಜ್ಞ' ಎಂದು ಅನುಸಂಧಾನ ಮಾಡಿದ. ಈ ಯಜ್ಞಕ್ಕೆ ದಕ್ಷನೇ ಬಲಿಪಶು ಎಂದು ಸಂಕಲ್ಪಿಸಿದ. ಇಂತಹ ಭಗವತ್ಪ್ರೀತಿಕರವಾದ ಪವಿತ್ರ ಅನುಸಂಧಾನವನ್ನು ಮಾಡಿದ ಬಳಿಕವೇ ಶಿವನು ದಕ್ಷನ ತಲೆಯನ್ನು ಕತ್ತರಿಸಲು ಸಮರ್ಥನಾದನು.

ಸಕಲ ಸುಜನರ ಮನಸ್ಸನ್ನು ಸತ್ಕರ್ಮದಲ್ಲಿ ಪ್ರೇರಿಸುವ ಮಹಾನುಭಾವ ರುದ್ರ ದೇವ. ಮನೋನಿಯಾಮಕನಾದ ರುದ್ರದೇವನ ಅನುಗ್ರಹವಿಲ್ಲದೆ ಮನೋನಿಗ್ರಹ ಸಿದ್ಧಿಸದು. ಇಂತಹ ಭಗವದ್ಭಕ್ತನಾದ ರುದ್ರನ ಅವಮಾನವನ್ನು ವಿಷ್ಣುವಾಗಲಿ ಬ್ರಹ್ಮನಾಗಲಿ ಸಹಿಸಿರಲಿಲ್ಲ. ದಕ್ಷನು ಮಾಡುತ್ತಿರುವ ಅಪರಾಧವನ್ನು ಮನಗಂಡ ವಿಷ್ಣು ಬ್ರಹ್ಮರು ದಕ್ಷನ ಯಜ್ಞಕ್ಕೆ ಆಗಮಿಸಿಯೇ ಇರಲಿಲ್ಲ. ಮುಂದೆ ಹರಿಭಕ್ತನಾದ ರುದ್ರನಿಂದ ದಕ್ಷನ ಸಂಹಾರವಾಗಲು ದಕ್ಷಾಧ್ವರವೂ ಅಪೂರ್ಣವಾಗಿಯೇ ಉಪ ಸಂಹಾರವಾಯಿತು.

ದೇವತೆಗಳೆಲ್ಲರೂ ದಕ್ಷನನ್ನು ಮತ್ತೆ ಬದುಕಿಸಿರೆಂದು ಬ್ರಹ್ಮದೇವರ ಬಳಿಗೆ ಹೋಗಿ ಪ್ರಾರ್ಥಿಸಿದರು. ಬದುಕಿಸಲು ಸಾಮರ್ಥ್ಯವಿದ್ದರೂ ಭಗವದ್ಭಕ್ತನಿಗೆ ಅಪಮಾನ ಮಾಡಿದ ದಕ್ಷನನ್ನು ಬ್ರಹ್ಮದೇವ ಬದುಕಿಸಲು ಬಯಸಲಿಲ್ಲ. ರುದ್ರದೇವನ ಬಳಿಯೇ ಪ್ರಾರ್ಥಿಸಿರಿ ಎಂದರು.

ಇತ್ತ ದೇವತೆಗಳು ಶಂಕರನ ಬಳಿಗೆ ಬಂದು ಅವನ ಅಂತರ್ಯಾಮಿಯಾದ ಹರಿಯನ್ನು ಸ್ತುತಿಗೈದರು. ಕ್ರುದ್ಧನಾದ ರುದ್ರನನ್ನು ಸಂತೋಷಗೊಳಿಸಲಾರೆವೆಂದು

ಅವನ ಅಂತರ್ಯಾಮಿಯನ್ನು ಸ್ತುತಿಸಿ ಸಂತೋಷಗೊಳಿಸಿದರು. ಹರಿಯು ಸಂತುಷ್ಟನಾಗಲು ಹರನೂ ಮುಖವರಳಿಸಿದ. ದಕ್ಷನು ಬದುಕಲಿ! ಎಂದು ಹರಸಿದ. ದೇವತೆಗಳು ಯಜ್ಞಪಶುವಾದ ಮೇಕೆಯ ತಲೆಯನ್ನು ದಕ್ಷನ ಮುಂಡಕ್ಕೆ ಜೋಡಿಸಿದರು.

ಇಂದು ವಿಜ್ಞಾನವು ಎಷ್ಟೇ ಮುಂದುವರಿದಿದ್ದರೂ ಸತ್ತ ಮುಂಡಕ್ಕೆ ಬೇರೆ ರುಂಡವನ್ನು ಜೋಡಿಸಿ ಪ್ರಾಣಾವಾಹನೆಯನ್ನು ಮಾಡಲು ಸಾಧ್ಯವಿಲ್ಲ. ದಕ್ಷನಿಗಾಗಿ ದೇವತೆಗಳು ನಡೆಸಿದ ಶಸ್ತ್ರಚಿಕಿತ್ಸೆಯು ಇಂದಿನ ಪಳಗಿದ ವೈದ್ಯರಿಗೂ ಆಶ್ಚರ್ಯವನ್ನುಂಟುಮಾಡುವ ಸವಾಲಾಗಿದೆ.

ಮೇಕೆಯ ಮುಖದ ದಕ್ಷ, ನಿದ್ದೆಯಿಂದ ಏಳುವವನಂತೆ ಎದ್ದು ಕುಳಿತ. ಹೊಸ ರೂಪಾಂತರವನ್ನು ಪಡೆದ ದಕ್ಷನ ದೇಹ ಮಾತ್ರ ಬದಲಾದದ್ದಲ್ಲ. ಅವನ ಹೃದಯವೂ ಬದಲಾಗಿತ್ತು. ಹೊಸ ವ್ಯಕ್ತಿತ್ವವನ್ನೇ ಪಡೆದುಕೊಂಡಿದ್ದ. ಪಶ್ಚಾತ್ತಾಪ ದಗ್ಧನಾದ ದಕ್ಷನು ಹೊಸ ವ್ಯಕ್ತಿತ್ವವನ್ನು ರೂಪಿಸಿಕೊಟ್ಟ ರುದ್ರದೇವರಿಗೆ ಪೊಡಮಟ್ಟು ಪರಿಪರಿಯಾಗಿ ಪ್ರಾರ್ಥಿಸಿದ. "ನನ್ನ ಅಪರಾಧಕ್ಕೆ ತಕ್ಕ ಶಿಕ್ಷೆ ವಿಧಿಸಿರುವಿರಿ. ಎಂದೆಂದಿಗೂ ಭಗವದ್ಭಕ್ತರಲ್ಲಿ ದ್ವೇಷಭಾವನೆ ಬಾರದಿರುವಂತೆ ಅನುಗ್ರಹಿಸಿರುವಿರಿ! ಇಂದು ನೀವು ನೀಡಿದ್ದು ಶಿಕ್ಷೆಯಲ್ಲ. ಅನುಗ್ರಹದ ಶ್ರೀರಕ್ಷೆ" ಎಂದ. ಕೀರ್ತಿ ಪ್ರತಿಷ್ಠೆಗಳ ಸಾಕಾರಮೂರ್ತಿಯಾಗಿದ್ದ ದಕ್ಷಪ್ರಜಾಪತಿಯು ಹೊಸ ಹುಟ್ಟನ್ನು ಪಡೆದು ವಿನಯ ಭಗವದ್ಭಕ್ತಿ ಮುಂತಾದ ಸದ್ಗುಣಗಳ ಸಾಕಾರ ಮೂರ್ತಿಯಾದ ಭಗವಂತನ ವಿಶೇಷ ಸನ್ನಿಧಾನಕ್ಕೆ ಭಾಗಿಯಾದ.

ದಕ್ಷಪ್ರಜಾಪತಿಯು ಪುನಃ ಯಜ್ಞವನ್ನು ಆರಂಭಿಸಿದ. ಭಗವತ್ಪ್ರೀತಿಯೇ ಈ ಯಜ್ಞದ ಮುಖ್ಯ ಉದ್ದೇಶವಾಗಿತ್ತು. ಆದ್ದರಿಂದಲೇ ಹಿಂದೆ ಬಾರದಿದ್ದ ವಿಷ್ಣು ಬ್ರಹ್ಮರೂ ಆಗಮಿಸಿದರು. ಅಪ್ರಾಕೃತ ವಿಗ್ರಹನಾದ ಅಕಳಂಕಚರಿತನಾದ ಭಗವಂತನು ಯಜ್ಞಶಾಲೆಗೆ ಆಗಮಿಸಿದ. ಅವನ ಹೃದ್ಯ ರೂಪವನ್ನು ಭಾಗವತವು ಮನೋಹರವಾಗಿ ನಿರೂಪಿಸಿದೆ–

**ಶ್ಯಾಮೋ ಹಿರಣ್ಯರಶನೋಽರ್ಕಕಿರೀಟಜುಷ್ಟೋ**
**ನೀಲಾಳಕಭ್ರಮರಕುಂಡಲಮಂಡಿತಾಸ್ಯಃ ।**
**ಕಂಬ್ವಬ್ಜ–ಚಕ್ರ–ಶರ–ಚಾಪ–ಗದಾಸಿ–ಚರ್ಮ–**
**ವ್ಯಗ್ರೈರ್ಹಿರಣ್ಮಯಭುಜೈರಿವ ಕರ್ಣಿಕಾರಃ ॥**

— (೪–೮–೨೦)

ನೀಲಮೇಘಶ್ಯಾಮನಾದ, ಬಂಗಾರದ ಕಾಂತಿಯಿಂದ ಮಿನುಗುವ ಕಾಂತಿಯುಳ್ಳ ತರಣಿಯಂತೆ ಜ್ವಲಿಸುವ ಕಿರೀಟವನ್ನು ಧರಿಸಿದ, ನಸುಗಪ್ಪಿನ ಸುಳಿಗುರುಳುಗಳಿಂದ ಅಲಂಕೃತವಾದ ಮುಖಕಮಲವುಳ್ಳ, ಕಮಲ–ಚಕ್ರ–ಬಾಣ–ಬಿಲ್ಲು–ಗದೆ–ಖಡ್ಗ–ಗುರಾಣಿಗಳನ್ನು ಧರಿಸಿರುವ, ಭುಜಬಳಸಿದ ಬಂಗಾರದ ವಲಯಗಳಿಂದಲಂಕೃತನಾದ, ಉರದಲ್ಲಿ ರಮೆಯನ್ನು ಧರಿಸಿ–ಕೊರಳಿನಲ್ಲಿ ಚಿಗುರು ತುಳಸಿ ವನಮಾಲೆ

ಯನ್ನು ಧರಿಸಿದ, ಮಂದಹಾಸದಿಂದಲೇ ಜನರ ಮನವರಳಿಸುವ, ಇಕ್ಕೆಲಗಳಲ್ಲಿ ಬೀಸುವ ಚಾಮರಗಳಿಂದಲಂಕೃತನಾದ, ಶ್ವೇತಛತ್ರವುಳ್ಳ, ಗರುಡಾರೂಢನಾದ ಲಕ್ಷ್ಮೀಕಾಂತನು ಬಂದನು. ಕೂಡಲೇ ಬ್ರಹ್ಮೇಂದ್ರಾದಿ ಸಮಸ್ತ ದೇವತೆಗಳೂ ದಿಗ್ಗನೆದ್ದು ಮುಗಿಬಿದ್ದರು. ಹರಿಯ ತೇಜಸ್ಸಿನಿಂದ ಇತರರ ತೇಜಸ್ಸೆಲ್ಲವೂ ಕ್ಷೀಣವಾಯಿತು. ನಾಲಿಗೆ ಒಣಗಿತು. ಭಯಗ್ರಸ್ತರಾದ ದೇವತೆಗಳೆಲ್ಲರೂ ತಮ್ಮ ತಮ್ಮ ಯೋಗ್ಯತೆಗನುಗುಣವಾಗಿ ಸ್ತುತಿಗೈದರು.

ಇಲ್ಲಿ ನಾವು ಕೆಲವು ಅಂಶಗಳನ್ನು ಗಮನಿಸಬೇಕು. ಹರಿಯು ಆಗಮಿಸಿದಾಗ ಎಲ್ಲ ದೇವತೆಗಳೂ ಎದ್ದುನಿಂತು ನಮಿಸಿದ್ದರಿಂದ ಹರಿಸರ್ವೋತ್ತಮತ್ವವು ಸಿದ್ಧಿಸಿತು. ಅವನ ಕಾಂತಿಯ ಮುಂದೆ ಇವರ ಕಾಂತಿಯು ಕ್ಷೀಣಿಸಿದ್ದರಿಂದ ದೇವತೆಗಳ ಅವರತ್ವವೂ ಸಿದ್ಧವಾಗುವುದು. ಇಷ್ಟೆ ಅಲ್ಲದೆ ಹಿಂದೆ ದಕ್ಷನು ಶಿವನಿಗೆ ಸ್ಥಾನವೇ ಇಲ್ಲದಂತೆ ಯಜ್ಞ ನಡೆಸಿದಾಗ ಭಗವಂತನೂ ಆಗಮಿಸಲಿಲ್ಲ. ತನ್ನ ಭಕ್ತರ ದ್ವೇಷ ತನ್ನ ದ್ವೇಷದಲ್ಲಿಯೇ ಪರ್ಯವಸಾನವಾಗುತ್ತದೆಂಬುದು ಶ್ರೀಹರಿಯ ಅಭಿಪ್ರಾಯ. ಆದ್ದರಿಂದ ತನ್ನ ಭಕ್ತನಾದ ಶಿವನ ಅಪಮಾನವನ್ನು ಭಗವಂತ ಎಂದೂ ಕ್ಷಮಿಸಲಾರ! 'ತದ್ಭಕ್ತದ್ವೇಷ ಏವ ಚ' ವೈಷ್ಣವರ ದ್ವೇಷವೂ ವಿಷ್ಣುವಿನ ದ್ವೇಷದಲ್ಲಿ ಪರ್ಯವಸಾನವಾಗುತ್ತದೆ. ಇದನ್ನು ಸೂಚಿಸಲಿಕ್ಕಾಗಿಯೇ ಎಷ್ಟೆಲ್ಲಾ ವೈಭವದಿಂದ ದಕ್ಷಪ್ರಜಾಪತಿಯು ಹೋಮ ನಡೆಸಿದರೂ ಭಗವಂತ ಆಗಮಿಸಲೇ ಇಲ್ಲ. ಬ್ರಹ್ಮದೇವರೂ ಬರಲಿಲ್ಲ. ಎರಡನೇ ಬಾರಿ ಪಶ್ಚಾತ್ತಾಪದಗ್ಧನಾಗಿ ರುದ್ರದೇವರನ್ನೂ ಸ್ತೋತ್ರಮಾಡಿ ಎಲ್ಲರಿಗೂ ಸ್ಥಾನವಿರುವ ಯಜ್ಞವನ್ನಾಚರಿಸಿದಾಗ ಭಗವಂತ ಆಗಮಿಸಿದ.

ಈ ಒಂದು ಪ್ರಸಂಗವನ್ನು ಎಲ್ಲರೂ ಅವಲೋಕಿಸಬೇಕು. ಶಿವನಿಗೂ ವೈಷ್ಣವ ಸಿದ್ಧಾಂತದಲ್ಲಿ ಸ್ಥಾನವಿದೆ ಎನ್ನುವುದನ್ನು ಅರ್ಥಮಾಡಿಕೊಳ್ಳಬೇಕು.

ಸರ್ವೋತ್ತಮನಾದ ವಿಷ್ಣುವಿನ ಒಟ್ಟಿಗೆ ತಾರತಮ್ಯ ಕ್ರಮದಲ್ಲಿ ಸಕಲದೇವತೆಗಳನ್ನು ಚಿಂತಿಸುವ ಮತವು ವಿಷ್ಣುವಿಗಭಿಮತವು ಎಂದು ಶ್ರೀಮದಾಚಾರ್ಯರು ಇಲ್ಲಿ ಸ್ಪಷ್ಟಪಡಿಸಿದ್ದಾರೆ.

ಅನಂತರ ದಕ್ಷನು ಭಗವಂತನನ್ನು ಪೂಜಿಸಿ, ಯಜ್ಞಭಾಗಕ್ಕೆ ಅರ್ಹರಾದ ಎಲ್ಲ ದೇವತೆಗಳನ್ನು ಪೂಜಿಸಿದನು. ರುದ್ರದೇವರಿಗೂ ಹವಿರ್ಭಾಗವನ್ನು ಕೊಟ್ಟನು. ಇದರಿಂದ ಪ್ರೀತರಾದ ದೇವತೆಗಳೆಲ್ಲರೂ 'ದಕ್ಷನಿಗೆ ಧರ್ಮಬುದ್ಧಿ ಸ್ಥಿರವಾಗಲಿ!' ಎಂದು ಹರಸಿ ಹೊರಟರು.

## ಭೋಗಮಗ್ನರಾಗದಿರಿ!

ಉತ್ತಾನಪಾದ ರಾಜನಿಗೆ ಈರ್ವರು ಪತ್ನಿಯರಿದ್ದರು. ಸುನೀತಿ, ಸುರುಚಿ –ಎಂಬುದಾಗಿ. ಈ ರಾಜನಿಗೆ ಸುರುಚಿಯ ಮೇಲೆ ಎಲ್ಲಿಲ್ಲದ ಪ್ರೀತಿ. ಸುನೀತಿಗೆ ಯಾವುದೇ ರೀತಿಯ ಸ್ಥಾನಮಾನಗಳನ್ನು ಕಲ್ಪಿಸಿಕೊಡದ ರಾಜನಿಗೆ ಸುರುಚಿಯ ಯಾವುದೇ ಕಾರ್ಯಗಳನ್ನು ಪ್ರತಿಭಟಿಸುವ ಧೈರ್ಯವೇ ಇರಲಿಲ್ಲ. ಹೀಗಾಗಿ ಅವನ

ರಾಜ್ಯವೂ ಅವನಂತೆಯೇ ದುರ್ಬಲವಾಗಿತ್ತು. ಉತ್ತಾನಪಾದನು –ಈಗಿನ ಭಾಷೆಯಲ್ಲಿ ಹೇಳುವುದಾದರೆ– 'ಅಮ್ಮಾವ್ರ ಗಂಡ'ನಾಗಿದ್ದ.

ಈ ಉತ್ತಾನಪಾದನ ಕಥೆಯನ್ನು ನಮ್ಮ ನಿಮ್ಮೆಲ್ಲರಿಗೂ ಅನ್ವಯಿಸಿಕೊಳ್ಳ ಬಹುದು. ಉತ್ತಾನಪಾದನಿಗೆ ಸುನೀತಿ ಬೇಡವಾಗಿದ್ದಳು. ಸುರುಚಿಯು ರುಚಿಸಿದ್ದಳು. ನಮ್ಮೆಲ್ಲರಿಗೂ ಸಹ 'ಸು–ನೀತಿ' ಬೇಡ; 'ಸು–ರುಚಿ' ಬೇಕು. ನಾವೂ ಒಳ್ಳೆಯ ನೀತಿ, ಸಂಸ್ಕೃತಿ, ನಡತೆ, ಸಚ್ಚಾರಿತ್ರ್ಯ ಯಾವುದನ್ನೂ ಗಮನಿಸುವುದಿಲ್ಲ. ಆದರೆ ಒಳ್ಳೆಯ ಮೋಹಕವಾದ ವಿಷಯಪದಾರ್ಥಗಳಲ್ಲಿ ಅಭಿರುಚಿಯನ್ನು ಹೊಂದಿರುತ್ತೇವೆ. ನಮಗೆ ಕಾಲಕ್ರಮೇಣ ಸುರುಚಿಯಲ್ಲಿಯೂ ಆಸಕ್ತಿ ಕಡಿಮೆಯಾಗುತ್ತಾ ಕುರುಚಿಯ ಕಡೆಗೆ ಆಸಕ್ತಿ ಹೊಂದುತ್ತಿದ್ದೇವೆ. ಕೆಟ್ಟ ಅಭಿರುಚಿಗಳನ್ನು ಮೈಗೂಡಿಸಿ ಕೊಳ್ಳುತ್ತಿದ್ದೇವೆ. ನಾವು ಉತ್ತಾನಪಾದನಿಗಿಂತಲೂ ಒಂದು ಹೆಜ್ಜೆ ಮುಂದೆ ಬಿದ್ದಿದ್ದೇವೆ.

ಉತ್ತಾನಪಾದನಿಗೆ ಸುರುಚಿಯನ್ನು ಎದುರಿಸುವ ಧೈರ್ಯವಿರಲಿಲ್ಲ. ಹೀಗೆಯೇ ಒಂದು ದಿನ ಸುನೀತಿಯ ಮಗನಾದ ಧ್ರುವಕುಮಾರನಿಗೆ ಉತ್ತಾನಪಾದನ ತೊಡೆಯ ನ್ನೇರುವ ಮನಸಾಯಿತು. ಕೂಡಬೇಕೆಂದು ಅಡಿಯಿರಿಸಿದಾಗ ಸುರುಚಿ ತಡೆದಳು. "ರಾಜನ ತೊಡೆಯನ್ನೇರಬೇಕಾದರೆ ಕಾಡಿಗೆ ಹೋಗಿ ತಪಸ್ಸುಮಾಡಿ ನನ್ನ ಹೊಟ್ಟೆಯಲ್ಲಿ ಮತ್ತೊಮ್ಮೆ ಹುಟ್ಟಿ ಬಾ!" ಎಂದಳು. ತಂದೆಯ ತೊಡೆ ಏರಲು ಹೊರಟ ಕಂದನಿಗೆ ಕುತ್ಸಿತವಾದ ಅವಮಾನವನ್ನು ಎಲ್ಲರ ಸಮಕ್ಷಮದಲ್ಲಿ ಮಾಡಿದಳು. ಇಷ್ಟು ಅವಮಾನಿಸಿದರೂ "ಸುರುಚಿ ಅವನನ್ನು ತಡೆಯಬೇಡ. ಅವನೂ ನನ್ನ ಮಗನಾಗಿದ್ದಾನೆ" ಎನ್ನುವಷ್ಟು ಧೈರ್ಯ ಉತ್ತಾನಪಾದ ರಾಜನಿಗಿರ ಲಿಲ್ಲ. ಸುರುಚಿಯ ದೌರ್ಜನ್ಯವನ್ನೆದುರಿಸುವ ಎದೆಗಾರಿಕೆಯೇ ಇರಲಿಲ್ಲ. ಸುಮ್ಮನೆ ನೋಡುತ್ತಾ ಮೌನಿಯಾಗಿ ಕುಳಿತಿದ್ದ.

## ಸುನೀತಿಯ ಆದರ್ಶ ನೀತಿ

ಇತ್ತ ತಂದೆಯ ನಿಷ್ಕ್ರಿಯತೆ ಸುರುಚಿಯ ದೌರ್ಜನ್ಯಗಳಿಂದ ಅವಮಾನಿತನಾದ ಧ್ರುವಕುಮಾರ ತಾಯಿಯ ಬಳಿ ನಡೆದುಬರುತ್ತಿದ್ದಾನೆ. ದುಃಖದ ಬಿಸಿ ಉಸಿರನ್ನು ಬಿಡುತ್ತಾ ಭಾರದ ಹೆಜ್ಜೆಗಳನ್ನಿಡುತ್ತಾ ಬಳಿಬಂದ ಪುತ್ರನನ್ನು ತಾಯಿಯಾದ ಸುನೀತಿಯು ಕಂಡು "ಏನಾಯಿತು ಕಂದ!" ಎಂದಳು. ತಾಯಿ ಬಳಿ ತನಗಾದ ಅಪಮಾನವನ್ನು ಹೇಳಲಾರದಷ್ಟು ದುಃಖಾಶ್ರುಧಾರೆ ಹರಿಯುತ್ತಿದೆ. ತನಯನ ಅಳಲನ್ನು ಕಿತ್ತೊಗೆಯಲು ತಾಯಿ ಚಡಪಡಿಸುತ್ತಿದ್ದಾಳೆ. ಈ ಸಂದರ್ಭದಲ್ಲಿ ದುಃಖದ ಮೂಲವೇನೆಂದು ಪರಿಸರದ ಜನರೇ ವಿವರಿಸಬೇಕಾಯಿತು. ನಡೆದ ಸಂಗತಿಯನ್ನು ತಿಳಿದ ಸುನೀತಿಯು ನಾವೆಲ್ಲರೂ ನೆನಪಿಡಬೇಕಾದ ಮಾತೊಂದನ್ನು ಹೇಳುತ್ತಾಳೆ–

ಮಾಽಮಂಗಲಂ ತಾತ ಪರೇಷು ಮಂಸ್ಥಾಃ

"ಮಗು! ಯಾರಿಗೂ ಕೇಡನ್ನು ಬಯಸಬೇಡ" ಎಂದು. ಇಂತಹ ಉದ್ವಿಗ್ನತೆಯ ವಿಷಮ ಸನ್ನಿವೇಶದಲ್ಲಿ ಯಾರಿಗೂ ಇಂತಹ ಮಾತು ಸ್ಫುರಿಸಲು ಸಾಧ್ಯವಿಲ್ಲ. 'ಅವಮಾನ ಮಾಡಿದ ಸುರುಚಿ ಹಾಳಾಗಿಹೋಗಲಿ!' ಎಂದು ಶಪಿಸುವವರೇ ಹೆಚ್ಚು.

"ಸುರುಚಿಗೆ ಕೆಟ್ಟದ್ದನ್ನು ಬಯಸದಿರು" ಎನ್ನುತ್ತಾಳೆ. ಉದಾತ್ತ ಮನೋಭಾವದ ಉತ್ತುಂಗಶಿಖರಗಳನ್ನೇರಿದ ಉತ್ತಮ ಮಹಿಳೆಯರ ವ್ಯಕ್ತಿತ್ವವೇ ಇದು. ಸುನೀತಿ ತನ್ನ ತನಯನನ್ನು ತೊಡೆಯಲ್ಲಿರಿಸಿ ಸಾಂತ್ವನದ ನುಡಿಗಳನ್ನು ಹೇಳುತ್ತಾಳೆ ಧ್ರುವ! ಸುರುಚಿಯು ಹೇಳಿದಂತೆ ಕಾಡಿಗೆ ಹೋಗಿ ತಪಸ್ಸನ್ನು ಮಾಡು. ಭಗವಂತನ ಆರಾಧನೆ ವಿಹಿತ ಕರ್ತವ್ಯ. ಆದರೆ ಅವಳ ಗರ್ಭದಲ್ಲಿ ಹುಟ್ಟಬೇಕೆಂದು ಬಯಸ ಬೇಡ! ನಿನ್ನ ದುಃಖಪರಿಹಾರಕ್ಕೆ ಭಗವದಾರಾಧನೆಯೊಂದೇ ಪರಿಕರ. ಅದರಿಂದ ದುಃಖ ಪರ್ವತಗಳೇ ತರಿದುಹೋಗುತ್ತವೆ ಎಂದಳು.

ತಾಯಿಯ ಮಾತನ್ನು ಶಿರಸಾವಹಿಸಿ ಧ್ರುವಕುಮಾರ ಕಾಡಿಗೆ ನಡೆದೇ ಬಿಟ್ಟ. ಇಲ್ಲಿ ಬಾಲಕನ ದಿಟ್ಟತನವು ಎಷ್ಟು ಆಶ್ಚರ್ಯಕರವೋ ಅದಕ್ಕಿಂತಲೂ ಚಿಕ್ಕ ಬಾಲಕನನ್ನು ಕಾಡಿಗೆ ಕಳುಹಿಸುವ ಸುನೀತಿಯ ಧಾರ್ಮಿಕ ಮಾತೃಹೃದಯ ಪ್ರತಿಯೊಬ್ಬರನ್ನು ಬೆರಗುಗೊಳಿಸುತ್ತದೆ. ಧೈರ್ಯ ಸ್ಥೈರ್ಯಗಳ ಸನ್ಮೂರ್ತಿಯಾಗಿ ಸುನೀತಿಯು ತೋರುತ್ತಾಳೆ.

ಇದಕ್ಕೆ ಸಂವಾದಿಯಾಗಿ ರಾಮಾಯಣದ ಒಂದು ಪ್ರಸಂಗವನ್ನು ಸ್ಮರಿಸಿ ಕೊಳ್ಳಬಹುದು.

ರಾಮನೊಂದಿಗೆ ವನವಾಸಕ್ಕೆ ಹೊರಡಲಣಿಯಾದ ಲಕ್ಷ್ಮಣನು ತನ್ನ ತಾಯಿ ಸುಮಿತ್ರೆಯ ಅನುಮತಿಗಾಗಿ ಬಂದು ಅವಳನ್ನು ನಮಸ್ಕರಿಸುತ್ತಾನೆ. ಸುಮಿತ್ರೆಯು ಲಕ್ಷ್ಮಣನನ್ನು ಬೆನ್ನುತಟ್ಟಿ ಕಳುಹಿಸಿಕೊಡುತ್ತಾಳೆ. ಲೋಕದ ಇನ್ನಿತರ ತಾಯಂದಿ ರಾಗಿದ್ದರೆ, "ಕೈಕೇಯಿಯ ವರದ ಕ್ರಮದಂತೆ ಕಾಡಿಗೆ ನಡೆಯಬೇಕಾದವ ಶ್ರೀರಾಮ ಮಾತ್ರ. ನೀನ್ಯಾಕೆ ಹೋಗಬೇಕು" ಎಂದು ತಡೆಯೊಡ್ಡುತ್ತಿದ್ದರು. ಆದರೆ ಸುಮಿತ್ರೆಯ ಉದಾರ ಹೃದಯ ಹೀಗೆ ಬಿಚ್ಚಿಕೊಳ್ಳುತ್ತದೆ. 'ಸೃಷ್ಟಸ್ತ್ವಂ ವನವಾಸಾಯ' ಎನ್ನುತ್ತಾಳೆ. "ವನವಾಸಕ್ಕಾಗಿಯೇ ರಾಮನ ಸೇವೆಗೆಂದೇ ಜನಿಸಿದವ ನೀನು. ಸೌಮಿತ್ರೇ! ಗಚ್ಛ ಗಚ್ಛ!" ಎನ್ನುತ್ತಾಳೆ. ರಾಮನೊಟ್ಟಿಗೆ ಹೊರಡಲು ಉತ್ಸಾಹ ತೋರಿದ ಲಕ್ಷ್ಮಣ ನಿಗಿಂತಲೂ ಮಿಗಿಲಾಗಿ ಬೇಗ ನಡೆ ಎಂದು ಕಳುಹಿಸಿಕೊಡುತ್ತಾಳೆ. ಈ ಉತ್ಸಾಹಕ್ಕೆ ಮಕ್ಕಳ ಅಪರಾಧವು ಮೂಲವಲ್ಲ. ನಿರಪರಾಧಿಯಾದ ಮಗ ಧರ್ಮಮಾರ್ಗದಲ್ಲಿ ನಡೆಯಲೆಂಬ ಸಚ್ಚಿಂತನೆ ಅಡಗಿದೆ. ಹೀಗೆ ಚಿಕ್ಕ ಪ್ರಾಯದ ತನುಸಂಜಾತ ಕುವರನನ್ನು ಕಾಡಿಗೆ ಕಳುಹಿಸುವ ಸುಮಿತ್ರಾ, ಸುನೀತಿ ಮುಂತಾದ ನಮ್ಮ ತಾಯಂದಿರು ಸಕಲ ಸ್ತ್ರೀಸಂಕುಲಕ್ಕೇ ಆದರ್ಶ ಮಾತೆಯರಾಗಿ ನಿಲ್ಲುತ್ತಾರೆ

ನಮ್ಮಲ್ಲಿ, ನಮ್ಮ ಮಕ್ಕಳೇನಾದರು "ಅಮ್ಮಾ! ನಾನು ಏಕಾದಶೀ ಉಪವಾಸ ಮಾಡುತ್ತೇನೆ; ಸಂಧ್ಯಾವಂದನೆಯನ್ನು ಮಾಡುತ್ತೇನೆ" ಎಂದಾಗ "ನೀನು ಇನ್ನೂ ಸಣ್ಣವ; ಈಗ ಮಾಡುವುದು ಬೇಡ. ದೊಡ್ಡವನಾದ ಬಳಿಕ ಮಾಡಿದರೆ ಸಾಕು" ಎಂದು ಮಕ್ಕಳ ಧಾರ್ಮಿಕ ಉತ್ಸಾಹವನ್ನು ಚಿವುಟಿಹಾಕುವ ತಾಯಂದಿರೇ ಹೆಚ್ಚಾಗಿ ಇದ್ದಾರೆ. ಆದರೆ ಸುನೀತಿ ಸುಮಿತ್ರೆಯರಂತಹ ತಾಯಂದಿರು ತಮ್ಮ ಮಕ್ಕಳ ಹಿತಚಿಂತನೆಯಿಂದ ಧರ್ಮವನ್ನು ಬೋಧಿಸಿ, ಮಕ್ಕಳ ಸರ್ವತೋಮುಖ ಅಭಿವೃದ್ಧಿಗೆ ಕಾರಣರಾಗಿದ್ದಾರೆ.

## ಧ್ರುವ–ನಾರದರ ಸಂವಾದ

ಧ್ರುವಕುಮಾರನು ಭಗವಂತನ ಧ್ಯಾನ ಸಾಕ್ಷಾತ್ಕಾರಗಳನ್ನು ಪಡೆದುಕೊಳ್ಳುವ ಉದ್ದೇಶದಿಂದ ಅರಣ್ಯದ ಪರಿಸರಕ್ಕೆ ಹೊರಟಿದ್ದಾನೆ. ದಾರಿಯಲ್ಲಿ ನಾರದರು ಅಡ್ಡಗಟ್ಟಿದರು.

ನಾರದರು: "ಮಗು ಧ್ರುವ! ಎಲ್ಲಿಗೆ ಹೊರಟಿರುವೆ ಸಂಪದ್ಭರಿತವಾದ ರಾಜಧಾನಿಯನ್ನು ಬಿಟ್ಟು ಕಾಡಿನೆಡೆ ನಡೆಯುತ್ತಿರುವಿ ಏಕೆ?"

ಧ್ರುವಕುಮಾರ: "ನಾರದರೇ! ಸುರುಚಿಯ ಅರುಚಿಯಾದ ಮಾತಿನಿಂದ ಮನಸ್ಸಿಗೆ ಘಾಸಿಯಾಗಿದೆ. ಅದಕ್ಕಾಗಿ ತಪಸ್ಸಿನಿಂದ ಹರಿಯನ್ನು ಒಲಿಸಿಕೊಳ್ಳಲು ಹೊರಟಿರುವೆ."

ಧ್ರುವಕುಮಾರನ ಮಾತಿಗೆ ನಾರದರು ಮನೋದಾರ್ಢ್ಯಕ್ಕೆ ಹೇತುವಾಗುವಂತೆ ಉತ್ತರಿಸುತ್ತಾರೆ–

ನಾರದರು: "ಧ್ರುವಕುಮಾರ! ಈ ನಿನ್ನ ವರ್ತನೆ ಎರಡು ದೃಷ್ಟಿಯಿಂದ ಸೂಕ್ತವಾಗಿ ಕಾಣುತ್ತಿಲ್ಲ."

೧) ಲೋಕದಲ್ಲಿ ಹಲವು ಬಗೆಯ ಜನರಿದ್ದಾರೆ. ಕೆಲವರು ಒಳ್ಳೆಯವರು. ಕೆಲವರು ಕೆಟ್ಟವರು. ಇವರಿಂದ ಮನಸ್ಸು ಮುದುಡಿಹೋಗುವ ಪ್ರಸಂಗಗಳೂ ಒದಗಿಬರುತ್ತವೆ. ಉತ್ಸಾಹದಿಂದ ಮನವರಳುವ ಪ್ರಸಂಗವೂ ಒದಗಿಬರುತ್ತದೆ. ಸಂತೋಷಾಸಂತೋಷಗಳಿಗೆ ಅವರು ಕಾರಣರಲ್ಲ. ನಮ್ಮಲ್ಲಿಯೇ ಮನೆಮಾಡಿ ಕೊಂಡಿರುವ ಮೋಹ, ಮಮತೆ, ಅಭಿಮಾನಗಳೇ ದುಃಖಕ್ಕೆ ಮೂಲಕಾರಣವಾಗಿವೆ. ಅಭಿಮಾನ ಕಳೆದುಕೊಂಡರೆ ಅವಮಾನದ ಪ್ರಸಂಗವೇ ಬರುವುದಿಲ್ಲ. ಯಾರನ್ನೂ ಹೆಚ್ಚು ಹಚ್ಚಿಕೊಳ್ಳದೆ ಭಗವಂತನು ನಮ್ಮ ಪಾಲಿಗೆ ಎಷ್ಟು ದೊರಕಿಸಿಕೊಟ್ಟಿದ್ದಾನೆಯೋ ಅಷ್ಟರಿಂದಲೇ ಸಂತೃಪ್ತಿ ಜೀವನವನ್ನು ಸಾಗಿಸಬೇಕು. ಅದಕ್ಕೆ ತಕ್ಕಂತೆ ಮನೋಬಲವನ್ನು ಬೆಳೆಸಿಕೊಳ್ಳಬೇಕು. ಜನರ ನಾನಾ ವಿಧ ಪ್ರವೃತ್ತಿಗಳನ್ನು ಕಂಡರೂ ಅದರಿಂದ ಯಾವುದೇ ರೀತಿಯ ವಿಕಾರಕ್ಕೆ ತುತ್ತಾಗಬಾರದು. ನಿರ್ವಿಕಾರ ಮನೋವೃತ್ತಿಯಿಂದ ಭಗವಂತನು ಕೊಟ್ಟದ್ದರಿಂದ ಸಮಾಧಾನ ಮಾಡಿಕೊಳ್ಳಬೇಕು. ಇಂತಹ ಮನೋಭಾವವನ್ನು ಬೆಳೆಸಿಕೋ. ಸುರುಚಿಯ ಮಾತಿನಿಂದ ದುಃಖ ಉದ್ವೇಗಗಳಿಗೆ ಬಲಿಯಾಗಿ ಹೊರಡಬೇಡ. ಇದು ಸರಿಯಲ್ಲ.

೨) ಮತ್ತೊಂದು ಕಾರಣದಿಂದಲೂ ನಿನ್ನ ಪ್ರವೃತ್ತಿ ಉಚಿತವೆನಿಸುವುದಿಲ್ಲ. ನೀನು ಹೊರಟದ್ದು ಹರಿಯ ಸಾಕ್ಷಾತ್ಕಾರಕ್ಕಾಗಿ. ಕಠಿನ ವ್ರತಾನುಷ್ಠಾನನಿರತರಾದ ಋಷಿಮುನಿಗಳಿಗೂ ಯಾವ ಶ್ರೀಹರಿಯನ್ನು ಒಲಿಸಿಕೊಳ್ಳಲು ಸಾಧ್ಯವಿಲ್ಲವೋ ಅಂತಹ ಪರದೈವವನ್ನು ಪುಟ್ಟ ಬಾಲಕನಾದ ನೀನು ಒಲಿಸಿ

ಕೊಳ್ಳಹೊರಟಿರುವಿಯಲ್ಲ! ನೀನು ತಿಳಿದಷ್ಟು ಸುಲಭನಲ್ಲ. ಭಗವಂತನು ಮಾರುಕಟ್ಟೆಯಲ್ಲಿ ವಿಕ್ರಯಕ್ಕೆ ದೊರೆಯುವ ವಸ್ತುವಲ್ಲ. ನಿನ್ನದು ನಿಷ್ಫಲ ಸಾಹಸ. ಮನಸ್ಸಿನ ಮೋಹವನ್ನು ಅಳಿಸಿ ಆತ್ಮಬಲವನ್ನು ಬೆಳೆಸಿಕೊಂಡಲ್ಲಿ ಜಗತ್ತಿನ ಯಾವ ಪರಿಣಾಮಕ್ಕೂ ತುತ್ತಾಗುವುದಿಲ್ಲ. ಆದ್ದರಿಂದ ಅರಮನೆಗೆ ನಡೆ!'' ಎಂದು ಧ್ರುವನ ಉತ್ಸಾಹವನ್ನೇ ಭಗ್ನಗೊಳಿಸಲು ಯತ್ನಿಸಿದಾಗ ಧ್ರುವ ಉತ್ತರಿಸುತ್ತಾನೆ.

**ಧ್ರುವಕುಮಾರ:** ''ನಾರದರೇ! ನಮ್ಮ ಮೇಲಿನ ಕರುಣೆಯಿಂದ ಹಿರಿದಾದ ತತ್ವವನ್ನು ಉಪದೇಶಿಸಿದ್ದೀರಿ. ಆದರೆ ಸದ್ಯದ ಸ್ಥಿತಿಯಲ್ಲಿ ನನಗದನ್ನು ಜೀರ್ಣಿಸಿಕೊಳ್ಳಲಾಗದು. ನನ್ನ ಮನಸ್ಸು ಮಲತಾಯಿಯ ಮಾರಕವಾದ ಮಾತಿನಿಂದ ಮುರಿದುಹೋಗಿದೆ. ವಿಪರೀತ ದುಃಖಕ್ಕೆ ತುತ್ತಾಗಿದ್ದೇನೆ. ನಾನು ನಡೆಯುತ್ತಿರುವ ದಾರಿ ಕೆಟ್ಟದಂತೂ ಅಲ್ಲ. ಅವಮಾನಿತನಾಗಿ ಅನ್ಯಕಾರ್ಯಗಳಿಗಿಳಿಯದೆ ಹರಿಚಿಂತನೆ ನಡೆಸಲು ನಡೆಯುತ್ತಿರುವೆ. ಈ ಕಾರ್ಯದಲ್ಲಿ ಒಂದುವೇಳೆ ವಿಫಲನಾದರೂ ಮಾಡಿದ ಕಾರ್ಯ ವ್ಯರ್ಥವಾಗದು. ನಿಮ್ಮಂತೆ ಭಗವದ್ದರ್ಶನಾಕಾಂಕ್ಷಿಯಾಗಿ ಹೊರಟಿರುವ ನನ್ನನ್ನು ಆಶೀರ್ವದಿಸಿರಿ! ಮಾರ್ಗದರ್ಶಕರಾಗಿರಿ! ಎಂಬ ಭಾವದಿಂದ ಬಿನ್ನೈಸಿಕೊಂಡ.

ಧ್ರುವನ ನಿಶ್ಚಿತವಾದ ಭಾವವನ್ನರಿತ ನಾರದರ ಹೃದಯ ಸಂತೋಷದಿಂದ ಅರಳಿತು. ನಾರದರು ತಾವು ನೀಡಿದ ಪರೀಕ್ಷೆಯಲ್ಲಿ ಉತ್ತೀರ್ಣನಾದ ಧ್ರುವನ ಮಾರ್ಗವು ಸರಿಯಾದುದೆಂದರು. ತಪಸ್ಸಿಗೆ ಬೇಕಾದ ಧ್ಯಾನದ ಪ್ರಕಾರಗಳನ್ನು ವಿವರಿಸಿ ವಾಸುದೇವಮಂತ್ರವನ್ನು ಉಪದೇಶಿಸಿದರು. ಮಧುವನದ ನದಿಯಾದ ಕಾಳಿಂದಿ ತಟದಲ್ಲಿ ಸ್ನಾತನಾಗಿ ಅಪ್ರಾಕೃತ ಸುಂದರ ವಿಗ್ರಹನಾದ ಹರಿಯನ್ನು ನಿರಂತರ ಸ್ಮರಿಸು! ವಿರಕ್ತನಾಗಿ ಭಕ್ತಿಯಿಂದ ಸ್ಮರಿಸಿ ಧ್ರುವವಾದ ವಿಮುಕ್ತಿಯನ್ನು ಪಡೆದುಕೋ ಎಂದು ಹರಸಿ ಕಳುಹಿಸಿದರು.

ನಾರದರಿಂದ ಉಪದೇಶವನ್ನು ಪಡೆದುಕೊಂಡ ಧ್ರುವಕುಮಾರ ನಾರದರಿಗೆ ನಮಿಸಿ ಮಧುವನಕ್ಕೆ ನಡೆದ. ಕಾಡಿನಲ್ಲಿ ಉಗ್ರ ತಪವ ಕೈಗೊಂಡ.

ಇತ್ತ ಉತ್ತಾನಪಾದನಿಗೆ ಧ್ರುವನು ಕಾಡಿಗೆ ಹೋದದ್ದು ನಾರದರ ಮೂಲಕ ಗೊತ್ತಾಯಿತು. ವಿಷಯ ತಿಳಿದ ರಾಜನು ಅತ್ಯಂತ ದುಃಖಿತನಾದ. 'ನನ್ನ ಕಂದನಿಗೆ ನನ್ನ ಕಣ್ಣೆದುರಿನಲ್ಲಿಯೇ ಸುರುಚಿಯು ಅವಮಾನ ಮಾಡಿದಾಗ ತಡೆಯುವ ತಾಕತ್ತು ಇಲ್ಲವಾಯಿತಲ್ಲ! ಪ್ರೀತಿಯಿಂದ ತೊಡೆಯನ್ನೇರಲು ಬಂದ ಹಸುಗೂಸಿನ ಮನಸ್ಸಿಗೆ ಚುಚ್ಚಿದೆನಲ್ಲ!' ಎಂದು ಪರಿತಪಿಸಿದ.

ದುಃಖದಿಂದ ಸಂತಪ್ತನಾದ ರಾಜನನ್ನು ನಾರದರು ಸಾಂತ್ವನಗೊಳಿಸಿದರು. ''ರಾಜಾ! ದುಃಖಿಸದಿರು. ನಿನ್ನ ಮಗನು ಜಗತ್ತೇ ಆಶ್ಚರ್ಯಪಡುವಂತಹ ಸಾಧನೆಯನ್ನು ಮಾಡಿ ನಿನಗೆ ಕೀರ್ತಿ ತರುತ್ತಾನೆ. ಮತ್ತೆ ಮರಳಿ ಬರುತ್ತಾನೆ'' ಎಂದು

ಸಮಾಧಾನಪಡಿಸಿದರು. ಅತ್ತ ಧ್ರುವಕುಮಾರನು ಹರಿಚಿಂತನೆಯಲ್ಲಿ ಮಗ್ನನಾಗಿದ್ದರೆ; ಇತ್ತ ಉತ್ತಾನಪಾದರಾಜನು ಧ್ರುವಚಿಂತೆಯಲ್ಲಿಯೇ ಮುಳುಗಿದ. ರಾಜ್ಯಲಕ್ಷ್ಮಿಯ ಯಾವ ವೈಭವಗಳನ್ನೂ ಬಯಸಲಿಲ್ಲ.

## ಧ್ರುವನ ಧ್ಯಾನಕ್ಕೆ ದಯೆದೋರಿ ಬಂದ ಶ್ರೀಹರಿ

ಧ್ರುವಕುಮಾರನು ನಾರದರ ಉಪದೇಶದಂತೆ ಧ್ಯಾನಕ್ಕೆ ಕುಳಿತ. ಉತ್ಕಟ ಪ್ರೇಮಾತಿಶಯದಿಂದ ಧ್ಯಾನಿಸತೊಡಗಿದ. ಅನ್ನ ಆಹಾರಗಳನ್ನೂ ತೊರೆದು ಊರ್ಧ್ವರೇತಸ್ಕನಾಗಿ ನಿಂತು ಧ್ಯಾನಿಸತೊಡಗಿದ. ಮನಸ್ಸಿನಲ್ಲಿ ಧ್ಯೇಯರೂಪದ ಹೊರತಾಗಿ ಮತ್ತೇನೂ ಕಾಣಲಿಲ್ಲ. ಧ್ರುವನ ಉಗ್ರವಾದ ತಪಸ್ಸು ವೃದ್ಧಿಯಾದಂತೆ ಹದಿನಾಲ್ಕು ಲೋಕಗಳೂ ನಡುಗಿದವು. ಎಲ್ಲರೂ ಉಸಿರುಗಟ್ಟಿದರು. ಲೋಕಪಾಲರಿಂದ ಸಹಿತರಾಗಿ ದೇವತೆಗಳು ಹರಿಯನ್ನು ಮೊರೆಹೊಕ್ಕರು. ಧ್ರುವನು ಉಸಿರುಕಟ್ಟಿ ತಪಸ್ಸನ್ನಾಚರಿಸಲು ಸಮಗ್ರ ಜಗತ್ತೂ ಶ್ವಾಸಕಟ್ಟುವಂತಾಯಿತು. ದೇವತೆಗಳಿಗೆ ರಕ್ಷಿಸುವೆನೆಂದು ಅಭಯದಾನ ಮಾಡಿದನು ಶ್ರೀಹರಿ.

ನಾವೂ ಧ್ಯಾನಕ್ಕೆ ಕುಳಿತುಕೊಳ್ಳುತ್ತೇವೆ. ನಮ್ಮ ಧ್ಯಾನದಲ್ಲಿ ದೇವರನ್ನು ಬಿಟ್ಟು ಮತ್ತೆಲ್ಲವೂ ಗೋಚರವಾಗುತ್ತದೆ. ನಮ್ಮ ಮನೆಯ ಸಮಗ್ರ ತಾಪತ್ರಯವನ್ನು ವಿಚಾರಮಾಡುವ ಸಮಯವೆಂದರೆ ಪೂಜೆ, ಸಂಧ್ಯಾವಂದನ ಮುಂತಾದ ಸಮಯವಾಗಿದೆ. ಪೂಜೆಮಾಡುವ ಸಂದರ್ಭದಲ್ಲಿ ಮಕ್ಕಳು ಮಡದಿ ಎಲ್ಲರೂ ಮಡಿಎಂದು ದೂರದಲ್ಲಿರುತ್ತಾರೆ. ಯಾರ ಉಪದ್ರವವೂ ಇಲ್ಲದಾಗ ಮನೆ, ಹಣ, ತಾಪತ್ರಯಗಳ ಬಗ್ಗೆ ಆಲೋಚಿಸುತ್ತೇವೆ. ಸಕ್ರಹಾರಿಯಾದ ಚಕ್ರಧರನ ಸ್ಮರಿಸದೆ ಚಕ್ರಬಡ್ಡಿಯ ಚಿಂತನೆಯಲ್ಲಿಯೇ ತೊಡಗುತ್ತೇವೆ. ಇದೇ ನಮ್ಮ ದೇವರ ಪೂಜೆ ಎಂದಾಗಿದೆ. ಈ ರೀತಿಯಾಗಲು ಕಾರಣವೇನು ಎಂದು ಉಪನಿಷತ್ತೇ ಸಾರಿ ಹೇಳಿದೆ.

**ಪರಾಂಚಿ ಖಾನಿ ವ್ಯತೃಣಾತ್ ಸ್ವಯಂಭೂಃ**
**ತಸ್ಮಾತ್ ಪರಾಕ್ ಪಶ್ಯತಿ ನಾಂತರಾತ್ಮನ್ ।**
**ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷ**
**ದಾವೃತ್ತಚಕ್ಷುರಮೃತತ್ವಮಿಚ್ಛನ್ ॥** — (ಕಾಠಕ ೨-೧-೧)

ಸ್ವತಂತ್ರನಾದ ಶ್ರೀಹರಿಯು ಮನುಷ್ಯರ ಇಂದ್ರಿಯಗಳನ್ನು ಬಹಿರ್ಮುಖಗೊಳಿಸಿದ. ಆದ್ದರಿಂದಲೇ ಅವು ದುರ್ಬಲಗಳಾದವು. ಆದ್ದರಿಂದಲೇ ವಿಷಯ ಪದಾರ್ಥಗಳನ್ನೇ ಕಾಣುವಂತಾದವು. ಯಾರೂ ಒಳಗೆ ನೋಡುವುದೇ ಇಲ್ಲ. ಹೊರಗೇ ನೋಡುತ್ತಾರೆ. ಆದರೂ ಅಪರೂಪಕ್ಕೊಬ್ಬ ಜ್ಞಾನಿ ವಿಷಯಪದಾರ್ಥಗಳಿಂದ ಇಂದ್ರಿಯಗಳನ್ನು ನಿಗ್ರಹಿಸಿಕೊಂಡು ಹೃದಯದಲ್ಲಿಯ ದೇವನನ್ನು ನೋಡುತ್ತಾನೆ. ಆದರೆ ಧ್ರುವನು ನಮಗೆ ಅಪವಾದವಾಗಿ, ಏಕಾಗ್ರಬುದ್ಧಿಯಿಂದ ನಿರಂತರ ಹರಿಚಿಂತನೆಯನ್ನು ನಡೆಸಿ ಹರಿಯ ಅನುಗ್ರಹಕ್ಕೆ ಪಾತ್ರನಾಗಿದ್ದಾನೆ. ಪುಟ್ಟ

ಬಾಲಕನಾದ ಧ್ರುವನ ಅಧ್ಯಾತ್ಮದ ಸ್ಫೂರ್ತಿ ನಮ್ಮ ಜೀವನದಲ್ಲಿಯೂ ಹಾಯ್ದು ಬರಬೇಕು.

ಧ್ರುವನಿಗಾಗಿ ದರ್ಶನಕೊಡಲೊಸುಗ ಶ್ರೀಹರಿಯು ಧಾವಿಸಿ ಬಂದ ಧ್ರುವನ ಎದುರಿನಲ್ಲಿ ನಿಂದ. ಆದರೆ ಉತ್ಕಟಯೋಗದಿಂದ ಹೃತ್ಪದ್ಮದಲ್ಲಿ ಹರಿಯನ್ನೇ ಚಿಂತಿಸುತ್ತಿರುವ ಧ್ರುವನಿಗೆ ಹರಿಯ ಆಗಮನದ ಬಾಹ್ಯ ಅರಿವೇ ಹಾರಿಹೋಗಿತ್ತು. ಧ್ರುವನು ತನ್ನ ಕಣ್ಗಳನ್ನು ತೆರೆಯಲೇ ಇಲ್ಲ. ಎಲ್ಲೆಡೆಯೂ ಭಗವಂತನಿಗಾಗಿ ಭಕ್ತರು ಕಾಯುತ್ತಾ ನಿಂತರೆ; ಭಕ್ತವತ್ಸಲನಾದ ಶ್ರೀಹರಿಯೇ ಭಕ್ತನಿಗಾಗಿ ಕಾಯುವಂತಾಯಿತು. ಎಲ್ಲರೂ ಹರಿಯ ದೃಷ್ಟಿಗಾಗಿ ಹಂಬಲಿಸಿದರೆ ದೇವದೇವನಾದ ಶ್ರೀಹರಿ ಧ್ರುವನ ವೀಕ್ಷಣದ ನಿರೀಕ್ಷೆಯಲ್ಲಿದ್ದಾನೆ. ಹರಿಯ ಎಣೆ ಇರದ ಕರುಣೆಯನ್ನು ದಾಸರಾಯರೂ ಬಣ್ಣಿಸುತ್ತಾರೆ–

ಮಲಗಿ ಪರಮಾದರದಿ ಪಾಡಲು
ಕುಳಿತು ಕೇಳುವ, ಕುಳಿತು ಪಾಡಲು
ನಿಲುವ ನಿಂತರೆ ನಲಿವ, ನಲಿದರೆ ಒಲಿವೆ ನಿಮಗೆಂಬ ।
ಸುಲಭನೋ ಹರಿ ತನ್ನವರನರೆ–
ಘಳಿಗೆ ಬಿಟ್ಟಗಲನು ರಮಾಧವ–
ನೊಲಿಸಲರಿಯದೆ ಪಾಮರರು ಬಳಲುವರು ಭವದೊಳಗೆ ॥ — (ಹ. ಸಾ. ೨–೫)

ಭೀಷ್ಮಾಚಾರ್ಯರು ಶರಶಯ್ಯೆಯಲ್ಲಿ ಮಲಗಿದಾಗ, ಅವರ ಬಳಿಯಲ್ಲಿ ಕುಳಿತು ಶಾಂತಿಪರ್ವವನ್ನು ಕೇಳಿದ. ಧ್ರುವಕುಮಾರ ಕುಳಿತು ಪಾಡಿದರೆ ನಿಂತು ಕೇಳಿದ ಪ್ರಹ್ಲಾದನು ನಿಂತು ನರಸಿಂಹನನ್ನು ಸ್ತುತಿಸಲು ಸಭಾಮಂಟಪದಲ್ಲಿಯೇ ಕುಣಿದಾಡಿ ಹಿರಣ್ಯಕಶಿಪುವನ್ನು ಸಂಹರಿಸಿದ.

ಇಂತಹ ದಯಾವಂತನಾದ ಶ್ರೀಹರಿ ಧ್ರುವನಿಗಾಗಿ ಕಾದುನಿಂತ. ಚಿತ್ತಭಿತ್ತಿಯಲ್ಲಿಯೇ ಸಹಸ್ರಾಕ್ಷನನ್ನು ಕಾಣುತ್ತಿರುವ ಧ್ರುವಕುಮಾರನನ್ನು ಧ್ಯಾನದಿಂದ ಎಚ್ಚರಿಸುವುದೇ ನಮ್ಮ ಸ್ವಾಮಿಗೆ ಸಮಸ್ಯೆಯಾಯಿತು. ಕೊನೆಗೊಂದು ಉಪಾಯ ಮಾಡಿದ. ಧ್ರುವನು ಒಳಗೆ ಕಾಣುತ್ತಿರುವ ರೂಪವನ್ನೇ ತಿರೋಹಿತಗೊಳಿಸಿದ. ಇದೇನೆಂದು ಒಮ್ಮೆಲೆ ಕಣ್ತೆರೆದ. ಹೊರಗೆ ನಿಂತ ಹರಿಯನ್ನು ಕಂಡ ಧ್ರುವ ಅವಾಕ್ಕಾದ. ಹರಿಯ ಕಟಾಕ್ಷದಿಂದ ಹರಿವ ಕರುಣೆಯನ್ನು ತನ್ನ ಕಣ್ಗಳೆಂಬ ಚಷಕಗಳಿಂದ ಕುಡಿದ. ಭಕ್ತಿಯಿಂದ ಉನ್ಮತ್ತನಾಗಿ ಶಿರ ಬಾಗಿ ನಮಿಸಿದ. ಸಾಕ್ಷಾತ್ ಚಿನ್ಮಯಮೂರ್ತಿಯೇ ತನ್ನ ಕಣ್ಣೆದುರಿಗೆ ನಿಂತದ್ದನ್ನು ಕಂಡ ಧ್ರುವಕುಮಾರನಿಗೆ ಮಾತೇ ಹೊರಡಲಿಲ್ಲ.

ಧ್ರುವಕುಮಾರನಿಗೆ ಎರಡು ಬಾರಿ ಮಾತು ನಿಂತಿತು. ಒಂದೆ ಮಲತಾಯಿಯ ತಿರಸ್ಕಾರದಿಂದ ಕಂಠ ಕಟ್ಟಿತ್ತು. ಈಗ ಹಿಂದಿನ ದುಃಖವನ್ನು ಮರೆಸುವ ವಿಲಕ್ಷಣವಾದ ಆನಂದ ಸಡಗರದ ಊರ್ಮಿಗಳು ಹೃದಯಸಾಗರದಲ್ಲಿ ದುಮ್ಮಿಕ್ಕಿಬರಲು ಮಾತೇ ಹೊರಡಲಿಲ್ಲ.

## ಸರ್ವಪ್ರೇರಕ ಶ್ರೀವಿಷ್ಣು

ದೇವದೇವೋತ್ತಮನಾದ ಭಗವಂತನ ಅಪಾರ ಕರುಣೆಯನ್ನು ಕಂಡು ಆನಂದ ಬಾಷ್ಪ ಧುಮುಕುತ್ತಿದೆ. ಕಂಠ ಕಟ್ಟಿದೆ. ಮಾತನಾಡಬಯಸಿದರೂ ಆಗುತ್ತಿಲ್ಲ. ಅಲ್ಲಿಯೂ ಹರಿಕರುಣೆ ಹರಿಯಿತು. ತನ್ನ ದಿವ್ಯಶಂಖವನ್ನು ಧ್ರುವನ ಕಪೋಲಕ್ಕೆ ಸ್ಪರ್ಶಿಸಿದ. ಕೂಡಲೇ ಭಕ್ತಿಗಂಗೆಯ ಮಂಗಳನಿನಾದ ಹೃದಯದಿಂದ ಉಕ್ಕಿ ಹರಿಯಿತು–

ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ
ಸಂಜೀವಯತ್ಯಖಿಲ ಶಕ್ತಿಧರಃ ಸ್ವಧಾಮ್ನಾ ।
ಅನ್ಯಾಂಶ್ಚ ಹಸ್ತಚರಣಶ್ರವಣತ್ವಗಾದೀನ್
ಪ್ರಾಣಾನ್ನಮೋ ಭಗವತೇ ಪುರುಷಾಯ ತುಭ್ಯಮ್ ॥ — (೪–೯–೬)

ಸರ್ವಸಮರ್ಥನಾದ ಭಗವಂತನೇ! ನೀನೇ ಎನ್ನೊಳು ನಿಂತು ಮಾತನಾಡುತ್ತೀ. ಸರ್ವಶಕ್ತಿಪ್ರದನಾಗಿದ್ದೀ. ನಿನ್ನ ಶಕ್ತಿಯಿಂದಲೇ ನೋಡಬಲ್ಲೆವು. ಮಾತನಾಡಬಲ್ಲೆವು. ದಶೇಂದ್ರಿಯಗಳ ಸಕಲ ಚೇಷ್ಟೆಯೂ ನಿನ್ನಿಂದಲೇ ಅಂತಹ ನಿನಗೆ ನಮೋ ನಮಃ ಎನ್ನುತ್ತಾನೆ.

ಮಹರುದ್ರದೇವರು 'ಬ್ರಹ್ಮದೇವರಲ್ಲಿ ಪ್ರಶ್ನಿಸುತ್ತಾರೆ–

**ಕೇನೇಷಿತಂ ಪತತಿ ಪ್ರೇಷಿತಂ ಮನಃ**
**ಕೇನ ಪ್ರಾಣಃ ಪ್ರಥಮಃ ಪ್ರೈತಿ ಯುಕ್ತಃ ।**
**ಕೇನೇಷಿತಾಂ ವಾಚಮಿಮಾಂ ವದಂತಿ**
**ಚಕ್ಷುಃ ಶ್ರೋತ್ರಂ ಕ ಉ ದೇವೋ ಯುನಕ್ತಿ ॥** — (ತಲವಕಾರ –೧)

ಯಾರ ಪ್ರೇರಣೆಯಿಂದ ಮನಸ್ಸು ಇಷ್ಟಾನಿಷ್ಟಗಳ ಕಡೆ ಚಲಿಸುತ್ತದೆ.

ಯಾರ ಪ್ರೇರಣೆಯಿಂದ ಜೀವೋತ್ತಮರಾದ ವಾಯುದೇವರು ತಮ್ಮ ವ್ಯಾಪಾರ ವನ್ನು ಮಾಡುತ್ತಾರೆ.

ಮಾತು, ಕಣ್ಣು, ಕಿವಿ ಇವುಗಳ ವ್ಯಾಪಾರಗಳಿಗೆಲ್ಲ ಕಾರಣನಾದವ ಯಾರು?

ಯಾವ ಇಂದ್ರಿಯಗಳು ನಮ್ಮ ನಿಯಂತ್ರಣದಲ್ಲಿಲ್ಲ. ಆದ್ದರಿಂದ ಯಾರು ಎಂಬ ಕುತೂಹಲ.

ಬ್ರಹ್ಮದೇವ ನುಡಿದ.

ಕಿವಿಗೆ ಕಿವಿಯಾಗಿ, ಮನಕೆ ಮನವಾಗಿ, ಮಾತಿಗೆ ಮಾತಾಗಿ, ಪ್ರಾಣನಿಗೆ ಪ್ರಾಣನಾಗಿ, ಕಣ್ಣಿಗೆ ಕಣ್ಣಾಗಿ, ಎಲ್ಲೆಡೆಯೂ ಶಕ್ತಿಪ್ರದನಾದವ ಸ್ವತಂತ್ರನಾದ ಭಗವಂತ. ಭಗವಂತನಿಲ್ಲದೆಡೆ ಕಣ್ಣು ಕಾಣದು. ಕಿವಿ ಕೇಳದು. ಮನ ಬಾರದು. ಮಾತು ಹೊರಡದು. ಅವನೇ ಎಲ್ಲರನ್ನೂ ನಿಯಮಿಸುವ ನಿಯಂತ್ರಕಶಕ್ತಿ ಎಂದು ಉತ್ತರಿಸುತ್ತಾನೆ.

ಈ ಬ್ರಹ್ಮದೇವರ ಮಾತು; ಧ್ರುವನ ಹೃದಯ ಮುಟ್ಟಿದೆ. ಭಗವಂತ ತನ್ನ ಒಳಶಕ್ತಿಯನ್ನು ತೆಗೆದಾಗ ಮಾತೇ ಹೊರಡಲಿಲ್ಲ. ಶಂಖದಿಂದ ಸ್ಪರ್ಶಿಸಿದ. ಜಹ್ನುಕನ್ಯೆಯ ರಭಸದಂತೆ ಸರಸರನೆ ಉಸುರಿದ. ಮಾತೆಂಬ ಮಲ್ಲಿಗೆಯಿಂದ ಭಕ್ತಿ ಎಂಬ ಹಾರವನ್ನು ರಚಿಸಿದ.

ಎಲ್ಲಾ ಯಂತ್ರಗಳು ವಿದ್ಯುತ್ತಿನ ಶಕ್ತಿಯಿಂದಲೇ ಕ್ರಿಯಾಶೀಲವಾಗಿವೆ. ಅದರಂತೆ ಜಗತ್ತಿನ ಮಾನವಯಂತ್ರಗಳೆಲ್ಲ ಭಗವಂತನೆಂಬ ವಿದ್ಯುತ್ತಿನಿಂದ ನಿಯಂತ್ರಿಸಲ್ಪಟ್ಟಿದೆ.

ಇದನ್ನೇ ಶ್ರೀಮದಾಚಾರ್ಯರು

**ತತ್ರ ತತ್ರ ಸ್ಥಿತೋ ವಿಷ್ಣುಃ ತತ್ತಚ್ಛಕ್ತೀಃ ಪ್ರಬೋಧಯನ್ ।**
**ಏಕ ಏವ ಮಹಾಶಕ್ತಿಃ ಕುರುತೇ ಸರ್ವಮಂಜಸಾ ॥**

ಎಂದಿದ್ದಾರೆ. ಧ್ರುವನು, ಸರ್ವಾಂತರ್ಯಾಮಿತ್ವ, ಸರ್ವಶಕ್ತಿಪ್ರದತ್ವ ಮುಂತಾದ ಗುಣಚಿಂತನೆಯಿಂದ ಮುಕ್ತಿಭಾಜನನಾದ. ಮೋಕ್ಷಕಾಮುಕರಿಗೆಲ್ಲ ಇದೇ ಮಾರ್ಗ.

ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಂಡ ಧ್ರುವಕುಮಾರನು ಪುನಃ ತನ್ನ ತಂದೆಯ ಬಳಿಗೆ ಬಂದನು. ಧ್ರುವಕುಮಾರನ ಆಗಮನವನ್ನೇ ನಿರೀಕ್ಷಿಸುತ್ತಿದ್ದ ಉತ್ತಾನಪಾದನಿಗೆ ಬಹಳ ಸಂತೋಷವಾಯಿತು. ಸಣ್ಣ ವಯಸ್ಸಿನಲ್ಲಿಯೇ ಉತ್ತಮ ಸಾಧನೆಮಾಡಿದ ಧ್ರುವಕುಮಾರನನ್ನು ರಾಜನು ವೈಭವದಿಂದ ಸ್ವಾಗತಿಸಿ ಅಭಿನಂದಿಸಿದ. ಸುರುಚಿಯೂ ಪಶ್ಚಾತ್ತಾಪದಗ್ಧಳಾಗಿ ಸ್ವಾಗತಿಸಲು ಓಡೋಡಿ ಬಂದಿದ್ದಳು. ಎಲ್ಲರಲ್ಲಿಯೂ ಸಮತ್ವವನ್ನು ಕಾಣುವ ಧ್ರುವಕುಮಾರನು ಗೌರವಭಾವದಿಂದಲೇ ಸುರುಚಿಗೆ ವಂದಿಸಿದ. ಸುನೀತಿಗೆ ತನ್ನ ಮಗನ ಆಗಮನದಿಂದ ಆದ ಸಂತಸದಿಂದ ಕಂಠ ಕಟ್ಟಿದೆ. ಕಣ್ಣಾಲಿಗಳು ತುಂಬಿ ಬಂದಿವೆ. ಧ್ರುವನನ್ನು ಆಲಿಂಗಿಸಿದ್ದಾಳೆ. ಉತ್ತಾನಪಾದನೂ ಸುಪುತ್ರನ ಆಗಮನದಿಂದ ಆನಂದದ ತೀರ ಮುಟ್ಟಿದ್ದಾನೆ. ನಾಗರಿಕರೆಲ್ಲರೂ ಭಾರೀ ಸ್ವಾಗತವನ್ನೇ ನೀಡಿದ್ದಾರೆ. ಇಂದಿನವರು ವಿದೇಶಕ್ಕೆ ಹೋಗಿ ಬಂದವರನ್ನು ಸ್ವಾಗತಿಸುವಂತೆ ಸಂಭ್ರಮದಿಂದ ಸ್ವಾಗತಿಸಿದ್ದಾರೆ. ಹೀಗೆಯೇ ಕಾಲಕ್ರಮದಲ್ಲಿ ಉತ್ತಾನಪಾದರಾಜನು ರಾಜ್ಯವನ್ನೆಲ್ಲ ಧ್ರುವನಿಗೆ ಒಪ್ಪಿಸಿ ತಪಸ್ಸನ್ನು ಮಾಡಲಿಕ್ಕಾಗಿ ಸುನೀತಿಯಿಂದೊಡಗೂಡಿ ಅರಣ್ಯಕ್ಕೆ ತೆರಳಿದನು.

ಧ್ರುವಮಹಾರಾಜನು ರಾಜ್ಯಪರಿಪಾಲಿಸಿದ ಸಂದರ್ಭದಲ್ಲಿ ಒಂದು ದುರಂತ ನಡೆಯಿತು.

ಧ್ರುವನ ತಮ್ಮನಾದ ಉತ್ತಮ ಒಮ್ಮೆ ಹಿಮಾಲಯದೆಡೆ ಬೇಟೆಗಾಗಿ ನಡೆದ. ಬೇಟೆಗೆ ಹೋದವ ಯಕ್ಷರೊಂದಿಗೆ ಕಾದಾಡಿ ಮೃತನಾದ. ಉತ್ತಮನ ಮೃತ್ಯುವಿನಿಂದ ಧ್ರುವ ಸಿಟ್ಟಾದ. ಯಕ್ಷರ ಕುಲವನ್ನೇ ಯಮಸದನಕ್ಕಟ್ಟುವೆನೆಂದು ಹೊರಟ. ನಕ್ಷತ್ರಮಾಲೆಯ ನಡುವೆ ಚಂದಿರನಂತೆ, ಕರಾಳ ಮೋಡಗಳನ್ನೊಡೆದು ಬಂದು ಬೆಳಗುವ ಕೆಂಗದಿರನಂತೆ ಯಕ್ಷರ ಮಧ್ಯೆ ರಾರಾಜಿಸಿದ. ರಣಭೀಮನಾದ ಧ್ರುವನ ಕಾದಾಟವನ್ನು ಕಂಡ ಕುಬೇರನ ಭೃತ್ಯರೆಲ್ಲರೂ ಮೃತ್ಯುವೇ ಬಂದನೆಂದು ಅಂಜಿದರು.

ಉತ್ತಾನಪಾದರಾಜನ ಕಥೆ ನಮ್ಮ ನಿಮ್ಮೆಲ್ಲರ ಕಥೆ.

ನಾವೆಲ್ಲರೂ ಉತ್ತಾನಪಾದರೆ. ನಮಗೂ ಸಹ ಸುರುಚಿ ಸುನೀತಿಯರೆಂಬ ಈರ್ವರು ಮಡದಿಯರಿದ್ದಾರೆ. ಉತ್ತಾನಪಾದ ಸುನೀತಿಗಿಂತ ಸುರುಚಿಗೆ ಹೆಚ್ಚು ಮಹತ್ವಕೊಟ್ಟಂತೆ, ನಾವೂ ನೀತಿಗಿಂತ ರುಚಿಗೆ (ವಿಷಯಪದಾರ್ಥಗಳಿಗೆ) ಹೆಚ್ಚು ಮಹತ್ವ ಕೊಡುತ್ತೇವೆ. ಸುರುಚಿಯ ಮಗನಾದ ಉತ್ತಮ ತಾತ್ಕಾಲಿಕವಾಗಿ ರಾಜ್ಯಭಾರ ನಡೆಸಿ ಬೇಟೆಗೆ ಹೋಗಿ ಯಕ್ಷರಿಂದ ಮೃತನಾದ. ಅದರಂತೆ ನಮ್ಮ ರುಚಿಯ ಮಕ್ಕಳಾದ ವಿಷಯಜನ್ಯ ಸುಖಗಳೂ ತಾತ್ಕಾಲಿಕ. ತಾತ್ಕಾಲಿಕ ಮಗನಿಗೆ ಮಹತ್ವವಿಲ್ಲ. ಆದ್ದರಿಂದ ಸುನೀತಿಗೆ ಬೆಲೆ ಕೊಡಬೇಕು. ಇವಳ ಮಗ ಧ್ರುವ. ಇವಳ ಮಗ ಶಾಶ್ವತ ಪದವಿಯನ್ನು ಪಡೆದಂತೆ ಸುನೀತಿಯಿಂದ ಬರುವ ಸುಪುತ್ರರೆಲ್ಲರೂ ಶಾಶ್ವತ. ನೀತಿಯ ಕೈಹಿಡಿದಾಗ ಶಾಶ್ವತ ಪದವಿಯನ್ನು ಹೊಂದುತ್ತೇವೆ.

ಇಂದು ನಾವು ಸುನೀತಿಯನ್ನು ಮುಟ್ಟಿಯೇ ಇಲ್ಲ. ಹಿಡಿದ ಸುರುಚಿಯನ್ನು ಬಿಡುತ್ತಿದ್ದೇವೆ. ಕುರುಚಿಯ ಕೈಹಿಡಿಯುವ ಭರದಲ್ಲಿದ್ದೇವೆ. ದುಷ್ಟ ವಿಷಯಗಳ ಕಡೆಯೇ ನಮ್ಮ ಮನಸ್ಸನ್ನು ಹರಿಯಬಿಟ್ಟಿದ್ದೇವೆ. ಇದು ಶೋಚನೀಯ. ನಾವೆಲ್ಲರೂ ಸುನೀತಿಗೆ ಮಹತ್ವಕೊಟ್ಟು ಧ್ರುವನಂತೆ ಧ್ರುವ(=ನಿಶ್ಚಲ)ವಾದ ಸ್ಥಾನವನ್ನು ಹೊಂದೋಣ!!

## ಮಕ್ಕಳಿಲ್ಲದೆಯೂ ಮುಕ್ತಿ ಪಡೆಯಬಹುದು

ಧ್ರುವನ ಪರಂಪರೆಯಲ್ಲಿ ಅಂಗನೆಂಬ ರಾಜ ಹುಟ್ಟಿಬಂದನು. ಭಗವದ್ಭಕ್ತನಾದ ಅಂಗನು ಪರಮಧಾರ್ಮಿಕನಾಗಿದ್ದನು. ಇವನು ಒಮ್ಮೆ ಒಂದು ಅಶ್ವಮೇಧಯಾಗ ವನ್ನು ಕೈಗೊಂಡನು. ಹಿಂದೆಲ್ಲ ಯಜ್ಞಗಳನ್ನು ನಡೆಸಿದಾಗ ದೇವತೆಗಳೆಲ್ಲರೂ ಪ್ರತ್ಯಕ್ಷವಾಗಿ ಬಂದು ಹವಿರ್ಭಾಗವನ್ನು ಸ್ವೀಕರಿಸುತ್ತಿದ್ದರು. ಆದರೆ ಅಂಗರಾಜನು ನಡೆಸಿದ ಈ ಅಶ್ವಮೇಧಯಾಗದಲ್ಲಿ ದೇವತೆಗಳೇ ಬರಲಿಲ್ಲ. ಋತ್ವಿಜರು, ಮಂತ್ರ ಗಳು, ದ್ರವ್ಯಗಳೆಲ್ಲವೂ ಪರಿಶುದ್ಧವಾಗಿಯೇ ಇದ್ದರೂ ದೇವತೆಗಳು ಬಾರದಿರಲು ಅಂಗರಾಜನು ಪ್ರಶ್ನೆಗೆ ಮುಂದಾದನು. ತಪೋನಿರತರಾದ ಜ್ಞಾನಿಗಳೇ! "ನಾನು ಮಾಡಿದ ಯಾಗಕ್ಕೆ ದೇವತೆಗಳೆ ಕೆ ಬರಲಿಲ್ಲ? ನನ್ನಿಂದೇನು ಅಪರಾಧವಾಗಿದೆ?" ಎಂದು ಕೇಳಲು ಅವರು ಉತ್ತರಿಸುತ್ತಾರೆ. "ರಾಜಾ! ನೀನು ಮಾಡಿದ ಯಜ್ಞ ದಲ್ಲಾಗಲೀ ನಿನ್ನಿಂದಾಗಲೀ ಏನೂ ಅಪರಾಧ ನಡೆದಿಲ್ಲ. ನಿನ್ನ ಹಿಂದಿನ ಅಪರಾಧದಿಂದ ಈ ಜನ್ಮದಲ್ಲಿ ನಿನಗೆ ಮಕ್ಕಳಾಗಿಲ್ಲ. ಮಕ್ಕಳಾಗದ ನಿನ್ನಿಂದ ಹವಿಸ್ಸನ್ನು ಸ್ವೀಕರಿಸಿದರೆ ಫಲವನ್ನೂ ಕೊಡಬೇಕಾಗುತ್ತದೆ ಎಂಬ ದೃಷ್ಟಿಯಿಂದ ದೇವತೆಗಳು ನಿನ್ನ ಯಾಗಕ್ಕೆ ಬಂದಿಲ್ಲ –ಎಂದು ಉತ್ತರಿಸಿದರು. ಆದ್ದರಿಂದ 'ನೀನು ಪುತ್ರಕಾಮೇಷ್ಟಿಯನ್ನು ಆಚರಿಸು' ಎಂದು ಸಲಹೆ ನೀಡಿದರು.

ಭಾಗವತದ ಈ ಸನ್ನಿವೇಶವನ್ನು ನೋಡಿದಾಗ 'ಮಕ್ಕಳಿಲ್ಲದವರಿಗೆ ಸದ್ಗತಿಯೇ ಇಲ್ಲ' ಎನ್ನಿಸುತ್ತದೆ. ಈ ಪ್ರಸಂಗದಲ್ಲಿ ಶ್ರೀಮದಾಚಾರ್ಯರು ವಾಮನ ಪುರಾಣದ ಮಾತಿನಿಂದ ನಮಗಿರುವ ತಪ್ಪು ತಿಳಿವಳಿಕೆಯನ್ನು ಹೀಗೆ ಪರಿಹರಿಸಿದ್ದಾರೆ–

ಅನಪತ್ಯೋಽಪಿ ಸದ್ಧರ್ಮಾ ಲೋಕಜಿನ್ನಾತ್ರಸಂಶಯಃ ।
ದೇವೈಸ್ತು ಪೃಥುಜನ್ಮಾರ್ಥೇ ಹವಿರಂಗಸ್ಯ ನೋ ಹೃತಮ್ ॥
ಅನಪತ್ಯತ್ವಕರ್ಮಾಽಸೌ ಬಾಲಹತ್ಯಾಕೃತೇಃ ಪುರಾ ।
ಅತೋ ದುಷ್ಟೋಽಭವತ್ಪುತ್ರ ಇಷ್ಟೋ ವಿಷ್ಣುಂ ತತಃ ಪೃಥುಃ ॥
— (ಭಾ. ತಾ. ೪-೧೩-೩೩)

ಮಕ್ಕಳಿಲ್ಲದವನು ವಿಹಿತ ಧರ್ಮವನ್ನನುಸರಿಸುತ್ತಿದ್ದಲ್ಲಿ ಉತ್ತಮ ಲೋಕವನ್ನು ಹೊಂದುತ್ತಾನೆ. ಪೃಥುರಾಜನು ಹುಟ್ಟಬೇಕೆಂಬ ಕಾರಣದಿಂದ ದೇವತೆಗಳು ಹವಿಸ್ಸನ್ನು ಸ್ವೀಕರಿಸಲಿಲ್ಲ. ಪೂರ್ವಜನ್ಮದಲ್ಲಿ ಅಂಗರಾಜನು ಬಾಲಹತ್ಯೆಯನ್ನು ಮಾಡಿದ ಕಾರಣ ಮಕ್ಕಳಿರಲಿಲ್ಲ. ಪುತ್ರಕಾಮೇಷ್ಟಿಯ ಬಳಿಕ ಮಗು ಹುಟ್ಟಿದ್ದರೂ ಅವನು ದುಷ್ಟನಾಗಿಯೇ ಇದ್ದ. ವಿಷ್ಣುವನ್ನು ಪೂಜಿಸಿದ್ದರಿಂದ ಪೃಥುರಾಜನು ಮೊಮ್ಮಗನಾಗಿ ಮುಂದೆ ಹುಟ್ಟಿದ.

ಯಜ್ಞವನ್ನಾಚರಿಸಿದ ಕೂಡಲೇ ದೇವತೆಗಳು ಬಂದು ಹವಿಸ್ಸು ಸ್ವೀಕರಿಸಿ ಫಲ ನೀಡಿದ್ದರೆ, ಪೃಥುವಿನಂತಹ ರಾಜನನ್ನು ಧರೆಯ ಜನರು ಕಾಣುವಂತಿರಲಿಲ್ಲ. ಅದಕ್ಕಾಗಿ ದೇವತೆಗಳು ಮೌನವಹಿಸಿದರು. 'ರಾಜನು ಕಾರಣ ತಿಳಿದು ಪುತ್ರ ಕಾಮೇಷ್ಟಿಯನ್ನಾಚರಿಸಿ ಪೃಥುವಿನಂತಹ ರಾಜನಿಗೆ ಕಾರಣನಾಗಲಿ!' ಎಂಬುದೇ ದೈವಸಂಕಲ್ಪವಾಗಿತ್ತು. ಕೇವಲ 'ಮಕ್ಕಳಿಲ್ಲದಿರುವಿಕೆಯೇ ದೇವತೆಗಳ ಮೌನಕ್ಕೆ ಕಾರಣ' ಎಂದರೆ; ಮಕ್ಕಳಿಲ್ಲದವರು ಏನೇ ಧಾರ್ಮಿಕ ಕೆಲಸ ಮಾಡಿದರೂ 'ಸದ್ಗತಿ ಇಲ್ಲ' ಎಂದು ನಿರಾಶೆಪಡುವ ಪ್ರಸಂಗವಿದೆ. ಸತ್ಕರ್ಮದಲ್ಲಿ ಪ್ರವೃತ್ತಿಯೇ ಉಂಟಾಗದಿರುವ ಪ್ರಸಂಗವಿದೆ. ಅದಕ್ಕಾಗಿ ಧೈರ್ಯ ತುಂಬುವ ಮಾತನ್ನು ಇಲ್ಲಿ ಶ್ರೀಮದಾಚಾರ್ಯರು ಉದಾಹರಿಸಿದರು.

ಮಕ್ಕಳಿಲ್ಲ ಎನ್ನುವುದು ಕಾರಣವಲ್ಲ ಎಂದಾದರೆ ಭಾಗವತವು ಸುಳ್ಳು ಹೇಳಿ ದಂತಾಗಲಿಲ್ಲವೇ? ಇಲ್ಲಿ ಮಕ್ಕಳಿಲ್ಲ ಎನ್ನುವುದು ನಿಜವಾದ ಕಾರಣವಲ್ಲ. ಮಹಾ ಚಕ್ರವರ್ತಿಯ ಆಗಮನವಾಗಬೇಕೆಂಬುದು ಭಗವತ್ಸಂಕಲ್ಪ. ಜಗತ್ತಿನ ಅಂಕುಡೊಂಕು ಗಳನ್ನೆಲ್ಲ ತಿದ್ದುವ ಪೃಥು ಎಂಬ ಪರಮಧಾರ್ಮಿಕ ರಾಜನು ಹುಟ್ಟಲು. ಇವನು ಮುಂದೆ ಕಾರಣನಾಗಲಿ ಎಂದು ದೇವತೆಗಳು ಹೂಡಿದ ನಾಟಕವಿದು. ಇದಕ್ಕೆ ಪ್ರಮಾಣವೇ ಆಧಾರವಾಗಿದೆ. ಒಂದು ವೇಳೆ 'ಮಕ್ಕಳಿಲ್ಲದ್ದರಿಂದ ಹವಿಸ್ಸನ್ನು ಸ್ವೀಕರಿಸ ಲಿಲ್ಲ' ಎನ್ನುವುದೇ ಮುಖ್ಯ ಕಾರಣವಾದರೆ, ಮುಂದೆ ಮಕ್ಕಳಿಲ್ಲದಿರುವಾಗಲೇ ಆಚರಿಸಿದ ಪುತ್ರಕಾಮೇಷ್ಟಿಯಲ್ಲಿಯಾದರೂ ಹೇಗೆ ಹವಿಸ್ಸನ್ನು ದೇವತೆಗಳು ಸ್ವೀಕರಿಸಿದರು? ಎಂಬ ಪ್ರಶ್ನೆ ಬರುವುದಿಲ್ಲವೇ? ಆದ್ದರಿಂದ ಮಕ್ಕಳಿಲ್ಲದವರ ಸತ್ಕರ್ಮಗಳಿಗೂ ಬೆಲೆ ಇದ್ದೇ ಇದೆ ಎಂಬುದು ಶಾಸ್ತ್ರದ ದೃಷ್ಟಿಯಾಗಿದೆ. ಇದನ್ನರಿತು ಪ್ರತಿಯೊಬ್ಬರು ಸ್ವವಿಹಿತ ಕರ್ತವ್ಯಗಳನ್ನಾಚರಿಸಲೇಬೇಕು.

ಋತ್ವಿಜರ ಮಾತಿನಂತೆ ಅಂಗರಾಜನು ಪುತ್ರಕಾಮೇಷ್ಟಿಯನ್ನು ಆಚರಿಸಿದನು. ಅಲ್ಲಿ ಭೂತವೊಂದು ಆಗಮಿಸಿ ಅಂಗನ ಮಡದಿಯಾದ ಸುನೀಥೆಗೆ ಪಾಯಸವನ್ನು ಕೊಟ್ಟು ನಡೆಯಿತು. ಸುನೀಥೆಯು ಪಾಯಸ ಸ್ವೀಕರಿಸಿ ಗರ್ಭವತಿಯಾದಳು. ಸಕಾಲದಲ್ಲಿ

ಗಂಡುಮಗುವಿಗೆ ಜನ್ಮನೀಡಿದಳು. ಮೃತ್ಯುವಿಗೆ ಸಮಾನವಾಗಿತ್ತು ಅಂಗನ ಶಿಶು. ಶಿಶುವು ಬೆಳೆದಂತೆ ದೌಷ್ಟ್ಯವೂ ಬೆಳೆಯಿತು. ಎಲ್ಲರಿಗೂ ಕಂಟಕದಂತಾದ.

## ವೇನನ ನಾಸ್ತಿಕ್ಯನೀತಿ

ಅಂಗನ ಮಗನಾದ ವೇನನು ದುಷ್ಟಗುಣಗಳನ್ನೆಲ್ಲ ತುಂಬಿಕೊಂಡ ಪೆಟ್ಟಿಗೆಯಂತಿದ್ದ. ಆಡಲು ಹೋದಾಗ ಸಂಗಡಿಗರಾದ ಮಕ್ಕಳನ್ನು ನದಿಯಲ್ಲಿ ಎಸೆದು ಬರುತ್ತಿದ್ದ. ಅರಾಜಕತೆಯಿಂದಲೂ ವೇನನ ದೌಷ್ಟ್ಯದಿಂದಲೂ ನಾಗರಿಕರ ಬದುಕು ದುರ್ಭರವೆನಿಸಿತು. ವೇನನು ತನ್ನದೇ ಒಂದು ಗೂಂಡಾಜನರ ಪಡೆಯನ್ನು ನಿರ್ಮಿಸಿ ಮುಗ್ಧ ಜನರಿಗೆ ಹಿಂಸಿಸಲಾರಂಭಿಸಿದ. ಪ್ರಾಣಿಹತ್ಯೆ, ಮಾನವಹತ್ಯೆಗಳೇ ಇವನ ನಿತ್ಯಧರ್ಮ ಇವನ ದುರ್ವರ್ತನೆಯಿಂದ ಕಂಗೆಟ್ಟ ಮರ್ತ್ಯರು ಕರಾಳಮೃತ್ಯುವಿನ ತದ್ರೂಪವೆಂದೇ ಭಾವಿಸಿದರು. ಅಂಗನ ಸರ್ವಾಂಗಸುಂದರವಾದ ದೇಶದ ರೂಪವನ್ನೆಲ್ಲ ಭಂಗಗೊಳಿಸಿದ. ಅಂಗನು ಸರ್ವಪ್ರಕಾರದಿಂದಲೂ ಮಗನನ್ನು ನಿಯಂತ್ರಿಸಲು ಪ್ರಯತ್ನಿಸಿದ. ಸಾಧ್ಯವಾಗಲಿಲ್ಲ ಹಿಂದೆ 'ಮಗನನ್ನು ಪಡೆದಿಲ್ಲ' ಎಂಬ ಚಿಂತೆಗಿಂತಲೂ 'ಇಂತಹ ಮಗನನ್ನು ಪಡೆದೆನಲ್ಲ' ಎಂಬ ಚಿಂತೆಯೇ ಅಧಿಕವಾಯಿತು. ಮಗನನ್ನು ಸರಿಪಡಿಸಲಾಗದೆ ದೇಶವನ್ನು ರಕ್ಷಿಸಲಾಗದೆ ರಾತ್ರೋರಾತ್ರಿ ಕಾಡಿಗೆ ನಡೆದ.

ಬೆಳಗ್ಗೆಯ ಹೊತ್ತಿಗೆ ಅರಾಜಕತೆಯು ಪ್ರಜೆಗಳಲ್ಲಿ ತಲೆದೋರಿತ್ತು. ರಾಜನನ್ನು ಕಾಣದೆ ಚಿಂತಾಕ್ರಾಂತರಾದರು. ಭೃಗು ಮುಂತಾದ ಋಷಿಗಳ ಬಳಿ ಸಾಗಿ ಸಂಗತಿಗಳೆಲ್ಲ ವನ್ನೂ ತಿಳಿಸಿದರು. ರಾಜನಿಲ್ಲದಿದ್ದರೆ ಕಳ್ಳಕಾಕರಿಂದ ರಾಜ್ಯವು ನಾಶವಾಗುವುದೆಂದು ಜನರಿಗೆ ಮನಸ್ಸಿಲ್ಲದಿದ್ದರೂ ಅನಿವಾರ್ಯವಾಗಿ ವೇನನನ್ನೇ ಪಟ್ಟದಲ್ಲಿ ಕುಳ್ಳಿರಿಸಿ ದರು. ಅಧಿಕಾರವಿಲ್ಲದಾಗಲೇ ಅಧರ್ಮಸಂಸ್ಥಾಪಕನಾದ ವೇನನಿಗೆ ಸಿಂಹಾಸನದ ಪ್ರಾಪ್ತಿಯು ನಾಸ್ತಿಕ್ಯನೀತಿಗೆ ಅತ್ಯುನ್ನತ ಸ್ಥಾನ ಕಲ್ಪಿಸಲು ಅನುಕೂಲಕರವೇ ಆಯಿತು. ಜನರಿಗೆ ಬದುಕಲೇ ಸಾಧ್ಯವಾಗದಷ್ಟು ಕಷ್ಟವಾಯಿತು. ಮಾನವೀಯತೆ, ನೀತಿ, ಭಕ್ತಿಗಳಿಗೆ ಬೆಲೆಯೇ ಇಲ್ಲ. ರಾಜ್ಯಲಕ್ಷ್ಮಿಯ ಚುಕ್ಕಾಣಿಯನ್ನು ಹಿಡಿದ ಅಧರ್ಮರೂಪನಾದ ವೇನನ ಪ್ರಥಮ ಘೋಷಣೆಯೇ ಹೀಗಿತ್ತು:

ನ ಯಷ್ಟವ್ಯಂ ನ ದಾತವ್ಯಂ ನ ಹೋತವ್ಯಂ ದ್ವಿಜಾಃ ಕ್ವಚಿತ್ ।
ಇತಿ ನ್ಯವಾರಯದ್ಧರ್ಮಂ ಭೇರೀಘೋಷೇಣ ಸರ್ವತಃ ॥ — (೪-೧೪-೬)

'ಯಾಗ, ದಾನ, ಹವಿರ್ದಾನಗಳನ್ನು ಯಾರೂ ಮಾಡಕೂಡದು' ಎಂದು ಡಂಗುರಬಾರಿಸಿ ಧರ್ಮಾಚರಣೆಯನ್ನು ತಡೆದ. ಪೂಜೆ ಪ್ರಾರ್ಥನೆ ಸತ್ಕರ್ಮಗಳಿಗೆ ಅವಕಾಶವೇ ಇಲ್ಲ ಎಂದು ಘೋಷಿಸಿದ. ಸೆಕ್ಯುಲರಿಜಂ ರಾಷ್ಟ್ರ ವಾಗಬೇಕು. ಧರ್ಮಕ್ಕೆ ಸ್ಥಾನವೇ ಇರಬಾರದೆಂದು ಮೊದಲು ಘೋಷಿಸಿದವನು ದುರಾತ್ಮನಾದ ವೇನ. ಎಲ್ಲೆಡೆಯೂ ಅಧರ್ಮದ್ದೇ ಸಾಮ್ರಾಜ್ಯ.

ಸಮಾಜಘಾತುಕನಾದ ವೇನನ ವರ್ತನೆಯಿಂದ ಋಷಿಗಳೆಲ್ಲರೂ ಖಿನ್ನರಾದರು. ಅಧರ್ಮದ ವಿರುದ್ಧ ಹೋರಾಟಕ್ಕೆ ಸಿದ್ಧರಾದರು.

ಮೊದಲಿಗೆ ನಯವಾದ ಮಾತುಗಳಿಂದ ವೇನನಿಗೆ ಧರ್ಮದ ಮರ್ಮವನ್ನು ತಿಳಿಹೇಳಿದರು. ಸತ್ಯ, ನೀತಿ, ತ್ಯಾಗ, ಪ್ರಾಮಾಣಿಕತೆ ಎಲ್ಲದಕ್ಕೂ ಧರ್ಮವೇ ಮೂಲ ವೆಂದು ತಿಳಿಹೇಳಿದರು. ರಾಜಾಧಿರಾಜನಾದ ಭಗವಂತನೇ ರಾಷ್ಟ್ರದ ಒಡೆಯ. ಅವನಿಗೆ ಸ್ಥಾನಕೊಡದಿದ್ದರೆ ಸಮಾಜಕ್ಕೆ ಹಿತವಾಗದು ಎಂದು ಬೋಧಿಸಿದರು.

ಇಂದು ನಾವೆಲ್ಲರೂ 'ಹೇ! ಜನಗಣಮನ ಅಧಿನಾಯಕ! ಜಯ!...' ಎಂದು ರಾಷ್ಟ್ರಗೀತೆಯನ್ನು ಹಾಡುತ್ತೇವೆ. ಜನಗಣಮನ ಅಧಿನಾಯಕ ಯಾರು? ಭಾರತ ಭಾಗ್ಯವಿಧಾತಾ ಯಾರು? ನಾವು ತಿಳಿದಂತೆ ರಾಷ್ಟ್ರಪತಿಯಲ್ಲ. ಅಥವಾ ಪ್ರಧಾನ ಮಂತ್ರಿ ಅಲ್ಲ. ಭಗವಂತನೇ ಭಾರತ ಭಾಗ್ಯವಿಧಾತಾ. ದೇಶದ ಅಧಿದೇವತೆ ಪರಮಾತ್ಮ. ಧರ್ಮದ ರಕ್ಷಣೆ ಮಾಡುವುದೆಂದರೆ ಭಗವಂತನಿಗೆ ಸ್ಥಾನ ಕೊಡು ವುದೆಂದರ್ಥ. ಧರ್ಮದ ರಕ್ಷಣೆ ದೇಶದ ರಕ್ಷಣೆ. ಧರ್ಮವನ್ನು ರಕ್ಷಿಸಿದರೆ ದೇಶವನ್ನು ರಕ್ಷಿಸಿದಂತೆಯೇ. ನಮಗೆ ಈ ಚಿಂತನೆ ದೃಢವಾಗಬೇಕು.

ಮಹಾಭಾರತದಲ್ಲಿ ಒಂದು ಮಾತಿದೆ:

**ನ ರಾಜ್ಯಂ ನ ಚ ರಾಜಾಸೀತ್ ನ ದಂಡ್ಯೋ ನ ಚ ದಾಂಡಿಕಃ ।**
**ಧರ್ಮೇಣೈವ ಪ್ರಜಾಃ ಸರ್ವಾಃ ರಕ್ಷಂತಿಸ್ಮ ಪರಸ್ಪರಮ್ ॥**

ಎಂದು. ಕೃತಯುಗದಲ್ಲಿ ರಾಜನಿರಲಿಲ್ಲ. ರಾಜ್ಯವಿರಲಿಲ್ಲ. ಕಾನೂನು ಇರಲಿಲ್ಲ. ಕಳ್ಳರೂ ಇರಲಿಲ್ಲ. ಹೀಗಿರಲು ಪೋಲಿಸರ ಅಗತ್ಯವೇಕೆ? ಆದರೆ ಇದ್ಯಾವುದು ಇಲ್ಲ ದಿದ್ದರೂ ಒಂದು ಇತ್ತು. ಅದೇ ಧರ್ಮ. ಎಲ್ಲರೂ ಧರ್ಮದ ನೆಲೆಯಲ್ಲಿ ಸುಖ ದಿಂದ ಬದುಕಿದ್ದರು.

ಇಂದು ರಾಜ್ಯ, ಕಾನೂನು, ರಾಜ, ಕಳ್ಳರು, ರಕ್ಷಕರು ಎಲ್ಲರೂ ಇದ್ದಾರೆ. ಆದರೆ ಧರ್ಮ ಮಾತ್ರ ಇಲ್ಲ. ಅಗತ್ಯ ಬೇಕಾದ ಧರ್ಮ ಮಾತ್ರ ಲೋಪವಾಗಿದೆ. ಇದಕ್ಕೆ ಕಾರಣ 'ಧರ್ಮವಿಲ್ಲದೆ ಸುಖವಿಲ್ಲ' ಎಂಬ ಅರಿವು ನಮಗಿಲ್ಲ. ಅರಿವಿನ ಕೊರತೆಯೇ ಅಧರ್ಮಕ್ಕೆ ನಾಂದಿಯಾಗಿದೆ. ಅಧರ್ಮಗಾಮಿಗಳು ಜನರ ಕಣ್ಣು ತಪ್ಪಿಸಿದರೂ ಜನಾರ್ದನನ ಕಣ್ಣು ತಪ್ಪಿಸಲಾಗದು. ಎಲ್ಲೆಡೆಯೂ ದೃಷ್ಟಿಯುಳ್ಳವ ಭಗವಂತ. ಭಗವಂತನಿಗೆ, ಭಕ್ತಿಗೆ, ನೀತಿಗೆ ಸ್ಥಾನವನ್ನು ಕೊಟ್ಟಾಗ ಮಾತ್ರ ಸಾಮಾಜಿಕ ಪ್ರಜ್ಞೆ ಜಾಗೃತವಾಗಿ ನೀತಿ, ನಿಯಮಗಳನ್ನು ಸಮಾಜದಲ್ಲಿ ಬೆಳೆಸಲು ಅವಕಾಶವಾಗುತ್ತದೆ.

ಈ ದೃಷ್ಟಿಯಿಂದ ಋಷಿಗಳು ವೇನನ ಬಳಿ ಕಳಕಳಿಯಿಂದ ವಿನಂತಿಸಿಕೊಂಡರು. ವೇನನು ಧಿಕ್ಕರಿಸಿದ. 'ನಾನೇ ದೇವನಾಗಿರುವಾಗ ಇನ್ನೊಬ್ಬನನ್ನು ಬಯಸುವುದು; ಪತಿಯಿರುವಾಗ ಪರಪುರುಷನನ್ನು ಬಯಸಿದ ಸತಿಯಂತೆ' —ಎಂದು ಕೆಟ್ಟದಾಗಿ ಮಾತನಾಡಿದ. ಧೂರ್ತನಾದ ಅಧರ್ಮಗಾಮಿಯಾದ ವೇನನನ್ನು ಋಷಿಗಳು ಹುಂಕಾರದಿಂದ ಸಂಹರಿಸಿದರು.

ಇಂದು ನಮ್ಮ ದೇಶದಲ್ಲಿಯೂ ಧರ್ಮ–ಸಂಸ್ಕೃತಿಗಳನ್ನು ಕಾಪಾಡಬೇಕು. ಅನ್ಯಾಯ ಅಧರ್ಮಗಳ ವಿರುದ್ಧ ಸೆಣಸಾಡಬೇಕು. ಧರ್ಮ ಲೋಪವಾದಾಗ ಅಂದಿನ ಋಷಿಗಳು 'ಹುಂಕಾರ'ದಿಂದ ಎಚ್ಚರಿಕೆ ನೀಡಿದರು. ಇಂದಿನ ಸಂತರೂ ಒಟ್ಟು ಸೇರಬೇಕು. ಧರ್ಮಸಂಸ್ಕೃತಿಗಳ ರಕ್ಷಣೆಯನ್ನು ಮಾಡಬೇಕು. ಹುಂಕಾರದಿಂದಲ್ಲದಿದ್ದರೂ 'ಓಂಕಾರ'ದಿಂದ ಎಚ್ಚರಿಕೆಯನ್ನು ನೀಡಬೇಕು. ಭಾರತ ಭಾಗ್ಯವಿಧಾತನ ಸಂರಕ್ಷಣೆಯನ್ನು ಮಾಡಬೇಕು.

# ಸದ್ವರ್ತನೆಯ ಸಮೂರ್ತಿ ಪೃಥುರಾಜ

ವೇನನನ್ನು ಸಂಹರಿಸಲು ಮತ್ತೆ ಅರಾಜಕತೆ ತಲೆದೋರಿತು. ಬಲಿಷ್ಠ–ದುಷ್ಟನಾದ ವೇನನು ರಾಜನಾಗಿದ್ದಾಗ ಚಿಕ್ಕಪುಟ್ಟ ಕಳ್ಳರೆಲ್ಲರೂ ಅಡಗಿ ಕುಳಿತಿದ್ದರು. ವೇನನು ಮೃತನಾಗಲು ಇವರೆಲ್ಲರೂ ಎದ್ದರು. ದೇಶವನ್ನು ಲೂಟಿಮಾಡಲಾರಂಭಿಸಿದರು. ಅಂಗನ ವಂಶವೇ ನಿರ್ವಂಶವಾಗಲು ಅರಾಜಕತೆಯಿಂದ ನೀತಿ ನಿಯಮಗಳ ಉಲ್ಲಂಘನೆಯಾಗಲು ಋಷಿಗಳೆಲ್ಲರೂ ಸೇರಿ ವೇನನ ಮೃತದೇಹವನ್ನು ಮಥಿಸಿದರು. ಅದರಿಂದ ನವಶಕ್ತಿಯ ಹೊಸ ವ್ಯಕ್ತಿ ಪೃಥುರಾಜನು ಪ್ರಕಟಗೊಂಡ. ದೇವತೆಗಳ ಉದ್ದೇಶವು ಸಫಲವಾಯಿತು.

ಋಷಿಮುನಿಗಳೆಲ್ಲರೂ ನೇರಿ ಪೃಥುರಾಜನನ್ನು ಸಿಂಹಾಸನಕ್ಕೇರಿಸಿದರು. ಭಗವಂತನ ಆವೇಶದಿಂದ ಪೃಥುರಾಜ ವಿಶೇಷವಾಗಿ ಪ್ರಕಾಶಿಸಿದ. ಸಿಂಹಾಸನವನ್ನೇರಿದ ರಾಜನನ್ನು ಕಂಡು ವಂದಿಮಾಗಧರು ಸ್ತೋತ್ರಮಾಡಲಾರಂಭಿಸಿದರು. ಇದನ್ನು ಕೇಳಿದ ಪೃಥುಮಹಾರಾಜನು ಕೂಡಲೇ ತಡೆಯುತ್ತಾನೆ–

**ಹೇ ಸೂತ! ಹೇ ಮಾಗಧ! ಸೌಮ್ಯ ವಂದಿನ್!**
**ಲೋಕೇಽಧುನಾಽಸ್ಪಷ್ಟಗುಣಸ್ಯ ಮೇ ಸ್ಯಾತ್ ।**
**ಕಿಮಾಶ್ರಯೋ ವಃ ಸ್ತವ ಏಷ ಯೋಜ್ಯತಾಂ**
**ಮಾ ಮಯ್ಯಭೂವನ್ ವಿತಥಾ ಗಿರೋ ವಃ ॥**

— (೪–೧೫–೨೩)

"ಎಲೈ! ಸೂತ, ಮಾಗಧ ಬಂದಿಗಳಿರಾ! ನಿಮ್ಮ ಸ್ತುತಿಯನ್ನು ಸದ್ಯಕ್ಕೆ ನಿಲ್ಲಿಸಿ. ಇನ್ನು ಏನೂ ಸತ್ಕಾರ್ಯಗಳನ್ನೇ ಮಾಡದಿರುವ ನನ್ನನ್ನು ಹೊಗಳುವಿರೇಕೆ? ನಿಮ್ಮ ಮಾತು ಸಾರ್ಥಕವಾಗಬೇಕಿದ್ದಲ್ಲಿ ಸತ್ಕಾರ್ಯ ಮಾಡಿ ಬಳಿಕ ಪ್ರಶಂಸಿಸಿರಿ!" ಎಂದ. ಪೃಥುವಿನ ಈ ಸದ್ವರ್ತನೆಯನ್ನು ಎಲ್ಲರೂ ಮನಗಾಣಬೇಕು.

ಇಂದೂ ಸಹ ಮಂತ್ರಿಮಹೋದಯರು ಅಧಿಕಾರಕ್ಕೆ ಬಂದದ್ದೇ ತಡ, ಜನರೆಲ್ಲರೂ ಅವರನ್ನು ಹೊಗಳಿ ಅಟ್ಟಕ್ಕೇರಿಸುತ್ತಾರೆ. ಏನೂ ಕಾರ್ಯ ಮಾಡದಿದ್ದರೂ ಸಮ್ಮಾನ ಮಾಡಿ ಅಭಿನಂದನಾಪತ್ರ ನೀಡುತ್ತಾರೆ. ಜನರು ನೀಡಿದಾಗ ಸಂತೋಷದಿಂದ ಆತ್ಮಾವಲೋಕನ ಮಾಡಿಕೊಳ್ಳದೆ ಮಂತ್ರಿ ಮುಖಂಡರು ಸ್ವೀಕರಿಸುತ್ತಾರೆ.

ಆದರೆ ನಮ್ಮ ಪೃಥು ಚಕ್ರವರ್ತಿ 'ಪ್ರಶಂಸೆಯನ್ನು ನಿಲ್ಲಿಸಿರಿ!' ಎಂದ. ಮುಂದೇನಾದರೂ ನೀವು ಹೇಳಿದಂತಹ ಸತ್ಕರ್ಮವನ್ನು ಮಾಡಿದಲ್ಲಿ ಪ್ರಶಂಸಿಸಿರಿ! ಅಂದು ಅದು ವಾಸ್ತವವಾದೀತು. ಏನೂ ಕಾರ್ಯ ಮಾಡದೆ ಕೇವಲ ಅಧಿಕಾರಕ್ಕೆ ಬಂದಿದ್ದೇನೆಂಬ ಕಾರಣದಿಂದ ಮಾತ್ರ ಪ್ರಶಂಸಿಸುವುದು ತರವಲ್ಲ ಎಂದು ನಿರಾಕರಿಸಿದ. ಇದರ ಮೂಲಕ ಇಂದಿನ ರಾಜಕಾರಣಿಗಳಿಗೆಲ್ಲ ಒಂದು ಉತ್ತಮ ಆದರ್ಶವನ್ನು ಪೃಥು ಮಹಾರಾಜ ತೋರಿಸಿದ್ದಾನೆ. 'ಏನೂ ಕಾರ್ಯ ಮಾಡದವರನ್ನು ಹೊಗಳದಿರಿ!' ಎಂದು ಆದೇಶಿಸಿದ್ದಾನೆ.

ವಾಸ್ತವಿಕವಾಗಿ ಪೃಥುಮಹಾರಾಜನು ಸಾರ್ವಕಾಲಿಕವಾದ ಒಂದು ತತ್ವವನ್ನು ತಿಳಿಸುತ್ತಾನೆ. ತಿಳಿದವರಾದ ಜ್ಞಾನಿಗಳು ಎಂದೂ ಆತ್ಮಸ್ತುತಿಯನ್ನು ಕೇಳಲೇಬಾರದು. ಸರ್ವೋತ್ತಮನಾದ ಭಗವಂತನ ಸಾವಿರಾರು ಗುಣಗಳು ಕೇಳಬೇಕಾಗಿರುತ್ತಿರಲು ಆತ್ಮಸ್ತುತಿಯನ್ನು ಕೇಳುವುದೆಷ್ಟು ಸರಿ! ನಾವೇನು ಕಾರ್ಯಮಾಡಿದರೂ ಅದೆಲ್ಲವೂ ಭಗವಂತನಿಂದಲೇ. ಸರ್ವಸ್ವತಂತ್ರನಾದ ಶ್ರೀಹರಿಯನ್ನು ಮರೆತು ಆತ್ಮಪ್ರಶಂಸೆಯ ಮಾತುಗಳನ್ನು ಕೇಳುತ್ತಾ ಮೈಮರೆಯುವುದು ಅಸಭ್ಯವರ್ತನೆ ಎನ್ನುತ್ತಾನೆ–

**ಸತ್ಯುತ್ತಮಶ್ಲೋಕಗುಣಾನುವಾದೇ**
**ಜುಗುಪ್ಸಿತಂ ನ ಸ್ತವಯಂತಿ ಸಭ್ಯಾಃ ॥** — (೪-೧೫-೨೦)

ಎಂಬು. ಪೃಥುವಿನ ಈ ಸದ್ವರ್ತನೆ ಎಲ್ಲರಿಗೂ ಆದರ್ಶವಾಗಿದೆ. ನಮ್ಮಿಂದ ಏನಾದರೂ ಸತ್ಕಾರ್ಯಗಳು ನಡೆದಲ್ಲಿ, 'ನಮ್ಮಿಂದಲೇ ಆಯಿತು' ಎಂದು ಹಾರಾಡಬಾರದು. ನನ್ನೊಳಗೆ ಶಕ್ತಿದಾತನಾಗಿ ಭಗವಂತನಿದ್ದಾನೆ. ಅವನಿಂದ ಈ ಕಾರ್ಯ ನಡೆದಿದೆ. ಆದರಿಂದ ಬಂದ ಸತ್ಫಲವನ್ನು ಅವನಿಗೇ ಅರ್ಪಿಸುತ್ತೇನೆ ಎಂದು ನಿರಹಂಕಾರದಿಂದ ವರ್ತಿಸಬೇಕು. ನಮ್ಮಿಂದ ಪ್ರಾಮಾಣಿಕವಾಗಿ ಸತ್ಕಾರ್ಯಗಳು ನಡೆದಾಗ ಇಂತಹ ಚಿಂತನೆಯು ಅತ್ಯಗತ್ಯ ಎಂದ ಬಳಿಕ ಏನೂ ಕಾರ್ಯವನ್ನೇ ಮಾಡದೆ ಆತ್ಮಪ್ರಶಂಸೆಯನ್ನು ಬಯಸುವ ಮಂದಿಗೇನಂಬೋಣ!'

ಪೃಥುವಿನ ನಿರಹಂಕಾರದ ಮಾತುಗಳನ್ನಾಲಿಸಿದ ಜನರು ಅವನನ್ನು ಮತ್ತಷ್ಟು ಪ್ರಶಂಸೆಗೈಯಲಾರಂಭಿಸಿದರು.

ರಾಮಾಯಣದಲ್ಲಿಯೂ ಇಂತಹದ್ದೇ ಒಂದು ಪ್ರಸಂಗವನ್ನು ಕಾಣಬಹುದು. ಶ್ರೀರಾಮಚಂದ್ರನು ಅರಣ್ಯಕ್ಕೆ ಹೊರಟಾಗ ಪೌರರೆಲ್ಲರೂ ಅವನನ್ನು ಹಿಂಬಾಲಿಸಿದರು. ಶ್ರೀರಾಮನ ಸದ್ಗುಣಗಳಿಂದ ಅವರೆಲ್ಲರೂ ಆಕರ್ಷಿತರಾಗಿದ್ದರು. ರಥವನ್ನೇರಿ ಹೊರಟಿರುವ ಶ್ರೀರಾಮಚಂದ್ರ ಹಿಂತಿರುಗಿ ಒಮ್ಮೆ ನೋಡಿದ. ಜೀವನದ ಘಟ್ಟವನ್ನು ಮುಟ್ಟಿದ ಈ ವೃದ್ಧರು, ಹಸುಳೆಗಳನ್ನು ಕಂಕುಳಲ್ಲಿ ಹೊತ್ತು ಬರುತ್ತಿರಲು ಸ್ತ್ರೀಯರು, ನಡೆಯಲಸಮರ್ಥರಾದ ಬಾಲಕರು, ಎಲ್ಲ ವರ್ಗದ ಪೌರರನ್ನೂ ಕಂಡ. ಕರುಣಾಸಾಗರನ ಹೃದಯ ಮಿಡಿಯಿತು. ರಥದಿಂದ ಕೆಳಗಿಳಿದು ಅವರೊಟ್ಟಿಗೆ ತಾನೂ ನಡೆದು ಬಂದ. ಶ್ರೀರಾಮನನ್ನು ಬಿಡಲು ಮನಸ್ಸಿಲ್ಲ. ನಡೆಯುವ ವಯಸ್ಸಲ್ಲ. ನಡೆಯದೆ ಉಪಾಯವಿಲ್ಲ. ಜನರ ಈ ಸ್ಥಿತಿಯನ್ನರಿತ ಶ್ರೀರಾಮ 'ರಥದಲ್ಲಿ ನಾನು

ಕೂಡೆನು' ಎಂದು ಮಾನವೀಯ ಪ್ರಜ್ಞೆಯಿಂದಲೂ ನಡೆದುಬಂದ. ರಾಮನ ಉದಾತ್ತ ಮನೋಭಾವಕ್ಕೆ ಪೌರರು ಮತ್ತಷ್ಟೂ ಮನ ಸೋತರು. ಇಷ್ಟೇ ಅಲ್ಲದೆ ಶ್ರೀರಾಮಚಂದ್ರ ಪ್ರತಿಯೊಬ್ಬರಲ್ಲಿಯೂ ಬಿನ್ನವಿಸಿಕೊಂಡ –"ಪೌರರೇ! ನನ್ನಲ್ಲಿ ತೋರುತ್ತಿರುವ ಈ ಪ್ರೀತಿ ಅಭಿಮಾನಗಳನ್ನು ಇನ್ನು ಮುಂದೆ ಭರತನಲ್ಲಿ ತೋರಿರಿ! ನನಗೆ ಅರಣ್ಯಕ್ಕೆ ಹೊರಡಲು ಅನುಮತಿ ನೀಡಿರಿ!" ಎಂದಾಗ ಶ್ರೀರಾಮ ಜನರಿಗೆ ಮತ್ತಷ್ಟು ಹತ್ತಿರದವನಾದ. ಶ್ರೀರಾಮನು ಎಷ್ಟೆಷ್ಟು ತ್ಯಾಗದ ಔದಾರ್ಯದ ಮಾತುಗಳನ್ನಾಡಿದನೋ ಅದರಿಂದ ಪ್ರಜೆಗಳು ಮತ್ತಷ್ಟು ಹೆಚ್ಚು ಅಭಿಮಾನ ಪಡುತ್ತಿದ್ದರು.

ಅವನಂತೆಯೇ ಪೃಥುಮಹಾರಾಜನ ಔದಾರ್ಯದ ಮಾತುಗಳನ್ನು ಕೇಳಿದ್ದೇ ತಡ, ಅಲ್ಲಿ ನೆರೆದಿದ್ದ ಜನರು ಮತ್ತೂ ಹೊಗಳಲಾರಂಭಿಸಿದರು. ರಾಜನಾದವನು ಎಂತಹ ವ್ಯಕ್ತಿತ್ವವನ್ನು ಅಳವಡಿಸಿಕೊಳ್ಳಬೇಕು ಎಂಬುದಕ್ಕೆ ಪೃಥುರಾಜನು ಉತ್ತಮ ನಿದರ್ಶನವಾಗಿದ್ದನು. ಇಂತಹ ಪೃಥುವಿನ ಆದರ್ಶವನ್ನು ನಮ್ಮ ದೇಶದ ರಾಜಕಾರಣಿಗಳೂ ಅಳವಡಿಸಿಕೊಂಡಾಗಲಷ್ಟೇ ನಮ್ಮ ದೇಶದ ಪ್ರಗತಿ ಸಾಧ್ಯ.

ಪೃಥುರಾಜನು ತಿಳಿಸಿದಂತೆ ನಮ್ಮಿಂದ ಕಾರ್ಯಗಳೇನಾದರು ನಡೆದಲ್ಲಿ 'ಅವು ಭಗವಂತನಿಂದ ನಡೆದವು' ಎಂದೇ ಚಿಂತಿಸಬೇಕು. ಇದಕ್ಕಿಂತ ವ್ಯತಿರಿಕ್ತವಾಗಿ ವರ್ತಿಸಿದಲ್ಲಿ ಅಧಃಪತನಕ್ಕೆ ತುತ್ತಾಗುತ್ತೇವೆ.

ಹಿಂದೆ ದೇವತೆಗಳೆಲ್ಲರೂ ದೈತ್ಯರ ವಿರುದ್ಧ ಹೋರಾಟ ನಡೆಸಿ ವಿಜಯವನ್ನು ಸಂಪಾದಿಸಿಕೊಂಡರು. ದೇವತೆಗಳಿಗೇ ವಿಜಯ ದೊರೆಯಲು ಕಾರಣ ಅವರೊಳಗಿನ ಭಗವತ್ಸನ್ನಿಧಾನ. ಜಯ ಸಿಗುವ ತನಕ ದೇವತೆಗಳಿಗೆ ಈ ಎಚ್ಚರವಿತ್ತು. ಜಯಿಸಿದ್ದೇ ತಡ, ಎಲ್ಲರೂ 'ಇದು ನನ್ನಿಂದ ದೊರೆತ ವಿಜಯ. ಇದು ನನ್ನಿಂದ' ಎಂದು ಹಮ್ಮಿನಿಂದ ಬೀಗತೊಡಗಿದರು. ಅಸುರರು ಹೊರಗಿನಿಂದ ದೇವತೆಗಳಿಗೆ ಸೋತು ದೇವತೆಗಳ ಒಳಗೇ ಆಕ್ರಮಣಮಾಡಿದರು. ದೇವತೆಗಳು ಹೊರಗಿನಿಂದ ಗೆದ್ದು ಒಳಗೆ ಸೋತರು. ದೇವತೆಗಳೆಲ್ಲರೂ ತಮ್ಮದೇ ವಿಜಯ ಎಂದು ಬೀಗುತ್ತಿರಲು ದೇವತೆಗಳ ಅಹಂಕಾರದ ಕೆಸರನ್ನು ಒರೆಸಲು ಶ್ರೀಹರಿಯು ಯಕ್ಷನಾಗಿ ಬಂದ. ದೇವತೆಗಳ ಒಳಗಿದ್ದ ತನ್ನ ಸನ್ನಿಧಾನವನ್ನು ಕಸಿದುಕೊಂಡು ಅವರೆದುರಿನಲ್ಲಿ ಒಂದು ಹುಲ್ಲುಕಡ್ಡಿಯನ್ನು ಇಟ್ಟ. 'ಸಾಮರ್ಥ್ಯವಿದ್ದವರು ಇದನ್ನು ಹಂದಾಡಿಸಿರಿ!' –ಎಂದ. ಅಗ್ನಿ ವಾಯುಗಳು ಸಮಗ್ರ ತಮ್ಮ ಬಲವನ್ನೆಲ್ಲ ವಿನಿಯೋಗಿಸಿದರೂ ಹಂದಾಡಿಸ ಲಾಗಲಿಲ್ಲ. ಕೊನೆಗೆ ದೇವತೆಗಳು ತಮ್ಮ ನಿರ್ವೀರ್ಯತೆಯನ್ನರಿತು ಭಗವಂತನೇ ಬಂದಿದ್ದಾನೆಂದರಿತರು. 'ಅಸುರರ ವಿರುದ್ಧ ಜಯಿಸಲು ಭಗವಂತನ ಶಕ್ತಿಯೇ ಕಾರಣ' ಎಂದು ತಿಳಿದು ಭಗವಂತನದ್ದೇ ವಿಜಯ ಎಂದು ಕೊಂಡಾಡಿದರು" ಎಂಬ ಕಥೆ ಯನ್ನು ಉಪನಿಷತ್ತಿನಲ್ಲಿ ಕಾಣಬಹುದು.

'ಹರಿ ಇಲ್ಲದೆ ತೃಣವೂ ಚಲಿಸದು' ಎಂಬ ಸಂಗತಿ ಸಾಧಕರಿಗೆಲ್ಲ ಪ್ರತ್ಯಕ್ಷ ತಿಳಿದ ಸಂಗತಿ. ಹೀಗಿರಲು ಅಹಂಕಾರದಿಂದ ಎಂದೂ ಬೀಗಬಾರದು. ನಮ್ಮಿಂದೇನಾದರೂ

ಪ್ರಗತಿಪರ ಕಾರ್ಯಗಳು ನಡೆದಾಗ, ನಮ್ಮನ್ನು ಸ್ತುತಿಸಿದಾಗ, ಅವೆಲ್ಲವನ್ನೂ ಕೃತಜ್ಞತೆಯಿಂದ ಭಗವಂತನಿಗೇ ಸಮರ್ಪಿಸಬೇಕು. ಹೊರತು ಎಂದೂ ಆತ್ಮ ಪ್ರಶಂಸೆಗೆ ಮುಂದಾಗಬಾರದು. ಇಂತಹ ಉದಾತ್ತಗುಣಗಳನ್ನು ಪೃಥುಮಹಾರಾಜ ತನ್ನ ಜೀವನದಲ್ಲಿ ಅಳವಡಿಸಿಕೊಂಡಿದ್ದ. 'ವಿವೇಕಿಯಾದ, ದಯಾವಂತನಾದ ಮಾನವೀಯ ಮೌಲ್ಯಗಳನ್ನರಿತ ಸಜ್ಜನನಾದ ರಾಜನನ್ನು ಹೊಂದಿದ ನಾವೇ ಧನ್ಯರು' ಎಂದು ಪ್ರಜೆಗಳೆಲ್ಲರೂ ಆನಂದಭರಿತರಾದರು.

## ದೇಶವನ್ನು ಸಮೃದ್ಧಗೊಳಿಸಿದ ಪೃಥು

ಪೃಥುಮಹಾರಾಜನ ರಾಜ್ಯರಕ್ಷಣೆಯ ಕ್ರಮವನ್ನು ವಿಸ್ತಾರವಾಗಿ ನಿರೂಪಿಸಿದ್ದಾರೆ.

ಪೃಥುಮಹಾರಾಜನು ಯಾವುದೇ ರೀತಿಯ ರಾಗದ್ವೇಷಾದಿಗಳಿಗೆ ತುತ್ತಾಗದೆ ಪ್ರಾಮಾಣಿಕವಾಗಿ ಧರ್ಮಪರಿಪಾಲನೆಯನ್ನು ಮಾಡುತ್ತಿದ್ದ. ತನ್ನ ಮಗನೇ ಅಪರಾಧಮಾಡಿದರೂ ಅಪರಾಧಕ್ಕೆ ತಕ್ಕಂತೆ ಶಿಕ್ಷಿಸುತ್ತಿದ್ದ. ಇಂದಿನ ರಾಜರಂತೆ ತನ್ನ ಮಗನೆಂದು ಅಪರಾಧವನ್ನು ಮುಚ್ಚಿಹಾಕಿದ ಭ್ರಷ್ಟನಾಗಿರಲಿಲ್ಲ. ತನ್ನ ಶತ್ರುವಿನ ಮಗನೇ ಆಗಿರಲಿ ಅವನು ಉತ್ತಮ ಕಾರ್ಯವನ್ನು ಮಾಡಿದ್ದಲ್ಲಿ ಸಮ್ಮಾನಿಸುತ್ತಿದ್ದ. ಪಕ್ಷಪಾತ ಸ್ವಾರ್ಥಗಳಿಲ್ಲದೆ ನ್ಯಾಯ-ನೀತಿಗಳಿಂದ ರಾಜ್ಯವನ್ನು ನಡೆಸುತ್ತಿದ್ದ.

ಕಾಳಿದಾಸನು ರಾಜ್ಯರಕ್ಷಣೆಯ ಬಗ್ಗೆ ಒಂದು ಸುಂದರವಾದ ಮಾತನ್ನಾಡುತ್ತಾನೆ.

ಸೂರ್ಯನು ನದಿಯ ನೀರನ್ನು ಸ್ವೀಕರಿಸಿ ಅದರ ನಾಲ್ಕುಪಟ್ಟು ನೀರನ್ನು ಮಳೆಯ ಮೂಲಕ ಸುರಿಸುವಂತೆ, ಜನರಿಂದ ಸ್ವಲ್ಪವೇ ಕರವನ್ನು ಸ್ವೀಕರಿಸಿ ಅದನ್ನು ಸಾವಿರಪಟ್ಟು ಹೆಚ್ಚಿಸಿ ತಿರುಗಿಕೊಡಬೇಕು. ಮಳೆಯು ಬರಲಿ ಬಾರದಿರಲಿ, ಜನರ ಯೋಗಕ್ಷೇಮವನ್ನು ಸರಿಯಾಗಿ ನೋಡಿಕೊಳ್ಳಬೇಕು. ಕ್ಷಾಮ ಉಂಟಾದರೂ ಬದುಕಲಿಕ್ಕಾಗಿ ಬೇರೆ ಉದ್ಯೋಗವನ್ನು ಕಲ್ಪಿಸಿಕೊಟ್ಟು ಯಾರೂ ದರಿದ್ರರಾಗದಂತೆ ನೋಡಿಕೊಳ್ಳಬೇಕು. ತನ್ನ ಬಗ್ಗೆ ಇರುವ ಪ್ರೀತಿ ತನ್ನ ಅರ್ಧಾಂಗಿಯಲ್ಲಿಯೂ ಇರಬೇಕು. ಪರಸ್ತ್ರೀಯರನು ತಾಯಂದಿರಂತೆ ಕಾಣಬೇಕು. ಸಮಸ್ತ ಪ್ರಜೆಗಳನ್ನು ತನುಸಂಜಾತಕುವರರಂತೆ ಸಲಹಬೇಕು. ಜ್ಞಾನಿಗಳು, ಭಗವದ್ಭಕ್ತರು ಬಂದರೆ ದಾಸಾನುದಾಸನಾಗಿ ವರ್ತಿಸಬೇಕು. ಹೀಗೆ ರಾಜರಿಗೆ ವಿಹಿತವಾದ ಕರ್ತವ್ಯಗಳನ್ನು ಪ್ರಾಮಾಣಿಕವಾಗಿ ಪರಿಪಾಲಿಸುತ್ತಾ ಪೃಥುರಾಜನು ರಾಜ್ಯರಕ್ಷಣೆಯನ್ನು ಮಾಡುತ್ತಿದ್ದನು.

ಆದರೆ ಹಿಂದೆ ವೇನನಿಂದ ನಡೆದ ಅತ್ಯಾಚಾರದಿಂದ ಭೂಮಿಯು ಬಂಜರಾಗಿ ಹೋಗಿದೆ. ಜನರೆಲ್ಲರೂ ಕೃಷಿಮಾಡಲಾಗದೆ ನಿರುದ್ಯೋಗಿಗಳಾಗಿದ್ದಾರೆ. ಅಜ್ಞಾನಿಗಳೇ ಹೆಚ್ಚಿದ್ದಾರೆ. ನೀತಿ ಮೌಲ್ಯಗಳೆಲ್ಲವೂ ಕುಸಿದುಹೋದಾಗ ಕಂಗೆಟ್ಟ ಜನರು ರಾಜನ ಬಳಿ ಬಂದು ತಮ್ಮ ತಾಪತ್ರಯಗಳನ್ನು ತಿಳಿಸಿ ನಮ್ಮನ್ನು ಪಾಲಿಸೆಂದು ಬಿನ್ನವಿಸಿ ದ್ದಾರೆ.

ದೀನ ಜನರ ಆಕ್ರಂದನಕ್ಕೆ ಪೃಥುವಿನ ಹೃದಯ ಕರಗಿದೆ. ರಾಜನು ಪ್ರಳಯ ಕಾಲದ ರುದ್ರನಂತೆ ಕೃದ್ಧನಾಗಿ ವಸುಂಧರೆಯ ಮೇಲೆ ದಂಡೆತ್ತಿ ಹೊರಟ. ವಸುಂಧರೆ ಹೆದರಿ ಗೋರೂಪವನ್ನು ಧರಿಸಿ ಓಡಿದಳು. ಅನ್ನ, ಆಹಾರ, ವಿದ್ಯೆ, ಉದ್ಯೋಗ, ಔಷಧ, ಸಂಪತ್ತುಗಳಿಂದ ಪ್ರಜೆಗಳನ್ನು ವಂಚಿತರನ್ನಾಗಿ ಮಾಡಿದ ಭೂದೇವಿಯ ಬೆನ್ನು ಹಿಡಿದು ರಾಜನೂ ಓಡಿದ. ಎಲ್ಲಿ ಹೋದರು ಪೃಥುರಾಜನಿಂದ ರಕ್ಷಿಸು ವವರು ಸಿಗಲಿಲ್ಲ. ಭೂದೇವಿಗೆ ಉಪಾಯಾಂತರ ಗೋಚರಿಸದೆ ರಾಜನಿಗೇ ಶರಣಾದಳು. ಪೃಥುವಿನಲ್ಲಿರುವ ಭಗವಂತನೇ ನನಗೆ ಆದೇಶ ಮಾಡುತ್ತಿದ್ದಾನೆಂದರಿತಳು ಬಳಿಕ ಪೃಥು ಸ್ವಾಯಂಭುವಮನುವನ್ನೇ ಕರುವನ್ನಾಗಿ ಮಾಡಿಕೊಂಡು ಬೇಕಾದ ಸಮೃದ್ಧಿ ಯನ್ನು ಧರೆಯಿಂದ ಕರೆದುಕೊಂಡನು. ವೈಜ್ಞಾನಿಕಯುಗದಲ್ಲಿ ದೊರೆಯುತ್ತಿರುವ ಸೌಲಭ್ಯವನ್ನು ಅಂದಿನ ನಾಗರಿಕರಿಗೆ ಪೃಥು ಒದಗಿಸಿ ಕೊಟ್ಟಿದ್ದನು. ಗ್ರಾಮ, ನಗರ, ಕೂಪ, ತಟಾಕ ಎಲ್ಲವನ್ನೂ ನಿರ್ಮಿಸಿಕೊಟ್ಟ ವ್ಯಾಪಾರ ಮಳಿಗೆ, ವಿದ್ಯಾಸಂಸ್ಥೆ ಎಲ್ಲವನ್ನೂ ನಿರ್ಮಾಣಮಾಡಿ ಈ ದೇಶದಲ್ಲಿ ಹೊಸ ಯುಗವನ್ನೇ ನಿರ್ಮಾಣ ಮಾಡಿದ ಮಹಾಪುರುಷ ಪೃಥುರಾಜ. ಇಷ್ಟೆಲ್ಲ ಅಭಿವೃದ್ಧಿಯುಂಟಾಗಲು ಇವನೊಳಗೆ ಸನ್ನಿಹಿತ ಭಗವಂತನ ವಿಶೇಷಾನುಗ್ರಹವೇ ಕಾರಣ.

ಇಂದು ದೇಶಗಳಲ್ಲಿ ಕೃಷಿ ವ್ಯವಸ್ಥೆ, ಔಷಧಿಗಳ ಆವಿಷ್ಕಾರ, ಧರ್ಮಪ್ರಚಾರ, ನಾಗರಿಕತೆ ಎಂದೆಲ್ಲ ಏನನ್ನು ಗುರುತಿಸುತ್ತೇವೆಯೋ ಇವುಗಳ ಆದ್ಯಪ್ರವರ್ತಕ ಪೃಥುಚಕ್ರವರ್ತಿ. ನಮ್ಮ ದೇಶವನ್ನು ಭೌತಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ಸಮೃದ್ಧಿ ಗೊಳಿಸಿದವನೀತ. ಇಷ್ಟೆಲ್ಲ ಪ್ರಗತಿಶೀಲ ಕಾರ್ಯಗಳನ್ನು ನಡೆಸಿದ್ದರೂ ನಿರಹಂಕಾರಿ ಯಾಗಿ ನಿರಾಡಂಬರದ ಜೀವನ ನಡೆಸುತ್ತಾ, ಧಾರ್ಮಿಕ ಮನೋವೃತ್ತಿಯವನಾಗಿ ಜನರಿಗೆಲ್ಲ ಬದುಕಿನ ಕರ್ತವ್ಯಗಳನ್ನು ತಿಳಿಸಿಕೊಟ್ಟ.

## ಕರ್ತವ್ಯಪ್ರಜ್ಞೆ ಬೆಳೆಯಲಿ!!

ಪೃಥು ಮಹಾರಾಜ ತನ್ನ ಪ್ರಾಮಾಣಿಕ ಪ್ರಯತ್ನದಿಂದ, ಸದ್ಗುಣಗಳಿಂದ ಪೃಥಿವಿ ಯನ್ನು ಸಮೃದ್ಧಗೊಳಿಸಿದ. ಶ್ರೀಹರಿಯು ಪ್ರೀತನಾಗಲೆಂದು ನೂರು ಅಶ್ವಮೇಧ ಯಜ್ಞ ನಡೆಸಿದ. ಪೃಥುವಿನ ಪ್ರಾಮಾಣಿಕ ಭಕ್ತಿಗೆ ಭಗವಂತ ಮೆಚ್ಚಿದ. ಪ್ರತ್ಯಕ್ಷನಾದ. ಪೃಥುವನ್ನು ನಿಮಿತ್ತೀಕರಿಸಿಕೊಂಡು ಜಗತ್ತಿಗೇ ಅದ್ಭುತ ಸಂದೇಶವನ್ನು ನೀಡಿದ.

ಜಗತ್ತಿನ ಜನರೆಲ್ಲರೂ ತಮ್ಮ ತಮ್ಮ ಕರ್ತವ್ಯಗಳನ್ನು ಮಾಡುವುದೇ ಧರ್ಮ. ಅದೇ ಭಗವಂತನ ಪೂಜೆ. 'ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ'.

ಕಂದಾಯವನ್ನು ಸ್ವೀಕರಿಸಿ ಪ್ರಜೆಗಳನ್ನು ರಕ್ಷಿಸುವುದು ರಾಜನಾದವನ ಕರ್ತವ್ಯ. ಪ್ರತಿಯೊಬ್ಬರೂ ತಮ್ಮ ತಮ್ಮ ಕರ್ತವ್ಯಗಳನ್ನು ಪ್ರಾಮಾಣಿಕವಾಗಿ ಮಾಡಿದಾಗ ದೋಷಭಾಗಿಗಳಾಗುವುದಿಲ್ಲ.

**ಯಃ ಸ್ವಧರ್ಮೇಣ ಮಾಂ ನಿತ್ಯಂ ನಿರಾಶೀಃ ಶ್ರದ್ಧಯಾನ್ವಿತಃ ।**
**ಭಜತೇ ಶನಕೈಸ್ತಸ್ಯ ಮನೋ ರಾಜನ್ ಪ್ರಸೀದತಿ ॥** — (೪-೨೦-೯)

–ಮುಂತಾಗಿ ಉಪದೇಶಿಸಿದ. ಭಗವಂತನ ಈ ಉಪದೇಶಗಳನ್ನು ನಮ್ಮ ಜೀವನದಲ್ಲಿ ರೂಢಿಸಿಕೊಳ್ಳಬೇಕು. ನಮ್ಮ ಜೀವನದಲ್ಲಿ ಹಣಸಂಪಾದನೆಯೇ ಮುಖ್ಯ ಗುರಿಯಾದಾಗ ಅನ್ಯಾಯಮಾರ್ಗಗಗಳನ್ನನುಸರಿಸಿ ದಾರಿ ತಪ್ಪುತ್ತೇವೆ. ಹರಿಪೂಜೆ ಎಂದರಿತಾಗ ಅನ್ಯಾಯಕ್ಕೆ ಅವಕಾಶವೇ ಇಲ್ಲ.

ತಾಯಿಯು ಮಕ್ಕಳಿಗೆ ಅಡುಗೆಯನ್ನು ಸಿದ್ಧಪಡಿಸುತ್ತಾಳೆ. ಒಬ್ಬ ವ್ಯಾಪಾರಿಯೂ ಅಡುಗೆಯನ್ನು ಸಿದ್ಧಪಡಿಸುತ್ತಾನೆ. ವ್ಯಾಪಾರಿಯ ದೃಷ್ಟಿ ಹಣಸಂಪಾದನೆ. ಇವನು ಆಹಾರಶುದ್ಧಿಯನ್ನು ಗಮನಿಸುವುದಿಲ್ಲ. ಅಶುಚಿಯಾದ, ಆರೋಗ್ಯಕ್ಕೇ ಹಾನಿಯುಂಟು ಮಾಡುವ ಪದಾರ್ಥಗಳಿಂದಲೇ ಪಾಕಮಾಡುತ್ತಾನೆ. ಇವನ ಅಡುಗೆಯಲ್ಲಿ ಇನ್ನೂ ಅನೇಕ ದೋಷಗಳಿರಬಹುದು. ಆದರೆ ತಾಯಿ ಸಿದ್ಧಪಡಿಸಿದ ಆಹಾರದಲ್ಲಿ ಸಂಪಾದನೆಯ ಉದ್ದೇಶವಿಲ್ಲ. ತನ್ನ ಕರ್ತವ್ಯವೆಂದರಿತು, ಶುಚಿಯಾದ ರುಚಿಯಾದ ಆರೋಗ್ಯಕರವಾದ ಆಹಾರವನ್ನು ತಯಾರಿಸುತ್ತಾಳೆ. ಕರ್ತವ್ಯಪ್ರಜ್ಞೆಯೇ ನಿರ್ದುಷ್ಟತೆಗೆ ಕಾರಣ. ಕರ್ತವ್ಯಭಾವನೆಯೇ ಹರಿಪೂಜೆ. ವ್ಯಾಪಾರಿ ಮನೋಭಾವವೇ ಅಧರ್ಮಾಚರಣೆ. ಆದ್ದರಿಂದ ಯಾವುದೇ ಕೆಲಸಗಳನ್ನು ಮಾಡಬೇಕಿದ್ದರೂ ಕರ್ತವ್ಯದ ದೃಷ್ಟಿಯಿಂದ ಹರಿಪ್ರೀತನಾಗಲೆಂದು ಮಾಡಬೇಕು. ಹೀಗೆ ಮಾಡಿದಾಗ 'ತನ್ನ ಮಾತಿಗೆ ಬೆಲೆಕೊಟ್ಟ ಮಕ್ಕಳು' ಎಂದು ಭಗವಂತ ನಮ್ಮನ್ನು ಉದ್ಧರಿಸುತ್ತಾನಲ್ಲವೇ!!

## ರಾಜರ ಕರ್ತವ್ಯ?!

ರಾಜಾ ಪೃಥು ಚಕ್ರವರ್ತಿಯು ಎಲ್ಲಾ ರಾಜರಿಗೂ ಆದರ್ಶರಾಜನೆನಿಸಿದ್ದ. ತನ್ನ ರಾಜ್ಯದಲ್ಲಿ ಆಧ್ಯಾತ್ಮಿಕ ಮತ್ತು ಲೌಕಿಕ ಪ್ರಗತಿಯುಂಟಾಗಬೇಕೆಂದು ಶ್ರಮಿಸಿದವ. ಇವುಗಳಿಗಾಗಿ ತನ್ನ ತನುವನ್ನು ತೇಯ್ದವ.

ರಾಜನಾದವ ಪ್ರಜೆಗಳಿಂದ ಕಂದಾಯವಸೂಲಿ ಮಾಡಿ ಪ್ರಜೆಗಳ ಸರ್ವತೋಮುಖವಾದ ಅಭಿವೃದ್ಧಿಗೆ ಕಾರಣನಾಗದಿದ್ದರೆ ದೊಡ್ಡ ಅಪರಾಧಿಯಾಗುತ್ತಾನೆ ಎಂದು ಭಾವಿಸಿದವ.

ಪೃಥುವಿನ ರಾಜ್ಯರಕ್ಷಣಾಕ್ರಮ ಸಮಸ್ತ ಪ್ರಜೆಗಳಿಗೂ ಹರ್ಷವನ್ನುಂಟುಮಾಡಿತ್ತು. ತಮ್ಮ ಸಂತೋಷಕ್ಕಾಗಿ ಶ್ರಮಿಸುವ ರಾಜನನ್ನು ಅಭಿನಂದಿಸಲೇಬೇಕು ಎಂದು ಬಂದರು. ಆವಾಗ ಪೃಥು ಹೇಳಿದ–

**ಅಹೋ ಮಮಾಮೀ ವಿತರಂತ್ಯನುಗ್ರಹಂ**
**ಹರಿಂ ಗುರುಂ ಯಜ್ಞಭುಜಾಮಧೀಶ್ವರಮ್ ।**
**ಸ್ವಧರ್ಮಯೋಗೇನ ಯಜಂತಿ ಮಾಮಕಾಃ**
**ನಿರಂತರಂ ಕ್ಷೋಣಿತಲೇ ದೃಢವ್ರತಾಃ ॥** — (೪–೨೧–೩೭)

ಎಂದು. ಪ್ರಜೆಗಳೇ! ನೀವೆಲ್ಲರೂ ಸರ್ವಯಜ್ಞಭೋಕ್ತೃವಾದ ಶ್ರೀಹರಿಯನ್ನು, ಗುರುಗಳನ್ನು ನಿರಂತರ ಪೂಜಿಸುತ್ತಿದ್ದೀರಿ. ಮುಂದೆಯೂ ಇದರಂತೆಯೇ ಸ್ವಕರ್ಮನಿರತ

ರಾಗಿರಿ!! ನೀವು ಜಿತೇಂದ್ರಿಯರಾಗಿ ಕ್ರಮಬದ್ಧವಾಗಿ ಮಾಡುವ ಸದ್ಧರ್ಮಾಚರಣೆಯಿಂದಲೇ ನಾನು ಉಪಕೃತನಿದ್ದೇನೆ. ಮುಂದೆಯೂ ಇದನ್ನು ಆಚರಿಸುವುದೇ ನೀವು ನಿಮಗೆ ನೀಡಿದ ಅಭಿನಂದನೆ, ಅನುಗ್ರಹ ಎಂದು ಉತ್ತಮ ಮಾತನ್ನಾಡಿದ.

ನಾವು ಅವನ ಮಾತನ್ನು ಅರ್ಥಮಾಡಿಕೊಳ್ಳಬೇಕು. ರಾಜ್ಯದ ಪರಿಪೂರ್ಣತೆಗೆ ಲೌಕಿಕ ಪ್ರಗತಿ, ಆಧ್ಯಾತ್ಮಿಕ ಪ್ರಗತಿ ಎರಡೂ ಅಗತ್ಯ. ಇಂದು ನಾವು ಎರಡನ್ನೂ ಕಳೆದುಕೊಳ್ಳುತ್ತಿದ್ದೇವೆ. ಮನುಷ್ಯನ ಎಲ್ಲಾ ಅವಯವಗಳೂ ಸರಿಯಾಗಿ ಬೆಳೆದಾಗ, ದೇಹದಲ್ಲಿ ಪರಿಪೂರ್ಣತೆ ಕಾಣುತ್ತೇವೆ. ಯಾವುದೋ ಒಂದು ಅಂಗ ಮಾತ್ರ ಬೆಳೆದರೆ ಅದನ್ನು ರೋಗವೆನ್ನುತ್ತೇವೆ. ಹೊಟ್ಟೆ ಮಾತ್ರ ಬೆಳೆದು ಕೈ-ಕಾಲು ಸಣ್ಣಗಿದ್ದರೆ ಅವನನ್ನು ತುಂಬಿಕೊಂಡವ, ದೃಢಕಾಯ ಎನ್ನುತ್ತಾರೆಯೇ?

ಅದರಂತೆ ನಮ್ಮ ಜೀವನವಾಗಲೀ ದೇಶವಾಗಲೀ ಆರ್ಥಿಕವಾಗಿ ಮಾತ್ರ ಸಮೃದ್ಧಿಯನ್ನು ಹೊಂದಿದೆ ಎಂದರೆ ಹೊಟ್ಟೆ ಮಾತ್ರ ಬೆಳೆದ ರೋಗಿಷ್ಠನಂತಾಗಲಿಲ್ಲವೇ?

ನೈತಿಕ ಪ್ರಗತಿ ಇಲ್ಲದ ದೇಶ ದೇಶವೆನಿಸದು. ಇಂದು ವಿಕೃತಿಯನ್ನೇ ಪ್ರಕೃತಿ ಎಂದರಿತು ಭೋಗಮಗ್ನರಾಗಿದ್ದೇವೆ.

ರಾಜನಾದವ ದೇಶವನ್ನು ಆಧ್ಯಾತ್ಮಿಕವಾಗಿ ಮತ್ತು ಲೌಕಿಕವಾಗಿ ಬೆಳೆಸಿದಾಗ ಮಾತ್ರ ರಾಷ್ಟ್ರ ಎಂದು ಕರೆಯಬಹುದು.

ಇಂಥಹ ರಾಷ್ಟ್ರವನ್ನು ಬೆಳೆಸಿದವ ಪೃಥು ರಾಜ. ಇಂದಿನ ಪ್ರಜಾರಾಜ್ಯದಲ್ಲಿ ನಾವೆಲ್ಲರೂ ಪೃಥುವಿನ ಆದರ್ಶವನ್ನಳವಡಿಸಿಕೊಳ್ಳಬೇಕು. ದೇಶಕ್ಕಾಗಿ ಶ್ರಮಿಸಬೇಕು.

ನಿರಂತರ ಚಿಂತನೆಯಲ್ಲಿ ನಿರತನಾದ ಪೃಥುರಾಜ ತನ್ನ ಪ್ರಜೆಗಳಿಗೂ ಭಗವತ್ತತ್ವವನ್ನು ಉಪದೇಶಮಾಡುತ್ತಿದ್ದನು. ಪೃಥುವಿನ ಸೌಶೀಲ್ಯಾದಿ ಗುಣಗಳಿಂದ ಸಂತುಷ್ಟರಾದ ಸನಕಾದಿಗಳು ಒಮ್ಮೆ ಅವನನ್ನು ಅನುಗ್ರಹಿಸಬೇಕೆಂದು ಆಗಮಿಸಿದರು. ಅನೇಕ ಸೂರ್ಯರ ಸದೃಶವಾದ ಕಾಂತಿಯಿಂದ ಕಂಗೊಳಿಸುವ ಸನಕಾದಿಗಳು ಬಂದೊಡನೆ ಪೃಥುರಾಜನು ಪರಮಸಂತುಷ್ಟನಾಗಿ ಯಥೋಚಿತ ಸತ್ಕಾರಗಳನ್ನಿತ್ತನು.

ಸನಕಾದಿಗಳು ದುರ್ವಾಸರಿಗಿಂತಲೂ ಜ್ಯೇಷ್ಠರು. ಶ್ರೀಮದಾಚಾರ್ಯರ ಪರಂಪರೆಗೆ ಮೊದಲಿಗರು. ಸನಕ, ಸನಂದನ, ಸನತ್ಸುಜಾತ, ಸನತ್ಕುಮಾರರೆಲ್ಲರೂ ನಮ್ಮ ಗುರುಪರಂಪರೆಯವರು.

ಸನಕಾದಿಗಳನ್ನು ಸತ್ಕರಿಸಿದ ಬಳಿಕ ಕುಶಲ ಪ್ರಶ್ನೆಯನ್ನು ಮಾಡದೆ ಒಂದು ಮಾತನ್ನು ಹೇಳುತ್ತಾನೆ–

**ಭವತ್ಸು ಕುಶಲಪ್ರಶ್ನಃ ಆತ್ಮಾರಾಮೇಷು ನೇಷ್ಯತೇ ।**
**ಕುಶಲಾಕುಶಲಾ ಯತ್ರ ನ ಸಂತಿ ಮತಿವೃತ್ತಯಃ ॥** — (೪-೨೨-೧೪)

"ಒಳ್ಳೆಯದು, ಕೆಟ್ಟದ್ದು ಎಂಬ ಭಿನ್ನತೆ ಜಗತ್ತಿನ ಎಚ್ಚರ ಇದ್ದವರಿಗೆ ವಿನಾ ಭಗವಂತನಲ್ಲಿಯೇ ಆಸಕ್ತರಾದವರಿಗಲ್ಲ. ಒಳಿತುಕೆಡುಕುಗಳನ್ನು ನೀವು ಸಮಾನವಾಗಿ ಕಾಣುವುದರಿಂದ ನಿಮ್ಮಲ್ಲಿ 'ಕುಶಲವೇ?' ಎಂಬ ಪ್ರಶ್ನೆಯೇ ಕೂಡದು" ಎನ್ನುತ್ತಾನೆ. ಇಷ್ಟೇ ಅಲ್ಲದೆ, ಜಗತ್ತೆಲ್ಲವೂ ನಿಮ್ಮಂತೆ ಕುಶಲಿಗಳಾಗಲು, ದುಃಖದಿಂದ ದೂರ ಸರಿಯಲು ಏನು ಮಾಡಬೇಕು? ಎಂದು ಜಗತ್ತಿನ ಕುಶಲದ ಮಾರ್ಗವನ್ನು ತೋರಿಸಿರೆಂದು ಕೇಳಿಕೊಳ್ಳುತ್ತಾನೆ.

## ಭಕ್ತಿ ವಿರಕ್ತಿಗಳಿಂದಲೇ ಮುಕ್ತಿ

ಪೃಥುವಿನ ಮಿತವಾದ ಉತ್ತಮವಾದ ಪ್ರಶ್ನೆಯಿಂದ ಸನತ್ಕುಮಾರರ ಚಿತ್ತ ಅರಳಿತು. ತುಟಿಗಳು ಮುಗುಳೊಡೆದಾಗ ವಿಸ್ಮಯದ ಕಾಂತಿ ಹೊರಚೆಲ್ಲಿತ್ತು. ಪೃಥುವನ್ನು ಪ್ರಶಂಸಿಸಿ ಉತ್ತರ ನೀಡಿದರು.

ಶಾಸ್ತ್ರೇಷ್ವಿಯಾನೇವ ಸುನಿಶ್ಚಿತೋ ನೃಣಾಂ
ಕ್ಷೇಮಸ್ಯ ಸಮ್ಯಗ್ವಿಮೃಶೇಷು ಹೇತುಃ ।
ಅಸಂಗ ಆತ್ಮವ್ಯತಿರಕ್ತವಸ್ತುನಿ
ದೃಢಾ ರತಿರ್ಬ್ರಹ್ಮಣಿ ನಿರ್ಗುಣೇ ಚ ಯಾ ॥
— (೪-೨೨-೨೧)

'ಎಲ್ಲರಿಗೂ ಒಳಿತಾಗುವ ಮಾರ್ಗವನ್ನು ಸ್ಪಷ್ಟವಾಗಿಯೇ ಶಾಸ್ತ್ರವು ಹೇಳಿದೆ. ಶ್ರೀಹರಿಗಿಂತ ಇತರವಾದ ಜಗತ್ತಿನಲ್ಲಿ ವೈರಾಗ್ಯ, ಸತ್ವಾದಿಗುಣದೂರನಾದ ಶ್ರೀಹರಿಯಲ್ಲಿ ದೃಢಭಕ್ತಿ' ಇವುಗಳೇ ಬಿಡುಗಡೆಗೆ ಕಾರಣ. ಶಾಸ್ತ್ರದ ಸಾರವೇ ಇದು.

ನಾವೂ ಇವೆರಡನ್ನು ಅಳವಡಿಸಿಕೊಂಡಿದ್ದೇವೆ. ಆದರೆ ಕ್ರಮ ತಪ್ಪಿದೆ. ಹರಿಯಲ್ಲಿ ಅನಾಸಕ್ತಿ. ಜಗತ್ತಿನಲ್ಲಿ ಆಸಕ್ತಿ. ವೈಯಕ್ತಿಕವಾಗಿಯಾಗಲಿ ಸಾಮಾಜಿಕವಾಗಿಯೇ ಆಗಲಿ ಅಭಿವೃದ್ಧಿಯನ್ನು ಪಡೆಯಬೇಕಿದ್ದರೆ ಭಕ್ತಿ ವಿರಕ್ತಿ ಮಾರ್ಗಗಳನ್ನೇ ಅನುಸರಿಸಬೇಕು. ವೈರಾಗ್ಯವೆಂದರೆ ಎಲ್ಲ ಜವಾಬ್ದಾರಿಗಳನ್ನೂ ತೊರೆದು ಕಾಡಿಗೆ ಓಡಿಹೋಗಬೇಕೆಂದು ಅರ್ಥವಲ್ಲ. ಅತಿಯಾಸೆಯಿಂದ ಅನ್ಯಾಯಮಾರ್ಗಕ್ಕಿಳಿಯದೆ ನ್ಯಾಯಮಾರ್ಗದಲ್ಲಿ ಸಿಕ್ಕಿದಷ್ಟರಿಂದ ಸಂತೃಪ್ತಿ ಜೀವನ ನಡೆಸಬೇಕು. ಇದೇ ವೈರಾಗ್ಯ. ಪ್ರಾಮಾಣಿಕ ಕ್ರಿಯೆಯೊಂದಿಗೆ ಭಗವದ್ಭಕ್ತಿಯನ್ನೂ ಅಳವಡಿಸಿಕೊಂಡಲ್ಲಿ ನಮ್ಮ ಜೀವನ ಸಾರ್ಥಕ. ಪೃಥುಚಕ್ರವರ್ತಿಯು ಸರ್ವವೂ ಭಗವಂತನದ್ದೆಂದು ಭಾವಿಸಿ, ಅವನ ಸಂಪ್ರೀತಿಗಾಗಿ ಪ್ರಜೆಗಳಿಗೆ ಹಿತವಾಗುವಂತೆ ದ್ರವ್ಯಗಳನ್ನು ನೀಡುತ್ತಾ ಪ್ರಾಮಾಣಿಕವಾಗಿ ರಾಜ್ಯ ರಕ್ಷಣೆಯನ್ನು ಮಾಡುತ್ತಿದ್ದ. ಭಗವಂತನ ರಾಜ್ಯಸಂಪತ್ತಿಗೆ ನಾನೊಬ್ಬ ಟ್ರಸ್ಟಿ ಎಂಬ ಎಚ್ಚರಿಕೆಯಿಂದ ಕರ್ತವ್ಯ ಮಾಡುತ್ತಿದ್ದ.

ಇಂದು ನಾವೂ ತ್ಯಾಗದ ಮಾತುಗಳನ್ನಾಡುತ್ತೇವೆ. 'ಎಲ್ಲವೂ ಭಗವಂತನದ್ದು. ಅವನೇ ಸರ್ವಾಧಿಪತಿ' ಎನ್ನುತ್ತೇವೆ. ಮನಸ್ಸಿನಲ್ಲಿ 'ಧನರಾಜ' ಎಂದು ಹಮ್ಮಿನಿಂದ ಬೀಗುತ್ತೇವೆ. ಮಾತಿಗನುಗುಣವಾಗಿ ಕೃತಿಯನ್ನು ತೋರದೆ ಆತ್ಮವಂಚನೆಯ

ಬದುಕನ್ನು ಸಾಗಿಸುತ್ತಿದ್ದೇವೆ. ಧನಮದದಿಂದ 'ಥರ್ಸ್ಟಿ'ಗಳಾಗಿದ್ದೇವೆ. ನಾವು ಒಮ್ಮೆ ಆತ್ಮಾವಲೋಕನೆಯನ್ನು ಮಾಡಿಕೊಂಡು ನಮ್ಮ ಜೀವನದಲ್ಲಿಯೂ ಪೃಥು ಮಹಾರಾಜನ ಆದರ್ಶವನ್ನು ಅಳವಡಿಸಿಕೊಂಡಲ್ಲಿ ನಮ್ಮ ಜೀವನವೂ ಸಾರ್ಥಕ ವಾಗುತ್ತದೆ.

ಪೃಥುಮಹಾರಾಜನು ಪ್ರಾಮಾಣಿಕ ಜೀವನವನ್ನು ನಡೆಸುತ್ತಾ ಕೊನೆಗೆ ಒಂದು ದಿನ ರಾಜ್ಯವನ್ನು ಮಕ್ಕಳಿಗೆ ಒಪ್ಪಿಸಿ ತಪಸ್ಸಿಗಾಗಿ ಕಾಡಿಗೆ ನಡೆದ. ಉತ್ತಮ ತಪಸ್ವಿಯಾಗಿ ತನ್ನ ಜೀವನಯಜ್ಞವನ್ನು ಶ್ರೀಹರಿಯ ಪಾದಾರವಿಂದಗಳಿಗರ್ಪಿಸಿ ಧನ್ಯಾತ್ಮನಾದ.

## ಪುರಂಜನೋಪಾಖ್ಯಾನ

ನಾಲ್ಕನೆಯ ಸ್ಕಂಧದ ಕೊನೆಗೆ ಪುರಂಜನ ಕಥೆ ಇದೆ.

ಪುರಂಜನನು ದೇಶವನ್ನು ಸುತ್ತುತ್ತಾ ಒಮ್ಮೆ ಸುಂದರವಾದ ನಗರ ಒಂದನ್ನು ಕಂಡ. ರಾಜಮಾರ್ಗದಲ್ಲಿಯ ಅಂಗಡಿಗಳು, ಆಕರ್ಷಕ ವಸ್ತುಗಳು, ತಳಿರು ತೋರಣಗಳು, ರಜತ ಸುವರ್ಣ ಶಿಖರಗಳು ಪುರಂಜನನ ಮನಸ್ಸನ್ನು ರಂಜಿಸಿದವು. 'ಕಣ್ಣೇ ಕಾಮದ ಬೀಜ' ಎಂದು ದಾಸರು ನುಡಿದಂತೆ ಪುರಂಜನನು ಬಣ್ಣದ ಜಗತ್ತನ್ನು ಕಂಡು ಕಾಮನೆ ಬೀಜಗಳನ್ನು ಬಿತ್ತುತ್ತಾ ಸಾಗಿದ. ಸುಂದರ ನಗರಿಯಲ್ಲಿ ಸುಂದರಿಯೊಬ್ಬಳನ್ನು ಕಂಡ. ಪರಿವಾರದಿಂದ ಸಹಿತಳಾದ ತರುಣಿಯ ರಮಣೀಯ ರೂಪಲಾವಣ್ಯಗಳಿಗೆ ಮೋಹಿತನಾದ. ಇಬ್ಬರ ದೃಷ್ಟಿ ಒಂದಾಯಿತು. ಮಾತು ಒಂದಾಯಿತು. ಮನಸ್ಸು ಒಂದಾಯಿತು. ಇಬ್ಬರೂ ಕೈಕೈಹಿಡಿದರು. ಅವಳ ಅರಮನೆಗೆ ನಡೆದ. ವೈಭವ ಜೀವನ ನಡೆಸಿದ. ಹೆಂಡತಿಯ ಕೈಗೊಂಬೆಯಾದ. ಅಸ್ವಾತಂತ್ರ್ಯದ ತುತ್ತತುದಿ ಮುಟ್ಟಿದ.

ತರುಣಿಯಾದರೂ ಪ್ರತಿನಿತ್ಯವೂ ತನ್ನ ನಗರದ ಮೂರಾರು ದ್ವಾರಗಳಿಂದ ಊರೂರುಗಳಿಗೆ ಸಂಚರಿಸಿದಳು. ಕರ್ತವ್ಯಗಳನ್ನು ಮರೆತ ಪುರಂಜನ ಅವಳ ಒಟ್ಟಿಗೆ ನಡೆದ. ನಗರದ ಆಗುಹೋಗುಗಳನ್ನು ಮರೆತು ಭೋಗಪ್ರಪಂಚದಲ್ಲಿಯೇ ಮೈಮರೆತ.

ನಗರದ ಮೇಲೆ ಗಂಧರ್ವರ ಆಕ್ರಮಣ ನಡೆಯಿತು. ನೂರಾರುಮಂದಿ ಗಂಧರ್ವರು ನಗರವನ್ನೆಲ್ಲಾ ಆಕ್ರಮಿಸಿದರು. ಪುರಂಜನನ ಮೇಲೆ ಎರಗಿದರು. ಪುರಂಜನ ಶಕ್ತಿಗುಂದಿ ಪ್ರಾಣಾಪಾಯಕ್ಕೆ ತುತ್ತಾದ. ಸಾಯುವ ಸಮಯದಲ್ಲಿಯೂ ತನ್ನ ಪತ್ನಿಯದ್ದೇ ಆಲೋಚನೆ. ಶತ್ರುಗಳು ನಗರ ಸೇರಿದ್ದಾರೆ, ಮುಂದೆ ನನ್ನ ಪತ್ನಿಯ ಗತಿ ಏನು? ಎಂದು ಚಿಂತಿಸುತ್ತಾ ಪ್ರಾಣಬಿಟ್ಟ.

ಹೆಣ್ಣಿನ ಆಲೋಚನೆಯಲ್ಲಿ ಪ್ರಾಣಬಿಟ್ಟ ಪುರಂಜನ ವೈದರ್ಭಿ ಎಂಬ ಹೆಣ್ಣಾಗಿ ಹುಟ್ಟಿದ. ನವತರುಣಿಯಾಗಿ ಬೆಳೆದ ಇವಳನ್ನು ಮಲಯಧ್ವಜ ಕೈಹಿಡಿದ.

ಮಲಯಧ್ವಜ ಒಳ್ಳೆಯ ತಪಸ್ವಿ. ಇವನು ಪೂರ್ವಜನ್ಮದಲ್ಲಿ ತನ್ನ ಮಡದಿಯಾದ ಪುರಂಜನಿಯೆ ಆಗಿದ್ದ. ಅವನು ಮಡಿದಾಗ ಸ್ತ್ರೀಯಾದ ಪುರಂಜನನಿಗೆ ಅಪಾರ ಶೋಕ ಉಂಟಾಯಿತು. ಆಗ ಅವನ ಪೂರ್ವಜನ್ಮದ ಮಿತ್ರನೆ ಆಗಿದ್ದ ಒಬ್ಬ ಬ್ರಾಹ್ಮಣ ಬಂದು ತತ್ತ್ವೋಪದೇಶ ಮಾಡಿದ. ಇದರಿಂದ ಪುರಂಜನ ಸುಂದರ ವ್ಯಕ್ತಿತ್ವ ವನ್ನು ಪಡೆದ. ಭಗವಂತನನ್ನು ಸಾಕ್ಷಾತ್ಕರಿಸಿಕೊಂಡ.

ಈ ಪುರಂಜನನ ಕಥೆ ನಮ್ಮ ಕಥೆಯೇ ಆಗಿದೆ.

ನಾವೂ ಪುರಂಜನರೇ. ಪುರಂಜನನಂತೆ ನಾವೂ ಸಹ ದೇಹವೆಂಬ ದೊಡ್ಡ ನಗರಿಯನ್ನು ಹೊಕ್ಕಿದ್ದೇವೆ. ದೇಹದಲ್ಲಿಯೂ ಅನೇಕ ನರ–ನಾಡಿಗಳೆಂಬ ತಳಿರು ತೋರಣಗಳಿವೆ. ಸತ್ವ, ರಜಸ್, ತಮೋಗುಣಗಳೇ ಬೆಳ್ಳಿಬಂಗಾರದ ಶಿಖರಗಳಂತಿವೆ. ನಾನಾ ಮುಖದ ಲೌಕಿಕ ವ್ಯಾಪಾರಗಳಿಂದ ಕೂಡಿದೆ. ವಣಿಗ್ವೀಥಿಯಂತಿದೆ. ಬೇರೆಬೇರೆ ಊರುಗಳಿಗೆ ನಾಗುವ ನವದ್ವಾರಗಳಿವೆ. ಕಣ್ಣಿನಿಂದ ರೂಪಪ್ರಪಂಚವನ್ನು ಹೊಗುತ್ತೇವೆ. ನಾಲಿಗೆಯಿಂದ ರಸದ ಲೋಕಕ್ಕೆ ನಾಗುತ್ತೇವೆ. ಹೀಗೆ ಅನೇಕ ದ್ವಾರದ ದೇಹವನ್ನು 'ಬ್ರಹ್ಮಪುರ' ಎಂದೇ ಉಪನಿಷತ್ತು ಬಣ್ಣಿಸುತ್ತದೆ.

ನಮ್ಮ ನಗರಗಳಿಗಿಂತ ದೇಹವೆಂಬ ನಗರವೇ ಸೊಗಸಾಗಿದೆ. ಇಲ್ಲಿ ಸ್ವಚ್ಛತೆಯ ವ್ಯವಸ್ಥೆಯಿದೆ. ಸ್ವಚ್ಛಂದತೆಗೂ ವ್ಯವಸ್ಥೆಯಿದೆ. ಆಹಾರಗಳನ್ನು ಜಗಿಯುವ ಯಂತ್ರ ವಿದೆ. ಜೀರ್ಣವಾಗಿಸುವ ಯಂತ್ರವೂ ಇದೆ. ಸಮಸ್ತ ಜೀವರ ಬದುಕಿಗೆ ಬೇಕಾಗುವ ಎಲ್ಲಾ ಏರ್ಪಾಡುಗಳಿಂದ ಕೂಡಿದ ದೇಹವೆಂಬ ಪುರವನ್ನು ಶ್ರೀಹರಿ ನಿರ್ಮಿಸಿದ್ದಾನೆ.

ಇಂತಹ ಸುಂದರವಾದ ಪುರದೊಳಗೆ ಹೃದಯವೆಂಬ ಅಂತಃಪುರವನ್ನು ಜೀವಾತ್ಮ ಪ್ರವೇಶಿಸಿದ. ಪ್ರವೇಶಿಸಿದ ಜೀವನಿಗೆ ಬುದ್ಧಿ ಎಂಬ ಪ್ರಮದೆ ಕಂಡಳು. ಅವನ ಕೈಹಿಡಿದ. ಬುದ್ಧಿಯ ಪ್ರೇರಣೆಗನುಗುಣವಾಗಿ ನಡೆದ. ಅವಳ ಕೈಗೊಂಬೆಯಾದ. ಸ್ವಂತ ವ್ಯಕ್ತಿತ್ವವನ್ನು ಕಳೆದುಕೊಂಡ. ಬುದ್ಧಿಯ ದಾಸಾನುದಾಸನಾಗಿ ಬುದ್ಧಿ ಸಾಗುವ ಊರುಗಳಿಗೆಲ್ಲ ನಡೆದ.

ಬುದ್ಧಿ ಸಾಗುವ ಊರುಗಳೆಂದರೆ ವಿಷಯಪದಾರ್ಥಗಳು. ಅವುಗಳ ಬಳಿ ಸಾಗಿ ಭೋಗ ಅನುಭವಿಸುವುದೇ ಜೀವನದ ಗುರಿಯಾಗಿದೆ. ಬುದ್ಧಿಯ ಕೈಹಿಡಿದು ವೈಷಯಿಕ ಸುಖ ಪ್ರಪಂಚದಲ್ಲಿ ಮಲಗಿದ ಜೀವನಿಗೆ ತನ್ನ ಕರ್ತವ್ಯಗಳ ಬಗ್ಗೆ ಎಚ್ಚರವೇ ಇಲ್ಲವಾಗಿದೆ. 'ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮ ಕಾರಣಾತ್' ಎಂಬ ಕೃಷ್ಣನ ಮಾತು ನಮಗೇ ಅನ್ವಯವಾಗುತ್ತಿದೆ. 'ಸ್ವಾರ್ಥಿಗಳಾಗಿ ಭೋಗಮಗ್ನರಾಗಿದ್ದೇವೆ. ಎಚ್ಚರ ತಪ್ಪಿದ ನಮ್ಮ ಮೇಲೆ ಗಂಧರ್ವರ ಆಕ್ರಮಣ ನಡೆದಿದೆ. ಮುನ್ನೂರು ಅರುವತ್ತು ದಿನಗಳೆಂಬ ಗಂಧರ್ವರು ದೇಹದ ಮೇಲೆ ಆಕ್ರಮಣ ನಡೆಸುತ್ತಲೇ ಇದ್ದಾರೆ. ಇದರ ಅರಿವು ಇಲ್ಲದೆ ಹೊಸ ಸಂವತ್ಸರದ ಹಬ್ಬವೆಂದು ಹಿಗ್ಗುತ್ತಿದ್ದೇವೆ. ಕಾಲನ ಆಕ್ರಮಣದಿಂದ ಮೃತ್ಯು ಸನಿಹವಾಗುತ್ತಿದೆ. ನಾನಾ ಮುಖದ ರೋಗಗಳೆಂಬ ಸೈನಿಕರು ಘಾಸಿಗೊಳಿಸುತ್ತಿದ್ದಾರೆ. ಇಷ್ಟಾದರೂ ಜೀವನು ತನ್ನ ಬುದ್ಧಿಯನ್ನು ಬಿಡದೆ ಹಾಗೆಯೇ ಸಾಯುತ್ತಾನೆ.

ನತ್ತ ಜೀವರು ಮತ್ತೆ ಹೆಣ್ಣಾಗಿ ಹುಟ್ಟಬೇಕು. ಇಲ್ಲಿ ಹೆಣ್ಣೆಂದರೆ ತ್ಯಾಗ ಮನೋಭಾವ. ಸ್ತ್ರೀಯರಲ್ಲಿ ಔದಾರ್ಯ ಹೆಚ್ಚಿರುವುದರಿಂದ ತ್ಯಾಗವನ್ನೇ ಹೆಣ್ಣೆಂದದ್ದು.

ಸ್ತ್ರೀಯರು ತಮ್ಮ ಪತಿ–ಪುತ್ರರಲ್ಲಿ ತೋರಿಸುವ ಔದಾರ್ಯವನ್ನು ಭಗವಂತನಲ್ಲಿ ತೋರಿಸಿದರೆ ಮೋಕ್ಷಕ್ಕೇ ಹೋಗಬಹುದು. ಅಂತಹ ತ್ಯಾಗಮನೋಭಾವ ಸ್ತ್ರೀಯರ ಗುಣ.

ಆದ್ದರಿಂದ ಜೀವನು ಹೆಣ್ಣಾಗಬೇಕೆಂದರೆ ಹೆಣ್ಣಿನ ಗುಣವಾದ ತ್ಯಾಗಮನೋಭಾವವನ್ನು ತನ್ನಲ್ಲಿ ಬೆಳೆಸಿಕೊಳ್ಳಬೇಕು ಎಂದರ್ಥ. ಹೆಣ್ಣಿಗೊಬ್ಬ ಪತಿ ದೊರಕಿದ. ಇಲ್ಲಿ ಪತಿ ಎಂದರೆ ಗುರು ಎಂದರ್ಥ. ಸಮರ್ಪಣಾ ಮನೋಭಾವಯಕ್ತನಾಗಿ ಗುರುಗಳ ಸೇವೆಮಾಡಿ ತತ್ವಜ್ಞಾನವನ್ನು ಗಳಿಸಿಕೊಂಡ ಜೀವನಿಗೆ ಕೊನೆಗೊಬ್ಬ ಮಿತ್ರ ದೊರಕುತ್ತಾನೆ. ಈ ಮಿತ್ರ ಅನಾದಿಕಾಲದಿಂದ ಜೀವನ ಒಟ್ಟಿಗೇ ಇದ್ದಾನೆ. ಆದರೆ ಜೀವ ಇವನನ್ನು ಮರೆತಿದ್ದಾನೆ. ಪರಿಶುದ್ಧ ವ್ಯಕ್ತಿತ್ವವನ್ನು ಪಡೆದಾಗ ಭಗವಂತನೆಂಬ ಈ ಮಿತ್ರ ದೊರೆಯುತ್ತಾನೆ.

ಇಂತಹ ಭಗವಂತನನ್ನು ಹೊಂದಿದವ, ಅವನ ಬಗ್ಗೆ ವಿಶೇಷವಾಗಿ ತಿಳಿದುಕೊಂಡವ, ಹಸಿವು–ನೀರಡಿಕೆ–ಭಯ–ಶೋಕ–ಮೋಹ ಎಲ್ಲದರಿಂದಲೂ ಮುಕ್ತನಾಗುತ್ತಾನೆ. ಮೋಕ್ಷ ಹೊಂದುತ್ತಾನೆ–

**ತಾ ಯೇ ಪಿಬಂತ್ಯವಿತೃಷೋ ನೃಪ ಗಾಢಕರ್ಣೈಃ**
**ತಾನ್ನ ಸ್ಪೃಶಂತ್ಯಶನತೃಡ್‌ಭಯಶೋಕಮೋಹಾಃ ॥** — (೪–೨೯–೪೦)

ಎಂದು ಉತ್ತಮ ಸಂದೇಶವನ್ನು ಈ ಉಪಾಖ್ಯಾನ ನಮಗೆ ನೀಡಿದೆ. ಇದರಂತೆ ನಡೆದಾಗಲೇ ನಮ್ಮ ಜೀವನ ಸಾರ್ಥಕ.

## ಆತ್ಮನನ್ನು ಗುರುತಿಸಿಕೊಳ್ಳಿರಿ!

ಹುಲಿಯ ಮರಿಯೊಂದು ಕುರಿಗಳ ಮಧ್ಯೆ ಸೇರಿತು. ಕುರಿಗಳೊಟ್ಟಿಗೆ ಸೇರಿದ ಹುಲಿಮರಿಗೆ ತನ್ನ ಅರಿವೇ ಇರಲಿಲ್ಲ. ತಾನು ಹುಲಿ ಎಂಬುದನ್ನೇ ಮರೆತು ಕುರಿಗಳಂತೆಯೇ 'ಮೇ' 'ಮೇ' ಎಂದು ಅರಚುತ್ತಲಿತ್ತು. ಒಮ್ಮೆ ದೊಡ್ಡ ಹುಲಿಯೊಂದು ಕುರಿಮಂದೆಯಲ್ಲಿ ಸೇರಿದ ಹುಲಿಮರಿಯನ್ನು ಕಂಡಿತು. ಅದರ ಅವಸ್ಥೆಯನ್ನು ಗುರುತಿಸಿ ಉಪಾಯದಿಂದ ಅದನ್ನು ಕರೆದೊಯ್ಯಿತು. ಅದನ್ನು ನೀರಿನ ಬಳಿ ಕೊಂಡೊಯ್ದು ಅದರ ಪ್ರತಿಬಿಂಬವನ್ನು ತೋರಿಸಿತು. ಹುಲಿಮರಿಯು ಎದುರು ನಿಂತಿರುವ ಹುಲಿಯ ಸಾದೃಶ್ಯವನ್ನು ಕಂಡು ತನ್ನನ್ನು ಹುಲಿ ಎಂದೇ ಅರಿಯಿತು. 'ಮೇ' 'ಮೇ' ಎನ್ನುತ್ತಿದ್ದ ಹುಲಿಮರಿ ಗರ್ಜಿಸಿದ ಕೂಡಲೇ ಸಮಗ್ರ ಅರಣ್ಯವೇ ಪ್ರತಿಧ್ವನಿತವಾಯಿತು.

ನಮ್ಮ ಪರಿಸ್ಥಿತಿಯೂ ಹುಲಿಮರಿಯಂತೆಯೇ ಆಗಿದೆ. ಪ್ರಕೃತಿಸಂಪರ್ಕದಲ್ಲಿ ಮೈಮರೆತ ನಮ್ಮ ನಿಜಸ್ವರೂಪವನ್ನು ಮರೆತಿದ್ದೇವೆ. ಅಜ್ಞಾನ, ದುಃಖ,

ವಿಷಯಪದಾರ್ಥಗಳೆಲ್ಲವೂ 'ಮೇ' 'ಮೇ' –'ನನ್ನದು' 'ನನ್ನದು' ಎನ್ನುತ್ತಿದ್ದೇವೆ. ನಮ್ಮ ಚಿನ್ಮಯರೂಪವನ್ನೇ ಮರೆತಿದ್ದೇವೆ. ನಮಗೆ ಅಂಟಿದ ಪ್ರಕೃತಿಯ ನಂಟನ್ನು ಬಿಡಿಸಿಕೊಳ್ಳಬೇಕಾದರೆ ಒಬ್ಬ ನೆಂಟ ಬೇಕಾಗಿದ್ದಾನೆ. ಪುರಂಜನನಿಗೆ ಅವಿಜ್ಞಾತನಾದ ಚೈತನ್ಯರೂಪಿಯಾದ ಭಗವಂತನೆಂಬ ಸುಹೃತ್ ದರ್ಶನ ಕೊಟ್ಟ. ಅವನ ಅಜ್ಞಾನ ನಿವಾರಣೆಯಾಯಿತು 'ನೀನು ಚೈತನ್ಯರೂಪಿ' ಎಂದು ಭಗವಂತನೇ ಉಪದೇಶ ನೀಡಿದಾಗ ತನ್ನ ನಿಜಸ್ವರೂಪದ ಅರಿವು ಉಂಟಾಯಿತು. ಈ ದೇಹ, ಈ ಬುದ್ಧಿ, ಈ ಅಂತಃಕರಣಕ್ಕಿಂತ ಬೇರೆಯಾದ ಚಿನ್ನದಂತಹ ಚಿನ್ಮಯ ವ್ಯಕ್ತಿತ್ವವನ್ನು ಗುರುತಿಸಿ ಕೊಂಡ. ನಾವೂ ಅವನಂತೆಯೇ ಭಗವಂತನು ತಿಳಿಸಿಕೊಟ್ಟಂತೆ ನಮ್ಮ ನಿಜ ವ್ಯಕ್ತಿತ್ವವನ್ನು ಗುರುತಿಸಿಕೊಳ್ಳಲು ಪ್ರಯತ್ನಿಸಬೇಕು.

ಭೋಗಮಗ್ನರಾಗಿಯೇ ಕಾಲಕಳೆಯುವ ನಮ್ಮನ್ನು ಕುರಿತು ವ್ಯಾಸರು ಒಂದು ದೃಷ್ಟಾಂತವನ್ನು ಕೊಡುತ್ತಾರೆ.

ಒಂದು ಸುಂದರವಾದ ಅರಣ್ಯದಲ್ಲಿ ಜಿಂಕೆಯೊಂದು ಎಳೆಯ ಗರಿಕೆ ಚಿಗುರು ಹುಲ್ಲುಗಳನ್ನು ಮೆಲ್ಲುತ್ತಾ ತನ್ನನ್ನೇ ಮರೆಯುತ್ತದೆ. ತನ್ನ ಅಸ್ತಿತ್ವದ ಅರಿವನ್ನೇ ಕಳೆದುಕೊಂಡ ಜಿಂಕೆಯ ಮೇಲೆ ಒಮ್ಮಿಂದೊಮ್ಮೆಲೆ ಚಿರತೆ ಎಗರಿ ಕಬಳಿಸುತ್ತದೆ. ಇದರಂತೆ ನಾವೂ ಸಹ ಭೋಗಮಗ್ನರಾಗಿದ್ದೇವೆ. ಸಂಸಾರಕಾನನದ ಜಿಂಕೆಗಳಾಗಿ ದ್ದೇವೆ. ಇಂದು ಹುಟ್ಟುಹಬ್ಬ, ನಾಳೆ ಮದುವೆ. ನಾಡಿದ್ದು ನಾಮಕರಣ, ನಾಳೆ ಇಂತಹ ಸುಖಪ್ರಯಾಣ, ಇಂದು ಭೋಜನಕೂಟ ಮುಂತಾದ ಹಗಲುಗನಸು ಗಳಲ್ಲಿಯೇ ಎಚ್ಚರ ತಪ್ಪಿದ್ದೇವೆ. ಜೀವನ ಕ್ರಮವನ್ನು ಅರಿಯದೆ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳುತ್ತೇವೆ. ಹೀಗೆ ಸುಖದ ಆಲೋಚನೆಯಲ್ಲಿ ಅನರ್ಘ್ಯ ಜೀವನವು ನಾಗುತ್ತಿರಲು ಮೃತ್ಯುವಿನ ಆಕ್ರಮಣಕ್ಕೆ ತುತ್ತಾಗುತ್ತೇವೆ. ಮೃತ್ಯುವಿನ ಆಕ್ರಮಣವಾ ದಾಗ ನಮ್ಮಿಂದ ಏನೂ ಮಾಡಲಾಗದು. 'ಪುರಂಜನನ ಮೇಲೆ ಗಂಧರ್ವರ ಆಕ್ರಮಣ ನಡೆದಂತೆ ನಮ್ಮ ಮೇಲೂ ಮೃತ್ಯುವಿನ ಆಕ್ರಮಣ ನಡೆಯುತ್ತದೆ' ಎಂಬ ಎಚ್ಚರವನ್ನು ಮೈಗೂಡಿಸಿಕೊಂಡು ನಮ್ಮ ವಿಕಾಸಕ್ಕೆ ಹೇತುವಾದ ಕರ್ತವ್ಯದ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ಪಡೆದು ಕೊಳ್ಳಬೇಕು. ದಾಸರು ಕೇಳುತ್ತಾರೆ "ಯಮರಾಯ! ಇಂದು ನಿನ್ನೊಟ್ಟಿಗೆ ಬರಲಾಗದು. ನಾಳೆ ಮದುವೆ ಮುಗಿದ ಬಳಿಕ ಬರುತ್ತೇನೆಂದರೆ ಯಮರಾಜ ಕೇಳುವನೇ?" ಎಂದಿದ್ದಾರೆ. ಆದ್ದರಿಂದ ಭೋಗಜೀವನದಲ್ಲಿ ಮೈಮರೆ ಯದೆ ನಿರಂತರ ಕರ್ತವ್ಯನಿರತರಾಗಬೇಕೆಂಬ ಸಂದೇಶವನ್ನು ಪುರಂಜನನ ಕಥೆಯಿಂದ ಅರಿಯಬೇಕು.

## ನಾರದರ ಉಪದೇಶ

ಚತುರ್ಥ ಸ್ಕಂಧದ ಕೊನೆಯಲ್ಲಿ ನಾರದರ ಉಪದೇಶ ಬಹಳ ಹೃದ್ಯವಾಗಿದೆ.

ಪ್ರಚೇತಸರಿಗೆ ನಾರದರು ಹೇಳುತ್ತಾರೆ–

ಕೈಗೆ ಸಿಗದ ನಮ್ಮಿಂದ ದೂರವಿರುವ ಭೌತಿಕ ವಿಷಯಪದಾರ್ಥಗಳ ಕಡೆ ಓಡಿ ಎಡವಿ ಮಂಡೆ ಒಡೆದುಕೊಳ್ಳುವುದಕ್ಕಿಂತ ನಮ್ಮೊಳಗೇ ಇರುವ ಭಗವಂತನ ಸ್ಮರಣೆ

ಅತ್ಯಂತ ಸುಖಕರವಾದದ್ದು. ಆದ್ದರಿಂದ ಜೀವನದಲ್ಲಿ ಭಗವದ್ಭಕ್ತಿಯನ್ನು ಮೈಗೂಡಿಸಿಕೊಳ್ಳಬೇಕು. ಇದಕ್ಕೆರಡು ದೃಷ್ಟಾಂತ ಹೇಳಿದ್ದಾರೆ–

ಯಥಾ ತರೋರ್ಮೂಲ ನಿಷೇಚನೇನ
ತೃಪ್ಯಂತಿ ತತ್ಸ್ಕಂಧ ಭುಜೋಪಶಾಖಾಃ ।
ಪ್ರಾಣೋಪಹಾರಾಚ್ಚ ಯಥೇಂದ್ರಿಯಾಣಾಂ
ತಥೈವ ಸರ್ವಾರ್ಹಣಮಚ್ಯುತೇಜ್ಯಾ ॥ — (೪-೩೧-೧೪)

ಮರದ ಬೇರಿಗೆ ನೀರೆರೆದಾಗ ಮರದ ರೆಂಬೆಗಳಲ್ಲಿ ಫಲಪುಷ್ಪ ಸಮೃದ್ಧಿಯಾಗುತ್ತದೆ. ಹಣ್ಣು ಬಯಸಿದವ ರೆಂಬೆಗೆ ನೀರೆರೆಯದೆ ಬೇರಿಗೆ ನೀರೆರೆಯಬೇಕು. ಅದರಂತೆ ಜಗದ್ವೃಕ್ಷಕ್ಕೆ ಮೂಲಕಾರಣನಾದ ಭಗವಂತನಲ್ಲಿ ಭಕ್ತಿಜಲಧಾರೆ ಹರಿಸಿದಾಗ ನಮ್ಮ ಜೀವನದ ಫಲವಾದ ಮೋಕ್ಷವನ್ನು ಹೊಂದುತ್ತೇವೆ.

'ಪ್ರಾಣೋಪಹಾರಾಚ್ಚ' ಎಂದು ಮತ್ತೊಂದು ದೃಷ್ಟಾಂತವನ್ನು ಕೊಟ್ಟಿದ್ದಾರೆ.

ನಮ್ಮ ಇಂದ್ರಿಯಗಳೆಲ್ಲವೂ ಕ್ರಿಯಾಶೀಲವಾಗ(ತೃಪ್ತಿಹೊಂದ)ಬೇಕಿದ್ದರೆ ಏನು ಮಾಡಬೇಕು?

ಹೊಟ್ಟೆ ತುಂಬಬೇಕು. ಹೊಟ್ಟೆ ತುಂಬದೆ ಇಂದ್ರಿಯಗಳು ಚಲಿಸವು.

ಒಮ್ಮೆ ಇಂದ್ರಿಯಗಳೆಲ್ಲವೂ ಆಲೋಚಿಸಿದವಂತೆ.

'ನಾವೆಲ್ಲರೂ ಎಷ್ಟು ಕ್ರಿಯಾಶೀಲರು. ಕಾಲು ನಡೆದರೆ, ಕೈ ದುಡಿಯುತ್ತದೆ. ಕಣ್ಣು ನೋಡುತ್ತದೆ. ಕಿವಿ ಕೇಳುತ್ತದೆ. ಹೀಗೆ ನಾವೆಲ್ಲರೂ ಕ್ರಿಯಾಶೀಲರಾಗಿದ್ದೇವೆ. ಆದರೆ ಹೊಟ್ಟೆಯೊಂದೇ ಆಲಸಿಯಾಗಿ ಕುಳಿತುಕೊಂಡಿದೆ. ಸೋಮಾರಿಯಾದ ಹೊಟ್ಟೆಯನ್ನು ತುಂಬಿಸಲು ನಾವೇಕೆ ದುಡಿಯಬೇಕು? ಎಂದು ಮುಷ್ಕರ (Strike) ಹೂಡಿದವಂತೆ.

ಕಣ್ಣು ಆಹಾರದ ಕಡೆ ನೋಡಲಿಲ್ಲ ಕಾಲ್ಗಳು ಚಲಿಸಲಿಲ್ಲ. ಕೈ ತರಲಿಲ್ಲ. ಕಡೆಗೆ ಹೊಟ್ಟೆಗೆ ಊಟವಿಲ್ಲ. ದಿನಗಳು ಒಂದು, ಎರಡು, ಮೂರರಂತೆ ಕಳೆದವು. ಕೈಗಳು ಸೋತುಬಿದ್ದವು. ಕಾಲ್ಗಳು ಜಾರಿಬಿದ್ದವು. ಕಣ್ಗಳು ಒಳಗಿಳಿದವು. ಹೊಟ್ಟೆಗೆ ಆಹಾರ ಕೊಡದ ಇಂದ್ರಿಯಗಳೆಲ್ಲವೂ ಬಳಲಿದವು. ಈವಾಗ ಇಂದ್ರಿಯಗಳಿಗೆ ಎಚ್ಚರವಾಯಿತು.

ನಮ್ಮಂತೆ ಹೊಟ್ಟೆಯೂ ಕ್ರಿಯಾಶೀಲವಾಗಿದೆ. ಅದರಿಂದಲೇ ನಾವೆಲ್ಲರೂ ಬದುಕಿದ್ದೇವೆ. ಹೊಟ್ಟೆ ತುಂಬಿದರೆ ನಮ್ಮ ಚೇಷ್ಟೆ –ಎಂಬ ಜ್ಞಾನೋದಯವು ಇಂದ್ರಿಯಗಳಿಗಾಯಿತೆಂಬ ಕಥೆಯಿದೆ.

ಅದರಂತೆ ಧರ್ಮ ಮತ್ತು ದೇವರ ವಿಷಯದಲ್ಲಿಯೂ ಹೀಗೆಯೇ ಪ್ರಶ್ನಿಸುವವರಿದ್ದಾರೆ. ನಾವು ಧರ್ಮಕ್ಕಾಗಲೀ ದೇವರಿಗಾಗಲೀ ಏಕೆ ಮನ್ನಣೆ ನೀಡಬೇಕು? ಧರ್ಮದಿಂದಾಗಲೀ ದೇವರಿಂದಾಗಲೀ ನಮಗೇನು ಲಾಭ? ಎಂದು ಕೇಳುವವರಿದ್ದಾರೆ. ಅವರಿಗೆ ಇದೇ ಉತ್ತರ.

ಉದರಕ್ಕೆ ಆಹಾರಕೊಡದ ಇಂದ್ರಿಯಗಳ ಸ್ಥಿತಿ ಗಂಭೀರವಾದಂತೆ, ಧರ್ಮಕ್ಕೆ ದೇವರಿಗೆ ನಮ್ಮ ಜೀವನದಲ್ಲಿ ಸ್ಥಾನ ಕೊಡದಿದ್ದರೆ ನಮ್ಮ ಜೀವನವೇ ಸ್ತಬ್ಧವಾಗುತ್ತದೆ. ಕ್ರಿಯೆಗಳೇ ನಿಂತುಹೋಗುತ್ತವೆ. ಹೊಟ್ಟೆಗೆ ಆಹಾರವಿಲ್ಲದೆ ಚೇಷ್ಟೆ ಇಲ್ಲ. ಜೀವನದಲ್ಲಿ ದೇವರಿಲ್ಲದಿರೆ ಬದುಕೇ ಸಾಗದು.

'ಜನಸೇವೆಯೇ ಜನಾರ್ದನನ ಸೇವೆ' ಎಂಬುದು ಒಂದು ಮುಖವಾದರೆ; 'ಜನಾರ್ದನನ ಸೇವೆಯೇ ಜನಸೇವೆ' ಎಂಬುದು ಮತ್ತೊಂದು ಮುಖ. ಈ ಎರಡನೇ ಮುಖವನ್ನೂ ನಾವು ಕಾಣಬೇಕು.

'ಹರಿರ್ಯತ್ರ ಗೃಹೇ ಭುಂಕ್ತೇ ತತ್ರ ಭುಂಕ್ತೇ ಜಗತ್ತ್ರಯಮ್' ಹರಿನಿವೇದನೆಯೇ ಸರ್ವಭೂತಗಳಿಗೆ ಮಾಡುವ ಉಪಕಾರ ಎಂದು ಭಾವಿಸಬೇಕು. ದೇವರ ಆರಾಧನೆಯಿಂದಲೇ ಜಗತ್ತಿನ ಸೌಖ್ಯ ಎಂಬುದನ್ನು ಮನಗಾಣಬೇಕು ಎಂಬಲ್ಲಿಗೆ ಚತುರ್ಥ ಸ್ಕಂಧವು ಲಕ್ಷ್ಮೀಹಯಗ್ರೀವನಿಗೆ ಸಮರ್ಪಿತವಾಯಿತು.

ಶ್ರೀಮಧ್ವೇಶಾರ್ಪಣಮಸ್ತು.

# ಅಥ ಪಂಚಮ ಸ್ಕಂಧಃ

## ಜಿತೇಂದ್ರಿಯನೆಲ್ಲಿದ್ದರೇನು?

ಪಂಚಮ ಸ್ಕಂಧವು ಮನುವಿನ ಮಗನಾದ ಪ್ರಿಯವ್ರತನ ವೃತ್ತಾಂತದಿಂದ ಆರಂಭವಾಗುತ್ತದೆ.

ಒಂದು ದಿನ ಸ್ವಾಯಂಭುವ ಮನುವು ಮಗನಾದ ಪ್ರಿಯವ್ರತ ರಾಜನಿಗೆ ರಾಜ್ಯವನ್ನು ಸ್ವೀಕರಿಸಲು ಹೇಳಿದ. ಆದರೆ ನಾರದರ ಉಪದೇಶದಿಂದ ಅತ್ಯಂತ ವಿರಕ್ತನಾದ ಪ್ರಿಯವ್ರತನು ತಂದೆಯ ಮಾತನ್ನು ಸ್ವೀಕರಿಸಲಿಲ್ಲ. "ರಾಜ್ಯರಕ್ಷಣೆಯ ಜವಾಬ್ದಾರಿಯಿಂದ ಭಗವದ್ಧ್ಯಾನವು ಕೈಗೂಡದು. ಆದ್ದರಿಂದ ನಾನು ಸನ್ಯಾಸಿಯಾಗುತ್ತೇನೆ. ನನಗೆ ರಾಜ್ಯ ಬೇಡ" ಎಂದ. ಮನುವಿನ ಮಾತನ್ನು ಪ್ರಿಯವ್ರತ ಅನುಮೋದಿಸದಿದ್ದಾಗ ಸ್ವತಃ ಬ್ರಹ್ಮದೇವರೇ ಬಂದು ಉಪದೇಶಿಸುತ್ತಾರೆ.

'ರಾಜ್ಯರಕ್ಷಣೆಯಲ್ಲಿಯೇ ಮುಳುಗಿದವ ಅಧ್ಯಾತ್ಮಪದವಿಯನ್ನು ಏರುವುದು ಹೇಗೆ? ದೇಶದ ಹೊಣೆಗಾರಿಕೆಯಲ್ಲಿ ಜೀವನ ಸವೆಸುವುದು ಎಷ್ಟು ಉಚಿತ? ಆದ್ದರಿಂದ ಅಧ್ಯಾತ್ಮದ ದಾರಿಗೆ ಅಡ್ಡಗಾಲಿನಂತಾದ ರಾಜ್ಯಭಾರವನ್ನು ಭರಿಸಲಾರೆ. ಕಾಡಿಗೆ ಹೋಗಿ ಹರಿಧ್ಯಾನರತನಾಗಿ ಸಾಧನೆ ಮಾಡಿಕೊಳ್ಳುತ್ತೇನೆ' ಎಂಬುವುದೇ ಪ್ರಿಯವ್ರತನ ದೃಷ್ಟಿಯಾಗಿತ್ತು.

ಆದರೆ ಪ್ರಿಯವ್ರತನ ಸಾಧನೆಯನ್ನರಿತ ಬ್ರಹ್ಮದೇವರು ಮೌಲಿಕವಾದ ಉಪದೇಶವನ್ನು ನೀಡುತ್ತಾರೆ–

ಪ್ರತಿಯೊಬ್ಬ ವ್ಯಕ್ತಿಗೂ ತಮ್ಮ ತಮ್ಮ ಕರ್ತವ್ಯಗಳಿವೆ. ಅವುಗಳನ್ನಾಚರಿಸಿ ಹರಿಗರ್ಪಿಸುವುದೇ ತಪಸ್ಸು. ನೀನು ಕಾಡಿಗೆ ಹೋದಮಾತ್ರಕ್ಕೆ ತಪಸ್ವಿಯಾಗಲಾರೆ. ವಿಷಯಾಸಕ್ತನಾದವ ಕಾಡಿಗೆ ನಡೆದರೂ ಸಾಧಕನಾಗಲಾರ ಎನ್ನುತ್ತಾರೆ–

ಭಯಂ ಪ್ರಮತ್ತಸ್ಯ ವನೇಷ್ವಪಿ ಸ್ಯಾತ್
ಯತಃ ಸ ಆಸ್ತೇ ಸಹ ಷಟ್ ಸಪತ್ನಃ ।
ಜಿತೇಂದ್ರಿಯಸ್ಯಾತ್ಮರತೇರ್ಬುಧಸ್ಯ
ಗೃಹಾಶ್ರಮಃ ಕಿಂ ನು ಕರೋತ್ಯವದ್ಯಮ್ ॥

— (೫–೧–೧೭)

ನಿನ್ನೊಳಗಿರುವ ಆರುಮಂದಿ ಕಾಮಾದಿಗಳು ಕಾಡಿಗೆ ನಡೆದರೂ ಬಿಡರು. ಕಾಮ ಬಿಡದೆ ಜಿತೇಂದ್ರಿಯನಾಗದವ ಕಾಡಿಗೆ ಹೋದರೂ ನಾಡನ್ನೇ ಬಯಸಿಯಾನು. ಇವನಿಗೆ ಕಾಡೇಕೆ? ಜಿತೇಂದ್ರಿಯನಾದವ ನಾಡಿನಲ್ಲಿದ್ದರೂ ಯೋಗಿಯಂತಿರಲು ಕಾಡಿಗೆ ಏಕೆ ಹೋಗಬೇಕು? ಆದ್ದರಿಂದ ಅರಮನೆಯ ವಾಸವು ನಿನಗೆ ಅಡ್ಡಿಯಾಗದು. ಜಳ್ಳು ನಿರ್ಧಾರವನ್ನು ಕೈಬಿಡು ಎಂದ.

ಇದು ನಾವೆಲ್ಲರೂ ಗಮನಿಸಬೇಕಾದ ಅಂಶ.

ನಮ್ಮ ಸಿದ್ಧಾಂತದಲ್ಲಿ ಸನ್ಯಾಸಿಗೆ ಮಾತ್ರ ಮೋಕ್ಷವೆಂದಿಲ್ಲ.

ಸಂಸಾರಿಯಾದವನೂ ಭಗವದ್ಭಕ್ತನಾಗಿ ಜಿತೇಂದ್ರಿಯನಾಗಿದ್ದರೆ ಗೃಹಸ್ಥಾಶ್ರಮ ಮಾಡಿದ ತೊಂದರೆಯಾದರೂ ಏನು?

ಮನೋನಿಗ್ರಹ, ಕರ್ತವ್ಯಪ್ರಜ್ಞೆ, ಭಗವದ್ಭಕ್ತಿ ಉಳ್ಳವ ಎಲ್ಲಿದ್ದರೂ ಸಾಧಕನೇ ಸರಿ. ಇವುಗಳಿಲ್ಲದವ ಎಲ್ಲಿದ್ದರೂ ಅಜಿತೇಂದ್ರಿಯನೇ ಆಗಿರುತ್ತಾನೆ.

ಒಬ್ಬ ಧಾರ್ಮಿಕ ರಾಜನಿದ್ದ. ಅವನ ಬಳಿ ಒಬ್ಬ ಯೋಗಿ ಬಂದ. ಬಂದವನೇ ರಾಜನನ್ನು ಕೇಳಿದ– "ರಾಜನೇ! ನಿನ್ನನ್ನು ಸಾಧಕನೆನ್ನುತ್ತಾರೆ. ನಿರಂತರ ರಾಜ್ಯರಕ್ಷಣೆಯಲ್ಲಿಯೇ ಕಾಲಕಳೆಯುತ್ತಿರುವ ನಿನಗೆ ಎಲ್ಲಿಯ ಸಮಯ? ಎಲ್ಲಿಯ ಸಾಧನೆ? ಜ್ಞಾನ ಆದ ಬಗೆ ಹೇಗೆ? ಎಂದೆಲ್ಲಾ ಪ್ರಶ್ನಿಸಿದ.

ರಾಜನು ನೇರ ಉತ್ತರ ನೀಡಲಿಲ್ಲ. ಯೋಗಿಯನ್ನು ಬಳಿ ಕರೆದ. ಕೈಗೊಂದು ದೀಪ ಕೊಟ್ಟು ಹೇಳಿದ– "ಯೋಗಿಯೇ! ನಿನ್ನ ಪ್ರಶ್ನೆಗೆ ಮತ್ತೆ ಉತ್ತರಿಸುತ್ತೇನೆ. ಈಗ ಈ ದೀಪ ಹಿಡಿದು ನನ್ನ ಅರಮನೆಯಲ್ಲೆಲ್ಲಾ ಸಂಚರಿಸು. ಚಿತ್ರವಿಚಿತ್ರವಾದ ವಸ್ತುಗಳಿವೆ. ಅವುಗಳೆಲ್ಲವನ್ನೂ ಈ ಬೆಳಕಿನ ಸಹಾಯದಲ್ಲಿ ನೋಡಿ ಬಾ ಎಂದ. (ಇಂದೂ ಅಜಂತಾಲಯಕ್ಕೆ ಹೋದರೆ ದೀಪ ಹಿಡಿದೇ ಹೋಗುತ್ತಾರೆ.) ಆದರೆ ನಿನಗೆ ಒಂದು ಎಚ್ಚರಿಕೆ. "ನೀನು ಕೈಯಲ್ಲಿ ಹಿಡಿದ ದೀಪ ನಂದಬಾರದು' ಎಂದು ಹೇಳಿ ಕಳುಹಿಸಿದ.

ಯೋಗಿ ಎಲ್ಲೆಡೆಯೂ ತಿರುಗಿಬಂದ. ರಾಜ ಕೇಳಿದ 'ಎಲ್ಲವನ್ನೂ ನೋಡಿದೆಯಾ?

ಯೋಗಿ: ಇಲ್ಲ.

ರಾಜ: ಏಕೆ?

ಯೋಗಿ: ರಾಜನೇ! ನೀನು ದೀಪ ಆರಬಾರದೆಂದು ಹೇಳಿದೆ. ನನ್ನ ಗಮನವೆಲ್ಲವೂ ದೀಪದ ಕಡೆಯೇ ಹೋಗಿ, ನೋಡಿದರೂ ನೋಡಿದಂತಾಗಲಿಲ್ಲ ಎಂದ.

ಈಗ ನಿನ್ನ ಪ್ರಶ್ನೆಗೂ ಇದೇ ಉತ್ತರ ಎಂದ ರಾಜ.

ನಾನು ಜ್ಞಾನಿ ಆದದ್ದೂ ಹೀಗೆಯೇ. ರಾಜ್ಯವನ್ನೆಲ್ಲಾ ನೋಡುತ್ತಿದ್ದರೂ ನೋಡದವನಂತೆಯೇ ಇದ್ದೇನೆ. ನನ್ನ ಬಳಿಯೂ ಒಂದು ದೀಪವಿದೆ. ಭಗವದ್ ಧ್ಯಾನ, ಕರ್ತವ್ಯ, ಭಕ್ತಿ ಎಂಬ ದೀಪ. ಈ ದೀಪವು ನಂದಬಾರದೆಂಬ ಎಚ್ಚರ ನನಗಿದೆ. ಆದ್ದರಿಂದ ಇಷ್ಟೆಲ್ಲಾ ರಾಜ್ಯದ ವ್ಯವಹಾರಗಳ ಮಧ್ಯದಲ್ಲಿದ್ದರೂ ಇಲ್ಲದವನಂತಿರುವೆ ಎಂದ.

ಬ್ರಾಹ್ಮಣ ಪ್ರಿಯವ್ರತನಿಗೂ ಹೀಗೆಯೇ ಹೇಳಿದ. ಕರ್ತವ್ಯ, ಜ್ಞಾನ, ಭಕ್ತಿಗಳೆಂಬ ಮೂರನ್ನು ಹೊಂದಬೇಕು. ಇವುಗಳನ್ನು ಜೀವನದಲ್ಲಳವಡಿಸಿಕೊಂಡವ ಎಲ್ಲಿದ್ದರೇನು? ನಮ್ಮ ಪ್ರಾಮಾಣಿಕ ನೈತಿಕಬಲವೇ ಅಧ್ಯಾತ್ಮ ದಾರಿಯ ದೀಪ!!

## ಋಷಭೋಪದೇಶ

ಋಷಭದೇವರು ನಾಭಿರಾಜನ ಮಗನಾಗಿ ಅವತರಿಸಿದರು. ವೀರ್ಯ ಶೌರ್ಯಗಳಿಂದ ಓಜಸ್ಸು ಯಶಸ್ಸುಗಳಿಂದ ಕಂಗೊಳಿಸುತ್ತಿರುವ ಮಗನಿಗೆ ಋಷಭ ಎಂದು ನಾಮಕರಣ ಮಾಡಿದ. ಋಷಭದೇವನ ಸದ್ಗುಣಗಳಿಂದ ಸುಜನರೆಲ್ಲರೂ ಆಕರ್ಷಿತರಾಗಿದ್ದರು. ಪ್ರಜೆಗಳಿಗೆ ಮಗನ ಮೇಲಿರುವ ಅನುರಾಗವನ್ನು ಮನಗಂಡ ನಾಭಿರಾಜನು ಸ್ವಲ್ಪ ಸಮಯದ ಅನಂತರ ಋಷಭದೇವನನ್ನೇ ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕ ಮಾಡಿದನು. ತಾನು ಬದರಿಕಾಶ್ರಮಕ್ಕೆ ತೆರಳಿ ಮೇರು ದೇವಿ ಯಿಂದ ಕೂಡಿ ನರನಾರಾಯಣನನ್ನು ಧ್ಯಾನಮಾಡುತ್ತಾ ಸದ್ಗತಿಯನ್ನು ಹೊಂದಿದನು.

ಇತ್ತ ಋಷಭದೇವ ಲೋಕಶಿಕ್ಷಣಕ್ಕಾಗಿ ಗುರುಕುಲವಾಸ ಮುಂತಾದ ಬ್ರಹ್ಮ ಚಾರಿಯ ಧರ್ಮಗಳನ್ನೆಲ್ಲ ಅನುಸರಿಸಿ ಇಂದ್ರನಿಂದ ಜಯಂತಿಯನ್ನು ಸ್ವೀಕರಿಸಿದನು. ಅವಳಿಂದ ಪರಮಧಾರ್ಮಿಕರಾದ ನೂರುಮಂದಿ ಮಕ್ಕಳನ್ನು ಪಡೆದನು. ನೂರು ಜನರಲ್ಲಿ ಜ್ಯೇಷ್ಠಪುತ್ರನಾದ ಭರತ ಶ್ರೇಷ್ಠ ಗುಣಗಳಿಂದಲೂ ವರಿಷ್ಠನಾಗಿದ್ದನು. ಭರತನಿಂದಲೇ ನಮ್ಮ ದೇಶ ಭಾರತವೆನಿಸಿದ್ದು. ಋಷಭನ ಧರ್ಮಬುದ್ಧಿಯು ಸಮಸ್ತ ಸಜ್ಜನರ ಮನಸ್ಸನ್ನೂ ನಿರ್ಮಲಗೊಳಿಸಿತ್ತು. ಋಷಿ ಮುನಿಗಳೂ ತಲೆದೂಗುವ ಹರಿಗುರುಗಳಲ್ಲಿ ದೃಢಭಕ್ತಿಯನ್ನು ಹುಟ್ಟಿಸುವ ಉಪದೇಶಗಳನ್ನು ಅವನು ನೀಡಿದನು.

ಸಂಸಾರದಲ್ಲಿ ಆಸಕ್ತರಾಗಿ ವಿವೇಕಹೀನರಾದ ಸಜ್ಜನರಿಗೆ ಬಿಡುಗಡೆಯ ದಾರಿ ಯನ್ನೂ, ವಿಷಯಭೋಗದಲ್ಲಿಯೇ ಮಗ್ನರಾದರೆ ಅದರಿಂದಾಗುವ ಅನರ್ಥವನ್ನೂ ತಿಳಿಸಿಕೊಡುತ್ತಾನೆ.

**ಮಹತ್ಸೇವಾಂ ದ್ವಾರಮಾಹುರ್ವಿಮುಕ್ತೇಃ**
**ತಮೋ ದ್ವಾರಂ ಯೋಷಿತಾಂ ಸಂಗಿಸಂಗಮ್ ।**
**ಮಹಾಂತಸ್ತೇ ಸಮಚಿತ್ತಾಃ ಪ್ರಶಾಂತಾಃ**
**ವಿಮನ್ಯವಃ ಸುಹೃದಃ ಸಾಧವೋ ಯೇ ॥** — (೫-೫-೨)

ನಿತ್ಯವೂ ಹರಿಧ್ಯಾನದಿಂದ ಚಿತ್ತಶುದ್ಧಿಯನ್ನು ಹೊಂದಿದ ಸಜ್ಜನರ ಸಂಗ, ಅವರ ಸೇವಾ ವೈಕುಂಠಪಥಕ್ಕೆ ಹೇತುವಾಗುವುದು. ನಿತ್ಯವೂ ವಿಷಯಲಂಪಟರಾದವರ ಸಹವಾಸವು ಅಧಃಪತನಕ್ಕೆ ನಾಂದಿಯಾಗುವುದು. ನಿತ್ಯವೂ ಹರಿಚಿಂತನಾಸಕ್ತರಾದ, ಮಾತ್ಸರ್ಯರಹಿತರಾದ, ರಾಗಾದಿಗಳಿಗೆ ವಶರಾಗದ, ಸಿಟ್ಟನ್ನು ಬಿಟ್ಟ, ಶಾಂತ ಸ್ವಭಾವದ, ವಿಹಿತ ಸತ್ಕರ್ಮಸಾಧನಶೀಲರಾದವರೇ ಸಜ್ಜನರು.

## ಲಿಂಗದೇಹ ಭಂಗವಾಗಲಿ

ಸಂಸಾರದಿಂದ ನಿತ್ಯ ಬಿಡುಗಡೆಯನ್ನು ಹೊಂದಬೇಕಿದ್ದರೆ ಅದಕ್ಕೆ ಕಾರಣವಾದ ಲಿಂಗಶರೀರವನ್ನು ಬಿಡಬೇಕು. ಲಿಂಗಶರೀರವನ್ನು ಬಿಡುವ ಉಪಾಯವೇನೆಂದು ಉಪದೇಶಿಸುತ್ತಾನೆ–

ಸರ್ವತ್ರ ಮದ್ಭಾವವಿಚಕ್ಷಣೇನ
ಜ್ಞಾನೇನ ವಿಜ್ಞಾನ ವಿರಾಜಿತೇನ ।
ಯೋಗೇನ ಧೃತ್ಯುದ್ಯಮ ಸತ್ವಯುಕ್ತೋ
ಲಿಂಗಂ ವ್ಯಪೋಹೇತ್ಕುಶಲೋऽಹಮಾಖ್ಯಮ್ ॥

— (೫-೫-೧೩)

'ಸರ್ವೋತ್ತಮನಾದ ಶ್ರೀಹರಿಯು ಸರ್ವತ್ರ ವ್ಯಾಪ್ತನಾಗಿದ್ದಾನೆ ಎಂಬ ಜ್ಞಾನವುಳ್ಳವ ವಿಜ್ಞಾನ, ಧ್ಯಾನ, ವೈಷ್ಣವಸಿದ್ಧಾಂತದಲ್ಲಿ ದೃಢತೆ ಇವುಗಳಿಂದ ಕೂಡಿದವ; ಸಾತ್ವಿಕನಾದ ನಿರಹಂಕಾರಿಯು ಅಹಂಕಾರವೆಂಬ ಲಿಂಗಶರೀರವನ್ನು ಬಿಡುತ್ತಾನೆ'.

ಋಷಭನ ಈ ಉಪದೇಶದಲ್ಲಿ ಉಕ್ತವಾದ ಜ್ಞಾನ, ವಿಜ್ಞಾನಗಳೆಂದರೇನು? ಎಂಬುದನ್ನು ಶ್ರೀಮದಾಚಾರ್ಯರು ಪ್ರಮಾಣಶ್ಲೋಕಗಳಿಂದ ವಿವರಿಸಿದ್ದಾರೆ.

ಸರ್ವಸ್ಮಾದುತ್ತಮೋ ವಿಷ್ಣುರಿತಿಜ್ಞಾನಮುದಾಹೃತಮ್ ।
ಪ್ರತಿ ಜೀವಂ ಯೇನ ಮುಕ್ತಿಸ್ತದ್ವಿಜ್ಞಾನಂ ವಿದಾಂ ಮತಮ್ ॥
ಜ್ಞಾನಂ ವಿಷ್ಣೋರುತ್ತಮತ್ವೇ ತದೇವ ಪ್ರತಿಪೂರುಷಮ್ ।
ವಿಶೇಷೇಣ ತು ವಿಜ್ಞಾನಂ ತಚ್ಚ ಜಾನಾತಿ ಸರ್ವವಿತ್ ॥

— (ಭಾ. ತಾ. ನಿ., ೫-೫-೧೩)

'ಬ್ರಹ್ಮರುದ್ರಾದಿ ಸಮಸ್ತ ದೇವತೆಗಳಿಗೂ ಒಡೆಯನಾದವ ವಿಷ್ಣು' ಎಂಬ ತಿಳುವಳಿಕೆಯೇ ಜ್ಞಾನ ಎನಿಸಿದೆ. ಈ ಜ್ಞಾನವೇ ಮೋಕ್ಷಕ್ಕೆ ಪ್ರತಿ ಜೀವರಿಗೂ ಅನುಕೂಲವಾಗಿದೆ. ಯಾವ ಜ್ಞಾನದಿಂದ ಜೀವರು ಮುಕ್ತರಾಗುತ್ತಾರೆಯೋ ಅದನ್ನು ವಿಜ್ಞಾನ ಎನ್ನುತ್ತಾರೆ'.

ಇದಕ್ಕೊಂದು ಸಂವಾದಿಯಾಗಿ ದೃಷ್ಟಾಂತವನ್ನು ನೀಡಬಹುದು.

ಲಕ್ಷ್ಮಣನಿಗೂ ಅತಿಕಾಯನಿಗೂ ಒಮ್ಮೆ ಭಯಂಕರ ಯುದ್ಧ ನಡೆಯಿತು. ಅತಿಕಾಯನು ಮಹಾಬಲಶಾಲಿಯಾಗಿದ್ದ. ಲಕ್ಷ್ಮಣ ಲಕ್ಷ್ಯವಿಟ್ಟು ಬಾಣಬಿಟ್ಟ. ಅತಿಕಾಯನ ಎರಡು ಕೈಗಳನ್ನು ತಲೆಯನ್ನು ಕತ್ತರಿಸಿದ.

ವರಬಲ ಪಡೆದ ಅತಿಕಾಯನಿಗೆ, ನಾಲ್ಕು ಕೈ, ಎರಡು ಮುಖ ಮೂಡಿದವು. ಎಷ್ಟು ಕಳೆದುಕೊಳ್ಳುತ್ತಾನೆಯೋ ಅದರ ದ್ವಿಗುಣಿತವಾದ ಫಲ ಮರಳಿಬರಬೇಕೆಂಬುದೇ ಅವನ ವರವಾಗಿತ್ತು.

ಲಕ್ಷ್ಮಣ ಮತ್ತೆ ಬಾಣಬಿಟ್ಟ. ಕೈಮುಖಗಳನ್ನು ಕತ್ತರಿಸಿದ. ಎಂಟು ಕೈ ನಾಲ್ಕು ತಲೆಗಳು ತಲೆ ಎತ್ತಿದವು. ಕತ್ತರಿಸಿದಂತೆಯೇ ಎತ್ತರವಾಗಿ ಬೆಳೆದ. ಲಕ್ಷ್ಮಣನಿಗೆ ಅತಿಕಾಯನನ್ನು ಕೊಲ್ಲುವುದೇ ಅತಿಕಾಯಕವಾಯಿತು. ಚಿಂತಾಕ್ರಾಂತನಾದ.

ಅತಿಕಾಯನ ಸಂಹಾರಕ್ಕೆ ಕೊನೆಗೊಂದೇ ಉಪಾಯವೆಂದು ನಿರ್ಧರಿಸಿದ. ಬ್ರಹ್ಮಾಸ್ತ್ರವನ್ನು ಹೃದಯಕ್ಕೆ ಗುರಿಯಿಟ್ಟು ಬಿಟ್ಟ. ಅತಿಕಾಯ ಪ್ರಾಣಬಿಟ್ಟ.

ನಮ್ಮೆಲ್ಲರ ಕರ್ಮಗಳೂ ಈ ಅತಿಕಾಯನಂತೆಯೇ. ಒಂದು ಕರ್ಮವನ್ನು ಕಳೆದು ಕೊಳ್ಳಲು ಹೋದರೆ ಇನ್ನೆರಡು ಬೇರೆ ಕರ್ಮಗಳು ಹುಟ್ಟಿಕೊಳ್ಳುತ್ತವೆ. ಎರಡನ್ನು ಭೋಗಿಸ ಹೊರಟರೆ ನಾಲ್ಕು. ಮತ್ತೆ ೮, ೧೬ ಹೀಗೆ ಬೆಳೆಯುತ್ತಾ ಹೋಗುತ್ತದೆ. ಕರ್ಮಕ್ಷಯವೇ ಇಲ್ಲ.

ನಮಗೂ ಕರ್ಮಕ್ಷಯಕ್ಕಿರುವುದು ಒಂದೇ ಉಪಾಯ. ಕರ್ಮವು ಬೆಳೆಯಲು ಮೂಲವಾದ ಹೃದಯವೆಂದರೆ ಆತ್ಮನನ್ನು ಆವರಿಸಿಕೊಂಡ ಲಿಂಗಶರೀರ. ಶರೀರ, ಕರ್ಮಗಳೆಲ್ಲವೂ ಅತಿಕಾಯನ ಕೈಕಾಲುಗಳಿದ್ದಂತೆ. ಒಂದು ಶರೀರ ಹೋದರೆ ಮತ್ತೊಂದು ಶರೀರ. ಒಂದು ಕರ್ಮ ನಾಶವಾಗುವುದರ ಒಳಗೆ ಅನೇಕ ಕರ್ಮಗಳ ಉದಯ. ಕರ್ಮದ ಹೃದಯವೆಂದರೆ ಲಿಂಗಶರೀರ. ಇದರೊಳಗೆ ಜೀವ ಬಂಧಿತ ನಾಗಿದ್ದಾನೆ. ಬೆಳಕಿನ ಪಂಜಿನಂತಿರುವ ಸ್ವಪ್ರಕಾಶನಾದ ಜೀವ ಲಿಂಗಶರೀರ ಬಂಧನದಿಂದ ಕರ್ಮಪಾಶಕ್ಕೆ ಬಿದ್ದ. ಹುಟ್ಟುಸಾವುಗಳೆಂಬ ಸುಳಿಗೆ ಸಿಕ್ಕಿದ. ಇದೆಲ್ಲದಕ್ಕೂ ಮೂಲಕಾರಣವಾದ ಲಿಂಗಶರೀರಕ್ಕೆ ನೇರವಾಗಿ ಭಗವದಪರೋಕ್ಷ ಜ್ಞಾನವೆಂಬ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಬೇಕು. ಸಾಕ್ಷಾತ್ಕಾರವಾದರೆ ಲಿಂಗಶರೀರ ಉಳಿಯದು. ಲಿಂಗಶರೀರ ಭಂಗವಾದರೆ ಕರ್ಮಕ್ಕೆ ಎಡೆಯೇ ಇಲ್ಲ. ಸಂಸಾರದ ಮೂಲ ಲಿಂಗಶರೀರ. ಇದನ್ನು ಕತ್ತರಿಸುವ ಬ್ರಹ್ಮಾಸ್ತ್ರ ಸಾಕ್ಷಾತ್ಕಾರ. ಇದಕ್ಕೆ ಸಾಧನ ಜ್ಞಾನ.

ಇಂತಹ ಅದ್ಭುತವಾದ ತತ್ವೋಪದೇಶವನ್ನು ಸಕಲ ಪ್ರಜೆಗಳಿಗೆ ರಾಜರಿಗೆ ನೀಡಿದ ಮಹಾನುಭಾವ ಋಷಭದೇವ.

## ತೌಳವ ದೇಶದಲ್ಲಿ ಋಷಭನ ಉಪದೇಶ

ತತ್ವಜ್ಞಾನವನ್ನು ಜಗತ್ತಿಗೆ ನೀಡಲೋಸುಗವೇ ಆದ ಅವತಾರ ಋಷಭಾವತಾರ.

ಋಷಭರೂಪಿ ಭಗವಂತನು ಜಗತ್ತಿನಾದ್ಯಂತ ಸಂಚರಿಸಿ ಕೊನೆಗೆ ಉಡುಪಿ ಜಿಲ್ಲೆಗೂ ಆಗಮಿಸಿದ್ದಾರೆ. ಭಾಗವತವೇ ಉಲ್ಲೇಖಿಸಿದೆ.

'ಕಾಂಕಟ ಕರ್ಣಾಟಕಾತ್ ದಕ್ಷಿಣಕರ್ನಾಟಕಾನ್' ಎಂದು ಹೇಳಿ ಈ ಜಿಲ್ಲೆಯಲ್ಲಿ ಎಲ್ಲಿದ್ದರು? ಎಂದರೆ 'ಕುಟಜಾಚಲೋಪವನೇ' ಎಂದಿದ್ದಾರೆ. ಕುಟಜಾಚಲವನ್ನು ಇಂದು 'ಕೊಡಚಾದ್ರಿ' ಎನ್ನುತ್ತಾರೆ. ಕೊಲ್ಲೂರು ಪ್ರದೇಶದಲ್ಲಿಯೇ ತಂಗಿ ತತ್ವೋಪ ದೇಶ ಮಾಡಿದ್ದಾರೆ. ಋಷಭದೇವರ ಪ್ರತಿಯೊಂದು ಮಾತೂ ಸಹ ತತ್ವಜ್ಞಾನದ ಕಂಪನ್ನು ಸೂಸುವ ಮಲ್ಲಿಗೆಯಂತಿವೆ. ಉದಾ:

**ಗುರುರ್ನ ಸ ಸ್ಯಾತ್ ಸ್ವಜನೋ ನ ಸ ಸ್ಯಾತ್**
**ಪಿತಾ ನ ಸ ಸ್ಯಾತ್ ಜನನೀ ನ ಸಾ ಸ್ಯಾತ್ ।**
**ದೈವಂ ನ ತತ್ಸ್ಯಾತ್ ನ ಪತಿಶ್ಚ ಸ ಸ್ಯಾತ್**
**ನ ಮೋಚಯೇದ್ಯಃ ಸಮುಪೇತಮೃತ್ಯುಮ್ ॥** — (೫-೫-೧೮)

ನಾವೆಲ್ಲರೂ ತಂದೆ, ತಾಯಿ, ಬಂಧು, ಒಳಗ ಮುಂತಾಗಿ ಹೇಳುತ್ತೇವೆ. ನಿಜವಾಗಿ ಯಾರು ತಂದೆ? ಯಾರು ತಾಯಿ? ಯಾರು ಬಂಧುಗಳು ಎಲ್ಲವನ್ನೂ ವಿಚಾರಮಾಡ ಬೇಕು. ದೇಹ ಬೆಳೆದ ಮಾತ್ರಕ್ಕೆ ತಂದೆತಾಯಿಯರೆನಿಸುವುದಿಲ್ಲ. ಅಭಿಮಾನ ಬೆಳೆಸಿದ ಮಾತ್ರಕ್ಕೆ ಬಂಧುಗಳಾಗುವುದಿಲ್ಲ. ಈ ಬೆಳವಣಿಗೆಗಿಂತ ಆತ್ಮನ ಬೆಳವಣಿಗೆಗೆ ಕಾರಣರಾದವರೇ ಮುಖ್ಯವಾಗಿರುತ್ತಾರೆ.

ಯಾರು ಸಂಸಾರದ ಅನರ್ಥವನ್ನು ತೋರಿಸುವುದಿಲ್ಲ. ಮಕ್ಕಳಿಗೆ ಭಕ್ತಿಮಾರ್ಗ ವನ್ನುಪದೇಶಿಸುವುದಿಲ್ಲ. ಅವನು ತಂದೆಯೇ ಅಲ್ಲ. ತಂದೆಯು ಮಗನಿಗೆ ಬೇಕಾದ ಲೌಕಿಕ ಶಿಕ್ಷಣವನ್ನು ನೀಡಿರಬಹುದು. ಉತ್ತಮ ಹುದ್ದೆಗೇರಿಸಿರಬಹುದು. ಏನು ಮಾಡಿದರೂ ಭಕ್ತಿಮಾರ್ಗ ತೋರಿಸದಿದ್ದರೆ ಅವನು ತಂದೆ ಎನಿಸಲಾರ. ಅಧ್ಯಾತ್ಮ ಮಾರ್ಗದಲ್ಲಿ ಕೊಂಡೊಯ್ಯದವ ಗುರುವಾಗಲಾರ. ಭಕ್ತಿರಸದೌತಣವ ನೀಡದ ತಾಯಿ ತಾಯಿಯಲ್ಲ. ಅಧ್ಯಾತ್ಮ ಬಾಂಧವ್ಯ ಬೆಳೆಸದ ಬಂಧುಗಳು ಬಂಧು ಗಳೆನಿಸರು. ಭಕ್ತಿಯ ಔನ್ನತ್ಯಕ್ಕೆ ಕಾರಣವಾಗದ ದೈವದಿಂದಲಾದರೂ ಏನು ಪ್ರಯೋಜನ? ಮೃತ್ಯುವಿನ ದವಡೆಯಿಂದ ಬಿಡಿಸಿಕೊಳ್ಳುವ ಉಪಾಯವನ್ನು ತಿಳಿಸದ ಗಂಡ ಗಂಡನೇ ಅಲ್ಲ. ಮೃತ್ಯುವಿನಿಂದ ತಪ್ಪಿಸಿ ಮೋಕ್ಷಮಾರ್ಗವನ್ನು ತೋರಿಸಿ ಆತ್ಮೋನ್ನತಿಗೆ ಕಾರಣನಾದವನೇ ತಂದೆ, ತಾಯಿ, ಬಂಧು, ಒಡೆಯ ಎಲ್ಲವೂ ಆಗಿರುತ್ತಾನೆ. ಈ ಋಷಭದೇವರ ಸಂದೇಶವನ್ನು ಎಲ್ಲಾ ಮಾತೆಯರೂ ಮಹನೀ ಯರೂ ಅರಿತುಕೊಳ್ಳಬೇಕು. ಮಕ್ಕಳ ಆತ್ಮೋನ್ನತಿಗೆ ಶ್ರಮಿಸಬೇಕು. ಮಕ್ಕಳ ಉನ್ನತಿ ಯಿಂದಲೇ ನಮ್ಮ ಉನ್ನತಿ. ಈ ಸಂಗತಿಯನ್ನರಿತಾಗಲೇ ನಮಗೆ ಪರಮಗತಿ.

## ಜಡಭರತೋಪಾಖ್ಯಾನ

ಮುಂದೆ ಮಹಾ ಭಗವದ್ಭಕ್ತನಾದ ಋಷಭನ ಮಗನಾದ ಭರತಚಕ್ರವರ್ತಿಯು ತಂದೆಯ ಆಜ್ಞೆಯಂತೆ ಉತ್ತಮ ರೀತಿಯಲ್ಲಿ ರಾಜ್ಯಪರಿಪಾಲನೆಯನ್ನು ಮಾಡಿದ. ದೇಶವನ್ನು ಸಂಪದ್ಭರಿತಗೊಳಿಸಿದ. ಬಾಹ್ಯ ಸಂಪತ್ತಿನ ಒಟ್ಟಿಗೆ ಆಂತರಿಕವಾದ ಭಕ್ತಿಸಂಪತ್ತನ್ನೂ ಅಭಿವೃದ್ಧಿಗೊಳಿಸಿದ. ಸತ್ಕರ್ಮದಲ್ಲಿಯೇ ನಿರಂತರ ಆಸಕ್ತನಾದ ಭರತನಿಗೆ ದಿನೇ ದಿನೇ ಭಗವದ್ ಭಕ್ತಿಯು ಅತ್ಯಧಿಕವಾಯಿತು. ಕೊನೆಗೊಂದು ದಿನ ತನ್ನ ಮಕ್ಕಳಿಗೆ ರಾಜ್ಯವನ್ನೊಪ್ಪಿಸಿ ತಪಸ್ಸಿಗಾಗಿ ಗಂಡಕೀ ನದಿಯ ಸಾಲಿಗ್ರಾಮಗಳಿಂದ ಪವಿತ್ರವಾದ ಪುಲಹಋಷಿಗಳ ಆಶ್ರಮಕ್ಕೆ ತೆರಳಿದ. ಈಗಿನ ನೇಪಾಳದಲ್ಲಿ ಸೇರಿದ ಪವಿತ್ರ ಕ್ಷೇತ್ರವೆನಿಸಿದ ಚಕ್ರನದೀತೀರದಲ್ಲಿ ಅತ್ಯಂತ ವಿರಕ್ತನಾಗಿ ನಿತ್ಯವೂ ತ್ರಿಕಾಲ ಸ್ನಾನಸಂಧ್ಯೆಗಳಿಂದ ಪವಿತ್ರ ಮಂಡಲದಲ್ಲಿ ಮಂಡಿಸಿದ ಭಗವಂತನನ್ನು ಆರಾಧಿಸುತ್ತಾ, ಕೆಂಜಟೆಯ ಕೆಂಗದಿರನಂತೆ ಕಂಗೊಳಿಸಿದ.

ಹೀಗೆಯೇ ಒಂದು ದಿನ ಚಕ್ರನದಿಯಲ್ಲಿ ಮಿಂದು ಧ್ಯಾನರತನಾದಾಗ ತುಂಬು ಗರ್ಭಿಣಿಯಾದ ಜಿಂಕೆಯೊಂದು ದಣಿವಾರಿಸಿಕೊಳ್ಳಲು ನದಿ ನೀರಿಗೆ ಬಾಯ್ದುಚ್ಚಿತು. ಇದೇ ಸಂದರ್ಭದಲ್ಲಿ ಭಯಂಕರವಾದ ಹುಲಿಯೊಂದು ಜೋರಾಗಿ ಗರ್ಜಿಸಿತು.

ಹುಲಿಯ ಗರ್ಜನೆ ಕೇಳಿದೊಡನೆಯೇ ನೀರು ಕುಡಿಯುತ್ತಿದ್ದ ಭಯಶೀಲವಾದ ಜಿಂಕೆಯು ಮತ್ತಷ್ಟು ಭಯದಿಂದ ದಿಗ್ಗನೆ ಹಾರಿತು. ರಭಸದಿಂದ ಹಾರಿದಾಗ ಹೊಟ್ಟೆಯೊಳಗಿನ ಭಾರವಾದ ಗರ್ಭ ನದಿಗರ್ಭಕ್ಕೆ ಚಿಮ್ಮಿತು. ವ್ಯಾಘ್ರದ ಭೀತಿ ಗರ್ಭದ ಮುಕ್ತಿಗಳಿಂದ ಜಿಂಕೆಯು ಪ್ರಾಣಬಿಟ್ಟಿತು.

ಇತ್ತ ಪ್ರವಾಹದಲ್ಲಿ ತೇಲಿಕೊಂಡು ಬರುತ್ತಿದ್ದ ಜಿಂಕೆಮರಿಯನ್ನು ಭರತನು ನೋಡಿದ. ಹುಟ್ಟುತ್ತಲೇ ಮೃತ್ಯುವಿನ ಆಕ್ರಮಣಕ್ಕೆ ತುತ್ತಾದ ಮರಿಜಿಂಕೆಯನ್ನು ಕಂಡ ಭರತನ ಹೃದಯ ಕರಗಿತು. ಅನಾಥ ಪ್ರಾಣಿಗೆ ಪ್ರಾಣದಾನ ಮಾಡಿದ. ಅನಾಥ ಬಂಧುವಿನ ಬಾಂಧವ್ಯ ಮರೆತು ಅನಾಥ ಪ್ರಾಣಿಯ ಬಾಂಧವ್ಯದ ಕೊಂಡಿ ಸಿಕ್ಕಿಸಿಕೊಂಡ. ಜಿಂಕೆಮರಿಯನ್ನು ಆಶ್ರಮಕ್ಕೆ ತಂದ ಹರಿಚಿಂತನೆ ಬಿಟ್ಟು ಹರಿಣಿ ಚಿಂತನೆಯಲ್ಲಿ ರತನಾದ. ಹರಿಣಿಯ ಪಾಲನೆ, ಪೋಷಣೆ, ಲಾಲನೆಗಳಲ್ಲಿ ಹಗಲಿರುಳುಗಳುರುಳಿದವು. ತುಲಸೀಪುಷ್ಪಗಳನ್ನು ತರುವಾಗಲೂ ಅದನ್ನು ಒಟ್ಟಿಗೆ ಕರೆದುಕೊಂಡು ಹೋಗುತ್ತಿದ್ದ. ಭರತನು ಮೊದಲು ಅದರ ಮೇಲೆ ಕರುಣೆ ತೋರಿದ. ಅನಂತರ ಆ ಕರುಣೆಯೇ ವ್ಯಾಮೋಹವಾಗಿ ಪರಿವರ್ತಿತವಾಯಿತು. ಇಲ್ಲಿ ನಾವು ಎಚ್ಚರವಹಿಸಬೇಕು –'ನಾವು ತೋರುವ ಕರುಣೆ ಎಂದೂ ಮೋಹವಾಗಿ ಪರಿಣಮಿಸಬಾರದು'. ಭರತ ಚಕ್ರವರ್ತಿಯು ಧ್ಯಾನಮಾಡಲು ಹೋಗಿ ಜಿಂಕೆಯ ಮೋಹಕ್ಕೆ ಬಲಿಯಾದ. ಇಂದಿನವರೆಲ್ಲ ನಾಯಿಯ ಮರಿಯನ್ನು ಹೆಗಲಮೇಲೆ ಹೊತ್ತುಕೊಂಡು ತಿರುಗುವಂತೆ, ತಾನು ಹೋಗುವಾಗಲೆಲ್ಲ ಜಿಂಕೆಯನ್ನು ಹೊತ್ತುಕೊಂಡು ಹೋಗುತ್ತಿದ್ದ. ಧ್ಯಾನಕ್ಕೆಂದು ಕುಳಿತರೂ ಜಿಂಕೆಯದ್ದೇ ಧ್ಯಾನ. ಜಿಂಕೆಯತ್ತಲೇ ಗಮನ. ಹೀಗೆಯೇ ಧ್ಯಾನವೆಲ್ಲ ಅಸ್ತವ್ಯಸ್ತವಾಯಿತು. ತಪಸ್ವಿಯಾಗಲು ಬಯಸಿದ ಭರತ ಮೋಹದ ಬಲೆಗೆ ಸಿಕ್ಕಿಬಿದ್ದ. ಜಿಂಕೆಮರಿ ಒಂದು ಕ್ಷಣ ಕಣ್ಮರೆಯಾದರೂ ವಿಲಾಪಮಾಡುತ್ತಿದ್ದ. ಹೀಗೆಯೇ ಜೀವನದ ಅಂತಿಮ ಘಟ್ಟಕ್ಕೆ ಕಾಲಿಟ್ಟ. ಮರಣ ಸಮೀಪಿಸಿದರೂ ಮೋಹ ಬಿಡಲಿಲ್ಲ. ಪ್ರಾಣದಾತನ ಮಮತೆಯ ಸಿಹಿಯನ್ನುಂಡ ಜಿಂಕೆಯು ರಾಜನಿಗಾಗಿ ಕೃತಜ್ಞತೆಯ ಕಣ್ಣೀರನ್ನು ಸುರಿಸಲಾರಂಭಿಸಿತು. ಇದರಿಂದ ಮತ್ತಷ್ಟು ಅದನ್ನೇ ಸ್ಮರಿಸುತ್ತಾ ಭರತನು ಮೃತ್ಯುವಿಗೆ ತುತ್ತಾದ. ಅಂತ್ಯಕಾಲದಲ್ಲಿ ಜಿಂಕೆಯನ್ನೇ ಸ್ಮರಿಸಿದ್ದರಿಂದ ಜನ್ಮಾಂತರದಲ್ಲಿ ಜಿಂಕೆಯಾಗಿಯೇ ಜನ್ಮ ತಾಳಿದ. ದೇವರನ್ನು ನೆನೆದು ಕೊನೆಯುಸಿರೆಳೆದಿದ್ದರೆ ದೇವರಂತೆಯೇ ಆಗುತ್ತಿದ್ದ.

ಶ್ರೀಕೃಷ್ಣನು ಗೀತೆಯಲ್ಲಿ ಹೇಳಿದ್ದಾನೆ–

**ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಮ್ ।**
**ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥** — (ಗೀತಾ. ೮–೬)

ಕೊನೆಯ ಕಾಲದಲ್ಲಿ ಯಾವ ಸ್ಮರಣೆಯಿಂದ ಕೂಡಿರುತ್ತಾನೋ ಜನ್ಮಾಂತರದಲ್ಲಿ ಅದೇ ದೇಹವನ್ನು ಪಡೆಯುತ್ತಾನೆ.

ನಾವು ದೇವರ ಸಚ್ಚಿದಾನಂದಮಯ ರೂಪವನ್ನು ನೆನೆದರೆ ದೇವರ ಹಾಗೆ ಚಿನ್ಮಯರಾಗುತ್ತೇವೆ. ಭಗವಂತನ ಸಾರೂಪ್ಯ ಸಾದೃಶ್ಯವನ್ನು ಪಡೆಯುತ್ತೇವೆ. ಜಿಂಕೆ

ಯನ್ನು ಸ್ಮರಿಸಿದ ಫಲವಾಗಿ ಜಿಂಕೆಯಾಗಿಯೇ ಭರತ ಹುಟ್ಟಿದ. ಆದರೆ ಕರ್ಮಜ ದೇವತೆಯಾದ ಭರತನಿಗೆ ಜಿಂಕೆಯಾದಾಗಲೂ ತನ್ನ ಪೂರ್ವಜನ್ಮದ ಸ್ಮರಣೆಯಿತ್ತು. ತಾನು ಹಿಂದಿನ ಜನ್ಮದಲ್ಲಿ ಮಾಡಿದ ಜನರ ಸೇವೆ, ಭಗವಂತನ ಸ್ಮರಣೆಗಳಿಗೆ ಫಲವಾಗಿ ಸ್ಮರಣಶಕ್ತಿಯನ್ನು ಹೊಂದಿದ್ದ ಭರತನು ಜಿಂಕೆಯಾಗಿದ್ದರೂ ಬೇರ ಜಿಂಕೆಗಳೊಂದಿಗೇ ಸೇರುತ್ತಿರಲಿಲ್ಲ. ಪ್ರತ್ಯೇಕವಾಗಿದ್ದುಕೊಂಡು ಭಗವಂತನ ಧ್ಯಾನ ಮಾಡುತ್ತಿದ್ದ. ಭರತನು ಪಶುವಾಗಿದ್ದಾಗಲೂ ಮನುಷ್ಯತ್ವವನ್ನು ಬೆಳೆಸಿಕೊಂಡ. ನಾವು ಮನುಷ್ಯರಾಗಿದ್ದಾಗಲೂ ಪಶುತ್ವವನ್ನೇ ಬೆಳೆಸಿಕೊಂಡಿದ್ದೇವೆ. ಭರತನು ಜಿಂಕೆಯಾಗಿ ದ್ದಾಗಲೂ ಮಾನವರಂತೆ ಧ್ಯಾನಾದಿಗಳನ್ನು ಆಚರಿಸಿ ಕೊನೆಗೆ ಸಾಲಗ್ರಾಮಕ್ಷೇತ್ರಕ್ಕೆ ಬಂದು ಕೊನೆಗೊಂದು ದಿನ ಪವಿತ್ರವಾದ ಗಂಡಕೀತೀರ್ಥದಲ್ಲಿ ತನ್ನ ತನುವನ್ನು ತ್ಯಾಗಮಾಡಿದ. ಹಿಂದಿನ ಸತ್ಕರ್ಮಗಳ ಫಲದಿಂದ ಬ್ರಾಹ್ಮಣನಾಗಿ ಹುಟ್ಟಿದ. ಭರತ ಚಕ್ರವರ್ತಿಯೇ ಜಡಭರತನೆನಿಸಿದ. ಲೋಕದ ದೃಷ್ಟಿಯಿಂದ ಜಡನಂತೆ ಇದ್ದ. ಭಗವದ್ಧ್ಯಾನಕ್ಕೆ ವಿಘ್ನ ಬಂದೀತೆಂದು ಅಭಿಮಾನವನ್ನು ಬಿಟ್ಟ. ಅಣ್ಣ ತಮ್ಮಂದಿರೆಲ್ಲರೂ ಇವನನ್ನು ನಿಷ್ಪ್ರಯೋಜಕ ಎಂದೇ ತೀರ್ಮಾನಿಸಿದ್ದರು. ಆದರೆ ತಂದೆಯು ಅಭಿಮಾನ ದಿಂದ ಕುಲೋಚಿತ ಸಂಸ್ಕಾರಗಳನ್ನು ನೀಡಿದ್ದನು. ಆದರೆ ಹುಟ್ಟುವಾಗಲೇ ಭಗವಂತನ ಸಾಕ್ಷಾತ್ಕಾರ ಪಡೆದ ಸಿದ್ಧಪುರುಷರ ಹಾಗೆ ಹುಟ್ಟಿದ ಜಡಭರತನಿಗೆ ತಂದೆಯ ಉಪದೇಶದ ಅಗತ್ಯವಿರಲಿಲ್ಲ. ಸಿಕ್ಕಿದರೆ ಸಿಕ್ಕಿದಲ್ಲಿ ಸಿಕ್ಕಿದ ಊಟ. ಅನ್ನವಾದರೂ ಸರಿ ಕದನ್ನವಾದaೂ ಸರಿ; ಅನ್ನವಿಲ್ಲದಿದ್ದರೂ ಸರಿಯೇ; ಚಳಿಯಾದರೂ ಸರಿ– ಬಿಸಿಯಾದರೂ ಸರಿ ಬಟ್ಟೆ ಧರಿಸದೆ ಎತ್ತಿನಂತೆ ತಿರುಗಾಡುತ್ತಿದ್ದ. ಜನರೆಲ್ಲರೂ ಹುಚ್ಚ, ಕಿವುಡ, ಮೂಕನೆಂದೆಲ್ಲ ಗೇಲಿಮಾಡುವಾಗ ಹಾಗೆಯೇ ನಟಿಸಿ ಅವರಿಗೆ ಸಂತೋಷ ನೀಡುತ್ತಿದ್ದ. ನೆಲದಲ್ಲಿ ಮಲಗಿ ಮೈಯೆಲ್ಲಾ ಮಣ್ಣಾಗಿತ್ತು. ಕಪ್ಪುವಸ್ತ್ರ, ಮಣ್ಣು ಮೆತ್ತಿದ ಜನಿವಾರ. ಕರೆದಲ್ಲಿಗೆ ನಡೆಯುತ್ತಿದ್ದ. ಒಟ್ಟಿನಲ್ಲಿ ಹೇಳುವುದಾದರೆ ಜಗತ್ತಿನ ಯಾವುದೇ ಸ್ತುತಿನಿಂದೆಗಳಿಗೆ ಕಿವಿಗೊಡದೆ ನಿಗೂಢನಾದ ಶ್ರೀಹರಿಯನ್ನು ಗುಪ್ತವಾಗಿ ಸ್ಮರಿಸುತ್ತಿದ್ದ.

ಒಮ್ಮೆ ಒಬ್ಬ ಶೂದ್ರರಾಜ ಸಂತಾನಭಾಗ್ಯಕ್ಕಾಗಿ ಭದ್ರಕಾಳಿಗೆ ನರಬಲಿ ಕೊಡ ಬೇಕೆಂದು ಸಂಕಲ್ಪಿಸಿದ. ನಿಗದಿತ ಮನುಷ್ಯನು ತಪ್ಪಿಸಿಕೊಳ್ಳಲು ಗದ್ದೆಯಲ್ಲಿ ಕಾವಲಿ ಗಾಗಿ ನಿಯುಕ್ತನಾದ ಜಡಭರತನನ್ನೇ ಶೂದ್ರರಾಜನ ಭಟರು ಎಳೆದೊಯ್ದರು. ಜಡಭರತನು ಶಾಂತನಾಗಿಯೇ ಕಟುಕರನ್ನು ಹಿಂಬಾಲಿಸಿದ. ನರಬಲಿಗೆಂದು ಇವನನ್ನು ಅಲಂಕರಿಸಿ ಭದ್ರಕಾಳಿಯ ಮುಂದೆ ನಿಲ್ಲಿಸಿದರು. ತಾಮಸ ಪ್ರವೃತ್ತಿಯ ಶೂದ್ರರಾಜನು ಅಪರೋಕ್ಷಜ್ಞಾನಿಯಾದ ಜಡಭರತನ ರುಂಡವನ್ನು ತುಂಡರಿಸಲು ವಿದ್ಯುಕ್ತನಾಗಿರಲು ಭದ್ರಕಾಳಿಯೇ ರೋಷಗೊಂಡಳು. ವಿಕಟರೂಪದಿಂದ ಪ್ರಕಟಗೊಂಡ ಕಾಳಿಯು ಕಟಕಟನೆ ಹಲ್ಕಡಿದು ರಾಜನ ಸಹಿತವಾಗಿ ಎಲ್ಲರ ರುಂಡಗಳನ್ನು ಖಡ್ಗದಿಂದ ಕೊಚ್ಚಿದಳು. ಭವಭಯವನ್ನೇ ಪರಿಹರಿಸುವ ದೇವನ ಸ್ಮರಣೆಯಲ್ಲಿ ನಿರತನಾದ ಭರತನಿಗೆ ಮೃತ್ಯುವಿನ ಭಯವೆಲ್ಲಿಹುದು? ಎಲ್ಲವನ್ನೂ ನಿರ್ಲಿಪ್ತನಾಗಿ ಎದುರಿಸಿದ. ಅವಧೂತನಾಗಿ ಎಲ್ಲೆಡೆ ಸಂಚರಿಸುತ್ತಿದ್ದ. ಬಾಹ್ಯಮುಖದವರಿಗೆ ಇವನೊಬ್ಬ ಹುಚ್ಚ.

ಅಂತರ್ಮುಖಿಗಳ ದೃಷ್ಟಿಯಲ್ಲಿ ಪರಮಜ್ಞಾನಿ. ಹೊರಗಿನ ವೇಷಭೂಷಣಗಳಿಂದ ಒಳಗಿನ ಜ್ಞಾನಿಗಳ ಸೌಂದರ್ಯವನ್ನು ಅಳೆಯಲಾಗದು.

## ನಿಗೂಢ ವೃತ್ತಿಯ ಜ್ಞಾನಿಗಳು

ಜಡಭರತನಂತಹ ಜ್ಞಾನಿಗಳು ಅನೇಕರಿದ್ದಾರೆ. ಅವರನ್ನು ನಮಗೆ ಕಂಡು ಹಿಡಿಯಲಾಗದು. ಇದಕ್ಕೆ ಸಂವಾದಿಯಾಗಿ ಛಾಂದೋಗ್ಯ ಉಪನಿಷತ್ತಿನ ಕಥೆಯೊಂದನ್ನು ಕಾಣಬಹುದು.

ಜಾನಶ್ರುತಿಪೌತ್ರಾಯಣನೆಂಬ ಧರ್ಮಶೀಲನೂ ದಾನಶೀಲನೂ ಆದ ರಾಜನಿದ್ದನು. ರಾಜ್ಯದ ಎಲ್ಲ ಕಡೆಗಳಲ್ಲಿ ಜನರಿಗೆ ಭೋಜನ ಸೌಕರ್ಯವನ್ನು ಒದಗಿಸಲು ಅನೇಕ ಛತ್ರಗಳನ್ನು ನಿರ್ಮಿಸಿದ್ದನು. ಇಂತಹ ಉದಾರನಾದ ರಾಜನು ತನ್ನ ಉನ್ನತವಾದ ಪ್ರಾಸಾದದಲ್ಲಿ ರಾತ್ರಿ ಮಲಗಿದ್ದಾಗ ಅವನ ಮೇಲಿನಿಂದ ದೇವಹಂಸಗಳು ಹಾರುತ್ತಾ ಸಾಗಿದ್ದವು. ಆ ಸಂದರ್ಭದಲ್ಲಿ ಒಂದು ಹಂಸವು ಇನ್ನೊಂದು ಹಂಸವನ್ನು ತಡೆದು "ರಾಜಾ ಜಾನಶ್ರುತಿಯು ಕೆಳಗೆ ಮಲಗಿದ್ದಾನೆ. ಅವನ ದೇಹದಿಂದ ಹೊರಹೊಮ್ಮಿದ ಜ್ಯೋತಿಯು ಸುತ್ತಲೂ ಹರಡಿದೆ. ಅದನ್ನು ಸ್ಪರ್ಶಿಸುವ ಸಾಹಸ ಮಾಡಬೇಡ. ನಿನ್ನ ಮೈಯೆಲ್ಲ ಸುಟ್ಟು ಭಸ್ಮವಾದೀತು" ಎಂದು ಎಚ್ಚರಿಸುತ್ತದೆ. ಆಗ ಇನ್ನೊಂದು ಹಂಸವು "ರೈಕ್ವನನ್ನು ಹೊಗಳುವ ರೀತಿಯಲ್ಲಿ ಈ ರಾಜನ ಬಗ್ಗೆ ಮಾತನಾಡುತ್ತಿರುವೆಯಲ್ಲ? ಆ ರೈಕ್ವನ ಯೋಗ್ಯತೆಯು ಇವನಿಗೆಲ್ಲಿದೆ?" ಎಂಬುದಾಗಿ ರಾಜನನ್ನು ಮೂದಲಿಸಿ ಮಾತನಾಡಿತು. ಹಂಸಗಳ ಈ ಸಂವಾದವನ್ನು ಕೇಳಿದ ರಾಜನು ರೈಕ್ವನನ್ನು ಸಂದರ್ಶಿಸಿ ಅವನಿಂದ ಉಪದೇಶವನ್ನು ಪಡೆಯಲು ಉತ್ಕಂಠಿತನಾದನು. ಸ್ವಲ್ಪ ಮಟ್ಟಿಗೆ ಅವಮಾನಗೊಂಡವನಂತಾದನೂ ಕೂಡ. ಮರುದಿನ ಬೆಳಗ್ಗೆಯೇ ರೈಕ್ವನನ್ನು ಹುಡುಕಲು ಜನರನ್ನು ಕಳುಹಿಸಿದನು. ಎಲ್ಲಿಯೂ ರೈಕ್ವನು ಕಾಣಲಿಲ್ಲ. ಕೊನೆಗೆ ಒಂದು ಕಡೆ ಎತ್ತಿನ ಗಾಡಿಯ ಅಡಿಯಲ್ಲಿ ಕಜ್ಜಿ ತುರಿಸಿಕೊಂಡು ಕುಳಿತಿರುವ ಅವಧೂತ ಯೋಗಿ ರೈಕ್ವನನ್ನು ಗುರುತಿಸಿದ ದೂತರು ರಾಜನಿಗೆ ರೈಕ್ವನ ಇರವನ್ನು ನಿವೇದಿಸಿದರು.

ಈ ರೈಕ್ವನಿಗೂ ಜಡಭರತನಿಗೂ ವ್ಯತ್ಯಾಸವೇ ಕಾಣದು. ರೈಕ್ವನೂ ಸಹ ಸಿಕ್ಕಲ್ಲಿ ಮಲಗುತ್ತಿದ್ದ. ಸಿಕ್ಕಿದ್ದನ್ನು ಸ್ವೀಕರಿಸಿ ತೃಪ್ತನಾಗುತ್ತಿದ್ದ. ಕೆಸರಡವರಿಸಿದ ಮೈ, ಕೊಳಕು ಬಟ್ಟೆ. ಹೀಗಿದ್ದರೂ ಉಲ್ಲಾಸಭರಿತ ಮನಸ್ಸಿನಿಂದ ನಿರಂತರ ಹರಿಯ ಧ್ಯಾನರತನಾಗಿದ್ದ.

ಒಂದು ದಿನ ಸಿಂಧುಸೌವೀರ ದೇಶದ ಅಧಿಪತಿಯಾದ ರಹೂಗಣ ಕಪಿಲಾಶ್ರಮಕ್ಕೆ ಪ್ರಯಾಣ ಬೆಳೆಸಿದ್ದ. ಅಂದು ಅವನ ಪಾಲಕಿಯನ್ನು ಹೊರಲು ಒಬ್ಬ ಭೃತ್ಯ ಕಡಿಮೆಯಾಗಿದ್ದ. ಆ ಕೊರತೆಯನ್ನು ನೀಗಿಸಲು ಆಳನ್ನು ಹುಡುಕಲಾರಂಭಿಸಿದರು. ದಾರಿಯಲ್ಲಿ ಜಡಭರತ ಕಂಡನು. ತಾರುಣ್ಯದ ದೃಢಕಾಯ ದಷ್ಟಪುಷ್ಟವಾಗಿ

ಬೆಳೆದಿತ್ತು. ಕತ್ತೆಯಂತೆ ಮೇನೆಯನ್ನು ಹೊರಲು ಸಮರ್ಥ ನಾಗಿದ್ದಾನೆಂದು ಕರೆದು ತಂದರು. ಮಹಾನುಭಾವನಾದ ಭರತ ಶಿಬಿಕೆಯನ್ನು ಹೊತ್ತು ನಡೆದ.

ಪಾಲಕಿ ಹೊತ್ತಿರುವ ಜಡಭರತನಿಗೆ ಬಾಹ್ಯ ಎಚ್ಚರವೇ ಇಲ್ಲ. ಮದ್ಯಪಾನ ಮಾಡಿದವ ಲೋಕವನ್ನೇ ಮರೆತಿರುತ್ತಾನೆ. ಅದರಂತೆ ಭಗವದ್ ಭಕ್ತಿಯ ಪಾನದಲ್ಲಿ ಮಗ್ನನಾದ ಜಡಭರತನಿಗೂ ಪಾಲಕಿ ಹೊತ್ತಿರುವೆನೆಂಬ ಎಚ್ಚರವೇ ಇರಲಿಲ್ಲ. ಇದರ ಪರಿಣಾಮವಾಗಿ ಪಾಲಕಿಯು ಅತ್ತ ಇತ್ತ ಹೊಯ್ದಾಡಿತು.

ಭಗವಂತನನ್ನು ಹೃದಯದಲ್ಲಿ ಹೊತ್ತವರಿಗೆ ಬಾಹ್ಯದ ಎಚ್ಚರವಿರುವುದಿಲ್ಲ. ಎಚ್ಚರದಿಂದ ಬಾಹ್ಯದ ಕಾರ್ಯಗಳನ್ನು ನಡೆಸುವ ಮನುಜರಿಗೆ ಹರಿಯ ಎಚ್ಚರ ವಿರುವುದಿಲ್ಲ. ರಹೂಗಣನ ಪಾಲಕಿಯನ್ನು ಮೂರು ಮಂದಿ ಸರಿಯಾಗಿ ಹೊತ್ತಿದ್ದರು. ಅವರು ಹರಿಯನ್ನು ಹೃದಯವೆಂಬ ಪಾಲಕಿಯಲ್ಲಿ ಹೊತ್ತಿರಲಿಲ್ಲ. ಜಡಭರತ ರಹೂಗಣನ ಪಾಲಕಿಯನ್ನು ಸರಿಯಾಗಿ ಹೊತ್ತಿರಲಿಲ್ಲ ಆದರೆ ಹೃದಯವೆಂಬ ಪಾಲಕಿಯಲ್ಲಿ ಭಗವಂತನನ್ನು ಹೊತ್ತುಕೊಂಡಿದ್ದ. ಭೃತ್ಯರು ಸರಿಯಾಗಿ ಕಾಲಿಡುತ್ತಿದ್ದರು. ಆದರೆ ಮೋಕ್ಷದ ಮಾರ್ಗದಲ್ಲಿ ಕಾಲಿಡಲು ಗೊತ್ತಿರಲಿಲ್ಲ. ಜಡಭರತ ರಾಜನಿಗೆ ಹಿತವಾಗುವಂತೆ ಸರಿಯಾಗಿ ಕಾಲಿಡುತ್ತಿರಲಿಲ್ಲ. ಆದರೆ ನಿತ್ಯ ಒಳಿತಿಗೆ ಹೇತುವಾದ ಮುಕುತಿಮಾರ್ಗದಲ್ಲಿ ಸರಿಯಾಗಿ ನಡೆಯುತ್ತಿದ್ದ.

ಮೇನೆಯಲ್ಲಿ ಕುಳಿತ ರಹೂಗಣ ಗರ್ಜಿಸಿದ –"ಸರಿಯಾಗಿ ಮೇನೆಯನ್ನು ಕೊಂಡೊಯ್ಯಿರಿ. ಸಂದಾಡಿಸುವಿರೇಕೆ?!" ಎಂದು ನಿಂದಿಸಲು ರಾಜನು ದಂಡಿಸಿಯಾನೆಂದು ಭೃತ್ಯರು ಹೇಳಿದರು. "ಮಹಾರಾಜ! ನಾವುಗಳು ಯಥಾಕ್ರಮ ದಂತೆಯೇ ಮೇನೆಯನ್ನು ಹೊತ್ತಿದ್ದೇವೆ. ನಿನ್ನ ಸೇವೆಯಲ್ಲಿ ಜಾಗರೂಕರಾಗಿದ್ದೇವೆ. ಪುಷ್ಟನಾದ ಈ ನಾಲ್ಕನೆಯ ವ್ಯಕ್ತಿಯೇ ಅಜಾಗರೂಕತೆಗೆ ಕಾರಣನು" ಎಂದರು. ರಾಜನೆಂಬ ಮದದಿಂದ ರಹೂಗಣ ಜ್ಞಾನಿಯಾದ ಜಡಭರತನನ್ನು ನಿಂದಿಸಿದ. ಗೇಲಿ ಮಾಡಿದ. "ಅಯ್ಯೋ! ಪಾಪ. ಬಹಳ ಬಡಕಲು ದೇಹ. ದೂರದ ಪ್ರಯಾಣ ನೀನೊಬ್ಬನೇ ಹೊತ್ತುಕೊಂಡಿರುವಿ. ಯಾರೂ ಸಹಾಯಕರಿಲ್ಲ. ಮುದಿತನವು ಬೇರೆ ಅಡವರಿಸಿ ಕೊಂಡಿದೆ ಅಲ್ಲವೇ?!" ಎಂದನು. ಆದರೂ ಜಗತ್ತಿನ ಸ್ತುತಿನಿಂದೆಗಳನ್ನು ಮೀರಿ ನಿಂತಿರುವ ಜಡಭರತ ಸುಮ್ಮನೆ ಮೇನೆಯನ್ನು ಹೊತ್ತುಕೊಂಡು ಮುಂದೆ ನಡೆದ. ಆದರೆ ಪಾಲಕಿಯ ಹೊಯ್ದಾಟ ನಿಲ್ಲಲಿಲ್ಲ. ಇದರಿಂದ ರಹೂಗಣನ ಹಮ್ಮಿನ ಕಿಚ್ಚು ಉಲ್ಬಣಗೊಂಡು ಕ್ರೋಧವೆಂಬ ಜ್ವಾಲೆಯಾಗಿ ಮಾತೆಂಬ ಕಿಡಿಕಾರಿತು "ನಿನಗೆ ತಕ್ಕ ಮದ್ದು ಮಾಡುತ್ತೇನೆ. ಜೀವನ್ಮೃತನಾಗಿರುವಿಯಾ? ನನ್ನನ್ನು ಅವಮಾನಿಸುವಿಯಾ?! ರಾಜಾಜ್ಞೆಯನ್ನು ಧಿಕ್ಕರಿಸುತ್ತಿರುವೆಯಾ? ನಿನಗೆ ಮೃತ್ಯುವಾಗುತ್ತೇನೆ"ಂದು ರಹೂಗಣ ಗುಡುಗಲು ನಿರ್ವಿಕಾರನಾದ ಜಡಭರತನು ಮಂದಹಾಸವನ್ನು ಬೀರುತ್ತಾ ಮಾತನಾಡಿದ.

ರಾಜನೇ! ಪಾಲಕಿಯನ್ನು ಸರಿಯಾಗಿ ಹೊರುತ್ತಿಲ್ಲವೆಂಬ ನಿನ್ನ ಭಾವ ಸರಿಯಾದದ್ದು. ಪಾಲಕಿ ಹೊತ್ತವನೂ ನಾನಲ್ಲ. ನಡೆಯುವವನೂ ನಾನಲ್ಲ. ಸ್ವಾತಂತ್ರ್ಯವೇ

ಇರದ ನಾನು ಹೊರುವುದಾದರೂ ಹೇಗೆ? ಸಮಗ್ರ ಬ್ರಹ್ಮಾಂಡದ ಭಾರವನ್ನು ಹೊತ್ತ ಸ್ವತಂತ್ರನಾದ ಭಗವಂತನೇ ನಿನ್ನ ಪಾಲಕಿಯನ್ನು ಹೊತ್ತಿದ್ದಾನೆ. ಹಾಗೆಯೇ ನಿನ್ನ ಉಳಿದ ಮಾತು ನನಗೆ ಸಂಬಂಧಿಸಿದವುಗಳಲ್ಲ.

ಸ್ಥೌಲ್ಯಂ ಕಾರ್ಶ್ಯಂ ವ್ಯಾಧಯ ಆಧಯಶ್ಚ
ಕ್ಷುತ್ತೃಡ್ ಭಯಂ ಕಲಿರಿಚ್ಛಾ ಜರಾ ಚ ।
ನಿದ್ರಾಽರತಿರ್ಮನ್ಯುರಹಂ ಮದಶ್ಚ
ದೇಹೇನ ಜಾತಸ್ಯ ಹಿ ಮೇ ನ ಸಂತಿ ॥ — (೫-೧೦-೧೧)

"ಸ್ಥೌಲ್ಯ, ಕೃಶತ್ವ, ದೈಹಿಕರೋಗ, ಮಾನಸಿಕ ಚಿಂತೆ, ಹಸಿವು, ನೀರಡಿಕೆ, ಭಯ, ಕಲಹ, ಇಚ್ಛೆ, ಮುದಿತನ, ನಿದ್ದೆ, ಆಲಸ್ಯ, ಕೋಪ, ಅಹಂಕಾರ, ಮದ –ಇವುಗಳೆಲ್ಲವೂ ದೇಹದಲ್ಲಿ ನನ್ನದೆಂಬ ಅಭಿಮಾನ ಉಳ್ಳವರಿಗೆ ಇರುತ್ತವೆಯೇ ಹೊರತು, ದೇಹಾಭಿಮಾನವನ್ನು ತೊರೆದ ನನ್ನಂಥವರಿಗೆ ಇರಲಾರವು". ಆದ್ದರಿಂದ ನಿನ್ನ ಬೈಗುಳ ಅತ್ತ ಇತ್ತ ತೂರಾಡಿದ ಜಡವಾದ ದೇಹಕ್ಕೆ ಹೊರತು, ನಿರಭಿಮಾನಿಯಾದ ನನಗಲ್ಲ. ನನಗೂ ದೇಹಕ್ಕೂ ಸಂಬಂಧವೇ ಇಲ್ಲದಿರುವಾಗ ನೀನು ಬೈದದ್ದಾದರೂ ಯಾರಿಗೆ?

ಮಹಾತ್ಮರೊಬ್ಬರಿಗೆ ದುಷ್ಟನೊಬ್ಬ ಕೆಟ್ಟ ಮಾತುಗಳಿಂದ ನಿಂದಿಸಿದ. ಮಹಾತ್ಮನು ಮೌನಿಯಾದ. ಅವನ ಭಾವವಿಷ್ಟೇ –"ಒಬ್ಬ ರಿಜಿಸ್ಟರ್ಡ್ ಪೋಸ್ಟ್ ಅಥವಾ ಮನಿಯಾರ್ಡರ್ ಮಾಡುತ್ತಾನೆ. ಅದನ್ನು ತೆಗೆದುಕೊಳ್ಳಬೇಕಾದ ವ್ಯಕ್ತಿ ಅದನ್ನು ಸ್ವೀಕರಿಸದಿದ್ದಾಗ ಅದು ಮತ್ತೆ ಕಳುಹಿಸಿದವನಿಗೆ ತಲುಪುತ್ತದೆ. ಅದರಂತೆ ನಿಂದಕನ ಬೈಗುಳ ಸ್ವೀಕರಿಸದಿದ್ದರೆ ನಿಂದಕನಿಗೇ ಅವುಗಳು ತಲುಪುತ್ತವೆ" ಎಂದು. ಅದರಂತೆ ನಮ್ಮ ಜಡಭರತನೂ ರಹೂಗಣನ ನಿಂದನೆ ನನಗೂ ಅಲ್ಲ. ಜಡವಾದ ದೇಹಕ್ಕೂ ಅಲ್ಲ ಎಂದು ನಿರ್ಲಿಪ್ತನಾದ.

ರಹೂಗಣನು 'ಜೀವಚ್ಛವದಂತೆ ಇದ್ದೀಯಾ?' ಎಂದು ನಿಂದಿಸಿದ್ದ. ಅದಕ್ಕೂ ಪ್ರತ್ಯುತ್ತರವನ್ನು ನೀಡುತ್ತಾನೆ. ರಾಜನೇ! ಉತ್ಪತ್ತಿ, ನಾಶ, ವಿಕಾರಗಳಿರುವ ಜಡಶರೀರವೆಲ್ಲವೂ ಜೀವನ್ಮೃತವೆನಿಸುತ್ತದೆ. ನಿನ್ನ ಬೈಗುಳದ ಮಾತು ಜಡವಾದ ಶರೀರಕ್ಕೇ ಹೊರತು ನನಗಲ್ಲ. ಜಡವಾದ ಶರೀರಕ್ಕೆ ನಿಂದಿಸಿಯೇನು ಉಪಯೋಗ? ದೇಹಾಭಿಮಾನವನ್ನು ಕಳೆದುಕೊಂಡ ಸ್ವಭಾವತಃ ನಿರ್ಲಿಪ್ತನಾದ ನಿನ್ನ ನಿಂದನೆ ಶಿಕ್ಷೆಗಳು ವ್ಯರ್ಥವೇ ಸರಿ. ಹಿಟ್ಟನ್ನು ಎಷ್ಟು ಕುಟ್ಟಿದರೂ ಅದು ಹಿಟ್ಟಾಗಿಯೇ ಉಳಿದಿರುತ್ತದೆ. ಅದರಲ್ಲಿಯ ಪಿಷ್ಟತ್ವಗುಣ ಎಂದೂ ನಷ್ಟವಾಗದು. ಕುಟ್ಟುವವನೇ ಕಷ್ಟಕ್ಕೆ ಗುರಿಯಾಗುವನು. ಅದರಂತೆ ನಿನ್ನ ನಿಂದನೆ ಉದ್ವೇಗಗಳಿಂದ ನಿನ್ನ ಮನಸ್ಸಿಗೇ ಘಾಸಿಯಾದೀತೇ ವಿನಾ ನನಗೇನೂ ಆಗಲಾರದು ಎಂದು ಉತ್ತರಿಸಿ ಪ್ರಾರಬ್ಧವೆಂದು ತಿಳಿದು ಮೇನೆಯನ್ನು ಹೊತ್ತು ನಡೆದ.

ಜಡಭರತನ ತಾತ್ವಿಕ ಉತ್ತರದಿಂದ ರಹೂಗಣ ತತ್ತರಿಸಿದ. "ಒಬ್ಬ ಮಹಾಜ್ಞಾನಿಗೆ ಅನ್ಯಾಯ ಮಾಡುತ್ತಿರುವೆ" ಎಂದು ಪಾಲಕಿಯಿಂದ ಕೆಳಕ್ಕೆ ಜಿಗಿದ.

ಅಹಂಕಾರದಿಂದಲೂ ಕೆಳಗಿಳಿದಿದ್ದ. ಜಡಭರತನ ಪಾದಕಮಲಗಳಿಗೆರಗಿದ. ಕ್ಷಮಿಸಿ ರೆಂದು ಬಿನ್ನವಿಸಿದ. ರಹೂಗಣನ ಮಾತುಗಳಲ್ಲಿ ಕೆಲವೊಂದನ್ನು ಭಗವಂತನಿಗೆ ಕೆಲವನ್ನು ಜಡವಾದ ದೇಹಕ್ಕೆ ಹಂಚಿ ನಿರ್ಲಿಪ್ತನಾಗಿರುವ ಜಡಭರತನನ್ನು ಮಹಾತ್ಮನೆಂದೇ ಭಾವಿಸಿದ. 'ನಿಗೂಢ ಪ್ರವೃತ್ತಿಯ ಮಹಾನುಭಾವನಾದ ನೀನು ಯಾರು? ಎಂದು ಪ್ರಶ್ನಿಸಿದ. ಅಧ್ಯಾತ್ಮದ ಉಪದೇಶದಲ್ಲಿ ತನಗುಂಟಾದ ಸಂಶಯ ಗಳನ್ನು ಪರಿಹರಿಸಿಕೊಳ್ಳಲು ಜಡಭರತನನ್ನೇ ಅಧ್ಯಾತ್ಮದ ಗುರುವನ್ನಾಗಿ ಸ್ವೀಕರಿಸಿದ.

## ಜಡಭರತ–ರಹೂಗಣರ ಸಂವಾದ

ರಹೂಗಣ: "ಮಹಾನುಭಾವನೇ! ದೇಹಾಭಿಮಾನ ಬಿಟ್ಟಿರುವ ನನಗೆ ದೇಹಗತ ವಾದ ಗುಣಧರ್ಮಗಳು ನನ್ನ ಮನಸ್ಸನ್ನು ವ್ಯಗ್ರಗೊಳಿಸವು" ಎಂದೆ ಯಲ್ಲಾ ಇದು ಸರಿಯೇ? ಏಕೆಂದರೆ–

ಸ್ಥಾಲ್ಯಗ್ನಿತಾಪಾತ್ಪಯಸೋಽಪಿ ತಾಪಃ
ತತ್ತಾಪತಸ್ತಂಡುಲಗರ್ಭರಂಧಿಃ ।
ದೇಹೇಂದ್ರಿಯಾಸ್ವಾಶಯಸನ್ನಿಕರ್ಷಾತ್
ತತ್ಸಂಸೃತಿಃ ಪುರುಷಸ್ಯಾನುರೋಧಾತ್ ॥ — (೫–೧೦–೨೩)

'ಒಲೆಯ ಮೇಲಿಟ್ಟ ಪಾತ್ರೆಯು ಬೆಂಕಿಯಿಂದ ಬಿಸಿಯಾಗುತ್ತದೆ. ಪಾತ್ರೆಯ ಸಂಪರ್ಕವನ್ನು ಹೊಂದಿದ ನೀರು ಬಿಸಿಯಾಗುತ್ತದೆ. ಬಿಸಿನೀರಿನ ಸಂಪರ್ಕದಿಂದ ಅಕ್ಕಿಯು ಬೆಂದು ಅನ್ನವಾಗುತ್ತದೆ. ಅದರಂತೆ ದೇಹದ ಸಂಪರ್ಕವನ್ನು ಹೊಂದಿದ ಜೀವನಿಗೂ ದೇಹದಲ್ಲಿ ಉಂಟಾದ ವಿಕಾರಗಳು ಉಂಟಾಗಲೇಬೇಕಲ್ಲವೇ? ಇಷ್ಟೇ ಅಲ್ಲದೆ ಪ್ರಜೆಗಳು ಅಪರಾಧ ಮಾಡಿದಾಗ ಶಿಕ್ಷಿಸುವುದು ರಾಜರ ಕರ್ತವ್ಯ. ಇದೂ ಭಗವಂತನ ಆರಾಧನೆಯೇ ಆಗುತ್ತದೆ. ಹೀಗಿರುವಾಗ ಪ್ರಜೆಯಾದ ನಿನ್ನನ್ನು ಶಿಕ್ಷಿಸು ವುದು ವ್ಯರ್ಥವಾಗುತ್ತದೆ' ಎಂದೆಯಲ್ಲಾ, ಇದೆಷ್ಟು ಸರಿ?!

ಜಡಭರತ: ರಹೂಗಣ! ನಮ್ಮ ಜೀವನದ ಎಲ್ಲಾ ಆಗಹೋಗುಗಳಿಗೂ ಮುಖ್ಯ ಕಾರಣವಾದದ್ದು ಮನಸ್ಸು. ನಾವು ಹತ್ತು ಇಂದ್ರಿಯಗಳಿಂದ ಮಾಡುವ ಎಲ್ಲಾ ಕೆಲಸಗಳಿಗೂ ಮನಸ್ಸೇ ಮುಖ್ಯ ಕಾರಣ. ಮನಸ್ಸನ್ನು ಹತೋಟಿ ಯಲ್ಲಿಟ್ಟುಕೊಂಡರೆ ಯಾವುದೇ ರಾಗ, ದ್ವೇಷ, ವಂಚನೆ, ಅಹಂಕಾರ ಗಳಿಗೆ ಅವಕಾಶವಿರುವುದಿಲ್ಲ. ಉತ್ತಮವಾದ ಜೀವನ, ಭಗವದ್ಭಕ್ತಿ ಇವುಗಳನ್ನು ಸಾಧಿಸಲು ಮನಸ್ಸಿನ ನಿಯಂತ್ರಣ ಅತಿಮುಖ್ಯವಾದುದು.

ಹತ್ತಿಯ ಸಹಕಾರದಿಂದ ಬೆಂಕಿಯು ಉರಿಯುತ್ತದೆ. ಅಥವಾ ಕಟ್ಟಿಗೆಯಿಂದ ಬೆಂಕಿ ಉರಿಯುತ್ತದೆ. ಆದರೆ ಅದೇ ಹಸಿಕಟ್ಟಿಗೆಯನ್ನು ಬೆಂಕಿಗಿಟ್ಟರೆ ಬೆಳಕಿಗಿಂತಲೂ ಹೊಗೆಯೇ ಜಾಸ್ತಿಯಾಗುತ್ತದೆ. ಒಣಗಿದ ಕಟ್ಟಿಗೆಯು ಉಜ್ವಲ ಬೆಳಕನ್ನು ನೀಡುತ್ತದೆ. ನಮ್ಮ ಮನಸ್ಸೂ ಕಟ್ಟಿಗೆ ಇದ್ದಂತೆ. ಈ ಮನಸ್ಸು ತಪಸ್ಸಿನಿಂದ ಪಕ್ವತೆಯನ್ನು ಪಡೆಯ ಬೇಕು. ತತ್ವಜ್ಞಾನದ ಬೆಳಕಿನಿಂದ ಒಣಗಬೇಕು. ಇಲ್ಲವಾದರೆ ವಿಷಯ ಪದಾರ್ಥಗಳ

ಆಸಕ್ತಿಯಿಂದ ಒದ್ದೆಯಾಗುತ್ತದೆ. ಆವಾಗ ಕೆಟ್ಟ ವಿಚಾರಗಳು ಕೆಟ್ಟ ಪ್ರವೃತ್ತಿಗಳೇ ಉಂಟಾಗುತ್ತವೆ ಜೀವನವೆಲ್ಲ ಹೊಗೆ ತುಂಬಿದ ಮಸಿಯಂತೆ ಅತೃಪ್ತಿದಾಯಕ ವಾಗುತ್ತದೆ. ತಪಸ್ಸು ತತ್ತ್ವಜ್ಞಾನಗಳಿಂದ ಸಂಸ್ಕಾರಗೊಂಡ ಮನಸ್ಸು ಉಜ್ಜ್ವಲವಾಗಿ ಬೆಳಗುವ ಒಣ ಕಟ್ಟಿಗೆಯಂತೆ ತತ್ತ್ವಜ್ಞಾನದ ಬೆಳಕನ್ನು ನೀಡಿ ಜೀವನವನ್ನು ಉಜ್ಜ್ವಲಗೊಳಿಸುತ್ತದೆ. ಮನಸ್ಸು ಸಂಸ್ಕಾರಗೊಂಡಾಗ ದಶೇಂದ್ರಿಯಗಳಿಂದ ಮಾಡುವ ಪ್ರವೃತ್ತಿಗಳೂ ಉತ್ತಮವಾಗಿರುತ್ತವೆ. ಇದರೊಂದಿಗೆ 'ನಾನು' 'ನನ್ನದು' ಎಂಬ ಅಹಂಕಾರ ಮಮಕಾರಗಳನ್ನು ತೊರೆಯಬೇಕು. ಇವು ಸೇರಿದಾಗ ದಶೇಂದ್ರಿಯಗಳ ವ್ಯಾಪಾರಗಳು ಕಲುಷಿತವಾಗುತ್ತವೆ' ಎಂದು ಉತ್ತರಿಸುತ್ತಾ 'ಅಕ್ಕಿಯು ಬೆಂಕಿಯ ಸಂಪರ್ಕದಿಂದ ಬೇಯುವಂತೆ ದೇಹದ ಸಂಪರ್ಕ ಇರುವುದರಿಂದ ಮನಸ್ಸಿನ ಮೇಲೆ ಪರಿಣಾಮ ಬೀರಲೇ ಬೇಕಲ್ಲವೇ?' ಎಂಬ ಪ್ರಶ್ನೆಗೆ ಉತ್ತರಿಸುತ್ತಾನೆ–

ಪಾತ್ರೆಗೂ ಬೆಂಕಿಗೂ ಇರುವ ಸಂಪರ್ಕದಂತೆ ಇಲ್ಲಿ ಮನಸ್ಸಿಗೂ ದೇಹಕ್ಕೂ ಇರುವುದು ಅಭಿಮಾನ. ಈ ಅಭಿಮಾನದಿಂದ ಮನಸ್ಸಿನಲ್ಲಿ ಪರಿವರ್ತನೆಯುಂಟಾಗುತ್ತದೆ. ಅಭಿಮಾನವನ್ನು ಕಿತ್ತೊಗೆದರೆ ಶರೀರಕ್ಕಾಗುವ ಅವಮಾನ, ಚಳಿ, ಬಿಸಿ ಎಲ್ಲವೂ ದೂರವಾಗುತ್ತವೆ. ಇವೆಲ್ಲವೂ ಮನಸ್ಸಿನ ಮೇಲೆ ಪರಿಣಾಮ ಬೀಳಬೇಕಿದ್ದರೆ ಅಭಿಮಾನದ ಕನೆಕ್ಷನ್ ಬೇಕು. ಈ ವಿಷಯದಲ್ಲಿ ಅನೇಕ ಉದಾಹರಣೆಗಳನ್ನು ಕಾಣಬಹುದು.

ನಮ್ಮ ಮನೆಯ ಅಂಗಳದಲ್ಲೊಂದು ಮಗು ಅಳುವ ಶಬ್ದ ಕೇಳುತ್ತದೆ. ಕೂಡಲೇ ಮಗುವಿನ ಮೇಲಿನ ಅಭಿಮಾನದಿಂದ ಸಂತೈಸಲು ಓಡಿ ಹೋಗುತ್ತೇವೆ. ಒಂದು ವೇಳೆ ಅಳುತ್ತಿರುವ ಮಗು ಪಕ್ಕದ ಮನೆಯವರದ್ದು ಎಂದಾದರೆ ಸಮಾಧಾನದಿಂದ ಹಿಂತಿರುಗುತ್ತೇವೆ. ದುಃಖವಾಗುವುದಿಲ್ಲ. ನಮ್ಮ ಮನೆಯ ಮಗು ಎಂದಾದರೆ ಮಾತ್ರ ದುಃಖಿಸುತ್ತೇವೆ. ಇದಕ್ಕೆ ಕಾರಣ 'ನಮ್ಮದು' ಎಂಬ ಅಭಿಮಾನ. ಅಭಿಮಾನವೇ ದುಃಖಕ್ಕೆ ಮೂಲ. ಇದರಂತೆ ನಾವು ಪ್ರತಿನಿತ್ಯವೂ ಟ್ರೈನ್, ವಿಮಾನ, ಬಸ್ ಮುಂತಾದವುಗಳ ಅಪಘಾತ ವಾರ್ತೆಯನ್ನು ಕೇಳುತ್ತೇವೆ. ಸುದ್ದಿ ಕೇಳಿದ ಮಾತ್ರಕ್ಕೆ ನಮಗೆ ದುಃಖವಾಗದು. ಆ ರೈಲಿನಲ್ಲಿ ನಮ್ಮವರು ಇದ್ದಾರೆ ಅಂದಾಗ ಮಾತ್ರ 'ಹೋ' ಎಂದು ಅಳುತ್ತೇವೆ. ನಮ್ಮ ಮನೆಯು ಸುಟ್ಟಾಗ ಆಗುವ ದುಃಖ ಪಕ್ಕದ ಮನೆ ಸುಟ್ಟಾಗ ಆಗಲಾರದು. ಇಲ್ಲೆಲ್ಲ ಅಭಿಮಾನವೇ ಕಾರಣ.

ಅದರಂತೆ ದೇಹವೇ ಬೇರೆ, ಆತ್ಮನೇ ಬೇರೆ ಎಂಬ ತಿಳಿವಿನ ಒಟ್ಟಿಗೆ ಆತ್ಮನಿಗೆ ತನ್ನದೇ ಆದ ವ್ಯಕ್ತಿತ್ವವಿದೆ ಎಂದು ಅರಿತಾಗ 'ಒಬ್ಬ ಹೊಗಳಿದ, ಮತ್ತೊಬ್ಬ ತೆಗಳಿದ' ಎಂಬ ಜ್ಞಾನ ಬಾರದು. ಎಲ್ಲವನ್ನೂ ನಿರ್ಲಿಪ್ತನಾಗಿ ನೋಡುತ್ತಾನೆ. ಅಭಿಮಾನದ ಮೂಲೋತ್ಪಾಟನೆಯಾದಾಗ ಮನಸ್ಸಿನಿಂದ ಉಂಟಾಗುವ ತತ್ತ್ವಜ್ಞಾನದ ತಂಗಾಳಿಯಲ್ಲಿ ವಿಹರಿಸುತ್ತಾನೆ ಎಂಬ ಅಮೋಘವಾದ ಸಂದೇಶವನ್ನು ಜಡಭರತನು ನೀಡಿದ್ದಾನೆ.

ಅಭಿಮಾನವನ್ನು ಬಿಡುವುದರೊಂದಿಗೆ ಭಗವಂತನ ಅನುಗ್ರಹವೂ ಸೇರಿಕೊಳ್ಳಬೇಕು. ಅವನ ಅನುಗ್ರಹದಿಂದಲೇ ಮನಸ್ಸಿನ ನಿಯಂತ್ರಣ ಸಾಧ್ಯ. ಇದೇ ಸಂದರ್ಭದಲ್ಲಿ ಜಡಭರತನು ಅಗತ್ಯ ಬೇಕಾದ ಒಂದು ತಾತ್ವಿಕ ವಿಚಾರವನ್ನು ತಿಳಿಸುತ್ತಾನೆ.

## ಭಾಗವತದಲ್ಲಿ ನಿರೂಪಿಸಿದ ಕ್ಷೇತ್ರಜ್ಞ

ಭಗವದ್ಗೀತೆಯಲ್ಲಿ ಕ್ಷೇತ್ರಕ್ಷೇತ್ರಜ್ಞವಿಭಾಗಯೋಗದಲ್ಲಿ 'ಕ್ಷೇತ್ರಜ್ಞ' ಎಂದರೆ ಯಾರು? ಎಂದು ಪ್ರಶ್ನಿಸಿ, 'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ' –ಕ್ಷೇತ್ರವನ್ನು ತಿಳಿದವನು ನಾನು ಎಂದು ಕೃಷ್ಣನು ಉತ್ತರಿಸಿದ್ದಾನೆ. ಇದಕ್ಕಿಂತ ಮೊದಲು ಕ್ಷೇತ್ರ ಎಂದರೇನು? ಎಂದು ಪ್ರಶ್ನೆಗೆ ಉತ್ತರವಾಗಿ 'ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ' –ಈ ಶರೀರವೇ ಕ್ಷೇತ್ರವೆನಿಸಿದೆ ಎಂಬ ಮಾತು ಬಂದಿದೆ. ಇದನ್ನು ಕೆಲವರು ಅಪಾರ್ಥಮಾಡಿಕೊಂಡು ಸಂಸ್ಕೃತ ಅಮರಕೋಶದಲ್ಲಿ 'ಕ್ಷೇತ್ರಜ್ಞ ಆತ್ಮಾ ಪುರುಷಃ' ಎಂದಿರುವುದರಿಂದ ಕ್ಷೇತ್ರಜ್ಞ ಶಬ್ದಕ್ಕೆ 'ಜೀವ' ಎಂದು ಅರ್ಥ ಮಾಡಿಕೊಂಡು 'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ದಿ' ಎಂಬಲ್ಲಿ ಶ್ರೀಕೃಷ್ಣನು ಜೀವನೇ ನಾನು ಎಂದು ಹೇಳಿಕೊಂಡಿದ್ದಾನೆ. ಆದ್ದರಿಂದ ಭಗವದ್ಗೀತೆಯೂ ಜೀವನಿಗಿಂತ ಬೇರೆ ದೇವರಿಲ್ಲ ಎಂದೇ ಸಮರ್ಥಿಸುತ್ತಿದೆ ಎಂದು ಪ್ರತಿಪಾದಿಸುತ್ತಾರೆ. ಭಗವದ್ಗೀತೆಯ ಅರ್ಥವೇನೆಂಬುದು ಭಾಗವತದಲ್ಲಿನ ಜಡಭರತನ ಮಾತನ್ನು ಗಮನಿಸಿದರೆ ಅರ್ಥವಾಗದಿರದು–

ಕ್ಷೇತ್ರಜ್ಞ ಆತ್ಮಾ ಪುರುಷಃ ಪುರಾಣಃ
ಸಾಕ್ಷಾತ್ಸ್ವಯಂ ಜ್ಯೋತಿರಜಃ ಪರೇಶಃ ।
ನಾರಾಯಣೋ ಭಗವಾನ್ವಾಸುದೇವಃ
ಸ್ವಮಾಯಯಾಽಽತ್ಮನ್ ವ್ಯವಧೀಯಮಾನಃ ॥ – (೫–೧೧–೧೩)

ಜೀವನ ಅಂತರ್ಯಾಮಿಯಾದ, ವ್ಯಾಪ್ತನಾದ, ಗುಣಪೂರ್ಣನಾದ, ಸ್ವತಂತ್ರ ಪುರುಷನಾದ, ಸ್ವಪ್ರಕಾಶನಾದ, ಬ್ರಹ್ಮಾದಿಗಳಿಗೂ ಒಡೆಯನಾದ ಮೂಲರೂಪಿ ಭಗವಾನ್ ನಾರಾಯಣನು ವಾಸುದೇವನೆನಿಸಿ ಸ್ವೇಚ್ಛೆಯಿಂದಲೇ ಸರ್ವಾಂತರ್ಯಾಮಿಯಾಗಿದ್ದು ಅವ್ಯಕ್ತರೂಪನಾಗಿರುತ್ತಾನೆ' ಎಂಬಲ್ಲಿ ಸ್ಪಷ್ಟವಾಗಿ ಕ್ಷೇತ್ರಜ್ಞ ಎಂಬ ಪದವನ್ನೇ ನಾರಾಯಣನಿಗೆ ಬಳಸಿದ್ದಾರೆ. ಭಾಗವತ ಶ್ಲೋಕದ ಅಭಿಪ್ರಾಯದಿಂದ ಒಳಗೊಂಡ ಪ್ರಮಾಣಾಂತರವನ್ನು ಆಚಾರ್ಯರು ಹೇಳಿದ್ದಾರೆ.

ಸ್ವಾತ್ಮಾಧಾರಃ ಸ್ವೇಚ್ಛಯೈವ ಜೀವದೃಷ್ಟೇಸ್ತಿರೋಹಿತಃ ।
ಕ್ಷೇತ್ರಜ್ಞೇತ್ಯುಚ್ಯತೇ ವಿಷ್ಣುರ್ಜೀವಸ್ಥಃ ಪುರುಷೋತ್ತಮಃ ॥

ಎಂದು. ಇಷ್ಟು ಸ್ಪಷ್ಟವಾಗಿ ಕ್ಷೇತ್ರಜ್ಞನಾದವ 'ಭಗವಾನ್ ನಾರಾಯಣ' ಎಂದು ಭಾಗವತ ಹೇಳುತ್ತಿರುವಾಗ ಭಗವದ್ಗೀತೆಯ ಶ್ಲೋಕಕ್ಕೆ ಜೀವನೆಂದೇ ಅರ್ಥೈಸುವುದು ಎಷ್ಟು ಉಚಿತ? ಇಷ್ಟೇ ಅಲ್ಲದೆ 'ಕ್ಷೇತ್ರ' ಎಂದರೆ, ನಮ್ಮ ಚಿಕ್ಕ ಶರೀರ ಎಂದಿಷ್ಟೇ ಅರ್ಥವಲ್ಲ. ಮಹತ್ತತ್ವ, ಅಹಂಕಾರತತ್ವ, ಬುದ್ಧಿ, ಪಂಚ ಇಂದ್ರಿಯಗಳು, ಪಂಚ

ಭೂತಗಳು, ಭೂಮಿ, ಅಂತರಿಕ್ಷ –ಹೀಗೆ ಪ್ರಕೃತಿಯ ವಿಸ್ತಾರವೇ ಕ್ಷೇತ್ರವೆನಿಸಿದೆ. ಇವೆಲ್ಲವನ್ನೂ ತಿಳಿದವ ಕ್ಷೇತ್ರಜ್ಞನೆನಿಸುತ್ತಾನೆ.

ಬಡ ಜೀವನಿಗೆ ತನ್ನ ಶರೀರದ ಪರಿಜ್ಞಾನವೇ ಸರಿಯಾಗಿ ಇಲ್ಲ. ಹೀಗಿರಲು ಪ್ರಕೃತಿಯ ವಿಸ್ತಾರವನ್ನು ತಿಳಿಯುವ ಪರಿ ಎಂತು?! ಶರೀರದಲ್ಲಿ ಸ್ವಲ್ಪ ವಾತ ಪಿತ್ತ ವಿಕಾರಗಳು ಕಂಡರೆ ಸಾಕು; ಡಾಕ್ಟರ್ ಬಳಿ ಓಡುತ್ತೇವೆ. ನಣ್ಣ ಶರೀರದ ಜ್ಞಾನವೇ ಇಲ್ಲದಿರುವಾಗ ಜಗತ್ತನ್ನು ಹೇಗೆ ತಿಳಿದಾನು? ಭಗವಂತನಿಗಾದರೆ ಕೂಡಿನಬಹುದು. ಅವನ ಜ್ಞಾನದ ಹರವಿನ ಮುಂದೆ, ಸಮಗ್ರ ಜಗತ್ತು ತೃಣದಂತಾಗುತ್ತದೆ. ಈ ದೃಷ್ಟಿಯಿಂದಲೇ ಕ್ಷೇತ್ರಜ್ಞ ತಾನೆಂದು ಕೃಷ್ಣನು ಗೀತೆಯಲ್ಲಿ ನುಡಿದ ಹೊರತು 'ಜೀವನೇ ನಾನಾಗಿದ್ದೇನೆ' ಎಂಬ ಅರ್ಥದಲ್ಲಲ್ಲ. ಭಗವದ್ಗೀತೆಯಲ್ಲಿಯ ಗೊಂದಲಕ್ಕೆ ಸಮರ್ಪಕ ಉತ್ತರವನ್ನು ಜಡಭರತ–ರಹೂಗಣ ಸಂವಾದದಲ್ಲಿ ಕಾಣಬಹುದಾಗಿದೆ.

## ಭರತನ ತತ್ತ್ವೋಪದೇಶ

ಜಡಭರತನು 'ನಾನೇ ರಾಜ'ನೆಂದು ಉನ್ಮತ್ತನಾಗಿದ್ದ ರಹೂಗಣನಿಗೆ ತನ್ನ ಉಪದೇಶವನ್ನು ಮುಂದುವರಿಸುತ್ತಾನೆ.

ಎಲೈ ರಾಜನೇ! ನೀನು ರಾಜನೆಂದು ಭಾವಿಸಿ, 'ಪ್ರಜೆಗಳನ್ನು ಸಾಕುವವ. ರಾಜ್ಯದ ಹೊಣೆಗಾರಿಕೆಯನ್ನೆಲ್ಲ ನಾನೇ ಹೊತ್ತಿರುವೆ' ಎಂದು ಭಾವಿಸಿರುವೆ. ಆದರೆ ಇದು ಸರಿಯಲ್ಲ. ಏಕೆಂದರೆ ನೀನು ಪಾಲಕಿಯಲ್ಲಿ ಕುಳಿತಿರುವಿ. ಆ ಪಾಲಕಿಯು ಕೋಲಿನ ಮೇಲೆ ಕುಳಿತಿದೆ. ಕೋಲುಗಳು ನಮ್ಮ ಭುಜವನ್ನಾಶ್ರಯಿಸಿವೆ. ಭುಜಗಳನ್ನು ಬೆನ್ನು ಪೋಷಿಸಿದೆ. ಬೆನ್ನನ್ನು ಟೊಂಕ ಧರಿಸಿದೆ. ಅದಕ್ಕೂ ಆಧಾರಸ್ತಂಭಗಳಾಗಿ ಕಾಲ್ಗಳಿವೆ. ನೆಲದ ಆಸರೆ ಇಲ್ಲದೆ ಕಾಲೂರಲಾಗದು. ಹೀಗೆ ಅನೇಕರ ಆಸರೆಯನ್ನು ಹೊಂದಿದ ನೀನು ಜಡ ಮರದ ಪೆಟ್ಟಿಗೆಯಲ್ಲಿ ಅಜ್ಞಾನವೆಂಬ ಕಣ್ಪಟ್ಟಿ ಕಟ್ಟಿಕೊಂಡು ರಾಜನೆಂಬ ಬಿಗುಮಾನದಿಂದ ಗಟ್ಟಿಯಾಗಿ ಕುಳಿತಿರುವಿ. ಪಾಲಕಿ ಉರುಳಿದರೆ ನಿನ್ನ ರಾಜತ್ವವು ಉರುಳುವ ಸ್ಥಿತಿಯಲ್ಲಿರುವೆ. ಹೀಗಿರಲು ನೀನು ರಾಜನಾಗಲು ಸಾಧ್ಯವೇ? ಆಧಾರ ವಾದ ಭೂಮಿಯೇ ಕುಸಿದರೆ ನಾವೆಲ್ಲರೂ ಕುಸಿದು ಹೋಗಿ ಕೊನೆಯುಸಿರನ್ನೆಳೆಯ ಬೇಕಾದ ಸ್ಥಿತಿಯಿರಲು ರಾಜನೆಂಬ ಬಿಗುಮಾನವೇಕೆ? ಆದ್ದರಿಂದ ನಾನೇ ರಾಜನೆಂದು ಬಡಾಯಿ ಕೊಚ್ಚದಿರು. ಉನ್ಮತ್ತನಾದ ನೀನು ಜ್ಞಾನಿಗಡಣದಲ್ಲಿ ಶೋಭಿಸಲಾರೆ ಎನ್ನುತ್ತಾನೆ.

'ಜನಸ್ಯ ಗೋಪ್ತೇತಿ ವಿಕತ್ಥಮಾನೋ ನ ಶೋಭನೇ ವೃದ್ಧಸಭಾಸು ದುಷ್ಟಃ' ಎಂದು –"ರಾಜನಾದವ ಪ್ರಜೆಗಳಿಗೆ ಸಂತೋಷವನ್ನುಂಟುಮಾಡಬೇಕೆ ವಿನಾ ಬಡಪಾಯಿಗಳೆಂದು ಶೋಷಿಸುವುದು ತರವಲ್ಲ. ಭಗವಂತನ ರಾಜ್ಯದಲ್ಲಿ ಅವನ ಸೇವಕನಾಗಿ ಸಾಧ್ಯವಾದಷ್ಟು ಪ್ರಜೆಗಳ ಹಿತವನ್ನು ಬಯಸಬೇಕು. ಅಧಿಕಾರಸ್ಥಾನ ದಲ್ಲಿದ್ದೇವೆಂದು ಪ್ರಜೆಗಳನ್ನು ಶೋಷಿಸುವುದು, ಪೀಡಿಸುವುದು, ಕಷ್ಟಕ್ಕೆ ಗುರಿಯಾಗು

ವಂತೆ ಮಾಡುವುದು ಸರಿಯಲ್ಲ'' ಎಂದು ಸಕಲ ರಾಜರಿಗೆ ರಹೂಗಣನನ್ನು ನಿಮಿತ್ತೀಕರಿಸಿಕೊಂಡು ಅಧಿಕಾರಿಗಳಿಗೆ ಜಡಭರತ ಉಪದೇಶ ನೀಡಿದ್ದಾನೆ.

ಇಲ್ಲಿ ನಾವು ಎರಡಂಶಗಳನ್ನು ಗಮನಿಸಬೇಕು.

ಅ) ನಮಗೆ ಯಾರೇ ಆಶ್ರಯವನ್ನು ನೀಡಿದರೂ ಅವರಿಗೂ ಆಶ್ರಯದಾತ ಭಗವಂತನೇ ಎಂದು ಭಗವಂತನ ಸ್ಮರಣೆ ಜಾಗೃತವಾಗಿರಬೇಕು.

ಆ) ರಾಜನಾದವ ಪ್ರಜೆಗಳನ್ನು ಸ್ನೇಹಿತರಂತೆ ಮಕ್ಕಳಂತೆ ಕಾಣಬೇಕೇ ವಿನಾ ಎಂದೂ ಅವರಿಗೆ ಕಷ್ಟಕೊಡಬಾರದು. ಪ್ರಜೆಗಳ ಸಂತೋಷವೇ ತನ್ನ ಸಂತೋಷ ವೆಂದು ತಿಳಿಯಬೇಕು.

ಜಡಭರತ ಸಂಸಾರದ ಘೋರ ಸ್ವರೂಪವನ್ನು ಗುರುವಾಗಿ ಉಪದೇಶಿಸಿದ.

ನಮ್ಮ ಜೀವನ ದೊಡ್ಡ ಅರಣ್ಯವಿದ್ದಂತೆ ದಟ್ಟ ಅರಣ್ಯದಲ್ಲಿ ಮುಳ್ಳುಬಳ್ಳಿಗಳಿಂದ ನಡೆಯಲು ಸಾಧ್ಯವಾಗದು. ಈ ಅರಣ್ಯದಲ್ಲಿ ತೋಳಗಳ ಆಕ್ರಮಣವಿದೆ. ದುಷ್ಟ ಪ್ರಾಣಿಗಳ ಭಯಾನಕ ಗರ್ಜನೆ ಇದೆ. ಭಯವೋ ಭಯ.

ಸಂಸಾರವೂ ಇದಕ್ಕೆ ಹೊರತಾಗಿಲ್ಲ. ಸತ್ವರಜಸ್ತಮೋಗುಣಬದ್ಧರಾದ ಜೀವರು ಭವದಲ್ಲಿ ಕಟ್ಟುಬಿದ್ದಿದ್ದಾರೆ ತಾಪತ್ರಯಗಳೆಂಬ ಮುಳ್ಳುಗಳು ಚುಚ್ಚುತ್ತಲೇ ಇರುತ್ತವೆ. ಗರ್ಜನೆ ಕೇಳುವಂತೆ, ನಮ್ಮ ಬಗ್ಗೆ ಇಲ್ಲಸಲ್ಲದ ಅವಹೇಳನದ ಮಾತುಗಳು ಕೇಳುತ್ತಲೇ ಇರುತ್ತವೆ. ನಮ್ಮ ಬಂಧುಗಳು ತೋಳಗಳಂತಿದ್ದು ನಮ್ಮ ಸರ್ವಸ್ವವನ್ನೂ ಅಪಹರಿಸುತ್ತಿದಾರೆ. ಕಳ್ಳರಂತೆ ಕಾಮಾದಿ ಷಡ್ವೈರಿಗಳ ಆಕ್ರಮಣವಾಗಿದೆ. ಭಯಂಕರವಾದ ಗಾಳಿಯಿಂದ ಕಣ್ಣು ಕುರುಡಾಗುವಂತೆ ಮೋಹವೆಂಬ ಗಾಳಿಯಿಂದ ನಾವೂ ಕುರುಡರಾಗಿದ್ದೇವೆ. ಮರಗಿಡಬಳ್ಳಿಗಳಂತೆ ನಮ್ಮ ಕರ್ಮಗಳು ನಮ್ಮನ್ನು ಸುತ್ತುವರಿದು ಸಂಸಾರದಿಂದ ಸಾಗದಂತೆ ಗಮನಪ್ರತಿಬಂಧಕವಾಗಿವೆ.

ಈ ಅರಣ್ಯದಿಂದ ಪಾರಾಗಲು ಅನುಕೂಲವಾದ ಜನ್ಮ ಮಾನವಜನ್ಮ. ಈ ಜನ್ಮದಲ್ಲಿ ಉತ್ತಮ ಗುರುಗಳ ಅನುಗ್ರಹವನ್ನು ಹೊಂದಿ ಬಿಡುಗಡೆಯ ದಾರಿ ತುಳಿಯಬೇಕು. ಅರಣ್ಯದ ಹೊಂಡಗಳಲ್ಲಿ ಬೀಳದಿರಲು ಗೈಡ್ ಮಾಡುವವನ ಅಗತ್ಯವಿರುವಂತೆ ಸಂಸಾರವೆಂಬ ಅರಣ್ಯದಲ್ಲಿ ವಿಷಯಗಳೆಂಬ ಮಡುವಿನಲ್ಲಿ ಮುಳುಗದಿರಲು ಗುರುಗಳು ಮಾರ್ಗದರ್ಶಕರಾಗಬೇಕು.

ಒಬ್ಬ ಕಾಡಿನಲ್ಲಿ ಸಾಗುತ್ತಿದ್ದಾನೆ. ದಟ್ಟ ಕಾಡಿನಲ್ಲಿ ಸಾಗುತ್ತಾ ದಾರಿ ತಪ್ಪಿದ. ಕಾಡುಗಳ್ಳರು ಅವನ ಮೇಲೆ ಹಾರಿದರು. ಅವನಲ್ಲಿದ್ದ ಸಂಪತ್ತನೆಲ್ಲ ದೋಚಿದರು. ಕೊನೆಗೆ ಅವನ ಕಣ್ಣಿಗೆ ಬಟ್ಟೆ ಕಟ್ಟಿ ಹೊಂಡದೊಳಗೆ ಹಾಕಿ ನಡೆದರು. ಆಪತ್ತಿಗೆ ಸಿಲುಕಿದ ಅವನು ಗಟ್ಟಿಯಾಗಿ ಕಿರುಚಿದ. ಅವನ ಕೂಗು ಅದೇ ದಾರಿಯಲ್ಲಿ ಸಾಗುತ್ತಿರುವ ಸಜ್ಜನನೊಬ್ಬನಿಗೆ ಕೇಳಿಸಿತು. ಕರುಣೆಯಿಂದ ನೊಂದವನ ಬಳಿ ಬಂದು ಅವನಿಗೆ ಕಟ್ಟಿದ ಕಟ್ಟುಗಳನ್ನೆಲ್ಲ ಬಿಡಿಸಿ ಹೊಂಡದಿಂದ ಮೇಲಕ್ಕೆತ್ತಿ ಊರಿಗೆ ಸಾಗಬೇಕಾದ ದಾರಿಯನ್ನು ತೋರಿದ. ಆಪತ್ತಿನಿಂದ ರಕ್ಷಿಸಿದ. ಅದರಂತೆ

ಸಂಸಾರವೆಂಬ ಅರಣ್ಯದಲ್ಲಿ ಬಿದ್ದವರೇ, ಭಗವಂತನ ಬಳಿ ಸಾಗಬೇಕೆಂದು ಹೊರಟು ಸಂಸಾರವೆಂಬ ಕಗ್ಗತ್ತಲಿನ ಕಾಡಿನಲ್ಲಿ ದಾರಿತಪ್ಪಿದ್ದೇವೆ. ಅಡ್ಡಾದಿಡ್ಡಿ ಚಲಿಸುವ ಜನರಿಗೆ ಲಗ್ಗೆ ಹಾಕಲು ಕಾಮಕ್ರೋಧಾದಿ ಶತ್ರುಗಳು ಕಾಯುತ್ತಿದ್ದಾರೆ. ದಾರಿತಪ್ಪಿದ ನಮ್ಮ ಮೇಲೆ ಹಠಾತ್ ಆಕ್ರಮಣ ಮಾಡಿ ನಮ್ಮಲ್ಲಿದ್ದ ಅಧ್ಯಾತ್ಮಸಂಪತ್ತನ್ನೆಲ್ಲಾ ದೋಚಿ ಕೊಂಡು ವಿಷಯಗಳೆಂಬ ಹೊಂಡದಲ್ಲಿ ದೂಡಿದ್ದಾರೆ. ಅಜ್ಞಾನವೆಂಬ ಅರಿವೆಯಿಂದ ಅಧ್ಯಾತ್ಮದ ಕಣ್ಣುಗಳನ್ನು ಮುಚ್ಚಿದ್ದಾರೆ. ಇಂತಹ ದುಃಸ್ಥಿತಿಗೆ ಸಿಲುಕಿದ ನಾವು ಹರಿ ಎಂಬ ಪಾರವನ್ನು ಮುಟ್ಟುವುದು ಹೇಗೆ?! ಎಂದರೆ ಉಪನಿಷತ್ತು ಹೇಳುತ್ತದೆ –ಜನರ ಬಿಡುಗಡೆಯ ದಾರಿಯನ್ನು 'ಆಚಾರ್ಯವಾನ್ ಪುರುಷೋ ವೇದ' –ಶ್ರೇಷ್ಠ ಗುರುಗಳು ತಿಳಿಸಿದ್ದಾರೆ ಎಂದು. ಅಜ್ಞಾನದ ಕಟ್ಟನ್ನು ಬಿಚ್ಚಿ ಸಂಸಾರಸಾಗರದಿಂದ ಮೇಲೆತ್ತಿ 'ಮಗು ಹೀಗೆ ಸಾಗು' ಎಂದು ದಾರಿ ತೋರಿದರೆ ಮಾತ್ರ ಗುರಿಮುಟ್ಟ ಬಲ್ಲೆವು. ರಹೂಗಣನಿಗೆ ಜಡಭರತನು ಮಾರ್ಗದರ್ಶಕನಾದ. ಅಧ್ಯಾತ್ಮಗುರುವೆನಿಸಿದ. ನಮಗೂ ಅನೇಕ ಮಂದಿ ಗುರುಗಳು ದೊರೆತಿದ್ದಾರೆ. ಭಗವಾನ್ ಶ್ರೀಮದಾಚಾ ರ್ಯರು ಶ್ರೀಮದ್ವಾದಿರಾಜರು, ಶ್ರೀಮಟ್ಟೀಕಾಕೃತ್ಪಾದರು, ಶ್ರೀ ವ್ಯಾಸತೀರ್ಥ, ಶ್ರೀಮದ್ರಾಘವೇಂದ್ರರೇ ಮುಂತಾದ ಅನೇಕ ಮಹಾನುಭಾವರು ಜ್ಞಾನದ ಮಾರ್ಗ ವನ್ನು ನಮಗೆ ತೋರಿಸಿದ್ದಾರೆ; ತೋರಿಸುತ್ತಿದ್ದಾರೆ. ಅವರ ಪಾದಗಳನ್ನಾಶ್ರಯಿಸಿ ಸದ್ಗತಿಯಲ್ಲಿ ಸಾಗೋಣ!!

ಜಡಭರತನ ಉಪದೇಶದಿಂದ ರಹೂಗಣನ ಅಧ್ಯಾತ್ಮದ ಜಾಡ್ಯ ತೊಲಗಿತು. ಅಧ್ಯಾತ್ಮಬೆಳಕು ಚಿತ್ತದಲ್ಲಿ ಕೋರೈಸಿತು. ಭಕ್ತಿಯಿಂದ ವಿನಯಸಂಪನ್ನನಾಗಿ ಕೈಜೋಡಿಸಿ ನಮಿಸಿ ನುಡಿದ–

**ನಮೋ ಮಹದ್ಭ್ಯೋऽಸ್ತು ನಮಃ ಶಿಶುಭ್ಯೋ**
**ನಮೋ ಯುವಭ್ಯೋ ನಮ ಆವಟುಭ್ಯಃ ।**
**ಯೇ ಬ್ರಾಹ್ಮಣಾ ಗಾಮವಧೂತಲಿಂಗಾಃ**
**ಚರಂತಿ ತೇಭ್ಯಃ ಶಿವಮಸ್ತು ರಾಜ್ಞಾಮ್ ॥**

— (೫–೧೩–೨೩)

ಅವಧೂತ ವೇಷದಿಂದ ಯಾವ ಯಾವ ಬ್ರಾಹ್ಮಣರು ಭೂಮಿಯಲ್ಲಿ ಸಂಚರಿಸು ತ್ತಿದ್ದಾರೋ ಅವರೆಲ್ಲರಿಗೂ ನನ್ನ ನಮನ. ದೊಡ್ಡವರಿಗೆ, ಯುವಕರಿಗೆ, ಪುಟ್ಟ ಮಕ್ಕಳಿಗೆ ಎಲ್ಲರಿಗೂ ನನ್ನ ನಮನ ಎಂದು ತಲೆಬಾಗಿದ. ಸುಜ್ಞಾನದ ಸನ್ಮೂರ್ತಿ ಯಾದ. ಹೀಗೆ ವಿನಯ ಕೊಡುವ ವಿದ್ಯೆಯೇ ನಿಜವಾದ ವಿದ್ಯೆ ಎನಿಸುತ್ತದೆ ಯಲ್ಲವೇ?!

ಮುಂದೆ ಪರೀಕ್ಷಿದ್ರಾಜನು ಶುಕಾಚಾರ್ಯರ ಬಳಿ 'ಭೂಮಂಡಲದ ಮಹತ್ವ ವನ್ನು ತಿಳಿಸಿರಿ!' ಎಂದ. "ಅತ್ಯಂತ ಮಹತ್ವಪೂರ್ಣವಾದ ಭೂಮಂಡಲವನ್ನು ಬಣ್ಣಿಸಲು ದೇವತೆಗಳ ಆಯುಷ್ಯವೂ ಸಾಲದು. ಆದರೂ ಪ್ರಧಾನ ಭಾಗಗಳನ್ನು ತಿಳಿಸುತ್ತೇನೆ"ಂದು ಶುಕಾಚಾರ್ಯರು ತಮ್ಮ ಉಪದೇಶವನ್ನು ಆರಂಭಿಸುತ್ತಾರೆ.

ನಾವು ವಾಸಮಾಡುತ್ತಿರುವ ಜಂಬೂದ್ವೀಪವು ಲಕ್ಷ ಯೋಜನ ವಿಸ್ತಾರವಾಗಿದೆ ಈ ಜಂಬೂದ್ವೀಪದಲ್ಲಿ ಒಂಭತ್ತು ವಿಭಾಗಗಳಿವೆ. ಒಂಭತ್ತು ವರ್ಷಗಳಲ್ಲಿ ಅವತರಿಸಿದ ಭಗವಂತನ ರೂಪಗಳನ್ನು, ಉಪದೇಶಿಸಿದ ಸಂದೇಶಗಳನ್ನು ಸಂಕ್ಷಿಪ್ತವಾಗಿ ನಿರೂಪಿಸುತ್ತಾರೆ. ಒಂಬತ್ತಾಗಿ ಹೀಗೆ ವಿಭಾಗಿಸಬಹುದು–

೧. ಇಲಾವೃತವರ್ಷ –ಸಂಕರ್ಷಣ
೨. ಭದ್ರಾಶ್ವವರ್ಷ –ಹಯಗ್ರೀವ
೩. ಹರಿವರ್ಷ –ನರಸಿಂಹ
೪. ಕೇತುಮಾಲವರ್ಷ –ಪ್ರದ್ಯುಮ್ನ
೫. ರಮ್ಯಕವರ್ಷ –ಮತ್ಸ್ಯ
೬. ಹಿರಣ್ಮಯವರ್ಷ –ಕೂರ್ಮ
೭. ಉತ್ತರಕುರುವರ್ಷ –ವರಾಹ
೮. ಕಿಂಪುರುಷವರ್ಷ –ಶ್ರೀರಾಮ
೯. ಭಾರತವರ್ಷ –ನರನಾರಾಯಣ –ಎಂದು.

## ಗುರುತ್ವಾಕರ್ಷಣೆ ಅಧಿಪ ಸಂಕರ್ಷಣ

ಇಲಾವೃತವರ್ಷದಲ್ಲಿ ಸಂಕರ್ಷಣರೂಪದಿಂದ ಭಗವಂತ ನೆಲೆಸಿದ್ದಾನೆ. ಮಹಾಶೇಷನ ಅಂತರ್ಯಾಮಿಯಾಗಿದ್ದಾನೆ. ಸಂಕರ್ಷಣನನ್ನು ಹೃದಯದಲ್ಲಿ ಧರಿಸಿದ್ದರಿಂದಲೇ ಶೇಷನು ಸಮಗ್ರ ಭೂಮಂಡಲವನ್ನು ಧರಿಸಲು ಸಮರ್ಥನಾದ. ಭೂಮಿಯಲ್ಲಿರುವ ಆಕರ್ಷಣಶಕ್ತಿಗೆ ಅಭಿಮಾನಿಯಾದ. ಶೇಷನ ಆಕರ್ಷಣಶಕ್ತಿಯಿಂದಲೇ ಭೂಮಂಡಲವು ನಿಂತಿದೆ. ಶೇಷನಿಗೆ ಆಕರ್ಷಣಶಕ್ತಿಯನ್ನು ನೀಡಿದವ ಭಗವಂತನೇ. ವಿಶಾಲವಾದ ಆಕಾಶದಲ್ಲಿ ಅನೇಕ ಗ್ರಹಗಳು ತಮ್ಮ ತಮ್ಮ ನಿರ್ದಿಷ್ಟ ಸ್ಥಾನಗಳಲ್ಲಿ ಘರ್ಷಣೆಯುಂಟಾಗದಂತೆ ನಿಲ್ಲಬೇಕಾಗಿದ್ದರೆ ಸಂಕರ್ಷಣನ ಆಕರ್ಷಣಶಕ್ತಿ ಅತ್ಯಗತ್ಯ. ಶೇಷನಲ್ಲಿಯೂ ಆ ಶಕ್ತಿಯನ್ನು ತುಂಬಿ ಎಲ್ಲವೂ ಕ್ರಮಬದ್ಧ ವಾಗಿ ಚಲಿಸುವಂತೆ ಮಾಡುತ್ತಾನೆ.

ಇಂದು ನಾವುಗಳು ನಾಗಪೂಜೆ, ನಾಗಮಂಡಲ, ಆಶ್ಲೇಷಾಬಲಿ ಮುಂತಾದ ಸಮಾರಂಭಗಳನ್ನು ಕಾಣುತ್ತೇವೆ. ನಾಗಾರಾಧನೆ ಎಂದರೆ ಕೇವಲ ನಮ್ಮ ಕಣ್ಮುಂದೇ ಚಲಿಸುವ ಸರ್ಪಗಳ ಆರಾಧನೆ ಎಂದರ್ಥವಲ್ಲ. ಸರ್ಪವೇ ದೇವರಲ್ಲ. ಅವುಗಳಲ್ಲಿ ಅಷ್ಟಕುಲದ ನಾಗಗಳು, ಅವುಗಳಿಗೆ ಅಧಿಪತಿಯಾದವ ಶೇಷ, ಅವನ ಅಂತರ್ಯಾಮಿಯಾದವ ಸಂಕರ್ಷಣ ಮುಂತಾಗಿ ಚಿಂತಿಸಿ ಆರಾಧಿಸಬೇಕು. ಇಂತಹ ಸಂಕರ್ಷಣರೂಪಿ ಪರಮಾತ್ಮನನ್ನು ಪರಮ ವಿರಕ್ತ ವೈಷ್ಣವಾಗ್ರಣಿಗಳಾದ ರುದ್ರದೇವರು ಹೀಗೆ ಸ್ತೋತ್ರಮಾಡುತ್ತಿದ್ದಾರೆ–

'ಓಂ ನಮೋ ಭಗವತೇ ಮಹಾಪುರುಷಾಯ ಸರ್ವಗುಣಸಂಖ್ಯಾತಾಯ ಅನಂತಾಯಾವ್ಯಕ್ತಾಯ ನಮಃ' — (೫.೧೭.೧೭)

'ಜ್ಞಾನಾನಂದಾದಿ ಸ್ವರೂಪಭೂತಗುಣಗಳಿಂದ ವಿಖ್ಯಾತನಾದ, ಆದಿಮಧ್ಯಾಂತ ಶೂನ್ಯನಾದ ನಿತ್ಯಾವ್ಯಕ್ತರೂಪನಾದ ಪರಮಪುರುಷನಾದ ಭಗವಂತನೇ ನಿನಗೆ ನಮಸ್ಕಾರ' ಎಂದು.

## ಜ್ಞಾನದಾತೃವಾದ ಹಯಗ್ರೀವ

ಭದ್ರಾಶ್ವ ವರ್ಷದಲ್ಲಿ ಹಯಗ್ರೀವರೂಪಿ ಭಗವಂತನು ನೆಲೆಸಿದ್ದಾನೆ. ಈ ಹಯಗ್ರೀವರೂಪಿ ಹರಿಯನ್ನು ಸ್ತುತಿಸಿದರೆ ಆಲಸ್ಯ, ಜಾಡ್ಯ, ವ್ಯಾಮೋಹ ಎಲ್ಲವೂ ದೂರವಾಗುತ್ತವೆ. ಹಾಗಿದ್ದರೂ ನಾವು ಮಾಯೆಗೆ ತುತ್ತಾಗಿ ಪುಣ್ಯಕರ್ಮಗಳ ನ್ನಾಚರಿಸದೆ ಪುಣ್ಯದ ಫಲವನ್ನು ಬಯಸುತ್ತಿದ್ದೇವೆ. ಸುಖದ ಕಾರಣ ಬೇಡ, ಸುಖ ಬೇಕೆನ್ನುತ್ತೇವೆ.

ಮಹಾಭಾರತದಲ್ಲಿ ಯಕ್ಷ ಯುಧಿಷ್ಠಿರನ ಬಳಿ ಪ್ರಶ್ನಿಸುತ್ತಾನೆ. ಜಗತ್ತಿನಲ್ಲಿ ನೀನು ಕಂಡ ಆಶ್ಚರ್ಯ ಸಂಗತಿ ಏನು? ಅದಕ್ಕೆ ಧರ್ಮರಾಜನು ನೀಡುವ ಉತ್ತರ–

**ಅಹನ್ಯಹನಿ ಭೂತಾನಿ ಗಚ್ಛಂತಿ ಯಮಸಾದನಮ್ ।**
**ಶೇಷಾಃ ಸ್ಥಾವರಮಿಚ್ಛಂತಿ ಕಿಮಾಶ್ಚರ್ಯಮತಃ ಪರಮ್ ॥** ಎಂದು.

ನಮ್ಮ ಕಣ್ಣೆದುರಿಗೂ ಪ್ರತಿನಿತ್ಯವೂ ಸಾವಿರಾರು ಜನರು ಯಮಸದನಕ್ಕೆ ಸಾಗುತ್ತಲೇ ಇದ್ದಾರೆ. ನಾವೂ ಒಂದು ದಿನ ಅಲ್ಲಿಗೇ ಸಾಗುತ್ತೇವೆ ಎಂದು ತಿಳಿಯದೆ ಇಲ್ಲೇ ಇರಬೇಕೆಂದು ಬಯಸುತ್ತಾರೆಯೇ ವಿನಾ ಸತ್ಸಾಧನೆಯಲ್ಲಿ ಯಾರೂ ತೊಡಗರು. ಇದಕ್ಕಿಂತಲೂ ಆಶ್ಚರ್ಯವಿನ್ನೇನಿದೆ ಎಂದು ಉತ್ತರಿಸಿದ. ಅದರಂತೆ ಭಾಗವತವೂ ಹೇಳಿದೆ–

**ಅಹೋ ವಿಚಿತ್ರಂ ಭಗವದ್ವಿಚೇಷ್ಟಿತಂ**
**ಘ್ನಂತಂ ಜನೋಽಯಂ ಹಿ ಮಿಷನ್ನ ಪಶ್ಯತಿ ।**
**ಧ್ಯಾಯನ್ನಸದ್‌ಯರ್ಹಿ ವಿಕರ್ಮ ಸೇವತೇ**
**ನಿರ್ಹೃತ್ಯ ಪುತ್ರಃ ಪಿತರಂ ಜಿಜೀವಿಷುಃ ॥** — (೫–೧೮–೩)

'ಭಗವಂತನ ವ್ಯಾಪಾರವು ಆಶ್ಚರ್ಯಕರವಾಗಿದೆ. ಜನರು ತಮಗೆ ಮಾರಕನಾಗಿ ಮೃತ್ಯು ಇದ್ದಾನೆಂದು ತಿಳಿಯುತ್ತಿದ್ದರೂ ತಿಳಿಯುತ್ತಿಲ್ಲ. ನಿರಂತರವೂ ಅಸತ್ಕರ್ಮಗಳಲ್ಲಿಯೇ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಆದ್ದರಿಂದಲೇ ತಿಳಿಗಣ್ಣು ನಾಶವಾಗಿದೆ. ತಮ್ಮ ಕಣ್ಣೆದುರಿಗೆ ಅಪ್ಪನಿಗೆ ಅಂತಿಮ ಸಂಸ್ಕಾರಗಳನ್ನು ಸಲ್ಲಿಸಿ ಬಂದರೂ ಪುನಃ ವಿಷಯಪದಾರ್ಥಗಳ ಕಡೆಯೇ ಗಮನ ಹರಿಸುತ್ತಾನೆ. ಇದೇ ಆಶ್ಚರ್ಯವು' ಎಂದು.

ಯಶೋದೆಯು ಶ್ರೀಕೃಷ್ಣನ ಬಾಯಲ್ಲಿ ವಿಶ್ವರೂಪವನ್ನು ಕಂಡರೂ, ಮರುಕ್ಷಣ ದಲ್ಲಿ ಮೋಹಪರವಶಳಾಗಿ ಮಗನೆಂದು ಎತ್ತಿ ಮುದ್ದಾಡಿದಳು. ಒಂದು ಕ್ಷಣದಲ್ಲಿ ಸಮಗ್ರ ವಿಶ್ವವನ್ನೇ ಕಂಡು ಮರುಕ್ಷಣದಲ್ಲಿ ಮಗನೆಂದು ತಿಳಿಯಬೇಕಾದರೆ ಭಗವಂತನ ಮಾಯೆ ಎಷ್ಟು ವಿಚಿತ್ರ! ಎಂತಹ ಅದ್ಭುತ!

ವಿಷಯಪದಾರ್ಥಗಳ ಸೇವನೆಯಿಂದ ಅನರ್ಥವೇನಾಗುತ್ತದೆ ಎಂದು ಎಲ್ಲರಿಗೂ ತಿಳಿದಿದೆ. ಆದರೂ ವ್ಯಸನಗಳನ್ನು ಬಿಡುವುದಿಲ್ಲ. ಸಿಗರೇಟ್, ಮದ್ಯಪಾನ, ಗುಟ್ಕಾ ಸೇವನೆಗಳಿಂದ ಅನರ್ಥದ ಹಾದಿ ತುಳಿಯುತ್ತಿದ್ದಾರೆ. ಗೊತ್ತಿದ್ದೂ ಸೇವಿಸುವ ಪರಿಯನ್ನು ಕಂಡಾಗ ಭಗವಂತನ ಮಾಯೆ ಎಂದೇ ಹೇಳಬೇಕು.

ತಪ್ಪು ಎಂದು ತಿಳಿದ ಮೇಲೆ ಕಷ್ಟವಾದರೂ ಸರಿ ಭಗವಂತನ ಮೇಲೆ ಭಾರ ಹಾಕಿ ಅಸತ್ಕರ್ಮಗಳಿಂದ ನಿರ್ಮುಕ್ತರಾಗಬೇಕು. ಬಂಧ–ಮೋಕ್ಷಗಳಿಗೆ ಕಾರಣನಾದವ ಶ್ರೀಹರಿಯೇ ಅಲ್ಲವೇ?

**'ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ'**

ಹಯಗ್ರೀವರೂಪಿ ಭಗವಂತನು ತಮೋಗುಣದ ಪ್ರತೀಕನಾದ ಮಧುನಾಮಕ ದೈತ್ಯನನ್ನು ಸದೆಬಡಿದು ವೇದವನ್ನುದ್ಧರಿಸಿದ. ನಮ್ಮಲ್ಲಿಯ ಅಜ್ಞಾನವೆಂಬ ತಮೋ ಗುಣವಿದೆ. ಮಧುವಿನಂತೆ ತೋರುವ ವಿಷಯಪದಾರ್ಥಗಳು ವೇದವನ್ನು ಅಪ ಹರಿಸಿದ ಮಧುದೈತ್ಯನಂತೆ ನಮ್ಮ ಜ್ಞಾನವನ್ನೇ ಅಪಹಾರ ಮಾಡುತ್ತವೆ. ಅವುಗಳಿಂದ ಬಿಡುಗಡೆಯನ್ನು ಹೊಂದಬೇಕಿದ್ದರೆ ಹಯಗ್ರೀವನ ಅನುಗ್ರಹ ಅತ್ಯಗತ್ಯ.

"ಹಯಗ್ರೀವರೂಪಿ ಭಗವಂತನ ನಾಸಾಪುಟಗಳಿಂದ ಮತ್ತು ಮುಖಕಮಲ ದಿಂದ ನಿರಂತರವೂ ತತ್ವಸುಧೆಯು ಹರಿದು ಬರುತ್ತಿದೆ. ಬ್ರಹ್ಮಾದಿದೇವತೆಗಳು ಭಕ್ತಿ ಯಿಂದ ಇವನಡಿಯಲ್ಲಿ ಮುಡಿಪಿರಿಸಿದ್ದಾರೆ. ಲಕ್ಷ್ಮೀದೇವಿಯು ಅಮೃತಾಭಿಷೇಕವನ್ನು ಮಾಡುತ್ತಿದ್ದಾಳೆ. ಇಂತಹ ಹಯವದನನಿಗೆ ನಮನ" ಎಂದು ಆಚಾರ್ಯರು ತಂತ್ರಸಾರಸಂಗ್ರಹದಲ್ಲಿ ಹೇಳಿದ್ದಾರೆ–

**ವಂದೇ ತುರಂಗವದನಂ ಶಶಿಬಿಂಬಸಂಸ್ಥಂ**

..............................................

**ನಸ್ತೋ ಮುಖಾದಪಿ ನಿರಂತರಮುದ್ಗಿರಂತಂ**
**ವಿದ್ಯಾ ಅಶೇಷತ, ಉತಾಬ್ಜ ಭವೇಶಮುಖ್ಯೈಃ ।**
**ಸಂಸೇವ್ಯಮಾನಮತಿಭಕ್ತಿಭರಾವನಮ್ರೈಃ**
**ಲಕ್ಷ್ಮ್ಯಾಮೃತೇನ ಸತತಂ ಪರಿಷಿಚ್ಯಮಾನಮ್ ॥** — (೪–೫೧)

ಇಂತಹ ಹಯಗ್ರೀವನನ್ನು ಭದ್ರಶ್ರವಸರು ನಿತ್ಯ ಜಪಿಸುತ್ತಾ ನಮಿಸುತ್ತಿದ್ದಾರೆ–

**ಓಂ ನಮೋ ಭಗವತೇ ಧರ್ಮಾಯಾತ್ಮವಿಶೋಧನಾಯ ನಮಃ** — (೫–೧೮–೨)

'ಜೀವಾತ್ಮರನ್ನು ಜ್ಞಾನದಿಂದ ತೊಳೆಯುವ, ಧರ್ಮಧಾರಕನಾದ ಭಗವಂತನೇ ನಿನಗೆ ನಮನ' ಎಂದು.

## ಅಸುರರ ಅಂಜಿಸುವ ನರಸಿಂಹ

ಹರಿವರ್ಷದಲ್ಲಿ ನರಸಿಂಹರೂಪಿ ಶ್ರೀಹರಿಯನ್ನು ಪ್ರಹ್ಲಾದನು ಸ್ತೋತ್ರಮಾಡುತ್ತಿದ್ದಾನೆ. ಭಗವಂತನು ನಮ್ಮ ಮನಸ್ಸಿನಲ್ಲಿ ನೆಲೆಗೊಳ್ಳಬೇಕಿದ್ದರೆ ನಿರ್ವ್ಯಾಜ ಭಗವದ್ಭಕ್ತಿಯನ್ನು ಅಳವಡಿಸಿಕೊಳ್ಳಬೇಕು. ಭಕ್ತಿ ಬಂದಿದ್ದಲ್ಲಿ ಸದ್ಗುಣಗಳೆಲ್ಲವೂ ಸಂಗಮವಾಗುತ್ತವೆ. ಆವಾಗ ದೇವತೆಗಳು ಆಗಮಿಸುತ್ತಾರೆ–

**ಯಸ್ಯಾಸ್ತಿ ಭಕ್ತಿರ್ಭಗವತ್ಯಕಿಂಚನಾ**
**ಸರ್ವೈರ್ಗುಣೈಸ್ತತ್ರ ಸಮಾಸತೇ ಸುರಾಃ ।** — (೫–೧೮–೧೨)

ದೀಪವಿಲ್ಲದ ಮನೆಗೆ ಕಳ್ಳರು ನುಗ್ಗುತ್ತಾರೆ. ದೀಪ ಉರಿಯುತ್ತಿದ್ದರೆ ಜನರು ಎಚ್ಚೆತ್ತಿದ್ದಾರೆಂದು ಒಳಬರಲು ಅಂಜುತ್ತಾರೆ. ಅದರಂತೆ ಅಜ್ಞಾನವೆಂಬ ಕತ್ತಲು ತುಂಬಿದ ಮನವೆಂಬ ಮನೆಯೊಳಗೆ ಅಸತ್ಕರ್ಮಗಳೆಂಬ ಅಸುರರು ಧೈರ್ಯವಾಗಿ ಪ್ರವೇಶಿಸುತ್ತಾರೆ. ನಮ್ಮಲ್ಲಿರುವ ಸದ್ಗುಣಗಳೆಂಬ ಸಂಪತ್ತನ್ನು ದೋಚುತ್ತಾರೆ. ಮನಸು ದುರ್ಗುಣಗಳ ಅಡಗುದಾಣವಾಗುತ್ತದೆ. ಆದರೆ ಮನೆಯಲ್ಲಿ ದೀಪ ಉರಿಯುತ್ತಿದ್ದರೆ ಕಳ್ಳರ ಭಯವಿಲ್ಲ. ಅದರಂತೆ ಮನವೆಂಬ ಮನೆಯಲ್ಲಿ ಭಕ್ತಿ ಎಂಬ ನಂದಾದೀಪ ಉರಿಯುತ್ತಿದ್ದರೆ ಅಸುರರ ಭಯವಿಲ್ಲ. ಸದ್ಗುಣಗಳ ಪ್ರತೀಕರಾದ ದೇವತೆಗಳು ಆಗಮಿಸುತ್ತಾರೆ. ಆದ್ದರಿಂದ ನಮ್ಮ ಹೃದಯದೇಗುಲದಲ್ಲಿ ನಿರಂತರವು ಭಕ್ತಿ ಎಂಬ ನಂದದ ದೀಪ ಉರಿಯುತ್ತಿರಬೇಕು.

ಭಗವಂತನು ಜೀವಿಗಳಿಗೆ ಆತ್ಮನೆನಿಸಿದ್ದಾನೆ.

**ಹರಿರ್ಹಿ ಸಾಕ್ಷಾದ್ಭಗವಾನ್ ಶರೀರಿಣಾಮಾತ್ಮಾ** — (೫–೧೮–೧೩)

ಭಗವಂತನು ಎಲ್ಲ ಜೀವಿಗಳ ಆತ್ಮ. ಎಂದರೆ ನಾವೆಲ್ಲರೂ ಭಗವಂತರೇನು? ಎಂದರೆ ಅದಕ್ಕಾಗಿ 'ಝಷಾಣಾಮಿವ ತೋಯಮೀಪ್ಸಿತಃ' (೫–೧೮–೧೩) ಎಂದರು. ನೀರಿಲ್ಲದೆ ಮೀನುಗಳು ಬದುಕುವುದಿಲ್ಲ. ಅದರಂತೆ ಭಗವಂತನಿಲ್ಲದ ಜೀವರಿಗೆ ಅಸ್ತಿತ್ವವಿಲ್ಲ. ಪ್ರತಿಯೊಂದಕ್ಕೂ ಭಗವಂತನ ಆಸರೆ ಬೇಕು ಎಂಬ ಅರ್ಥದಲ್ಲಿ 'ಶರೀರಿಣಾಮಾತ್ಮಾ' ಎಂದರು.

ಇಂತಹ ಭಗವಂತನನ್ನು ನಿರಂತರ ಹೀಗೆ ಜಪಿಸುತ್ತಾರೆ–

**ಓಂ ನಮೋ ಭಗವತೇ ನೃಸಿಂಹಾಯ ನಮಸ್ತೇಜಸ್ತೇಜಸೇ ಆವಿರಾವಿರ್ಭವ**
**ವಜ್ರನಖ ವಜ್ರದಂಷ್ಟ್ರ ಕರ್ಮಾಶಯಾನ್ ರಂಧಯ ರಂಧಯ**
**ತಮೋ ಗ್ರಸ ಗ್ರಸ ಓಂ ಸ್ವಾಹಾ ಅಭಯಮಭಯಮಾತ್ಮನಿ ಭೂಯಿಷ್ಠಾ ಓಂ**
**ಕ್ಷ್ರೌಮ್ ॥** — (೫–೧೮–೮)

'ವಜ್ರದಂತಹ ಕೋರೆದಾಡಿಗಳುಳ್ಳ ವಜ್ರನಖದ ನರಸಿಂಹನೇ! ಸಹಸ್ರ ಸೂರ್ಯರ ತೇಜಸ್ಸನ್ನೂ ಮೀರಿರುವವನೇ! ಪ್ರತಿದಿನವು ವ್ಯಕ್ತನಾಗು. ಕರ್ಮದ ಗಂಟನ್ನು ಅಂತಃಕರಣವನ್ನು ಸುಟ್ಟುಬಿಡು! ಅಜ್ಞಾನವನ್ನು ಕಬಳಿಸು. ಅಭಯಪ್ರದನಾದ ಪರಮಾತ್ಮನೇ ನಿನಗೆ ಸದಾ ನನ್ನ ನಮನಗಳಿರಲಿ!'

## ಸತಿಯರಿಗೆ ಗತಿ ಪ್ರದ್ಯುಮ್ನ

ಕೇತುಮಾಲವರ್ಷದಲ್ಲಿ ಪ್ರದ್ಯುಮ್ನನಾಗಿ ಅವತರಿಸಿದ ಶ್ರೀಹರಿಯನ್ನು ಲಕ್ಷ್ಮೀ ದೇವಿಯು ಸ್ತುತಿಸುತ್ತಿದ್ದಾಳೆ. ಭಗವಂತನು ಸೌಂದರ್ಯಶಿಖಾಮಣಿಯಾದ ಮನ್ಮಥ ನಲ್ಲಿ ಪ್ರದ್ಯುಮ್ನರೂಪದಿಂದ ನೆಲೆಸಿದ್ದಾನೆ.

ನಮ್ಮ ಸ್ತ್ರೀಯರೆಲ್ಲರೂ ತಮ್ಮ ತಮ್ಮ ಸತಿಗಳಲ್ಲಿ ಈ ಪ್ರದ್ಯುಮ್ನರೂಪಿ ಭಗವಂತ ನನ್ನು ಕಾಣಬೇಕು.

ಪತಿಭಕ್ತಿ ಎಂದರೆ ನಮ್ಮ ಕಣ್ಣಿಗೆ ಕಾಣುವ ಗಂಡನ ಸ್ಮರಣೆಯಲ್ಲ ಗಂಡನಲ್ಲಿ ಅಭಿಮಾನವಿದ್ದರೂ ಅವನ ದುರ್ನಡತೆಗಳು ನೆನಪಾದಾಗ ಭಕ್ತಿ ಹುಟ್ಟದು. ಆದ್ದ ರಿಂದ ಪತಿಯ ಸ್ಮರಣೆಯೇ ಭಕ್ತಿ ಎಂದಲ್ಲಿ ಪತಿಭಕ್ತಿಯೇ ಅಸಂಭವವೆನಿಸೀತು. ಅದಕ್ಕಾಗಿ ಪತಿಯಲ್ಲಿ ಪ್ರದ್ಯುಮ್ನರೂಪಿ ಭಗವಂತನನ್ನು ಕಂಡು ಭಜಿಸಬೇಕು. ಪತಿಯಲ್ಲಿ ದೋಷಗಳಿದ್ದರೂ ಅಂತರ್ಯಾಮಿಯಾದ ಶ್ರೀಹರಿಯಲ್ಲಿ ದೋಷ ಗಳಿಗವಕಾಶವಿಲ್ಲವಷ್ಟೆ!

ಇಷ್ಟೇ ಅಲ್ಲದೆ ಸರ್ವಾತ್ಮನಾ ಅಸ್ವತಂತ್ರನಾದ ಪತಿಯನ್ನೇ ಶರಣುಹೊಕ್ಕರೆ ಅವನೇನು ಕೊಡಬಲ್ಲ? ಪ್ರಾರಬ್ಧಕ್ಕನುಸಾರವಾಗಿ ಮಕ್ಕಳನ್ನು ನೀಡಬಲ್ಲನೇ ಹೊರತು ಆತ್ಮನ ಒಳಿತಿಗೆ ಕಾರಣನಾದಾನೆಯೆ?! ಪತ್ಯಂತರ್ಗತ ಪ್ರದ್ಯುಮ್ನನನ್ನು ಸ್ತುತಿಸಿದರೆ ಬಂಧವನ್ನೇ ಕಳೆದುಕೊಳ್ಳಬಹುದೆಂದು ಸೂಚಿಸುತ್ತಾ ಲಕ್ಷ್ಮೀದೇವಿಯು ಪ್ರದ್ಯುಮ್ನ ಸ್ತೋತ್ರದಲ್ಲಿ ನಿರತಳಾಗಿದ್ದಾಳೆ–

ಓಂ ಹ್ರಾಂ ಹ್ರೀಂ ಹ್ರೂಂ ಓಂ ನಮೋ ಭಗವತೇ ಹೃಷೀಕೇಶಾಯ
ಸರ್ವವಿಶೇಷವಿತ್‌ಕ್ಷೇತ್ರಾತ್ಮನೇ ಆಕೂತೀನಾಂ ಚಿತ್ತಾನಾಂ ಚೇತಸಾಂ
ವಿಶೇಷಾಣಾಂ ಚಾಧಿಪತಯೇ ಷೋಡಶಕಲಾಯ ಛಂದೋಮಯಾಯ
ಅನ್ನಮಯಾಯಾಮೃತಮಯಾಯ ಸರ್ವಮಯಾಯ ಸಹಸೇ ಓಜಸೇ
ಬಲಾಯ ಕಾಂತಾಯ ಕಾಮಾಯ ನಮಸ್ತೇ ಉಭಯತ್ರ ಭೂಯಾತ್ ॥

— (೫–೧೮–೧೮)

"ಸರ್ವಜ್ಞರಾದ ಬ್ರಹ್ಮಾದಿಗಳ ಮನದಲ್ಲಿ ನೆಲೆನಿಂತವನೇ! ಷೋಡಶ ಕಲಾತ್ಮಕ ವಾದ ಚೇತನಕ್ಕೆ ಪ್ರವರ್ತಕನೇ! ವೇದಪ್ರತಿಪಾದ್ಯರಲ್ಲಿ ಅಗ್ರಗಣ್ಯನೇ! ಎಲ್ಲವನ್ನೂ ಕಬಳಿಸುವವನೇ! ಮುಕ್ತಾತ್ಮರಿಗೊಡೆಯನೇ! ಎಲ್ಲರಿಗೂ ಒಡೆಯನೇ! ಸರ್ವತ್ರ ನಿನಗೆ ನಮನವು"

## ಮತ್ಸ್ಯನ ಸಂಬಂಧ ಬೆಳೆಯಲಿ!!

ರಮ್ಯಕವರ್ಷದಲ್ಲಿ ಮತ್ಸ್ಯರೂಪಿ ಶ್ರೀಹರಿಯನ್ನು ಮನುವು ಸ್ತುತಿಸುತ್ತಾನೆ.

ಪ್ರಳಯಜಲಧಿಯಲ್ಲಿ ಎಲ್ಲವೂ ಕೊಚ್ಚಿಹೋಗುತ್ತಿರಲು, ಮನುವು ಮಂತ್ರ–ಸ್ತೋತ್ರಗಳಿಂದ ಅಚ್ಯುತನನ್ನು ಮೆಚ್ಚಿಸಿದ. ಪ್ರಸನ್ನನಾದ ಭಗವಂತ ಮತ್ಸ್ಯನಾಗಿ ಬಂದ.

ಮನುವಿನ ಧಾನ್ಯಗಳಿಂದ ತುಂಬಿದ ದೋಣಿಯು ಮುಗುಚುತ್ತಿರಲು ಮತ್ಸ್ಯ ತನ್ನ ಕೋರೆಯಲ್ಲಿ ಸಿಕ್ಕಿಸಿಕೊಂಡು ರಕ್ಷಿಸಿದ ಮಹಾಭಯಾನಕವಾದ ಪ್ರಳಯ ಜಲಧಿಯಲ್ಲಿಯೂ ಏನೂ ಘಾಸಿಯಾಗದಂತೆ ದೋಣಿಯನ್ನು ಎಳೆದುಕೊಂಡು ನಡೆದ.

ಇಂತಹ ಮತ್ಸ್ಯನ ಉಪಕಾರವನ್ನು ಮನುವು ರಮ್ಯಕವರ್ಷದಲ್ಲಿ ನೆನೆಯುತ್ತಲೇ ಇದ್ದಾನೆ.

ಮತ್ಸ್ಯನ ಅನುಗ್ರಹ ಮನುವಿಗೆ ಮಾತ್ರ ಸೀಮಿತವಾಗಿಲ್ಲ. ಮನುಕುಲದ ಮಾನವರಿಗೆಲ್ಲಾ ಮತ್ಸ್ಯನ ಅನುಗ್ರಹವಾಗಬೇಕು.

ಸಂಸಾರವೆಂಬ ಸಮುದ್ರದಲ್ಲಿ ಜೀವನವೆಂಬ ನಾವೆಯಲ್ಲಿ ನಾವು ಕುಳಿತಿದ್ದೇವೆ. ಈ ನಾವೆಯು ಎಲ್ಲಿಯೂ ಮುಗುಚಬಹುದು. ಇದು ತಾಪತ್ರಯಗಳೆಂಬ ಊರ್ಮಿಗಳಿಂದ ಘಾಸಿಗೊಳ್ಳದೆ ಸುರಕ್ಷಿತವಾಗಿ ಗುರಿತಲುಪಬೇಕಾದರೆ ಮತ್ಸ್ಯನ ಸಹಾಯ ಬೇಕು. ಧಾನ್ಯದ ದೋಣಿಯನ್ನು ಮನುವು ಮತ್ಸ್ಯನ ಕೋರೆಗೆ ಸಿಕ್ಕಿಸಿದ. ಕ್ಷೇಮವಾಗಿ ಉಳಿದ. ಅದರಂತೆ ನಾವೂ ಸಹ ಜೀವನ ನಾವೆಯನ್ನು ಭಗವಂತನ ಜತೆಗೆ ಜೋಡಿಸಬೇಕು. ನಮ್ಮ ಜೀವನದಲ್ಲಿ ಭಗವಂತನ ಸಂಬಂಧವನ್ನು ಕಲ್ಪಿಸಿಕೊಳ್ಳಬೇಕು. ಅವನು ನಮಗೆ ಜೊತೆಯಾದರೆ ನಮಗೆ ಚಿಂತೆಯೇ ಇಲ್ಲ. ನಮ್ಮ ಗುರಿಯನ್ನು ಮುಟ್ಟುವುದು ಖಂಡಿತ.

ಮತ್ಸ್ಯನ ರಕ್ಷಣೆಯಿಂದ ಸಂಸಾರದ ಕಕ್ಷೆಯನ್ನು ದಾಟಬೇಕು ಅಕ್ಷಯಫಲಕ್ಕಾಗಿ ಈ ರಕ್ಷಾಮಂತ್ರವನ್ನು ಜಪಿಸಬೇಕು.

**'ಓಂ ನಮೋ ಭಗವತೇ ಮುಖ್ಯತಮಾಯ ನಮಃ ಸತ್ತ್ವಾಯ ಪ್ರಾಣಾಯೌಜಸೇ ಸಹಸೇ ಬಲಾಯ ಮಹಾಮತ್ಸ್ಯಾಯ ನಮಃ'** ಎಂದು.

## ಜಗದಾಧಾರನಾದ ಕೂರ್ಮ

ಹಿರಣ್ಮಯ ವರ್ಷದಲ್ಲಿರುವ ಕೂರ್ಮರೂಪಿಯಾದ ಭಗವಂತನನ್ನು ಅರ್ಯಮಾ ಎಂಬ ಸೂರ್ಯನು ಉಪಾಸನೆ ಮಾಡುತ್ತಿದ್ದಾನೆ.

ಕೂರ್ಮರೂಪದಿಂದ ಸಮಸ್ತ ಜಗದಾಧಾರನಾಗಿದ್ದಾನೆ. ಇಚ್ಛಾಮಾತ್ರದಿಂದಲೇ ಸಮಸ್ತರನ್ನು ನಿಯಮಿಸುವ ಶ್ರೀಹರಿಯು ಮನೋವಾಕ್ಕುಗಳಿಗೆ ಅಗೋಚರನಾಗಿದ್ದಾನೆ. ಸಕಲ ಶಬ್ದಗಳಿಂದಲೂ ವಾಚ್ಯನಾಗಿದ್ದಾನೆ. ಮತ್ಸ್ಯಾದಿ ಹತ್ತು ಅವತಾರಗಳು, ಕೇಶವಾದಿ ದ್ವಾದಶ ಅವತಾರಗಳು ಎಲ್ಲವೂ ಇವನಿಂದ ಅಭಿನ್ನವಾಗಿವೆ. ಅನಂತವೇದಗಳಿಂದ ಪ್ರತಿಪಾದ್ಯನಾದ ಮಹಾಕೂರ್ಮನನ್ನು ಸೂರ್ಯನು ಉಪಾಸನೆ ಮಾಡುತ್ತಿದ್ದಾನೆ–

**ಓಂ ನಮೋ ಭಗವತೇ ಅಕೂಪಾರಾಯ ಸರ್ವಸತ್ವಗುಣವಿಶೇಷಣಾಯ**
**ಅನುಪಲಕ್ಷಿತಸ್ಥಾನಾಯ ನಮೋಽವರ್ಷ್ಮಣೇ ನಮೋ ಭೂಮ್ನೇ**
**ನಮೋ ನಮೋಽವಸ್ಥಾನಾಯ ನಮಸ್ತೇ ।** – (೫-೧೮-೩೦)

ಸಮುದ್ರವಾಸಿಯಾದ ಕೂರ್ಮನೇ! ಸಕಲ ಸಾತ್ವಿಕರನ್ನು ಎತ್ತರಕ್ಕೇರಿಸುವವನೇ! ಪ್ರಾಕೃತದೇಹಶೂನ್ಯನೇ! ಜಗತ್ತಿಗೆ ಆಧಾರನಾದ ಅನಂತರೂಪಿಯೇ ನಿನಗೆ ನಮೋ ನಮಃ ಎನ್ನುತ್ತಾನೆ.

## ಯಜ್ಞಾಧಾರನಾದ ಯಜ್ಞವರಾಹ

ಉತ್ತರಕುರುವರ್ಷದಲ್ಲಿ ವರಾಹರೂಪದಿಂದಿರುವ ಶ್ರೀಹರಿಯನ್ನು ಭೂದೇವಿಯು ಭಕ್ತಿಯಿಂದ ಸ್ತುತಿಸುತ್ತಿದ್ದಾಳೆ.

ನಮ್ಮ ದೇಹದ ಸಮಗ್ರ ಚಟುವಟಿಕೆಗಳಿಗೆ ಶಕ್ತಿದಾತೃವಾಗಿ ಜೀವಾತ್ಮನಿದ್ದಾನೆ. ಜೀವನಿಲ್ಲದೆ ದೇಹದಲ್ಲಿ ಯಾವುದೇ ಚಟುವಟಿಕೆಗಳು ನಡೆಯವು. ಅದರಂತೆ ಬ್ರಹ್ಮಾಂಡದಲ್ಲಿಯೂ ಭಗವಂತನೆಂಬ ಚಿನ್ಮಯನಿರುವುದರಿಂದ ಜಗತ್ತಿನ ಸಕಲ ಪ್ರವೃತ್ತಿಗಳೂ ನಡೆಯುತ್ತಿವೆ. ನಮ್ಮ ಶರೀರದಿಂದ ಅನೇಕ ಕ್ರಿಯೆಗಳು ಅನಾಯಾಸ ವಾಗಿ ನಡೆಯುವಂತೆ ಭಗವಂತನೂ ಜಗತ್ತಿನ ಮೂಲಕ ಕ್ರೀಡೆಯಂತೆ ಪ್ರವೃತ್ತಿಗಳನ್ನು ನಡೆಸುತ್ತಿದ್ದಾನೆ. ಆದ್ದರಿಂದಲೇ ಜಗತ್ತಿಗೆ ಆತ್ಮನೆನಿಸಿದ್ದಾನೆ. ವರಾಹನ ಒಂದು ಶರೀರ ಜಗತ್ತಾದರೆ, ಮತ್ತೊಂದು ಶರೀರ ಯಜ್ಞ. ಆದ್ದರಿಂದಲೇ ಯಜ್ಞವರಾಹನೆನಿಸಿದ್ದಾನೆ.

ಸತ್ಕರ್ಮಗಳೆನಿಸಿದ ಯಜ್ಞಯಾಗಾದಿಗಳ ಮೂಲಕ ನಾವು ಭಗವಂತನನ್ನು ಗುರುತಿಸಬೇಕು. ಆತ್ಮನು ನಿತ್ಯನಾಗಿದ್ದರೂ ಪ್ರಕಟನಾಗಲು ಶರೀರ ಬೇಕಾಗುವಂತೆ ವ್ಯಾಪ್ತನಾದ ಭಗವಂತನು ಪ್ರಕಟನಾಗಲು ಯಜ್ಞ ಬೇಕು. ಸತ್ಕರ್ಮಗಳಿಂದ ಭಗವಂತ ಪ್ರಕಟನಾಗುತ್ತಾನೆ. ಜಗತ್ತೆಂಬ ಶರೀರದಲ್ಲಿ ನೆಲೆನಿಂತು ಚಟುವಟಿಕೆಗಳನ್ನು ನಡೆಸಿದರೆ, ಯಜ್ಞವೆಂಬ ಶರೀರದಲ್ಲಿದ್ದು ವ್ಯಕ್ತನಾಗುತ್ತಾನೆ. ಇಂತಹ ಯಜ್ಞ ವರಾಹನನ್ನು ಭೂದೇವಿ ಹೀಗೆ ಸ್ತುತಿಸುತ್ತಾಳೆ–

**ಓಂ ನಮೋ ಭಗವತೇ ಮಂತ್ರತತ್ತ್ವಲಿಂಗಾಯ ಯಜ್ಞಕ್ರತವೇ**
**ಮಹೀಧರಾಯ ಮಹಾಪುರುಷಾಯ ನಮಃ**
**ಕರ್ಮ ಶುಕ್ಲಾಯ ತ್ರಿಯುಗಾಯ ನಮಸ್ತೇ** — (೫–೧೮–೩೫)

'ವೇದಮಂತ್ರಗಳ ಮುಖ್ಯ ತಾತ್ಪರ್ಯಕ್ಕೆ ವಿಷಯನಾದ ಯಜ್ಞವರಾಹನೇ! ಭೂಮಿಯನ್ನು ಧರಿಸಿದ, ಶುದ್ಧಕರ್ಮಪ್ರವರ್ತಕನಾದ, ತ್ರಿಯುಗಮೂರ್ತಿಯಾದ ಪರಮಪುರುಷನೇ! ಷಡ್ಗುಣೈಶ್ವರ್ಯಸಂಪನ್ನನೇ ನಿನಗೆ ನಮೋ ನಮಃ

## ರಾಷ್ಟ್ರದೇವತೆ ಶ್ರೀರಾಮ

ಕಿಂಪುರುಷವರ್ಷದಲ್ಲಿ ಲಕ್ಷ್ಮಣಾಗ್ರಜನಾದ ಶ್ರೀರಾಮಚಂದ್ರ ನೆಲೆಸಿದ್ದಾನೆ. ಅವನನ್ನು ನಿತ್ಯವೂ ಭಕ್ತಿಯಿಂದ ಪರಮಭಾಗವತೋತ್ತಮನಾದ ಹನುಮಂತನು ಉಪಾಸನೆ ಮಾಡುತ್ತಿದ್ದಾನೆ.

ಶ್ರೀರಾಮನು ಮನುಷ್ಯನಾಗಿ ಅವತಾರ ಮಾಡಿದ್ದು ಏಕೆ? ರಾಕ್ಷಸರನ್ನು ಕೊಲ್ಲುವುದಕ್ಕಾಗಿಯೋ? ಕೇವಲ ರಾಕ್ಷಸಸಂಹಾರವೇ ಉದ್ದೇಶವಾಗಿದ್ದಲ್ಲಿ ಭೂಮಿಗೇ ಏಕೆ ಬರಬೇಕು? ಸರ್ವಶಕ್ತನಾದ ಸ್ವಾಮಿಯು ವೈಕುಂಠದಲ್ಲಿಯೇ ಇದ್ದು ಕೇವಲ ತನ್ನ ಭ್ರೂವಿಭ್ರಮದಿಂದಲೇ ರಾಕ್ಷಸರ ಸಮೂಹವನ್ನು ದಹಿಸಬಹುದಿತ್ತಲ್ಲವೇ? ಹಾಗಾದರೆ ಬಂದದ್ದೇಕೆ? ಎಂಬ ಪ್ರಶ್ನೆಗೆ ಹನೂಮಂತನೇ ಉತ್ತರಿಸುತ್ತಾನೆ–

ಮರ್ತ್ಯಾವತಾರಸ್ತ್ವಿಹಮರ್ತ್ಯಶಿಕ್ಷಣಂ
ರಕ್ಷೋವಧಾಯೈವ ನ ಕೇವಲಂ ವಿಭೋಃ ।
ಕುತೋಽನ್ಯ ಹಿ ಸ್ಯ್ಯಾ ರಮತಃ ಸ್ವ ಆತ್ಮನ್
ಸೀತಾಕೃತಾನಿ ವ್ಯಸನಾನೀಶ್ವರಸ್ಯ ॥ — (೫–೧೯–೫)

'ಸರ್ವಸಮರ್ಥನಾದ ಶ್ರೀಹರಿಯು ಮನುಜರಿಗ ಶಿಕ್ಷಣ ನೀಡುವುದಕ್ಕಾಗಿ ಮನುಜನಾಗಿ ಅವತರಿಸಿದ ಹೊರತು ಕೇವಲ ರಾಕ್ಷಸಸಂಹಾರಕ್ಕಾಗಿಯೇ ಅವತರಿಸಿದ್ದಲ್ಲ. ಕೇವಲ ಅಷ್ಟೇ ಉದ್ದೇಶವಿದ್ದಲ್ಲಿ ಸ್ವರಮಣನಾದ ಶ್ರೀರಾಮ ಸೀತೆ ಕಳೆದಳೆಂದು ವಿಲಪಿಸಬೇಕಿತ್ತೇ? ಜಗತ್ತಿನ ಮಂದಿ ಹೇಗೆ ವಿಲಪಿಸುತ್ತಾರೆ? ಏಕೆ ವಿಲಪಿಸುತ್ತಾರೆ? ಜೀವನದ ಉದ್ದೇಶವೇನು? ಎಂದು ಎಲ್ಲವನ್ನೂ ಯಥಾವತ್ತಾಗಿ ತೋರಿಸಿ ಜೀವನವನ್ನು ಅರ್ಥಪೂರ್ಣವನ್ನಾಗಿಸುವುದೇ ಸೀತಾರಾಮರ ಉದ್ದೇಶ. ಇದನ್ನರಿಯದೇ 'ಸೀತಾರಾಮರೂ ದುಃಖಭಾಗಿಗಳಾಗಿದ್ದಾರೆ' ಎನ್ನುವುದು ಅನರ್ಥಕ್ಕೆ ನಾಂದಿಯಾದೀತು.

ನಿರ್ವಿಕಾರನಾದ ಶ್ರೀರಾಮಚಂದ್ರನು ಮಾನವನಿಗೆ ಒದಗಬಹುದಾದ ವಿಯೋಗ, ರಾಜ್ಯ ತ್ಯಾಗ, ಮುಂತಾದ ಸಂದರ್ಭದಲ್ಲಿ ಹೇಗೆ ನಾವು ವರ್ತಿಸಬೇಕೆಂದು ತಿಳಿಸಿ ಕೊಟ್ಟಿದ್ದಾನೆ.

ಶ್ರೀರಾಮಚಂದ್ರನಿಗೆ ಸತ್ಕುಲ, ಬಹುಧನ, ಪಾಂಡಿತ್ಯ, ಸುಂದರರೂಪ ಯಾವುದೂ ರುಚಿಸುವುದಿಲ್ಲ. ರಾಮಸ್ನೇಹಿತರಾದ ಕಪಿಗಳಿಗೆ ಇವುಗಳಲ್ಲಿ ಯಾವುದೂ ಇಲ್ಲ. ಆದರೂ ಅವುಗಳ ಸಖ್ಯವನ್ನು ಬೆಳೆಸಿದ. ಅವನು ನೋಡುವುದು ಪ್ರಾಮಾಣಿಕ ಭಕ್ತಿಯನ್ನು ಮಾತ್ರ ಎನ್ನುತ್ತದೆ ಭಾಗವತ–

ನ ಜನ್ಮ ನೂನಂ ಮಹತೋ ನ ಸೌಭಗಂ
ನ ವಾಙ್ ನ ಬುದ್ಧಿರ್ನಾಕೃತಿಸ್ತೋಷಹೇತುಃ ।
ತೈರ್ಯದ್ವಿಸೃಷ್ಟಾನಪಿ ನೋ ವನೌಕಸಃ
ಚಕಾರ ಸಖ್ಯೇ ಚ ಸ ಲಕ್ಷ್ಮಣಾಗ್ರಜಃ ॥ — (೫–೧೯–೭)

ಶ್ರೀರಾಮಚಂದ್ರನು ಭಕ್ತರಾದವರು ಯಾರೇ ಇರಲಿ ಅವರನ್ನು ಸ್ವೀಕರಿಸುತ್ತಾನೆ. ಸುರನೇ ಆಗಿರಲಿ, ಅಸುರನೇ ಆಗಿರಲಿ, ನರ ಅಥವಾ ವಾನರನೇ ಆಗಿರಲಿ –ಸರ್ವಾತ್ಮನಾ ಹರಿಯನ್ನು ಭಜಿಸಿದರೆ ಅವರನ್ನು ಭವಸಾಗರದಿಂದ ಮೇಲೆತ್ತುತ್ತಾನೆ. ಇವನ ಅಪಾರವಾದ ಕರುಣೆಯ ಬಲದಿಂದಲೇ ತೃಣ–ಮೃಗ–ಖಗಗಳೆಲ್ಲವೂ ಶ್ರೀರಾಮನ ಪರಂಧಾಮಯಾತ್ರೆಯಲ್ಲಿ ಪಯಣಿಗರಾದವು.

ನಮ್ಮ ರಾಷ್ಟ್ರದ ದೇವ ಶ್ರೀರಾಮ. ಶ್ರೀರಾಮನು ಬಡವರು ದುಃಖಿತರು, ದಲಿತರು ಯಾರಾದರೂ ಸರಿಯೇ ಅವರನ್ನು ಸ್ವೀಕರಿಸುವ ಆದರ್ಶವನ್ನು ತೋರಿದ್ದಾನೆ. ಸಮಸ್ತ ಪ್ರಜೆಗಳಿಗೆ ಪ್ರಾಣಿಗಳಿಗೂ ರಾಜನಾಗಿ ಆನಂದವನ್ನು ಕೊಟ್ಟು, ಕಡೆಗೆ ಅಯೋಧ್ಯಾನಗರಿಯ ಎಲ್ಲ ವರ್ಗದವರನ್ನೂ ಮೋಕ್ಷಕ್ಕೆ ಬನ್ನಿರೆಂದು ಕೂಗಿ ಕರೆದ. ಬಂದವರನ್ನೆಲ್ಲ ಕರೆದುಕೊಂಡು ಹೋದ. "ಮೋಕ್ಷದ ಇಚ್ಛೆಯುಳ್ಳವರೆಲ್ಲರೂ ಬನ್ನಿರಿ! ನಿಮ್ಮೆಲ್ಲರಿಗೂ ಮೋಕ್ಷ ನೀಡುತ್ತೇನೆ! ನಿತ್ಯವೂ ವೈಕುಂಠದಲ್ಲಿ ತೇಲಾಡಿರಿ!" ಎಂದು ಡಂಗುರ ಸಾರಿಸಿ ಮೋಕ್ಷಕ್ಕೆ ಕರೆದ ದೇವತೆ ರಾಮನಲ್ಲದೆ ಮತ್ತ್ಯಾರಾದರೂ ಇದ್ದಾರೆಯೇ?! ರಾಮರಾಜ್ಯದ ಪ್ರಜೆಗಳಿಗೆ ದೊರಕದ ಒಂದು ವಸ್ತುವು ಇರಲಿಲ್ಲ. 'ನ ರಾಮರಾಜ್ಯೇಽಸುಲಭಂ ಚ ಕಿಂಚಿತ್' ಎನ್ನುತ್ತಾರೆ ನಾರಾಯಣಪಂಡಿತಾಚಾರ್ಯರು. ತನ್ನ ಸಾಮ್ರಾಜ್ಯದಲ್ಲಿ ಮೋಕ್ಷಸುಖವನ್ನು ಕೊಟ್ಟ. ಕೊನೆಗೆ ಮೋಕ್ಷಸಾಮ್ರಾಜ್ಯವನ್ನೇ ಕೊಟ್ಟ. ರಾಮನ ಸಹವಾಸ ಮಾಡಿದ ಸಕಲರ ಮನಸ್ಸೂ ಆಧ್ಯಾತ್ಮಿಕ ಪಕ್ವತೆಯನ್ನು ಪಡೆದಿತ್ತು. ಅಂತಹ ಜನತೆಗೆ ಮೋಕ್ಷಕೊಟ್ಟು ಅನುಗ್ರಹಿಸಿದ. ಇಂತಹ ಶ್ರೀರಾಮ ಚಂದ್ರನ ಸ್ತೋತ್ರ, ಆರಾಧನೆಗಳನ್ನು ತಪ್ಪದೆ ಆಚರಿಸಿರೆಂದು ತನ್ನ ಆಚರಣೆಯ ಮೂಲಕ ಹನುಮಂತನು ಉಪದೇಶಿಸುತ್ತಿದ್ದಾನೆ. ಉಪಾಸಿಸುತ್ತಿದ್ದಾನೆಯೂ ಕೂಡ–

'ಓಂ ನಮೋ ಭಗವತೇ ಉತ್ತಮಶ್ಲೋಕಾಯ ನಮ ಆರ್ಯಲಕ್ಷಣಶೀಲವ್ರತಾಯ ನಮ ಉಪಾಶ್ರಿತಾತ್ಮನೇ ನಮಃ ಸಾಧುವಾದ ನಿಕರ್ಷಣಾಯ ನಮೋ ಬ್ರಹ್ಮಣ್ಯದೇವಾಯ ಮಹಾಪುರುಷಾಯ ಮಹಾರಾಜಾಯ ನಮಃ'

— (೯–೧೯–೩)

'ಸಜ್ಜನರ ರಕ್ಷಣವ್ರತಧಾರಿಯಾದ, ಜೀವರೆಲ್ಲರಿಗೂ ಆಶ್ರಯನಾದ, ಸಜ್ಜನರ ಮಾತಿಗೆ ಸಾಕ್ಷಿಕಾರಣನಾದ, ವಿಶ್ರುತಕೀರ್ತಿಯುಳ್ಳ ಮಹಾರಾಜನಾದ, ಸರ್ವೋತ್ತಮ ನಾದ ಭಗವಾನ್ ಶ್ರೀರಾಮಚಂದ್ರನೇ ನಿನಗೆ ನಮನ' ಎಂದು.

## ಧರ್ಮಪ್ರೇರಕನಾದ ನರ–ನಾರಾಯಣ

ಭಾರತ ವರ್ಷದಲ್ಲಿ ಭಗವಂತನು ನರ–ನಾರಾಯಣರೂಪದಿಂದ ಇದ್ದಾನೆ. ಇವನನ್ನು ನಾರದರು ವಿಶೇಷವಾಗಿ ಸೇವಿಸುತ್ತಿದ್ದಾರೆ.

ಬದರಿಯಲ್ಲಿ ನೆಲೆನಿಂತ ನಾರಾಯಣನನ್ನು ವಾದಿರಾಜ ಗುರುಸಾರ್ವಭೌಮರು ತೀರ್ಥಪ್ರಬಂಧದಲ್ಲಿ ಬಹಳ ಸುಂದರವಾಗಿ ಪ್ರಾರ್ಥಿಸಿದ್ದಾರೆ–

ಧರ್ಮಾದ್ಯೋಽಜನಿ ಧರ್ಮ ಏವ ಸ ರತಿಂ ದದ್ಯಾತ್ ಸ್ವಯೋಗಶ್ರಿಯಂ
ಯೋಗಾಭ್ಯಾಸರತಃ ಸ್ಮರಾದಿವಿಜಯಂ ಕಂದರ್ಪದರ್ಪಾಪಹಃ ।
ಉತ್ತುಂಗಾದ್ರಿಗತಃ ಸದೋಚ್ಚಪದವೀಂ ಯೋಷಿತ್ಕದಂಬೇಷು ನಃ
ಪುತ್ರೀವನ್ಮತಿಮುರ್ವಶೀಜನಯಿತಾ ನಾರಾಯಣಃ ಸದ್ಗುಣಾನ್ ॥

— (ತೀ. ಪ್ರ. ೩–೪೨)

ಧರ್ಮಪ್ರಜೇಶ್ವರನ ಪತ್ನಿಯಾದ ಮೂರ್ತಿದೇವಿಯಲ್ಲಿ ಪ್ರಾದುರ್ಭವಿಸಿದ ನಾರಾಯಣನು ನಮಗೆ ಧರ್ಮಬುದ್ಧಿಯನ್ನು ಕೊಡಲಿ. ಯೋಗಾಭ್ಯಾಸನಿರತನಾದ ದೇವದೇವನು ಅವನ ವಿಷಯಕವಾದ ಧ್ಯಾನಸಂಪತ್ತನ್ನು ದಯಪಾಲಿಸಲಿ. ಕಂದರ್ಪನ ದರ್ಪವನ್ನು ತರಿದಂತಹ ಹೃಷೀಕೇಶನು ಷಡ್ವೈರಿಗಳ ಜಯವನ್ನು ದಯಪಾಲಿಸಲಿ! ಉತ್ತುಂಗವಾದ ಹಿಮಶಿಖರಗಳ ನಡುವೆ ಮಂಡಿಸಿದ ದೇವನು ಮೋಕ್ಷವನ್ನು ದಯಪಾಲಿಸಲಿ! ಅಪ್ಸರಸ್ತ್ರೀಯರ ಸಮೂಹವೇ ನಾಚುವಂತಹ ಊರ್ವಶೀ ಎಂಬ ಅಪ್ಸರೆಯನ್ನು ನಿರ್ಮಿಸಿದ ಮನ್ಮಥಜನಕನು ಪರಸ್ತ್ರೀಯರಲ್ಲಿ ತನುಸಂಜಾತಕುವರಿಯಲ್ಲಿಯ ಸದ್ಭಾವನೆಯನ್ನು ಮೂಡಿಸಲಿ ದೋಷದೂರನಾದ– ಸದ್ಗುಣನಿಧಿಯಾದ ನಾರಾಯಣನು ನಮಗೂ ಜ್ಞಾನಾನಂದಾದಿ ಗುಣಗಳನ್ನು ನೀಡಿ ಹರಸಲಿ! ಎಂದು ಪ್ರಾರ್ಥಿಸಿದ್ದಾರೆ.

ಭಾರತವರ್ಷದ ಅಧಿದೇವತೆಯಾದ ನಾರಾಯಣನು ಸಮಸ್ತ ಸುಜನರ ಉದ್ಧಾರಕ್ಕಾಗಿ ಬದರಿಯಲ್ಲಿ ನೆಲೆನಿಂತಿದ್ದಾನೆ. ಆದ್ದರಿಂದಲೇ ದೇವತೆಗಳೂ ಭಾರತವರ್ಷದಲ್ಲಿಯೇ ಅವತರಿಸುತ್ತಾರೆ. ಭಾರತದಲ್ಲಿ ಜನ್ಮತಾಳಿದವನೇ ಧನ್ಯಾತ್ಮ. ಭಗವಂತನ ಸೇವೆಗೆ ಉತ್ತಮ ಅವಕಾಶವಿದೆ. ಭಾರತ ದೇಶದ ಮಹತ್ವವನ್ನು ಭಾರತವು ವಿಸ್ತಾರವಾಗಿ ಕೊಂಡಾಡಿದೆ. ನಾರಾಯಣನನ್ನು ನಾರದರು ನಿರಂತರ ಹೀಗೆ ಜಪಿಸುತ್ತಿದ್ದಾರೆ.

'ಓಂ ನಮೋ ಭಗವತ ಉಪಶಮಶೀಲಾಯೋಪರತಾನಾತ್ಮ್ಯಾಯಾಕಿಂಚನವಿತ್ತಾಯ ಋಷಿಋಷಭಾಯ ನರನಾರಾಯಣಾಯ ಪರಮಹಂಸಾಯ ಪರಮಗುರವೇ ಆತ್ಮಾರಾಮಾಧಿಪತಯೇ ನಮೋ ನಮಃ'

— (೫–೧೯–೧೧)

'ದೇಹನಿಮಿತ್ತಕವಾದ ದುಃಖಗಳಿಂದ ನಿತ್ಯದೂರನಾದ ಸಂಸಾರದುಃಖವನ್ನು ಪರಿಹರಿಸುವ ಋಷಿಶ್ರೇಷ್ಠನಾದ ಪರಮಹಂಸನೂ ಪರಮಗುರುವೂ ಋಷಿಮುನಿಗಳಿಗೆ ಒಡೆಯನೂ ಆದ ಷಡ್ಗುಣೈಶ್ವರ್ಯಸಂಪನ್ನನಾದ ನರನಾರಾಯಣನಿಗೆ ನಮೋ ನಮಃ' ಎನ್ನುತ್ತಾರೆ.

## ಕಲಿಯುಗದ ಮಹತ್ವ

ಕಲ್ಪಾಯುಷಾಂ ಸ್ಥಾನಜಯಾತ್ಪುನರ್ಭವಾತ್
ಕ್ಷಣಾಯುಷಾಂ ಭಾರತಭೂಜಯೋ ವರಃ ।
ಕ್ಷಣೇನ ಮರ್ತ್ಯೇನ ಕೃತಂ ಮನಸ್ವಿನಃ
ಸಂನ್ಯಸ್ಯ ಸಂಯಾಂತ್ಯಭಯಂ ಪದಂ ಹರೇಃ ॥

— (೫–೧೯–೨೩)

ಭಾರತ ದೇಶದ ಮಹತ್ವವನ್ನು ಬಣ್ಣಿಸುವ ಇಂತಹ ಅನೇಕ ಶ್ಲೋಕಗಳನ್ನು ಭಾಗವತದಲ್ಲಿ ಕಾಣಬಹುದು–

ನಾವಿರ ವರ್ಷಗಳ ಕಾಲ ಬೇರೆ ಲೋಕದಲ್ಲಿರುವುದಕ್ಕಿಂತ ಒಂದು ಕ್ಷಣಕಾಲ ಭರತ ಭೂಮಿಯ ವಾಸವೇ ಲೇಸು!

ಎಲ್ಲಾ ಲೋಕಗಳು ಜೀವರನ್ನು ಕೆಳಗೆ ಕಳಹಿಸಿದರೆ, ಕೆಳಗಿದ್ದವರನ್ನು ಮೇಲಕ್ಕೇರಿಸುವ ಲೋಕ ಈ ಭೂಲೋಕ. ಅದರಲ್ಲಿಯೂ ಈ ಭಾರತ ದೇವತೆಗಳ ಅವತಾರ ಭೂಮಿಯಷ್ಟೇ ಅಲ್ಲ. ಯುಗದ ಮಹತ್ವವನ್ನೂ ಇಲ್ಲಿ ಅರಿಯಬೇಕು.

ಕೃತಯುಗದಲ್ಲಿ ಒಳ್ಳೆ ಕೆಲಸಗಳು ಅಧಿಕ. ಫಲ ಕಡಮೆ.

ಕಲಿಯುಗದಲ್ಲಿ ಒಳ್ಳೆ ಕೆಲಸಗಳು ಕಡಮೆ ಫಲ ಅಧಿಕ.

ಕಲಿಯುಗದಲ್ಲಿ ಸ್ವಲ್ಪ ಧರ್ಮಕಾರ್ಯ ಮಾಡಿದರೂ ಅನಂತಫಲಭಾಗಿಯಾಗುತ್ತಾನೆ. ಇದಕ್ಕೆ ಸಂವಾದಿಯಾಗಿ ಕಥೆಯೊಂದನ್ನು ನೋಡೋಣ.

ಮಹಾಭಾರತಯುದ್ಧದಲ್ಲಿ ಕರ್ಣಾರ್ಜುನರಿಗೆ ಭಯಂಕರ ಕಾಳಗ ನಡೆಯಿತು. ಅರ್ಜುನ ತನ್ನ ಅದ್ಭುತವಾದ ಪರಾಕ್ರಮದಿಂದ ಕರ್ಣನ ರಥವನ್ನು ದೂರಕ್ಕೆ ತೂರಿದ. ರಥವು ನೂರಾರು ಮೈಲು ದೂರ ಹಿಂದಕ್ಕೆ ಸರಿಯಿತು.

ಬಲಿಷ್ಠನಾದ ಕರ್ಣನೂ ಸಹ ತನ್ನ ಅದ್ಭುತವಾದ ಕೌಶಲ್ಯದಿಂದ ಶಕ್ತಿಯೆಲ್ಲವನ್ನೂ ಬಳಸಿಕೊಂಡು ಅರ್ಜುನನ ರಥಕ್ಕೆ ಬಾಣ ಪ್ರಯೋಗಿಸಿದ. ಅರ್ಜುನನ ರಥ ಎರಡು ಹೆಜ್ಜೆ ಹಿಂದೆ ಸರಿಯಿತು.

ಕೃಷ್ಣ ಬಹಳ ಸಂತೋಷದಿಂದ 'ಶಹಭಾಶ್ ಕರ್ಣ!' ಎಂದು ಕರ್ಣನನ್ನು ಪ್ರಶಂಸಿಸಿದ.

ರಥಸ್ಥನಾದ ಅರ್ಜುನ ಸಿಡಿದೆದ್ದ.

ಇದೇನು ಕೃಷ್ಣ ಅನ್ಯಾಯ!!

ಮೈಲುಗಟ್ಟಲೆ ರಥ ತೂರಿದ ನನ್ನನ್ನು ಬಿಟ್ಟು ಬರೇ ಎರಡು ಹೆಜ್ಜೆ ರಥ ತಳ್ಳಿದ ಕರ್ಣನು ನಿನಗೆ ಮಿಗಿಲಾದನೇ? ಚಪ್ಪಾಳೆತಟ್ಟಿ ಅವನನ್ನು ಅಭಿನಂದಿಸುವುದು ನಿನಗೆ ನ್ಯಾಯವೇ! ಎಂದು ಆಕ್ಷೇಪಿಸಿದ.

ಕೃಷ್ಣ ನುಡಿದ.

ನೋಡು ಅರ್ಜುನ! ಕರ್ಣನ ರಥವನ್ನು ಹಿಂದಕ್ಕೆ ತಳ್ಳುವುದೇನು ಮಹಾ ಕಾರ್ಯವಲ್ಲ. ಅದು ಸಾಮಾನ್ಯ ಕಟ್ಟಿಗೆಯ ರಥ. ಆದರೆ ನಿನ್ನ ರಥವನ್ನು ಏನೆಂದು ಭಾವಿಸಿದ್ದಿಯೇ? ಇದು ಸಾಮಾನ್ಯ ರಥವಲ್ಲ. ಸಮಗ್ರ ಭೂಮಂಡಲದಷ್ಟು ಭಾರವುಳ್ಳದ್ದು ಈ ರಥ. ಯಾರಿಗೂ ಎತ್ತಲಾಗದ ಗಾಂಡೀವ ಧನುಸ್ಸಿದೆ. ಧ್ವಜದಲ್ಲಿ ಹನುಮಂತ. ಇವೆಲ್ಲದಕ್ಕಿಂತಲೂ ತ್ರೈಲೋಕ್ಯಧರನಾದ ಸಾರಥಿಯಾದ ನಾನು ಕುಳಿತಿದ್ದೇನೆ. ಇಂತಹ ರಥವನ್ನು ಎರಡಂಗುಲ ದೂಡಿದರೂ ಮಹಾಶ್ಚರ್ಯವೇ ಸರಿ! ಇದಕ್ಕಾಗಿ ನನ್ನ ಅಭಿನಂದನೆ ಎಂದ.

ಈ ಕಥೆ ಪ್ರಕೃತಕ್ಕೂ ಅನ್ವಯವಾಗುತ್ತದೆ.

ಕೃತಯುಗ ಒಳ್ಳೆಯ ಯುಗ. ಕೃತಯುಗದಲ್ಲಿ ಪುಣ್ಯ ಕರ್ಮಾಚರಣೆ ಎಂಬುದು ಸಹಜಪ್ರವೃತ್ತಿ. ಎಲ್ಲರೂ ಮಾಡುತ್ತಾರೆ. ಇದೇನು ಮಹತ್ವದ್ದಲ್ಲ. ಆದ್ದರಿಂದ ಕೃತ ಯುಗದಲ್ಲಿ ಕರ್ಮಾಚರಣೆ ಎಂದರೆ ಕರ್ಣನ ರಥವನ್ನು ಮೈಲುಗಟ್ಟಲೆ ದೂರಕ್ಕೆಸೆ ದಂತೆ.

ಆದರೆ ಕಲಿಯುಗದಲ್ಲಿ ಸ್ವಲ್ಪ ಧರ್ಮಾಚರಣೆ ಮಾಡಿದರೂ ಸಾಕು. ಇದು ಕರ್ಣನು ಎರಡಂಗುಲ ಸರಿಸಿದ ಅರ್ಜುನನ ರಥದಂತೆ ಬಹಳ ಮಹತ್ವವಾದುದು. ಕರ್ಣನನ್ನು ಮೆಚ್ಚಿದಂತೆ ಸ್ವಲ್ಪ ಧರ್ಮಾಚರಣೆ ಮಾಡಿದರೂ ಅವರನ್ನು ಮೆಚ್ಚುತ್ತಾನೆ. ಇದು ಸಾಕ್ಷಾತ್ ಶ್ರೀಮನ್ನಾರಾಯಣನೇ ಹೇಳಿದ ಮಾತು. ಇದನ್ನರಿತು ಈ ದೇಶದ ಮಕ್ಕಳಾದ ನಾವು ಪ್ರಾಮಾಣಿಕ ಪ್ರಯತ್ನವನ್ನು ನಡೆಸಿ ಭಗವಂತನ ಅನುಗ್ರಹಕ್ಕೆ ಪಾತ್ರನಾಗಬೇಕು.

'ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್'

## ನರಕದ ವರ್ಣನೆ

ಮುಂದೆ ಜಂಬೂದ್ವೀಪದ ವರ್ಣನೆಯನ್ನು ವಿಸ್ತಾರವಾಗಿ ಮಾಡುತ್ತಾ ಸಪ್ತಸಾಗರಗಳು ಇತರ ದ್ವೀಪಗಳು ಗ್ರಹನಕ್ಷತ್ರಗಳೂ ಪಾತಾಲಾದಿ ಲೋಕಗಳನ್ನು ಅವುಗಳಲ್ಲಿಯ ಮಹತ್ವನ್ನೂ ಚಿತ್ರಿಸಿದ್ದಾರೆ.

ಪಂಚಮಸ್ಕಂಧದ ಕೊನೆಯಲ್ಲಿ ಹತ್ತಾರು ಬಗೆಯ ನರಕಗಳನ್ನು ವಿವರಿಸಿದ್ದಾರೆ. ಭೂಲೋಕದಲ್ಲಿ ಮನುಷ್ಯನಾಗಿ ಹುಟ್ಟಿ, ನೂರಾರು ಅಸತ್ಕರ್ಮಗಳಲ್ಲಿ ಜೀವನ ಸಾಗಿಸಿದ ನರನಿಗೆ ದೊರೆಯಬಹುದಾದ ಶಿಕ್ಷೆಗಳ ವಿವರವನ್ನು ಉಲ್ಲೇಖಿಸಲಾಗಿದೆ. ಭೂಲೋಕದಲ್ಲಿ ಸಂತೋಷದಿಂದಲೇ ಸ್ವಚ್ಛಂದವಾಗಿ ಕರ್ಮಗಳನ್ನು ಮಾಡುತ್ತೇವೆ. ಅನಂತರ ದುಃಖಕ್ಕೆ ಭಾಗಿಯಾಗುತ್ತೇವೆ. 'ಹಸದ್ಭಿಃ ಕ್ರಿಯತೇ ಕರ್ಮ ರುದದ್ಭಿರನು ಭೂಯತೇ'

ನರಕವು ಭೂಲೋಕದಲ್ಲಿಯೂ ಇದೆ. ಪರಲೋಕದಲ್ಲಿಯೂ ಇದೆ. ದುಷ್ಕರ್ಮ ಗಳನ್ನು ಅತಿಯಾಗಿ ಆಚರಿಸಿದಲ್ಲಿ ನಮ್ಮ ಪ್ರತ್ಯಕ್ಷ ಜೀವನದಲ್ಲಿಯೇ ನರಕ ಯಾತನೆಯನ್ನು ಅನುಭವಿಸುತ್ತೇನೆ. ಮರಣಾನಂತರವೂ ಭಯಂಕರವಾದ ನರಕಗಳಲ್ಲಿ ಬಿದ್ದು ಉಗ್ರವಾದ ಶಿಕ್ಷೆಗಳಿಗೆ ತುತ್ತಾಗುತ್ತೇವೆ. ಮಾನವರಾಜ್ಯದಲ್ಲಿ ಅಕೃತ್ಯಗಳನ್ನು ಎಸಗಿದರೂ ರಾಜಕೀಯ ಸೂತ್ರಗಳನ್ನು ಬಳಸಿಕೊಂಡು ಅಧಿಕಾರಿಗಳ ಪ್ರಭಾವದಿಂದ ಶಿಕ್ಷೆಯನ್ನು ತಪ್ಪಿಸಿಕೊಳ್ಳುತ್ತೇವೆ. ಕಾನೂನುಬಾಹಿರವಾದ ಹಿಂಸೆ, ಕಳ್ಳತನ, ಕ್ರೌರ್ಯ, ಮೋಸಗಳನ್ನೆಸಗಿದರೂ ಹಣದ ಬೆಂಬಲದಿಂದ ಮುಕ್ತರಾಗುತ್ತೇವೆ. ಅಪರಾಧಗಳನ್ನು ಇಲ್ಲಿ ಧಕ್ಕಿಸಿಕೊಳ್ಳುವಂತೆ ಭಗವಂತನ ರಾಜ್ಯದಲ್ಲಿ ತಪ್ಪಿಸಿಕೊಳ್ಳಲಾಗದು. ನಮ್ಮ ಎಲ್ಲ ಅಪರಾಧಗಳನ್ನು ಸರಿಯಾಗಿ ದಾಖಲಿಸಿಕೊಂಡಿರುತ್ತಾನೆ. ಅದಕ್ಕನುಗುಣವಾಗಿ ಶಿಕ್ಷೆಗಳನ್ನೂ ವಿಧಿಸುತ್ತಾನೆ. ಈ ಎಚ್ಚರವನ್ನು ಹೊಂದಿ ಆದಷ್ಟು ಸತ್ಕರ್ಮಗಳಲ್ಲಿ

ನಮ್ಮನ್ನು ತೊಡಗಿಸಿಕೊಳ್ಳಬೇಕೆಂಬ ದೃಷ್ಟಿಯಿಂದ ಭಾಗವತವು ನರಕದ ವರ್ಣನೆ ಮಾಡಿದೆ.

ಹಾವು ಚೇಳು ಮುಂತಾದ ಉಗ್ರ ವಿಷಜಂತುಗಳು ಕಚ್ಚುತ್ತವೆ. ಭಯಂಕರವಾದ ಮೃಗಗಳು ಮೈಮೇಲೆರಗುತ್ತವೆ ಭೀಕರ ಅಸ್ತ್ರಶಸ್ತ್ರಗಳ ಆಕ್ರಮಣ ನಡೆಯುತ್ತದೆ ಮಲಮೂತ್ರಗಳ ಮಡುವಿನಲ್ಲಿ ಮುಳುಗುವ ಪ್ರಸಂಗವಿದೆ. ಶಿಕ್ಷೆಗಳ ಉಗ್ರ ಸ್ವರೂಪವನ್ನು ಕೇಳುವಾಗಲೇ ಮೈನವಿರೇಳುತ್ತದೆ. ಎಷ್ಟೇ ದಂಡನೆಯನ್ನಿತ್ತರೂ ಸಾಯದ ಸ್ಥಿತಿಯಲ್ಲಿರುತ್ತಾನೆ. ಕಚ್ಚಿದರೂ ಚುಚ್ಚಿದರೂ ಭೂಲೋಕದಲ್ಲಿಯಂತೆ ಮೃತ್ಯು ಮೂರ್ಛೆಗಳಿಗೆ ತುತ್ತಾಗುವುದಿಲ್ಲ. ಇಲ್ಲಿ ಗುಟ್ಟಾಗಿ ನಡೆಸಿದ ಪಾಪಗಳಿಗೆಲ್ಲ ಯಮದಂಡದಿಂದಲೇ ಪ್ರಾಯಶ್ಚಿತ್ತ

**'ಅಂತಃ ಪ್ರಚ್ಛನ್ನಪಾಪಾನಾಂ ಶಾಸ್ತಾ ವೈವಸ್ವತೋ ಮಹಾನ್'**

ಆದ್ದರಿಂದ ಸದ್ವರ್ತನೆಯ ಬದುಕನ್ನು ಸಾಗಿಸಬೇಕು.

ಜಗತ್ತಿನಲ್ಲಿ ಗೋಮುಖವ್ಯಾಘ್ರಗಳೇ ಅನೇಕ ಮಂದಿ ಇದ್ದಾರೆ. ಸಂಭಾವಿತರಂತೆ ನಟಿಸಿ ಸ್ವಾರ್ಥಸಾಧಕರಾಗಿರುತ್ತಾರೆ. ಅಪ್ರಾಮಾಣಿಕ ಪ್ರವೃತ್ತಿ ಪರಧನಗಳಿಂದಲೇ ಬದುಕನ್ನು ಸಾಗಿಸುತ್ತಾ ಸುಭಗರೆಂದು ಭ್ರಮಿಸಿಕೊಂಡಿರುತ್ತಾರೆ. ಸ್ವಾರ್ಥಿಗಳಾಗಿ ಪರರನ್ನು ಹಿಂಸಿಸುವ ಇಂತಹ ಮಂದಿಗೆ ದಾರುಣವಾದ ದುಃಖ ನಿಶ್ಚಯ.

ಒಬ್ಬ ಕವಿಯೂ ಜಗತ್ತಿನಲ್ಲಿಯ ಭಿನ್ನ ಭಿನ್ನ ಸ್ವಭಾವದ ಜನರನ್ನು ಬಹಳ ಸುಂದರವಾಗಿ ಹೀಗೆ ಚಿತ್ರಿಸುತ್ತಾನೆ–

**ಏತೇ ಸತ್ಪುರುಷಾಃ ಪರಾರ್ಥಘಟಕಾಃ ಸ್ವಾರ್ಥಂ ಪರಿತ್ಯಜ್ಯ ಯೇ**
**ಸಾಮಾನ್ಯಾಸ್ತು ಪರಾರ್ಥಮುದ್ಯಮಭೃತಃ ಸ್ವಾರ್ಥಾವಿರೋಧೇನ ಯೇ ।**
**ತೇಽಮೀ ಮಾನುಷರಾಕ್ಷಸಾಃ ಪರಹಿತಂ ಸ್ವಾರ್ಥಾಯ ನಿಘ್ನಂತಿ ಯೇ**
**ಯೇ ನಿಘ್ನಂತಿ ನಿರರ್ಥಕಂ ಪರಹಿತಂ ತೇ ಕೇ ನ ಜಾನೀಮಹೇ ॥**

— ನೀತಿಶತಕ –೭೨

"ತಮ್ಮ ಸುಖ ಸಂಪತ್ತು ಎಲ್ಲವನ್ನು ಮತ್ತೊಬ್ಬರಿಗಾಗಿ ಮುಡುಪಾಗಿಡುವ ಜನರು ಸತ್ಪುರುಷರೆನಿಸುತ್ತಾರೆ. ಇನ್ನು ಕೆಲವರು ತಮ್ಮ ಸುಖಕ್ಕೆ ತೊಂದರೆಯಾಗದಂತೆ ಪರೋಪಕಾರನಿರತರಾಗಿರುತ್ತಾರೆ. ಇವರು ಮಧ್ಯಮವರ್ಗದಲ್ಲಿ ಸೇರುತ್ತಾರೆ. ಸ್ವಾರ್ಥಸಾಧನೆಗಾಗಿ ಮತ್ತೊಬ್ಬರ ಹಿತವನ್ನು ಹಾಳುಗೆಡಹುವವರು ಅಧಮರೆನಿಸುತ್ತಾರೆ. ಇನ್ನು ಕೆಲವರಿದ್ದಾರೆ. ಸ್ವಾರ್ಥವನ್ನೂ ಸಾಧಿಸಿಕೊಳ್ಳರು. ಪರಾರ್ಥವನ್ನೂ ಸಾಧಿಸರು. ಪರರ ಸುಖವನ್ನಂತೂ ಖಂಡಿತಾ ಸಹಿಸರು. ಇಂತಹ ನೀಚಮಂದಿಯನ್ನು ಯಾವ ವರ್ಗಕ್ಕೆ ಸೇರಿಸಬೇಕೋ ತಿಳಿಯುತ್ತಿಲ್ಲ' ಎನ್ನುತ್ತಾನೆ ಕವಿ. ಇಂತಹ ಅಧರ್ಮ ಪ್ರವೃತ್ತಿಯನ್ನು ಬೆಳೆಸಿಕೊಂಡವರಿಗೆ ನರಕಾದ್ಯನರ್ಥಗಳು ನಿಶ್ಚಿತ.

ಅದರಂತೆ ಪವಿತ್ರ ಗೋಮಾತೆಯನ್ನು ಇತರ ಪ್ರಾಣಿಗಳನ್ನು ಹಿಂಸಿಸುವುದು, ಮಾಂಸ ಭಕ್ಷಿಸುವುದು ಮುಂತಾದ ದುಷ್ಕರ್ಮಗಳನ್ನೆಸಗಿದರೆ ಜನ್ಮಾಂತರದಲ್ಲಿ ಆ ಪ್ರಾಣಿಗಳು ನಮ್ಮನ್ನು ಹಾಗೆಯೇ ಹಿಂಸಿಸುತ್ತವೆ ಎನ್ನುತ್ತಾರೆ. 'ಮಾಂಸಃ' ಎನ್ನುವ

ಪದವನ್ನೇ ಬಿಡಿಸಿದಾಗ ಮಾಂ=ನನ್ನನ್ನು; ಸ=ಆ ಜೀವನು ಹಿಂಸಿಸುತ್ತಾನೆ ಎಂದರ್ಥ ತೋರುತ್ತದೆಯಲ್ಲವೇ?

ಅತ್ಯಂತ ಪುಣ್ಯಪ್ರದ ಕಾಮಧೇನುಗಳನ್ನು ಹಿಂಸಿಸುವ ಪ್ರವೃತ್ತಿ ಜಗತ್ತಿನಲ್ಲಿ ಇಂದು ನಡೆದಿದೆ. ಹಣಕ್ಕಾಗಿ ಸ್ವಾರ್ಥಸಾಧನೆಗಾಗಿ ಅಮಾಯಕ ಪಶುಗಳ ಮೇಲೆ ದೌರ್ಜನ್ಯ ವೆಸಗುವುದು ಮಹಾ ಅಪರಾಧ. ಅನರ್ಥಕಾರಿಯೂ ಕೂಡ.

ಹೀಗೆಯೇ ಯಾವುದೋ ಸ್ವಾರ್ಥ ಪ್ರಲೋಭನೆಗಳಿಗಾಗಿ ಸ್ವಮತವನ್ನು ಬಿಟ್ಟು ಮತಾಂತರಗೊಳ್ಳುವವರಿಗೂ ಶಿಕ್ಷೆಯನ್ನು ವಿಧಿಸಿದ್ದಾರೆ. ನಮ್ಮ ಸನಾತನವಾದ ಧರ್ಮ ಸಂಸ್ಕೃತಿಗಳನ್ನು ಧಿಕ್ಕರಿಸಿ ಪಾಖಂಡಮತಕ್ಕೆ ಮತಾಂತರಗೊಳ್ಳುವುದು ಘೋರ ಅಪರಾಧವೆನಿಸುತ್ತದೆ. ಹಾಗೆಯೇ ಸರ್ಕಾರಿ ಅಧಿಕಾರಿಗಳು ನಿರಪರಾಧಿಗಳನ್ನು ವ್ಯರ್ಥ ವಾಗಿ ಶಿಕ್ಷಿಸಿದರೆ ಅವರಿಗೂ ನರಕಾದ್ಯನರ್ಥಗಳು ತಪ್ಪಿದವುಗಳಲ್ಲ

ಗೃಹಸ್ಥನಾದವನು ತಾನು ಗಳಿಸಿದ ಸಂಪತ್ತಿನಿಂದ ಅತಿಥಿಗಳಿಗೆ ಮಾತ್ರವಲ್ಲದೆ ಪ್ರಾಣಿಗಳಿಗೂ ಅನ್ನದಾನವನ್ನು ಮಾಡಬೇಕು. ಭಗವಂತನಿಂದ ಬಂದ ಸಂಪತ್ತನ್ನು ಭಗವಂತನ ಸೃಷ್ಟಿಗೇ ಹಂಚಬೇಕು. ಯಾರಿಗೂ ನೀಡದೆ ಸ್ವಾರ್ಥಿಯಾಗಿ ತಿಂದರೆ ಅವನಿಗಿಂತಲೂ ಕೆಟ್ಟವರು ಲೋಕದಲ್ಲಿಲ್ಲ. ತಾನು ಮಾತ್ರ ಉತ್ತಮ ವಿಭೂಷಣ ಗಳನ್ನು ತೊಟ್ಟುಕೊಂಡು ಭೋಗವಿಲಾಸಗಳಲ್ಲಿ ಮೈಮರೆಯುವವನು ಪಾತಕಿ ಎನಿಸುತ್ತಾನೆ. ದಿನನಿತ್ಯದಲ್ಲಿ ನಾವೆಲ್ಲರೂ ಪಂಚಯಜ್ಞಗಳನ್ನು ಆಚರಿಸಬೇಕು. ದೇವ, ಋಷಿ, ಪಿತೃ, ಮಾನವ, ಭೂತಯಜ್ಞಗಳನ್ನು ಆಚರಿಸದಿದ್ದಲ್ಲಿ ನಾವು ಅಪರಾಧಿ ಗಳಾಗುತ್ತೇವೆ. ದೈನಂದಿನ ಬದುಕಿಗೆ ಬೇಕಾದ ಆಹಾರಸಾಮಗ್ರಿಗಳನ್ನು ಮಳೆಯ ಮೂಲಕ ದೇವತೆಗಳು ನಮಗೆ ನೀಡಿ ಉಪಕರಿಸುತ್ತಾರೆ. ಇಷ್ಟೇ ಅಲ್ಲದೆ ಮಾನವರ ಸಮಸ್ತ ಚೇಷ್ಟೆಗಳೂ ದೇವತೆಗಳ ಪ್ರೇರಣೆಯಿಲ್ಲದೆ ನಡೆಯಲಾರವು. ನಮ್ಮ ಸಮಗ್ರ ಜೀವನಕ್ಕೆ ಆಧಾರಸ್ತಂಭದಂತೆ ದೇವತೆಗಳಿದ್ದಾರೆ. ನಿತ್ಯೋಪಕಾರಿ ಗಳಾದ ದೇವತೆಗಳ ಪೂಜೆ ಆರಾಧನೆಗಳನ್ನು ಕೃತಜ್ಞತೆಯಿಂದ ಪ್ರತಿ ನಿತ್ಯವೂ ಕೈಗೊಳ್ಳಬೇಕು. ತತ್ವಜ್ಞಾನದ ಪರಂಪರೆಯನ್ನು ಬೆಳೆಸಿದ ಋಷಿಗಳನ್ನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳಬೇಕು. ತತ್ವಜ್ಞಾನವನ್ನು ನಾವೂ ಬೆಳೆಸುವುದೇ ಋಷಿಯಜ್ಞ ಎನಿಸುತ್ತದೆ. ಪಿತೃಯಜ್ಞ ಎಂದರೆ ವರುಷಕ್ಕೊಮ್ಮೆ ಆಚರಿಸುವ ಶ್ರಾದ್ಧ ಪ್ರಕ್ರಿಯೆ ಮಾತ್ರವಲ್ಲ; ಹಿರಿಯರಿಂದ ಆಚರಿಸಲ್ಪಟ್ಟ ಧರ್ಮ ಸಂಸ್ಕೃತಿ ರಕ್ಷಣೆಯನ್ನು ಕಾಪಾಡುತ್ತಾ ಮಕ್ಕಳಲ್ಲಿಯೂ ಅವು ಗಳನ್ನು ಬೆಳೆಸುವುದು ಪಿತೃಯಜ್ಞವೆನಿಸುತ್ತದೆ. ಮಕ್ಕಳನ್ನೂ ಸನ್ಮಾರ್ಗದಲ್ಲಿ ನಡೆಯು ವಂತೆ ಮಾಡಿದಾಗಲೇ ನಮ್ಮ ಕರ್ತವ್ಯವು ಪರಿಪೂರ್ಣವಾಗುತ್ತದೆ. ಇದಕ್ಕೆ ಸಂವಾದಿ ಯಾಗಿ ಒಂದು ಮಾತು ಪ್ರಸಿದ್ಧವಾಗಿದೆ–

ಏಷ್ಟವ್ಯಾ ಬಹವಃ ಪುತ್ರಾಃ ಯದ್ಯೇಕೋಽಪಿ ಗಯಾಂ ವ್ರಜೇತ್ ।
ನೇಷ್ಟವ್ಯಾ ಬಹವಃ ಪುತ್ರಾಃ ಯದ್ಯೇಕೋಽಪಿ ಸುರಾಂ ಪಿಬೇತ್ ॥

ಸಾಮೂಹಿಕ ಕುಟುಂಬಯೋಜನೆಯನ್ನು ಕೈಗೊಳ್ಳಬೇಡಿ! ಹೆಚ್ಚು ಹೆಚ್ಚು ಮಕ್ಕಳನ್ನು ಪಡೆಯಿರಿ! ಪಡೆದ ಹತ್ತಾರು ಮಕ್ಕಳಲ್ಲಿ ಒಬ್ಬನಾದರೂ ಧಾರ್ಮಿಕನಾಗಿ ಗಯಾಶ್ರಾದ್ಧವನ್ನಾಚರಿಸಿದಲ್ಲಿ ಪಿತೃಗಳಿಗೆ ಸದ್ಗತಿಯಾದೀತು.

ಕುಟುಂಬಯೋಜನೆಯನ್ನು ಕೈಗೊಳ್ಳಿರಿ! ಹೆಚ್ಚು ಮಕ್ಕಳನ್ನು ಪಡೆಯದಿರಿ! ಹೆಚ್ಚು ಪಡೆದಲ್ಲಿ ಒಬ್ಬನು ಸುರೆಯನ್ನು ಕುಡಿದರೂ ಸಾಕು, ಕುಲವೇ ನರಕಕ್ಕೆ ಹೋದೀತು. ಪರಸ್ಪರ ವಿರುದ್ಧವಾದ ಈ ಹೇಳಿಕೆಗಳ ಭಾವವಿಷ್ಟೇ –'ಧಾರ್ಮಿಕ ಮಕ್ಕಳನ್ನು ಹೊಂದಿರಿ!' ಎಂದು ಹೊರತು ಮಕ್ಕಳು ಹೆಚ್ಚು ಇರಬೇಕು ಅಥವಾ ಇರಬಾರದು ಎಂಬುದರಲ್ಲಿ ತಾತ್ಪರ್ಯವಲ್ಲ. ಮಕ್ಕಳನ್ನು ಧರ್ಮಮಾರ್ಗದಲ್ಲಿ ಕೊಂಡೊಯ್ದಾಗ ಪಿತೃಗಳು ತೃಪ್ತರಾಗುತ್ತಾರೆ. ಮಾನವರಿಗೆ ಪ್ರಾಣಿಗಳಿಗೆ ಉಪಕರಿಸುವ ಮನೋಭಾವ ವನ್ನೂ ಅಳವಡಿಸಿಕೊಂಡಾಗ ಪಂಚಯಜ್ಞಗಳನ್ನು ನಡೆಸಿದಂತಾಗುತ್ತದೆ.

ದಿನನಿತ್ಯವೂ ಈ ಐದು ಅಂಶಗಳ ಕಾರ್ಯಕ್ರಮವನ್ನು (Five Point Programme) ಯೋಜಿಸಿಕೊಳ್ಳಬೇಕು. ಪಂಚಯಜ್ಞಗಳನ್ನಾಚರಿಸದೆ ಸ್ವಾರ್ಥಿಯಾಗಿ ಬದುಕುವವ ಅಪರಾಧಿಯಾಗುತ್ತಾನೆ ಎಂಬಲ್ಲಿಗೆ ಪಂಚಮಸ್ಕಂಧವು ಲಕ್ಷ್ಮೀಹಯ ಗ್ರೀವನಿಗೆ ಸಮರ್ಪಿತವಾಯಿತು.

ಮಧ್ವೇಶಾರ್ಪಣಮಸ್ತು.

# ಅಥ ಷಷ್ಠ ಸ್ಕಂಧಃ

## ಅಜಾಮಿಳೋಪಾಖ್ಯಾನ

ಅನೇಕ ವಿಧವಾದ ನರಕಗಳ ವರ್ಣನೆಯನ್ನು ಕೇಳಿದ ಪರೀಕ್ಷಿತ ಮಹಾರಾಜನು ಘೋರ ನರಕಗಳಿಗೆ ಹೋಗದಿರಲು ಮಾರ್ಗವೇನೆಂದು ಪುನಃ ಶುಕಾಚಾರ್ಯರ ಬಳಿ ಪ್ರಶ್ನಿಸಿದ. ಪರೀಕ್ಷಿತನ ಜಿಜ್ಞಾಸೆಗೆ ಶುಕಾಚಾರ್ಯರು ಸುಂದರವಾಗಿ ಉತ್ತರಿಸುತ್ತಾರೆ.

ಶುಕಾಚಾರ್ಯರು: ಅಪರಾಧವನ್ನೆಸಗಿದ ಬಳಿಕ ನರಕಾದ್ಯನರ್ಥಗಳನ್ನು ತಪ್ಪಿಸಿ ಕೊಳ್ಳಬೇಕಿದ್ದರೆ ಶಾಸ್ತ್ರೋಕ್ತಕ್ರಮದಲ್ಲಿ ಪ್ರಾಯಶ್ಚಿತ್ತವನ್ನು ಮಾಡಿ ಕೊಳ್ಳಬೇಕು.

ಪರೀಕ್ಷಿತ: ದೇವ! ಅಪರಾಧಿಗಳ ಪಾಪವು ಪ್ರಾಯಶ್ಚಿತ್ತದಿಂದ ಪರಿಹಾರವಾಗುವು ದಾದರೆ; ಆ ಪ್ರಾಯಶ್ಚಿತ್ತವು ಅಪರಾಧಮಾಡಲು ಲೈಸನ್ಸ್ ಕೊಟ್ಟಂತಾಗ ಲಿಲ್ಲವೇ? ಪುನಃ ಪುನಃ ಅಪರಾಧವನ್ನು ಮಾಡುವವರಿಗೆ ಪ್ರಾಯಶ್ಚಿತ್ತ ಎಷ್ಟು ಉಚಿತ! ನಾಲ್ಕಾರು ಗಂಟೆಗಳ ಕಾಲ ಸ್ನಾನವನ್ನಾಚರಿಸಿದ ಆನೆಯು ದಡದ ಮೇಲಕ್ಕೆ ಬಂದು ಮೈತುಂಬ ಮಣ್ಣನ್ನು ಎರಚಿ ಕೊಳ್ಳುತ್ತದೆ. ಅಷ್ಟು ಹೊತ್ತು ಮಾಡಿದ ಸ್ನಾನಕ್ಕೇನು ಬೆಲೆ ಬಂತು?

ಇಂದು ನಾವೆಲ್ಲರೂ ಅನೇಕ ಅಪರಾಧಗಳನ್ನು ಮಾಡಿ ಕೊನೆಗೊಮ್ಮೆ ಪ್ರಾಯಶ್ಚಿತ್ತವೆಂದು ದೇವರ ಕಾಣಿಕೆ ಹುಂಡಿಗೆ ಹಣ ಹಾಕುತ್ತೇವೆ. ಮತ್ತೆ ಅಪರಾಧ ಮಾಡುತ್ತೇವೆ. ರೋಗ ಬಂತೆಂದು ಔಷಧಿಯನ್ನು ಸ್ವೀಕರಿಸುವುದು. ಪುನಃ ರೋಗಕ್ಕೆ ಕಾರಣವಾದ ಅಪಥ್ಯವನ್ನಾಚರಿಸುವುದು. ಪುನಃ ಔಷಧಿಯನ್ನು ಸೇವಿಸುವುದು. ಇದು ಸಲ್ಲದು. ಅನ್ಯಾಯಮಾಡಿ ಕಾಣಿಕೆ ಹಾಕಿ ಮತ್ತೆ ಅನ್ಯಾಯವನ್ನೇ ಮಾಡಿದರೆ ಇದನ್ನು 'ಕುಂಜರಶೌಚ' ಎಂದಿದ್ದಾರೆ.

ಶುಕಾಚಾರ್ಯರು: ರಾಜನ್! ಒಳ್ಳೆಯ ಆಹಾರಗಳನ್ನು ಮಿತವಾಗಿ ಸ್ವೀಕರಿಸಿದಲ್ಲಿ ರೋಗಗಳೇ ಬರುವುದಿಲ್ಲ. ಚಾಪಲ್ಯದಿಂದ ಅಪಥ್ಯ ಆಹಾರಗಳನ್ನು ಸೇವಿಸಿ ಔಷಧಿ ನುಂಗುವ ಸ್ಥಿತಿಯನ್ನು ತಂದುಕೊಳ್ಳುವ ಬದಲು ಆಹಾರಗಳ ನಿಯಂತ್ರಣವನ್ನು ಪಾಲಿಸುವುದೇ ಲೇಸು. ಅದರಂತೆ ಅನ್ಯಾಯವನ್ನು ಮಾಡಿ ಪ್ರಾಯಶ್ಚಿತ್ತಾದಿಗಳನ್ನು ಆಚರಿಸುವುದಕ್ಕಿಂತ ತಪಸ್ಸು, ಬ್ರಹ್ಮಚರ್ಯ, ಶಮ, ತ್ಯಾಗ, ಸತ್ಯ, ಶೌಚ, ನಿಯಮ, ಯಮ –ಮುಂತಾದ ಸದ್ವರ್ತನೆ ಗಳಿಂದ ಜೀವನವನ್ನು ನಡೆಸುವುದೇ ಉತ್ತಮ. ಒಂದುವೇಳೆ ಪಾಪ ಕೃತ್ಯವನ್ನು ಮಾಡಿದರೂ ಅದಕ್ಕೊಮ್ಮೆ ಪ್ರಾಯಶ್ಚಿತ್ತ ಮಾಡಿದ ಬಳಿಕ ಪುನಃ ಅಂತಹ ಅಪರಾಧವನ್ನೆಸಗದಂತೆ ಎಚ್ಚರ ವಹಿಸಬೇಕು. ಸಜ್ಜನನಾಗಿ ಭಗವದ್ಭಕ್ತಿಯ ಜೀವನವನ್ನು ನಡೆಸಿದಾಗ ಕಟ್ಟಿಗೆ ರಾಶಿಯನ್ನು ಕಿಡಿ ಬೆಂಕಿಯೇ ಸುಡುವಂತೆ ದುಷ್ಕೃತ್ಯಗಳೆಂಬ ಕಟ್ಟಿಗೆಗಳನ್ನು ಭಕ್ತಿಯೊಂದೇ

ತರಿಯುಬಲ್ಲುದು ಇದಕ್ಕೆ ಸಂವಾದಿಯಾದ ಇತಿಹಾಸವೊಂದನ್ನು ಹೇಳುವೆನು; ಆಲಿಸು.

ಕಾನ್ಯಕುಬ್ಜದಲ್ಲಿ ಅಜಾಮಿಳನೆಂಬ ಬ್ರಾಹ್ಮಣನೊಬ್ಬನಿದ್ದ ಸದಾಚಾರಸಂಪನ್ನನಾದ ಬ್ರಾಹ್ಮಣನು ಒಂದು ದಿನ ತಂದೆಯ ಆಜ್ಞೆಯಂತೆ ಸಮಿತ್ತು ದರ್ಭೆಗಳನ್ನು ತರಲು ಕಾಡಿಗೆ ಹೋದವ ದಾಸಿಯೋರ್ವಳನ್ನು ಕಂಡ. ಅವಳ ಮೋಹದ ಬಲೆಗೆ ಸಿಕ್ಕಿಬಿದ್ದ. ತನ್ನ ಸದ್ವರ್ತನೆ, ಪೂರ್ವಸಂಸ್ಕಾರ, ಸಂಸಾರಗಳೆಲ್ಲವನ್ನೂ ಮರೆತ. ಶೂದ್ರಸ್ತ್ರೀಯಲ್ಲಿ ಅನುರಕ್ತನಾದ. ತನ್ನ ಕರ್ತವ್ಯ ಸ್ವಧರ್ಮಾಚರಣೆ ಎಲ್ಲವನ್ನೂ ಬಿಟ್ಟು, ಭೋಗಮಗ್ನ ನಾಗಿ ಭಗವಂತನನ್ನು ಮರೆತ. ಸ್ವಚ್ಛಂದ ಜೀವನಕ್ಕಾಗಿ ಮೈಮನಗಳನ್ನು ಚೆಲ್ಲಿದ. ಉತ್ತಮನಾದ ಅಜಾಮಿಳ ವಿಕೃತ ದೃಶ್ಯದಿಂದ ಆಕರ್ಷಿತನಾಗಿ ಕಾಲುಜಾರಿ ಬಿದ್ದ. ದುರಾಚಾರಿಯಾಗಿ ಕಾಲ ಕಳೆಯಲಾರಂಬಿಸಿದ. ಹೀಗೆಯೇ ಹತ್ತಾರು ಮಕ್ಕಳನ್ನು ಪಡೆದು ಮೃತ್ಯುವಿಗೆ ಹತ್ತಿರವಾದ ಎಂಭತ್ತರ ಮೆಟ್ಟಿಲನ್ನೇರಿದ ಅಜಾಮಿಳನಿಗೆ ಸಾಯುವ ಸ್ಥಿತಿ ಬಂತು.

ದಯಾರಹಿತರಾದ ಯಮಭಟರು ಅಜಾಮಿಳನನ್ನು ಸೆಳೆದೊಯ್ಯಲು ಬಂದರು. ಅವರನ್ನು ಕಂಡ ಅಜಾಮಿಳ ಗಾಬರಿಯಾದ. ಕೊನೆಯ ಮಗನಾದ ನಾರಾಯಣನು ನಾರಾಯಣನ ಸ್ಮರಣೆಗೆ ಹೇತುವಾದ. ಒಮ್ಮೆಂದೊಮ್ಮೆಲೇ ಶ್ರೀಮನ್ನಾರಾಯಣ ನನ್ನೇ ನಾರಾಯಣ! ಎಂದು ಕೂಗಿ ಕರೆದ. ಪೂರ್ವಪುಣ್ಯದಿಂದ ದುರಾಚಾರಿಯಾದ ಅಜಾಮಿಳನಿಗೆ ಸಂಸ್ಕಾರವು ಉದ್ಬುದ್ಧವಾಗಿತ್ತು. ಪಶ್ಚಾತ್ತಾಪಹೊಂದಿದ. ಅಜಾಮಿಳನ ಮುಖದಿಂದ ಹರಿನಾಮಕೀರ್ತನೆಯು ಹೊರಹೊಮ್ಮಿದ್ದೇ ತಡ, ವಿಷ್ಣುದೂತರು ಪ್ರತ್ಯಕ್ಷರಾದರು ಈಟಿಯಂತೆ ಮೀಟುವ ರೋಮಕೋಟಿಯುಳ್ಳ ಯಮಭಟರನ್ನು ದಿವ್ಯರೂಪದ ವಿಷ್ಣುದೂತರು ತಡೆದರು. ಅಡಿಯನ್ನು ಮುಂದಿಡಲಾಗದೆ ಯಮ ಭಟರು ಮಾತಿಗಣಿಯಾದರು. ಪೀತಾಂಬರಧಾರಿಯಾದ ಬಲುಸೊಬಗಿನಿಂದ ಕಂಗೊಳಿ ಸುವ ದಿವ್ಯಪುರುಷರೇ! ಯಾರು ನೀವು? ಎಲ್ಲಿಂದ ಬಂದಿರಿ? ಯಮಧರ್ಮನ ದೂತರನ್ನೇಕೆ ತಡೆದಿರಿ? ಎಂದಾಗ ವಿಷ್ಣುದೂತರು ಧರ್ಮದ ಬಗ್ಗೆ ಪ್ರತಿಯಾಗಿ ಪ್ರಶ್ನಿಸಿದರು. ಇವರ ಚರ್ಚೆಯನ್ನು ಅಜಾಮಿಳನು ಸ್ವಪ್ನದಂತೆ ಕಾಣುತ್ತಿದ್ದಾನೆ.

'ಘೋರ ಅಪರಾಧಗಳನ್ನೆಸಗಿದ ಅಜಾಮಿಳ ನರಕಕ್ಕೇ ಯೋಗ್ಯನಾಗಿದ್ದಾನೆ. ಅವನನ್ನು ಸೆಳೆದೊಯ್ಯಲು ಬಿಡಿರಿ!' ಎಂದು ಯಮಭಟರು ಆರ್ಭಟಿಸುತ್ತಿದ್ದರೆ, 'ಹರಿನಾಮಸಂಕೀರ್ತನೆ ಮಾಡಿದ ಅಜಾಮಿಳನನ್ನು ಬಿಡೆವು'. ಅವನು ಎಷ್ಟೇ ತಪ್ಪು ಮಾಡಿದ್ದರೂ ಮಗನನ್ನು ಕರೆಯುವ ನೆಪದಲ್ಲಿ ಭಕ್ತಿಯಿಂದ ಭಗವಂತನನ್ನು ಕರೆ ದಿದ್ದಾನೆ. ಪಶ್ಚಾತ್ತಾಪದಗ್ಧನಾಗಿದ್ದಾನೆ. ಇವನನ್ನು ಮುಟ್ಟುವ ಅಧಿಕಾರ ನಿಮಗಿಲ್ಲ' ಎಂದು ಪ್ರತಿಭಟಿಸುತ್ತಿದ್ದಾರೆ. ಕೊನೆಗೆ ವಿಷ್ಣುಪಾರ್ಷದರನ್ನು ಎದುರಿಸಲಾಗದೆ ಯಮ ಭಟರು ಹಿಂತಿರುಗಿದರು.

ವಿಷ್ಣು–ಯಮಕಿಂಕರ ಸಂವಾದವನ್ನು ಕೇಳಿದ ಅಜಾಮಿಳನಿಗೆ ತನ್ನ ಅನ್ಯಾಯ ಕರ್ತವ್ಯಹೀನತೆಯ ನೀಚ ಜೀವನದ ಬಗ್ಗೆ ಜುಗುಪ್ಸೆ ಬಂದಿತು. ಸಾತ್ವಿಕ ಜೀವನ

ನಡೆಸುತ್ತಿದ್ದವ ಹೇಗಾಗಿಬಿಟ್ಟೆ ಎಂದು ಮರುಗಿದ. ಕೇವಲ ಒಮ್ಮೆ ಮಾಡಿದ 'ನಾರಾಯಣ' ಎಂಬ ನಾಮಸ್ಮರಣೆಯೇ ವಿಷ್ಣುದೂತರ ಆಗಮನಕ್ಕೆ ಹೇತುವಾಗುತ್ತದೆ ಎಂದಾದರೆ ನಿರಂತರ ಹರಿಸ್ಮರಣೆ ಮಾಡಿದವಗೆ ಸಿಗಬಹುದಾದ ಫಲವು ಎಷ್ಟಿರಬಹುದು?! ಎಂದು ಆಲೋಚಿಸಿದ ಪಶ್ಚಾತ್ತಾಪದಗ್ಧನಾಗಿ ಇನ್ನೆಂದೂ ಇಂತಹ ಜೀವನಕ್ಕೆ ಕಾಲಿಡೆನೆಂದು ಪ್ರತಿಜ್ಞೆಗೈದು, ಹರಿಯನ್ನು ಒಲಿಸಿಕೊಳ್ಳುವ ಹಂಬಲದಿಂದ ತಪಸ್ಸನ್ನಾಚರಿಸಲು ಗಂಗಾತೀರಕ್ಕೆ ತೆರಳಿದ ಪೂರ್ವಸಂಸ್ಕಾರದ ಬಲದಿಂದ ನಿರಂತರವೂ ಹರಿಚಿಂತನೆಯಲ್ಲಿಯೇ ರತನಾಗಿ ಮುಕ್ತಾತ್ಮನೆನಿಸಿದ.

## ಕೇವಲ ನಾಮಸ್ಮರಣೆಯಿಂದ ಮೋಕ್ಷವಿಲ್ಲ

ಕೆಲವರು ಈ ಕಥೆಯನ್ನು ತಪ್ಪಾಗಿ ಚಿತ್ರಿಸುತ್ತಾರೆ.

'ಅಜಾಮಿಳನು 'ನಾರಾಯಣ' ಎಂದು ತನ್ನ ಮಗನನ್ನು ಕರೆದ. ತತ್‌ಕ್ಷಣದಲ್ಲಿ ವಿಷ್ಣುದೂತರು ಆಗಮಿಸಿ ಮೋಕ್ಷಕ್ಕೆ ಕರೆದುಕೊಂಡು ಹೋದರು' ಎನ್ನುತ್ತಾರೆ. ಮೋಕ್ಷವು ಇಷ್ಟು ಸುಲಭದಲ್ಲಿ ಸಿಗುವುದೆಂದಾದರೆ, ಜಗತ್ತಿನ ಮಂದಿಯೆಲ್ಲ ಮೋಕ್ಷಕ್ಕೇ ಹೋಗಬೇಕಾದೀತು. 'ಜೀವನದಲ್ಲಿ ನೂರಾರು ದುರಾಚಾರಗಳನ್ನೆಸಗಿ ಕೊನೆಗೊಮ್ಮೆ 'ನಾರಾಯಣ!' ಎಂದರೆ ನಾಕು; ಎಲ್ಲರಿಗೂ ಮೋಕ್ಷ' ಎಂದು ಕೆಟ್ಟ ಕೆಲಸ ಮಾಡಲು ಹಸಿರುನಿಶಾನೆ ತೋರಿಸಿದಂತಾಗುವುದು. ಆದ್ದರಿಂದ ಅಜಾಮಿಳನ ಕಥೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು ಪರಮಧಾರ್ಮಿಕನಾಗಿ ಜೀವಿಸುತ್ತಿದ್ದ ಅಜಾಮಿಳನು ಪ್ರಾರಬ್ಧದಿಂಧ ಸ್ತ್ರೀವಶನಾಗಿ ದುರಾಚಾರಿಯಾದ. ಕೊನೆಗೆ ನಾರಾಯಣನೆಂಬ ತನ್ನ ಬಾಲಕನನ್ನು ಕಂಡಾಗ ಪೂರ್ವಸಂಸ್ಕಾರವು ಬಗೆಯಲ್ಲರಳಿತು. ಶ್ರೀಮನ್ನಾರಾಯಣನ ಸ್ಮರಣೆ ಸ್ಫುರಿಸಿತು. ಯಮ ಮತ್ತು ವಿಷ್ಣುದೂತರ ಸಂವಾದದ ಸ್ವಪ್ನ ಸಹಕಾರಿಯಾಯಿತು. ಇದರಿಂದ ಎಚ್ಚೆತ್ತ ಅಜಾಮಿಳ ವಿರಕ್ತನಾಗಿ ಗಂಗಾದ್ವಾರಕ್ಕೆ ತೆರಳಿ ಅನೇಕ ವರುಷಗಳ ತಪಸ್ಸನ್ನಾಚರಿಸಿದ. ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಂಡ. ಅನಂತರ ಮುಕ್ತಿಯನ್ನು ಹೊಂದಿದ ಹೊರತು ಕೇವಲ ನಾಮಸ್ಮರಣೆಯಿಂದ ಮೋಕ್ಷ ಎನ್ನುವುದು ತಪ್ಪು ತಿಳಿವಳಿಕೆ. ಮೋಕ್ಷವನ್ನು ಇಷ್ಟು ಸುಲಭಸಾಧ್ಯವೆಂದು ಭಾವಿಸಿದಲ್ಲಿ ಸಾಧನೆಯ ಪಥದಲ್ಲಿ ಸಾಗಲಾಗದು. ಗುರಿಯನ್ನು ಮುಟ್ಟಲಾರೆವು. ಬಹುಕಾಲದ ಭಗವಂತನ ವಿಸ್ಮರಣೆ ಎಷ್ಟು ಅನರ್ಥವನ್ನು ಉಂಟುಮಾಡುತ್ತದೆ ಎನ್ನುವುದಕ್ಕಿಂತಲೂ ಕ್ಷಣಕಾಲದಲ್ಲಿ ಆಚರಿಸಿದ ಭಗವನ್ನಾಮಸ್ಮರಣೆಯು ಎಷ್ಟೆಲ್ಲಾ ದುರಿತಗಳನ್ನು ತರಿಯುತ್ತದೆ ಎನ್ನುವುದನ್ನು ಈ ಕಥೆಯು ತಿಳಿಸುತ್ತದೆ. ನಮ್ಮ ಜೀವನದಲ್ಲಿ ಭಗವಂತನಿಗೆ ಅವಕಾಶ ಕೊಟ್ಟಾಗ ತಪ್ಪಿ ನಡೆಯುವ ಪ್ರಸಂಗವೇ ಇಲ್ಲ. ಒಂದುವೇಳೆ ತಪ್ಪಿ ನಡೆದರೂ ಹರಿಸ್ಮರಣೆಯ ಬಲದಿಂದ ಚೇತರಿಸಿಕೊಳ್ಳಬಹುದು. ಯಾವ ಪಾಪಕ್ಕೂ ಬಲಿಯಾಗದಂತೆ ನಮ್ಮ ಜೀವನವನ್ನು ಭದ್ರಗೊಳಿಸುವ ವಜ್ರಕವಚವೇ ಹರಿನಾಮಸ್ಮರಣೆ. ಹರಿನಾಮ ಸ್ಮರಣೆಯ ಮೂಲಕ ನಮ್ಮ ಜೀವನವನ್ನು ಸಾರ್ಥಕ ಮಾಡಿಕೊಳ್ಳೋಣ!

ಇತ್ತ ವಿಷ್ಣುಪಾಶದಿಂದ ಪರಾಜಿತರಾದ ಯಮಭಟರು ಬರಿಗೈಲಿ ಯಮಪುರಿಗೆ ಬಂದರು. ತಮ್ಮ ಒಡೆಯನ ಬಳಿ ಕೇಳಿದರು 'ಯಮನೇ! ನಮಗೆ ಎಷ್ಟು ಮಂದಿ ಶಾಸಕರು! ಇತ್ತ ನೀನು ಶಾಸನ ಮಾಡುತ್ತೀಯೆ. ಆಚೆ ವಿಷ್ಣುಭಕ್ತರು ಬಂದು ನಮ್ಮ ವಿರುದ್ಧ ಶಾಸನವನ್ನು ಮಂಡಿಸುತ್ತಾರೆ. ಇದೇನು ಅವ್ಯವಸ್ಥೆ. ನಿನ್ನ ಶಾಸನ ಪಾಲಿಸುವ ಬಗೆ ಹೇಗೆ? ಎಂದು ಪ್ರಶ್ನಿಸಿದರು.

ಯಮಧರ್ಮ ನುಡಿದ– "ನಾನು ಇಂದ್ರ, ನಿರ್ಋತಿ, ಪ್ರಚೇತಸರು, ಸೋಮ, ಅಗ್ನಿ, ರುದ್ರ, ವಾಯು, ಸೂರ್ಯ, ಬ್ರಹ್ಮ, ವಿಶ್ವೇದೇವತೆಗಳು, ವಸುಗಳು, ಸಾಧ್ಯರು, ಮರುದ್ಗಣಗಳು, ರುದ್ರಗಣಗಳು ಎಲ್ಲರೂ ಪರಮಾತ್ಮನ ಕಿಂಕರರು. ಅವನ ಆದೇಶದಂತೆ ನಾವೆಲ್ಲರೂ ಕೆಲಸಮಾಡುವವರು.

ಲೋಕದಲ್ಲಿ ಹಸುಕರುಗಳನ್ನು ಹಗ್ಗದಿಂದ ಕಟ್ಟುವಂತೆ, ಭಗವಂತನು ವೇದವೆಂಬ ಹಗ್ಗದಿಂದ ನಮ್ಮೆಲ್ಲರನ್ನೂ ಕಟ್ಟಿದ್ದಾನೆ.

ನಮ್ಮ ರಾಷ್ಟ್ರಕ್ಕೊಂದು ಸಂವಿಧಾನವಿದೆ. ಅದರಂತೆ ಸಮಗ್ರ ವಿಶ್ವದ ಸಂವಿಧಾನವೇ ವೇದ. ರಾಷ್ಟ್ರದ ಸಂವಿಧಾನದಂತೆ ಸಕಲ ಚೇತನಕುಲದ ಸಂವಿಧಾನ ವೇದವೇ ಆಗಿದೆ. ಈ ವೇದದ ಕಾನೂನಿಗೆ ಒಳಪಟ್ಟು ನಾವು ವರ್ತಿಸಬೇಕು.

ವೇದೋಕ್ತವಾಗಿ ನಡೆದುಕೊಂಡವರನ್ನು ದಂಡಿಸುವ ಅಧಿಕಾರ ನಮಗಿಲ್ಲ. ವಿಷ್ಣುಭಕ್ತರನ್ನು ಮುಟ್ಟುವ ಸಾಹಸಕ್ಕಿಳಿಯಬೇಡಿರಿ!!

ಹಾಗಾದರೆ ದಂಡನೆ ಯಾರಿಗೆ?

ಯಾರಿಗೆ ಭಗವಂತನ ಪಾದಾರವಿಂದಗಳಲ್ಲಿ ಭಕ್ತಿಯಿಲ್ಲವೋ ಅವರನ್ನು ಕರೆತನ್ನಿ.

**ಜಿಹ್ವಾ ನ ವಕ್ತಿ ಭಗವದ್ಗುಣನಾಮಧೇಯಂ**
**ಚೇತಶ್ಚ ನ ಸ್ಮರತಿ ತಚ್ಚರಣಾರವಿಂದಮ್ ।**
**ಕೃಷ್ಣಾಯ ನೋ ನಮತಿ ಯಚ್ಛಿರ ಏಕದಾಽಪಿ**
**ತಾನಾನಯಧ್ವಮಸತೋಽಕೃತವಿಷ್ಣುಕೃತ್ಯಾನ್ ॥**

— (೬–೩–೨೯)

ಎಂದ. "ಯಾರ ನಾಲಿಗೆ ಭಗವಂತನ ಗುಣನಾಮಗಳನ್ನು ಉಚ್ಚರಿಸುವುದಿಲ್ಲ. ಯಾರ ಮನಸ್ಸು ಭಗವಂತನನ್ನು ಸ್ಮರಿಸುವುದಿಲ್ಲ. ಯಾರ ಶಿರಸ್ಸು ಹರಿಯ ನಮಿಸುವುದಿಲ್ಲ. ಅಂತಹವರ ಗುಂಪು ಬೇಕಾದಷ್ಟಿದೆ. ಅಂತಹವರನ್ನು ತರುವುದು ಬಿಟ್ಟು ಹರಿಸ್ಮರಣೆ ಮಾಡಿದ ಅಜಾಮಿಳನನ್ನು ಕರೆತರಲು ಹೋದಿರೇಕೆ?" ಎಂದು ಗದರಿಸಿದ.

ಅಂದಿನಿಂದ ವಿಷ್ಣುಭಕ್ತರನ್ನು ನೋಡಲೂ ಸಹ ಯವಭಟರು ಹೆದರುತ್ತಾರಂತೆ. ಆದ್ದರಿಂದ ಯಮನದನ ಬಯಸದವ ವೇದೋಕ್ತ ವಿಧಿಗಳಂತೆ ನಡೆದುಕೊಳ್ಳಬೇಕು. ಭಗವದ್ಭಕ್ತಿಗೆ ಇಂತಹ ಶಕ್ತಿ ಇರಲು ಲೋಕದ ಆಸಕ್ತಿಯಲ್ಲಿಯೇ ಕಾಲಕಳೆಯುವ ಮಂದಿಗೆ ಏನೆನ್ನೋಣ!!

## ಹರಿನಾಮ ಜಿಹ್ವೆಯೊಳಿರಬೇಕು!!

ಹರಿನಾಮವನ್ನು ಒಮ್ಮೆ ನುಡಿದವ ಅಜಾಮಿಳ. ಜೀವನದ ಅವನ ಅಪರಾಧ ಗಳೆಲ್ಲವನ್ನೂ ಮನ್ನಿಸಿ ವಿಷ್ಣುವು ತನ್ನ ದೂತರನ್ನು ಕಳುಹಿಸಿದ. ಯಮಭಟರಿಗೆ ಮುಟ್ಟಲೂ ಬಿಡಲಿಲ್ಲ. ಯಮನೂ ಸಹ ಹರಿನಾಮದ ಮಹತ್ವವನ್ನು ಬಣ್ಣಿಸುತ್ತಾ ಅಜಾಮಿಳನನ್ನು ಕರೆತರಲು ಹೋದ ತನ್ನ ಭಟರನ್ನು ನಿಂದಿಸಿದ.

ಹರಿನಾಮದ ಮಹತ್ವವನ್ನು ಸಾರುವ ಕಥೆಯೊಂದಿದೆ–

ಒಂದು ಆಶ್ರಮದಲ್ಲಿ ಒಬ್ಬ ಶಿಷ್ಯ ಒಬ್ಬ ಗುರು ವಾಸವಾಗಿದ್ದರು. ಒಮ್ಮೆ ಗುರು ಗಳು ಕಾರಣಾಂತರದಿಂದ ಹೊರಗೆ ಹೋಗಿದ್ದರು. ಅದೇ ಸಮಯದಲ್ಲಿ ತಪ್ಪುಮಾಡಿದ ವ್ಯಕ್ತಿಯೊಬ್ಬ ಪ್ರಾಯಶ್ಚಿತ್ತ ಕೇಳಲು ಬಂದ. ಶಿಷ್ಯನು ಗುರುಗಳಿಲ್ಲ, ನಾನೇ ಪ್ರಾಯಶ್ಚಿತ್ತ ಹೇಳುತ್ತೇನೆ ಎಂದ.

ಅಪರಾಧಿ ಕೇಳಿದ: "ಏನು ಪ್ರಾಯಶ್ಚಿತ್ತ?"

ಶಿಷ್ಯ ಹೇಳಿದ: "ನಿನ್ನ ಅಪರಾಧದ ಪರಿಹಾರಕ್ಕೆ ಮೂರುಬಾರಿ ಭಕ್ತಿಯಿಂದ ಹರಿನಾಮಸ್ಮರಣೆ ಮಾಡು. ನಿನ್ನ ಪಾಪಪರಿಹಾರವಾಗುತ್ತದೆ" ಎಂದು ಪ್ರಾಯಶ್ಚಿತ್ತ ಹೇಳಿ ಕಳುಹಿಸಿದ.

ಸ್ವಲ್ಪ ಸಮಯದಲ್ಲಿಯೇ ಗುರುಗಳು ಬಂದರು. ನಡೆದ ಸಂಗತಿ ವಿವರಿಸಿ "ನಾನೇ ಪ್ರಾಯಶ್ಚಿತ್ತವನ್ನು ಹೇಳಿದೆ" ಎಂದ.

ಏನು ಹೇಳಿದಿ? ಎಂದು ಗುರುಗಳು ಕೇಳಿದರು.

"ಮೂರುಬಾರಿ ಭಕ್ತಿಯಿಂದ ಹರಿನಾಮಸ್ಮರಣೆ ಮಾಡಹೇಳಿರುವೆ" ಎಂದ.

ಗುರುಗಳು ದೊಡ್ಡ ಅಪರಾಧ ಮಾಡಿದಿ ಎಂದರು.

ಶಿಷ್ಯ: ಇದೇನು? ಹರಿನಾಮಸ್ಮರಣೆ ಮಾಡಹೇಳಿದ್ದು ಅಪರಾಧವೇ? ಎಂದ.

ಗುರು: ಪಾಪಪರಿಹಾರಕ್ಕೆ ಭಕ್ತಿಯಿಂದ ಮೂರುಬಾರಿ ಹರಿನಾಮಸ್ಮರಣೆಯ ಅಗತ್ಯ ಉಂಟೇ? ಒಂದುಬಾರಿ ಎಂದು ಹೇಳಿದ್ದರೆ ಸಾಕಿತ್ತು. ಮೂರುಬಾರಿ ಎಂದು ತಪ್ಪೇಕೆ ನುಡಿದೆ? ಎಂದರು. ಶಿಷ್ಯನಿಗೆ ಮತ್ತಷ್ಟು ಹರಿನಾಮದ ಮಹತ್ವ ತಿಳಿಯಿತು.

ಇದರ ಭಾವವೇನೆಂದರೆ– ಶ್ರೀಮದಾಚಾರ್ಯರು ತಿಳಿಸಿದಂತೆ.

"ಹರಿನಾಮದ ಶಕ್ತಿಯನ್ನು ತಡೆದುಕೊಳ್ಳುವಷ್ಟು ಶಕ್ತಿ ಪಾಪಕ್ಕೇ ಇಲ್ಲ. ಹರಿನಾಮ ತೊಳೆಯುವಷ್ಟು ಪಾಪವನ್ನು ಯಾವ ಪಾತಕಿಗೂ ಮಾಡಲಾ ಗದು!!"

**ನಾಮ್ನೋಽಸ್ತಿ ಯಾವತೀ ಶಕ್ತಿಃ ಪಾಪನಿರ್ಹರಣೇ ಹರೇಃ ।**
**ತಾವತ್ಕರ್ತುಂ ನ ಶಕ್ನೋತಿ ಪಾತಕಂ ಪಾತಕೀ ಜನಃ ॥**

ಎಂದು ತಿಳಿಸಿ, ಹರಿನಾಮಕ್ಕೆ ಇಷ್ಟೆಲ್ಲಾ ಮಹತ್ವವಿದ್ದರೂ, ಜನರು ಇದನ್ನರಿಯದೆ ಸಂಸಾರದಲ್ಲಿ ವ್ಯರ್ಥ ಶ್ರಮಪಡುವುದು ಕಂಡು ಆಶ್ಚರ್ಯವಾಗುತ್ತಿದೆ ಎನ್ನುತ್ತಾರೆ.

ನಾರಾಯಣೇತಿ ಮಂತ್ರೋsಸ್ತಿ ವಾಗಸ್ತಿ ವಶವರ್ತಿನೀ ।
ತಥಾಪಿ ನರಕೇ ಘೋರೇ ಪತಂತೀತ್ಯೇತದದ್ಭುತಮ್ ॥

ನಾರಾಯಣ ಎಂಬ ಮಂತ್ರವಿದೆ. ನಾಲಿಗೆ ನಮ್ಮ ವಶದಲ್ಲಿಯೇ ಇದೆ. ಹೀಗಿದ್ದರೂ ಲೋಕದ ಮಂದಿಯೆಲ್ಲಾ ನರಕದ ದಾರಿ ಹಿಡಿದು ನರಕಕ್ಕೆ ಗುರಿಯಾಗುತ್ತಿದ್ದಾರೆ. ಎಂತಹ ಸೋಜಿಗ!! ಎನ್ನುತ್ತಾರೆ.

ಹರಿನಾಮವನ್ನು ಯಾಂತ್ರಿಕವಾಗಿ ನುಡಿಯುವುದಕ್ಕಿಂತ ಭಕ್ತಿಪುರಸ್ಸರವಾಗಿ ನುಡಿದರೆ ಸಂಸಾರವೆಂಬ ಸೆರೆಯನ್ನೇ ಪರಿಹರಿಸಿಕೊಳ್ಳಬಹುದು.

ನಾಮಸ್ಮರಣೆಯ ಈ ಮಹತ್ವವನ್ನು ತಿಳಿಸಲಿಕ್ಕಾಗಿಯೇ, ಭಗವಂತನು ಭಕ್ತಿಯಿಂದ ಒಮ್ಮೆ ನೆನೆದ ಅಜಾಮಿಳನ ಯೋಗ್ಯತೆಯ ಕಂಡು ಮುಕುತಿಯನಿತ್ತ.

ಭಕ್ತರಿಂದ 'ಅಜಾಮಿಳವರದ' ಎಂಬ ಬಿರುದು ಪಡೆದ.

ಈ ಅಜಾಮಿಳನ ಕಥೆ ದಿನನಿತ್ಯವೂ ಸಾವಿರಾರು ಅಪರಾಧಗಳನ್ನು ಮಾಡುತ್ತಲೇ ಇರುವ ನಮ್ಮೆಲ್ಲರಿಗೂ ಧೈರ್ಯ ತುಂಬುವ ಕಥೆ.

ಇದನ್ನರಿಯದವನಿಗೆ ನಿರಂತರ ವ್ಯಥೆ. ಇದನ್ನು ಅರ್ಥಮಾಡಿಕೊಂಡು ಬದುಕುವುದೇ ಜೀವನದ ಸಾರ್ಥಕತೆ.

## ಪ್ರಕೃತಿ ರಕ್ಷಣೆ

ಸೃಷ್ಟಿಯ ಅನಂತರವೂ ಪ್ರಾಚೀನಬರ್ಹಿಯ ಮಕ್ಕಳಾದ ಹತ್ತು ಮಂದಿ ಪ್ರಚೇತಸರು ಸಮುದ್ರದಲ್ಲಿಯೇ ವಾಸವಾಗಿದ್ದರು. ಕಾಲಾಂತರದಲ್ಲಿ ಹತ್ತುಮಂದಿ ಪ್ರಚೇತಸರು ಮೇಲೆದ್ದು ಬಂದರು.

ಭೂಮಿಗೆ ಬಂದ ಹತ್ತುಮಂದಿಗೆ ಭೂಮಿಯಲ್ಲಿಯ ಮರಗಿಡಗಳನ್ನು ಕಂಡು ಸಿಟ್ಟುಬಂದಿತು.

ಕತ್ತಲನ್ನು ಸೃಷ್ಟಿಸುವ ಸಂಚಾರಕ್ಕೆ ವಿಘ್ನವನ್ನುಂಟುಮಾಡುವ ಮರಗಳ ಮಾರಣ ಹೋಮಕ್ಕೆ ಸಿದ್ಧರಾದರು. ತಪೋಬಲದಿಂದ ಮುಖದಿಂದಲೇ ಬೆಂಕಿ ಹೊತ್ತಿಸಿದರು. ಮರಗಿಡಗಳನ್ನು ಸುಡಲಾರಂಭಿಸಿದರು.

ಇದನ್ನು ಕಂಡ ಚಂದ್ರನು ಬಂದು ತಡೆದ.

"ಲೋಕೋಪಕಾರಿಗಳಾದ ನಿರುಪದ್ರವಿ ದ್ರುಮಗಳನ್ನೇಕೆ ದಹಿಸುವಿರಿ? ನಿಮ್ಮ ಕುಲಕ್ಕೆ ಉಚಿತವಾದ ವರ್ತನೆಯಲ್ಲ! ಲೋಕದ ಸಮೃದ್ಧಿಗೆ ಕಾರಣವಾದವು ಮರಗಳು. ದೇವತೆಗಳಿಗೂ ಮನುಷ್ಯರಿಗೂ ಅನ್ನದಂತಿರುವವು ಮರಗಳು. ಚಲಿಸುವ ಪ್ರಾಣಿಗಳಿಗೆ ಮರಗಳೇ ಅನ್ನ ಎಂದೆಲ್ಲಾ ಚಂದ್ರನು ವಿವರಿಸಿದ.

ಪ್ರಕೃತಿಯ ರಕ್ಷಣೆ ಬಗ್ಗೆ ಕಳಕಳಿ ಇಂದಿನವರಿಗೆ ಮಾತ್ರ ಇರುವುದಲ್ಲ ಸೃಷ್ಟಿಯ ಆರಂಭದಲ್ಲಿಯೇ ಪ್ರಕೃತಿಯ ರಕ್ಷಣೆ ಬಗ್ಗೆ, ಪ್ರಯೋಜನದ ಬಗ್ಗೆ, ಆಸಕ್ತಿಯನ್ನು ಮಹತ್ವಜ್ಞಾನವನ್ನು ಬೆಳೆಸಿದ್ದಾರೆ.

ಮರಗಳನ್ನು ಮಕ್ಕಳಂತೆ ಕಾಣಬೇಕು! ಪ್ರಕೃತಿಯು ಭಗವಂತನ ಪ್ರತೀಕವೆಂದರಿತು ಅವುಗಳನ್ನು ರಕ್ಷಿಸಬೇಕೆನ್ನುತ್ತದೆ ಶ್ರೀಮದ್ಭಾಗವತ.

**ಅಂತರ್ದೇಹೇಷು ಭೂತಾನಾಂ ಆತ್ಮಾಸ್ತೇ ಹರಿರೀಶ್ವರಃ ।**
**ಸರ್ವಂ ತದ್ಧಿಷ್ಣ್ಯಮೀಕ್ಷಧ್ವಂ ಏವಂ ವಸ್ತೋಷಿತೋ ಹ್ಯಸೌ ॥** — (೬-೪-೧೩)

ಎಂದು. "ಎಲ್ಲರೊಳಗೆ ಸಚ್ಚಿದಾನಂದ ವಿಗ್ರಹನಾದ ಭಗವಂತನಿರುವಂತೆ, ಪ್ರತಿಮೆಗಳ ಒಳಗಿನ ಹರಿಯಂತೆ ಸಕಲ ಸಸ್ಯರಾಶಿಗಳ ಒಳಗೂ ಭಗವಂತನಿದ್ದಾನೆ. ಆದ್ದರಿಂದ ಸಸ್ಯಗಳ ಸಂಹಾರವೆಂದರೆ ನಿಮ್ಮ ರಕ್ಷಕನಾದ ಭಗವಂತನ ಸಂಹಾರವಾದಂತೆ. ಇಂತಹ ದ್ರೋಹಕಾರ್ಯದಿಂದ ದೂರವಿರಬಯಸುವುದಾದರೆ ಪ್ರಕೃತಿಯನ್ನು ಪೂಜಿಸಿರಿ!!" ಎಂದು ಈ ಉತ್ತಮ ಸಂದೇಶವನ್ನು ವೇದಫಲದ ರಸವೆಂದು ಸ್ವೀಕರಿಸಬೇಕು. ಅದು ತಿಳಿಸಿದಂತೆ ನಡೆಯಬೇಕು.

ನಾವೆಲ್ಲರೂ ಮರಗಿಡಗಳನ್ನು ನೆಡಬೇಕು. ಮಕ್ಕಳಂತೆ ಬೆಳೆಸಬೇಕು ಉತ್ತಮ ವಾತಾವರಣ, ಸಸ್ಯಸಮೃದ್ಧಿ, ಔಷಧಿಸಮೃದ್ಧಿಗಳನ್ನು ಈ ಮೂಲಕ ಹೊಂದ ಬೇಕೆಂಬುದೇ ಭಾಗವತದ ಕಳಕಳಿ.

## ಪರಮಮಿತ್ರನಾದವ ಭಗವಂತನೇ ಸತ್ಯ

ಪ್ರಚೇತಸರ ಮಡದಿಯಾದ ಮಾರಿಷೆಯಲ್ಲಿ ಬ್ರಹ್ಮದೇವರ ಮಗನಾದ ದಕ್ಷ ಪ್ರಜಾಪತಿಯು ಪುನಃ ಹುಟ್ಟಿದನು. ಸೃಷ್ಟಿಗಾಗಿಯೇ ಸೃಷ್ಟನಾದ ದಕ್ಷನು ವಿಂಧ್ಯ ಪರ್ವತದ ಪ್ರಾಂತ್ಯಕ್ಕೆ ತಪಸ್ಸಿಗಾಗಿ ತೆರಳಿ ಜಗದಾಧಾರನಾದ ಭಗವಂತನನ್ನು ಬಗೆಬಗೆಯಾಗಿ ಸ್ತೋತ್ರಮಾಡುತ್ತಾನೆ.

**ನ ಯಸ್ಯ ಸಖ್ಯಂ ಪುರುಷೋ ವೇತ್ತಿ ಸಖ್ಯುಃ**
**ಸಖಾ ವಸನ್ ಸಂವಸತಃ ಪುರೇಽಸ್ಮಿನ್ ।**
**ಗುಣೋ ಯಥಾ ಗುಣಿನೋಽವ್ಯಕ್ತದೃಷ್ಟೇಃ**
**ತಸ್ಮೈ ಮಹೇಶಾಯ ನಮಸ್ಕರೋಮಿ ॥** — (೬-೪-೨೪)

ಜೀವಾತ್ಮರಿಗೆಲ್ಲ ಭಗವಂತನು ಪರಮಮಿತ್ರನೆನಿಸಿದ್ದಾನೆ. ಎಂದಿನಿಂದ ನಮ್ಮ ಅಸ್ತಿತ್ವವಿದೆಯೋ ಅಂದಿನಿಂದಲೂ ನಮ್ಮೊಟ್ಟಿಗೇ ಇದ್ದಾನೆ. ನಮ್ಮ ಸಕಲ ಚೇಷ್ಟೆ ಗಳನ್ನು ಪ್ರವರ್ತಿಸುವವ ಹೃಷೀಕೇಶನೇ ಎನ್ನುವುದನ್ನು ತಿಳಿಯುವುದೇ ಇಲ್ಲ. ಇಂಗಿತಜ್ಞನಲ್ಲದ ಭೃತ್ಯನು ರಾಜನ ಸ್ನೇಹವನ್ನು ತಿಳಿಯದಿರುವಂತೆ ರಾಜಾಧಿ ರಾಜನಾದ ಭಗವಂತನ ಮೈತ್ರಿಯನ್ನು ಅಧಮನಾದ ಜೀವ ತಿಳಿಯಲಾರ ಸರ್ವ ಪ್ರಾಣಿಹೃದಿಸ್ಥನಾದ ಸರ್ವೋತ್ತಮನಾದ ಭಗವಂತನಿಗೆ ನನ್ನ ನಮನವು ಎನ್ನುತ್ತಾನೆ.

ಪ್ರತಿಕ್ಷಣವೂ ನಮ್ಮನ್ನು ಸಲಹುತ್ತಿರುವ ನಮ್ಮ ಸಹಚರನಾದ ಭಗವಂತನ ಉಪಕಾರವನ್ನು ಮರೆತು ಕೃತಘ್ನರಂತೆ ವರ್ತಿಸಬಾರದು ದೇಹವೆಂಬ ನಗರಿಯಲ್ಲಿ ನೆಲೆಸಿ ಸಕಲವಿಧವಾಗಿಯೂ ಪೋಷಿಸುತ್ತಿರುವ ಹರಿಯನ್ನು ಮರೆತು ಮೂಢಾತ್ಮರಂತೆ ಮದಭರಿತರಾಗಿ ಮೆರೆಯಬಾರದು.

ನಿರಂತರವೂ ಭಗವಂತನನ್ನು ಭಗವಂತನ ಉಪಕಾರಗಳನ್ನು ಸ್ಮರಿಸುವ ಮಹಾನುಭಾವರೆಂದರೆ ಶ್ರೀಮದಾಚಾರ್ಯರು. ಮಧ್ವಾಚಾರ್ಯರು ತಮ್ಮ ಎಳವೆಯಲ್ಲಿ ವಾಸುದೇವನಾಗಿದ್ದಾಗ ಪಾಜಕಕ್ಷೇತ್ರದಿಂದ ಏಕಾಕಿಯಾಗಿ ಯಾವುದೇ ವಾಹನ ಸೌಲಭ್ಯವಿಲ್ಲದೆ ಕಾಡಿನ ಅಸ್ತವ್ಯಸ್ತ ರಸ್ತೆಗಳಲ್ಲಿ ನಡೆಯುತ್ತಾ ಕೊಡವೂರು ಬನ್ನಂಜೆ ಉಡುಪಿಯ ದೇವಾಲಯಗಳಿಗೆ ಬಂದರು.

ಮಧ್ಯಗೇಹ ಭಟ್ಟರು ಪುಟ್ಟ ಬಾಲಕನನ್ನು ಮುಂಜಾವದಿಂದ ಕಾಣದೆ ಕಂಗಾಲಾದರು. ಎಲ್ಲೆಡೆಯೂ ಮಗನನ್ನರಸುತ್ತಾ ಉಡುಪಿಯ ಅನಂತೇಶ್ವರಕ್ಕೆ ಬಂದಾಗ ವಾಸುದೇವ ದೇವನಿಗೆ ಕೈಮುಗಿದು ನಿಂತಿದ್ದ. ಆಶ್ಚರ್ಯಚಕಿತರಾದ ಮಧ್ಯಗೇಹ ಭಟ್ಟರು ಒಬ್ಬನೇ ಹೇಗೆ ಬಂದೆ ಮಗು? ಎಂದು ಪ್ರಶ್ನಿಸಲು ಆ ವಾಸುದೇವ ಬಹಳ ಅರ್ಥವತ್ತಾಗಿ ಉತ್ತರಿಸಿದ. "ತಂದೆಯೇ ನಾನು ಬರುವಾಗ ಎಲ್ಲೆಡೆಯೂ ಒಬ್ಬ ನನ್ನ ಮಿತ್ರ ಇದ್ದ. ಭಗವಂತನೇ ಮಿತ್ರನಾಗಿ ಬಂದಿದ್ದ. ಆದ್ದರಿಂದ ನಾನು ಹೆದರಲಿಲ್ಲ" ಎಂದ. ಎಲ್ಲೆಡೆಯೂ ಭಗವಂತನಿದ್ದಾನೆಂಬ ಎಚ್ಚರ ಮಧ್ವಾಚಾರ್ಯರಿಗೆ ಯಾವಾಗಲೂ ಇತ್ತು. ಉತ್ತಮ ಜ್ಞಾನಿಗಳೆಲ್ಲರ ಚಿಂತನೆಯೂ ಹೀಗೆಯೇ ಇರುತ್ತದೆ.

ದೇಹ ಇಂದ್ರಿಯ ಮನಸ್ಸು ಎಲ್ಲವನ್ನೂ ಕೊಟ್ಟು ನಿರಂತರ ಉಪಕರಿಸುತ್ತಿರುವ ಭಗವಂತನನ್ನು ನಾವು ಮರೆಯುವಂತಿಲ್ಲ. ಎಚ್ಚರದಲ್ಲಿದ್ದಾಗ ನಾವು ಮಾಡಿದೆವು ಎಂದು ಬೀಗಿದರೂ ಸ್ವಪ್ನ ಸುಷುಪ್ತಿಗಳ ವಿಷಯದಲ್ಲಿ ನಾವು ಸೋಲಲೇಬೇಕಾಗುತ್ತದೆ. ಸುಷುಪ್ತಿ ನಿದ್ರೆಗಳಿಂದ ಭಗವಂತನ ನಿರಂತರ ಉಪಕಾರವನ್ನು ಗುರುತಿಸಬಹುದು. ನಮ್ಮಿಂದ ಸಾಧ್ಯವಾಗದ ಸ್ವಪ್ನವನ್ನು ಸೃಷ್ಟಿಸಿ ನೂರಾರು ದೃಶ್ಯಗಳನ್ನು ತೋರಿಸುತ್ತಾನೆ. ನಿದ್ರೆಯಲ್ಲಿ ಮೂಡುವ ಸ್ವಪ್ನವೆಂಬ ದೂರದರ್ಶನವನ್ನು ಹಚ್ಚುವವರೂ ನಾವಲ್ಲ. ಆರಿಸುವವರೂ ನಾವಲ್ಲ. ಸ್ವಪ್ನದಿಂದ ಎಚ್ಚರಗೊಳ್ಳುವವರೂ ನಾವಲ್ಲ. ಯಾರಿಂದ ನಿದ್ರಿಸುತ್ತೇವೆಯೋ ಆ ಭಗವಂತನಿಂದಲೇ ಎಚ್ಚರಗೊಳ್ಳುತ್ತೇವೆ ಎನ್ನುತ್ತದೆ –'ಓಂ ಅತಃ ಪ್ರಬೋಧೋಽಸ್ಮಾತ್' (೩–೨–೮) ಎಂಬ ಬ್ರಹ್ಮಸೂತ್ರ. ಹೀಗೆ ಎಲ್ಲ ಕಾಲಗಳಲ್ಲಿಯೂ ಎಲ್ಲರನ್ನೂ ನಿಯಮನ ಮಾಡುವ ಭಗವಂತನನ್ನು ಜ್ಞಾನಿಗಳು ಹೃದಯಕಮಲದಲ್ಲಿ ಧ್ಯಾನಿಸುತ್ತಾರೆ. ಭಗವಂತನು ಅರಣಿಯೊಳಡಗಿರುವ ಅನಲದಂತೆ ಸರ್ವಾಂತರ್ಯಾಮಿಯಾಗಿದ್ದಾನೆ. ಅರಣಿಯಲ್ಲಿ ಬೆಂಕಿ ಇದ್ದರೂ ಕಣ್ಣಿಗೆ ಕಾಣದು. ಮಥನ ಮಾಡಿದಾಗ ಉಜ್ಜ್ವಲವಾದ ಬೆಂಕಿಯು ಪ್ರಕಟವಾಗುವುದು. ಅದರಂತೆ ನಿರಂತರ ನಡೆಯುವ ತತ್ವಮಥನದಿಂದ ನಮ್ಮ ಹೃದಯಕಮಲದಲ್ಲಿಯೂ ಜ್ಯೋತೀರೂಪನಾದ ಭಗವಂತನು ಪ್ರಕಟನಾಗುತ್ತಾನೆ. ಜಗತ್ತೆಂಬ ಅಧಿಷ್ಠಾನದಲ್ಲಿ ಭಗವಂತನಿದ್ದಾನೆಯೇ ಹೊರತು ಪ್ರಪಂಚಕ್ಕಿಂತಲೂ

ಬೇರೆಯಾದ ದೇವರೇ ಇಲ್ಲ ಎನ್ನಬಾರದು ದೇಹದಲ್ಲಿ ಆತ್ಮನಿರುವಂತೆ ಪ್ರಪಂಚವೆಂಬ ದೇಹದಲ್ಲಿ ಪರಮಾತ್ಮನಿದ್ದಾನೆ. ಕಟ್ಟಿಗೆಯಲ್ಲಿಯ ಬೆಂಕಿಯಂತೆ ಅವ್ಯಕ್ತನಾಗಿದ್ದಾನೆ. ವಿಶ್ವರೂಪನಾದ ಹರಿಯು ವಿಶಿಷ್ಟಾನಂತಗುಣಗಳಿಂದಲೂ ನಿರ್ವಿಕಾರನಾಗಿಯೂ ಇದ್ದಾನೆ. ದೋಷದೂರನಾದ, ಚಿನ್ಮಯನಾದ, ಕಲ್ಯಾಣಗುಣನಿಧಿಯಾದ ಭಗವಂತ ನೆಲ್ಲಿ? ದೋಷಪೂರಿತನಾದ ಅಜ್ಞಾನಾದಿಗಳಿಂದ ತುಂಬಿಕೊಂಡ ಜೀವನೆಲ್ಲಿ? ವಿಕಾರವುಳ್ಳ ಜಗತ್ತೆಲ್ಲಿ?! ಇಷ್ಟೆಲ್ಲ ಅರಿವಿನಿಂದ ವಿಶಿಷ್ಟನಾದ ದಕ್ಷನು ಧ್ಯಾನಮಾಡಿದಾಗ ಭಗವಂತನು ಒಲಿದುಬಂದ. ಮನುಕುಲದ ಅಭಿವೃದ್ಧಿಗಾಗಿ ಅಸಿಕ್ನಿ ಎಂಬ ಕನ್ಯೆಯನ್ನು ವಿವಾಹವಾಗು ಎಂದು ತಿಳಿಸಿ ಅಂತರ್ಧಾನನಾದನು.

ಅನಂತರ ದಕ್ಷಪ್ರಜಾಪತಿಯು ಅಸಿಕ್ನಿಯನ್ನು ಮದುವೆಯಾಗಿ ಹತ್ತುಸಾವಿರ ಹರ್ಯಶ್ವರೆಂಬ ಮಕ್ಕಳನ್ನು ಪಡೆದನು. ಅವರೆಲ್ಲರಿಗೂ ಪ್ರಜಾಸೃಷ್ಟಿ ಮಾಡಲು ಆಜ್ಞಾಪಿಸಿದ. ಅದರಂತೆ ಸಮುದ್ರದ ತೀರಕ್ಕೆ ಹರ್ಯಶ್ವರು ತಪಸ್ಸಿಗಾಗಿ ತೆರಳಿದರು. ನಾರಾಯಣಸರಸ್ಸಿನ ಮಂಗಳ ಸಿದ್ಧಭೂಮಿಯಲ್ಲಿ ತಪಸ್ಸನ್ನಾರಂಭಿಸಿದರು.

ತಪಸ್ಸಿಗೆ ಕುಳಿತ ಹರ್ಯಶ್ವರನ್ನು ದೇವರ್ಷಿಗಳಾದ ನಾರದರು ಕಂಡರು. ಅವರ ಬಳಿ ಬಂದರು.

'ಹರ್ಯಶ್ವರೇ, ಇದೇನಿದು? ಜ್ಞಾನವಿಲ್ಲದೆ ತಪಸ್ಸಿಗೆ ಕುಳಿತಿರುವಿರಲ್ಲಾ? ಯಾವ ಹತ್ತನ್ನು ತಿಳಿದಾಗ ಭಗವಂತ ಹತ್ತಿರವಾಗುತ್ತಾನೆಯೋ ಅವುಗಳನ್ನು ನೀವು ತಿಳಿದಿದ್ದಿರಾ?' ಎಂದು ಪ್ರಶ್ನಿಸಿದರು.

ಅದೃಷ್ಟ್ವಾಂತಂ ಭುವೋ ಯೂಯಂ ಬಾಲಿಶಾ ಬತ ಪಾಲಕಾಃ ।
ತಥೈಕಪುರುಷಂ ರಾಜ್ಯಂ ಬಿಲಂ ಚಾದೃಷ್ಟನಿರ್ಗಮಮ್ ।
ಬಹುರೂಪಾಂ ಸ್ತ್ರಿಯಂ ಚಾಪಿ ಪುಮಾಂಸಂ ಪುಂಶ್ಚಲೀಪತಿಮ್ ॥ ೭ ॥

ನದೀಮುಭಯತೋವಾಹಾಂ ಪಂಚಪಂಚಾದ್ಭುತಂ ಗೃಹಮ್ ।
ಕ್ವಚಿದ್ಧಂಸಂ ಚಿತ್ರಕಥಂ ಕ್ಷುರಾಂತಂ ಚ ಸ್ವಯಂ ಭ್ರಮಿಮ್ ॥ ೮ ॥

ಕಥಂ ಸ್ವಪಿತುರಾದೇಶಮವಿದ್ವಾಂಸೋ ವಿಪಶ್ಚಿತಃ ।
ಅನುರೂಪಮವಿಜ್ಞಾಯ ಅಹೋ ಸರ್ಗಂ ಕರಿಷ್ಯಥ ॥ — (೬-೫-೯)

೧) ಭೂಮಿಯ ಕೊನೆ ಯಾವುದು?
೨) ಒಬ್ಬನೇ ಪುರುಷನುಳ್ಳ ರಾಜ್ಯ ಯಾವುದು?
೩) ಒಳ ಹೊಕ್ಕರೆ ಹೊರಗೆ ಬರಲಾಗದ ಬಿಲ ಯಾವುದು?
೪) ವ್ಯಭಿಚಾರಿಣಿಯಾದ ಸ್ತ್ರೀ ಯಾರು?
೫) ಅವಳ ಗಂಡ ಯಾರು?
೬) ಎರಡೂ ಕಡೆ ಹರಿವ ನದಿ ಯಾವುದು?
೭) ಇಪ್ಪತ್ತೈದು ಅದ್ಭುತವುಳ್ಳ ಮನೆ ಯಾವುದು?
೮) ವಿಚಿತ್ರಕಥೆ ಹೇಳುವ ಹಂಸ ಯಾವುದು?
೯) ತೀಕ್ಷ್ಣವಾದ ತಿರುಗುವ ಚಕ್ರ ಯಾವುದು?

೧೦) ತಂದೆಯ ಆದೇಶ ಯಾವುದು?

–ಎಂದು ನಾರದರು ಪ್ರಶ್ನಿಸಿದರು.

ಹರ್ಯಶ್ವರಿಗೆ ಏನೂ ಅರ್ಥವಾಗಲಿಲ್ಲ. ಮೇಲೆ ಕೆಳಗೆ ನೋಡಿದರು ನಮಗಾದರೂ ಎಲ್ಲಿ ಅರ್ಥವಾಗಿದೆ? ಏನು ಈ ಒಗಟಿನ ಅರ್ಥ?

* ಭೂಮಿಯ ಕೊನೆಯೆಂದರೆ ಅನಾದಿಕಾಲದಿಂದ ಜೀವನಿಗೆ ಅಂಟಿಕೊಂಡ ಲಿಂಗ ಶರೀರ. ಮೊಟ್ಟೆ ಒಡೆದು ಹಕ್ಕಿ ಹಾರುವಂತೆ, ಲಿಂಗಶರೀರವೆಂಬ ಮೊಟ್ಟೆಯೊಡೆದು ಜೀವಾತ್ಮನೆಂಬ ಪಕ್ಷಿ ಹೊರಗೆ ಹಾರಬೇಕು. ಅದೇ ಮೋಕ್ಷ.

ಈ ಅನಾದಿಕಾಲದಿಂದ ಮುಚ್ಚಿದ ಲಿಂಗಶರೀರದ ಕೊನೆಯು ಹೇಗಾಗುತ್ತದೆ ಎಂದು ನೀವು ಅರಿತಿದ್ದೀರೋ? ಇದನ್ನರಿಯದೆ ಸಾಧನೆ ಮಾಡಲು ಸಾಧ್ಯವಿಲ್ಲ. ನಾವು ಬಿಡುಗಡೆಯನ್ನು ಪಡೆಯಬೇಕಾದರೆ ಪ್ರತಿಬಂಧಕ ಯಾವುದು? ಎಂಬ ಜ್ಞಾನ ಬೇಕು. ಪ್ರತಿಬಂಧಕ ಸಾಮಗ್ರಿಯನ್ನೇ ತಿಳಿಯದೇ ಪರಿಹಾರಮಾರ್ಗ ಹುಡುಕುವುದೆಂತು?

* ರಾಜ್ಯಕ್ಕೊಬ್ಬನೇ ಪುರುಷ! ಮೋಕ್ಷಕ್ಕೆ ಈ ಜ್ಞಾನವೂ ಅಗತ್ಯವಾದದ್ದು. 'ಏಕಮೇವಾದ್ವಿತೀಯಂ ಬ್ರಹ್ಮ' ರಾಷ್ಟ್ರದ ಪುರುಷ ಭಗವಂತನೊಬ್ಬನೇ. ಉಳಿದವರೆಲ್ಲರೂ ಇದ್ದರೂ ಇಲ್ಲದಂತೆ. ಅಸ್ವತಂತ್ರವರ್ಗವನ್ನೆಲ್ಲಾ ಸ್ವತಂತ್ರನಾದ ಭಗವಂತನೇ ರಕ್ಷಿಸುತ್ತಿದ್ದಾನೆ ಎಂಬ ಜ್ಞಾನ ಬೇಕು.

* ಒಳ ಸೇರಿಸಿದರೆ ಮತ್ತೆ ಹೊರಬಾರದಿರುವ ಬಿಲವೆಂದರೆ ಭಗವಂತ ಮತ್ತು ಮೋಕ್ಷ. ಭಗವಂತನ ಪಾದಕಮಲ ಹೊಂದಿದವರು ವೈಕುಂಠವನ್ನು ಸೇರಿದವರು ಎಂದೂ ಸಂಸಾರಕ್ಕೆ ಮರಳಿ ಬರುವುದಿಲ್ಲ

* ವ್ಯಭಿಚಾರಿಣೀ ಸ್ತ್ರೀ ಎಂದರೆ ನಮ್ಮ ಬುದ್ಧಿ. ಎಲ್ಲ ವಿಷಯಗಳ ಕಡೆಯೂ ನಮ್ಮ ಬುದ್ಧಿ ಚಲಿಸುತ್ತದೆ. ದಿನಕ್ಕೊಂದು ಕಡೆ ಚಲಿಸುವ ವೇಶ್ಯಾಸ್ತ್ರೀಯಂತಿದೆ ನಮ್ಮ ಬುದ್ಧಿ. ಆತ್ಮಹಿತ ಕಾರಣವಾದ ಕರ್ತವ್ಯಗಳೇನು? ಎಂದರಿತು ಅವುಗಳ ಕಡೆ ಮಾತ್ರ ಬುದ್ಧಿ ಚಲಿಸುವಂತಾಗಬೇಕು. ಬುದ್ಧಿಯ ನಿಯಂತ್ರಣ ಅಗತ್ಯ.

* ಬುದ್ಧಿ ಎಂಬ ಹೆಣ್ಣಿನ ಗಂಡಂದಿರು ನಾವುಗಳೇ. ಸ್ವೈರಿಣಿಯಾದ ಬುದ್ಧಿಯ ಕೈಹಿಡಿದರೆ ಭಗವಂತನೆಂಬ ಸುಪುತ್ರ ಹೃದಯದಲ್ಲಿ ಹುಟ್ಟನು. ಅವನು ಹೃದಯಕ್ಕೆ ಬಾರದೆ ಮೋಕ್ಷವನ್ನು ಪಡೆಯುವುದಾದರೂ ಹೇಗೆ? ಈ ಜ್ಞಾನ ನಮಗಿಲ್ಲ.

* ಎರಡು ಕಡೆಯಿಂದ ಹರಿವ ನದಿಯೇ ಈ ಸಂಸಾರ. ಹುಟ್ಟು ಸಾವುಗಳೆಂಬ ನದಿಗಳು ನಮ್ಮನ್ನು ಆಚೆ ಈಚೆ ತೆರೆಗಳಂತೆ ಅಪ್ಪಳಿಸುತ್ತಿವೆ. ಗಂಗಾ ನದಿಯಲ್ಲಿ ಹಾರಿದವ ಮರಳಿ ಬರುವುದಿಲ್ಲ. ಆದರೆ ಹುಟ್ಟುಸಾವುಗಳೆಂಬ ನದಿಗಳು ಜೀವನನ್ನು ನಿರಂತರ ಇಲ್ಲಿಯೇ ತಿರುಗಿಸುತ್ತವೆ. ಇದನ್ನರಿಯಬೇಕು.

* ಪ್ರಪಂಚವೇ ಇಪ್ಪತ್ತೈದು ತತ್ವಗಳ ಮನೆ. ಮಹತ್ತತ್ವ, ಅಹಂಕಾರತತ್ವ, ಬುದ್ಧಿ, ಮನಸ್ಸು, ಪಂಚ ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಪಂಚ

ತನ್ಮಾತ್ರೆಗಳು, ಪಂಚಭೂತಗಳು, ಭಗವಂತ –ಹೀಗೆ ಇಪ್ಪತ್ತೈದು ತತ್ವಗಳುಳ್ಳ ಮನೆ ಪ್ರಪಂಚ.

* ಕಥೆ ಹೇಳುವ ಹಂಸ ಎಂದರೆ ಭಾಗವತ, ಭಾರತ ಮುಂತಾದ ಗ್ರಂಥಗಳು. ನಮಗೆ ಹಂಸಗಳು ಹಾಲು ನೀರಿನ ವ್ಯತ್ಯಾಸ ತಿಳಿಯದಿದ್ದಾಗ ಸ್ಪಷ್ಟವಾಗಿ ಭೇದಜ್ಞಾನವನ್ನು ತಂದುಕೊಡುತ್ತವೆ. ಅದರಂತೆಯೇ ಭಗವಂತನ ಸರಿಯಾದ ಪರಿಚಯವನ್ನು ಮಾಡಿಸುವ ನಾನಾ ಬಗೆಯ ಕಥೆಗಳಿಂದ ಬೆಸೆದುಕೊಂಡ ಗ್ರಂಥಗಳೇ ಹಂಸಗಳೆನಿಸಿವೆ ಇವುಗಳ ಜ್ಞಾನ ಬೇಕು.
* ತೀಕ್ಷ್ಣವಾದ ತಿರುಗುವ ಚಕ್ರ ಎಂದರೆ ಕಾಲಚಕ್ರ. ಕಾಲಚಕ್ರದ ಸುಳಿಯಲ್ಲಿ ನಾವೆಲ್ಲರೂ ಸಿಕ್ಕಿಬಿದ್ದಿದ್ದೇವೆ. ಇದರ ಅರಿವು ಬೇಕು.
* ತಂದೆಯ ಆದೇಶ ಯಾವುದು? ತಂದೆ ಎಂದರೆ ಭಗವಂತ. ಅವನ ಆದೇಶಗಳೇ ಶಾಸ್ತ್ರಗಳು.

ಶ್ರುತಿ ಸ್ಮೃತೀ ಹರೇರಾಜ್ಞೇ ಯ ಉಲ್ಲಂಘ್ಯ ಪ್ರವರ್ತತೇ ।
ಆಜ್ಞಾಛೇದೀ ಮಮ ದ್ವೇಷೀ ಮದ್ಭಕ್ತೋಽಪಿ ನ ವೈಷ್ಣವಃ ॥

ಶಾಸ್ತ್ರೋಕ್ತ ಆಚಾರ–ವಿಚಾರಗಳನ್ನು ಮೀರಿದವ ಭಗವಂತನ ದ್ವೇಷಿಯಾಗುತ್ತಾನೆ.

ಇದನ್ನೇ ದಾಸರಾಯರು ಬೇರೆ ರೀತಿ ಹೇಳಿದರು.

"ಕಾಗದ ಬಂದಿದೆ ನಮ್ಮ ಕಮಲನಾಭನದು
ಕಾಗದವನ್ನು ಓದಿಕೊಂಡು ಕಾಲಕಳೆಯಿರೋ" ಎಂದು.

ಈ ಹತ್ತು ತತ್ವಗಳನ್ನು ಸರಿಯಾಗಿ ಅರಿತಾಗಲೇ ಒಂಭತ್ತು ದ್ವಾರದ ಈ ಅನಿತ್ಯಶರೀರದಿಂದ ನಿತ್ಯವಾಗಿ ಬಿಡುಗಡೆಯನ್ನು ಹೊಂದುತ್ತಾನೆ.

ಇದ್ಯಾವುದನ್ನೂ ಅರಿಯದೇ ತಪಸ್ಸಿಗೆ ಕುಳಿತಿರುವುದು ಸೋಜಿಗದ ಸಂಗತಿ ಎನ್ನುತ್ತಾರೆ ನಾರದರು. ನಾರದರ ಉಪದೇಶದಿಂದ ಹರ್ಯಶ್ವರು ಸಾಧನೆಯ ಮೆಟ್ಟಿಲನ್ನೇರಿದರು.

ನಾರದರ ಎಚ್ಚರ, ನಮ್ಮೆಲ್ಲರಿಗೂ ಅನ್ವಯವಾಗಬೇಕು!

ಹತ್ತುಸಾವಿರ ಹರ್ಯಶ್ವರೂ ಸನ್ಯಾಸಿಗಳಾಗಲು ದಕ್ಷನ ಉದ್ದೇಶ ಈಡೇರಲಿಲ್ಲ. ಪುನಃ ಅಸಿಕ್ನಿಯಲ್ಲಿ ಶಬಲಾಶ್ವರೆಂಬ ಸಾವಿರ ಮಕ್ಕಳನ್ನು ಪಡೆದು ಸೃಷ್ಟಿಕಾರ್ಯ ಮುಂದುವರಿಸಿರೆಂದು ಆದೇಶಿಸಿದ. ತಂದೆಯ ಆಜ್ಞೆಯಂತೆ ಇವರೂ ತಪಸ್ಸನ್ನಾಚರಿಸಲು ಉದ್ಯುಕ್ತರಾದರು. ನಾರದರು ಪುನಃ ಬಂದರು. ಅವರಿಗೂ ವೈರಾಗ್ಯವನ್ನುಪದೇಶಿಸಿ ಹೊರಟರು. ಶಬಲಾಶ್ವರೂ ಹರ್ಯಶ್ವರಂತೆ ವಿರಕ್ತ ಸನ್ಯಾಸಿಗಳಾಗಿ ಹೊರಟುಹೋದರು. ನಾರದರು ತನ್ನ ಉದ್ದೇಶಕ್ಕೆ ಅಡ್ಡಿಯಾಗಿದ್ದಾರೆಂಬ ಸುದ್ದಿ ದಕ್ಷನ ಕಿವಿಮುಟ್ಟಿತು. ಸಿಟ್ಟಿನಿಂದ ತುಟಿ ಬಿಚ್ಚಿದ. ವಾಗ್‌ದಂಡದಿಂದ ಚೆನ್ನಾಗಿ ಹಳಿದ. ದೇವಋಷಿ–ಪಿತೃಋಷಿಗಳನ್ನು ಪೂರೈಸದ ನನ್ನ ಮಕ್ಕಳಿಗೆ ಹಿತವಾದದ್ದೇನು ಎಂದು ವಿಚಾರಮಾಡದೆ ತಪ್ಪಿತಸ್ಥರನ್ನಾಗಿ ಮಾಡಿರುವೆ. ವಿಷಯಪದಾರ್ಥಗಳನ್ನು ಅನುಭವಿ

ಸದೆ ಅವುಗಳಲ್ಲಿ ದೋಷಗಳನ್ನು ಗುರುತಿಸಲಾಗದು 'ನಾನುಭೂಯ ನ ಜಾನಾತಿ ಪುಮಾನ್ ವಿಷಯತೀಕ್ಷ್ಣತಾಮ್' ಎನ್ನುತ್ತಾನೆ. ನನ್ನ ಮಕ್ಕಳನ್ನು ವಂಚಿಸಿದ್ದರಿಂದ ನೀನು ಪರಿವ್ರಾಜಕನಾಗು! ಎಂದು ಶಪಿಸಿದನು. ನಾರದರಿಗೆ ಅದು ವರವಾಯಿತು. ಭಗವದ್ಭಕ್ತಿಯ ಪ್ರಚಾರಕಾರ್ಯವನ್ನು ವ್ಯಾಪಕವಾಗಿ ಮಾಡಲು ಅನುಕೂಲವೆಂದೇ ಭಾವಿಸಿದರು.

ಮುಂದೆ ಸಿಟ್ಟುಗೊಂಡಿರುವ ದಕ್ಷನನ್ನು ಬ್ರಹ್ಮದೇವರು ಸಮಾಧಾನಪಡಿಸಿದರು. ದಕ್ಷನು ಪುನಃ ಅಸಿಕ್ನಿಯಲ್ಲಿ ಅರುವತ್ತು ಮಂದಿ ಹೆಣ್ಣುಮಕ್ಕಳನ್ನು ಪಡೆದನು. ಅವರನ್ನು ಯಮ, ಕಶ್ಯಪ, ಚಂದ್ರ, ಕೃಶಾಶ್ವ ಮುಂತಾದವರಿಗೆ ವಿವಾಹಮಾಡಿ ಕೊಟ್ಟನು. ಕಶ್ಯಪರಿಗೆ ಅದಿತಿಯೆಂಬ ಪತ್ನಿಯಲ್ಲಿ ದ್ವಾದಶಾದಿತ್ಯರು ಜನಿಸಿದರು ಅವರಲ್ಲಿ ತ್ವಷ್ಟೃ ಎಂಬ ಆದಿತ್ಯನಿಂದ ರೋಚನ ಎಂಬ ಪತ್ನಿಯಲ್ಲಿ ಸನ್ನಿವೇಶ– ವಿಶ್ವರೂಪ ಎಂಬ ಈರ್ವರು ಮಕ್ಕಳು ಜನಿಸಿದರು. ಒಮ್ಮೆ ದೇವಗುರು ಬೃಹಸ್ಪತ್ಯಾಚಾರ್ಯರು ದೇವೇಂದ್ರನಲ್ಲಿ ಅಸಮಾಧಾನಗೊಂಡು ತೆರಳಲು ದೇವೇಂದ್ರನು ವಿಶ್ವರೂಪಾಚಾರ್ಯರನ್ನೇ ಗುರುವನ್ನಾಗಿ ಸ್ವೀಕರಿಸಿದ.

ಒಮ್ಮೆ ದೇವೇಂದ್ರನು ಶಚೀ ಸಮೇತನಾಗಿ ಸಭಾಮಂಟಪದಲ್ಲಿ ಮಂಡಿಸಿರಲು ಅಲ್ಲಿಗೆ ಬೃಹಸ್ಪತ್ಯಾಚಾರ್ಯರು ಬಂದರು. ದೇವೇಂದ್ರನು ಎದ್ದು ಅವರನ್ನು ಗೌರವಿಸಲಿಲ್ಲ ಇಂದ್ರನಿಗೆ ಅಹಂಕಾರ ಬಂದಿದೆ ಎಂದು ಸಿಟ್ಟಿನಿಂದ ಹಾಗೆಯೇ ಹಿಂತಿರುಗಿದರು. ಬೃಹಸ್ಪತ್ಯಾಚಾರ್ಯರು ಯೋಗ್ಯತೆಯಲ್ಲಿ ದೇವೇಂದ್ರನಿಗಿಂತಲೂ ಕಡಿಮೆಯಾಗಿದ್ದರೂ ಗುರುಗಳೆಂದು ಮರ್ಯಾದೆ ನೀಡಬೇಕಿತ್ತು. ಅನಂತರ ಇಂದ್ರನು ಪಶ್ಚಾತ್ತಾಪ ಬುದ್ಧಿಯಿಂದ ಕ್ಷಮೆಯಾಚಿಸಲು ಬೃಹಸ್ಪತ್ಯಾಚಾರ್ಯರ ಬಳಿ ಸಾಗಿದ. ಆದರೆ ಬೃಹಸ್ಪತ್ಯಾಚಾರ್ಯರು ಇಂದ್ರನನ್ನು ನೋಡಬಯಸದೆ ಯೋಗಸಾಮರ್ಥ್ಯದಿಂದ ಅದೃಶ್ಯರಾದರು.

ಇತ್ತ ದೇವಗುರುವಿನ ಅವಗ್ರಹವನ್ನರಿತ ದೈತ್ಯರು ದೇವತೆಗಳ ಮೇಲೆ ದಂಡೆತ್ತಿ ಬಂದರು. ಗುರುವಿನ ಅನುಗ್ರಹವಿಲ್ಲದೆ ದೇವತೆಗಳು ಸೋತರು. ದೇವೇಂದ್ರ ಚಿಂತಾಕ್ರಾಂತನಾಗಿ ಬ್ರಹ್ಮದೇವರ ಬಳಿ ಸಾಗಿದ. ಬ್ರಹ್ಮದೇವರು ಇಂದ್ರನಿಗೆ ಬ್ರಾಹ್ಮಣರನ್ನು ಅವಮಾನಿಸಬೇಡ. ಅಮಂಗಲವಾದೀತೆಂದು ಎಚ್ಚರಿಸಿ ವಿಶ್ವರೂಪನನ್ನು ಗುರುವನ್ನಾಗಿ ಸ್ವೀಕರಿಸಿರಿ! ಎಂದರು.

ಬ್ರಹ್ಮದೇವರ ಮಾತಿನಂತೆ ದೇವತೆಗಳು ವಿಶ್ವರೂಪಾಚಾರ್ಯರ ಬಳಿಗೆ ತೆರಳಿ ಗುರುತ್ವವನ್ನು ಸ್ವೀಕರಿಸಿರೆಂದು ಪ್ರಾರ್ಥಿಸಿದರು. ವಿಶ್ವರೂಪಾಚಾರ್ಯರು ಮೊದಲು ಬೇಡವೆಂದರೂ ಮತ್ತೆ ಒಪ್ಪಿದರು. ಇಂದ್ರನಿಗೆ ನಾರಾಯಣ ಕವಚವನ್ನು ಉಪದೇಶಿಸಿದರು. ಆದರ ಬಲದಿಂದ ದೇವೇಂದ್ರನು ದೈತ್ಯರು ದೋಚಿದ ಸಂಪತ್ತನ್ನೆಲ್ಲ ಮರಳಿ ಪಡೆದನು.

ಈ ವಿಶ್ವರೂಪಾಚಾರ್ಯರಿಗೆ ಮೂರು ಮುಖಗಳಿದ್ದವು. ಒಂದು ಮುಖದಿಂದ ಸೋಮರಸ ಕುಡಿಯುತ್ತಿದ್ದರು. ಮತ್ತೊಂದು ಮುಖದಿಂದ ಅನ್ನ ಸ್ವೀಕರಿಸುತ್ತಿದ್ದರು.

ಮೂರನೇ ಮುಖದಿಂದ ಮದ್ಯಪಾನ ಮಾಡುತ್ತಿದ್ದರು. ಜ್ಞಾನಿಯಾಗಿದ್ದರೂ ಈ ದುಶ್ಚಟಕ್ಕೆ ಬಲಿಯಾಗಿದ್ದರು

ವಿಶ್ವರೂಪಾಚಾರ್ಯರಂತೆ ನಮಗೂ ಅನೇಕ ಮುಖಗಳಿವೆ ವಿಶ್ವರೂಪರ ಮೊದಲ ಮುಖದಿಂದ ಸೋಮಪಾನ. ನೋಡುವ ಜನರಿಗೆ ಸೋಮಪಾನ ಮಾಡುವ ಮಹಾನುಭಾವರು ಎಂಬ ಭಾವನೆ; ಆದರೆ ಇನ್ನೊಂದು ಮುಖದಿಂದ ಮದ್ಯವನ್ನು ಸೇವಿಸುತ್ತಿದ್ದರು. ನಾವೂ ಸಹ ಹೊರಗೆ ನೋಡಲು ಸಂಭಾವಿತರಂತೆ ಕಾಣುತ್ತೇವೆ. ಒಳ ಒಳಗೆ ನೂರೆಂಟು ಅವ್ಯವಹಾರಗಳನ್ನು ನಡೆಸುತ್ತೇವೆ. ನಮ್ಮೆಲ್ಲರ ಹೊರಮುಖ ಸುಂದರ ಒಳಮುಖ ಅವ್ಯವಹಾರಗಳ ಕಡಲಿನಂತಿದೆ ವಿಶ್ವರೂಪರಿಗೆ ಮೂರು ಮುಖ; ಮೂರು ವ್ಯಾಪಾರ. ನಮಗೆ ಒಂದೇ ಮುಖ; ನೂರು ವ್ಯಾಪಾರ ನಾವೆಲ್ಲರೂ ಈ ದೃಷ್ಟಿಯಿಂದ ವಿಶ್ವರೂಪರೇ ಆಗಿದ್ದೇವೆ

ಅಸುರಕುಲದ ವಿಶ್ವರೂಪನ ವ್ಯಾಪಾರ ದುರ್ವ್ಯಸನದಲ್ಲಿ ಮಾತ್ರ ಸೀಮಿತ ವಾಗಿರಲಿಲ್ಲ. ಹೊರಗಿನಿಂದ ದೇವತೆಗಳ ಪಕ್ಷವನ್ನು ವಹಿಸಿದ್ದರೆ, ಒಳಗಿನಿಂದ ಒಳಗೆ ಅಸುರರಿಗೆ ಸಹಾಯಮಾಡುತ್ತಿದ್ದ ದೇವತೆಗಳ ಲೋಕದಲ್ಲಿ ಆಸುರೀಶಕ್ತಿಗಳಿಗೆ ಪ್ರಚೋದನೆ ಕೊಡಲಾರಂಭಿಸಿದ

ಇಂದು ನಮ್ಮ ಧಾರ್ಮಿಕ ನೆಲೆಯಾದ ಭಾರತ ದೇಶವಲ್ಲಿಯೂ ಇಂಥಹ ಅಕಾರ್ಯಗಳು ನಡೆಯುತ್ತಿವೆ. ಮೇಲ್ನೋಟಕ್ಕೆ 'ನಮ್ಮ ರಾಷ್ಟ್ರ' ಎಂಬ ಅಭಿಮಾನದ ಮುಖವಾಡವನ್ನು ಧರಿಸಿರುತ್ತೇವೆ. ಒಳಗಿನಿಂದ ಒಳಗೆ ವಿದೇಶಿ ಶಕ್ತಿಗಳಿಗೆ ಆಹ್ವಾನ ನೀಡುತ್ತಿದ್ದೇವೆ. ಅವನ್ನೇ ಬೆಂಬಲಿಸುತ್ತಿದ್ದೇವೆ. ಇದು ಇಂದಿನ ಸಮಸ್ಯೆ ಮಾತ್ರವಲ್ಲ, ಇಂದ್ರನ ರಾಜ್ಯದಲ್ಲಿಯೂ ಈ ಸಮಸ್ಯೆ ಇತ್ತು.

ವಿಶ್ವರೂಪನ ದುರ್ವ್ಯಾಪಾರವನ್ನರಿತ ದೇವೇಂದ್ರ ಅವನ ಮೂರು ತಲೆಗಳನ್ನು ಕತ್ತರಿಸಿದ.

ತದ್ ದೇವಹೇಲನಂ ತಸ್ಯ ಧರ್ಮಾಲೀಕಂ ಸುರೇಶ್ವರಃ ।
ಆಲಕ್ಷ್ಯ ತರಸಾ ಭೀತಃ ತಚ್ಛೀರ್ಷಾಣ್ಯಚ್ಛಿನದ್ ರುಷಾ ॥ — (೬–೯–೪)

ಎನ್ನುತ್ತದೆ ಭಾಗವತ. ತನ್ನ ಗುರುವಾಗಿದ್ದರೂ ಸಮಾಜಘಾತುಕನಾದ ವಿಶ್ವ ರೂಪನ ಕತ್ತನ್ನು ಕತ್ತರಿಸಿದ. ನನಗೆ ಪಾಪಬಂದರೂ ಚಿಂತೆಯಿಲ್ಲ. ದೇವತೆಗಳಿಗೆ, ಸಮಾಜಕ್ಕೆ ಅನ್ಯಾಯವಾಗಬಾರದೆಂಬ ಹಿತಚಿಂತನೆ ಗುರುವಿನ ಸಂಹಾರದಲ್ಲಿ ಅಡಗಿತ್ತು.

ಇದರಂತೆಯೇ ನಮ್ಮ ಜನತೆಯೂ ಅನ್ಯಾಯ ಅಧರ್ಮಗಳ ವಿರುದ್ಧ ಹೋರಾಡ ಬೇಕು. ಅವುಗಳನ್ನು ಹತ್ತಿಕ್ಕಬೇಕು ನಮಗೆ ಸ್ವಲ್ಪ ಘಾಸಿಯಾದರೂ ಚಿಂತೆಯಿಲ್ಲ, ಧರ್ಮಕ್ಕೆ ಅನ್ಯಾಯವಾಗಬಾರದೆಂಬ ಚಿಂತನೆ ಬೇಕು. ಇದಕ್ಕೆ ನಾವೆಲ್ಲರೂ ಇಂದ್ರ ನಿಂದ ಸ್ಫೂರ್ತಿಯನ್ನು ಪಡೆಯಬೇಕು ಎಂಬುದೇ ವಿಶ್ವರೂಪನ ಸಂಹಾರದಲ್ಲಡಗಿದ ಸಂದೇಶ.

ತ್ವಷ್ಟೃವು ಇಂದ್ರನಿಂದ ತನ್ನ ಮಗನಾದ ವಿಶ್ವರೂಪನ ಹತ್ಯೆಯಾಯಿತೆಂಬ ವಾರ್ತೆಯನ್ನು ತಿಳಿದು ಕುಪಿತನಾದನು. ಇಂದ್ರನನ್ನೇ ಸಂಹರಿಸುವ ಮಗನು ಹುಟ್ಟಬೇಕೆಂದು ಯಜ್ಞ ಕೈಗೊಂಡ. 'ಇಂದ್ರನ ಶತ್ರು ಹುಟ್ಟಲಿ' ಎಂದು ಹೇಳಲು ಹೋಗಿ 'ಇಂದ್ರನಿಂದ ಸಾಯಲ್ಪಡುವವ ಹುಟ್ಟಲಿ' ಎಂದು ತಪ್ಪು ನುಡಿದ. ಯಜ್ಞದ ಪ್ರಭಾವದಿಂದ ವೃತ್ರನ ಜನನವಾಯಿತು.

ಕೆಂಪಾದ ಕೂದಲು, ಬಾಣದಂತಹ ರೋಮಗಳು, ಆಕಾಶವನ್ನೇ ನುಂಗುವ ಕರಾಳವದನ. ಇಂತಹ ಭಯಂಕರ ರೂಪದ ವೃತ್ರಾಸುರ ಲೋಕವನ್ನೆಲ್ಲ ವ್ಯಾಪಿಸಿದ. ದೇವತೆಗಳನ್ನು ಹೆದರಿಸಿದ. ಹೆದರಿದ ದೇವತೆಗಳು ಅಸ್ತ್ರಗಳನ್ನು ಎಸೆದರು ಎಲ್ಲ ವನ್ನೂ ನುಂಗಿದ. ಚಿಂತಾಕ್ರಾಂತರಾದ ದೇವತೆಗಳು ಭಗವಂತನನ್ನೇ ಮೊರೆಹೊಕ್ಕರು. ಭಗವಂತನು ವೃತ್ರಹತ್ಯೆಯ ಉಪಾಯವನ್ನು ತಿಳಿಸಿದ. ದಧೀಚಿಗಳು ನಾರಾಯಣ ಕವಚವನ್ನು ನಿರಂತರ ಜಪಿಸಿದ ಕಾರಣ ಅವರ ಮೂಳೆಗಳು ಗಟ್ಟಿಯಾಗಿರುವವು. ಅದರ ಬಲದಿಂದ ವೃತ್ರಾಸುರನನ್ನು ಕೊಲ್ಲಿರಿ! ಎಂದ. ಅದರಂತೆ ದಧೀಚಿಗಳ ಬಳಿಗೆ ದೇವತೆಗಳು ತೆರಳಿದರು. ದಧೀಚಿಗಳ ಬಳಿ ಅವರ ಅಸ್ಥಿಗಳನ್ನು ಯಾಚಿಸಿದರು.

ದಧೀಚಿಗಳು ತಪಸ್ವಿಗಳು. ಅವರ ತಪಸ್ಸು ಲೋಕಹಿತಕ್ಕಾಗಿ, ಅಷ್ಟೇ ಏನು? ಅವರ ದೇಹವೂ ಕೂಡಾ.

ದೇವತೆಗಳಿಗೆ ಅಭಯದಾನ ಮಾಡಿದರು. ದುಷ್ಟ ಸಂಹಾರಕ್ಕಾಗಿ ಮನುಕುಲದ ಉದ್ಧಾರಕ್ಕಾಗಿ, ಪರೋಪಕಾರಕ್ಕಾಗಿ ದೇವತೆಗಳ ಮೇಲಿನ ಕರುಣೆಯಿಂದಲೂ ತಮ್ಮ ದೇಹವನ್ನೇ ತ್ಯಾಗಮಾಡಿದರು. ದಧೀಚಿಗಳ ಎಲುಬಿನಿಂದ ಅದ್ಭುತವಾದ ವಜ್ರಾ ಯುಧವೇ ನಿರ್ಮಾಣಗೊಂಡಿತು. ದಧೀಚಿಗಳು ಹೇಳುತ್ತಾರೆ–

**ಏತಾವಾನವ್ಯಯೋ ಧರ್ಮಃ ಪುಣ್ಯಶ್ಲೋಕೈರುಪಾಸಿತಃ ।**
**ಯೋ ಭೂತಶೋಕಹರ್ಷಾಭ್ಯಾಮಾತ್ಮಾ ಶೋಚತಿ ಹೃಷ್ಯತಿ ॥** — (೬-೧೦-೯)

ಮತ್ತೊಬ್ಬರ ದುಃಖ ತನ್ನದೇ ದುಃಖ. ಮತ್ತೊಬ್ಬರ ಸುಖ ತನ್ನ ಸುಖ. ಹೀಗೆ ತಿಳಿದವನೆ ಧರ್ಮಜ್ಞ. ಶಿಷ್ಟರು ಹೇಳಿದ್ದು ಇದನ್ನೇ. ಆಚರಿಸಿದ್ದೂ ಇದನ್ನೇ. ಇದೇ ಸಾರ್ವಕಾಲಿಕ ಧರ್ಮ.

ಕ್ಷಣಭಂಗುರವಾದ ಬದುಕಿನಲ್ಲಿ ಪರೋಪಕಾರ ಮಾಡಬೇಕು. ಲೋಕಕಲ್ಯಾಣ ಮಾಡಬೇಕೆಂಬ ದೊಡ್ಡ ಸಂದೇಶವನ್ನು ದಧೀಚಿಗಳು ನೀಡಿದರು.

ನಮ್ಮ ಸುಖಕ್ಕಾಗಿ ಬೇಕಾದಷ್ಟು ಬವಣೆ ಪಡುತ್ತೇವೆ. ಇದರಲ್ಲೇನು ಶ್ರೇಯಸ್ಸಿಲ್ಲ. ಮತ್ತೊಬ್ಬರ ಸುಖಕ್ಕಾಗಿ ಶ್ರಮಿಸುವುದೇ ಶ್ರೇಯಸ್ಸಿನ ಗುಟ್ಟು.

ಅನ್ಯರ ಸುಖಕ್ಕಾಗಿ ಪಡುವ ಕಷ್ಟ 'ತಪ' ಎನಿಸುತ್ತದೆ. ನಮ್ಮ ಸುಖಕ್ಕಾಗಿ ಪಡುವ ಕಷ್ಟ 'ತಾಪ'ವಾಗುತ್ತದೆ. ನಮ್ಮ ಸುಖಕ್ಕಾಗಿ ಋಷಿಗಳಿಗಿಂತಲೂ ಹೆಚ್ಚು ಕಷ್ಟ ಪಡುತ್ತೇವೆ. ನಮ್ಮ ಸುಖಕ್ಕಾಗಿ ಪಡುವ ಕಷ್ಟದ ಅರ್ಧದಷ್ಟು ಕಷ್ಟವನ್ನು ಮತ್ತೊಬ್ಬರ

ಉಪಕಾರಕ್ಕಾಗಿ ಪಟ್ಟಲ್ಲಿ ನಿತ್ಯನೂತನ ಸುಖಕ್ಕೆ ಭಾಗಿಯಾಗುತ್ತೇವೆ. ಇದನ್ನರಿಯು ವುದರಲ್ಲಿಯೇ ನಮ್ಮ ಜೀವನದ ರಹಸ್ಯ ಅಡಕವಾಗಿದೆ.

## ಕೆಚ್ಚೆದೆಯ ವೃತ್ರಾಸುರ

ದಧೀಚಿಗಳ ಅಸ್ಥಿಗಳಿಂದ ವಿಶ್ವಕರ್ಮನು ವಜ್ರಾಯುಧವನ್ನು ನಿರ್ಮಿಸಿದ. ದೇವತೆಗಳೆಲ್ಲರೂ ವೃತ್ರಾಸುರನ ವಿರುದ್ಧ ಹೋರಾಡಲು ಸಿದ್ಧರಾದರು. ದೇವತೆಗಳೆಲ್ಲ ಐರಾವತವನ್ನೇರಿದ ಇಂದ್ರನಿಂದ ಕೂಡಿಕೊಂಡು ಅಸುರರ ವಿರುದ್ಧ ಯುದ್ಧವನ್ನಾರಂಭಿಸಿದರು. ವಜ್ರಾಯುಧವನ್ನು ಕಂಡ ನಮುಚಿ ಶಂಬರ ಮುಂತಾದ ದೈತ್ಯರೆಲ್ಲರೂ ಓಡಲಾರಂಭಿಸಿದರು. ದೈತ್ಯರ ಸಾವಿರಾರು ಅಸ್ತ್ರಶಸ್ತ್ರಗಳನ್ನು ಪುಡಿಗುಟ್ಟಿದರು. ದೈತ್ಯರೆಲ್ಲರೂ ಸೋತೆವೆಂದು ಓಡುತ್ತಿರಲು ದೈತ್ಯರ ಒಡೆಯನಾದ ವೃತ್ರಾಸುರನು ಎಲ್ಲರನ್ನೂ ತಡೆದನು. ಸಾವೆನ್ನುವುದು ನಿಶ್ಚಯವೆಂದ ಬಳಿಕ ಪಲಾಯನವೇಕೆ? ಯುದ್ಧದಲ್ಲಿ ಮಡಿದವರಿಗೆ ವೀರಸ್ವರ್ಗವಾದರೂ ಇದೆ. ಯುದ್ಧರಂಗದಲ್ಲಿ ಮರಣವೆನ್ನುವುದು ಸುಕೃತಫಲವೇ ಸರಿ! ಹೀಗೆಲ್ಲ ವೃತ್ರಾಸುರನು ಯುದ್ಧೋತ್ಸಾಹವನ್ನು ತುಂಬುತ್ತಿದ್ದರೂ ಪ್ರಾಣಭೀತಿಯಿಂದ ನಾಯಕನ ಮಾತನ್ನೂ ಮೀರಿ ಓಡಲಾರಂಭಿಸಿದರು. ಅವರನ್ನು ದೇವತೆಗಳು ಬೆನ್ನಟ್ಟುತ್ತಿದ್ದರು. ಇದನ್ನು ಕಂಡ ವೃತ್ರ ದೇವತೆಗಳನ್ನೂ ಅವಾಚ್ಯಶಬ್ದಗಳಿಂದ ನಿಂದಿಸಿದ. ಬೆನ್ನಹಿಂದೆ ಚೂರಿ ಹಾಕಿ ಇರಿಯುವುದು ಹೇಡಿತನ. ಸಾಮರ್ಥ್ಯವಿದ್ದಲ್ಲಿ ನನ್ನೊಬ್ಬನನ್ನು ಎದುರಿಸಿರಿ ಎಂದು ಮುಂದೆಬಂದ. ಘೋರಾಕೃತಿಯ ವೃತ್ರಾಸುರನು ಆಕಾಶ-ಪಾತಾಳಗಳಷ್ಟು ವ್ಯಾಪ್ತವಾದ ವದನವುಳ್ಳವ. ನಕ್ಷತ್ರಗಳ ಪುಂಜವನ್ನು ನಾಲಿಗೆಯಿಂದ ನೆಕ್ಕುತ್ತಿದ್ದ. ಇಂತಹ ಭಯಂಕರರೂಪದಿಂದ ಕೂಡಿದ ವೃತ್ರನು ಒಮ್ಮೆ ಜೋರಾಗಿ ಗರ್ಜಿಸಿದ. ದೇವತೆಗಳೆಲ್ಲರೂ ಸಿಡಿಲು ಬಡಿದವರಂತೆ ಮೂರ್ಛಿತರಾಗಿ ಕೆಳಕ್ಕುರುಳಿದರು. ಶೂಲವನ್ನು ಧರಿಸಿ ಧೈರ್ಯದಿಂದ ಎದೆಯುಬ್ಬಿಸಿ ನಿಂತ ವೃತ್ರನ ಮೇಲೆ ದೇವೇಂದ್ರ ತನ್ನ ಗದೆಯನ್ನೆಸೆದ. ವೃತ್ರಾಸುರನು ಅವನೆಸೆದ ಗದೆಯನ್ನು ಲೀಲಾಜಾಲವಾಗಿ ಎಡಗೈಯಿಂದ ಹಿಡಿದು ತಿರುಗಿಸಿ ಐರಾವತದ ಮೇಲೆ ಎಸೆದ. ಐರಾವತವು ಪೆಟ್ಟಿನಿಂದ ಘೀಳಿಟ್ಟಿತು. ತಲೆ ಒಡೆದುಕೊಂಡು ನಡುಗಿ ಹೋಯಿತು. ಇಂದ್ರನು ತನ್ನ ಅಮೃತ ಕರಸ್ಪರ್ಶದಿಂದ ಐರಾವತದ ವ್ಯಥೆಯನ್ನು ಪರಿಹರಿಸಿದ. ವೃತ್ರಾ ಸುರನು ತನ್ನ ಅಣ್ಣನ ತಲೆಯನ್ನು ಕಡಿದ. ದೇವೇಂದ್ರನ ಎದೆಯನ್ನು ಸೀಳುವೆನೆಂದು ಆರ್ಭಟಿಸಿದ. ನಿನ್ನ ಮೃತದೇಹವನ್ನು ಹದ್ದುಗಳು ಕುಕ್ಕಿ ತಿನ್ನಲಿ. ಶೂಲದಿಂದ ಪಾಪಿಯಾದ ನಿನ್ನನ್ನು ಸೀಳುವೆನು ಮುಂತಾಗಿ ನಿಂದಿಸುತ್ತಾ ಕೊನೆಗೊಮ್ಮೆಲೆ ವಿಪರೀತವಾಗಿ ನುಡಿಯಲಾರಂಭಿಸಿದ.

## ಅಧ್ಯಾತ್ಮವಾದಿ ವೃತ್ರಾಸುರ

ದೇವೇಂದ್ರ! ನಿನ್ನ ವಜ್ರಾಯುಧದಿಂದ ನನ್ನ ತಲೆಯನ್ನು ಕತ್ತರಿಸು. ನಾನು ವಿಷ್ಣುವಿನ ರೂಪವನ್ನು ಕಾಣಬಯಸಿರುವೆ. ನಿನ್ನಿಂದ ಮೃತನಾಗಿ ನಾನು ಭಗವಂತನ ಪಾದಕಮಲವನ್ನು ಸೇರಬೇಕು–

**ಅಹಂ ಹರೇ ತವ ಪಾದೈಕಮೂಲ**
**ದಾಸಾನುದಾಸೋ ಭವಿತಾಽಸ್ಮಿ ಭೂಯಃ ।**
**ಮನಃ ಸ್ಮರೇತಾತ್ಮಪತೇರ್ಗುಣಾಂಸ್ತೇ**
**ಗೃಣೀತ ವಾಕ್ ಕರ್ಮ ಕರೋತು ಕಾಯಃ ॥**

— (೬–೧೧–೨೪)

'ಭಗವಂತನೇ! ನಾನು ನಿನ್ನ ಪಾದಮೂಲದ ದಾಸಾನುದಾಸ. ನನ್ನ ಮನಸ್ಸು ನಿನ್ನ ಗುಣಗಳನ್ನು ಸ್ಮರಿಸಲಿ! ನಿನ್ನ ಗುಣಗಳನ್ನು ನನ್ನ ವಾಗಿಂದ್ರಿಯವು ಬಣ್ಣಿಸಲಿ! ನೀನು ಪ್ರೀತನಾಗುವಂತಹ ಕರ್ಮಗಳು ನನ್ನ ಕಾಯದಿಂದ ನಡೆಯುತ್ತಿರಲಿ! ದೇವೇಂದ್ರನು ನನ್ನನ್ನು ಸಂಹರಿಸಿ ಭಗವಂತನ ಪಾದಕಮಲಕ್ಕೆ ಸೇರಿಸಲಿ! ಇದೊಂದು ಅಪೇಕ್ಷೆಯನ್ನು ಬಿಟ್ಟು ಮತ್ತೇನನ್ನೂ ಬಯಸ ಲಾರೆ. ನನಗೆ ಸ್ವರ್ಗ, ಚಕ್ರಾಧಿಪತ್ಯ, ಅಣಿಮಾದಿ ಸಿದ್ಧಿ, ಮೋಕ್ಷ ಯಾವುದೂ ಬೇಡ. ಭಗವಂತನ ಪಾದಕಮಲ ಒಂದೇ ಬೇಕು' ಎನ್ನುತ್ತ ದೈತ್ಯನಾಗಿ ಭಗವದ್ಭಕ್ತಿಯ ಪಾರಮ್ಯವನ್ನು ತೋರಿದ್ದಾನೆ. ಮತ್ತೂ ಪ್ರಾರ್ಥನೆಯನ್ನು ಮುಂದುವರಿಸುತ್ತಾನೆ–

**ಅಜಾತಪಕ್ಷಾ ಇವ ಮಾತರಂ ಖಗಾಃ**
**ಸ್ತನ್ಯಂ ಯಥಾ ವತ್ಸತರಾಃ ಕ್ಷುಧಾರ್ತಾಃ ।**
**ಪ್ರಿಯಂ ಪ್ರಿಯೇವ ವ್ಯುಷಿತಂ ವಿಷಣ್ಣಾ**
**ಮನೋಽರವಿಂದಾಕ್ಷ ದಿದೃಕ್ಷತೇ ತ್ವಾಮ್ ॥**

— (೬–೧೧–೨೬)

'ರೆಕ್ಕೆ ಮೂಡದ ಹಕ್ಕಿಯ ಮರಿಗಳು, ತಾಯಿಯು ಆಹಾರವನ್ನು ಯಾವಾಗ ತರುತ್ತಾಳೆ ಎಂದು ನಿರೀಕ್ಷಿಸುವಂತೆ, ಹಸಿವಿನಿಂದ ಕಂಗೆಟ್ಟ ಕಂದಗಳು ತಾಯಿಯ ಸ್ತನ್ಯಪಾನಕ್ಕೆಕಾದಿರುವಂತೆ, ಪ್ರಿಯತಮೆಯು ಅಗಲಿದ ಪ್ರಿಯಕರನನ್ನು ನಿರೀಕ್ಷಿಸುವಂತೆ ನನ್ನ ಮನಸ್ಸು ಅರವಿಂದದಳಾಯತಾಕ್ಷನಾದ ನಿನ್ನನ್ನು ಕಾಣಬಯಸುತ್ತದೆ' ಎನ್ನುತ್ತಾನೆ.

ಹೀಗೆ ವೃತ್ರಾಸುರನು ಮರಣವನ್ನು ಬಯಸಿ ಇಂದ್ರನ ವಿರುದ್ಧ ಕಾದಾಡಲಾರಂಭಿಸಿದ. ಇಂದ್ರನ ಮೇಲೆ ತನ್ನ ಶೂಲವನ್ನೆಸೆದ ಇಂದ್ರನು ವಜ್ರಾಯುಧದಿಂದ ಅದನ್ನು ಕತ್ತರಿಸಿದ. ಅದರೊಟ್ಟಿಗೆ ವೃತ್ರನ ಒಂದು ಕೈಯನ್ನೂ ಕತ್ತರಿಸಿದ. ವೃತ್ರಾಸುರನು ಉಳಿದ ಒಂದು ಕೈಯಿಂದಲೇ ಪರಿಘವನ್ನು ಹಿಡಿದುಕೊಂಡು ಬಂದು ಇಂದ್ರನ ಕೆನ್ನೆಗೆ ಬಾರಿಸಿದ. ಪೆಟ್ಟಿನ ರಭಸಕ್ಕೆ ಕೈಯಲ್ಲಿದ್ದ ವಜ್ರಾಯುಧ ಕೆಳಕ್ಕೆ ಜಾರಿ ಬಿದ್ದಿತು. ವೃತ್ರನು 'ದೇವೇಂದ್ರ! ಆಯುಧವನ್ನು ತೆಗೆದುಕೋ, ಧೈರ್ಯದಿಂದ

ಮತ್ತೊಮ್ಮೆ ಹೊಡೆ. ಯುದ್ಧದಲ್ಲಿ ಜಯ ಪರಾಜಯಗಳಿದ್ದದ್ದೇ. ಅದಕ್ಕಾಗಿ ಚಿಂತಿಸ ಬೇಡ. ಎಲ್ಲರಿಗೂ, ಎಲ್ಲದಕ್ಕೂ ಕಾರಣನಾದ ಭಗವಂತನ ಅಧೀನದಲ್ಲಿ ನಾವೆಲ್ಲರೂ ಇದ್ದೇವೆ. ನನಗೆ ಶಕ್ತಿ ಕೊಟ್ಟಿದ್ದರಿಂದ ನಿನಗೆ ಹೊಡೆದೆ ಮರಳಿಯತ್ನವ ಮಾಡು ಎದ್ದೇಳು ಎಂದು ಹುರಿದುಂಬಿಸಿದ.

ಪರ್ಯಾಯೋತ್ಸವ ಮುಂತಾದ ವಿಶೇಷ ಸಮಾರಂಭಗಳಲ್ಲಿ ನಾವು ತಟ್ಟಿರಾಯ ನನ್ನು ಕಾಣುತ್ತೇವೆ. ತಟ್ಟಿರಾಯನು ಸ್ವತಂತ್ರನಾಗಿ ಕುಣಿಯುತ್ತಾನೆಯೇ? ಇಲ್ಲ ಅದರ ಒಳಗಿನ ಮನುಷ್ಯ ಕುಣಿದಾಗ ಹೊರಗಿನ ತಟ್ಟಿರಾಯನೂ ಕುಣಿದಂತೆ ತೋರುತ್ತಾನೆ ಮನುಷ್ಯ ನಿಂತರೆ ತಟ್ಟಿರಾಯನೂ ತಟಸ್ಥನಾಗುತ್ತಾನೆ. ನಾವೆಲ್ಲರೂ ತಟ್ಟಿರಾಯ ನಂತೆಯೇ ಇದ್ದೇವೆ (ನರಬೊಂಬೆಗಳು). ನಮ್ಮೊಳಗೆ ಭಗವಂತನು ನಿಂತು ನಮ್ಮನ್ನು ಕುಣಿಸುತ್ತಿದ್ದಾನೆ. ಅವನು ತಟಸ್ಥನಾದರೆ ನಮ್ಮಿಂದೇನೂ ನಡೆಯದು.

ವೃತ್ರಾಸುರನ ಈ ಅಧ್ಯಾತ್ಮಚಿಂತನೆಯನ್ನು ಕೇಳಿದ ದೇವೇಂದ್ರನೂ ತಲೆದೂಗಿದ. 'ಅಸುರನಾಗಿಯೂ ಉತ್ತಮ ಭಗವದ್ಭಕ್ತಿಯನ್ನು ಅಳವಡಿಸಿ ಕೊಂಡಿರುವಿ! ಪರಮ ಸಜ್ಜನನೆನಿಸಿದ್ದೀಯೆ' ಎಂದ. ಪುನಃ ಯುದ್ಧ ಆರಂಭವಾಯಿತು. ವೃತ್ರನು ಪರಿಘವನ್ನು ದೇವೇಂದ್ರನ ಮೇಲೆಸೆದನು. ದೇವೇಂದ್ರನು ವೃತ್ರಾಸುರನ ಪರಿಘ ಮತ್ತು ಎಡಗೈಯನ್ನು ಕತ್ತರಿಸಿದನು. ಎರಡು ಕೈಗಳನ್ನು ಕಳೆದುಕೊಂಡಿದ್ದರೂ ವೃತ್ರಾಸುರನು ತನ್ನ ರಣೋತ್ಸಾಹವನ್ನು ಕಳೆದುಕೊಳ್ಳಲಿಲ್ಲ. ವಿಶಾಲವಾದ ವದನವನ್ನು ತೆರೆದ. ಐರಾವತ ಸಹಿತವಾಗಿ ದೇವೇಂದ್ರನನ್ನು ನುಂಗಿಯೇ ಬಿಟ್ಟ.

ದೇವೇಂದ್ರನನ್ನೇ ನುಂಗಲು ದೇವತೆಗಳೆಲ್ಲರೂ ಹಾಹಾಕಾರವನ್ನಾರಂಭಿಸಿದರು. ದೇವೇಂದ್ರನು ನಾರಾಯಣ ಕವಚದ ಮಹಿಮೆಯಿಂದ ತನ್ನ ಯೋಗಬಲದಿಂದಲೂ ವೃತ್ರನ ಬೃಹದ್ಗಾತ್ರದ ಉದರವನ್ನು ವಜ್ರಾಯುಧದಿಂದ ಸೀಳಿಕೊಂಡು ಹೊರಬಂದ. ವೃತ್ರನು ಮೃತನಾಗುತ್ತಿರಲು ಮೂರು ಲೋಕದ ಜನರೂ ಸಂತೋಷ ಸಂಭ್ರಮ ಗಳಿಂದ ನಲಿದಾಡಿದರು.

## ವೃತ್ರಾಸುರ ಯಾರು?

ವೃತ್ರಾಸುರನು ಭಗವಚ್ಚಿಂತನೆಗಳನ್ನು ಉತ್ತಮ ರೀತಿಯಲ್ಲಿ ಪಡೆದುಕೊಳ್ಳಲು ಕಾರಣವೇನು? ಅಸುರರಿಗೂ ತತ್ವಜ್ಞಾನದ ಪ್ರಾಪ್ತಿ ಉಂಟೇ? ಎಂದು ಪರೀಕ್ಷಿತನು ಶುಕಾಚಾರ್ಯರ ಬಳಿ ಕೇಳಲು ಶುಕಾಚಾರ್ಯರು ವೃತ್ರಾಸುರನ ಪೂರ್ವೇತಿಹಾಸ ವನ್ನು ನಿರೂಪಿಸುತ್ತಾರೆ.

ಶೂರಸೇನ ದೇಶದಲ್ಲಿ ಚಿತ್ರಕೇತು ಎಂಬ ರಾಜನಿದ್ದನು. ಸಕಲ ಭೋಗಭಾಗ್ಯ ಗಳಿದ್ದರೂ ಮಕ್ಕಳಿರಲಿಲ್ಲ. ಒಮ್ಮೆ ಅಂಗಿರಸ ಋಷಿಗಳು ಇವನಲ್ಲಿಗೆ ಬಂದರು. ರಾಜನು ಮಕ್ಕಳಾಗುವ ಉಪಾಯವನ್ನು ಕೇಳಿದನು. ಮಕ್ಕಳಿಂದ ರಾಜನಿಗೆ ಹಿತವಾಗದು ಎಂದು ಅಂಗಿರಸನು ತಿಳಿದಿದ್ದರೂ ಪುತ್ರಕಾಮೇಷ್ಟಿಯನ್ನಾರಂಭಿಸಲು ಹೇಳಿದರು. ಅದರಂತೆ ಆಚರಿಸಿ ಜ್ಯೇಷ್ಠ ಪತ್ನಿಯಲ್ಲಿ ಒಂದು ಗಂಡುಮಗುವನ್ನು

ಪಡೆದನು. ಮೋಹದ ಮಗುವನ್ನು ನೀಡಿದ ಪತ್ನಿಯ ಮೇಲೆ ರಾಜನ ಪ್ರೀತಿ ಹೆಚ್ಚಿತು ಇದನ್ನು ಸಹಿಸದ ಸವತಿಯರಿಗೆ ಮಗುವಿನ ಮೇಲೆ ಕಿಚ್ಚು ಹೆಚ್ಚಿತು ಎಲ್ಲರೂ ಸೇರಿ ವಿಷ ಉಣಿಸಿ ಶಿಶುವನ್ನು ಕೊಂದರು. ಮತ್ತೆ ಅಂಗಿರಸರು ಬದುಕಿಸಿದಾಗ ಆ ಶಿಶುವು ಚಿತ್ರಕೇತುವಿಗೆ ಸಂಸಾರದ ಅಶಾಶ್ವತವಾದ ಮೋಹದ ಸಂಬಂಧಗಳ ಬಗ್ಗೆ ಉಪದೇಶಿಸಿತು. ನದಿಯ ಪ್ರವಾಹದಲ್ಲಿ ಮರಳಿನ ಕಣಗಳು ಕೆಲಕಾಲ ಸೇರಿ ಮತ್ತೆ ಎಲ್ಲಿಯೋ ತೂರಿಹೋಗುವಂತೆ ಸಂಸಾರದ ಸಂಬಂಧಗಳೆಂದು ತಿಳಿಹೇಳಿತು. ಇದರಿಂದ ವಿರಕ್ತನಾದ ಚಿತ್ರಕೇತು ನಾರದರಿಂದ ತತ್ವಜ್ಞಾನೋಪದೇಶವನ್ನು ಪಡೆದು ಕೊಂಡನು. ಮಂತ್ರಸಿದ್ಧಿಯಿಂದ ಇಷ್ಟ ಬಂದಂತೆ ಆಕಾಶದಲ್ಲಿ ಹಾರಾಡುವ ಸಾಮರ್ಥ್ಯವನ್ನು ಪಡೆದನು.

ಹೀಗೆ ಒಂದು ದಿನ ಆಕಾಶದಲ್ಲಿ ಹಾರಾಡುವಾಗ ಋಷಿಗಳ ಸಂಗದಲ್ಲಿಯೇ ಇದ್ದ ಶಿವನು ಉಮೆಯನ್ನು ಆಲಿಂಗಿಸಿಕೊಂಡು ಕುಳಿತಿರುವುದನ್ನು ಕಂಡನು. ನೋಡಿ ನಕ್ಕನು. ಚಿತ್ರಕೇತುವಿನ ಹಾಸ್ಯದಿಂದ ಕುಪಿತಳಾದ ಪಾರ್ವತಿಯು ಅಸುರನಾಗಿ ಜನಿಸೆಂದು ಶಾಪ ಕೊಟ್ಟಳು. ಇದರ ಪರಿಣಾಮವಾಗಿ ವೃತ್ರಾಸುರನಾಗಿ ಜನ್ಮತಾಳಿ ಮೃತನಾದ ಬಳಿಕ ಸದ್ಗತಿಯನ್ನು ಹೊಂದಿದನೆಂದು ವಿವರಿಸಿದರು.

ಮುಂದೆ ಭಾಗವತವು ದಿತಿ–ಅದಿತಿಯರ ಸಂತಾನ ಪರಂಪರೆಯನ್ನು ವಿವರಿಸುತ್ತದೆ. ದಿತಿಯ ಮಕ್ಕಳಾದ ಹಿರಣ್ಯಕಶಿಪು ಹಿರಣ್ಯಾಕ್ಷರ ಸಂಹಾರವನ್ನು ನರಸಿಂಹ– ವರಾಹ ರೂಪದಿಂದ ಭಗವಂತನು ಮಾಡಲು ಆ ದಿತಿಯು ಇದಕ್ಕೆಲ್ಲ ಇಂದ್ರನೇ ಕಾರಣನೆಂದು ಭಾವಿಸಿ ಕಶ್ಯಪನ ಬಳಿ ಇಂದ್ರನನ್ನು ಕೊಲ್ಲುವಂತಹ ಮಗನು ಹುಟ್ಟಲು ಅನುಗ್ರಹಿಸಿರಿ ಎಂದು ಪ್ರಾರ್ಥಿಸಿದಳು. ಕಶ್ಯಪರು ಪುಂಸವನ ವ್ರತವನ್ನಾಚರಿಸಲು ಹೇಳಿದರು. ಅದರಂತೆ ಆಚರಿಸುತ್ತಿರಲು ಉದ್ದೇಶವನ್ನರಿತ ದೇವೇಂದ್ರ ಒಂದು ದಿವಸ ಸೂಕ್ಷ್ಮರೂಪದಿಂದ ಅವಳ ಗರ್ಭದೊಳಗೆ ಪ್ರವೇಶಿಸಿ ಗರ್ಭವನ್ನು ತುಂಡರಿಸಿದ. ಅಳುತ್ತಿರುವ ತುಂಡುಗಳಿಗೆ 'ಮಾ ರುದ' ಅಳಬೇಡಿರಿ ಎಂದು ಸಮಾಧಾನಪಡಿಸಿದ್ದರಿಂದ ಮುಂದೆ ಅವರೇ ಮರುತ್‌ಗಳೆಂದು ಪ್ರಸಿದ್ಧರಾದರು ಎಂಬಲ್ಲಿಗೆ ಷಷ್ಠ ಸ್ಕಂಧವು ಲಕ್ಷ್ಮೀಹಯಗ್ರೀವನಿಗೆ ಸಮರ್ಪಿತವಾಯಿತು.

'ಮಧ್ವೇಶಾರ್ಪಣಮಸ್ತು'

# ಅಥ ಸಪ್ತಮ ಸ್ಕಂಧಃ

## ಪರೀಕ್ಷಿತನ ಪ್ರಶ್ನೆ

ಸಪ್ತಮ ಸ್ಕಂಧದ ಪ್ರಾರಂಭದಲ್ಲಿ ಪರೀಕ್ಷಿತ ರಾಜನು ಶುಕಮುನಿಗಳ ಮುಂದೆ ಪ್ರಶ್ನೆಯೊಂದನ್ನು ಕೇಳುತ್ತಿದ್ದಾನೆ.

ಶುಕಮುನಿಗಳೇ! 'ಭಗವಂತನು ಅನಂತಗುಣಗಳಿಂದ ಪರಿಪೂರ್ಣ. ಅವನಲ್ಲಿ ದೋಷ ಲೇಶವೂ ಇಲ್ಲ' ಎಂದು ನೀವೆಲ್ಲರೂ ಹೇಳುತ್ತಿದ್ದೀರಿ. ಜ್ಞಾನಿಗಳಿಂದಲೂ ಕೇಳಿದ್ದೇನೆ ಆದರೆ ಭಗವಂತನ ಗುಣದ ಬಗ್ಗೆ ನನಗೊಂದು ದೊಡ್ಡ ಸಂಶಯ ಮೂಡಿದೆ. ಅದನ್ನು ತಾವು ಪರಿಹರಿಸಬೇಕು.

ಭಗವಂತ ಪ್ರಕೃತಿಯನ್ನು ಮೀರಿದವ. ನಾವೆಲ್ಲರೂ ಪ್ರಕೃತಿ ಸಂಬಂಧಿಯಾದ ಅನೇಕ ದೋಷಗಳಿಗೆ ಒಳಗಾಗುತ್ತೇವೆ. ಆದರೆ ಭಗವಂತ ಅಪ್ರಾಕೃತ ಚೈತನ್ಯ ಮೂರ್ತಿ. ಪ್ರಕೃತಿಯ ಬಂಧನ, ಪ್ರಕೃತಿಯ ಲೇಪ ಇದಾವುದೂ ಅವನಲ್ಲಿ ಇಲ್ಲ. ಹೀಗಿದ್ದರೂ ಭಗವಂತ ಒಬ್ಬ ಸಾಮಾನ್ಯ ಶ್ರೀಮಂತ ರಾಜನಂತೆ ವರ್ತಿಸುತ್ತಿದ್ದಾನೆ.

ಭಗವಂತನು ದೇವತೆಗಳ ಮೇಲಿನ ಪ್ರೀತಿಯಿಂದ ದೇವತೆಗಳಿಗಾಗಿ ದೈತ್ಯ ನಿಗ್ರಹರೂಪವಾದ ಸಂಹಾರಕಾರ್ಯವನ್ನು ಮಾಡಿದ್ದಾನೆ. ಆದರೆ ಈ ತೆರನಾದ ಪ್ರೀತಿ ದ್ವೇಷಗಳು ಪ್ರಕೃತಿಯ ಬಂಧವನ್ನು ಮೀರಿನಿಂತ ಭಗವಂತನಿಗೆ ಹೇಗೆ ಕೂಡುತ್ತದೆ?!

ಒಬ್ಬ ಬೇಕಾದವ ಮತ್ತೊಬ್ಬ ಬೇಡವಾದವ ಎಂಬ ಪಕ್ಷಪಾತ ನಮಗಿರ ಬಹುದು. ನಮ್ಮನ್ನು ಹೊಗಳಿದವರಲ್ಲಿ ಭಾರಿ ಪ್ರೀತಿ. ಅವನಿಗೆ ವಿಶೇಷ ಮರ್ಯಾದೆ. ಯಾರು ತೆಗಳುತ್ತಾರೆ, ಅವರನ್ನು ತಿರಸ್ಕರಿಸುವುದು ಹಿಂಸಿಸುವುದು –ಇದೆಲ್ಲವೂ ಪ್ರಕೃತಿಯ ದ್ವಂದ್ವಕ್ಕೆ ಸಿಲುಕಿದ ಸಾಮಾನ್ಯ ಜನರಲ್ಲಿ ತೋರಬಹುದು. ಆದರೆ ಇದನ್ನು ಮೀರಿನಿಂತ ಭಗವಂತನಿಗೆ ಎಲ್ಲರೂ ಒಂದೆ. ಹೀಗಿದ್ದರೂ ಸಾಮಾನ್ಯರಂತೆ; ಹೊಗಳು ಭಟರಾದ ದೇವತೆಗಳಲ್ಲಿ ಭಾರಿ ಪ್ರೀತಿ ತೋರಿಸುತ್ತಾನೆ. ದೈತ್ಯರನ್ನು ದ್ವೇಷಿಸುತ್ತಾನೆ. ಹಿಂಸಿಸುತ್ತಾನೆ.

ಲೋಕದ ಒಬ್ಬ ಸಾಮಾನ್ಯ ಶ್ರೀಮಂತರಾಜನಲ್ಲಿ ತೋರುವ ಗುಣಗಳು, ಪ್ರಕೃತಿ ಬಂಧನವನ್ನು ಮೀರಿನಿಂತ ಭಗವಂತನಲ್ಲಿಯೂ ತೋರುತ್ತಿದೆಯಲ್ಲಾ!! ಏನಿದು!! ನಿರ್ದೋಷನಾದ, ಆನಂದಪರಿಪೂರ್ಣನಾದ ಭಗವಂತನ ಈ ಪ್ರವೃತ್ತಿಯನ್ನು ಕಂಡು ಆಶ್ಚರ್ಯವಾಗುತ್ತಿದೆ.

ಎಲ್ಲರಿಗೂ ಒಂದೇ ತೆರನಾದ ಪ್ರೀತಿಯನ್ನು ಹರಿಸುವ ಭಗವಂತ, ಪಕ್ಷಪಾತ ನೀತಿಯನ್ನು ಏಕೆ ಅನುಸರಿಸುತ್ತಿದ್ದಾನೆ. ಅವನ ಗುಣಗಳ ಬಗ್ಗೆ ನಮಗೆ ಸಂಶಯ ಉಂಟಾಗಿದೆ. ದಯಮಾಡಿ ಈ ಸಂಶಯವನ್ನು ಪರಿಹರಿಸಿರಿ ಎಂದು ಪರೀಕ್ಷಿತ ಶುಕ ಮುನಿಗಳ ಬಳಿ ನಿವೇದಿಸಿದಾಗ–

## ಶುಕಾಚಾರ್ಯರ ಉತ್ತರ

ಪರೀಕ್ಷಿತ! –ಭಗವಂತನು ದ್ವೇಷ, ಅಸೂಯೆ, ಸ್ವಾರ್ಥ ಇವುಗಳೆಲ್ಲವನ್ನೂ ಮೀರಿ ನಿಂತವ. ದೇವತೆಗಳು ಹೊಗಳಿದ್ದರಿಂದ ಇವನಿಗೇನು ಲಾಭವಿಲ್ಲ. ದೈತ್ಯರು ತೆಗಳಿದ್ದರಿಂದ ಹಾನಿಯೂ ಇಲ್ಲ ಎಂದೂ ಈ ಸ್ತುತಿನಿಂದೆಗಳ ಪರಿಣಾಮ ಭಗವಂತನಲ್ಲಿ ಇಲ್ಲ.

ಈ ಜಗತ್ತಿನಲ್ಲಿ ಸತ್ವ, ರಜ, ತಮಸ್ಸು ಎಂಬ ಮೂರು ಗುಣಗಳಿವೆ. ಇವುಗಳಿಂದಲೇ ಎಲ್ಲ ಏರುಪೇರುಗಳುಂಟಾಗುತ್ತವೆ. ಸತ್ವಗುಣದ ಅಭಿವೃದ್ಧಿಯಾದರೆ, ಒಳ್ಳೆಯ ಸಾತ್ವಿಕ ಪ್ರವೃತ್ತಿ–ಸದ್ಗುಣಗಳು ವ್ಯಾಪಕವಾಗಿ ಹರಡುತ್ತವೆ. ತಮೋಗುಣ ರಜೋಗುಣಗಳೇ ಹೆಚ್ಚಾದರೆ –ಅನರ್ಥಗಳು, ಘರ್ಷಣೆ, ಹಿಂಸೆ, ಹೋರಾಟ ಇವೆಲ್ಲವೂ ನಡೆಯುತ್ತವೆ. ಈ ಮೂರು ಗುಣಗಳನ್ನೂ ಮೀರಿನಿಂತ ಭಗವಂತ ಜಗತ್ತಿನ ಈ ಮೂರುಗುಣಗಳಿಗೆ ಪ್ರೇರಕನಾಗಿದ್ದಾನೆ. ಆದ್ದರಿಂದ ದೇವತೆಗಳಲ್ಲಿ ಉತ್ಕೃಷ್ಟ ಪ್ರೀತಿಯನ್ನು ಏಕೆ ತೋರಿಸಿದ್ದಾನೆ ಎಂದರೆ –ದೇವತೆಗಳು ಸತ್ವಗುಣದ ಪ್ರತೀಕರು. ಭಗವಂತನು ಸತ್ವಗುಣ ಬೆಳೆಯಬೇಕೆಂಬ ಕಾರಣದಿಂದ ದೇವತೆಗಳ ಪಕ್ಷ ವಹಿಸಿದನೇ ಹೊರತು ತನ್ನ ಹೊಗಳಿದರು ಎಂಬ ಕಾರಣದಿಂದಲ್ಲ.

ಇನ್ನು ದೈತ್ಯರನ್ನು ಕೊಂದದ್ದು, ಅವರು ನಿಂದಿಸಿದರು ಎಂದಲ್ಲ. ದೈತ್ಯರೆಂದರೆ ರಜೋಗುಣ, ತಮೋಗುಣಗಳ ಪ್ರತೀಕರು. ಇವುಗಳ ದಮನವಾಗಬೇಕು. ದೈತ್ಯರ ದಮನ ಎಂದರೆ ಅನರ್ಥ, ಸ್ವಾರ್ಥ ಮುಂತಾದ ದುರ್ಗುಣಗಳ ದಮನ.

ಹೀಗೆ, ಜಗತ್ತಿನಲ್ಲಿ ಸಾತ್ವಿಕ ಪ್ರವೃತ್ತಿಯ ಸಜ್ಜನರಿಗೆ ಹಿತವಾಗಬೇಕು. ಲೋಕಕ್ಕೆ ಕಲ್ಯಾಣವಾಗಬೇಕು. ಅನ್ಯಾಯ–ಸ್ವಾರ್ಥಗಳನ್ನು ತಡೆಗಟ್ಟಬೇಕು. ಈ ದೃಷ್ಟಿಯಿಂದ ಭಗವಂತನ ಪ್ರವೃತ್ತಿ ಹೊರತು ಅವನು ಹೊಗಳಿದ ಎಂದು ಪ್ರೀತಿ, ಇವ ತೆಗಳಿದ ಎಂದು ದ್ವೇಷ –ಈ ತೆರನಾದ ರಾಗದ್ವೇಷಗಳು ಪರಮಾತ್ಮನ ವ್ಯವಹಾರದಲ್ಲಿ ಇಲ್ಲ.

## ಭವರೋಗ ವೈದ್ಯನ ಶಸ್ತ್ರಚಿಕಿತ್ಸೆ

ಒಬ್ಬ ರೋಗಿ ವೈದ್ಯನ ಬಳಿ ಹೋಗುತ್ತಾನೆ. ವೈದ್ಯ ಅವನನ್ನು ಪರೀಕ್ಷಿಸಿ ನಿನ್ನ ಹೊಟ್ಟೆಯಲ್ಲಿ ದುರ್ಮಾಂಸ ಬೆಳೆದಿದೆ. ಅದನ್ನು ತೆಗೆಯದಿದ್ದರೆ ನಿನ್ನ ಪ್ರಾಣವೇ ಹೋಗುತ್ತದೆ –ಎನ್ನುತ್ತಾನೆ. ರೋಗಿಯ ದುರ್ಮಾಂಸವನ್ನು ಶಸ್ತ್ರಚಿಕಿತ್ಸೆಯ ಮೂಲಕ ಹೊರತೆಗೆಯುತ್ತಾನೆ.

ದೇಹದಲ್ಲಿ ಮಿತಿಮೀರಿ ಬೆಳೆದ ದುರ್ಮಾಂಸವನ್ನು ತೆಗೆದರೆ ಮಾತ್ರ ವ್ಯಕ್ತಿ ಬದುಕಲು ಸಾಧ್ಯ. ಇದರಂತೆ– ಲೋಕದಲ್ಲಿಯೂ ಶರೀರದಲ್ಲಿ ಬೆಳೆಯುವ ದುರ್ಮಾಂಸದಂತೆ ಕೆಲವು ವ್ಯಕ್ತಿಗಳಿದ್ದಾರೆ. ಜರಾಸಂಧ, ಹಿರಣ್ಯಕಶಿಪು, ರಾವಣ, ಕುಂಭಕರ್ಣ –ಇವರೆಲ್ಲರೂ ದೇಹದಲ್ಲಿ ಮಿತಿಮೀರಿ ಬೆಳೆದ ದುರ್ಮಾಂಸದಂತೆ. ಪ್ರತಿಯೊಬ್ಬ ವ್ಯಕ್ತಿಗೂ ಒಂದು ಇತಿಮಿತಿ ಎಂದಿದೆ. ಇವರು ಇದನ್ನು ಮೀರಿ

ಬೆಳೆದಿದ್ದಾರೆ. ಪ್ರಪಂಚದ ಕ್ಯಾನ್ಸರ್‌ನಂತೆ ಇದ್ದಾರೆ. ದುರಾಶೆ, ದುರಹಂಕಾರ, ಸ್ವಾರ್ಥಗಳಿಂದ ಬೆಳೆದಿದ್ದಾರೆ. ಶರೀರದಲ್ಲಿ ಬೆಳೆದ ದುರ್ಮಾಂಸವನ್ನು ಹಾಗೆಯೇ ಬಿಟ್ಟರೆ ಇಡೀ ಶರೀರ ಕೆಟ್ಟುಹೋಗುತ್ತದೆ. ಕೊನೆಗೆ ಪ್ರಾಣವೇ ಬಿಟ್ಟುಹೋಗುತ್ತದೆ. ನಾವು ಬದುಕಬೇಕಿದ್ದರೆ, ಶರೀರ ಉಳಿಯಬೇಕಿದ್ದರೆ, ಮಿತಿಮೀರಿ ಬೆಳೆದ ದುರ್ಮಾಂಸ ವನ್ನು ಕೆತ್ತಿ ತೆಗೆಯಬೇಕು. ಇದರಂತೆ ಜಗತ್ತಿನ ಕ್ಯಾನ್ಸರ್‌ನಂತಿರುವ ದುಷ್ಟಶಕ್ತಿಗಳನ್ನು ಬೆಳೆಯಲು ಬಿಟ್ಟರೆ –ಅದರ ಪರಿಣಾಮ– ಜಗತ್ತೇ ನಾಶವಾಗುತ್ತದೆ. ಜಗತ್ತು ಉಳಿಯಬೇಕು –ಅದಕ್ಕಾಗಿ ಭಗವಂತ ಇಂತಹ ದುಷ್ಟಶಕ್ತಿಗಳ ದಮನ ಮಾಡುತ್ತಾನೆ.

ಆದ್ದರಿಂದ ದೈತ್ಯರ ನಾಶ ಎನ್ನುವುದು ಹಿಂಸೆಯಲ್ಲ; ವೈದ್ಯರ ಶಸ್ತ್ರಚಿಕಿತ್ಸೆಯಂತೆ. ಜಗತ್ತಿನ ರೋಗವನ್ನು ಪರಿಹರಿಸಿದಂತೆ ತಮೋಗುಣದ ಪ್ರಾಬಲ್ಯದ ದುಷ್ಟಶಕ್ತಿಗಳ ದಮನ ಮಾಡಿದರೆ, ಜಗತ್ತು ಉಳಿಯುತ್ತದೆ. ಸಜ್ಜನರು ನೆಮ್ಮದಿಯಿಂದ ಬದುಕು ತ್ತಾರೆ.

ಹೀಗೆ, ಭಗವಂತ ದೇವತೆಗಳ ಪಕ್ಷವನ್ನು ವಹಿಸುವುದು ಎಂದರೆ– ಸತ್ವಗುಣ ವನ್ನು ಬೆಳೆಸಿ, ಜಗತ್ತಿನಲ್ಲಿ ದೈವೀಶಕ್ತಿಯ ಪ್ರಾಬಲ್ಯವನ್ನು ಹೆಚ್ಚಿಸುವುದು.

ದೈತ್ಯರ ನಾಶಮಾಡುವುದೆಂದರೆ– ರಜೋಗುಣ ತಮೋಗುಣಗಳನ್ನು ದಮನ ಮಾಡುವುದರ ಮೂಲಕ ಲೋಕಕಲ್ಯಾಣ ಮಾಡುವುದು.

ಆದ್ದರಿಂದ ಭಗವಂತನ ಈ ಪ್ರವೃತ್ತಿಗಳ ಬಗ್ಗೆ ಯಾವ ವಿಧದಲ್ಲಿಯೂ ಸಂದೇಹ ಆಕ್ಷೇಪಗಳಿಗೆ ಅವಕಾಶವಿಲ್ಲ. ಆದ್ದರಿಂದ ನಮ್ಮ ಭಾವನೆ–ಪ್ರವೃತ್ತಿಗಳ ಜೊತೆಗೆ ಭಗವಂತನ ವ್ಯವಹಾರವನ್ನು ತೂಗಿದರೆ ಅನರ್ಥಕ್ಕೆ ಕಾರಣರಾದೇವು ಎಂದು ಭಗವಂತನ ನಿಃಸ್ವಾರ್ಥದೃಷ್ಟಿ, ಲೋಕಕಲ್ಯಾಣ ಮುಂತಾದ ಸದ್ಗುಣಗಳನ್ನು ಶುಕಮುನಿಗಳು ತಿಳಿಸುತ್ತಾ, ಪರೀಕ್ಷಿತನಿಗೆ ಸಂದರ್ಭಕ್ಕನುಗುಣವಾಗಿ ಧರ್ಮರಾಜ ನಾರದರ ಸಂವಾದವನ್ನು ತಿಳಿಸುತ್ತಿದ್ದಾರೆ.

## ರಾಗ–ದ್ವೇಷಗಳು ಮುಕ್ತಿಗೆ ಕಾರಣಗಳಲ್ಲ!!

ಧರ್ಮರಾಜ ನಾರದರ ಬಳಿ ಕೇಳುತ್ತಿದ್ದಾನೆ– ನಾರದರೇ! ಸಭೆಯಲ್ಲಿ ಶಿಶುಪಾಲನು ಶ್ರೀಕೃಷ್ಣಪರಮಾತ್ಮನನ್ನು ನಾನಾ ಬಿರುನುಡಿಗಳಿಂದ ಜರೆದ. ಹಂಗಿಸಿದ. ಅವನ ನುಡಿಗಳಿಂದ ಸಿಡಿದೆದ್ದ ಶ್ರೀಕೃಷ್ಣ ಕಾದಾಟಕ್ಕೆ ಇಳಿದ. ಯುದ್ಧದಲ್ಲಿ ಶ್ರೀಕೃಷ್ಣನು ಶಿಶುಪಾಲನ ಶಿರವನ್ನು ಚಕ್ರದಿಂದ ತರಿದ. ಒಡನೆಯೆ ಶಿಶುಪಾಲನ ಶರೀರದಿಂದ ತೇಜಸ್ಸೊಂದು ಹೊರಟು ಶ್ರೀಕೃಷ್ಣನ ದಿವ್ಯ ಶರೀರದಲ್ಲಿ ಸೇರಿತು. ಈ ಪ್ರಸಂಗವನ್ನು ಕಂಡ ನನಗೆ ಆಶ್ಚರ್ಯವಾಗುತ್ತಿದೆ.

ಭಗವಂತನನ್ನೇ ನಿರಂತರ ನೆನೆಯುವ ಏಕಾಂತ ಭಕ್ತರೂ ಇಂತಹ ಸ್ಥಾನವನ್ನು ಸುಲಭವಾಗಿ ಹೊಂದಲಾರರು. ಹೀಗಿರಲು ಬಿರುನುಡಿಗಳಿಂದ ಜರೆದ ಪಾಪಿಯಾದ,

ದುರಾತ್ಮನಾದ ಶಿಶುಪಾಲ ಹೇಗೆ ಅವನನ್ನು ಹೊಂದಿದ? ಭಗವಂತನ ಅಭಿಪ್ರಾಯವಾದರೂ ಏನು?

ದುಷ್ಟರನ್ನು ಲೋಕಕ್ಕೆ ಅಪಾಯಕಾರಿಗಳೆಂದು ಶಿಕ್ಷಿಸುವ ಭಗವಂತ, ಅತ್ಯಂತ ದುಷ್ಟನಾದ ಶಿಶುಪಾಲನನ್ನು ರಕ್ಷಿಸುತ್ತಾ ಸದ್ಗತಿಯನ್ನು ಏಕೆ ನೀಡಿದ? ಎನ್ನುವುದು ಇಲ್ಲಿಯ ಇನ್ನೊಂದು ಪ್ರಶ್ನೆ.

ದುರಾತ್ಮರೆಲ್ಲರನ್ನೂ ನದೆಬಡಿಯುವ ಶ್ರೀಹರಿ ದುರಾತ್ಮನಾದ ಶಿಶುಪಾಲನನ್ನೂ ಏಕೆ ಶಿಕ್ಷಿಸಲಿಲ್ಲ? ಪರಮಾತ್ಮನ ವ್ಯವಹಾರವೇ ವಿಚಿತ್ರವಾಗಿ ತೋರುತ್ತಿದೆ. ಅನೇಕ ದುಷ್ಟರನ್ನು ದಮನಮಾಡಿದ್ದಾನೆ. ಆದರೆ ದುಷ್ಟನಾದ ಶಿಶುಪಾಲನಿಗೆ ಸದ್ಗತಿಯನ್ನು ನೀಡಿದ್ದಾನೆ. ಈ ಭಗವಂತನ ವ್ಯಾಪಾರಗಳನ್ನು ನೋಡಿ ನನ್ನ ಬುದ್ಧಿ ವಾತಚಲಿತ ದೀಪದಂತಾಗಿದೆ ಎಂದಾಗ ನಾರದರು ಉತ್ತರಿಸಿದರು–

ಭಗವಂತನಿಗೆ ರಾಗದ್ವೇಷಾದಿಗಳು ಇಲ್ಲ ಎನ್ನುವುದಕ್ಕೆ ಇದೇ ಉದಾಹರಣೆ. ಶಿಶುಪಾಲ ಶ್ರೀಕೃಷ್ಣನನ್ನು ನೂರಾರು ಬಿರುನುಡಿಗಳಿಂದ ಜರೆದರೂ ಅನುಗ್ರಹವನ್ನೇ ಅವನಿಗೆ ಮಾಡಿದ. ಬೈದವನಿಗೂ ಉತ್ತಮ ಗತಿ ಕೊಟ್ಟನೆಂದರೆ ದ್ವೇಷಾದಿಗಳು ಇಲ್ಲವೆಂದೇ ಆಯಿತು.

ಶಿಶುಪಾಲ ಬೈದರೂ ಉತ್ತಮ ಗತಿ ಕೊಟ್ಟನೆಂದರೆ ಅಲ್ಲಿ ಶಿಶುಪಾಲನನ್ನು ಮಾತ್ರ ನೋಡಲಿಲ್ಲ. ಅವನ ಕೆಟ್ಟ ಮಾತುಗಳನ್ನು ಮಾತ್ರ ಕೇಳಿಸಿಕೊಳ್ಳಲಿಲ್ಲ. ಅವನ ಹಿನ್ನೆಲೆಯನ್ನು ನೋಡಿದ. ತನ್ನ ಲೋಕದ ದ್ವಾರಪಾಲಕನಾದ ಜಯ ಪ್ರಮಾದದಿಂದ ಸನಕಾದಿಗಳ ಶಾಪಕ್ಕೆ ಗುರಿಯಾಗಿ ಆಸುರೀ ಜನ್ಮಗಳನ್ನು ಪಡೆದ. ವಾಸ್ತವಿಕವಾಗಿ ಅವನು ಉತ್ತಮ ಭಕ್ತ. ಅವನ ಅಂತರಂಗದ ಭಕ್ತಿಯನ್ನು ಗಮನಿಸಿ ಬಿರುನುಡಿಗಳನ್ನಾಡಿದರೂ ಅವುಗಳನ್ನು ಗಮನಿಸದೆ ಅವನನ್ನು ಉದ್ಧಾರಮಾಡಿದ.

ಆದ್ದರಿಂದ ಪರಮಾತ್ಮನಿಗೆ ಇವನು ಬೈದ, ಇವ ಹೊಗಳಿದ ಎನ್ನುವುದು ಮುಖ್ಯವಲ್ಲ; ಯಾರು ಸಹಜವಾಗಿಯೇ ಸಜ್ಜನರಾಗಿರುತ್ತಾರೋ, ಅವರು ತಾತ್ಕಾಲಿಕವಾಗಿ ಅಪರಾಧ ಮಾಡಿದರೂ ಅದನ್ನು ಗಮನಿಸುವುದಿಲ್ಲ. 'ಭಕ್ತರನ್ನು ಎಂದೂ ಶ್ರೀಹರಿ ಕೈಬಿಡನು' ಎನ್ನುವುದಕ್ಕೆ ಶಿಶುಪಾಲನೆ ಒಂದು ದೊಡ್ಡ ಉದಾಹರಣೆ.

ಶಿಶುಪಾಲನದು ಒಂದು ಸಂಕೀರ್ಣ (ಕಾಂಪ್ಲೆಕ್ಸ್) ವ್ಯಕ್ತಿತ್ವ. ಅವನಲ್ಲಿ ಒಳ್ಳೆ ಗುಣವೂ ಇದೆ. ದುರ್ಗುಣವೂ ಇದೆ. ನೀರು ಯಾವಾಗಲೂ ತಂಪಾಗಿಯೇ ಇರುತ್ತದೆ. ಕೆಲವೊಮ್ಮೆ ಬೆಂಕಿಯ ಸಂಪರ್ಕದಿಂದ ಬಿಸಿ ಆಗುವುದೂ ಇದೆ. ಅದರಂತೆ ಸಜ್ಜೀವರೂ ಸಹ ಆಸುರೀ ಶಕ್ತಿಗಳಿಗೆ ಬಲಿಯಾಗಿ ಕೆಟ್ಟವರಂತೆ ಕಾಣುತ್ತಾರೆ. ಆದರೆ ಅವರ ನೈಜ ವ್ಯಕ್ತಿತ್ವವನ್ನು ಭಗವಂತ ಚೆನ್ನಾಗಿ ತಿಳಿದಿದ್ದಾನೆ. ಹೀಗೆ ಶಿಶುಪಾಲನ ನೈಜ ವ್ಯಕ್ತಿತ್ವವನ್ನರಿತೇ ಅವನಿಗೆ ಉತ್ತಮ ಗತಿಯನ್ನು ನೀಡಿದ್ದಾನೆ. ಅವನ ಅಪರಾಧಗಳೆಲ್ಲವನ್ನೂ ಮನ್ನಿಸಿದ್ದಾನೆ.

ಇದರಿಂದ ತಿಳಿಯುವುದೇನೆಂದರೆ, ಭಗವಂತನು ಹೊಗಳಿದವರನ್ನು ಒಳ್ಳೆಯವರೆಂದಾಗಲೀ; ತೆಗಳಿದವರನ್ನು ದುಷ್ಟರೆಂದಾಗಲೀ ತಿಳಿಯುವುದಿಲ್ಲ. ಯಾರು ಭಗವಂತನ ನೀತಿನಿಯಮಗಳನ್ನನುಸರಿಸಿ ನಡೆಯುತ್ತಾರೋ ಅಂತಹ ಸಜ್ಜನರನ್ನು ರಕ್ಷಿಸುತ್ತಾನೆ. ಇವುಗಳನ್ನು ಉಲ್ಲಂಘಿಸಿ ನಡೆಯುವ ತಾಮಸಶಕ್ತಿಗಳನ್ನು ಹತ್ತಿಕ್ಕುತ್ತಾನೆ ಹೀಗೆ ದೈತ್ಯರ ಹನನದಲ್ಲಿ ಲೋಕಹಿತವಡಗಿದೆ. ದೇವತೆಗಳ ರಕ್ಷಣೆಯಲ್ಲಿ ಸತ್ಯ, ನೀತಿ, ನ್ಯಾಯಗಳು ಅಡಗಿವೆ ಹೊರತು ತಾನು ಯಾವುದೇ ಲೋಕದ ವಿಕಾರಗಳಾದ ರಾಗದ್ವೇಷಗಳಿಗೆ ಒಳಗಾಗುವುದಿಲ್ಲ ಎಂದು ವಿವರಿಸಿದ್ದಾರೆ.

ಇಲ್ಲಿ ಕೆಲವರಿಗೆ ಕೆಲವು ಗೊಂದಲಗಳುಂಟಾಗುತ್ತವೆ. ಶಿಶುಪಾಲ ದ್ವೇಷ ಮಾಡಿಯೂ ಮೋಕ್ಷ ಪಡೆದ. ಹಾಗಿದ್ದರೆ ಮೋಕ್ಷ ಪಡೆಯಲು ಭಕ್ತಿಯೇ ಬೇಕಿಲ್ಲ. ಏಕಾಗ್ರತೆ ಇದ್ದರೆ ಸಾಕು. ಏಕಾಗ್ರತೆಯಿಂದ ಚಿಂತನೆ ಮಾಡಿದರೆ ಮೋಕ್ಷ. ಅದಕ್ಕೆ ಭಕ್ತಿಯೇ ಬೇಕಾಗಿಲ್ಲ. ನಿರಂತರ ದ್ವೇಷವೂ ಸಾಕು. ಶಿಶುಪಾಲ ದ್ವೇಷಮಾಡುತ್ತಲೇ ಇದ್ದ. ಅವನ ನಿರಂತರ ದ್ವೇಷಕ್ಕೆ ವಿಷಯನಾದವ ಭಗವಂತ. ಹೀಗೆ ನಿರಂತರ ಭಗವಂತನ ಚಿಂತನೆಯಿಂದಲೂ ಮೋಕ್ಷ ಪಡೆಯಬಹುದೆಂಬುದಕ್ಕೆ ಶಿಶುಪಾಲನೇ ದೃಷ್ಟಾಂತ.

ಭಕ್ತಿಯಿಂದ ಮೋಕ್ಷ ಎಂದಾದರೆ ಇದು ಬಹಳ ಕಷ್ಟ. ಉಪವಾಸ, ಧ್ಯಾನ, ತಪಸ್ಸು, ಮುಂತಾಗಿ ಕಷ್ಟಗಳನ್ನು ಪಡಬೇಕು. ದ್ವೇಷ ಎಂದಾದರೆ ಬಹಳ ಸುಲಭ. ಉಪವಾಸ, ವ್ರತ, ನಿಯಮ ಯಾವುದೂ ಬೇಡ. ಭಗವಂತನ ವ್ರತ ನಿಯಮ ಎಲ್ಲವನ್ನೂ ಉಲ್ಲಂಘಿಸಿ ಸ್ವೇಚ್ಛಾಚಾರಿಗಳಾಗಿ ಇದ್ದರೆ ಸಾಕು. ಅವರಿಗೂ ಮೋಕ್ಷ. ಶಿಶುಪಾಲ ಹೀಗೆ ಇದ್ದು ಮೋಕ್ಷ ಪಡೆದವ. ಹೀಗಿರಲು ಉಪವಾಸ, ವ್ರತ, ನಿಯಮ, ಭಕ್ತಿ, ಧ್ಯಾನ –ಇವುಗಳೆಲ್ಲಾ ಏತಕ್ಕೆ? ಎಂದು. ಕೆಲವರು ಸಂಶಯ ಪಡುವವರಿದ್ದಾರೆ.

ಅವರಿಗೆ ಶ್ರೀಮದಾಚಾರ್ಯರು ಉತ್ತರಿಸುತ್ತಾರೆ:

'ದ್ವೇಷದಿಂದ ಮೋಕ್ಷ ಪಡೆಯಲು ಸಾಧ್ಯವಿಲ್ಲ'

ಒಂದು ವೇಳೆ ಮೋಕ್ಷವನ್ನು ದ್ವೇಷದಿಂದಲೂ ಪಡೆಯಲಾಗುತ್ತಿದ್ದರೆ; ಋಷಿ ಮುನಿಗಳು ಇಷ್ಟು ಕಷ್ಟಗಳನ್ನೇಕೆ ಪಡುತ್ತಿದ್ದರು? ಸುಲಭವಾದ ದ್ವೇಷಮಾರ್ಗ ಇರುತ್ತಿರಲು ಕಠಿಣವಾದ ಭಕ್ತಿಮಾರ್ಗವನ್ನೇಕೆ ಅನುಸರಿಸುತ್ತಿದ್ದರು? ಹತ್ತಿರದ ದಾರಿ (Short cut road) ಇರಲು ಬಳಸುಮಾರ್ಗ ಅನುಸರಿಸುವರೇ?!

ಆದ್ದರಿಂದ ಶಿಶುಪಾಲನಿಗೆ ದ್ವೇಷದಿಂದ ಮೋಕ್ಷ ಆಗಿದೆ ಎನ್ನುವುದು ಎಷ್ಟು ಮಾತ್ರಕ್ಕೂ ಸರಿಯಲ್ಲ. ಶಿಶುಪಾಲ ಉತ್ತಮ ಭಗವದ್ಭಕ್ತ. ಶಾಪದ ನಿಮಿತ್ತದಿಂದ ತಾತ್ಕಾಲಿಕ ದ್ವೇಷ ಮಾಡಿದ. ಭಗವಂತ ಉತ್ತಮ ಭಕ್ತನಾದ ಕಾರಣ ಅದನ್ನು ಲೆಕ್ಕಿಸದೆ ಮುಕ್ತಿ ಕೊಟ್ಟ. ಹೀಗೆ ಅವನ ಮುಕ್ತಿಗೆ ಹಿಂದಿನ ಭಕ್ತಿಯೇ ಕಾರಣ ಎನ್ನಬೇಕೇ ಹೊರತು ಕೇವಲ ಏಕಾಗ್ರತೆಯೇ ಕಾರಣ ಎನ್ನುವುದು ಎಷ್ಟುಮಾತ್ರಕ್ಕೂ ಸರಿಯಲ್ಲ.

ಲೋಕದಲ್ಲಿ ದ್ವೇಷ ಎನ್ನುವುದು ಸಹಜ ಪ್ರವೃತ್ತಿಯಾಗಿ ಕಂಡಿದೆ. ಯಾರಾದರೂ ಸ್ವಲ್ಪ ಅಪಕಾರ ಮಾಡಿದರೂ ಸಾಕು. ಸಾಯುವ ತನಕ ನೆನೆಯುತ್ತೇವೆ. ಎಷ್ಟು

ಉಪಕರಿಸಿದರೂ ಸ್ಮರಣೆಗೇ ಬರುವುದಿಲ್ಲ. ದ್ವೇಷದಿಂದ ಮುಕ್ತಿ ಎನ್ನುವುದಾದರೆ ಎಲ್ಲರಿಗೂ ಮೋಕ್ಷ ಸಿಗಬೇಕಾದೀತು. ಆದ್ದರಿಂದ ಭಕ್ತಿಮಾರ್ಗದ ಹೊರತು ಮುಕ್ತಿಗೆ ಅನ್ಯಮಾರ್ಗಗಳಿಲ್ಲ ಎಂದು ತಿಳಿಯಬೇಕು.

ಶಿಶುಪಾಲನ ಬಿರುನುಡಿ ಕೇಳಿದರೂ ಭಗವಂತ ಮೋಕ್ಷ ಕೊಟ್ಟ ಎನ್ನುವುದು ಅವನ ಕರುಣೆಗೆ ನಿದರ್ಶನ. ತನ್ನ ಭಕ್ತರು ಬೈದರೂ ಅದನ್ನು ಕಡೆಗಾಣಿಸಿ ಮೋಕ್ಷವನ್ನೇ ಕೊಡುತ್ತಾನೆ ಎಂದರೆ ಅವನ ಕರುಣೆ ಎಷ್ಟು!! ಹೀಗೆ ಅರಿತು, ಅವನಲ್ಲಿ ಭಕ್ತಿಯನ್ನೇ ಹೆಚ್ಚು ಹೆಚ್ಚು ಮಾಡಬೇಕು ಎಂದು ಶ್ರೀಮದಾಚಾರ್ಯರು ಇಲ್ಲಿ ಸ್ಪಷ್ಟಪಡಿಸಿದ್ದಾರೆ.

ಹೀಗೆ ನಾರದರ ಮಾತನ್ನು ಕೇಳಿದ ಧರ್ಮರಾಜ ಪುನಃ ಪ್ರಶ್ನಿಸುತ್ತಿದ್ದಾನೆ.

ನಾರದರೇ! ಜಯ–ವಿಜಯರಿಗೆ ಯಾರ ಶಾಪವು? ಶ್ರೀಹರಿಯ ಭಕ್ತರಿಗೂ ಶಾಪ ಉಂಟೇ? ಮುಂತಾಗಿ ಪ್ರಶ್ನಿಸಲು ನಾರದರು ಉತ್ತರಿಸುತ್ತಾರೆ. ಹಿರಣ್ಯಾಕ್ಷನನ್ನು ಶ್ರೀಹರಿಯು ವರಾಹಾವತಾರದಿಂದ ಸಂಹರಿಸಿದ ಕಥೆಯನ್ನೆಲ್ಲಾ ತಿಳಿಸಿ, ಹಿರಣ್ಯಕಶಿಪುವಿನ ಕಥೆಯನ್ನು ಹೇಳುತ್ತಿದ್ದಾರೆ.

## ಹಿರಣ್ಯಕಶಿಪುವಿನ ಕಥೆ

ಧರ್ಮರಾಜ! ಹಿರಣ್ಯಾಕ್ಷನ ಸಂಹಾರವಾಗಲು ಅವನ ಅಣ್ಣನಾದ ಹಿರಣ್ಯಕಶಿಪುವು ಬಹಳ ಸಿಟ್ಟುಗೊಂಡನು. ಕಡುಕೋಪದಿ ತುಟಿ ಕಚ್ಚಿದ. ಕಣ್ಣುಡಿಯಿಂದ ಕಿಡಿಕಾರಿದ. ಸಿಟ್ಟಿನ ದೃಷ್ಟಿಯಿಂದ ತನ್ನ ದುಷ್ಟಕೂಟಕ್ಕೆ ಆದೇಶಿಸಿದ. ತ್ರ್ಯಕ್ಷ ಶಂಬರಾದಿಗಳೇ ಕೇಳಿ! ನನ್ನ ಕಡುವೈರಿಯಾದ ವಿಷ್ಣುವಿನ ಭಕ್ತರು ಭೂಲೋಕ ದಲ್ಲಿ ಎಲ್ಲೆಲ್ಲಿ ಇದ್ದಾರೋ ಎಲ್ಲೆಡೆಯೂ ಹೋಗಿರಿ. ಅವರ ನಿಯಮಗಳನ್ನೆಲ್ಲ ಕೆಡಿಸಿರಿ ತಪಸ್ಸು, ವೇದಾಧ್ಯಯನ, ವ್ರತ, ದಾನ ಎಲ್ಲವನ್ನೂ ಹಾಳುಮಾಡಿರಿ. ದೇವ, ಋಷಿ, ಬ್ರಾಹ್ಮಣರನ್ನು ಹಿಂಸಿಸಿರಿ. ಗ್ರಾಮ ಗ್ರಾಮಗಳಲ್ಲಿಯ ಪ್ರಜೆಗಳಿಗೆ ತೊಂದರೆಯನ್ನುಂಟುಮಾಡಿ. ಬೆಂಕಿ ಹಚ್ಚಿರಿ. ಹೊಡೆಯಿರಿ. ಕೊಲ್ಲಿರಿ. ಎಲ್ಲ ಜನರೂ ಸಂತ್ರಸ್ತರಾಗಿ ಶಾಂತಿಯನ್ನು ಕಳೆದುಕೊಳ್ಳುವಂತೆ ಮಾಡಿ ಎಂದು ಹಿರಣ್ಯಕಶಿಪು ಆದೇಶ ನೀಡಿದ.

ಅದರಂತೆ ಗ್ರಾಮಗ್ರಾಮಗಳನ್ನು ಬಿಡದಂತೆ ಆಕ್ರಮಿಸಿದರು. ಜನರ ನೆಮ್ಮದಿಯನ್ನು ಹಾಳುಮಾಡಿದರು. ಪೂಜೆ, ಪ್ರಾರ್ಥನೆ, ಯಜ್ಞ ಮುಂತಾದ ಧಾರ್ಮಿಕ ಆಚರಣೆಗೆ ಅವಕಾಶವೇ ಇಲ್ಲದಂತಾಯಿತು. ಈ ಮೂಲಕ ಭಗವಂತನ ನೀತಿ ನಿಯಮಗಳನ್ನು ಮುರಿದು ಹಾಕಿದರು. ಜನರೆಲ್ಲರೂ ಅಸ್ವಾತಂತ್ರ್ಯದಿಂದ ಭಯಪಿಷ್ಟಲರಾದರು.

ಹೀಗೆ ಹಿರಣ್ಯಕಶಿಪು ಲೋಕದಲ್ಲಿ ಶಾಂತಿಯೇ ಇಲ್ಲದ ವಾತಾವರಣವನ್ನು ನಿರ್ಮಾಣಮಾಡಿದ.

ಆದರೆ ಹಿರಣ್ಯಕಶಿಪುವಿಗೆ ಇಷ್ಟರಿಂದಲೇ ತೃಪ್ತಿ ಸಿಗಲಿಲ್ಲ. ದೇವತೆಗಳ ಕೂಟಕ್ಕೂ ಮುತ್ತಿಗೆ ಹಾಕಬೇಕು. ದೇವರ ವಿರುದ್ಧ, ದೇವತೆಗಳ ವಿರುದ್ಧ, ಧರ್ಮದ ವಿರುದ್ಧ ಹೋರಾಟವನ್ನು ಮುಂದುವರಿಸಬೇಕೆಂದು ದುರುದ್ದೇಶದಿಂದ ತಪಸ್ಸಿಗೆ ಹೊರಟಿದ್ದಾನೆ.

ಉಗ್ರ ತಪಸ್ಸನ್ನು ಆಚರಿಸಿದ್ದಾನೆ. ತಪಸ್ಸಿನ ಪ್ರಭಾವದಿಂದ ಅವನ ತಲೆಯಿಂದ ಬೆಂಕಿಯ ಜ್ವಾಲೆಗಳು ಹೊರಹೊಮ್ಮುತ್ತಿವೆ. ಭೂಮಿಯೇ ನಡುಗುತ್ತಿದೆ. ಗ್ರಹ ನಕ್ಷತ್ರಗಳು ಬೀಳುತ್ತಿವೆ ಇದನ್ನು ಕಂಡು ದೇವತೆಗಳು, ಸಜ್ಜನರು, ಋಷಿ ಮುನಿಗಳೆಲ್ಲರೂ ಭಯಗ್ರಸ್ತರಾಗಿದ್ದಾರೆ. ಹಿರಣ್ಯಕಶಿಪುವಿಗೆ ಅದು ತಪಸ್ಸಾದರೆ, ಲೋಕಕ್ಕಾದದ್ದು ತಾಪ. ಇದರಿಂದ ಸಂತಾಪಗೊಂಡ ದೇವತೆಗಳು ಬ್ರಹ್ಮದೇವರನ್ನು ಮೊರೆ ಹೊಕ್ಕಿದ್ದಾರೆ. ತಪಸ್ಸು ನಿಲ್ಲುವಂತೆ ಮಾಡಿರೆಂದು ಪ್ರಾರ್ಥಿಸಿದ್ದಾರೆ.

ದುಷ್ಟರ ಸ್ವಭಾವವೇ ಹೀಗೆ. ತಪಸ್ಸುಮಾಡದೆ ಇದ್ದಾಗ ಜನರಿಗೆಲ್ಲ ಉಪದ್ರವ ಕೊಡುವುದು. ತಪಸ್ಸು ಮಾಡಿದರೂ ಅದರ ದುರ್ಬಳಕೆಯಿಂದ ಮತ್ತಷ್ಟೂ ಸಂತಾಪ ಅವರು ಹೇಗಿದ್ದರೂ ಅವರಿಂದ ಸಂತಾಪ ತಪ್ಪಿದ್ದಲ್ಲ.

ಬ್ರಹ್ಮದೇವ ದೇವತೆಗಳ ಪ್ರಾರ್ಥನೆಗೆ ಓಗೊಟ್ಟು ಹಿರಣ್ಯಕಶಿಪುವಿನ ಆಶ್ರಮಕ್ಕೆ ತೆರಳಿದ್ದಾರೆ. ಅಲ್ಲಿ ಹಿರಣ್ಯಕಶಿಪು ಇದ್ದರೂ ಕಾಣಿಸುತ್ತಿಲ್ಲ. ಏಕೆಂದರೆ–

**ನ ದದರ್ಶ ಪ್ರತಿಚ್ಛನ್ನಂ ವಲ್ಮೀಕತೃಣಕೀಚಕೈಃ ।**
**ಪಿಪೀಲಿಕಾಭಿರಾಚೀರ್ಣಮೇದಸ್ತ್ವಙ್ಮಾಂಸಶೋಣಿತಮ್ ॥** — (೭–೩–೧೫)

ಹಿರಣ್ಯಕಶಿಪುವಿನ ಮೈಮೇಲೆಲ್ಲಾ ಹುತ್ತ ಬೆಳೆದಿದೆ. ಹುಲ್ಲು ಹೆಣೆದಿದೆ. ಕಂಟಕ ಬಳ್ಳಿಗಳು ಕಾಣದಂತೆ ಮಾಡಿವೆ. ಅವನ ಮಾಂಸ ಮೇದಸ್ಸುಗಳನ್ನು ಇರುವೆಗಳು ಪಾರಣೆಗೆ ಉಪಯೋಗಿಸಿಕೊಳ್ಳುತ್ತಿವೆ. ಆದರೂ ಛಲಬಿಡದೆ ಏಕಾಗ್ರತೆಯಿಂದ ತಪಸ್ಸು ಮುಂದುವರೆಸಿದ್ದಾನೆ. ಬ್ರಹ್ಮದೇವರಿಗೆ ಆಶ್ಚರ್ಯವಾಗಿದೆ. ಬ್ರಹ್ಮದೇವರ ಮನಸ್ಸು ಕರಗುವಂತಹ ತಪಸ್ಸು ಮಾಡಿದ್ದಾನೆ. ಅವನು ದುರುದ್ದೇಶದಿಂದ ಮಾಡಿರಬಹುದು. ಜಗತ್ತಿಗೆ ಅಪಾಯಕಾರಿಯೇ ಆಗಿರಬಹುದು. ಸಾಧನೆ ಅದ್ಭುತವಾದದ್ದು.

ಬ್ರಹ್ಮದೇವರು ಹೇಳುತ್ತಿದ್ದಾರೆ! ಕಶ್ಯಪಪುತ್ರ! ಎದ್ದೇಳು. ಉತ್ತಮ ತಪಸ್ಸನ್ನು ಮಾಡಿರುವಿ. 'ನೈತತ್ಪೂರ್ವರ್ಷಯಶ್ಚಕ್ರುಃ' ಹಿಂದಿನ ಋಷಿಮುನಿಗಳೂ ಇಂತಹ ತಪಸ್ಸನ್ನು ಮಾಡಿಲ್ಲ. ಪ್ರೀತನಾಗಿದ್ದೇನೆ. ಬೇಕಾದ ವರ ಕೇಳು ಎಂದರು.

## ಸ್ವಾರ್ಥದಿಂದ ಅನರ್ಥ

ಹಿರಣ್ಯಕಶಿಪು ಸ್ವಾರ್ಥವನ್ನು ಬಿಟ್ಟು ಇದರ ಅರ್ಧದಷ್ಟು ತಪಸ್ಸು ಮಾಡಿದರೂ ಸಾಕಿತ್ತು. ಮೋಕ್ಷವೇ ದೊರೆಯುತ್ತಿತ್ತು. ದೇವರಿಗಾಗಿ ಮಾಡದೆ ಅನರ್ಥಕ್ಕೀಡಾದ.

ನಾವೂ ಹೀಗೆಯೇ, ಜೀವನದಲ್ಲಿ ಬೇಕಾದಷ್ಟು ಕಷ್ಟಪಡುತ್ತೇವೆ. ಅದರಲ್ಲಿ ಸ್ವಾರ್ಥ ತುಂಬಿದೆ. ಸ್ವಾರ್ಥಕ್ಕಾಗಿ ಎಷ್ಟು ಕಷ್ಟಪಟ್ಟರೂ ಪ್ರಯೋಜನವಿಲ್ಲ. ಅದು ಹಿರಣ್ಯ

ಕಶಿಪುವಿನ ತಪಸ್ಸಿನಂತೆ ವ್ಯರ್ಥ. ಅದೆಲ್ಲವನ್ನೂ ಹರಿಯ ಪೂಜಾರೂಪವಾಗಿ ನಡೆಸಿದಾಗ ಉನ್ನತಿಯನ್ನು ಹೊಂದುತ್ತೇವೆ

'ಎಲೈ ಭಕ್ತನೇ! ತಪಸ್ಸು ಸಾಕು. ನಿನ್ನ ಪ್ರಾಣ ಕೇವಲ ಎಲುಬಿನಲ್ಲಿದೆ. ಎಂತಹ ತಪಸ್ಸನ್ನು ಮಾಡಿದ್ದಿ' ಎಂದು ಹೃದಯಕರಗಿ 'ವರ ಕೇಳು' ಎನ್ನುತ್ತಿದ್ದಾರೆ.

ಹಿರಣ್ಯಕಶಿಪು ಬ್ರಹ್ಮದೇವರನ್ನು ಕಂಡೊಡನೆಯೇ ಕರಜೋಡಿಸಿದ್ದಾನೆ ಪವಿತ್ರ ಗಾತ್ರನ ಸ್ತೋತ್ರ ಮಾಡಿದ್ದಾನೆ ವರವನ್ನು ಬೇಡುತ್ತಿದ್ದಾನೆ ನೀನು ಸಂಪ್ರೀತನಾದಲ್ಲಿ ನಾನು ಬಯಸಿದ ವರಗಳನ್ನು ನೀಡೆಂದು ವರಗಳ ಪಟ್ಟಿಯನ್ನೇ ಮಾಡಿದ್ದಾನೆ.

ಮೊದಲನೆಯದಾಗಿ, ನೀನು ಸೃಷ್ಟಿಸಿದ ಯಾವುದೇ ಪ್ರಾಣಿಗಳಿಂದ ನಾನು ಸಾಯ ಬಾರದು ಅಂದರೆ ಮರಣವೇ ಬರಬಾರದೆಂಬ ಅಭಿಪ್ರಾಯದಲ್ಲಿ ಕೇಳಿದ. ಕೂಡಲೇ ಬ್ರಹ್ಮ ಆಗಲಿ ಎಂದ. ಇವ ಸ್ವಲ್ಪ ಆಲೋಚಿಸಿದ. ಹೋ ನಾನು ಸಿಕ್ಕಿಬೀಳುತ್ತೇನೆ. ಬ್ರಹ್ಮದೇವರಿಂದ ಸೃಷ್ಟವಾದ ಪ್ರಾಣಿಗಳಿಂದ ಮರಣವಿಲ್ಲ. ಸೃಷ್ಟಿಸಿದ ವ್ಯಕ್ತಿಯಿಂದ ಮರಣ ಬಂದರೆ!! ಹೀಗೆ ಆಲೋಚಿಸಿ ಎಲ್ಲ ಬಗೆಯ ವರಗಳನ್ನೂ ಕೇಳತೊಡಗಿದ.

ನಾನು ಮನೆಯ ಒಳಗೂ ಸಾಯಬಾರದು, ಹೊರಗೂ ಸಾಯಬಾರದು; ಭೂಮಿಯಲ್ಲಿ, ಆಕಾಶದಲ್ಲಿ; ಹಗಲಿನಲ್ಲಾಗಲಿ, ರಾತ್ರಿಯಲ್ಲಾಗಲಿ ಸಾಯಬಾರ ದೆಂದು ಕೇಳಿದ.

(ಹಗಲು ರಾತ್ರಿಗಳನ್ನು ಮಾತ್ರ ಕೇಳಿದ. ಸಂಧ್ಯಾಕಾಲದ ನೆನಪೇ ಆಗಲಿಲ್ಲ. ಏಕೆಂದರೆ ಅವ ಸಂಧ್ಯಾವಂದನೆಯೇ ಮಾಡಿದವನಲ್ಲ.)

ಮನುಷ್ಯರಾಗಲಿ ಮೃಗಗಳಾಗಲಿ; ಸಜೀವರಾಗಲಿ ನಿರ್ಜೀವವಸ್ತುಗಳಾಗಲಿ; ದೇವರಾಗಲಿ ಅಸುರರಾಗಲಿ ಹೀಗೆ ಯಾರಿಂದಲೂ ಮರಣ ಬರಬಾರದೆಂದು ಕೇಳಿದ. ಕೊಟ್ಟ ಮಾತಿಗೆ ತಪ್ಪದೆ ಬಯಸಿದ ವರಗಳನ್ನೆಲ್ಲಾ ಬ್ರಹ್ಮದೇವರು ಕೊಟ್ಟರು.

ಹಿರಣ್ಯಕಶಿಪು, ತನಗೆ ಇನ್ನು ಸಮರಾರಿಲ್ಲವೆಂದು ಭಾವಿಸಿದ. ಎಲ್ಲ ಲೋಕಗಳಿಗೆ ಧಾಳಿ ಇಟ್ಟ. ದಿಕ್ಕು ದಿಕ್ಕುಗಳನ್ನೂ ಮೂರು ಲೋಕಗಳನ್ನೂ ಜಯಿಸಿದ. ಸಹಜ ದುಷ್ಟನಾದ ಅವನನ್ನು ಈಗ ಕೇಳುವವರೇ ಇಲ್ಲದಂತಾಯಿತು. ಹೀಗಾಗಿ ಎಲ್ಲರನ್ನೂ ಜಯಿಸಿ ತನ್ನ ವಶಮಾಡಿಕೊಂಡ. ಸೊಕ್ಕಿನವನಾದ ಹಿರಣ್ಯಕಶಿಪುವಿನ ತೆಕ್ಕೆಗೆ ಸಿಕ್ಕಿದ ದೇವತೆಗಳೆಲ್ಲ ಬೇರೆ ಯಾರು ಗತಿ ಇಲ್ಲವೆಂದು ಭಗವಂತನನ್ನೇ ಮೊರೆಹೊಂದಿದರು. ಏಕಾಗ್ರತೆಯಿಂದ ಭಗವಂತನನ್ನು ಸ್ತೋತ್ರಮಾಡಿದರು.

## ದೇವತೆಗಳಿಗೆ ಅಭಯದಾನ

ಅವರನ್ನು ಕುರಿತು ಭಗವಂತನ ಅಶರೀರವಾಣಿಯಾಗಿದೆ. ಭಗವಂತನು ದೇವತೆಗಳಿಗೆ 'ಮಾ ಭೈಷ್ಟ ವಿಬುಧಶ್ರೇಷ್ಠಾಃ' ಎಂದು ಅಭಯದಾನಮಾಡುತ್ತಿದ್ದಾನೆ. ದೇವಶ್ರೇಷ್ಠರೇ! ಹೆದರಬೇಡಿರಿ. ನಿಮ್ಮೆಲ್ಲರಿಗೂ ಮಂಗಳವಾಗುತ್ತದೆ. ದುಷ್ಟನ ಪೀಡೆಯಿಂದ ದುಃಖಿತರಾದ ನಿಮಗೆ ಸದ್ಯದಲ್ಲಿಯೇ ಶ್ರೇಯಸ್ಸಾಗುತ್ತದೆ. ಭಕ್ತಿಯಿಂದ

ನನ್ನ ಪ್ರಾರ್ಥನೆ, ಚಿಂತನೆಗಳನ್ನು ಚೆನ್ನಾಗಿ ಮಾಡಿದ್ದೀರಿ. ನನ್ನನ್ನು ಅರಿತವರಿಗೆ ಶ್ರೇಯಸ್ಸು ಆಗಿಯೇ ತೀರುತ್ತದೆ.

ಈಗಿನ ಎಲ್ಲ ಭಯೋತ್ಪಾದಕರಿಗಿಂತಲೂ ಭಯಾನಕವಾಗಿ ಬೆಳೆದಿದ್ದ ಹಿರಣ್ಯ ಕಶಿಪು ಇವರೆಲ್ಲರೂ ಅವನ ಮುಂದೆ ಬಹಳ ನಿಕೃಷ್ಟರು. ಅಂತಹ ದುಷ್ಟನಿಂದ ದೇವತೆಗಳು ಭಯಗ್ರಸ್ತರಾದಾಗ ಅಭಯದಾನ ಮಾಡಿದ ಹೆದರಬೇಡಿ. ಸ್ವಲ್ಪ ಕಾಲ ನಿರೀಕ್ಷೆಮಾಡಿ.

**ಯದಾ ದೇವೇಷು ವೇದೇಷು ಗೋಷು ವಿಪ್ರೇಷು ಸಾಧುಷು ।**
**ಧರ್ಮೇ ಮಯಿ ಚ ವಿದ್ವೇಷಃ ಸ ವಾ ಅಶು ವಿನಶ್ಯತಿ ॥** – (ಭಾ. ೭-೪-೨೭)

ಯಾರು ವೇದಗಳಲ್ಲಿ, ದೇವತೆಗಳಲ್ಲಿ, ಗೋವುಗಳಲ್ಲಿ, ಬ್ರಾಹ್ಮಣರಲ್ಲಿ, ಸಜ್ಜನರಲ್ಲಿ, ಧರ್ಮದಲ್ಲಿ, ಭಗವಂತನಲ್ಲಿ ದ್ವೇಷಮಾಡುತ್ತಾರೋ ಅವರಿಗೆ ಎಂದೂ ಉಳಿಗಾಲ ವಿಲ್ಲ ಎಂದು ಭಗವಂತನೇ ಹೇಳುತ್ತಿದ್ದಾನೆ. ಇವುಗಳಲ್ಲಿ ಒಂದನ್ನು ಮಾಡಿದರೂ ಉಳಿಗಾಲವಿಲ್ಲ. ಹೀಗಿರಲು ಹಿರಣ್ಯಕಶಿಪು ಇವೆಲ್ಲವನ್ನೂ ಮಾಡಿದ್ದಾನೆ. ಅವನ ವಿನಾಶ ಯಾರಿಂದಲೂ ತಪ್ಪಿಸಲಾಗದು.

ದೇವತೆಗಳೇ! ಸ್ವಲ್ಪ ಸಮಯದಲ್ಲಿಯೇ ನನ್ನ ಉತ್ತಮ ಭಕ್ತನಾದ ಒಬ್ಬ ರಲ್ಲಿಯೂ ವೈರಮಾಡದ, ಶಾಂತನಾದ, ಮಹಾನುಭಾವನಾದ ಪ್ರಹ್ಲಾದನು ಹಿರಣ್ಯ ಕಶಿಪುವಿಗೆ ಮಗನಾಗಿ ಹುಟ್ಟುತ್ತಾನೆ ಅವನಲ್ಲಿ ಇವನ ದ್ವೇಷ ಎಲ್ಲೆಮೀರಿದಾಗ ಇವನಿಗೆ ಎಷ್ಟೇ ವರವಿದ್ದರೂ ಸಂಹರಿಸುತ್ತೇನೆ ಎಂದು ದೇವತೆಗಳಿಗೆ ಅಭಯದಾನ ಮಾಡಿದ. ದೇವತೆಗಳೆಲ್ಲರೂ ಧೈರ್ಯ ಹೊಂದಿದರು.

## ಪ್ರಹ್ಲಾದನ ಜನನ

ಇಂತಹ ದುರಾತ್ಮನಾದ ಹಿರಣ್ಯಕಶಿಪುವಿಗೆ ನಾಲ್ಕು ಮಂದಿ ಮಕ್ಕಳು ಹುಟ್ಟಿ ದ್ದಾರೆ. ಅವರಲ್ಲಿ ಪ್ರಹ್ಲಾದ ಉತ್ತಮ ಗುಣಗಳಿಂದ ಶ್ರೇಷ್ಠನಾಗಿದ್ದಾನೆ. ಪ್ರಹ್ಲಾದನ ಸದ್ಗುಣ ಸೌಜನ್ಯಗಳ ಬಗ್ಗೆ ವಿಸ್ತಾರವಾಗಿ ಬಣ್ಣಿಸಿದ್ದಾರೆ. ಪ್ರಹ್ಲಾದನ ಗುಣಗಳೆಂದರೆ ನಾವೆಲ್ಲರೂ ಅವಶ್ಯವಾಗಿ ಅನುಸರಿಸಲೇ ಬೇಕಾದ ಆದರ್ಶ ಗುಣಗಳು ಹಿರಣ್ಯ ಕಶಿಪುವಿನ ದುರ್ಗುಣಗಳು ಲೆಕ್ಕಕ್ಕೆ ಸಿಕ್ಕವು. ಅವನಿಗಿಂತ ವಿಲಕ್ಷಣನಾದ ಪ್ರಹ್ಲಾದನ ಸದ್ಗುಣಗಳೂ ಹೇಳಿ ತೀರವು.

ಪ್ರಹ್ಲಾದನಲ್ಲಿ ಸದ್ಗುಣ ಸಂಪನ್ನತೆ ಪ್ರಾಮಾಣಿಕ ನಡತೆ ಭಗವಂತನಲ್ಲಿ ಭಕ್ತಿ ಉತ್ಕೃಷ್ಟವಾಗಿದ್ದವು. ಸಜ್ಜನರ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕು ಇವೆಲ್ಲವೂ ಅಮೋಘವಾಗಿತ್ತು. ಅದನ್ನು ಹೀಗೆ ಬಣ್ಣಿಸುತ್ತಾರೆ–

**ದಾಸವತ್ ಸನ್ನತಾರ್ಯಾಂಘ್ರಿಃ**

ದೊಡ್ಡವರು ಬಂದಾಗ ಸೇವಕರಂತೆ ಅವರ ಪಾದಮುಟ್ಟಿ ನಮಸ್ಕರಿಸುತ್ತಿದ್ದ. ಭಗವಂತನಲ್ಲಿ ಭಕ್ತಿಮಾಡುತ್ತ ಜನರನ್ನೆಲ್ಲಾ ತನ್ನಂತೆಯೇ ಕಾಣುತ್ತಿದ್ದ.

**ಪಿತೃವತ್ ದೀನವತ್ಸಲಃ**

ದುಃಖಿತರಾದ ಸಜ್ಜನರ ವಿಷಯದಲ್ಲಿ ತಂದೆಯಂತೆ ರಕ್ಷಕನಾಗುತ್ತಿದ್ದ. ಗುರುಗಳನ್ನಂತೂ ದೇವರಂತೇ ಕಾಣುತ್ತಿದ್ದ ಇಂತಹ ಅನೇಕ ಸದ್ಗುಣಗಳ ನಿಧಿ ಪ್ರಹ್ಲಾದ. ಆದರ್ಶಭಕ್ತ ಪ್ರಹ್ಲಾದ

ಪ್ರಹ್ಲಾದನಲ್ಲಿ ರೂಪ, ಸಂಪತ್ತು, ಜ್ಞಾನ, ತಾರುಣ್ಯ ಎಲ್ಲವೂ ತುಂಬಿ ತುಳುಕುತ್ತಿವೆ ಜಗತ್ತಿನಲ್ಲಿ ಜನರಿಗೆ ಇವುಗಳು ಒಂದೊಂದೂ ಅನರ್ಥಕರ. ಸಂಪತ್ತು, ರೂಪ ಒಂದೊಂದು ಇದ್ದರೂ ಸಾಕು, ಅಹಂಕಾರದಿಂದ ಬೀಗುತ್ತಾರೆ. ಇನ್ನು ಎಲ್ಲವೂ ಇದ್ದರೆ ದೇವರೇ ಗತಿ. ಆದರೆ ಪ್ರಹ್ಲಾದನಲ್ಲಿ ಇವೆಲ್ಲಾ ಗುಣಗಳಿದ್ದರೂ–

**ಮಾನಸ್ತಂಭವಿವರ್ಜಿತಃ**

ಅಹಂಕಾರ, ಮಾತ್ಸರ್ಯ, ದರ್ಪ ಇವುಗಳ ಸೋಂಕೇ ಇಲ್ಲದೆ ಸೌಜನ್ಯದಿಂದ ಎಲ್ಲರನ್ನೂ ಕಾಣುತ್ತಿದ್ದ. ಇದರೊಟ್ಟಿಗೆ ಭಗವದ್ಭಕ್ತಿಯನ್ನು ಮೈಗೂಡಿಸಿಕೊಂಡಿದ್ದ. ಪರಮಾತ್ಮನ ಸ್ಮರಣೆ ಮಾಡುವಾಗ ಜಗತ್ತನ್ನೇ ಮರೆತು ಆನಂದಪರವಶನಾಗಿ ಹಾಡುತ್ತಾ ಕುಣಿಯುತ್ತಿದ್ದ. ಇಂತಹ ಆದರ್ಶಗುಣಸಂಪನ್ನನಾದ ಉತ್ತಮ ಸುಪುತ್ರ ಪ್ರಹ್ಲಾದ ಹಿರಣ್ಯಕಶಿಪುವಿಗೆ ಮಗನಾಗಿ ಹುಟ್ಟಿದ್ದಾನೆ. ಇಂತಹ ಮಗನಿಗೂ ಹಿರಣ್ಯಕಶಿಪು ದ್ರೋಹಬಗೆದು ಅನರ್ಥಕ್ಕೆ ಕಾರಣನಾದ ಎಂದು ನಾರದರು ಧರ್ಮರಾಜನಿಗೆ ಹೇಳಲು, ಧರ್ಮರಾಜ ನಾರದರ ಬಳಿ ಪ್ರಶ್ನಿಸುತ್ತಿದ್ದಾನೆ.

ನಾರದರೇ! ಹಿರಣ್ಯಕಶಿಪುವು ಗುಣಶ್ರೇಷ್ಠನಾದ ಪ್ರಹ್ಲಾದನಿಗೆ ಏಕೆ ದ್ರೋಹ ಬಗೆದ? ಲೋಕದಲ್ಲಿ ತಂದೆಯಂದಿರು, ತಮ್ಮ ಮಕ್ಕಳು ಎಷ್ಟೇ ದುಷ್ಟರಾಗಿರಲಿ ಸ್ವಲ್ಪ ನಿಂದಿಸಿಯಾರೇ ವಿನಾ ಥಳಿಸಲಾರರು. ಇನ್ನು ಅವರೇನಾದರೂ ಶಿಷ್ಟರಾಗಿದ್ದಲ್ಲಿ ಅವರು ತೋರಿಸುವ ಪ್ರೀತಿ ವಿಲಕ್ಷಣವಾದದ್ದು. ತಮ್ಮ ಮಕ್ಕಳು ಎಂತಹವರೇ ಆಗಿರಲಿ 'ಹೆತ್ತವರಿಗೆ ಹೆಗ್ಗಣ ಮುದ್ದು' ಎನ್ನುವಂತೆ ವ್ಯಾಮೋಹ ಪ್ರೀತಿಗಳಿಂದ ಕಾಣುತ್ತಾರೆ. ಹೀಗಿರಲು, ಲೋಕವಿಲಕ್ಷಣ ಸದ್ಗುಣನಿಧಿ ಪ್ರಹ್ಲಾದನನ್ನು ಹಿರಣ್ಯಕಶಿಪುವು ಸಂಹರಿಸಲೇ ಹೊರಟನೆಂದರೆ ನಂಬಲಿಕ್ಕೆ ಆಗುವುದಿಲ್ಲ. ಇಂತಹ ಪ್ರವೃತ್ತಿ ಅವನಲ್ಲಿ ಏಕೆ ಬಂತು ವಿವರಿಸಿ ಎಂದು ಕೇಳಿದಾಗ ನಾರದರು ಹೇಳಿದರು –ಅಸುರರೆಲ್ಲರು ಶುಕ್ರಾಚಾರ್ಯರನ್ನು ಪುರೋಹಿತರನ್ನಾಗಿ ಮಾಡಿಕೊಂಡಿದ್ದರು. ಆ ಶುಕ್ರಾಚಾರ್ಯರಿಗೆ ಶಂಡ, ಮರ್ಕ ಎಂಬ ಇಬ್ಬರು ಮಕ್ಕಳಿದ್ದರು ಅವರು ಹಿರಣ್ಯಕಶಿಪುವಿನ ಮನೆಯ ಸಮೀಪದಲ್ಲಿಯೇ ಒಂದು ಗುರುಕುಲವನ್ನು ತೆರೆದಿದ್ದರು. ಪ್ರಹ್ಲಾದನೂ ಅಲ್ಲಿಗೆ ಸೇರಿದ್ದ. ಪ್ರಹ್ಲಾದ ಗುರುಕುಲದಲ್ಲಿ ವಾಸವಾಗಿದ್ದರೂ ಅವನ ಅಭ್ಯಾಸ ಬೇರೆ ಇತ್ತು. ಗುರುಗಳ ಪಾಠಗಳು ಇವನಿಗೆ ರುಚಿಸಲಿಲ್ಲ.

## ಹರಿಭಕ್ತ ಮಗನಲ್ಲಿ ತಂದೆಯ ದ್ವೇಷ

ಒಂದು ದಿನ ತಂದೆ ಹಿರಣ್ಯಕಶಿಪುವು ಪ್ರಹ್ಲಾದನನ್ನು ತೊಡೆಯಲ್ಲಿ ಕೂಡಿಸಿಕೊಂಡು 'ಮಗು! ಇಲ್ಲಿಯ ತನಕ ಅಧ್ಯಯನಮಾಡಿದ ವಿಷಯದಲ್ಲಿ ಯಾವು

ದಾದರೂ ಒಂದು ಉತ್ತಮ ವಿಷಯವನ್ನು ಒಪ್ಪಿಸು' ಎಂದ. ಆ ಸಂದರ್ಭದಲ್ಲಿ ಧೈರ್ಯದಿಂದ, ದೈತ್ಯನ ತೊಡೆಯಲ್ಲಿ ಕುಳಿತ ಪ್ರಹ್ಲಾದ ಹರಿಯ ಹಿರಿಮೆಯನ್ನು ನಿರೂಪಿಸುತ್ತಾನೆ.

ತತ್ಸಾಧುಮನ್ಯೇಽಸುರವರ್ಯ ದೇಹಿನಾಂ
ಸದಾ ಸಮುದ್ವಿಗ್ನಧಿಯಾಮಸದ್‌ಗ್ರಹಾತ್ ।
ಹಿತ್ವಾಽಽತ್ಮಪಾತಂ ಗೃಹಮಂಧಕೂಪಂ
ವನಂ ಗತೋ ಯದ್ಧರಿಮಾಶ್ರಯೇತ ॥ — (ಭಾ. ೭-೫-೫)

ತಂದೆಯೇ! ಜಗತ್ತಿನಲ್ಲಿ ಜನರೆಲ್ಲರೂ ತಮ್ಮ ಅಧಃಪತನಕ್ಕೆ ಕಾರಣವಾದ ಸಂಸಾರ ವೆಂಬ ಹಾಳು ಭೂಮಿಯಲ್ಲಿ ಬಿದ್ದಿದ್ದಾರೆ. ವಿಷಯಪದಾರ್ಥಗಳೆಂಬ ಕತ್ತಲೆಯ ಆಕ್ರಮಣದಿಂದ ದಾರಿಕಾಣದೆ ದುಃಖಿತರಾಗಿದ್ದಾರೆ. ಇಂತಹ ಕತ್ತಲೆಯಿಂದ ಬೆಳಕಿನ ಕಡೆ ಧಾವಿಸಬೇಕು. ಸಜ್ಜನರ ಸಹವಾಸವೆಂಬ ಬೆಳಕಿನಾಂಗಣಕ್ಕೆ ಬರಬೇಕು. ಅವರೊಟ್ಟಿಗೆ ಸೇರಿ ಮೈಮರೆತು ಹರಿಯ ಚರಣಗಳನ್ನೇ ಸ್ಮರಿಸಬೇಕು.

ಇದಕ್ಕಿಂತ ಮಿಗಿಲಾದ ತತ್ವವನ್ನು ನಾನು ತಿಳಿದಿಲ್ಲ ಎಂದು ನುಡಿದನು.

ಮಗನ ನುಡಿಯನ್ನು ಕೇಳಿದ ಹಿರಣ್ಯಕಶಿಪು ಅಸಮ್ಮತಿಯ ಅಟ್ಟಹಾಸಗೈದ. ಆಚಾರ್ಯರಿಗೆ ಎಚ್ಚರಿಕೆ ನೀಡಿ, 'ನನ್ನ ಮಗನಿಗೆ ವಿಷ್ಣುಪಕ್ಷದವರು ಬೋಧಿಸದಂತೆ ಎಚ್ಚರವಹಿಸಿ' ಎಂದು ಹೇಳಿ ಕಳುಹಿಸಿದ.

ಹೀಗೆ ಪ್ರಹ್ಲಾದ ಹಿರಣ್ಯಕಶಿಪುವಿನ ವಿದ್ಯಾಭ್ಯಾಸಪದ್ಧತಿಯನ್ನು ಒಪ್ಪಲಿಲ್ಲ. ದೈತ್ಯಗುರುಕುಲದಲ್ಲಿ ತನ್ನದೇ ಆದ ಆಧ್ಯಾತ್ಮಿಕ ಸಂಸ್ಕಾರವನ್ನು ಬೆಳೆಸುವ ಶಿಕ್ಷಣದ ಬಗ್ಗೆ, ಹಿರಣ್ಯಕಶಿಪುವಿನ ವಿರುದ್ಧವಾಗಿ ಒಂದು ಬಂಡಾಯವನ್ನೇ ಮಾಡಿದ.

ಗುರುಕುಲದ ಗುರುಗಳಿಗೆ ಪರಮಾಶ್ಚರ್ಯವಾಗಿದೆ. ಪ್ರಹ್ಲಾದನಿಗೆ ದೇವರ ಬಗ್ಗೆ, ಧರ್ಮದ ಬಗ್ಗೆ, ತತ್ವಜ್ಞಾನದ ಬಗ್ಗೆ ನಾವು ಹೇಳದಿದ್ದರೂ ಅವನು ಅವುಗಳ ಜ್ಞಾನ ಹೇಗೆ ಹೊಂದುತ್ತಿದ್ದಾನೆ ಎಂದು, ಎಲ್ಲಾ ಅಧ್ಯಾಪಕರಿಗೂ ಪ್ರಹ್ಲಾದ ಒಂದು ಬಗೆಹರಿಯದ ಸಮಸ್ಯೆಯಾಗಿ ನಿಂತ.

ಇವನು ನಾವು ತಿಳಿಸದೆಯೂ ಇವುಗಳ ಬಗ್ಗೆ ತಿಳಿದಿದ್ದಾದರೂ ಹೇಗೆ? ಎಂದು ಆಶ್ಚರ್ಯದಿಂದ ಪ್ರಹ್ಲಾದನ ಬಳಿ ಪ್ರಶ್ನಿಸುತ್ತಾರೆ–

ಪ್ರಹ್ಲಾದ! ಇದೆಲ್ಲವನ್ನು ನಿನಗೆ ಯಾರು ಹೇಳಿಕೊಟ್ಟರು? ಇಲ್ಲಿಯ ಯಾವ ಮಕ್ಕಳಿಗೂ ಬಾರದ ವಿಷ್ಣುವಿಷಯಕ ಆಲೋಚನೆ ನಿನಗೆ ಮಾತ್ರ ಹೇಗೆ ಬಂತು?! ನಮಗೂ ಇಂತಹ ಆಲೋಚನೆಯೇ ಇಲ್ಲ. ಇದು ನಿನ್ನ ಸಹಜ ಬುದ್ಧಿಯೋ! ಅಥವಾ ಯಾರಾದರೂ ಹೇಳಿಕೊಟ್ಟದ್ದೋ! ಹೇಳಿಕೊಟ್ಟವರು ಯಾರು? ಹೇಳಿ ಕೊಡದೆ ನಿನ್ನಂತಹ ಸಣ್ಣಮಕ್ಕಳಿಗೆ ಇಂತಹ ಆಲೋಚನೆ ಬರಲಾರದು. ದೊಡ್ಡವ ರಾದರೆ ಗ್ರಂಥ ಓದಿ ಬರಬಹುದು. ಹೀಗೆ ಚಿಕ್ಕಮಕ್ಕಳನ್ನು ಮೀರುವ ವಿಲಕ್ಷಣವಾದ

ಆಲೋಚನೆ ಹೇಗೆ ಬಂತು?! ಗುರುಗಳಾದ ನಮಗೆ ಎಲ್ಲವನ್ನು ಸತ್ಯವಾಗಿ ಹೇಳು ಎಂದು ಕೇಳಿದಾಗ ಪ್ರಹ್ಲಾದ ಉತ್ತರಿಸುತ್ತಿದ್ದಾನೆ–

ಸೂಜಿಕಲ್ಲು ಇದೆ. ಆ ಸೂಜಿಕಲ್ಲಿನ ಸುತ್ತ ಕಬ್ಬಿಣವು ವೇಗವಾಗಿ ತಿರುಗುತ್ತದೆ ಹೇಗೆ ತಿರುಗುತ್ತದೆ? ನೀವೇ ಉತ್ತರಿಸಿ. ಕಬ್ಬಿಣ ತನ್ನಷ್ಟಕ್ಕೇ ತಿರುಗಲಾರದು. ತಿರುಗಿಸುವವರು ಯಾರೂ ಇಲ್ಲ. ಆದರೂ ಸೂಜಿಕಲ್ಲಿನ ಸುತ್ತ ಕಬ್ಬಿಣ ತಿರುಗು ತ್ತಿರುತ್ತದೆ. ಅದರಂತೆ ಭಗವಂತ ಸೂಜಿಕಲ್ಲಿನ ಹಾಗೆ ಇದ್ದಾನೆ. ನಾನು ಕಬ್ಬಿಣದ ಸ್ಥಾನದಲ್ಲಿದ್ದೇನೆ. ಸೂಜಿಕಲ್ಲು ತನ್ನೆಡೆ ಕಬ್ಬಿಣವನ್ನು ಸೆಳೆಯುವಂತೆ, ಭಗವಂತನೇ ತನ್ನೆಡೆ ನನ್ನನ್ನು ಸೆಳೆಯುತ್ತಿದ್ದಾನೆ. ನಾನಾಗಿಯೇ ಹೋಗಲೂ ಸಾಧ್ಯವಿಲ್ಲ. ನನ್ನನ್ನು ದೂಡುವವರು ಯಾರೂ ಇಲ್ಲ. ಚಕ್ರ ತಿರುಗುವಂತೆ ಚಕ್ರಪಾಣಿಯಾದ ಭಗವಂತನೇ ನನ್ನ ಮನಸ್ಸು ಅವನೆಡೆ ಸುತ್ತುವಂತೆ ಮಾಡುತ್ತಿದ್ದಾನೆ.

ಆದ್ದರಿಂದ ಯಾರ ಯಾರ ಮೇಲೋ ಸಂಶಯಪಟ್ಟು ಅವರಿಗೆ ಶಿಕ್ಷೆ ಹಿಂಸೆಗಳನ್ನು ಕೊಡುವುದು ಬೇಡ. ಯಾರೂ ನನ್ನನ್ನು ಈ ವಿಷಯದಲ್ಲಿ ಬಲಾತ್ಕರಿಸಿಲ್ಲ. ಇದಕ್ಕೆಲ್ಲಾ ಭಗವಂತನೇ ಕಾರಣ ಎಂದು ನಿರ್ಭೀತಿಯಿಂದ ಪ್ರಹ್ಲಾದ ಉತ್ತರಿಸಿದ.

ಶಂಡ, ಮರ್ಕರು ಸಿಡಿದೆದ್ದರು. ಹೊಡೆದರು, ಹೆದರಿಸಿದರು. ಅನೇಕ ವಿಧವಾದ ಶಿಕ್ಷೆಯನ್ನು ನೀಡಿದರು. ಅವನ ಆಸಕ್ತಿಗೆ ತಣ್ಣೀರೆರಚಿ ಬೇಡವಾದ ಪಾಠಗಳನ್ನೇ ತಲೆಗೆ ತುರುಕಿದರು. 'ಹಿರಣ್ಯಕಶಿಪುವಿಗೆ ಸಮ್ಮತವಾದ ಪಾಠಗಳನ್ನೆಲ್ಲಾ ಪ್ರಹ್ಲಾದ ತಿಳಿದಿದ್ದಾನೆ' ಎಂದು ಅವನನ್ನು ತಂದೆಯ ಬಳಿ ಕರೆದುಕೊಂಡು ಹೋದರು.

ಪ್ರಹ್ಲಾದ ಬಂದ. ತಂದೆಗೆ ವಂದಿಸಿದ. ನಮಸ್ಕರಿಸಿದ. ತಂದೆ ಮಗನನ್ನು ಆಲಿಂಗಿಸಿ ತೊಡೆಯಮೇಲೆ ಕುಳ್ಳಿರಿಸಿಕೊಂಡ. ಆನಂದದಿಂದ ಮಗನನ್ನು ಕೇಳುತ್ತಿದ್ದಾನೆ: ಪ್ರಹ್ಲಾದ! ಇಷ್ಟು ಸಮಯ ನೀನು ಗುರುಗಳ ಹತ್ತಿರ ಏನೇನು ಹೊಸ ಹೊಸ ವಿಷಯಗಳನ್ನು ಅಧ್ಯಯನ ಮಾಡಿರುವಿ. ಅವುಗಳಲ್ಲಿ ಸಾರಭಾಗವನ್ನು ಅನುವಾದ ಮಾಡು ಎಂದು ಹೇಳಿದಾಗ ಪ್ರಹ್ಲಾದ ಉತ್ತರಿಸಿದ.

**ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ ।**
**ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥**

ನಾನು ಇಷ್ಟರವರೆಗೆ ಕಲಿತದ್ದರಲ್ಲಿ ಮುಖ್ಯವಾದದ್ದು ಭಗವಂತನಲ್ಲಿ ಮಾಡಬೇಕಾದ ನವವಿಧ ಭಕ್ತಿ:

೧) ಭಗವಂತನ ಕಥೆಯನ್ನು ಕೇಳುವುದು.
೨) ಭಗವಂತನ ಸ್ತೋತ್ರವನ್ನು ಹೇಳುವುದು.
೩) ಭಗವಂತನ ಸ್ಮರಣೆ ತಪ್ಪದೆ ಮಾಡುವುದು.
೪) ಭಗವಂತನ ಪಾದಸೇವನೆ (ತೀರ್ಥಕ್ಷೇತ್ರ ಯಾತ್ರೆ).
೫) ಹರಿಪೂಜೆ
೬) ಸಾಷ್ಟಾಂಗನಮನ.
೭) ಅವನ ದಾಸ್ಯ.

೮) ಭಗವಂತನಲ್ಲಿ ಸ್ನೇಹ.

೯) ಮೋಕ್ಷದಲ್ಲಿಯೂ ಭಗವಂತನ ದಾಸನಾಗಿದ್ದೇನೆ ಎಂಬ ಚಿಂತನೆ.

ಹೀಗೆ ನಾನು ಕಲಿತದ್ದರಲ್ಲಿ ಮುಖ್ಯವಾದದ್ದು 'ಪರಮಾತ್ಮನಲ್ಲಿ ನವವಿಧ ಭಕ್ತಿ ಮಾಡಬೇಕು' ಎಂದು.

ಮಗನ ಮಾತು ಕೇಳಿದ ಹಿರಣ್ಯಕಶಿಪು ರೋಷದಿಂದ ಗುಡುಗಿದ. ಶಂಡಾಮರ್ಕರನ್ನು ಹಳಿದ. ಅವರಾದರೂ ವ್ಯಥೆಯಿಂದ ಹಣೆ ಹಣೆ ಚಚ್ಚಿಕೊಂಡರು. ಹೇಳಿಕೊಟ್ಟದ್ದೆಲ್ಲ ವ್ಯರ್ಥವಾಯಿತಲ್ಲಾ ಎಂದು ಚಿಂತಾಕ್ರಾಂತರಾದರು. ಅವರ ಉಪದೇಶವೆಲ್ಲವೂ ಗಿಳಿಪಾಠದಂತಾಯಿತು. ಪಂಜರದ ಗಿಳಿಗೆ ನೂರೆಂಟು ಹೇಳಿಕೊಡುತ್ತೇವೆ. ರಾಮ, ಕೃಷ್ಣ, ಗೋವಿಂದ ಮುಂತಾಗಿ. ಏನು ಹೇಳಿಕೊಟ್ಟರೂ ಗಿಳಿ ಹೇಳುತ್ತದೆ. ಅಕಸ್ಮಾತ್ ಪಂಜರದಿಂದ ತಪ್ಪಿಸಿಕೊಂಡು ಗಗನಕ್ಕೆ ಹಾರಿದರೆ ರಾಮ! ಕೃಷ್ಣ ಎಲ್ಲವೂ ಗೋ....ವಿಂದ. ಹೇಳಿಕೊಟ್ಟ ಪಾಠವನ್ನೆಲ್ಲ ಗಾಳಿಗೆ ತೂರಿ, ಸ್ವಚ್ಛಂದ ಗಗನಮಂಡಲದಲ್ಲಿ ವಿಹರಿಸುತ್ತದೆ. ತನ್ನದೇ ಆದ ಧ್ವನಿ, ತನ್ನದೇ ಆದ ಭಾಷೆಯಲ್ಲಿ ಕಲರವ ಮಾಡುತ್ತದೆ.

ಅದರಂತೆ ಗುರುಗಳೆಲ್ಲ ಏನೇನೋ ಹೇಳಿಕೊಟ್ಟರು. ಪ್ರಹ್ಲಾದನನ್ನು ತಂದೆ ಬಳಿ ಕರೆತಂದರು. ಗುರುಕುಲದಿಂದ ಹೊರಬಂದ ಈ ಕಂದನ ಭಾಷೆಯೇ ಬೇರೆಯಾಗಿತ್ತು. ತನ್ನದೇ ಆದ ಚಿಂತನೆಗಳನ್ನು ತಂದೆಗೆ ಅರುಹಿದ.

ಅಧ್ಯಯನ ಎನ್ನುವುದು ಪಾಂಡಿತ್ಯ ಪ್ರದರ್ಶನಕ್ಕಾಗಿ ಅಲ್ಲ. ಭಕ್ತಿಗೆ ಸಹಕಾರಿ. ನಿರ್ಮಲವಾದ ಭಕ್ತಿಯನ್ನು ಭಗವಂತನಲ್ಲಿ ಮಾಡಿ ನಮ್ಮನ್ನು ನಾವು ಭಗವಂತನಿಗೆ ಅರ್ಪಿಸಿಕೊಳ್ಳುವುದೇ ನಮ್ಮ ಅಧ್ಯಯನದ ಗುರಿಯಾಗಬೇಕು. "ತನ್ಮನ್ಯೇ ಅಧೀತಮುತ್ತಮಮ್" ನಾನು ಇಷ್ಟು ಸಮಯ ಕಲಿತದ್ದು ಇದನ್ನೇ. ಅವನ ಸ್ಮರಣೆ, ಅವನಲ್ಲಿ ಪ್ರೇಮ, ಅವನಲ್ಲಿ ಮಿತ್ರತ್ವ ಮುಂತಾದವುಗಳಿಂದ ಭಕ್ತಿಜೀವನವನ್ನು ನಡೆಸಬೇಕು –ಎಂದು ನಿರ್ಭೀತಿಯಿಂದ, ದುಷ್ಟ ತಂದೆಯ ಬಳಿಯೂ ಶಿಷ್ಟ ನುಡಿಗಳನ್ನು ನುಡಿದಿದ್ದಾನೆ.

## ಸರಿಯಾದ ಪಾಠಕ್ರಮ ಯಾವುದು?

ಪ್ರಹ್ಲಾದನಿಗೆ ಶಂಡಾಮರ್ಕರು ಹೇಳಿದ ಪಾಠಗಳೆಲ್ಲವೂ ತಿಳಿದಿದೆ. ಇವುಗಳನ್ನು ತಿಳಿದಿದ್ದರೂ ಅವನಲ್ಲಿ ಯಾವುದು ಸರಿ, ಯಾವುದು ತಪ್ಪು ಎಂದು ವಿಮರ್ಶಿಸುವ ಶಕ್ತಿ ಇದೆ. ತನ್ನದ್ದೇ ಆದ ಒಂದು ಗುರಿ ಇದೆ. ಹಿರಣ್ಯಕಶಿಪುವಿನ ಪಾಠಕ್ರಮ ತಪ್ಪಾದದ್ದು. ಅದನ್ನು ಇಂತಹ ಸಾತ್ವಿಕ ವಿಚಾರಗಳಿಂದಲೇ ಎದುರಿಸಬೇಕು. ಶಿಕ್ಷಣ ಪದ್ಧತಿಯನ್ನು ಬದಲಿಸಬೇಕು. ಭಗವಂತನ ವಿಚಾರ ಅಧ್ಯಯನದಲ್ಲಿ ಸೇರಲೇಬಾರದು ಎನ್ನುವುದು ತಂದೆಯ ಗುರಿಯಾದರೆ; ಸೇರಿಸಲೇಬೇಕೆಂಬುದು ಪ್ರಹ್ಲಾದನ ಗುರಿ. ಜೀವನದ ಉಸಿರಾಟದಂತೆಯೆ ಹರಿಭಕ್ತಿ ಎನ್ನುವುದು ಜೀವನದ ಧ್ಯೇಯ

ಆಗಬೇಕೆಂಬುದು ಪ್ರಹ್ಲಾದನ ಉದ್ದೇಶ. ಆದ್ದರಿಂದಲೇ ಸ್ಪಷ್ಟವಾಗಿ ಹೇಳಿದ –'ನಾನು ಗುರುಕುಲದಲ್ಲಿ ಕಲಿತದ್ದು ನವವಿಧ ಭಕ್ತಿ' ಎಂದು.

ಮಗನ ಮಾತು ಕೇಳಿದ ಹಿರಣ್ಯಕಶಿಪು, ಸಿಡಿದೆದ್ದ ಬೆಂಕಿಯ ಉಂಡೆಯಂತಾದ. ಶಂಡಾಮರ್ಕರನ್ನು ಬಾಯಿಗೆ ಬಂದಂತೆ ನಿಂದಿಸಿದ. ಅಧ್ಯಯನದ ಬಗ್ಗೆ ನಾನು ವಿಧಿಸಿದ ಶಾಸನವನ್ನು ಮುರಿದು ಇದನ್ನೆಲ್ಲಾ ಏಕೆ ಹೇಳಿಕೊಟ್ಟಿರಿ!! ಎಂದು ನಿಂದಿಸುವಾಗ ಅವರು ಹೇಳಿದರು. 'ನ ಮತ್ಪ್ರಣೀತಂ ನ ಪರ ಪ್ರಣೀತಂ'. ಇದನ್ನು ನಾವೂ ಹೇಳಿಕೊಟ್ಟಿಲ್ಲ. ಮತ್ತೊಬ್ಬರೂ ಬಂದು ಕಿವಿ ಊದಿಲ್ಲ. ಇಲ್ಲಿ ಅವನು ಹೇಳುತ್ತಿರುವ ವಿಷಯಗಳನ್ನು ನಾವು ಇಷ್ಟರವರೆಗೆ ಕೇಳಿಯೇ ಇಲ್ಲ. ನಿನ್ನ ಪಠ್ಯಕ್ರಮವನ್ನು ಉಲ್ಲಂಘಿಸಿ ಇಷ್ಟರತನಕ ಒಂದು ಪಾಠವನ್ನೂ ಮಾಡಿಲ್ಲ. ಆದ್ದರಿಂದ ಇವನು ಹೇಳುತ್ತಿರುವುದೆಲ್ಲಾ ಇವನ ಸ್ವಾಭಾವಿಕ ಬುದ್ಧಿ. ನೈಸರ್ಗಿಕೀಯಂ ಮತಿರಸ್ಯ ರಾಜನ್! ಎಂದು ಹೇಳಿ ಹಿರಣ್ಯಕಶಿಪುವನ್ನು ಸಮಾಧಾನ ಪಡಿಸುವ ಸಂದರ್ಭದಲ್ಲಿ ಪ್ರಹ್ಲಾದ ಹೇಳುತ್ತಿದ್ದಾನೆ–

"ಭಗವಂತನ ಅರಿವು ಭಕ್ತಿ ಇವುಗಳು ಹೇಳಿ ಬರುವ ವಿದ್ಯೆಗಳಲ್ಲ. ಯಾರಿಗೆ ಭಗವದ್ಭಕ್ತರ, ಮಹಾನುಭಾವರಾದ ಸಜ್ಜನರ ಸಂಪರ್ಕ ಆಸಕ್ತಿ ದೈವಿಕವಾಗಿ ಒದಗಿ ಬರುತ್ತದೆಯೋ ಅವರಿಗೆ ಈ ಜ್ಞಾನ ಬರುತ್ತದೆ. ಏತಕ್ಕೆ ಸುಮ್ಮನೆ ಅವರನ್ನು ಥಳಿಸುತ್ತಿದ್ದೀ. ಇದ್ಯಾವೂ ನಿನಗೆ ಅರ್ಥ ಆಗುವುದಿಲ್ಲ. ಭೌತಿಕವಾದ, ಸ್ವಾರ್ಥದಿಂದ ತುಂಬಿದ ವಿಷಯಪದಾರ್ಥಗಳಲ್ಲಿಯೇ ಲೋಲುಪರಾದ ನಿಮ್ಮಂತಹವರಿಗೆ ಅರ್ಥವಾಗುವ ಸಂಗತಿಗಳಲ್ಲ" ಎಂದು ನಿರ್ಭೀತಿಯಿಂದ ನುಡಿದಿದ್ದಾನೆ.

## ಶ್ರೀರಕ್ಷೆ – ಹರಿನಾಮ

ಮಗನ ನುಡಿಯ ಕೇಳಿ ಹಿರಣ್ಯಕಶಿಪುವಿನ ಕೋಪ ತಾರಕಕ್ಕೇರಿತು. ತೊಡೆಯಲ್ಲಿದ್ದ ತನಯನನ್ನು ನೆಲಕ್ಕೆ ತಳ್ಳಿದ. ಭಟರಿಗೆ ಆಜ್ಞಾಪಿಸಿದ. 'ಎಲೈ ದೈತ್ಯರೇ! ಇವನನ್ನು ಕೊಲ್ಲಿರಿ. ಬೆಟ್ಟದಿಂದ ತಳ್ಳಿರಿ. ನಮ್ಮ ಕುಲವಿರೋಧಿಯಾದ ವಿಷ್ಣುವಿನ ದಾಸನಾದ ಇವನ ಅಸುವನ್ನು ಅಪಹರಿಸಿರಿ. ತಂದೆಗೆ ಅಪಕರಿಸುವ ಮಗ ಶತ್ರುಸಮಾನ' ಮುಂತಾಗಿ ಗುಡುಗಿದ.

ಕರುಣೆಹೀನರಾದ ಹಿರಣ್ಯಕಶಿಪುವಿನ ಭಟರು ಪ್ರಹ್ಲಾದನ ಮರ್ಮಸ್ಥಳಗಳನ್ನು ಈಟಿಯಿಂದ ತಿವಿದರು. ಆದರೆ ಹರಿಧ್ಯಾನಾಸಕ್ತನಾದ ಪ್ರಹ್ಲಾದನಿಗೆ ಹಾನಿಯಾಗಲಿಲ್ಲ. ಆನೆಗಳಿಂದ ತುಳಿಸಿದರು. ಹಾವುಗಳಿಂದ ಕಚ್ಚಿಸಿದರು. ಬೆಟ್ಟದ ತುದಿಯಿಂದ ತಳ್ಳಿಸಿದರು. ವಿಷ ತಿನ್ನಿಸಿದರು. ಉಪವಾಸ ಕೆಡವಿದರು. ಬೆಂಕಿಗೆ ಹಾಕಿದರು. ನೀರಿನಲ್ಲಿ ಮುಳುಗಿಸಿದರು. ಪ್ರಾಣಾಪಹಾರಿಯಾದ ಎಲ್ಲಾ ದುಷ್ಕೃತ್ಯಗಳನ್ನೂ ಎಸಗಿದರು. ಇಷ್ಟಾದರೂ ಹರಿಸ್ಮರಣೆ ಎಂಬ ಸಂಪತ್ತಿನಿಂದ ಪ್ರಹ್ಲಾದನು ಎಲ್ಲಾ ವಿಪತ್ತುಗಳನ್ನು ಎದುರಿಸಿದ.

ಮೃತ್ಯುವಿಗೂ ಅಂಜದ ಮಗುವನ್ನು ಕಂಡು ಹಿರಣ್ಯಕಶಿಪು ತತ್ತರಿಸಿದ. ಸಂಹಾರದ ಮಾರ್ಗಗಳೇ ತೋರದೆ ಮುಖ ಕಪ್ಪಿಟ್ಟಿತು. ತಾನು ಬ್ರಹ್ಮದೇವನ ಬಳಿ ಕೇಳಿದ ವರಗಳೆಲ್ಲವೂ ಮಗನ ಪಾಲಿಗೇ ಬಂದಂತಾಯಿತು. ಇಂತಹ ಮಗನಿಗೆ ಹಾನಿ ಮಾಡಹೋಗಿ ತಾನೇ ಎಲ್ಲಿ ಆತ್ಮಗ್ಲಾನಿಗೆ ತುತ್ತಾಗುವೆನೋ! ಎಂದು ಆಲೋಚಿಸ ತೊಡಗಿದ. ಶಂಡಾಮರ್ಕರು ಬಂದು ಸಂತೈಸಿದರು. ರಾಜೇಂದ್ರ! ಲೋಕದೊಡೆಯ ನಾದ ನಿನಗೆ ಇಂತಹ ಆಲೋಚನೆಗಳು ಉಚಿತವಲ್ಲ. ಪ್ರಹ್ಲಾದ ಇನ್ನು ಸಣ್ಣ ಹುಡುಗ. ಚಿಕ್ಕ ಮಕ್ಕಳ, ಗುಣ–ದೋಷಗಳು ಕಾಲಕ್ರಮೇಣ ಬದಲಾಗುವವು. ದೊಡ್ಡವನಾದ ಬಳಿಕ ಬುದ್ಧಿ ಬರುತ್ತದೆ. ಅಷ್ಟೇ ಅಲ್ಲದೆ, ನಮ್ಮ ತಂದೆಯಾದ ಶುಕ್ರಾಚಾರ್ಯರು ಸರಿಯಾದ ಉಪದೇಶ ನೀಡುತ್ತಾರೆ. ಚಿಂತಿಸದಿರು ಎಂದರು.

ಶಂಡಾಮರ್ಕರು ಪ್ರಹ್ಲಾದನನ್ನು ಕರೆತಂದರು. ಬೇಡವಾದ ವಿಚಾರಗಳನ್ನೇ ಪ್ರಹ್ಲಾದನಿಗೆ ಉಪದೇಶಿಸಿದರು. ಪ್ರಹ್ಲಾದ ಅವರ ಉಪದೇಶಗಳಿಗೆ ಕಿವಿಗೊಡಲಿಲ್ಲ.

## ಪ್ರಹ್ಲಾದನ ಆಟ: ವೇದಾಂತದ ಪಾಠ

ಒಂದು ದಿನ ಪ್ರಹ್ಲಾದನ ಗೆಳೆಯರಾದ ದೈತ್ಯ ಬಾಲಕರು ಪ್ರಹ್ಲಾದನನ್ನು ಆಟಕ್ಕೆ ಕರೆದರು. ಅಂದು ಆಚಾರ್ಯರುಗಳು ಗೃಹಕೃತ್ಯಕ್ಕಾಗಿ ವಿರಾಮ ಹೇಳಿದ್ದರು ಪಾಠವಿಲ್ಲದಾಗ ಆಟ. ಆಟಕ್ಕೆ ಕರೆದ ಮಕ್ಕಳಿಗೆ ಪ್ರಹ್ಲಾದ ಹೇಳಿದ –ಬೇರೆ ಯಾವು ಆಟವೂ ಬೇಡ, ಪಾಠದ ಆಟವನ್ನೇ ಆಡೋಣ ಬನ್ನಿ ಎಂದ. ದೈತ್ಯಬಾಲಕ ರಿಗೆಲ್ಲರಿಗೂ ಪ್ರಹ್ಲಾದನ ಮೇಲೆ ಉತ್ತಮ ಪ್ರೀತಿ–ವಿಶ್ವಾಸಗಳಿದ್ದವು. ಓಡಿ ಬಂದರು. ವೇದಾಂತ ಪಾಠದ ಆಟದಲ್ಲಿ ಪ್ರಹ್ಲಾದನೇ ಗುರುವಾದ. ದೈತ್ಯಬಾಲಕರೆಲ್ಲರೂ ಶಿಷ್ಯರಾದರು.

ಪ್ರಹ್ಲಾದನ ಮೊದಲನೆಯ ಉಪದೇಶ–

**ಕೌಮಾರ ಆಚರೇತ್ ಪ್ರಾಜ್ಞೋ ಧರ್ಮಾನ್ ಭಾಗವತಾನಿಹ ।**
**ದುರ್ಲಭಂ ಮಾನುಷಂ ಜನ್ಮ ತದಪ್ಯಧ್ರುವಮರ್ಥದಮ್॥** — (೭–೬–೧)

ಮಕ್ಕಳೇ! ಜ್ಞಾನಿಯಾದವ ಬಾಲ್ಯದಿಂದಲೇ ಭಾಗವತಧರ್ಮವನ್ನನುಸರಿಸಬೇಕು. ಏಕೆಂದರೆ ಮನುಷ್ಯಜನ್ಮವು ಅತ್ಯಂತ ದುರ್ಲಭವಾದದ್ದು. ಏನಾದರೂ ಪುರುಷಾರ್ಥ ಗಳನ್ನು ಪಡೆಯುವುದಾದರೆ ಅದು ಮನುಷ್ಯದೇಹದಿಂದ ಮಾತ್ರ.

ಭಗವಂತನ ಪಾದಕಮಲಗಳನ್ನು ಭಕ್ತಿಯಿಂದ ನೆನೆಯಬೇಕು. ಅವನೇ ಸರ್ವ ಸ್ವಾಮಿ ಎಂದು ಪೂಜಿಸಬೇಕು. ಆಗಲೇ ಅವನ ಜನ್ಮ ಸಾರ್ಥಕವಾಗುತ್ತದೆ.

ಸುಖ ದುಃಖಗಳನ್ನು ಅನುಭವಿಸಲು ಮನುಷ್ಯ ಶರೀರವೇ ಬೇಕೆಂದಿಲ್ಲ. ಯಾವ ಶರೀರವನ್ನು ಪಡೆದರೂ ಇವೆರಡು ಬಂದೇ ಬರುತ್ತವೆ. ದುಃಖವು ಬಯಸದೆಯೇ ಬರುವಂತೆ ಸುಖವೂ ಕೂಡ ಬಯಸದೇ ಬರುತ್ತದೆ. ಆದ್ದರಿಂದ ಸಾಂಸಾರಿಕ ಸುಖದುಃಖಗಳಿಗೆ ನಮ್ಮನ್ನು ತೊಡಗಿಸಿಕೊಳ್ಳಬಾರದು.

ಭಗವಂತನಲ್ಲಿ ಭಕ್ತಿಯು ಸುಲಭವಾಗಿ ದೊರೆಯಬಾರದು ಉತ್ತಮ ಯೌವನ ದಲ್ಲಿಯೇ ಭಗವದ್ಭಕ್ತಿಯನ್ನು ಮೈಗೂಡಿಸಿಕೊಳ್ಳಬೇಕು ಮಕ್ಕಳೇ ನೀವೇ ವಿಚಾರ ಮಾಡಿರಿ!!

ಮನುಷ್ಯರಿಗೆ ನೂರು ವರ್ಷ ಆಯುಷ್ಯ. ಅದರಲ್ಲಿ ನಿದ್ರೆಗಾಗಿ ಐವತ್ತು ವರ್ಷ ಗಳನ್ನು ಕಳೆಯುತ್ತೇವೆ. ಬಾಲ್ಯ ಮತ್ತು ಕೌಮಾರಗಳಲ್ಲಿ ಆಟಕ್ಕಾಗಿ ಇಪ್ಪತ್ತು ವರ್ಷ ಕಳೆದುಹೋಗುತ್ತದೆ. ಅಂತ್ಯಕಾಲದಲ್ಲಿ ದೇಹಗಳು ಶಿಥಿಲವಾಗಿ ಇಪ್ಪತ್ತು ವರ್ಷಗಳು ಕಳೆದು ಹೋಗುತ್ತವೆ. ಉಳಿದ ಅಲ್ಪ ಸಮಯವೂ ಮನೆ ಮಡದಿ ಎಂದು ಆಸಕ್ತನಾದವನಿಗೆ ಕಾಮ–ಮೋಹದಿಂದ ಕಳೆದುಹೋದರೆ, ಸಾಧನೆಗೆಲ್ಲಿ ಸಮಯ ಉಳಿಯಿತು? ಇಷ್ಟರ ಮಧ್ಯೆ ಮಿಂಚಿನಂತೆ ಚಂಚಲವಾದ ಅಸ್ಥಿರವಾದ ಬದುಕಿನಲ್ಲಿ ಪ್ರಾಣಪಕ್ಷಿ ಯಾವಾಗಬೇಕಾದರೂ ಹಾರಿಹೋಗಬಹುದು ಪ್ರಯಾಣದಲ್ಲಿ ಸಾಯ ಬಹುದು. ಹಾವು ಚೇಳು ಮುಂತಾದ ವಿಷಜಂತುಗಳು ಕಚ್ಚಿ ಸಾಯಬಹುದು. ಹೀಗೆ ಮೃತ್ಯುವಿನ ಪಾಶ ಕುತ್ತಿಗೆಯಲ್ಲಿಯೇ ಇದೆ. ಹೀಗಿದ್ದರೂ ಕ್ರಿಮಿಗಳು ತಮ್ಮ ಸುತ್ತಲು ಕೋಶವನ್ನು ನಿರ್ಮಿಸಿಕೊಳ್ಳುವಂತೆ ಮನುಷ್ಯರು, ಮಡದಿ, ಮನೆ, ಮಕ್ಕಳು ಮುಂತಾದ ಸ್ನೇಹವೆಂಬ ಕೋಶವನ್ನು ಕಟ್ಟಿಕೊಳ್ಳುತ್ತಾರೆ. ಭಂಗ ಪಡುತ್ತಾರೆ ಇದಕ್ಕೆ ಕಾರಣವಾದರೂ ಸ್ತ್ರೀಯರ ಚಂಚಲ ಲೋಚನಗಳು. ಸ್ತ್ರೀಯರ ಕಾಮಪೂರಿತ ಕುಡಿಗಣ್ಣಿನ ನೋಟಕ್ಕೆ ಕ ಪ್ಪುಬೀಳುತ್ತಾರೆ. ತಿಳಿದವರೂ ಇವರಿಗೆ ತಮ್ಮನ್ನು ಮಾರಿ ಕೊಳ್ಳುತ್ತಾರೆ.

ಮಕ್ಕಳೇ! ಈ ಸತ್ಯವಿಷಯಗಳನ್ನು ನೀವೂ ಅರ್ಥಮಾಡಿಕೊಳ್ಳಿ. ನಿತ್ಯ ನೂತನ ಸುಖಕ್ಕಾಗಿ ನಾರಾಯಣನನ್ನು ಸ್ಮರಿಸಿರಿ.

'ನ ಹ್ಯಚ್ಯುತಂ ಪ್ರೀಣಯತೋ ಬಹ್ವಾಯಾಸಃ' –"ಹರಿಯನ್ನು ಸಂತೋಷ ಗೊಳಿಸಲು ಕಷ್ಟಪಡಬೇಕಿಲ್ಲ." ನಿಮ್ಮಲ್ಲಿರುವ ಆಸುರ ಸ್ವಭಾವವನ್ನು ಬಿಡಿ. ಎಲ್ಲರ ಅಂತರ್ಯಾಮಿಯಾದ ಭಗವಂತ ಪ್ರೀತನಾಗಲಿ ಎಂದು ಸರ್ವಪ್ರಾಣಿಗಳಲ್ಲಿಯೂ ದಯೆಯನ್ನು ತೋರಿ. ಇಷ್ಟರಿಂದಲೇ ಭಗವಂತ ಒಲಿಯುತ್ತಾನೆ. ಹೀಗೆ ಭಗವಂತ ಪ್ರೀತನಾಗಲು, ನಾವು ಪ್ರಾಮಾಣಿಕರಾದರೆ ಸಾಕು. ಅಪ್ರಾಮಾಣಿಕರಾಗಿ, ಸ್ವಾರ್ಥ ಪರಾಯಣರಾಗಿ ಕ್ರೌರ್ಯಾದಿಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಎಷ್ಟೇ ಭಗವದಾರಾಧನೆಯನ್ನು ನಡೆಸಿದರೂ ಹರಿ ಒಲಿಯಲಾರ!! ಮುಂತಾದ ವಿಷಯ ಗಳನ್ನು ಪ್ರಹ್ಲಾದ ದೈತ್ಯ ಬಾಲಕರಿಗೆ ಅರುಹಿದ.

ಹೀಗೆ ಪ್ರಹ್ಲಾದನು, ಕ್ರೂರಸ್ವಭಾವದಲ್ಲಿ ಬೆಳೆದ ದೈತ್ಯ ಬಾಲಕರ ಆಂತರಿಕ ಸಜ್ಜನಿಕೆಯನ್ನು ಗುರುತಿಸಿ ಕರೆದು ಉಪದೇಶಿಸಿದ. ಭಗವಂತನಲ್ಲಿ ಭಕ್ತಿ, ಸಾಮಾಜಿಕ ಸೇವೆ ಇವೆರಡು –ಪ್ರಹ್ಲಾದನು ಬಾಲ್ಯದಿಂದಲೇ ಕಂಡುಕೊಂಡ ಮುಖ್ಯ ಸಂದೇಶಗಳು. ಸಮಾಜದ ಬಗ್ಗೆ, ದೇವರ ಬಗ್ಗೆ ನಮ್ಮ ಮುಖ್ಯ ಕರ್ತವ್ಯಗಳೇನು ಎಂಬುದನ್ನು ಪ್ರಹ್ಲಾದ ತಿಳಿಸಿದ.

ದೈತ್ಯ ಬಾಲಕರಿಗೆಲ್ಲ ಪ್ರಹ್ಲಾದನ ಉಪದೇಶ ಆಹ್ಲಾದವನ್ನುಂಟುಮಾಡಿತು. ತಮ್ಮ ಗುರುಗಳು ಎಂದೂ ನೀಡದ ಆಧ್ಯಾತ್ಮಿಕ ರಸದೌತಣವನ್ನೇ ಪ್ರಹ್ಲಾದ ನೀಡಿದ. ದೈತ್ಯ ಬಾಲಕರೆಲ್ಲ ಪ್ರಹ್ಲಾದನನ್ನೇ ಗುರುವೆಂದು ಸ್ವೀಕರಿಸಿದರು. ಅವರೆಲ್ಲರು ಪ್ರಹ್ಲಾದನನ್ನು ಕೇಳುತ್ತಿದ್ದಾರೆ– ನಮ್ಮ ಪರಿಸರದಲ್ಲಿಯೇ ಬೆಳೆದವ ನೀನು. ನಮ್ಮ ಗುರುಗಳಿಗೆ ನೀನು ತಿಳಿಸಿದ ವಿಷಯಗಳೇ ತಿಳಿದಿಲ್ಲ. ದೇವರ ಬಗ್ಗೆ ಇಷ್ಟು ನಿಖರವಾಗಿ ಮಗುವಾದ ನಿನಗೆ ತಿಳಿಯಲಾದರೂ ಹೇಗೆ ಸಾಧ್ಯವಾಯಿತು?! ಎಂದು ಕೇಳಲು, ಪ್ರಹ್ಲಾದ ಉತ್ತರಿಸಿದ:

## ಪ್ರಹ್ಲಾದನ ಆತ್ಮಚರಿತೆ

ನನ್ನ ತಂದೆ ತಪಸ್ಸು ಮಾಡಲಿಕ್ಕೆಂದು ಮಂದರಪರ್ವತಕ್ಕೆ ಹೋಗಿದ್ದ. ಆವಾಗ ದೇವತೆಗಳೆಲ್ಲರೂ ಇದೇ ಒಳ್ಳೆಯ ಸಂದರ್ಭವೆಂದು ಭಾವಿಸಿದರು. ಹಿರಣ್ಯಕಶಿಪುವಿನ ಉಪಟಳವಿಲ್ಲ. ಅವನು ತಪಸ್ವಿಯಾಗಿ ಬಂದು ಬಹಳ ಅನರ್ಥವಾಗಲಿಕ್ಕಿದೆ. ಅವನು ಬರುವ ಮುನ್ನ ಅವನು ಸಂಪಾದಿಸಿದ ಶಕ್ತಿಯನ್ನೆಲ್ಲಾ ಭಗ್ನಗೊಳಿಸಲೇಬೇಕೆಂದು ಆಲೋಚಿಸಿದರು. ಹಿರಣ್ಯಕಶಿಪುವಿನ ದೇಶದ ಮೇಲೆ ಆಕ್ರಮಣ ಮಾಡಿದರು. ಇಂದ್ರಾದಿ ದೇವತೆಗಳು ದೈತ್ಯರ ಸೈನ್ಯವನ್ನೆಲ್ಲಾ ವಿಧ್ವಂಸಗೊಳಿಸಿದರು. ದೈತ್ಯರೆಲ್ಲರು ದೇವತೆಗಳಿಗೆ ಹೆದರಿ ಕಾಲಿಗೆ ಬುದ್ಧಿಹೇಳಿದರು. ಆ ಸಂದರ್ಭದಲ್ಲಿ ದೈತ್ಯೇಂದ್ರನ ಪತ್ನಿಯನ್ನು ಇಂದ್ರ ಎಳೆದು ತಂದ. ಎಳೆದು ತಂದದ್ದು ದುರುದ್ದೇಶದಿಂದಲ್ಲ. "ಇವಳು ಗರ್ಭಿಣಿ. ಮುಂದೆ ಇವಳಿಂದ ಹಿರಣ್ಯಕಶಿಪುವಿನಂಥವ ಮತ್ತೊಬ್ಬ ಹುಟ್ಟ ಬಹುದು. ಇವನಿಂದ ಲೋಕಕ್ಕೆ ಹಾನಿಯಾಗಬಹುದು" ಎಂದು ಆಲೋಚಿಸಿ ಅಪಹರಿಸಿದ.

ಇದೇ ಸಂದರ್ಭದಲ್ಲಿ ನಾರದರು ಬಂದರು. ಇಂದ್ರನಿಗೆ ಹೇಳಿದರು –'ದೇವೇಂದ್ರ! ಇವಳ ಸುದ್ದಿಗೆ ಹೋಗಬೇಡ. ಇವಳ ಗರ್ಭದಿಂದ ಹಾನಿಯಿಲ್ಲ. ಲೋಕಕಲ್ಯಾಣವೇ ಅಡಗಿದೆ. ಉತ್ತಮ ಭಗವದ್ಭಕ್ತನ ಗರ್ಭವನ್ನು ಧರಿಸಿದ್ದಾಳೆ. ತಾಯಿ ಮತ್ತು ಮಗು ಈರ್ವರು ನಿರಪರಾಧಿಗಳಾಗಿದ್ದಾರೆ. ಸುಮ್ಮನೆ ಹಿಂಸಿಸು ವುದು ತರವಲ್ಲ' ಎಂದರು. ಅನಂತರ ದೇವೇಂದ್ರ ಉಪೇಂದ್ರನ ಸಂಕಲ್ಪವೆಂದು ಇವರೀರ್ವರನ್ನು ಬಿಟ್ಟುಹೋದ.

## ಗರ್ಭದಲ್ಲಿಯೇ ಉಪದೇಶ

ಪ್ರಹ್ಲಾದ ಹೇಳಿದ –'ನಾರದರು ನನ್ನ ತಾಯಿಯಾದ ಕಯಾದುವನ್ನು ತಮ್ಮ ಆಶ್ರಮಕ್ಕೆ ಕರೆದುಕೊಂಡು ಹೋದರು. ನನ್ನ ತಾಯಿ ಹಿರಿಯರ ಸೇವೆ ಮಾಡಿದಳು. ನಾರದರ ಕರುಣೆ ಹರಿಯಿತು. ಗರ್ಭಸ್ಥನಾದ ನನ್ನನ್ನು ಉದ್ದೇಶವಾಗಿಟ್ಟುಕೊಂಡು ತತ್ತ್ವೋಪದೇಶವನ್ನು ನೀಡಿದರು. ಹೀಗೆ ನನ್ನ ತಾಯಿಯು ಗರ್ಭಿಣಿಯಾಗಿದ್ದಾಗ ನಡೆಸಿದ ಸೇವೆ, ಶ್ರವಣಗಳೇ, ನನ್ನ ಅರಿವಿಗೆ ಕಾರಣವಾಗಿವೆ. ಅವರ ಕುರುಣೆಯಿಂದ ಸತ್ಯದ ಅರಿವು ಉಂಟಾಗಿದೆ" ಎಂದ ಪ್ರಹ್ಲಾದ.

ಪ್ರಹ್ಲಾದನ ನಲ್ನುಡಿಯನ್ನು ಗಮನಿಸಬೇಕು. ನಮ್ಮ ಸ್ತ್ರೀಯರೂ ಗರ್ಭಿಣಿಯರಿದ್ದಾಗ ಉತ್ತಮ ಸುಸಂಸ್ಕೃತ ವಾತಾವರಣದಲ್ಲಿ ಬೆಳೆಯಬೇಕು. ಮಕ್ಕಳಿಗೆ ಗರ್ಭದಲ್ಲಿಯೇ ಸಂಸ್ಕಾರವನ್ನು ನೀಡಬೇಕು. ಆದರಿಂದ ಮುಂದೆ ನಮ್ಮ ಮಕ್ಕಳೂ ಪ್ರಹ್ಲಾದನಂತೆ ಧರ್ಮಸ್ಥಾಪಕರಾಗುತ್ತಾರೆ.

ಹಿಂದೆಯೂ ತಂದೆಯ ಬಳಿ ಪ್ರಹ್ಲಾದ ಇದೇ ಮಾತನ್ನು ಹೇಳಿದ್ದ. 'ನನಗೆ ಯಾರೂ ಬಂದು ಹೇಳಿಲ್ಲ. ನಾನೂ ಓದಿಲ್ಲ. ಉತ್ತಮ ಸಜ್ಜನರ ಸಹವಾಸದಿಂದ ಇಂತಹ ಜ್ಞಾನ ಬಂದಿದೆ. ಕೆಟ್ಟ ವಾತಾವರಣದಲ್ಲಿ ಬೆಳೆದವರಿಗೆ ಈ ಭಕ್ತಿ–ಜ್ಞಾನಗಳ ಅರಿವು ಹೇಗೆ ಸಾಧ್ಯ!?' ಎಂದು ಪ್ರಶ್ನಿಸಿದ್ದ.

ಈ ರೀತಿಯಾಗಿ ತನ್ನ ಆತ್ಮಕಥೆಯನ್ನು ನಿರೂಪಿಸುತ್ತಾ ದೈತ್ಯ ಬಾಲಕರಿಗೆ ಪ್ರಹ್ಲಾದ ಹೇಳಿದ –'ದೈತ್ಯ ಬಾಲಕರೇ! ನೀವೂ ಸಹ ಭಗವದ್ಭಕ್ತಿ–ಧ್ಯಾನಾದಿಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಿ. ಆದಕ್ಕಾಗಿ ಸಜ್ಜನರ ಸಹವಾಸವನ್ನು ಮಾಡಿರಿ!! ಅದರ ಮೂಲಕ ಭಗವಂತನ ಚರಿತ್ರೆಗಳನ್ನು ಶ್ರವಣ ಮಾಡಿರಿ' ಅವರ ಮೂಲಕವೇ ಭಗವಂತನ ಅರಿವು ಎನ್ನುವುದನ್ನು ದೃಷ್ಟಾಂತದ ಮೂಲಕ ತಿಳಿಸುತ್ತಾನೆ.

## ಮಣ್ಣಿನ ಕಣ್ಣಿಗೆ ಕಾಣಿಸಲಾರ!

ಸ್ವರ್ಣಂ ಯಥಾ ಗ್ರಾವಸು ಹೇಮಕಾರಃ
ಕ್ಷೇತ್ರೇಷು ಯೋಗೈಸ್ತದಭಿಜ್ಞ ಆಪ್ನುಯಾತ್ ।
ಕ್ಷೇತ್ರೇಷು ದೇಹೇಷು ತಥಾಽಽತ್ಮಯೋಗೈಃ
ಅಧ್ಯಾತ್ಮವಿದ್ ಬ್ರಹ್ಮಗತಿಂ ಲಭೇತ ॥ — ಭಾ. ೭-೭-೨೧

ಚಿನ್ನದ ಗಣಿಯಿಂದ ಚಿನ್ನ ತೆಗೆಯುತ್ತಾರೆ. ನಮಗೆ ಚಿನ್ನ ಕಾಣಿಸುತ್ತದೆಯೇ ಇಲ್ಲ. ನಮಗೆ ಕಾಣಿಸುವುದು ಕೇವಲ ಕಲ್ಲು, ಮಣ್ಣು, ಮರಳು ಮಾತ್ರ. ಆದರೆ ಅದೇ ಸ್ಥಳದಲ್ಲಿ ಒಬ್ಬ ವಿಜ್ಞಾನಿ ಪರಿಶೀಲಿಸಿ ಕಲ್ಲುಮಣ್ಣುಗಳ ಮಧ್ಯದಲ್ಲಿರುವ ಚಿನ್ನವನ್ನು ಗುರುತಿಸಿ ಹೊರತೆಗೆಯುತ್ತಾನೆ. ಅದರಂತೆ ನಮ್ಮೆಲ್ಲರಿಗೂ ಕಾಣಿಸುವುದು ಭೌತಿಕ ಜಗತ್ತು ಮಾತ್ರ. ವಿಷಯಪದಾರ್ಥಗಳು ಸುಖಸಾಮಗ್ರಿಗಳು ಮಾತ್ರ ಕಾಣಿಸುತ್ತವೆ. ಈ ಭೌತಿಕ ಪ್ರಪಂಚದಲ್ಲಿ ಅಡಗಿದ ಭಗವತ್ತತ್ತ್ವವನ್ನು ಜ್ಞಾನಿಗಳು ಮಾತ್ರ ಕಾಣುತ್ತಾರೆ. ತಜ್ಞನಾದ ವಿಜ್ಞಾನಿ ಬಂಗಾರವನ್ನು ಕಂಡುಹಿಡಿಯುವಂತೆ, ಭೌತಿಕ ಪ್ರಪಂಚದಲ್ಲಿ ಅಡಗಿದ ಭಗವಂತನೆಂಬ ಅನರ್ಘ್ಯ ಬಂಗಾರವನ್ನು ತತ್ತ್ವಜ್ಞಾನಿಗಳು ಮಾತ್ರ ತಿಳಿಯುತ್ತಾರೆ.

ಇದಕ್ಕೆ ಸಂವಾದಿಯಾದ ಜಿಜ್ಞಾಸೆಯನ್ನು ಉಪನಿಷತ್ತಿನಲ್ಲಿಯೂ ಕಾಣಬಹುದು.

ಉದ್ದಾಲಕರ ಬಳಿ ಶ್ವೇತಕೇತು ಪ್ರಶ್ನಿಸುತ್ತಾನೆ. ಎಲ್ಲಿದ್ದಾನೆ ದೇವರು!! ತಂದೆ ಕೂಡಲೇ ಉತ್ತರಿಸಲಿಲ್ಲ. ಒಂದು ಪಾತ್ರೆಯಲ್ಲಿ ನೀರು ತಾ ಎಂದರು. ತಂದ. ಉಪ್ಪು ಹಾಕು ಎಂದರು. ಹಾಕಿದ. ಬಳಿಕ, ನಾಳೆ ಬಾ ಉತ್ತರಿಸುವೆ ಎಂದರು. ಮರುದಿವಸ

ಬಂದ. ಉಪ್ಪುನೀರಿನ ಪಾತ್ರೆ ತರಹೇಳಿದರು. ತಂದ ತಂದೆ ಕೇಳಿದರು: ನಿನ್ನೆ ಇದೇ ಪಾತ್ರೆಗೆ ನೀನು ಉಪ್ಪು ಹಾಕಿದ್ದೆಯಲ್ಲವಾ?! ಹೌದು ಹಾಗಿದ್ದರೆ ಆ ಉಪ್ಪನ್ನು ತೋರಿಸು ಎಂದರು. ನೀರನ್ನು ಮೇಲೆ ಕೆಳಗೆ ಮಾಡಿ ನೋಡಿದ. ಉಪ್ಪು ಕಾಣಿಸಲಿಲ್ಲ ಕೈಗೂ ಸಿಗಲಿಲ್ಲ. ವಿಫಲನಾದ. ಅರೆ! ನಿನ್ನೆ ಹಾಕಿದ್ದು ಸಿಗುತ್ತಿಲ್ಲವಲ್ಲ! ಎಂದ. ಹಾಗಾದರೆ ಸ್ವಲ್ಪ ನೀರನ್ನು ಕುಡಿ ಎಂದರು. ಸ್ವಲ್ಪ ಕುಡಿದ. ನಾಕಾಯಿತೆಂದ ಏಕೆ? ಎಂದರು. ಬಹಳ ಉಪ್ಪಾಗಿದೆ. ನೀರಿನ ಎಲ್ಲಾ ಭಾಗವೂ ಉಪ್ಪಾಗಿದೆ ಎಂದ ತಂದೆ ವಿವರಿಸುತ್ತಾರೆ–

ನೀರಿನಲ್ಲಿ ಉಪ್ಪು ಇದೆ. ಕಣ್ಣಿಗೆ ಕಾಣದು. ಕೈಗೆ ಸಿಗದು. ಹಾಗಿದ್ದರೂ, ನೀರಿನ ಕಣಕಣಗಳಲ್ಲಿಯೂ ಉಪ್ಪಿನ ಅಂಶವಿದೆ ಎಂದು ಅನುಭವಕ್ಕೆ ಬರುತ್ತಿದೆ. ಅನುಭವದಿಂದ ಉಪ್ಪನ್ನು ಕಾಣಬಲ್ಲೆವು. ಅದರಂತೆ ಭೌತಿಕ ಪ್ರಪಂಚದಲ್ಲಿ ನಮ್ಮ ಎದುರಿಗೇ ಭಗವಂತ ಇದ್ದರೂ ಕಣ್ಣಿಗೆ ಕಾಣಲಾರ. ಆದರೂ ಪ್ರತಿಯೊಂದು ವಸ್ತುವಿನಲ್ಲಿರುವ ಶಕ್ತಿಯನ್ನು ಭಗವಂತನದ್ದು ಎಂದು ತಿಳಿಯಬಹುದು. ಹೀಗೆ ಅಣುರೇಣುತೃಣಕಾಷ್ಠಪರಿಪೂರ್ಣನಾದ ಗೋವಿಂದ ಎಲ್ಲೆಡೆಯೂ ಇದ್ದರೂ ಭೌತಿಕ ಇಂದ್ರಿಯಗಳಿಂದ ಕಾಣಲಾರೆವು

ದೈತ್ಯ ಬಾಲಕರೇ! ಭಗವಂತನನ್ನು ತಿಳಿಯಲಿಕ್ಕೆ ನೀವು ಪ್ರಯತ್ನಿಸಬೇಕು. ಅದಕ್ಕಾಗಿ ಸತ್ಸಂಗವನ್ನು ಬಯಸಬೇಕು.

## ಹರಿಪ್ರೀತಿಗೆ ಭಕ್ತಿಯೇ ಮೂಲ

ಭಗವಂತನನ್ನು ತಿಳಿಯಲು ಬ್ರಾಹ್ಮಣನಾಗಬೇಕಿಲ್ಲ. ಋಷಿಯಾಗಬೇಕಿಲ್ಲ. ಭಾರೀ ಪಾಂಡಿತ್ಯ ಗಳಿಸಬೇಕಿಲ್ಲ. ದಾನ, ಧರ್ಮ, ಯಜ್ಞ ಯಾವುದೂ ಪ್ರಮುಖವಾದ ವುಗಳಲ್ಲ. ಭಗವಂತ ಒಲಿಯುವುದು ನಿರ್ಮಲವಾದ ಭಕ್ತಿಗೆ ಮಾತ್ರ. ನಿರ್ಮಲವಾದ ಪ್ರೇಮ ಯಾರ ಹೃದಯದಲ್ಲಡಗಿದೆಯೋ ಅವರ ವಿಷಯದಲ್ಲಿ ಭಗವಂತ ಪ್ರಸನ್ನ ನಾಗುತ್ತಾನೆ –ಎನ್ನುತ್ತಾನೆ ಪ್ರಹ್ಲಾದ.

ಪ್ರೀಯತೇಽಮಲಯಾ ಭಕ್ತ್ಯಾ ಹರಿರನ್ಯದ್ ವಿಡಂಬನಮ್ ॥

–ಎಂದು ಹೇಳುತ್ತಾನೆ. ದೈತ್ಯರೇ! ನೀವು ದೈತ್ಯರ ಯೋನಿಯಲ್ಲಿ ಹುಟ್ಟಿರಬಹುದು. ಸ್ತ್ರೀ ಆಗಿರಬಹುದು. ಶೂದ್ರಜಾತಿಯಲ್ಲಿರಬಹುದು. ಗೊಲ್ಲರಾಗಿರಬಹುದು. ಯಾವುದೊ ಪ್ರಾಣಿಯಾಗಿರಬಹುದು. ಭಗವಂತನು ಒಲಿಯುವುದಕ್ಕೆ ಇದಾವುದೂ ಕಾರಣವಲ್ಲ. ಜಾತಿ, ಕುಲ, ಸಂಸ್ಕಾರಗಳ ಬಗ್ಗೆ ಗಂಭೀರವಾಗಿ ಆಲೋಚಿಸುವ ಅಗತ್ಯ ನಿಮಗಿಲ್ಲ! ಭಗವಂತನಲ್ಲಿ ಭಕ್ತಿಯನ್ನು ಮಾಡಿ. ಯಾರಿಗೂ ಹೆದರದೆ 'ಹರಿಯು ರಕ್ಷಿಸುವನು' ಎಂಬ ವಿಶ್ವಾಸದಿಂದ ಆಧ್ಯಾತ್ಮಿಕ ಸಾಧನೆಯನ್ನು ಮಾಡಿರಿ!! ಈ ಮೂಲಕ ಉನ್ನತಿಯನ್ನೂ ಹೊಂದಿರಿ ಎಂದು ಅಮೃತತುಲ್ಯವಾದ ಉಪದೇಶವನ್ನು ದೈತ್ಯಬಾಲಕರಿಗೆ ನೀಡಿದ.

ದೈತ್ಯಬಾಲಕರು ಪ್ರಹ್ಲಾದನ ಉಪದೇಶದಿಂದ ಸಂತೋಷಗೊಂಡರು ಅತ್ಯಂತ ಮುದನೀಡುವ ಪ್ರಹ್ಲಾದನ ಪಾಠವನ್ನೇ ಸ್ವೀಕಾರಮಾಡಿದರು. ಎಲ್ಲರೂ ಪ್ರಹ್ಲಾದನ ಪಾಠವನ್ನೇ ಬಯಸಿ ಅವನ ಬಳಿಯೇ ನಡೆದರು. ಇತ್ತ ಶಂಡಾಮರ್ಕರು ತರಗತಿಗೆ ಬಂದು ನೋಡುತ್ತಿದ್ದಾರೆ. ಯಾವ ಹುಡುಗರೂ ಕಾಣುತ್ತಿಲ್ಲ ಇವರ ಉಪದೇಶ ಗಳನ್ನು ಬಯಸದೆ ಪ್ರಹ್ಲಾದನ ಸುತ್ತಲೂ ಪಾಠಕ್ಕಾಗಿ ಕುಳಿತುಕೊಂಡಿದ್ದಾರೆ. ಗುರುಕುಲಪದ್ಧತಿಯನ್ನೇ ಬದಲಿಸುವಂತಹ ಪವಾಡವನ್ನು ಪುಟ್ಟ ಬಾಲಕ ಪ್ರಹ್ಲಾದ ನಡೆಸಿದ ಶಂಡಾಮರ್ಕರಿಗೆ ಭಯವಾಯಿತು. ಈಗಾಗಲೇ ಎರಡು ಬಾರಿ ಹಿರಣ್ಯ ಕಶಿಪು ನಮ್ಮನ್ನು ಆಕ್ಷೇಪಿಸಿದ್ದಾನೆ. ಈ ಸಂಗತಿಗಳೆಲ್ಲ ತಿಳಿದರೆ ನಮ್ಮ ಪ್ರಾಣವನ್ನೇ ತೆಗೆಯುತ್ತಾನೆ ಎಂದು ಹೆದರಿ ಹಿರಣ್ಯಕಶಿಪುವಿನ ಬಳಿ ಬಂದರು. ಎಲ್ಲರೂ ರಾಜೀನಾಮೆಪತ್ರ(ರೆಸಿಗ್ನೇಷನ್ ಲೆಟರ್)ವನ್ನು ಮುಂದೆ ಇಟ್ಟರು. ದೇವ! ನಮ್ಮಿಂದ ನಿನ್ನ ಕಾನೂನಿನಂತೆ ಪಾಠ ಹೇಳಲು ಸಾಧ್ಯವೇ ಇಲ್ಲ. ಇಷ್ಟು ದಿವಸ ಪ್ರಹ್ಲಾದ ಒಬ್ಬನೇ ನಮಗೆ ಸಮಸ್ಯೆಯಾಗಿದ್ದ. ಇಂದು ಹಾಗಲ್ಲ. ಗುರುಕುಲದ ಮಕ್ಕಳೆಲ್ಲರೂ ಪ್ರಹ್ಲಾದನಂತೆಯೇ ಆಗಿದ್ದಾರೆ. ಆದ್ದರಿಂದ ನಿನ್ನ ಪಾಠಕ್ರಮದಂತೆ ನಮಗೆ ಪಾಠಹೇಳ ಲಾಗದೆಂದರು. ರಾಜಿನಾಮೆಪತ್ರವನ್ನು ಅನಿವಾರ್ಯವಾಗಿ ಶಂಡಾಮರ್ಕರು ಒಪ್ಪಿಸಬೇಕಾಯಿತು.

ಹಿರಣ್ಯಕಶಿಪು ಬೆಂಕಿಯ ಉಂಡೆಯಂತಾದ. ಪ್ರಹ್ಲಾದನ ಮೇಲೆ ಆಕ್ರೋಶವನ್ನೇ ತಾಳಿದ. ಪ್ರಹ್ಲಾದನು ತಾನು ಭಗವಂತನಲ್ಲಿ ಭಕ್ತಿ ಮಾಡುವುದಷ್ಟೇ ಅಲ್ಲದೆ ಇತರ ಮಕ್ಕಳನ್ನೂ ಬದಲಾಯಿಸುತ್ತಿದ್ದಾನೆ. ದೇವರಿಗೆ ಸ್ಥಾನವೇ ಇರಬಾರದೆಂದು ನನ್ನ ವಿಚಾರ. ನನ್ನ ಎಲ್ಲಾ ವಿಚಾರಧಾರೆಗಳಿಗೆ ವಿರುದ್ಧವಾಗಿ ಸಾಗುತ್ತಿರುವ ಇವನಿಗೆ ಎಷ್ಟು ಅಹಂಕಾರ. ಉದ್ಧಟತನ ಮಿತಿಮೀರಿದೆ ಎಂದು ಪ್ರಹ್ಲಾದನನ್ನು ಸೆಳೆದು ತಂದಿದ್ದಾನೆ. ಭಾರೀ ಆಕ್ರೋಶದಿಂದ ಪ್ರಹ್ಲಾದನನ್ನು ಅವಾಚ್ಯ ಶಬ್ದಗಳಿಂದ ನಿಂದಿಸುತ್ತಿದ್ದಾನೆ:

'ಎಲೋ! ದುರ್ವಿನೀತ! ಹಾಳುಬುದ್ಧಿಯವನೇ! ಕುಲಕೆಡುಕನೇ! ಅಹಂಕಾರಿ ಯಾಗಿ ನನ್ನ ಮಾತನ್ನೂ ಮೀರುವ ನಿನ್ನನ್ನು ಈಗಲೇ ಯಮಸದನಕ್ಕೆ ಅಟ್ಟಿಸುತ್ತೇನೆ. ನನ್ನ ಮಾತನ್ನು ಮೀರುವ ನಿನಗೆ ನಾನು ಯಾರೆಂದು ತಿಳಿದಿಲ್ಲ. ನಾನು ಕೋಪಿಸಿ ಕೊಂಡರೆ ಹದಿನಾಲ್ಕು ಲೋಕಗಳೂ ಗಡಗಡ ಎಂದು ನಡುಗುತ್ತವೆ. ಇಂತಹ ನನ್ನ ಮಾತನ್ನೂ ಮೀರುತ್ತಿರುವ ನಿನಗೆ ಯಾರ ಬೆಂಬಲವಿದೆ?!' –ಎಂದು ಕೋಪಾವಿಷ್ಟ ನಾಗಿ ಪ್ರಹ್ಲಾದನನ್ನು ಪ್ರಶ್ನಿಸುತ್ತಿದ್ದಾನೆ. ಆ ಸಂದರ್ಭದಲ್ಲಿಯೂ ಪ್ರಹ್ಲಾದ ಹೆದರದೆ ಉತ್ತರಿಸುತ್ತಿದ್ದಾನೆ.

## ಬಲದಾತ ಭಗವಂತ

**ನ ಕೇವಲಂ ಮೇ ಭವತಶ್ಚ ರಾಜನ್!**
**ಸ ವೈ ಬಲಂ ಬಲಿನಾಂ ಚಾಪರೇಷಾಮ್**

ತಂದೆಯೇ! ನನ್ನ ಬಳಿ ಯಾರ ಬಲವಿದೆ? ಎಂದು ಪ್ರಶ್ನಿಸುತ್ತಿದ್ದಿ. ನನಗೆ ಧೈರ್ಯ ದಿಂದ ಮಾತನಾಡಲು ಯಾರ ಬಲವು ಆಧಾರವಾಗಿದೆಯೋ ಅವನ ಬಲದಿಂದಲೇ

ನೀನು ಹದಿನಾಲ್ಕು ಲೋಕದೊಡೆಯನೆಂದು ಬೀಗುತ್ತಿದ್ದೀ ಕೇವಲ ನನಗೆ ಮಾತ್ರ ಬಲನೀಡಿದವನಲ್ಲ. ನನಗೂ ನಿನಗೂ ಮತ್ತಿತರ ಬಲಿಷ್ಠರಾದ ಎಲ್ಲರಿಗೂ ಬಲ ನೀಡಿದವ ನೀಡುತ್ತಿರುವವ ನೀಡುವವ ಅಂತಃಸ್ಥನಾದ ಭಗವಂತನೇ ಆಗಿದ್ದಾನೆ. ಬ್ರಹ್ಮಾದಿ ಸಮಸ್ತ ಸ್ಥಾವರಜಂಗಮ ಪ್ರಾಣಿಗಳಿಗೂ ಭಗವಂತನೇ ಬಲಪ್ರದನಾಗಿದ್ದಾನೆ. ಅಂತಹ ಭಗವಂತನ ಬಲದಿಂದ ಧೈರ್ಯ ಹೊಂದಿದ್ದೇನೆ. ಅವನ ಮುಂದೆ ನೀನು 'ಕಃ ಪದಾರ್ಥಃ' ಒಂದು ಮಿಣುಕುಹುಳವೂ ಅಲ್ಲ. ಹೀಗಿರಲು ಅವನ ಶಾಸನಗಳನ್ನು ಮೀರಿದ ನಿನ್ನ ಶಾಸನಗಳು ನನಗೇನೂ ಮಾಡಲಾರವು ಎಂದು ಧೈರ್ಯದಿಂದ ಸಿಟ್ಟಿನ ಪ್ರತಿರೂಪದ ಮುಂದೆ ಭಗವತತ್ತ್ವವನ್ನು ಹೇಳಲಾರಂಭಿಸಿದ.

ಪ್ರಹ್ಲಾದ ಈಗಾಗಲೇ ದೈತ್ಯ ಬಾಲಕರಿಗೆ ಉಪದೇಶನೀಡಿ ನಚ್ಚೇತನರಾದ ಅವರ ಮನಸ್ಸನ್ನು ಬದಲಿಸಿದ. ಈಗ ತಂದೆಯ ಬಳಿಯೇ ಹರಿಮಹಿಮೆಗಳನ್ನು ಹೇಳಲಾರಂಭಿಸಿದ್ದಾನೆ ನಚ್ಚೇತನನಾದ ಹಿರಣ್ಯಕಶಿಪು ಇನ್ನೂ ಸ್ವಲ್ಪ ಹೊತ್ತು ಪ್ರಹ್ಲಾದನ ಪ್ರವಚನ ಕೇಳಿದ್ದರೆ ತಾನೂ ಬದಲಾಗುತ್ತಿದ್ದನೋ ಏನೋ!!!

## ನಿಜವಾದ ಜಯ ಯಾವುದು?

ಎಲೈ ತಂದೆಯೇ! ಹದಿನಾಲ್ಕು ಲೋಕಗಳನ್ನೂ ಗೆದ್ದಿದ್ದೇನೆ ಎಂದು ಕೊಚ್ಚಿಕೊಳ್ಳುತ್ತಿದ್ದೀ. ನಾಲ್ಕು ದಿಕ್ಕುಗಳನ್ನೂ ಜಯಿಸಿದ್ದೇನೆ ಎಂದು ಹಾರಾಡುತ್ತಿದ್ದೀ. ಆದರೆ ನಿನ್ನ ಒಳಗೆಯೇ ಆರುಮಂದಿ ದರೋಡೆಕೋರರು ಒಳಹೊಕ್ಕು ನಿನ್ನನ್ನು ಆಕ್ರಮಿಸಿದ್ದಾರೆ. ಅವರನ್ನು ನಿನಗೆ ಗೆಲ್ಲಲಾಗುತ್ತಿಲ್ಲ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಆರು ಮಂದಿ ನಿನ್ನನ್ನು ಮರ್ದಿಸುತ್ತಿದ್ದಾರೆ. ಇವರನ್ನು ಜಯಿಸಲಾಗದವ ಹತ್ತುದಿಕ್ಕುಗಳನ್ನು ಜಯಿಸಿದ್ದಾದರೂ ಹೇಗೆ? ಎಂದು ಪ್ರಹ್ಲಾದನೇ ತಂದೆಯನ್ನು ಪ್ರಶ್ನಿಸುತ್ತಿದ್ದಾನೆ.

ಇದಕ್ಕೊಂದು ಸಂವಾದಿ ಕಥೆ:

ಗ್ರೀಕ್ ದೇಶದ ಸೇನಾಪತಿ ಸೆಲ್ಯೂಕಸ್ ಎಂಬುವನಿದ್ದ. ಆ ದೇಶದಲ್ಲಿ ಅವನಿಗೆ ಉತ್ತಮ ಗೌರವವಿತ್ತು. ಅವನು ಬಂದ ಎಂದರೆ ಎಲ್ಲರೂ ಎದ್ದುನಿಲ್ಲುತ್ತಿದ್ದರು. ಅಷ್ಟು ಪ್ರತಾಪಿಯಾಗಿದ್ದ. ಒಂದು ದಿನ ದಿಗ್ವಿಜಯವನ್ನು ಸಂಪಾದಿಸಿಕೊಂಡು ಸೈನಿಕರೊಟ್ಟಿಗೆ ಬರುತ್ತಿದ್ದ. ಅದೇ ಪರಿಸರದಲ್ಲಿ ಅನೇಕ ಸಂತರು ಆಧ್ಯಾತ್ಮಿಕ ವಿಷಯದಲ್ಲಿ ಚರ್ಚೆ ಮಾಡುತ್ತಿದ್ದರು. ಅಲ್ಲಿಗೆ ಇವ ಬಂದ. ಈ ಸಂತರು ಎದ್ದುನಿಲ್ಲಲೇ ಇಲ್ಲ. ಇವರಿಗೆ ಅವನ ಕಡೆ ಗಮನವೇ ಹರಿಯಲಿಲ್ಲ. ತತ್ತ್ವಚಿಂತನೆಯಲ್ಲಿಯೇ ರತರಾಗಿದ್ದರು

ಹಮ್ಮಿನಿಂದ ದಿಗ್ವಿಜಯ ಸಂಪಾದಿಸಿ ಬರುತ್ತಿದ್ದ ರಾಜನಿಗೆ ಅವಮಾನವಾಯಿತು. ಎಲ್ಲರನ್ನೂ ಕರೆದು ದರ್ಪದಿಂದಲೇ ಕೇಳಿದ– 'ನಾನು ಯಾರೆಂದು ತಿಳಿದಿದ್ದೀರಿ. ರಾಜನಿಗೆ ಎದ್ದುನಿಂತು ಗೌರವಿಸುವ ಸೌಜನ್ಯವಿಲ್ಲವೇ?'

ನಂತರು ನುಡಿದರು: 'ಓಹೋ! ಚಕ್ರವರ್ತಿಗೆ ಗೌರವಿಸಲಿಲ್ಲ. ಹೌದು ನೀನು ಇಷ್ಟುಮಂದಿಗೆ ಯಜಮಾನ. ಗೌರವಿಸಬೇಕಿತ್ತು ಆದರೆ ನಿನಗೂ ಕೆಲವರು ಯಜಮಾನರಿದ್ದಾರೆ. ಅವರು ನಮ್ಮ ಪಾದದ ಬುಡದಲ್ಲಿ ಬಿದ್ದಿದ್ದಾರೆ. ಆದ್ದರಿಂದ ನಿನ್ನ ಯಜಮಾನನಿಗೂ ಸ್ವಾಮಿಯಾದ ನಾವು ನಿನಗೇಕೆ ಗೌರವಿಸಬೇಕು.

ರಾಜನಿಗೆ ಇವರ ಭಾಷೆ ಅರ್ಥವಾಗಲಿಲ್ಲ. ಏನು ಹೇಳುತ್ತಿದ್ದೀರಿ ಎಂದು ಕೇಳಿದ?

ನಂತರು ನುಡಿದರು: 'ಎಲೈ ರಾಜನೇ! ನೀನು ನಿರಂತರ ಕಾರ್ಯಭಾರದಲ್ಲಿ ತೊಡಗಿದ್ದಿ. ಒಂದು ಕ್ಷಣವೂ ಬಿಡುವಿಲ್ಲ. ರಾತ್ರಿ ನಿದ್ರೆಯಿಲ್ಲ. ಇಷ್ಟೆಲ್ಲಾ ಏತಕ್ಕಾಗಿ ಮಾಡುತ್ತಿದ್ದೀಯೇ. ಮತ್ತ್ಯಾವುದಕ್ಕೂ ಅಲ್ಲ. ಕಾಮಕ್ರೋಧಗಳಿಗೆ ವಶನಾಗಿ ಮಾಡು ತ್ತಿರುವಿ. ಭೋಗಲಾಲಸೆಗೆ ನಿನ್ನ ಶ್ರಮ. ಹಾಗಾದರೆ ನಿನ್ನ ಯಜಮಾನರು ಕಾಮಾದಿ ದುರಾಶೆಗಳು. ಅವುಗಳೆಲ್ಲವೂ ನಮಗೆ ಕಾಲಡಿಯಲ್ಲಿ ಕಸಕಡ್ಡಿಗಳಂತೆ ಬಿದ್ದುಕೊಂಡಿವೆ. ಹೀಗೆ ನಿನ್ನ ಯಜಮಾನ ನಮ್ಮ ದಾಸನಾದ ಮೇಲೆ ನೀನು ನಮ್ಮ ದಾಸರ ದಾಸನಾಗಿದ್ದೀಯೆ! ಇಂತಹ ನಿನಗೆ ಗೌರವಿಸಬೇಕೇ? ಎಂದರು.

ರಾಜ ಮರುಮಾತನಾಡದೆ ತಲೆತಗ್ಗಿಸಿ ಹೊರಟುಹೋದ.

ಅದರಂತೆ ಪ್ರಹ್ಲಾದ ತನ್ನ ತಂದೆಗೆ ಹೇಳುತ್ತಿದ್ದಾನೆ. ನೀನು ಇಡೀ ಜಗತ್ತನ್ನೇ ನಡುಗಿಸಬಹುದು. ಆದರೆ ನಿನ್ನ ಒಳಗಿನ ಶತ್ರುಗಳು ನಿನ್ನನ್ನೇ ನಡುಗಿಸುತ್ತಿದ್ದಾರೆ. ಅವರನ್ನು ನಿಯಂತ್ರಿಸಲು ನಿನಗೆ ಸಾಧ್ಯವಾಗುತ್ತಿಲ್ಲ. ಹೀಗಿರಲು 'ಜಗತ್ತನ್ನೇ ನಾನು ಗೆದ್ದವ' ಎಂಬ ನಿನ್ನ ಹಾರಾಟಕ್ಕೆ ಏನು ಅರ್ಥ!! ಎಂದು ಪ್ರಶ್ನಿಸಲು ಹಿರಣ್ಯಕಶಿಪು ಉತ್ತರಿಸುವ ಸಾಮರ್ಥ್ಯವನ್ನೇ ಕಳೆದುಕೊಂಡು ಹೇಳುತ್ತಿದ್ದಾನೆ.

ಎಲೈ! ದುಷ್ಟನೇ! ನಿನಗೆ ನಿಶ್ಚಯವಾಗಿಯೂ ಇಂದು ಸಾವು ಸಮೀಪಿಸಿದೆ. ಅದರಿಂದಲೇ ಈ ರೀತಿಯಾಗಿ ಮಾತನಾಡುತ್ತಿದ್ದಿ.

## ಶ್ರೀಹರಿ ಎಲ್ಲಿದ್ದಾನೆ?!

ಹತಭಾಗ್ಯನೇ! ನನಗಿಂತಲೂ ಮಿಗಿಲಾದ ಜಗದೀಶ್ವರನಿದ್ದಾನೆ ಎಂದು ಹೇಳುತ್ತಿರುವಿಯಲ್ಲಾ! ಅವನು ಎಲ್ಲಿದ್ದಾನೆ ತೋರಿಸು!?

**'ಕ್ವಾಸೌ ಮದನ್ಯೋ ಜಗದೀಶ್ವರೋ ಹರಿಃ'**

ಎಂದು ಕೇಳಿದಾಗ ಪ್ರಹ್ಲಾದ ಉತ್ತರಿಸಿದ. 'ಭಗವಂತ ಎಲ್ಲೆಡೆಯೂ ಇದ್ದಾನೆ. ಅವನಿಲ್ಲದ ಸ್ಥಳವೇ ಇಲ್ಲ' ಎಂದ. ಹಿರಣ್ಯಕಶಿಪುವು –ಹಾಗಾದರೆ 'ಜಡವಾದ ಕಂಬದಲ್ಲಿ ಇದ್ದಾನೆಯೇ?' ಎಂದು ಕಂಬ ತೋರಿಸಿ ಕೇಳಿದ. ಇದ್ದಾನೆ ಎಂಬ ನಿಶ್ಚಲ ಅರಿವು ಪ್ರಹ್ಲಾದನದ್ದಾಗಿತ್ತು. ತಂದೆಯ ರೋಷಾಗ್ನಿ ಪ್ರಜ್ವಲಿಸಿತು. ಪ್ರಹ್ಲಾದ! ಜಗದೊಡೆಯ ಶ್ರೀಹರಿಯೆನ್ನುವುದು ನಿನಗೆ ನಿಶ್ಚಯವಾಗಿದ್ದರೆ ನಿನ್ನ ರುಂಡವನ್ನು ಮುಂಡದಿಂದ ಬೇರ್ಪಡಿಸುತ್ತೇನೆ. ಜಗದ್ರಕ್ಷಕ ನಿನ್ನನ್ನು ರಕ್ಷಿಸಲಿ ನೋಡೋಣ!! ಎಂದು ಕೈಖಡ್ಗ ಮೇಲೆತ್ತಿ ಹೊರಟ. ಕೆಟ್ಟ ದೃಷ್ಟಿಯಿಂದ ಭೂಮಿಯನ್ನು ಮೆಟ್ಟುತ್ತಾ

ದಷ್ಟಪುಷ್ಟವಾದ ಅರಮನೆಯ ಕಂಬವನ್ನು ಮುಷ್ಟಿಯಿಂದ ಕುಟ್ಟಿದ. ತತ್‌ಕ್ಷಣದಲ್ಲಿಯೇ ಕರ್ಣಕಠೋರವಾದ ಧ್ವನಿ ಹುಟ್ಟಿತು ಕೆಚ್ಚೆದೆಯ ದೈತ್ಯನ ಹೃದಯ ಕುಸಿದುಬಿತ್ತು. ಎಚ್ಚರ ತಪ್ಪಿದ. ಸ್ವಚ್ಛ ಹೃದಯದ ಬಾಲಕ ಪ್ರಹ್ಲಾದ ಕಣ್ಣರಳಿಸಿ ನೋಡಿದ. ನರ ಮೃಗಾಕಾರದ ಶ್ರೀಹರಿ ನರಸಿಂಹನಾಗಿ ಪ್ರಕಟಗೊಂಡ ಪ್ರಕಟನಾದದ್ದಾದರೂ ಏತಕ್ಕೆ?!

**ಸತ್ಯಂ ವಿಧಾತುಂ ನಿಜಭೃತ್ಯಭಾಷಿತಂ**
**ವ್ಯಾಪ್ತಿಂ ಚ ಭೂತೇಷ್ವಖಿಲೇಷು ಚಾತ್ಮನಃ ।**
**ಅದೃಶ್ಯತಾತ್ಯದ್ಭುತರೂಪಮುದ್ವಹನ್**
**ಸ್ತಂಭೇ ಸಭಾಯಾಂ ನ ಮೃಗಂ ನ ಮಾನುಷಮ್ ॥**

ತನ್ನ ಭಕ್ತನಾದ ಪ್ರಹ್ಲಾದನ ಮಾತನ್ನು ಸತ್ಯಗೊಳಿಸುವುದಕ್ಕಾಗಿ ಪ್ರಕಟವಾದ. ಪ್ರಹ್ಲಾದ ಹೇಳಿದ್ದ 'ಹರಿ ಇಲ್ಲದ ಸ್ಥಳ ಇಲ್ಲ' ಎಂದು. ಇದನ್ನು ಸತ್ಯಗೊಳಿಸುವುದಕ್ಕಾಗಿ ಪ್ರಕಟಗೊಂಡ.

## ನರಸಿಂಹನ ಮಾತೃಹೃದಯ

ಅದರಂತೆ ಭಗವಂತನ ಪರಮಭಕ್ತರಾದವರು ಬ್ರಹ್ಮದೇವರು ಅವರ ಮಾತನ್ನು ಸತ್ಯಗೊಳಿಸಲೋಸುಗ ಅವತರಿಸಿದ. ಬ್ರಹ್ಮದೇವರ ಬಳಿ, ಹಿರಣ್ಯಕಶಿಪು ವಿಧವಿಧ ವರಗಳನ್ನು ಕೇಳಿದ್ದ –ಹೊರಗೆ ಸಾಯಬಾರದು–ಒಳಗೆ ಸಾಯಬಾರದು, ಹಗಲಿನಲ್ಲಿ ಸಾಯಬಾರದು–ರಾತ್ರಿ ಸಾಯಬಾರದು, ಮನುಷ್ಯರಿಂದಾಗಲಿ–ಪ್ರಾಣಿಗಳಿಂದಾಗಲಿ ಸಾಯಬಾರದು ಎಂದೆಲ್ಲಾ ಕೇಳಿದ್ದ. 'ಆಗಲಿ' ಎಂದು ಬ್ರಹ್ಮದೇವರು ವರ ನೀಡಿದ್ದರು. ಅದಕ್ಕಾಗಿ ವಿಲಕ್ಷಣ ರೂಪದಿಂದ ನರಮೃಗಾಕೃತಿಯಿಂದ ಪ್ರಕಟಗೊಂಡ. ಸಂಧ್ಯಾಕಾಲದಲ್ಲಿ ಪ್ರಕಟಗೊಂಡ. ಸ್ತಂಭದಿಂದ ಉದಿಸಿ ಬಂದ. ಈ ಮೂಲಕ ಬ್ರಹ್ಮದೇವರ ಮಾತಿಗೂ ಬೆಲೆ ನೀಡಿದ.

ಭಗವಂತನು ಅದ್ಭುತವಾದ ನರ–ಮೃಗಾಕೃತಿಯ ರೂಪದಿಂದ ಪ್ರಹ್ಲಾದನ ರಕ್ಷಣೆಗಾಗಿ ಓಡೋಡಿ ಬಂದ. ಭಗವಂತನಿಗೆ ಭಕ್ತರೆಂದರೆ ಎಲ್ಲಿಲ್ಲದ ಪ್ರೀತಿ ತನ್ನನ್ನು ತಾನು ಎಷ್ಟು ಪ್ರೀತಿಸುತ್ತಾನೋ ಅಷ್ಟೇ ಭಕ್ತರನ್ನು ಪ್ರೀತಿಸುತ್ತಾನೆ ಶ್ರೀಕೃಷ್ಣನೇ ನುಡಿದಿದ್ದಾನೆ 'ಜ್ಞಾನೀ ತು ಆತ್ಮೈವ ಮೇ ಮತಮ್' ಎಂದು. ನರಸಿಂಹರೂಪಿ ಭಗವಂತ ಲೋಕದ ತಾಯಂದಿರಂತಿದ್ದಾನೆ.

ಲೋಕದಲ್ಲಿ ತಾಯಂದಿರು ತಮ್ಮನ್ನು ಅನೇಕ ಕೆಲಸಗಳಲ್ಲಿ ತೊಡಗಿಸಿಕೊಂಡಿರುತ್ತಾರೆ. ಕೆಲಸದಲ್ಲಿ ನಿರತಳಾದ ತಾಯಿಗೆ ತನ್ನ ಮಗನೇನಾದರೂ ಅಳುವುದು ಕೇಳಿಸಿದರೆ ಓಡೋಡಿ ಬರುತ್ತಾಳೆ. ಆ ಸಂದರ್ಭದಲ್ಲಿ ತನ್ನ ಯಾವುದೇ ಉಡಿಗೆ ತೊಡಿಗೆಗಳ ಕಡೆ ಗಮನ ಕೊಡುವುದಿಲ್ಲ. ಮೈಯೆಲ್ಲಾ ಮಸಿ ಆಗಿದ್ದರೂ ಅದೇ ವೇಷದಿಂದ ಬರುತ್ತಾಳೆ. ಕಾರಣ ತನ್ನ ಮಗು ಎಂಬ ಕರುಣೆ. ಭಗವಂತನು ಸಹ ಈ ತಾಯಿಯಂತೆ. ತನ್ನ ವಿಕಾರರೂಪವನ್ನೂ ಗಮನಿಸಲಿಲ್ಲ. ಭಕ್ತನ ರಕ್ಷಣೆ ಮುಖ್ಯ ಗುರಿಯಾಗಿತ್ತು. ಥಟ್ಟನೆ ಸ್ತಂಭದಿಂದ ಮೂಡಿಬಂದ. ಪ್ರಹ್ಲಾದನನ್ನು ರಕ್ಷಿಸಿದ.

ಭಗವಂತನು ಸರ್ವಾಂತರ್ಯಾಮಿಯಾಗಿದ್ದಾನೆ. ಜೀವನಿಗೂ ಭಗವಂತನಿಗೂ ಅಜಗಜಾಂತರವಿದೆ.

ಜೀವ, ಸ್ವರ್ಗ, ನರಕ, ಭೂಮಿಗಳಲ್ಲಿ ಅಣುವಾಗಿ ಅಸ್ವತಂತ್ರನಾಗಿ ಸಂಚರಿಸುತ್ತಾನೆ.

ಭಗವಂತ ಎಲ್ಲಾ ವಸ್ತುಗಳಲ್ಲಿಯೂ ಏಕರೂಪನಾಗಿ ಸ್ವತಂತ್ರನಾಗಿ ಇದ್ದಾನೆ ಅನೇಕ ರೂಪಗಳಿಂದ ಪ್ರಕಟನಾಗುತ್ತಾನೆ. ಈ ಸಂಗತಿಯನ್ನು ತಿಳಿಸಲಿಕ್ಕಾಗಿಯೇ ಸ್ತಂಭದಿಂದಲೂ ಪ್ರಕಟಗೊಂಡ. ಅಷ್ಟೇ ಅಲ್ಲದೆ, 'ತನಗೆ ಉಳಿದ ವ್ಯಕ್ತಿಗಳಂತೆ ಜನನ, ಮರಣ, ತಾಯಿ, ತಂದೆ ಮುಂತಾದ ಕಟ್ಟುಪಾಡುಗಳಿಲ್ಲ. ಸ್ವತಂತ್ರ- ಎನ್ನುವ ಸತ್ಯ ಸಂಗತಿಯನ್ನು ಭಕ್ತರಿಗೆ ತಿಳಿಸುವುದಕ್ಕಾಗಿ ಜಡವಾದ ಸ್ತಂಭದಿಂದ ಒಡ ಮೂಡಿದ

ಹೀಗೆ ಭಗವಂತ ತನ್ನ ಐಶ್ವರ್ಯವನ್ನು –ಅಚಿಂತ್ಯಮಹಿಮೆಯನ್ನು– ತನ್ನ ಹುಟ್ಟಿನಲ್ಲಿಯೇ ತೋರಿಸಿದ. ಕಂಭದಲ್ಲಿ ಪ್ರಕಟಗೊಳ್ಳುವ ಮೂಲಕ, ಸರ್ವಾಂತರ್ಯಾಮಿ–ಸರ್ವನಿಯಾಮಕನೆಂದು ಲೋಕದಂತೆ ಜನನಮರಣಗಳಿಲ್ಲವೆಂದು ತೋರಿಸಿದ.

## ವರವ ನಡೆಸಿ, ಅರಿಯ ತರಿದ

ಭಯಂಕರವಾದ ಹರಿಯ ರೂಪವನ್ನು ಕಂಡ ಹಿರಣ್ಯಕಶಿಪು ಒಮ್ಮೆ ನಡುಗಿದ. 'ಓಹೋ! ಇವನು ಸಾಮಾನ್ಯನಲ್ಲ. ನನ್ನ ತಮ್ಮನಾದ ಹಿರಣ್ಯಾಕ್ಷನನ್ನು ಕೊಂದವನೇ! ನನ್ನನ್ನೂ ಸಂಹರಿಸಲು ಬಂದಿದ್ದಾನೆ' ಎಂದು ತಿಳಿದನು. ಇವನ ಹುಡುಕಾಟದಲ್ಲಿಯೇ ಜೀವನ ಕಳೆದ ಹಿರಣ್ಯಕಶಿಪು ಗದೆ ಹಿಡಿದು ಹೊರಟ. ಕೂಡಲೇ ನರಸಿಂಹದೇವರು; ಗರುಡನು ಹಾವನ್ನು ಹಿಡಿಯುವಂತೆ ಪ್ರಚಂಡ ದೈತ್ಯನನ್ನು ಹಿಡಿದು ಹಿಂಡಿದರು. ಮತ್ತೆ ಬಿಟ್ಟರು. ಪುನಃ ಖಡ್ಗ ಚರ್ಮಗಳನ್ನು ಹಿಡಿದು ಬಂದ. ನರಸಿಂಹದೇವ ಸಿಂಹನಾದಗೈದ. ನಾದ ಕೇಳಿದ ಹಿರಣ್ಯಕಶಿಪು ಜಂಬದ ಇಲಿಯಂತೆ ಮೈ ಮುದುಡಿಕೊಂಡ. ನರಸಿಂಹ ದೈತ್ಯೇಂದ್ರನನ್ನು ಇಲಿಯ ಹಿಡಿವಂತೆ ಹಿಡಿದ. ಹೊಸ್ತಿಲ ಬಳಿಗೆ ಎಳೆದು ತಂದ. ತೊಡೆಯಮೇಲೆ ಹಾಕಿಕೊಂಡ. ಸಂಧ್ಯಾಕಾಲದಲ್ಲಿ ಸಂಹರಿಸಿದ

ಇದಕ್ಕೆ ಕಾರಣ ತನ್ನ ಭಕ್ತನಾದ ಬ್ರಹ್ಮದೇವನ ಮಾತು ಉಳಿಸುವುದು. ಅದಕ್ಕಾಗಿ ಒಳಗೂ ಸಂಹರಿಸಲಿಲ್ಲ, ಹೊರಗೂ ಹೋಗಲಿಲ್ಲ. ಹೊಸ್ತಿಲಲ್ಲಿ ನಿಂತ. ಹಗಲಾಗಲಿ ರಾತ್ರಿಯಾಗಲಿ ಕೊಲ್ಲದೆ ಸಂಧ್ಯಾಕಾಲದಲ್ಲಿ ಪ್ರಕಟಗೊಂಡ. ಮನುಷ್ಯನಾಗಲಿ ಪ್ರಾಣಿಯಾಗಲಿ ಆಗದೆ ಉಭಯರೂಪದಿಂದ ಬಂದ. ಹೀಗೆ ಬ್ರಹ್ಮದೇವರ ಪ್ರತಿಯೊಂದು ಮಾತನ್ನೂ ಉಳಿಸಿಕೊಂಡು ಸಂಹರಿಸಿದ. ಈ ಮೂಲಕ 'ಭಗವಂತನಿಗೆ ಭಕ್ತರ ಮೇಲೆ ಎಲ್ಲಿಲ್ಲದ ಕರುಣೆ' ಎನ್ನುವುದನ್ನು ಸಾಬೀತುಗೊಳಿಸಿದ.

ಹೀಗೆ ದುಷ್ಟದೈತ್ಯನ ಎದೆಯನ್ನು ಬಗಿದ. ಉದರದ ಕರುಳನ್ನು ಕೊರಳಿಗೆ ಧರಿಸಿದ. ರಕ್ತದೋಕುಳಿಯಿಂದ ಸ್ನಾನಮಾಡಿದ. ಈ ಮೂಲಕ ಜಗತ್ತಿಗೆ ಮಂಗಳವನ್ನುಂಟುಮಾಡಿದ. ಜಗತ್ತಿನ ಆಪತ್ತೆಲ್ಲವೂ ಪರಿಹಾರವಾಯಿತೆಂದು, ಋಷಿ ಮುನಿಗಳು ದೇವಗಂಧರ್ವರು ಭಗವದ್ಭಕ್ತರೆಲ್ಲರೂ ಆನಂದತುಂದಿಲರಾದರು. ಹೂವಿನ

ಮಳೆ ಸುರಿಸಿದರು. ಬ್ರಹ್ಮಾದಿ ಸಮಸ್ತ ದೇವತಾಗಣವೂ ಬಂದು ಶಿರದಲ್ಲಿ ಕರಜೋಡಿಸಿ ಭಕ್ತಿಯಿಂದ ಸ್ತೋತ್ರಮಾಡಿದರು. ಬ್ರಹ್ಮದೇವರು ಸ್ತುತಿಸುತ್ತಾರೆ. ರುದ್ರದೇವರು, ಇಂದ್ರ, ಸಿದ್ಧರೂ, ವಿದ್ಯಾಧರರೂ, ನಾಗ, ಮನು, ಪ್ರಜಾಪತಿ, ಗಂಧರ್ವ, ಚಾರಣ, ಯಕ್ಷ, ಕಿಂಪುರುಷರೆಲ್ಲರೂ ಪ್ರತ್ಯೇಕ ಪ್ರತ್ಯೇಕವಾಗಿ ಸ್ತೋತ್ರ ಮಾಡುತ್ತಾರೆ. ಯಾರೂ ಸ್ತೋತ್ರಮಾಡಿದರೂ ಸಹ, ನರಸಿಂಹನ ಬೆಂಕಿಕಿಡಿಯ ಕುಡಿಕಣ್ಣುಗಳು ಶಾಂತವಾಗಲೇ ಇಲ್ಲ. ಗಂಟಿಕ್ಕಿದ ಹುಬ್ಬುಗಳನ್ನು ಸಡಿಲುಗೊಳಿಸಲೇ ಇಲ್ಲ. ಯಾರಿಗೂ ಸಮಾಧಾನ ಪಡಿಸಲಾಗಲಿಲ್ಲ.

ಲಕ್ಷ್ಮೀದೇವಿ ಈ ಸಂದರ್ಭದಲ್ಲಿ ಪ್ರಾರ್ಥಿಸಲು ಹೋಗಲಿಲ್ಲ. ಏಕೆಂದರೆ ಭಗವಂತನ ಇಂಗಿತವನ್ನು ಚೆನ್ನಾಗಿ ಬಲ್ಲವಳು ಲಕ್ಷ್ಮೀದೇವಿ. ಭಗವಂತನು ಪ್ರಹ್ಲಾದನ ಸ್ತುತಿಯನ್ನೇ ಬಯಸುತ್ತಿದ್ದಾನೆ. ಆದ್ದರಿಂದ ಪ್ರಹ್ಲಾದನೇ ಅವನ ಬಳಿ ಹೋಗಿ ಸ್ತೋತ್ರಮಾಡಲಿ! ಎಂದು ತಟಸ್ಥಳಾಗಿದ್ದಾಳೆ. ನರಸಿಂಹನನ್ನು ನೋಡಿ ಭಯಪಟ್ಟವಳಂತೆ ನಟಿಸಿದಳು. ಈ ನಟನೆ ಅಸುರಜನ ಮೋಹಕ್ಕಾಗಿ 'ಲಕ್ಷ್ಮೀದೇವಿಯೂ ಭಗವಂತನಿಗೆ ಹೆದರುತ್ತಾಳೆ' ಎಂದು ತಿಳಿಯುವುದು ವಿಪರೀತಜ್ಞಾನವಾಗಿದೆ. ಲಕ್ಷ್ಮೀ ಭಗವಂತನ ವಕ್ಷಸ್ಥಳದಲ್ಲಿಯೇ ಇದ್ದಾಳೆ. ಅವನ ಕರುಣೆಗೆ ಪಾತ್ರಳಾದ ಇವಳಿಗೆ ಹೆದರಿಕೆಯಾದರೂ ಎಲ್ಲಿಂದ?!

ಅನಂತರ ಬಹ್ಮದೇವರೂ ಭಗವಂತನ ಸಂಕಲ್ಪವನ್ನರಿತು ಪ್ರಹ್ಲಾದನಿಗೆ ಹೇಳಿದರು. ಮಗು ಪ್ರಹ್ಲಾದ! ನಿನ್ನ ತಂದೆಯ ವಿಷಯದಲ್ಲಿ ಸಿಟ್ಟುಕೊಂಡ ಶ್ರೀಹರಿಯನ್ನು ನೀನೇ ಸಮಾಧಾನಪಡಿಸು –ಎಂದರು. ಪ್ರಹ್ಲಾದನು ಬ್ರಹ್ಮದೇವರ ಆಜ್ಞೆಯಂತೆ ಮೆಲ್ಲಗೆ ಅಡಿಯನಿಡುತ್ತಾ ನರಸಿಂಹನ ಬಳಿಗೆ ಸಾಗಿದ. ಸಾಷ್ಟಾಂಗ ವೆರಗಿದ. ಭಕ್ತಿಗೆ ವಶನಾಗುವ ನರಸಿಂಹನ ಕಣ್ಣಗಳಿಂದ ಅಮೃತಮಯವಾದ ಕರುಣಾರಸದ ಝೋಡಿ ಹರಿಯಿತು. ಪ್ರಹ್ಲಾದನನ್ನು ಅಪ್ಪಿದ. ಅಭಯ ಕರ ಪುಷ್ಪವ ಶಿರದಲ್ಲಿ ಮುಡಿಸಿದ 'ನಾನೇ ಧನ್ಯ' ಎಂದು ಪ್ರಹ್ಲಾದ ಆನಂದದ ಕಣ್ಣೀರು ಸುರಿಸಿದ ಭಕ್ತಿಯ ಕಟ್ಟೆ ಒಡೆದು ಸ್ತೋತ್ರರೂಪವಾಗಿ ಹರಿಯಿತು.

## ಧೀರ ಬಾಲಕನ ನುಡಿಮುತ್ತು

ಪ್ರಹ್ಲಾದ ಹೇಳುತ್ತಾನೆ–

ಭಗವಂತನೇ ಬ್ರಹ್ಮಾದಿಗಳ ಸ್ತೋತ್ರಕ್ಕೆ ಪಾತ್ರನಾದವ ನೀನು. ಬ್ರಹ್ಮಾದಿಗಳು ನಿರಂತರ ಹಾಡಿ ಹೊಗಳಿದರೂ ನಿನ್ನ ಗುಣದ ಕೊನೆಯನ್ನು ಮುಟ್ಟರು. ಅಂತಹವರಿಂದ ಸ್ತುತಿಸಲ್ಪಡುವವ ಇಂದು ನನ್ನ ಸ್ತುತಿಯನ್ನು ಬಯಸುತ್ತಿದ್ದೀ ಎಂದರೆ ನಿನ್ನ ತುಂಬು ಕರುಣೆಗೆ ಎಣೆ ಇಲ್ಲವೆಂದೇ ಪರಿಗಣಿಸುವೆ. ದೇವಾ!!

**ಮನ್ಯೇ ಧನಾಭಿಜನರೂಪತಪಃ ಶ್ರುತೌಜಃ**
**ತೇಜಃ ಪ್ರಭಾವಬಲಪೌರುಷಬುದ್ಧಿಯೋಗಾಃ ।**
**ನಾರಾಧನಾಯ ಹಿ ಭವಂತಿ ಪರಸ್ಯ ಪುಂಸೋ**
**ಭಕ್ತ್ಯಾ ತುತೋಷ ಭಗವಾನ್ ಗಜಯೂಥಪಾಯ ॥** — (೭–೯–೯)

ನಿನ್ನ ಕರುಣೆ, ಹೃದಯ ಎಲ್ಲವನ್ನೂ ಬಲ್ಲವನಾಗಿದ್ದೇನೆ ಭಗವಂತನೇ ನೀನು ಪ್ರಸನ್ನನಾಗುವುದು ಭಕ್ತಿಗೆ ಮಾತ್ರ. 'ಭಕ್ತ್ಯೈವ ತುಷ್ಟಿಮಭ್ಯೇತಿ ವಿಷ್ಣುರ್ನಾನ್ಯೇನ ಕೇನಚಿತ್' ಬೇರೆ ಯಾವುದರಿಂದಲೂ ಭಗವಂತನು ಪ್ರಸನ್ನನಾಗಲಾರ.

ನಮ್ಮಲ್ಲಿ ಹೇರಳವಾದ ಸಂಪತ್ತು ಇರಬಹುದು. ಒಳ್ಳೇ ವಂಶದಲ್ಲಿ ಹುಟ್ಟಿರಬಹುದು. ಯಾರಿಗೂ ಕಡಿಮೆ ಎನಿಸದ ರೂಪ ಇರಬಹುದು ಪಾಂಡಿತ್ಯದ ಔನ್ನತ್ಯವಿರಬಹುದು. ಸಾಮರ್ಥ್ಯ, ತೇಜಸ್ಸು, ತಪಸ್ಸು, ಪ್ರತಾಪ, ಪರಾಕ್ರಮಗಳ ಗಣಿಯಾಗಿರಬಹುದು. ಇದರಲ್ಲಿ ಯಾವುದೇ ಉಪಾಯಗಳು ಭಗವಂತನ ಪ್ರಸನ್ನತೆಗೆ ಕಾರಣವಾಗುವುದಿಲ್ಲ. ಭಗವಂತನ ಪ್ರಸನ್ನತೆಗೆ ಪ್ರಾಮಾಣಿಕ ಭಕ್ತಿಯೊಂದೇ ಪ್ರಧಾನ ಸಾಧನ. ಪ್ರಹ್ಲಾದ ಹಿಂದಿನ ಮಾತುಗಳಿಗೆ ಹೋಲುವ ಉಚಿತವಾದ ದೃಷ್ಟಾಂತವನ್ನು ಕೊಡುತ್ತಾನೆ –'ಭಕ್ತಿಯಿಂದಲೇ ಶ್ರೀಹರಿ ಪ್ರಸನ್ನನಾಗುವುದು' ಎನ್ನುವುದಕ್ಕೆ ಗಜೇಂದ್ರ ಉತ್ತಮ ನಿದರ್ಶನ. ಗಜರಾಜ ಉತ್ತಮಕುಲಪ್ರಸೂತನೇ? ಅಥವಾ ಸೌಂದರ್ಯಶಿಖಾಮಣಿಯೇ!! ಇಲ್ಲ. ಶಾಸ್ತ್ರಾಧ್ಯಯನ ನಡೆಸಿದ ಪಂಡಿತೋತ್ತಮನೇ!! ಇದ್ಯಾವುದೂ ಇರಲಿಲ್ಲ. ಭಗವಂತ ಗಜೇಂದ್ರನಿಗೆ ಒಲಿದದ್ದು. ತಪಸ್ಸು, ಪರಾಕ್ರಮ, ಬುದ್ಧಿ, ಐಶ್ವರ್ಯ –ಇದ್ಯಾವುದಕ್ಕೂ ಅಲ್ಲ. ಕೇವಲ ಭಕ್ತಿಗೆ. ಗಜೇಂದ್ರ ಅನೇಕ ವರ್ಷಗಳ ಕಾಲ ಪರಿಪರಿಯಾಗಿ ವಿಲಪಿಸಿದ. ಜಗದ್ರಕ್ಷಕನನ್ನು ಮರೆತು ಮಮತೆಯ ಬಂಧುವರ್ಗವನ್ನು ಕರೆದ. ಕಾಲ ಉರುಳಿತು, ಕಾಲ್ಗಳು ಕೊಳೆತವು. ರಕ್ಷಣೆ ಮಾತ್ರ ದೊರೆಯಲಿಲ್ಲ. ಯಾರೂ ರಕ್ಷಕರಲ್ಲ. ಶ್ರೀಹರಿಯೇ ರಕ್ಷಕ ಎಂಬ ಅರಿವು ಕೊನೆಗೆ ಬಂದಿತು. ಭಕ್ತಿ ತುಂಬಿತು. ಉದ್ಗಾರ ಹೊರಟಿತು. 'ನಾರಾಯಣಾಖಿಲಗುರೋ ಭಗವನ್ನಮಸ್ತೇ' ಎಂದು. ಗಜೇಂದ್ರನ ಭಕ್ತಿಯ ನುಡಿ ವೈಕುಂಠದ ಕದ ತಟ್ಟಿತು. ಕೂಡಲೇ ಚಕ್ರಧರ ಓಡೋಡಿ ಬಂದ.

ಲಕ್ಷ್ಮೀದೇವಿ ಭಗವಂತನ ಅವಸರವನ್ನು ಕಂಡು 'ಎಲ್ಲಿಗೆ?' ಎಂದು ಪ್ರಶ್ನಿಸಿದಳು. ಭಗವಂತ 'ಗಜೇಂದ್ರ ಕರೆಯುತ್ತಿದ್ದಾನೆ' ಎಂದು ಹೇಳಬೇಕಿತ್ತು. ಆದರೆ ಅದನ್ನು ಹೇಳಲು ಸಮಯವೇ ಇಲ್ಲ. 'ಗ' ಎಂದು ಹೇಳುವಷ್ಟರಲ್ಲಿ ವೈಕುಂಠಬಿಟ್ಟು ಬಂದಾಗಿತ್ತು.

ಈ ಗಜರಾಜನಲ್ಲಿ ಯಾವ ಕುಲವಿದೆ? ಯಾವ ಧನವಿದೆ? ಯಾವುದೂ ಭಗವಂತನಿಗೆ ಇಷ್ಟವಾದದ್ದಲ್ಲ. ಕೇವಲ ಭಕ್ತಿಯನ್ನು ಮಾತ್ರ ಬಯಸುವವ. ಅಂತಹ ಭಕ್ತಿ ಗಜೇಂದ್ರನ ಹೃದಯದಲ್ಲಿ ಉಕ್ಕೇರಿದಾಗ ಎಲ್ಲಿಲ್ಲದ ಸಡಗರದಲ್ಲಿ ಓಡೋಡಿ ಬಂದ. ಇಂದು ಕಂಬದಲ್ಲಿ ಪ್ರಕಟನಾಗಲೂ ಇದೇ ಕಾರಣ. ಪ್ರಹ್ಲಾದ ದೈತ್ಯಕುಲಜನಾದರೂ, ಅದನ್ನು ಗಮನಿಸದೇ, ಭಕ್ತನ ಭಕ್ತಿಗೆ ಮೆಚ್ಚಿ ಬಂದಿದ್ದಾನೆ.

ಪ್ರಹ್ಲಾದ ಅತ್ಯಂತ ಮಾರ್ಮಿಕವಾಗಿ ಮತ್ತೊಂದು ಮಾತನ್ನು ಹೇಳುತ್ತಾನೆ:

ಶ್ರೇಷ್ಠತೆಗೆ ಮಾನದಂಡ ಭಗವದ್ಭಕ್ತಿ

**ವಿಪ್ರಾದ್ದ್ವಿಷಡ್ಗುಣಯುತಾದರವಿಂದನಾಭ**
**ಪಾದಾರವಿಂದವಿಮುಖಾಚ್ಛ್ವಪಚಂ ವರಿಷ್ಠಮ್ ।**

ಮನ್ಯೇ ತದರ್ಪಿತ ಮನೋವಚನಾತ್ಮಗೇಹ-
ಪ್ರಾಣಃ ಪುನಾತಿ ಸ ಕುಲಂ ನ ತು ಭೂರಿಮಾನಃ ॥ — (೭-೯-೧೦)

ಬ್ರಾಹ್ಮಣರು ಬ್ರಾಹ್ಮಣರೆನಿಸಬೇಕಿದ್ದರೆ ಈ ಹನ್ನೆರಡು ಗುಣಗಳಿರಬೇಕು. ಶಾಸ್ತ್ರ ವಿಹಿತ ಜ್ಞಾನ, ಸತ್ಯ, ಇಂದ್ರಿಯನಿಗ್ರಹ, ನಿರ್ಮಾತ್ಸರ್ಯ, ಲಜ್ಜಾ, ಸಹನೆ, ಅನ ಸೂಯೆ, ದಾನ, ಯಜ್ಞ, ತಪಸ್ಸು, ಶಾಸ್ತ್ರಾಧ್ಯಯನ, ಭಗವದ್ಭಕ್ತಿ.

ಒಬ್ಬ ಬ್ರಾಹ್ಮಣನಿಗೆ ಜ್ಞಾನ, ಇಂದ್ರಿಯನಿಗ್ರಹ ಮುಂತಾದ ಎಲ್ಲ ಗುಣಗಳಿವೆ. ಉಪನ್ಯಾಸ, ವಾಕ್ಯಾರ್ಥ, ಎಲ್ಲದರಲ್ಲಿಯೂ ಭಾರೀ ಪ್ರಚಂಡನಾಗಿದ್ದಾನೆ ಇವನ ಬಳಿ ಗೆದ್ದವರು ಯಾರೂ ಇಲ್ಲ. ಇಷ್ಟೆಲ್ಲಾ ಪಾಂಡಿತ್ಯಾದಿ ಗುಣಗಳಿದ್ದರೂ ಭಗವದ್ಭಕ್ತಿ ಒಂದಿಲ್ಲ. ಇಂತಹ ಬ್ರಾಹ್ಮಣನಿಗಿಂತಲೂ ಭಗವದ್ಭಕ್ತನಾದ ಒಬ್ಬ ದಲಿತನೇ ಶ್ರೇಷ್ಠ. ಭಕ್ತಿಯನ್ನು ಅಳೆಯುವುದು ಪಾಂಡಿತ್ಯದಿಂದಲ್ಲ. ಕುಲದಿಂದಲ್ಲ. ಅವನಲ್ಲಿ ಸಹಜವಾಗಿ ಇರುವ ಭಗವದ್ಭಕ್ತಿಯಿಂದ ಎನ್ನುತ್ತಾನೆ ಪ್ರಹ್ಲಾದ. ನಮ್ಮ ಒಣ ಪಾಂಡಿತ್ಯ, ಜಳ್ಳು ಪ್ರತಿಷ್ಠೆಗಳಿಗೆ ನಮ್ಮ ಇಂದ್ರಿಯಗಳನ್ನು ಉಪಯೋಗಿಸಿಕೊಳ್ಳದೆ; ಸಮಸ್ತ ಚೇಷ್ಟೆ ಯನ್ನೂ ಭಗವನ್ಮುಖವಾಗಿ ತಿರುಗಿಸಿದವ ಜಗತ್ತನ್ನೇ ಪವಿತ್ರೀಕರಿಸುತ್ತಾನೆ. ಹೊರತು ಕೀರ್ತಿ ಪ್ರತಿಷ್ಠೆಗಳಿಂದ ಮತ್ತನಾದವನಲ್ಲ.

'ಇಂದು ನೀನು ನನಗೆ ಎಂತಹ ಅನುಗ್ರಹವನ್ನುಂಟುಮಾಡುತ್ತಿದ್ದೀ. ನನ್ನ ಜೀವಿತವೇ ಧನ್ಯ' ಎಂದು ಪ್ರಹ್ಲಾದ ಮಾರ್ಮಿಕ ಮಾತುಗಳನ್ನು ಅನುಭವದ ಹಿನ್ನೆಲೆಯಲ್ಲಿ ನಿರೂಪಿಸುತ್ತಿದ್ದಾನೆ.

ಪೂರ್ಣತೃಪ್ತಗೆ ಏನೂ ಕೊಡಲಾರೆವು

ನೈವಾತ್ಮನಃ ಪ್ರಭುರಯಂ ನಿಜಲಾಭಪೂರ್ಣೋ
ಮಾನಂ ಜನಾದವಿದುಷಃ ಕರುಣೋ ವೃಣೀತೇ ।
ಯದ್ ಯಜ್ಜನೋ ಭಗವತೇ ವಿದಧೀತ ಮಾನಂ
ತಚ್ಚಾತ್ಮನೇ ಪ್ರತಿಮುಖಸ್ಯ ಯಥಾ ಮುಖಶ್ರೀಃ ॥ — (೭-೯-೧೧)

ಪ್ರಹ್ಲಾದನ ಈ ಮಾತು, ನಮ್ಮೆಲ್ಲರ ಕಣ್ಣು ತೆರೆಸುವ ಮಾತು. ನಾವೆಲ್ಲರೂ ಭಗವಂತನಿಗೆ ನಮಸ್ಕರಿಸುತ್ತೇವೆ. ಪೂಜೆ ಸಲ್ಲಿಸುತ್ತೇವೆ. ಧನ, ಕನಕ, ಆಭರಣ ವಿಶೇಷಗಳೂ ಏನೆಲ್ಲಾ ನೀಡುತ್ತೇವೆ. ಇವೆಲ್ಲವೂ ಅವನಿಗೆ ಬೇಕೇನು? ಖಂಡಿತ ವಾಗಿಯೂ ಬೇಡ. ಅವನು ಪರಿಪೂರ್ಣನಾಗಿದ್ದಾನೆ. ನಮ್ಮ ಕಾಣಿಕೆ, ನೈವೇದ್ಯ, ವಸ್ತ್ರ ಇದ್ಯಾವುದೂ ಅವನಿಗೆ ಬೇಕಿಲ್ಲ. ನಾವುಗಳು ಅಹಂಕಾರದಿಂದ ಬೀಗುತ್ತೇವೆ. 'ಭಗವಂತನಿಗೆ ಇಷ್ಟು ಆಭರಣಗಳ ಕೊಟ್ಟೆವು, ಇಷ್ಟು ಕಾಣಿಕೆ ಇಟ್ಟೆವು, ದೇವಸ್ಥಾನ ಕಟ್ಟಿಸಿದೆವು, ಕಟ್ಟಿಟ್ಟ ಗಂಟುಗಳನ್ನೆಲ್ಲಾ ಕೊಟ್ಟುಬಿಟ್ಟೆವು' ಎಂದು ಬೀಗುತ್ತೇವೆ. ನಮ್ಮ ಯಾವುದೇ ವಸ್ತುಗಳೂ ಪರಿಪೂರ್ಣನಾದ ಭಗವಂತನಿಗೆ ಬೇಕಿಲ್ಲ. ಹಾಗಾದರೆ ನಾವು ಪೂಜೆಯನ್ನು ನಿತ್ಯ ಸಲ್ಲಿಸುತ್ತೇವೆ. ಅದು ಯಾರಿಗಾಗಿ?! ದೇವರಿಗಾಗಿಯೇ ಅಲ್ಲವೇ?! ಅಲ್ಲವೇ ಅಲ್ಲ. ನಿತ್ಯವು ನಾವು ಭಗವಂತನಿಗೆ ಪೂಜೆ ಸಲ್ಲಿಸುವುದು ಅವನಿಗಾಗಿ ಅಲ್ಲ; ನಮಗಾಗಿ. ನಿತ್ಯತೃಪ್ತನಿಗೆ ನಮ್ಮಿಂದ ಆಗಬೇಕಾದ್ದು ಏನೂ ಇಲ್ಲ. ಅವನಿಗಾಗಿ

ನಲ್ಲಿಸುವ ಎಲ್ಲರ ಪೂಜೆಗಳೂ ಅದು ನಮಗಾಗಿಯೇ ಹೊರತು, ಭಗವಂತನಿಗೆ ಉಪಕರಿಸಿದ್ದೇವೆ ಎಂಬ ಹಮ್ಮು ಬೇಡ. ಪ್ರಹ್ಲಾದ ದೃಷ್ಟಾಂತದಿಂದ ಇದನ್ನು ಮನವರಿಕೆ ಮಾಡಿಸುತ್ತಾನೆ.

ನಾವೆಲ್ಲರೂ ನಮ್ಮ ಮುಖವನ್ನು ಕನ್ನಡಿಯಲ್ಲಿ ದಿನಕ್ಕೆ ಹತ್ತಾರು ಬಾರಿ ನೋಡುತ್ತೇವೆ. ಆದಷ್ಟು ಚೆಂದ ಕಾಣಬೇಕು ಎಂದು. ನಮ್ಮ ಭಾವಚಿತ್ರಗಳು ಚೆಂದ ಬರಬೇಕೆಂದು ಬಯಸುತ್ತೇವೆ. ನಾವು ಚೆಂದಕಾಣಬೇಕಿದ್ದರೆ, ನಮ್ಮ ಭಾವಚಿತ್ರ ಸರಿಯಾಗಿ ಬರಬೇಕಿದ್ದರೆ; ನಾವು ಏನುಮಾಡಬೇಕು?! ಕನ್ನಡಿಯನ್ನು ಅಲಂಕರಿಸ ಬೇಕೇ? ಕನ್ನಡಿಗೆ ಪೌಡರ್, ಹೂವು ಇತ್ಯಾದಿಗಳನ್ನೆಲ್ಲಾ ಹಾಕಿ ಅಲಂಕರಿಸಬೇಕೇ! ಇಲ್ಲ. ಕನ್ನಡಿಗೆ ಎಷ್ಟು ಅಲಂಕರಿಸಿದರೂ ನಮ್ಮ ಬಿಂಬ ಚೆಂದಗಾಣದು. ಕ್ಯಾಮೆರಾ ವನ್ನು ಎಷ್ಟು ಅಲಂಕರಿಸಿದರೂ ಭಾವಚಿತ್ರ ಸರಿಬರದು. ನಾವು ಸುಂದರವಾಗಿ ಕಾಣಬೇಕಿದ್ದರೆ, ನಮ್ಮ ಬಿಂಬವನ್ನು ಅಲಂಕರಿಸಬೇಕು. ಚೆನ್ನಾಗಿ ಮುಖತೊಳೆದು ಕೊಂಡು, ಮುಖಕ್ಕೆ ಪೌಡರ್, ಬಣ್ಣ, ಲಿಪ್‌ಸ್ಟಿಕ್ ಮುಂತಾದ ಏನೆಲ್ಲಾ ಸಲಕರಣೆ ಗಳಿವೆಯೋ ಅದನ್ನೆಲ್ಲಾ ಹಚ್ಚಬೇಕು. ಹೀಗಿದ್ದರೆ ಮಾತ್ರ ನಾವು ಸುಂದರವಾಗಿ ಕಾಣಲು ಸಾಧ್ಯ; ಭಾವಚಿತ್ರ ಸುಂದರವಾಗಿ ಮೂಡಲು ಸಾಧ್ಯ. ಹೀಗೆ ಬಿಂಬವನ್ನು ಅಲಂಕರಿಸಿದರೆ ಪ್ರತಿಬಿಂಬ ತನ್ನಷ್ಟಕ್ಕೆ ಸುಂದರವಾಗುತ್ತದೆ. ಅದಕ್ಕಾಗಿ ಪ್ರಯತ್ನವೇನೂ ಬೇಕಿಲ್ಲ.

ಅದರಂತೆ ನಾವೆಲ್ಲರೂ ಭಗವಂತನ ಪ್ರತಿಬಿಂಬದಂತೆ ಇದ್ದೇವೆ. ಭಗವಂತನು ನಮಗೆಲ್ಲರಿಗೂ ಬಿಂಬಸ್ಥಾನದಲ್ಲಿದ್ದಾನೆ. ಬಿಂಬದಲ್ಲಿ ಚಲನೆ ಉಂಟಾದರೆ ಮಾತ್ರ ಪ್ರತಿಬಿಂಬದಲ್ಲಿ ಚಲನೆ ಉಂಟಾಗುತ್ತದೆ. ಅದರಂತೆ ನಮ್ಮ ಅಸ್ತಿತ್ವ ಭಗವಂತ ನಿಂದಲೇ ರೂಪಿತಗೊಂಡಿದೆ. ಅವನು ಚಲಿಸಿದರೆ ಚಲಿಸುತ್ತೇವೆ. ಅವನು ನಿಂತರೆ ನಿಲ್ಲುತ್ತೇವೆ. 'ತೇನ ವಿನಾ ತೃಣಮಪಿ ನ ಚಲತಿ' –ಆದ್ದರಿಂದ 'ಬಿಂಬದಂತೆ ಪ್ರತಿಬಿಂಬ'. 'ಬಿಂಬದಿಂದ ಪ್ರತಿಬಿಂಬ' ಎಂಬ ಎರಡಂಶಗಳನ್ನು ನೆನಪಿನಲ್ಲಿಟ್ಟು ಕೊಳ್ಳಬೇಕು. ಪ್ರತಿಬಿಂಬದ ಅಸ್ತಿತ್ವ ಬಿಂಬದ ಅಧೀನ. ಬಿಂಬದಂತೆ ಇರುತ್ತದೆ. ಅದಕ್ಕೆ ಸ್ವಂತಿಕೆ ಅನ್ನುವುದೇ ಇಲ್ಲ. ಹಾಗೆಯೇ ನಾವು ಬಿಂಬವಾದ ಭಗವಂತನಿಗೆ ಸಂಪೂರ್ಣ ಅಧೀನವಾಗಿದ್ದೇವೆ. ನಮ್ಮ ಏನೆಲ್ಲಾ ಚಟುವಟಿಕೆಗಳಿವೆಯೋ ಅದೆಲ್ಲವೂ ಭಗವಂತನಿಂದ. ಅವನ ಅನುಗ್ರಹದಿಂದಲೇ ಆನಂದ ಜ್ಞಾನಗಳಲ್ಲಿ ಯತ್ಕಿಂಚಿತ್ ಸಾಮ್ಯವನ್ನು ಪಡೆದಿದ್ದೇವೆ.

ಆದ್ದರಿಂದ ನಮಗೆ ಜೀವನದಲ್ಲಿ ಸುಖ, ಶಾಂತಿ, ನೆಮ್ಮದಿ, ವೈಭವ, ಸಮೃದ್ಧಿ ಇವುಗಳು ಬರಬೇಕಿದ್ದರೆ; ನಮ್ಮ ಬಿಂಬದಂತಿರುವ ಭಗವಂತನನ್ನು ಭಕ್ತಿ ಶ್ರದ್ಧೆಗಳಿಂದ ವೈಭವದಿಂದ ಪೂಜಿಸಬೇಕು. ಆವಾಗ ಮಾತ್ರ ನಮ್ಮ ಜೀವನದಲ್ಲಿ ವೈಭವ ಬರಲು ಸಾಧ್ಯ. ಬಿಂಬವನ್ನು ಅಲಂಕರಿಸಿದಾಗ ಸಹಜವಾಗಿ ಪ್ರತಿಬಿಂಬದಲ್ಲಿ ಸೌಂದರ್ಯ ಕಾಣುವಂತೆ, ನಮ್ಮ ಬಿಂಬಸ್ಥಾನದಲ್ಲಿರುವ ಭಗವಂತನನ್ನು ಪೂಜಿಸಿದರೆ ಸಹಜವಾಗಿ ಸುಖ, ಸಮೃದ್ಧಿ, ವೈಭವ ಇವೆಲ್ಲವೂ ನಮ್ಮಲ್ಲಿ ಉಂಟಾಗುತ್ತದೆ.

ಭಗವಂತನು ಬಿಂಬ ನಾವು ಪ್ರತಿಬಿಂಬರು ಎಂಬ ಅರಿವಿನ ಒಟ್ಟಿಗೆ ಪೂಜಿಸುವುದು ಭಗವತ್ಪೂಜೆಯ ಗುಟ್ಟು. ಈ ಗುಟ್ಟನ್ನು ಅರಿಯದೆ ಇಂದು ನಾವೆಲ್ಲರೂ ಭ್ರಷ್ಟರಾಗಿದ್ದೇವೆ ಬಿಂಬನಾದ ಹರಿಯನ್ನು ಅಲಂಕರಿಸದೆ ಪ್ರತಿಬಿಂಬ ರಾದ ನಾವು ನಮ್ಮನ್ನೇ ಅನೇಕ ಉಡುಗೆ ತೊಡುಗೆಗಳಿಂದ ವೈಭವೀಕರಿಸಿ ಕೊಳ್ಳುತ್ತಿದ್ದೇವೆ. ಭಗವಂತನಿಗೆ ಷೋಡಶೋಪಚಾರಪೂಜೆಯನ್ನು ಅರ್ಪಿಸಿ ಎಂದರೆ, ನಮಗೇ ಮಾಡಿಕೊಳ್ಳುತ್ತಿದ್ದೇವೆ. ನಾವು ಎಷ್ಟು ಮಾಡಿಕೊಂಡರೂ ಅದು ಕನ್ನಡಿ ಕ್ಯಾಮರಾಗಳಿಗೆ ಅಲಂಕರಿಸಿದಂತೆ ಎಂಬ ಅರಿವು ಇನ್ನೂ ಬಂದಿಲ್ಲ. ಈ ಅರಿವು ಬಂದಾಗ ಮಾತ್ರ ನಮ್ಮ ಜೀವನದಲ್ಲಿ ಏನಾದರೂ ವೈಭವ ಬರಲು ಸಾಧ್ಯ. ಇಂತಹ ಮಾರ್ಮಿಕವಾದ ಉಪದೇಶವನ್ನು, ಕಣ್ಣುತೆರೆಸುವ ಸಂದೇಶವನ್ನು ಪ್ರಹ್ಲಾದ ನಮ್ಮೆಲ್ಲರಿಗೂ ನೀಡಿದ್ದಾನೆ.

## ಭಯಾನಕ ಸಂಸಾರ

ನರಸಿಂಹದೇವರ ಬಳಿ ಕೈಮುಗಿದು ಪ್ರಾರ್ಥಿಸುತ್ತಿರುವ ಪ್ರಹ್ಲಾದ ನಲಿಗೆಯಿಂದ ಹೇಳುತ್ತಾನೆ–

ನಾಹಂ ಬಿಭೇಮ್ಯಜಿತ ತೇಽತಿಭಯಾನಕಾಸ್ಯ
ಜಿಹ್ವಾಗ್ನಿನೇತ್ರಭ್ರುಕುಟೀರಭಸೋಗ್ರದಂಷ್ಟ್ರಾತ್ ।
ಆಂತ್ರಸ್ರಜಃ ಕ್ಷತಜಕೇಸರಶಂಕುಕರ್ಣಾ-
ನ್ನಿರ್ಹ್ರಾದಭೀತದಿಗಿಭಾದರಿಭಿನ್ನಖಾಗ್ರಾತ್ ॥ — (೭-೯-೧೫)

ನರಸಿಂಹನೇ! ಈ ನಿನ್ನ ಭಯಂಕರ ರೂಪವನ್ನು ಕಂಡು ಎಲ್ಲಾ ಲೋಕಗಳೂ ತತ್ತರಿಸಿ ಹೋಗುತ್ತಿವೆ. ಎಲ್ಲರೂ ಭಯಗ್ರಸ್ತರಾಗಿದ್ದಾರೆ. ಆದರೆ ನನಗೆ ನಿನ್ನಿಂದ ಸ್ವಲ್ಪವೂ ಹೆದರಿಕೆಯಾಗುತ್ತಿಲ್ಲ. ನಿನ್ನ ಮುಖವಾದರೂ ಅತಿಭಯಂಕರವಾಗಿದೆ. ನಿನ್ನ ವಕ್ರವಾದ ಕಣ್ಗಳಾದರೋ ಬೆಂಕಿಯ ಮಳೆಯನ್ನೇ ಸುರಿಸುತ್ತಿವೆ. ವಿಲಾಸದ ಹುಬ್ಬು ಗಳು ಗಂಟಿಕ್ಕಿದ್ದರಿಂದ ಭಯಾನಕವಾಗಿವೆ. ಕ್ರೂರವಾದ ಕೋರೆಹಲ್ಲುಗಳು ಮತ್ತಷ್ಟು ಭಯಪಡಿಸುವಂತೆ ಕಾಣುತ್ತಿವೆ. ಕೂರುಗುರುಗಳಿಂದ ದೈತ್ಯೇಂದ್ರನ ಉದರವನ್ನು ಸೀಳಿ ಕರುಳನ್ನು ಮಾಲೆಮಾಡಿ ಕೊರಳಿಗೆ ಧರಿಸಿದ ಆ ನಿನ್ನ ರೂಪ ನೋಡುವವರಾರು? ಉದರ ಸೀಳ್ವಾಗ ಸಿಡಿದೆದ್ದ ನೆತ್ತರಿನಿಂದ ಕೇಸರವೆಲ್ಲವೂ ರಕ್ತಸಿಕ್ತವಾಗಿದೆ. ಮೀಟುವ ಗೂಟದಂತೆ ನಿನ್ನ ಕಿವಿಗಳಿವೆ. ಭಯಾನಕ ರೂಪದಿಂದಲೇ ನಡುಗಿದ್ದೆ. ನಿನ್ನ ಮೋರೆ ಯಿಂದ ಹೊರಬಂದ ಗರ್ಜನೆ ಅಷ್ಟದಿಗ್ಗಜಗಳನ್ನೂ ನಡುಗಿಸುವಂತಾಗಿದೆ. ಅರಿಯನ್ನು ಸೀಳಿದ ಉಗುರುಗಳು ಭಯಂಕರವಾಗಿವೆ. ಇಂತಹ ನಿನ್ನ ರೂಪವನ್ನು ಕಂಡರೂ ನನಗೇನು ಭಯ ಉಂಟಾಗುವುದಿಲ್ಲ. ಹಾಗಿದ್ದರೂ ನಾನು ಭಯಪಟ್ಟಿದ್ದೇನೆ. ನನ್ನ ಭಯ ನಿನ್ನ ರೂಪ ಕಂಡಿಲ್ಲ. ಭಗವಂತನೇ! ನನ್ನ ಭಯಕ್ಕೆ ಕಾರಣವೇನೆಂದೆಯಾ?! ಕೇಳು! ಎಂದು ಪ್ರಹ್ಲಾದ ವಿವರಿಸುತ್ತಾನೆ–

ತ್ರಸ್ತೋಽಸ್ಮ್ಯಹಂ ಕೃಪಣವತ್ಸಲ ದುಃಸಹೋಗ್ರ-
ಸಂಸಾರಚಕ್ರಕದನಾತ್ ಕೃಶತಾಂ ಪ್ರಣೀತಃ ।
ಬದ್ಧಃ ಸ್ವಕರ್ಮಭಿರುಶತ್ತಮ ತೇಂಘ್ರಿಮೂಲಂ
ಭೀತಾಪವರ್ಗಮರಣಂ ಸಮಿಯಾಂ ಕದಾನು ॥ — (೭-೯-೧೬)

"ವತ್ಸಲನಾದ ಭಗವಂತನೇ! ನನಗೆ ನಿನ್ನ ಉಗ್ರರೂಪದಿಂದ ಭಯವಾಗಿಲ್ಲ. ಸಹಿಸಲಸಾಧ್ಯವಾದ ಸಂಸಾರಚಕ್ರದ ಹಿಂಸೆಯಿಂದ ಭಯವಟ್ಟಿದ್ದೇನೆ. ಹುಟ್ಟು ಸಾವುಗಳೆಂಬ ಗಮನಾಗಮನದುಃಖ ನನ್ನನ್ನು ಘಾಸಿಗೊಳಿಸಿದೆ. ಈ ಹಿಂಸೆಯಿಂದ ಬೆಂದು ನೊಂದು ಬಸವಳಿದಿದ್ದೇನೆ. ಸಂಸಾರದ ನಾನಾ ಮುಖವಾದ ಹಿಂಸೆಗಳಿಂದ ಕೃಶನಾಗಿದ್ದೇನೆ. ದೇವನೇ! ನಿನ್ನ ರೂಪವನ್ನು ಕಂಡು ನನಗೆ ಯಾವ ಹೆದರಿಕೆಯೂ ಆಗದು. ಆದರೆ ಈ ಸಂಸಾರದ ಕಡುರೂಪವನ್ನು ಕಂಡು ಹೆದರಿದ್ದೇನೆ. ಈ ಸಂಸಾರ ವೆಂಬ ಝುಂಝಾವಾತದಿಂದ ಮುಕ್ತನಾಗಿ ನಿನ್ನ ಪಾದಕಮಲಗಳನ್ನು ಹೊಂದುವುದ ಕ್ಕಾಗಿ ಕಾಯುತ್ತಿದ್ದೇನೆ. ನಿನ್ನ ಆಹ್ವಾನವನ್ನೇ ನಿರೀಕ್ಷಿಸುತ್ತಿದ್ದೇನೆ. ದೇವಾ! ನನ್ನನ್ನು ನಿನ್ನ ಮಡಿಲಿಗೆ ಹಾಕಿಕೋ! ಎಂದು ಪ್ರಹ್ಲಾದ ಪ್ರಾರ್ಥಿಸುತ್ತಿದ್ದಾನೆ.

ಭಗವಂತನೇ! ಸಂಸಾರದಲ್ಲಿ ಕಷ್ಟಗಳಿವೆ ಎಂದಿಷ್ಟೇ ಅಲ್ಲ. ಅಲ್ಲಿ ನಾನಾ ಮುಖದ ಲೌಕಿಕ ಆಕರ್ಷಣೆಗಳೂ ಇವೆ. ಇವುಗಳಿಂದಾಗಿ ನನ್ನ ಮನಸ್ಸನ್ನು ನಿನ್ನಲ್ಲಿಯೇ ನಿಲ್ಲಿಸ ಲಾಗುತ್ತಿಲ್ಲ. ವಿಷಯಪದಾರ್ಥಗಳ ಆಕರ್ಷಣೆಯೂ ಸಹ ಸಂಸಾರದ ಮತ್ತೊಂದು ದುರಂತ. ಭೋಗಸಾಮಗ್ರಿಗಳ ಚಾಪಲ್ಯ, ಸುಖ, ದುಃಖ, ಭಯ ಮುಂತಾದವು ಗಳಿಂದ ಆಕರ್ಶಿತವಾದ ಮನಸ್ಸು ನಿನ್ನಲ್ಲಿ ಕೇಂದ್ರೀಕೃತ ವಾಗುತ್ತಿಲ್ಲ. ಕಡಿವಾಣ ಇಲ್ಲದ ಕುದುರೆಯಂತೆ ಬೇಡವಾದ ನೂರಾರು ಮಾರ್ಗಗಳನ್ನು ತುಳಿಯುತ್ತಿದೆ.

ಇದನ್ನು ಸಂಸಾರದಲ್ಲಿಯೂ ಕಾಣಬಹುದು. ಒಬ್ಬ ಗಂಡನಿಗೆ ಅನೇಕ ಮಡದಿ ಯರಿದ್ದಾಗ, ಅವನ ಅವಸ್ಥೆ ಹೇಳತೀರದು. ಒಬ್ಬೊಬ್ಬರು ಒಂದೊಂದು ಕಡೆ ಸೆಳೆಯುತ್ತಾರೆ. ಅದರಂತೆ ನಮ್ಮ ಇಂದ್ರಿಯಗಳು ಅನೇಕ ಮಡದಿಯರಂತೆ ಇವೆ. ನಾಲಿಗೆಗೆ ತಿನ್ನುವ ಚಪಲವಾದರೆ, ಕಣ್ಣಿಗೆ ರೂಪದ ಚಪಲ. ಮೂಗಿಗೆ ಮೂಸುವ ಚಪಲ. ಗ್ರಾಮ್ಯಗೀತೆಗಳನ್ನು ಆಲಿಸಲು ಕಿವಿಗಳು ನಿಮಿರಿ ನಿಲ್ಲುತ್ತವೆ. ಹೀಗೆ ಎಲ್ಲಾ ಇಂದ್ರಿಯಗಳು ಒಂದೊಂದು ಕಡೆ ಸೆಳೆಯುತ್ತಿವೆ. ಅನೇಕ ಮಡದಿಯರಿಂದ ಕಂಗೆಟ್ಟ ಗಂಡನ ಪರಿಸ್ಥಿತಿಯಂತೆ; ಇಂದ್ರಿಯಗಳ ಆಕ್ರಮಣದಿಂದ ನಮ್ಮ ಪರಿಸ್ಥಿತಿಯೂ ಬಹುಪತ್ನೀಪುರುಷನಂತಾಗಿದೆ. ಇಂದ್ರಿಯಗಳ ಜಗ್ಗಾಟದಲ್ಲಿ ನುಜ್ಜುಗುಜ್ಜಾಗಿ ಕಂಗೆಟ್ಟಿ ದ್ದೇವೆ. ಇಂತಹ ಸಂಸಾರದ ದುರಂತ ಪರಿಸ್ಥಿತಿಯಲ್ಲಿ ಮನಸ್ಸನ್ನು ಭಗವಂತ ನೆಡೆಗೆ ಹರಿಸಲು ಸಾಧ್ಯವೇ ಆಗುತ್ತಿಲ್ಲ ದೇವಾ? ಇಂತಹ ಇಂದ್ರಿಯಗಳ ಆಕ್ರಮಣ ದಿಂದ ಬಿಡುಗಡೆಯನ್ನು ಹೇಗೆ ಪಡೆಯುವುದು?! ನಿನ್ನ ಪಾದವನ್ನು ಹೇಗೆ ಸೇರುವುದು?! ಮನಸ್ಸಿಗೆ ಕಡಿವಾಣಹಾಕುವ ಉಪಾಯ ಯಾವುದು?! ಮುಂತಾಗಿ ಪ್ರಹ್ಲಾದನು ತನ್ನ ಸಮಸ್ಯೆಯನ್ನು ತೋಡಿಕೊಂಡಾಗ ನರಸಿಂಹ ಹೇಳುತ್ತಾನೆ. ಪ್ರಹ್ಲಾದ! ನೀನು ಭಯಪಡುವ ಸಂದರ್ಭವೇ ಇಲ್ಲ. ನಾನು ನಿನ್ನ ಭಕ್ತಿಗೆ ಮೆಚ್ಚಿ ಈ ಸಂಸಾರ

ಬಂಧನದಿಂದ ಬಿಡಿಸಿದ್ದೇನೆ. ಮೋಕ್ಷವನ್ನೇ ಕೊಟ್ಟಿದ್ದೇನೆ. ಸ್ವೀಕರಿಸು 'ಬಾ ಮೋಕ್ಷಕ್ಕೆ' ಎಂದು ಭಗವಂತನು ಭಕ್ತಪ್ರಹ್ಲಾದನನ್ನು ಪ್ರೀತಿಯಿಂದ ಕರೆದಾಗ ಪ್ರಹ್ಲಾದ ಹೇಳುತ್ತಾನೆ.

ಹರಿ ಒಲಿದರೇ ಭವಭಯವಿಲ್ಲ
ನೈವೋದ್ವಿಜೇ ಭವದುರತ್ಯಯ ವೈತರಣ್ಯಾಃ
..........................
..........................
ನೈತಾನ್ ವಿಹಾಯ ಕೃಪಣಾನ್ ವಿಮುಮುಕ್ಷ ಏಕೋ
ನಾನ್ಯಂ ತ್ವದಸ್ಯ ಶರಣಂ ಭ್ರಮತೋಽನುಪಶ್ಯೇ ॥ — (೭-೯-೪೩, ೪೪)

ಹಿಂದೆ ನರಸಿಂಹನನ್ನು ನೋಡಿ ಪ್ರಹ್ಲಾದ ಹೇಳಿದ್ದ 'ನನಗೆ ನಿನ್ನನ್ನು ನೋಡಿ ಹೆದರಿಕೆಯಾಗುವುದಿಲ್ಲ. ಸಂಸಾರಕ್ಕೆ ಹೆದರುತ್ತೇನೆ' ಎಂದು. ಅದಕ್ಕೆ ನರಸಿಂಹದೇವರು 'ನಿನಗೆ ಮೋಕ್ಷ ಕೊಡುತ್ತೇನೆ ಬಾ' ಎಂದರು. ಮೋಕ್ಷಕ್ಕೆ ಕರೆದಾಗ ಪ್ರಹ್ಲಾದನು ಮೋಕ್ಷವನ್ನು ಬಯಸಲಿಲ್ಲ. ಪ್ರಹ್ಲಾದ ಈಗ ಹೇಳುತ್ತಾನೆ: 'ದೇವಾ! ನನಗೆ ಸಂಸಾರದಿಂದಲೂ ಭಯವಿಲ್ಲ ಎಂದು. ಸಂಸಾರವೆಂಬುದು ದುಃಖ, ಮೋಹ ಮುಂತಾದವುಗಳ ವೈತರಣಿ. ಇದನ್ನು ದಾಟುವುದು ಬಹಳ ಕಷ್ಟ. ಆದರೂ ಅದನ್ನು ನಿನ್ನ ದಯದಿಂದ, ವೇದಾಂತಶಾಸ್ತ್ರ ಶ್ರವಣಾದಿಗಳೆಂಬ ಅಮೃತಪಾನದಿಂದ ಎದುರಿಸುತ್ತೇವೆ. ಆದ್ದರಿಂದ ದೇವದೇವೋತ್ತಮನೇ! ನನಗೆ ನಿನ್ನಿಂದ ದುಃಖವಿಲ್ಲ. ಸಂಸಾರದಿಂದ ದುಃಖಿತನಾಗಿಲ್ಲ. ಹಾಗಿದ್ದರು ಒಂದು ದುಃಖವಿದೆ. ಸಂಸಾರಸುಖಕ್ಕಾಗಿ ಕುಟುಂಬ ಭಾರವನ್ನು ತಲೆಯಲ್ಲಿ ಹೊತ್ತು ಕಂಗೆಟ್ಟ ಮಂದಮತಿಗಳನ್ನು ನೋಡಿ ದುಃಖಿತನಾಗಿದ್ದೇನೆ!! ಸಜ್ಜನರಾದ ಇವರು ಅಲ್ಪಸುಖಕ್ಕಾಗಿ ಆತ್ಮಗ್ಲಾನಿಯನ್ನು ಮಾಡಿ ಕೊಳ್ಳುತ್ತಿದ್ದಾರೆ. ಇಂತಹ ನನ್ನ ಸ್ನೇಹಿತರನ್ನು ಬಿಟ್ಟು ನಾನೊಬ್ಬನೇ ಸ್ವಾರ್ಥಿಯಾಗಿ ಮೋಕ್ಷಕ್ಕೆ ಬರಲಾರೆ ಎಂದ.

ಪ್ರಹ್ಲಾದ ಮೊದಲು ತಾನೇ ಮೋಕ್ಷಬೇಕೆಂದು ಬಯಸಿದ. ಭಗವಂತ ಕೊಡಲು ಸಿದ್ಧನಾದಾಗ ಬರುವುದಿಲ್ಲ ಎನ್ನುತ್ತಿದ್ದಾನೆ.

## ಪ್ರಹ್ಲಾದನ ಆದರ್ಶ ತ್ಯಾಗ

ಪ್ರಹ್ಲಾದ ಹೇಳುತ್ತಾನೆ: ಅರಣ್ಯದಲ್ಲಿ ಮುನಿಗಳು, ದೇವತೆಗಳು ಎಲ್ಲರೂ ಮೌನವ್ರತ ಮುಂತಾದ ತಪಸ್ಸನ್ನು ಮಾಡುತ್ತಿದ್ದಾರೆ. ಕೇವಲ ತಮ್ಮ ಹಿತವನ್ನು ಬಯಸಿ ಅವರು ತಪಸ್ಸು ಮಾಡುತ್ತಿಲ್ಲ. ತಮ್ಮನ್ನು ಆಶ್ರಯಿಸಿದವರ ಹಿತಚಿಂತನೆ ಯಿಂದ ಅವರಿಗೂ ಮೋಕ್ಷವಾಗಲೆಂದು ಬಯಸುತ್ತಾರೆ. ಅದರಂತೆ ಇಂದು ಅನೇಕ ಮಂದಿ ದೈತ್ಯಬಾಲಕರು ನನ್ನನ್ನು ಆಶ್ರಯಿಸಿದ್ದಾರೆ. ಇವರನ್ನು ಬಿಟ್ಟು ನಾನೊಬ್ಬನೇ ಹೇಗೆ ಮೋಕ್ಷಕ್ಕೆ ಬರಲಿ!! ನನಗೆ ಹೇಗೆ ನೀನೊಬ್ಬನೇ ಗತಿಯೋ, ಇವರಿಗೂ ನೀನೇ ಗತಿಯಾಗಿದ್ದೀ. ನಿನ್ನ ಬಿಟ್ಟು ಮತ್ಯಾರೂ ರಕ್ಷಕರಿಲ್ಲ ಎಂದ.

ಪ್ರಹ್ಲಾದನ ಈ ಹೃದಯವಂತಿಕೆ ಆದರ್ಶವಾಗಿದೆ ನನ್ನ ದುಃಖವನ್ನು ವೇದಾಂತದಿಂದ ಮರೆಯುತ್ತೇನೆ. ಆದರೆ ವೇದಾಂತ ಅರಿಯದ ಇವರ ದುಃಖ ಕಂಡು ನನಗೆ ದುಃಖವಾಗುತ್ತಿದೆ ಇವರಿಗೂ ವೇದಾಂತದ ರಹಸ್ಯತತ್ತ್ವಗಳನ್ನು ತಿಳಿಸಿ ಇವರನ್ನೂ ಮೋಕ್ಷಕ್ಕೆ ಕರೆದುಕೊಂಡು ಬರುತ್ತೇನೆ. ಇವರನ್ನು ಬಿಟ್ಟು ನಾನೊಬ್ಬನೇ ಮೋಕ್ಷಕ್ಕೆ ಬರಲಾರೆ ಎಂಬ ಪ್ರಹ್ಲಾದನ ಮಾತಿನಿಂದ ಅವನಿಗೆ ಸಜ್ಜನರ ಮೇಲೆ ಇರುವ ದಯೆ, ಕರುಣೆ, ಹಿತಚಿಂತನೆ ಎಲ್ಲವೂ ಸ್ಪಷ್ಟವಾಗುತ್ತವೆ. ಮೋಕ್ಷ ಕೈಗೆ ಸಿಕ್ಕರೂ ಬೇಡವೆನ್ನುವ ಔದಾರ್ಯ ಸಜ್ಜನರ ಮೇಲಿನ ಅನುಕಂಪ, ಇದರಿಂದ ಪ್ರಹ್ಲಾದನ ಭಗವದ್ಭಕ್ತಿ ಸಜ್ಜನರ ಮೇಲಿನ ಪ್ರೀತಿ ಎರಡೂ ಅಸಾಧಾರಣವಾದದ್ದು ಎಂದು ತಿಳಿಯುತ್ತದೆ.

ಪ್ರಹ್ಲಾದನು ಇಂತಹ ಅನೇಕ ಮಹತ್ವಪೂರ್ಣ ವಚನಗಳಿಂದ ಜಗತ್ತಿಗೇ ಆದರ್ಶ ಮಾರ್ಗವನ್ನು ತೋರಿಸಿಕೊಟ್ಟಿದ್ದಾನೆ. ನಾವು ಕೇವಲ ಭಗವಂತನಲ್ಲಿ ಭಕ್ತಿ ಮಾಡಿದರೆ ಸಾಲದು. ಅದರೊಟ್ಟಿಗೆ ಭಗವದ್ಭಕ್ತರ ಮೇಲೂ ಪ್ರೀತಿ, ದಯೆ ಮುಂತಾದವುಗಳನ್ನು ತೋರಬೇಕು. ಇದು ಇದ್ದಾಗಲೇ ಭಗವದ್ಭಕ್ತಿಗೆ ಪೂರ್ಣತೆ ಬರುತ್ತದೆ. ಇದರಿಂದಲೇ ಭಗವತ್ಪ್ರಸಾದ ಉಂಟಾಗುತ್ತದೆ ಎಂಬ ಸತ್ಯ ಸಂಗತಿಯನ್ನು ಪ್ರಹ್ಲಾದ ತಿಳಿಸಿದ್ದಾನೆ.

ಪ್ರಹ್ಲಾದನ ತತ್ತ್ವಜ್ಞಾನದ ಎಚ್ಚರದಿಂದ ಭಗವಂತನೂ ಅಚ್ಚರಿಗೊಂಡ. ಬಾಲಕನ ತ್ಯಾಗಕ್ಕೆ ಅಚ್ಯುತ ಮೆಚ್ಚಿದ. ಉಗ್ರರೂಪದ ನರಸಿಂಹನೂ ಕರುಣಾಮೃತಲೋಚನ ಬೀರಿದ. ಪ್ರಹ್ಲಾದನಿಗಾಗಿ ದಯೆತೋರಿದ. 'ಪ್ರಹ್ಲಾದ! ನಿನಗೆ ಮಂಗಳವಾಗಲಿ ನಿನ್ನಲ್ಲಿ ಪ್ರೀತಿಯ ಜಲಧಾರೆಯನ್ನೇ ಹರಿಸಿದ್ದೇನೆ. ನಿನಗೆ ತೋಚಿದ ವರ ಯಾಚಿಸು!' 'ನಿನ್ನ ನಿಷ್ಠೆಗೆ ಒಲಿದುಬಂದಿದ್ದೇನೆ. ದೈತ್ಯೇಂದ್ರನ ಕುತ್ಸಿತ ಪೀಡೆಗಳಿಗೆ ಅಂಜದೆ ಎಲ್ಲಾ ಕಷ್ಟಗಳನ್ನು ಧೈರ್ಯದಿಂದ ಎದುರಿಸಿ ಸತ್ಯ, ಭಕ್ತಿ, ಶ್ರದ್ಧೆಗಳೆಂಬ ಲತೆಗಳನ್ನು ಬೆಳೆಸಿದ್ದೀಯೇ! ನಿನ್ನ ವಿಷಯದಲ್ಲಿ ಪ್ರಸನ್ನನಾಗಿದ್ದೇನೆ. ನನ್ನನ್ನು ಸಂತೋಷಗೊಳಿಸಿದ ವರಿಗೆ ದುರ್ಲಭವಾದದ್ದು ಯಾವುದೂ ಇಲ್ಲ. ವರ ಕೇಳು' ಎಂದ.

ನರಸಿಂಹನು ಇಷ್ಟೆಲ್ಲಾ ಅವಕಾಶಗಳನ್ನು ಮುಂದಿಟ್ಟರೂ ಪ್ರಹ್ಲಾದನು ಯಾವ ವರಗಳನ್ನೂ ಬಯಸಲಿಲ್ಲ.

**ಏಕಾಂತಿತ್ವಾತ್ ಭಗವತಿ ನೈಚ್ಛತ್ತಾನ್ ಅಸುರೋತ್ತಮಃ**

ಭಗವಂತನಲ್ಲಿಯೇ ಆಸಕ್ತನಾದ ಪ್ರಹ್ಲಾದನಿಗೆ ವರಗಳು ವಿಘ್ನಗಳಾಗಿ ಕಂಡವು. ಭಗವದ್ಭಕ್ತಿಗೆ ಐಹಿಕಭೋಗಲಾಲಸೆಗಳೆಂಬ ವರಗಳು ಪ್ರತಿಬಂಧಕವೆಂದು ಪ್ರಹ್ಲಾದ ತಿಳಿದ.

## ಬಯಕೆ ಮುಂದಿಟ್ಟವ ಭಕ್ತನಾಗಲಾರ

ಪ್ರಹ್ಲಾದ, ನರಸಿಂಹನಿಗೆ ಹೇಳುತ್ತಾನೆ:

ದೇವದೇವೋತ್ತಮನೇ! ನಾನು ನಿನ್ನ ಬಳಿ ಐಹಿಕಭೋಗದ ಆಸೆಗಳನ್ನು ಬಯಸಿ ಬಂದಿಲ್ಲ. ಸಂಸಾರಬಂಧನದ ಬಿಡುಗಡೆಗಾಗಿ ಬಂದವನನ್ನು ಪುನಃ ಬಂಧನದಲ್ಲಿ

ಕಟ್ಟಲು ಏಕೆ ಹೊರಟಿದ್ದೀ?! ಪ್ರಲೋಭನೆಗಳನ್ನು ಮುಂದಿಟ್ಟು ನನ್ನ ಮನಸ್ಸನ್ನು ಕದಡಬೇಡ ಎಂದು ಹೇಳುತ್ತಾ ಎಲ್ಲರೂ ಗಮನಿಸಬೇಕಾದ ಮಾತನ್ನು ಪ್ರಹ್ಲಾದ ಹೇಳುತ್ತಿದ್ದಾನೆ

**ಯಸ್ತ ಆಶಿಷ ಆಶಾಸ್ತೇ ನ ಸ ಭೃತ್ಯಃ ಸ ವೈ ವಣಿಕ್**

ಎಂದು. ಭಗವಂತನಲ್ಲಿ ಭಕ್ತಿಯನ್ನು ಮಾಡುತ್ತೇವೆ. ದೇವರಿಗೆ ವಿಧವಿಧವಾದ ಪೂಜೆಯನ್ನು ಸಲ್ಲಿಸುತ್ತೇವೆ. ಅನಂತರ ನೂರಾರು ಬೇಡಿಕೆಗಳ ಪಟ್ಟಿಯನ್ನೇ ಸಲ್ಲಿಸುತ್ತೇವೆ. ನಮ್ಮಂಥವರಿಗೆ ಪ್ರಹ್ಲಾದ ಹೇಳುತ್ತಾನೆ:

'ಭಗವಂತನಲ್ಲಿ ಭಕ್ತಿಮಾಡಿ ವರ ಬೇಡುವವ ಭಕ್ತನಾಗಲಾರನು. ಅವನು ವ್ಯಾಪಾರಿಯಾಗುವನು' ಭಕ್ತಿಮಾಡಿ ವರ ಬೇಡುವುದೆಂದರೆ ಭಗವಂತನ ಒಟ್ಟಿಗೆ ವ್ಯಾಪಾರಕ್ಕಿಳಿದಂತೆ. ಆದ್ದರಿಂದ, ದೇವನೇ! ಭಕ್ತನಾಗಿ ನಿನ್ನ ಬಳಿ ವರ ಯಾಚಿಸುವ ವ್ಯಾಪಾರವನ್ನು ಮಾಡಲಾರೆ! ಎಂದ. ನರಸಿಂಹ ಎಷ್ಟು ಒತ್ತಾಯಪಡಿಸಿದರೂ ವರವನ್ನು ಕೇಳಲೇ ಇಲ್ಲ. ಎಲ್ಲವನ್ನೂ ನಿರಾಕರಿಸಿದ. ಪ್ರಹ್ಲಾದ ವರಬೇಡವೆಂದರೂ ಭಗವಂತ ಬಿಡುತ್ತಿಲ್ಲ. ಏನಾದರೂ ಕೇಳಲೇಬೇಕೆಂಬುದು ಭಗವಂತನ ಹಟವಾದರೆ, ಏನೂ ಕೇಳಲಾರೆ ಎಂಬುದು ಪ್ರಹ್ಲಾದನ ಹಟ. ಇವರೀರ್ವರ ಸಂವಾದ ಜಗತ್ತಿನಲ್ಲಿಯೇ ಹೊಸ ಮಾದರಿಯದ್ದಾಗಿದೆ. ಭಗವಂತ ಮತ್ತೂ ಒತ್ತಾಯಪಡಿಸಿದಾಗ ಪ್ರಹ್ಲಾದ ಹೇಳುತ್ತಿದ್ದಾನೆ–

ದೇವನೇ! ಎಷ್ಟು ನಿರಾಕರಿಸಿದರೂ ವರ ಕೊಡಲೇಬೇಕೆಂದು ನೀನು ತೀರ್ಮಾನಿಸಿದ್ದಿ. ನಿನ್ನ ತೀರ್ಮಾನದಂತೆ ನಾನು ಒಂದು ವರವನ್ನು ಯಾಚಿಸುತ್ತೇನೆ ಎಂದ.

ಎಲ್ಲರಿಗೂ ಆಶ್ಚರ್ಯವಾಯಿತು.

'ಏನೂ ಬೇಡವೆಂದು ನುಡಿದ ಪ್ರಹ್ಲಾದ ಏನು ಕೇಳಿಯಾನು? ವ್ಯಾಪಾರಿಯಾಗಲಾರೆ ಎಂದವ ಹೇಗೆ ಕೇಳುತ್ತಾನೆ?!' ಎಂದು ಎಲ್ಲರ ಕಿವಿಗಳು ಪ್ರಹ್ಲಾದನ ಮಾತಿಗಾಗಿ ನಿಮಿರಿ ನಿಂತವು.

ಪ್ರಹ್ಲಾದ ಕೇಳುತ್ತಾನೆ–

ದೇವ! ನಾನು ಮತ್ತೇನೂ ನಿನ್ನ ಬಳಿ ಬಯಸುವುದಿಲ್ಲ. ನನಗೆ ಒಂದು ವರವನ್ನು ಕೊಡು.

**ಕಾಮಾನಾಂ ಹೃದ್ಯಸಂರೋಹಂ ಭವತಸ್ತು ವೃಣೇ ವರಮ್**

'ಭಗವಂತನಲ್ಲಿ ಏನನ್ನಾದರೂ ಕೇಳಬೇಕೆಂಬ ಆಸೆ ಹುಟ್ಟದಿರಲಿ' ಇದೇ ನಾನು ಬೇಡುವ ವರ ಎಂದ.

ಕೊನೆಗೂ ಭಗವಂತನೇ ಪ್ರಹ್ಲಾದನ ನಿಷ್ಕಾಮಭಕ್ತಿಗೆ ಸೋಲಬೇಕಾಯಿತು. ಭಗವಂತ ಪ್ರಹ್ಲಾದನ ವಿಷಯದಲ್ಲಿ ಅತ್ಯಂತ ಪ್ರಸನ್ನನಾಗಿದ್ದಾನೆ.

ಇಂತಹ ಸುಪುತ್ರನಿಗೆ ಜನ್ಮವಿತ್ತ ದೈತ್ಯೇಂದ್ರನಾದ ಹಿರಣ್ಯಕಶಿಪುವನ್ನು ಕ್ಷಮಿಸಿದ್ದಾನೆ. ಜೀವನದ ಉದ್ದಕ್ಕೂ ಭಗವಂತನಿಗೆ ಅನ್ಯಾಯವನ್ನೇ ಮಾಡಿದ್ದ ದೈತ್ಯನಿಗೆ ತಮಸ್ಸೇ ಆಗಬೇಕಿತ್ತು. ಹಾಗಿದ್ದರೂ ಪ್ರಹ್ಲಾದನಂತಹ ಮಗನನ್ನು ಪಡೆದಿದ್ದರಿಂದ ಹಿರಣ್ಯಕಶಿಪುವಿಗೆ ಘೋರದುರಂತ ತಪ್ಪಿತು.

ರಾಮಾಯಣದಲ್ಲಿಯೂ ಇಂತಹದ್ದೇ ಒಂದು ಪ್ರಸಂಗ ಬರುತ್ತದೆ.

ಶ್ರೀರಾಮಚಂದ್ರ ಮಹಾಯಾತ್ರೆಗೆ ಹೊರಟಾಗ, ಬ್ರಹ್ಮದೇವರು ಶ್ರೀರಾಮಚಂದ್ರನ ಬಳಿ ವರದಿ ಒಪ್ಪಿಸುತ್ತಾರೆ:

'ನಿನ್ನ ಅವತಾರದಲ್ಲಿ ಎಷ್ಟು ಮಂದಿ ಸಹಾಯಕರಾಗಿದ್ದಾರೆ. ಎಷ್ಟು ಮಂದಿ ಅನ್ಯಾಯ ಮಾಡಿದ್ದಾರೆ' ಎಂದು.

ಬ್ರಹ್ಮದೇವರು ಇಂಥವರಿಗೆ ಇಂತಹ ಸದ್ಗತಿ. ಇಂಥವರಿಗೆ ಇಂತಹ ದುರ್ಗತಿ ಎಂದು ವಿವರಿಸುವಾಗ ಕೆಲವರಿಗೆ ಕುತೂಹಲ. ಕೈಕೇಯಿಗೆ ಏನಾಯಿತು?! ಎಂದು.

ರಾಮಾಯಣದ ಎಲ್ಲಾ ಹಗರಣಗಳಿಗೂ ಮೂಲಕಾರಣಗಳಾದ ರಾಮಚಂದ್ರನನ್ನೇ ಕಾಡಿಗಟ್ಟಿದ ಕೈಕೇಯಿಗೆ ಏನು ಶಿಕ್ಷೆ?! ಎಂದು ಕುತೂಹಲದಲ್ಲಿ ಜನರು ಕುಳಿತಿದ್ದರು.

ಆ ಸಂದರ್ಭದಲ್ಲಿ ಬ್ರಹ್ಮದೇವರು ಹೇಳುತ್ತಾರೆ. 'ಕೈಕೇಯಿಗೆ ಉತ್ತಮ ಸಾಂತಾನಿಕ ಪ್ರಾಪ್ತಿಯಾಗಿದೆ' ಎಂದು.

ಎಲ್ಲರೂ ಆಕ್ಷೇಪಿಸಿದರು. ಇದೇನು ಅನ್ಯಾಯ? ಕೈಕೇಯಿ ಮಾಡಿದ ಅನ್ಯಾಯಕ್ಕೆ ಪ್ರತ್ಯೇಕವಾಗಿ ನರಕವನ್ನು ನಿರ್ಮಾಣಮಾಡಿ ಕೊಡಬೇಕಿತ್ತು. ರಾಮನನ್ನೆ ಕಾಡಿಗೆ ಕಳುಹಿಸಿ ಗಂಡನನ್ನು ಕೊಂದು, ಸ್ವಾರ್ಥಸಾಧಕಳಾದ ಕೈಕೇಯಿಗೆ ಉತ್ತಮ ಲೋಕಪ್ರಾಪ್ತಿ ದೊರೆತಿರುವುದು ಸರಿಯಲ್ಲ! ಎಂದು ಆಕ್ಷೇಪಿಸಿದಾಗ ಬ್ರಹ್ಮದೇವರು ಹೇಳುತ್ತಾರೆ:

ಕೈಕೇಯಿ ಬೇಕಾದಷ್ಟು ಅನ್ಯಾಯ ಮಾಡಿರಬಹುದು. ಆದರೂ ಅವಳಿಗೆ ನರಕಕೊಡಲಾಗದು. ಏಕೆಂದರೆ–

ಸೂತ್ವಾ ತು ಭರತಂ ನೈಷಾ ಗಚ್ಛೇತ ನಿರಯಾನ್

"ಭರತನೆಂಬ ಉತ್ತಮ ಸುಪುತ್ರನನ್ನು ಜಗತ್ತಿಗೆ ಕೊಟ್ಟವಳು ಕೈಕೇಯಿ. ಇಂತಹ ಸುಪುತ್ರಪ್ರದಳಾದ ಕೈಕೇಯಿಗೆ ನರಕ ಕೊಟ್ಟರೆ ಮಹಾ ಅಪರಾಧವಾದೀತು" ಎನ್ನುತ್ತಾರೆ.

ಗಮನಿಸಬೇಕಾದ ಅಂಶ–

ಬ್ರಹ್ಮದೇವರ ಈ ಮಾತನ್ನು ಎಲ್ಲಾ ತಾಯಂದಿರೂ ಗಮನಿಸಬೇಕು. ಮಾತೆಯರೇ! ನೀವು ಏನು ತಪ್ಪುಮಾಡಿದರೂ ನಿಮಗೆ ರಿಯಾಯಿತಿ ನೀಡುತ್ತೇವೆ. ಆದರೆ ನೀವು ಭರತನಂತಹ ಸುಪುತ್ರರನ್ನು ಜಗತ್ತಿಗೆ ನೀಡಬೇಕು. ನೀಡಿದರೆ ನೀವು ಏನು

ತಪ್ಪುಮಾಡಿದರೂ ಭಗವಂತ ಕ್ಷಮಿಸುತ್ತಾನೆ. ಹೀಗೆಂದಮಾತ್ರಕ್ಕೆ 'ನೀವೆಲ್ಲರೂ ಕೈಕೇಯಿಯರಾಗಬೇಕೆಂದು ಅಭಿಪ್ರಾಯವಲ್ಲ. ಭರತನ ತಾಯಂದಿರಾಗಬೇಕೆಂದು ಬಯಸುತ್ತೇವೆ '

ಮಹನೀಯರೇ! 'ನೀವೆಲ್ಲರೂ ಹಿರಣ್ಯಕಶಿಪುಗಳಾಗುವುದು ಬೇಡ. ಪ್ರಹ್ಲಾದ ನಂತಹ ಮಗನಿಗೆ ತಂದೆಯಂದಿರಾಗಿರಿ!' ಪ್ರಹ್ಲಾದನಂತಹ ಮಕ್ಕಳನ್ನ ಪಡೆದರೆ ನಿಮ್ಮ ಎಲ್ಲಾ ಅಪರಾಧಗಳನ್ನು ಭಗವಂತ ಮನ್ನಿಸುತ್ತಾನೆ. ಪ್ರಹ್ಲಾದ ಭರತರೇ ಇದಕ್ಕೆ ಸಾಕ್ಷಿ.

ಪ್ರಹ್ಲಾದನಿಂದ ಹಿರಣ್ಯಕಶಿಪುವಿಗೆ ದುರ್ಗತಿ ತಪ್ಪಿತು. ಕೈಕೇಯಿಗೆ ಭರತನಿಂದ ದುರ್ಗತಿ ತಪ್ಪಿತು ಇದನ್ನು ನಮ್ಮ ತಂದೆ ತಾಯಂದಿರು ಗಮನಿಸಬೇಕು. ಉತ್ತಮ ಮಕ್ಕಳ ಜನನಿ ಜನಕರಾಗಬೇಕು. ಉತ್ತಮ ಭಗವದ್ಭಕ್ತರಾದ, ಚಾರಿತ್ರ್ಯಶೀಲ ಸಂಪನ್ನರಾದ, ಸದಾಚಾರಿಗಳಾದ ಮಕ್ಕಳನ್ನು ಪಡೆದರೆ; ನಮ್ಮಿಂದ ಏನೂ ತಪ್ಪು ನಡೆದರೂ ಭಗವಂತ ಕ್ಷಮಿಸುತ್ತಾನೆ. ಅದಕ್ಕಾಗಿ ನಾವು ಮಕ್ಕಳಿಗೆ ಮೊದಲು ಉತ್ತಮ ಸಂಸ್ಕಾರಗಳನ್ನು ನೀಡಬೇಕು.

ಹೀಗೆ ಪ್ರಹ್ಲಾದನ ಭಕ್ತಿಗೆ ಮೆಚ್ಚಿ ಹಿರಣ್ಯಕಶಿಪುವನ್ನು ಭಗವಂತ ಕ್ಷಮಿಸಿದ್ದಾನೆ ಎನ್ನುವುದು ಭಗವದ್ಭಕ್ತಿಗೆ ಇರುವ ಮಹತ್ವಕ್ಕೆ ದೊಡ್ಡ ಉದಾಹರಣೆಯಾಗಿದೆ.

ಈ ನರಸಿಂಹ ಅವತಾರದಿಂದ ಒಂದು ಸಂದೇಶವನ್ನು ತಿಳಿಯಬಹುದು:

ನರಸಿಂಹದೇವರೆಂದರೆ ಎಲ್ಲರಿಗೂ ಭಯವಾಗುತ್ತದೆ. ಸಿಂಹದ ಮುಖ ಕಂಡೊಡನೆ ಹೆದರುತ್ತಾರೆ. ಆದರೆ ನರಸಿಂಹದೇವರ ಮುಖಮಾತ್ರ ಸಿಂಹದ ಮುಖ. ಅವರ ಹೃದಯ ಮಾನವ ಹೃದಯ. ಮಾನವ ಶರೀರವಾದಕಾರಣ ಪ್ರಹ್ಲಾದನಿಗೆ ತೋರಿದ ಪ್ರೀತಿಯಿಂದ ಅವರ ಹೃದಯವೈಶಾಲ್ಯ ಅರ್ಥವಾಗುತ್ತದೆ. ನಾವು ಒಂದು ರೀತಿಯಲ್ಲಿ ನರ–ಸಿಂಹರೇ ಆಗಿದ್ದೇವೆ. ಭಗವಂತನ ಮುಖ ಸಿಂಹದ್ದು. ಹೃದಯ ಮಾನವನದ್ದು. ನಮ್ಮದು ಸ್ವಲ್ಪ ಭಿನ್ನವಾಗಿದೆ. ನಮ್ಮ ಮುಖ, ಮಾನವರ ಮುಖ. ಹೃದಯ, ಸಿಂಹದ ಹೃದಯ.

ಮಾನವರಿಗೂ ದೇವರಿಗೂ ಇರುವ ವ್ಯತ್ಯಾಸ ಇಷ್ಟೇ! ಪಶುತ್ವವನ್ನು ಒಳಗೆ ತುಂಬಿಕೊಂಡು ಮಾನವ ಮುಖವಾಡವನ್ನು ಧರಿಸಿದ್ದೇವೆ. ಇದರಿಂದ ಅಪಾಯ ಹೆಚ್ಚು. ನಮ್ಮ ವರ್ತನೆಯಲ್ಲಿ ನಯವಿನಯಗಳಿಲ್ಲ. ಕಾಠಣ್ಯದ ನಡವಳಿಕೆ. ಆದರೆ ಭಗವಂತ ಪ್ರಹ್ಲಾದನ ವಿಷಯದಲ್ಲಿ ತೋರಿದ ಕರುಣೆ ಆದರ್ಶಪ್ರಾಯವಾದದ್ದು. 'ಭಗವಂತ ತನ್ನ ಭಕ್ತರನ್ನು ಎಂದೂ ಬಿಡುವವನಲ್ಲ' ಎಂಬುದು ಈ ಕಥೆಯಿಂದ ನಮಗೆ ಸ್ಪಷ್ಟವಾಯಿತು. ಇದನ್ನು ಅರ್ಥಮಾಡಿಕೊಂಡು ಜೀವನದಲ್ಲಿ ಸಾಗಬೇಕು.

## ವರ್ಣಾಶ್ರಮಧರ್ಮಗಳು

ಮುಂದೆ ಧರ್ಮರಾಜನು ನಾರದರ ಬಳಿ ವರ್ಣಾಶ್ರಮಧರ್ಮಗಳ ಬಗ್ಗೆ ಪ್ರಶ್ನಿಸುತ್ತಾನೆ.

ನಾರದರು ಸಂಕ್ಷಿಪ್ತವಾಗಿ ಅದನ್ನು ವಿವರಿಸಿ, ಧರ್ಮದ ಹಾದಿಯನ್ನು ಹೇಗ ತಿಳಿಯಬೇಕೆಂದು ನಿರೂಪಿಸಿದ್ದಾರೆ.

ಇದೇ ಸಂದರ್ಭದಲ್ಲಿ ಸ್ತ್ರೀಯರ ಕರ್ತವ್ಯಗಳೇನು? ಎಂಬುದನ್ನು ತಿಳಿಸಿದ್ದಾರೆ

ಸ್ತ್ರೀಯರು ಪತಿವ್ರತೆಯರಾಗಿ ಪತಿಸೇವೆಯನ್ನು ಮಾಡಬೇಕು. ಮನೆಯ ಕಶ್ಮಲವನ್ನೆಲ್ಲಾ ತೆಗೆದು ಗೋಮಯದಿಂದ ಸಾರಿಸಿ ರಂಗೋಲಿಯಿಂದ ಅಲಂಕರಿಸಬೇಕು. ತಮ್ಮ ಮಕ್ಕಳಿಗೂ ಉತ್ತಮ ಸಂಸ್ಕಾರಗಳನ್ನು ನೀಡಬೇಕು. ಮನೆಯ ಶುದ್ಧಿ ಮತ್ತು ಮಕ್ಕಳ ಮನಸ್ಸಿನ ಶುದ್ಧಿ ಇವೆರಡರ ಜವಾಬ್ದಾರಿ ಸ್ತ್ರೀಯರದ್ದು. ಗಂಡ ಸದೋಷಿಯಾಗಿದ್ದರೂ ಅವನ ಅಂತರ್ಗತನಾದ ನಿರ್ದೋಷಿಯಾದ ಭಗವಂತನನ್ನು ಅರಿತು ಪತಿಸೇವೆಯನ್ನು ಮಾಡಬೇಕು. ತಾನೂ ಸಹ ಉತ್ತಮ ಉಡುಪುಗಳಿಂದ ಅಲಂಕೃತಳಾಗಬೇಕು. ಹೀಗೆ ಮನೆ, ಮಕ್ಕಳು, ಮಮತೆಯ ಪತಿ, ಎಲ್ಲರ ಹಿತಚಿಂತಕಳಾಗಿ ಇರಬೇಕು. ಸ್ತ್ರೀಯರೆಂದರೆ ಕೇವಲ ಮನೆಯಲ್ಲಿ ಎಣ್ಣೆಯ ದೀಪ ಹಚ್ಚುವವರಲ್ಲ. ಸನಾತನ ಧರ್ಮದ ಜ್ಯೋತಿಯು ನಂದದಂತೆ ಬೆಳಗುವ ನಂದಾದೀಪವಾಗಿ ಸ್ತ್ರೀಯು ತನ್ನನ್ನು ತೊಡಗಿಸಿಕೊಳ್ಳಬೇಕು. ಸಮಾಜದ ಉನ್ನತಿಗೆ ಕಾರಣವಾದದ್ದು ಗೃಹಿಣಿಯರ ಮನೆ. ಆ ಮನೆಯನ್ನು ಎಲ್ಲ ರೀತಿಯಿಂದ ಸರಿಪಡಿಸಿದಾಗ ಸಮಾಜವು ಸರ್ವಾಂಗಸುಂದರವಾಗುತ್ತದೆ. ಇದರ ಸಮಗ್ರ ಜವಾಬ್ದಾರಿ ಮಹಿಳೆಯರ ಮೇಲಿದೆ ಎಂದು ಭಾಗವತ ತಿಳಿಸುತ್ತಿದೆ.

ಇನ್ನು ಸಂನ್ಯಾಸಿಗಳು ಯಾವ ರೀತಿಯಲ್ಲಿ ಇರಬೇಕು ಎನ್ನುವುದನ್ನು ಶ್ರೀಮದಾಚಾರ್ಯರೂ ತಿಳಿಸಿದ್ದಾರೆ–

'ಸ್ವೀಯವಿತ್ತೇನ ತು ವಿನಾ ಸದಾ' ಎಂದು. ಸನ್ಯಾಸಿಗಳಿಗೆ ತಮ್ಮ ಸ್ವಂತ ಹಣ ಎಂಬುದು ಯಾವುದೂ ಇರಬಾರದು. ಪಾದಪೂಜೆಯ ಹಣದಲ್ಲಿಯೂ ಅವರಿಗೆ ಅಧಿಕಾರವಿಲ್ಲ. ತನಗೆ ಬಂದಿದ್ದನ್ನು ಭಗವಂತನ ಸೇವೆಗಾಗಿ ಬಳಸಬೇಕು. ಜ್ಞಾನಪ್ರಸಾರಕ್ಕೆ ವಿನಿಯೋಗಿಸಬೇಕು. 'ತನ್ನ ಹಣ' ಎಂದಿರಬಾರದು. ಒಬ್ಬ ಯತಿಯು ಸ್ತ್ರೀ, ಭೂಮಿ, ಬಂಗಾರ ಇವುಗಳನ್ನೆಲ್ಲಾ ತನ್ನದೆಂದು ಪರಿಗ್ರಹಿಸಿದರೆ ಅತ್ಯಂತ ಪಾಪಿಯಾಗುತ್ತಾನೆ. ಅಂತಹ ಸಂನ್ಯಾಸಿಯನ್ನು ನೋಡಿದವ ಸಚ್ಚೈಲಸ್ನಾನ ಮಾಡಬೇಕು ಎನ್ನುತ್ತಾರೆ. (ಸ್ತ್ರೀಭೂಹಿರಣ್ಯ ಪಶವಃ)

## ಪ್ರಹ್ಲಾದ ಮುನಿ ಸಂವಾದ

ಸಂನ್ಯಾಸಿಯಾದವನು ಧರ್ಮದರ್ಶಿಯಾಗಿ ಇರಬೇಕು. ತನ್ನ ಬಳಿ ಬಂದ ಸಂಪತ್ತನ್ನೆಲ್ಲಾ ಹರಿಯ ಆರಾಧನೆಗೆ ಲೋಕಕಲ್ಯಾಣಕ್ಕಾಗಿ ಉಪಯೋಗಿಸಬೇಕು. ಶಿಷ್ಯರ ಬಳಿ ಬಯಕೆಗಳನ್ನು ಮುಂದಿಡಬಾರದು. ಹೀಗೆ ಸಂನ್ಯಾಸಿಗಳೂ

ಆತ್ಮಾವಲೋಕನ ಮಾಡಿಕೊಳ್ಳಬೇಕೆಂಬ ದೃಷ್ಟಿಯಿಂದ ಭಾಗವತ ಯತಿಧರ್ಮವನ್ನು ನಿರೂಪಿಸಿದೆ

ಯತಿಧರ್ಮಗಳ ವಿಷಯದಲ್ಲಿ ಪ್ರಹ್ಲಾದನಿಗೂ ಒಬ್ಬ ಮುನಿಗೂ ನಡೆದ ಸಂವಾದವನ್ನು ಹೇಳುತ್ತಾರೆ–

ಒಮ್ಮೆ ಪ್ರಹ್ಲಾದನು ಸಂಚರಿಸುತ್ತಾ ಸಹ್ಯಪರ್ವತ ಪ್ರದೇಶಕ್ಕೆ ತೆರಳಿದ ಅಲ್ಲಿಯೇ ಕಾವೇರಿ ತೀರದಲ್ಲಿ ತೇಜಸ್ಸಿನಿಂದ ಕಂಗೊಳಿಸುವ ಸನ್ಯಾಸಿಯೊಬ್ಬ ನೆಲದ ಮೇಲೆ ಮಲಗಿದ್ದ. ಪ್ರಹ್ಲಾದ ಅವನನ್ನು ಸಮೀಪಿಸಿದ. ಸಂನ್ಯಾಸಿಯನ್ನು ಪ್ರಶ್ನಿಸಿದ.

ಎಲೈ! ಸಾಧುವೇ! ಆನಂದದಿಂದ ಮೈಮರೆತು ಮಲಗಿರುವಿ. ಭೋಗಗಳನ್ನು ಅನುಭವಿಸುವವನಂತೆ ಪುಷ್ಟವಾಗಿ ಬೆಳೆದಿರುವಿ. ನೋಡಲು ನಿನ್ನ ಬಳಿ ಹುಡಿಗಾಸೂ ಇಲ್ಲ ಹಣವಿಲ್ಲದೆ ಭೋಗವಿಲ್ಲ. ಆದರೂ ನಿನ್ನ ದೇಹದ ಪುಷ್ಟಿಯನ್ನು ನೋಡಿದರೆ ಬಡವನೆನ್ನಿಸುವುದಿಲ್ಲ. ಇದರ ರಹಸ್ಯ ಏನು? ಬಾಧಕವಿಲ್ಲದಿದ್ದರೆ ಉತ್ತರಿಸು! ಎಂದ.

ಪ್ರಹ್ಲಾದನಿಗೆ ಬ್ರಾಹ್ಮಣ ಉತ್ತರಿಸಿದ –ಎಲೈ ಅಸುರಶ್ರೇಷ್ಠನೇ! ನೀನು ಭಗವಂತನ ಅನುಗ್ರಹವನ್ನು ಪಡೆದಿದ್ದೀ. ಆರ್ಯರಿಗೆ ಸಮ್ಮತನಾಗಿರುವಿ. ನಿನ್ನ ಹೃದಯ ಪರಿಶುದ್ಧವಾಗಲು ನಿನ್ನ ಭಗವದ್ಭಕ್ತಿಯೇ ಕಾರಣ ಮುಂತಾಗಿ ಪ್ರಹ್ಲಾದನನ್ನು ಸ್ತುತಿಸಿ, ತನ್ನ ಆನಂದಕ್ಕೆ ನಿದಾನವೇನೆಂಬುದನ್ನು ತಿಳಿಸಿದರು.

'ನಾನು ಹಿಂದೆ ಸಂಸಾರಕ್ಕೆ ಕಾರಣವಾದ ಆಶೆ ಎಂಬ ಪಾಶಕ್ಕೆ ಸಿಕ್ಕಿಬಿದ್ದವ. ನಾನಾ ಯೋನಿಗಳಲ್ಲಿ ಹುಟ್ಟಿದೆ. ಪ್ರವೃತ್ತಿಮಾರ್ಗದಲ್ಲಿ ಆಸಕ್ತನಾಗಿ ಕರ್ಮಬಂಧನದಲ್ಲಿ ಸಿಲುಕಿ ಸುಖದುಃಖಗಳನ್ನನುಭವಿಸಿದೆ. ಸಾಕೆನಿಸಿತು. ನಿವೃತ್ತಿಮಾರ್ಗದಲ್ಲಿ ರತನಾದೆ. ಭಗವದ್ಧ್ಯಾನವನ್ನು ಮೈಗೂಡಿಸಿಕೊಂಡೆ. ಇದರಲ್ಲಿ ಆನಂದವಿದೆ.'

ಸಂಪತ್ತನ್ನು ಗಳಿಸುವ ಹಣವಂತರಿಗೆ ನಿರಂತರ ಹೆದರಿಕೆ. ಹಣವನ್ನು ಹೇಗೆ ಉಳಿಸಿಕೊಳ್ಳುವುದು, ಹೇಗೆ ಬೆಳೆಸುವುದು ಎಂಬ ನಿರಂತರ ಚಿಂತನೆಯಿಂದ ಆನಂದವೇ ಇಲ್ಲ. ಎಷ್ಟೇ ಸಂಪತ್ತು ಅಧಿಕಾರಗಳಿದ್ದರೂ ಇವರಿಗೆ ನೆಮ್ಮದಿ ಎನ್ನುವುದು ಎಳ್ಳಷ್ಟೂ ಇರುವುದಿಲ್ಲ. ಕಳ್ಳರಿಂದ, ಶತ್ರುಗಳಿಂದ, ಸ್ವಕೀಯರಿಂದ ಧನವನ್ನು ಹೇಗೆ ರಕ್ಷಿಸುವುದು ಎಂಬ ಕಳವಳದಲ್ಲಿಯೇ ಜೀವನ ಸಾಗಿಸುತ್ತಾನೆ. ಈ ಸತ್ಯ ಸಂಗತಿಯನ್ನು ಅರಿಯಬೇಕು. ಸುಖದ ವಿಶಾಲ ತಾಣದ ಕಡೆ ಸಾಗಬೇಕು. ದುಃಖಕ್ಕೆ ಬೆನ್ನುಹಾಕಬೇಕೆಂದಿದ್ದರೆ ಅದ್ಕಕೊಂದೇ ಉಪಾಯಃ ಆಸೆಯ ಪಾಶಕ್ಕೆ ಸಿಕ್ಕಿಬೀಳದೆ ಭಗವಧ್ಯಾನರತನಾಗುವುದು.

ಆನಂದ ನಮ್ಮೊಳಗೇ ಅಡಗಿದೆ.

ನಾವು ಬಾಯಾರಿದ್ದೇವೆ. ಕುಡಿಯಲು ನೀರು ಬೇಕಾಗಿದೆ. ಅದರ ಹುಡುಕಾಟದಲ್ಲಿದ್ದೇವೆ. ನಮ್ಮ ಪಕ್ಕದಲ್ಲಿಯೇ ನೀರಿದೆ. ಆದರೆ ಆ ನೀರು ಹುಲ್ಲು ತರಗೆಲೆಗಳಿಂದ ಮುಚ್ಚಿಹೋಗಿದೆ. ಅದನ್ನು ನಾವು ಕಾಣುತ್ತಿಲ್ಲ. ದೂರದಲ್ಲಿ ಬಿಸುಲುಗುದುರೆ

ಕಾಣುಸುತ್ತಿದೆ. ದಾಹ ಪರಿಹಾರಕ್ಕಾಗಿ ಮರುಮರೀಚಿಕೆಯನ್ನೇ ನೀರೆಂದು ಭಾವಿಸಿ ದೌಡಾಯಿಸುತ್ತೇವೆ.

ಅದರಂತೆ ಆನಂದದ ವಿಧಿ ನಮ್ಮಲ್ಲಿಯೇ ಇದೆ. ಸಂಸಾರದ ಆಸೆಗಳೆಂಬ ದಾಹವನ್ನು ತಣಿಸುವ ಅಮೃತರಸದ ಸಮುದ್ರವನ್ನೇ ಹೊಂದಿದ್ದೇವೆ. ಆದರೂ ಇದಕ್ಕೆ ಅಜ್ಞಾನವೆಂಬ ಬಲೆ ಬೆಸೆದುಕೊಂಡಿದೆ. ಭಗವಂತನ ಸಾಕ್ಷಾತ್ಕಾರದಿಂದ ಈ ಅಜ್ಞಾನದ ಬಲೆ ಹರಿದುಹೋದರೆ ಆನಂದ ಸಾಗರದಲ್ಲಿ ತೇಲಾಡುತ್ತೇವೆ. ಈ ಒಳಗಿನ ಆನಂದದ ಅರಿವಿಲ್ಲದಾಗ ಹೊರಗಡೆ ಆನಂದವಿದೆ ಎಂಬ ಭ್ರಾಂತಿಯಿಂದ ಸಿಕ್ಕಿದ ಕಡೆ ಓಡುತ್ತೇವೆ. ಎಲ್ಲಿಗೆ ಹೋದರು ನಿಜಾನಂದ ಪಡೆಯಲಾರೆವು. ಈ ಎಚ್ಚರ ನಿಮ್ಮಲ್ಲಿ ಇಲ್ಲವಾಗಿದೆ ಎನ್ನುತ್ತಾನೆ ಸಾಧು.

ಒಬ್ಬನಿಗೆ ನೀರು ಕಾಯಿಸಲು ಬೆಂಕಿ ಬೇಕಾಯಿತು. ತನ್ನ ಬಳಿ ಬೆಂಕಿ ಹಚ್ಚಲು ಬೆಂಕಿಕಡ್ಡಿ ಇಲ್ಲವೆಂದು ಕಂದೀಲು ಹಿಡಿದುಕೊಂಡು ಪಕ್ಕದ ಮನೆಗೆ ತೆರಳಿದ. ಮಲಗಿದವನನ್ನು ಎಬ್ಬಿಸಿ ಬೆಂಕಿಕಡ್ಡಿ ಕೇಳಿದ. ಎದ್ದವ ಕೇಳಿದ. ಕೈಯಲ್ಲಿಯೇ ಕಂದೀಲು ಹಿಡಿದು ಬೆಂಕಿಗೇಕೆ ಬಂದೆ? ಎಂದು. ಅವನಿಗೆ ಆವಾಗ ಎಚ್ಚರವಾಯಿತು. ಹೋ! ಎಂದು ಹಿಂತಿರುಗಿದ.

ನಮ್ಮ ಸ್ಥಿತಿಯೂ ಹೀಗೆಯೇ ಆಗಿದೆ. ಎಚ್ಚರದಲ್ಲಿದ್ದರೂ ಅಜ್ಞಾನವೆಂಬ ನಿದ್ರೆಯಲ್ಲಿಯೇ ಇದ್ದೇವೆ. ನಮ್ಮಲ್ಲಿಯೇ ಇರುವ ಆನಂದಪ್ರಾಪ್ತಿಗೆ ಯಾರ ಬಳಿಯೂ ಸಾಗಬೇಕಿಲ್ಲ. ಈ ಜ್ಞಾನವಿಲ್ಲದೆ ನೂರೆಂಟು ಬವಣೆ ಪಡುತ್ತಿದ್ದೇವೆ.

ನಮ್ಮ ಬಳಿ ಎಣ್ಣೆಯ ದೀಪವಿದ್ದರೆ ಎಣ್ಣೆಗಾಗಿ ಬೇರೆಡೆ ಸಾಗಬೇಕು. ರತ್ನದ ದೀಪವಿದ್ದರೆ ಎಣ್ಣೆ ಬತ್ತಿ ಕಡ್ಡಿ ಯಾವುದೂ ಬೇಡ. ನಾವೆಲ್ಲರೂ ರತ್ನದ ದೀಪವಿದ್ದಂತೆ. ಇದನ್ನು ಅರಿಯದೆ ಸುಖಕ್ಕಾಗಿ ಬೇರೆಡೆ ವ್ಯರ್ಥವಾಗಿ ಸಂಚರಿಸುತ್ತಿದ್ದೇವೆ. ಸಂನ್ಯಾಸಿ ಹೇಳಿದ ಮಾತಿದು: ಈ ಜ್ಞಾನವಿಲ್ಲದೆ ವ್ಯರ್ಥ ಸಂಚಾರದಿಂದ ಕೃಶವಾಗಿದ್ದೀರಿ. ನಾನಾದರೊ ನನ್ನೊಳಿರುವ ಹರಿಚಿಂತನೆಯಿಂದ ಆನಂದತುಂದಿಲನಾಗಿದ್ದೇನೆ. ನಮ್ಮೊಳಗೆ ಹರಿಯ ಅರಿವು ಹಿರಿದಾಗಿ ಬೆಳೆದಾಗ, ಪುಷ್ಟರು ಆಗುತ್ತೇವೆ. ತುಷ್ಟರೂ ಆಗುತ್ತೇವೆ ಎಂದ.

## ಗೃಹಸ್ಥನ ಧರ್ಮ

ಹೀಗೆ ಭಾಗವತವು ತ್ಯಾಗದಿಂದ ಎಂತಹ ಆನಂದವನ್ನು ಅನುಭವಿಸಬಹುದೆಂದು ತಿಳಿಸಿ ಗೃಹಸ್ಥಧರ್ಮವನ್ನು ತಿಳಿಸುತ್ತಿದೆ.

ಗೃಹಸ್ಥನು ಶ್ರಾದ್ಧ, ಹೋಮ, ವೇದಾಧ್ಯಯನ, ಅತಿಥಿಸತ್ಕಾರ, ಪಂಚಯಜ್ಞಗಳನ್ನು ತಪ್ಪದೆ ಮಾಡಬೇಕು. ಭಗವಂತ ತಿಳಿಸಿದ ಕರ್ತವ್ಯಗಳನ್ನು ಮಾಡದೆ ಯಾವ ಸುಖವನ್ನು ಪಡೆಯಬಾರದು. ಅತಿ ಆಸೆ ಎಂದೂ ಮಾಡಬಾರದು. ಭಗವದ್ದತ್ತವಾದ ಸರ್ವಸ್ವವೂ ಎಲ್ಲರಿಗೂ ಸೇರಿದ್ದು ಎಂಬ ಎಚ್ಚರಬೇಕು. ಹೊಟ್ಟೆತುಂಬುವಷ್ಟು ಆಹಾರವನ್ನು ಮಾತ್ರ ಸ್ವೀಕರಿಸಬೇಕು.

**ಯಾವದ್ ಭ್ರಿಯೇತ ಜಠರಂ ತಾವತ್ ಸ್ವತ್ವಂ ಹಿ ದೇಹಿನಾಮ್ ।**
**ಅಧಿಕಂ ಯೋಽಭಿಮನ್ಯೇತ ಸ ಸ್ತೇನೋ ದಂಡಮರ್ಹತಿ ॥** — (೭.೧೪-೮)

"ತನ್ನ ಹೊಟ್ಟೆತುಂಬುವಷ್ಟು ತನಗೆ ಸೇರಿದ್ದು. ಇದಕ್ಕಿಂತ ಹೆಚ್ಚು ಸ್ವೀಕರಿಸಿದರೆ ಸ ಸ್ತೇನಃ = ಅವನು ಕಳ್ಳ! ಎಂದು ಭಾಗವತವು ಎಚ್ಚರಿಕೆಯ ಘೋಷಣೆಯನ್ನು ಮಾಡುತ್ತಿದೆ. ಹೆಚ್ಚು ಪಡೆಯಲು ಯಾರಿಗೂ ಅಧಿಕಾರವಿಲ್ಲ. ತನಗೆ ಬೇಕಾದ್ದನ್ನು ಪಡೆಯಬೇಕಿದ್ದರೂ–

**ಕುರ್ವನ್ನೇವ ಇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ ।**

ಕರ್ತವ್ಯವನ್ನು ಮಾಡಿಯೇ ಸ್ವೀಕರಿಸಬೇಕು. ಗೃಹಸ್ಥನು ತಾನು ತನ್ನವರು ಎಂಬ ಸ್ವಾರ್ಥವನ್ನು ಬಿಟ್ಟು, ಅತಿಥಿಗಳು, ದೇವತೆಗಳು, ಬಡವರು, ಪ್ರಾಣಿಗಳು ಎಲ್ಲೆಡೆಯೂ ದೃಷ್ಟಿಬೀರಬೇಕು. ಅತಿ ಆಸೆಯನ್ನು ಬಿಡಬೇಕು. ಭಗವನ್ನಿಷ್ಠೆ ಅಳವಡಿಸಿಕೊಳ್ಳಬೇಕು. ಸಮಾಜದ ದೃಷ್ಟಿ ಬೇಕು. ಎಲ್ಲಾ ಕರ್ತವ್ಯಗಳನ್ನು ಭಗವಂತನಿಗೆ ಅರ್ಪಿಸುತ್ತಾ ನಿರ್ಲಿಪ್ತನಾಗಿರಬೇಕು.''

ಹೀಗೆ ಎಲ್ಲರ ಕರ್ತವ್ಯಗಳು ಯಾವ ಯಾವ ರೀತಿ ಇರಬೇಕೆಂದು ಭಾಗವತವು ಉತ್ತಮ ಸಂದೇಶವನ್ನು ನೀಡಿ ಇಂದ್ರಿಯನಿಗ್ರಹ ಮುಖ್ಯವಾದದ್ದೆಂದು ತಿಳಿಸುತ್ತಿದೆ.

## ಸಾಧಕರಿಗೆ ಕಿವಿಮಾತು

ಒಬ್ಬ ರಥಿಕನಿಗೆ ತನ್ನ ಗುರಿಯನ್ನು ಮುಟ್ಟಲು ಏನೆಲ್ಲ ಸಾಧನಗಳು ಬೇಕೋ ಅದರಂತೆ ಭಗವಂತನನ್ನು ಹೊಂದಲು ಬಯಸುವ ಸಾಧಕನಿಗೂ ಎಲ್ಲಾ ಸಾಧನಗಳು ಬೇಕು.

ಭಗವಂತನನ್ನು ಹೊಂದುವುದೇ ನಮ್ಮ ಜೀವನದ ಗುರಿ ಅಗಬೇಕು. ಬಾಣವನ್ನು ಬಿಡುವಾಗ ಒಂದು ಗುರಿ ಬೇಕು. ಆ ಗುರಿಯೇ ಭಗವಂತ. ನಮ್ಮ ಮನಸ್ಸೆಂಬ ಬಾಣವನ್ನು ಭಗವಂತನೆಡೆ ಹೂಡಬೇಕು. ಬಾಣ ಸಾಗಲು ಧನುಸ್ಸು ಬೇಕು. ಧನುಸ್ಸಿಲ್ಲದೆ ಬಾಣಕ್ಕೆ ಬಲ ಬಾರದು. ಇಲ್ಲಿ ವೇದಗಳೇ ಧನುಸ್ಸು. ಶಾಸ್ತ್ರದ ಆಧಾರವಿಲ್ಲದೆ ಮನಸ್ಸಿಗೆ ಬಲ ಬಾರದು. ಶಾಸ್ತ್ರದ ಹಿನ್ನೆಲೆಯಿಂದ ಮನಸ್ಸು ಭಗವಂತನ ಕಡೆ ಸಾಗಬೇಕು. ಇದಕ್ಕೆ ಪೂರಕವಾಗಿ ರಥಿಕನಿಗೆ ರಥದಂತೆ ನಮಗೆ ಶರೀರವೆಂಬ ರಥ ಬೇಕು. ಕೇವಲ ರಥಕ್ಕೆ ಚಲನೆಯಿಲ್ಲ. ಅದಕ್ಕೆ ಇಂದ್ರಿಯಗಳೆಂಬ ಕುದುರೆಗಳು ಬೇಕು. ಕಡಿವಾಣವಿಲ್ಲದ ಇಂದ್ರಿಯಗಳೆಂಬ ಕುದುರೆ ಕಂದಕಕ್ಕೆ ಕೊಂಡೊಯ್ಯಬಹುದು. ಅದಕ್ಕಾಗಿ ಮನಸ್ಸೆಂಬ ಕಡಿವಾಣ ಬೇಕು. ರಥ ಚಲಿಸಲು ದಾರಿ ಬೇಕು. ಇಲ್ಲಿ ವಿಷಯಗಳೇ ಮಾರ್ಗ. ರಥಿಕನಿಗೆ ಸಾರಥಿ ಬೇಕು. ನಾವು ಬುದ್ಧಿಯನ್ನೇ ಸಾರಥಿಯನ್ನಾಗಿ ಮಾಡಿಕೊಳ್ಳಬೇಕು. ರಥದ ಮಧ್ಯದಂತೆ ಶರೀರಾಖ್ಯ ರಥದಲ್ಲಿ ಹೃದ್ದೇಶದಲ್ಲಿ ಈಶ್ವರನಿದ್ದಾನೆ. ರಥಿಕನಾದರೂ ಜೀವನೇ ಸರಿ. ರಥಚಕ್ರದ ದೃಢತೆಗಾಗಿ ಪೋಣಿಸಿದ ಅರಗಳಂತೆ ಪ್ರಾಣಾಪಾನಾದಿ ದಶಪ್ರಾಣರ ಬೆಂಬಲ ಬೇಕು.

ಧರ್ಮಾಧರ್ಮಗಳೇ ಚಕ್ರಗಳಾಗಿ ಬರಬೇಕು ಹೀಗಾದಾಗ ಮಾತ್ರ ಭಗವಂತನೆಂಬ ಗುರಿಯನ್ನು ನಾವು ಮುಟ್ಟಲು ಸಾಧ್ಯ.

ಹೀಗೆ ಆತ್ಮೋನ್ನತಿಗೆ ಕಾರಣವಾದ ಅತ್ಯಂತ ಮೌಲಿಕವಾದ ಚಿಂತನೆಗಳಿಂದ ಕೂಡಿದ ಭಾಗವತ ಅತ್ಯಂತ ಉತ್ಕೃಷ್ಟ ಗ್ರಂಥವಾಗಿದೆ. ಇಂತಹ ತತ್ವಗಳನ್ನು ಶುಕಾಚಾರ್ಯರು ಪರೀಕ್ಷಿತನಿಗೆ ಹೇಳಿದರು. ಅದನ್ನು ಸೂತರು ಶೌನಕರಿಗೆ ಹೇಳಿದರು ಎಂಬಲ್ಲಿಗೆ ನವಮಸ್ಕಂಧವು ಲಕ್ಷ್ಮೀಹಯಗ್ರೀವನಿಗೆ ಸಮರ್ಪಿತವಾಯಿತು.

**ಮಧ್ವೇಶಾರ್ಪಣಮಸ್ತು.**

# ಅಥ ಅಷ್ಟಮ ಸ್ಕಂಧಃ

ಅಷ್ಟಮ ಸ್ಕಂಧದ ಆರಂಭದಲ್ಲಿ ಯಜ್ಞರೂಪಿ ಪರಮಾತ್ಮನ ಅವತಾರದ ಉಲ್ಲೇಖವಿದೆ.

ಸ್ವಾಯಂಭುವ ಮನು ಭಗವಂತನನ್ನು ಈಶಾವಾಸ್ಯೋಪನಿಷತ್ತಿನ ಮಂತ್ರಗಳಿಂದ ಸ್ತೋತ್ರಮಾಡುತ್ತಿದ್ದಾನೆ. ಅದೇ ಸಂದರ್ಭದಲ್ಲಿ ದೈತ್ಯರೆಲ್ಲರೂ ಮನುವನ್ನು ತಿನ್ನಲಿಕ್ಕೆ ಓಡಿಬಂದರು. ರುದ್ರದೇವರ ವರಬಲದಿಂದ ಅವಧ್ಯರಾಗಿ ದರ್ಪಿಷ್ಟರಾಗಿದ್ದರು. ತನ್ನ ಭಕ್ತನಿಗೆ ಅನ್ಯಾಯಮಾಡಬಯಸಿದ ದೈತ್ಯರನ್ನು ಯಜ್ಞನಾಮಕ ಭಗವಂತ ಸಂಹರಿಸಿದ. ಮನನಶೀಲನಾದ ಮನುವನ್ನು ರಕ್ಷಿಸಿದ. ಮನುವಿಗೆ ಉಪನಿಷತ್ತಿನ ಮಂತ್ರಗಳೇ ತಾರಕವಾದವು.

ಇಂದು ನಮ್ಮನ್ನು ಅಸುರರು ನುಂಗಲು ಬಂದಿದ್ದಾರೆ. ಮನುವನ್ನು ನಿಜರೂಪದಿಂದ ನುಂಗಲು ಬಂದರೇ ಇಂದು ಕೆಟ್ಟ ವಿಷಯಗಳಲ್ಲಿ ಸನ್ನಿಹಿತರಾಗಿ ನುಂಗುತ್ತಿದ್ದಾರೆ.

**ದೈತ್ಯೇಷು ಅಸಂಗಂ ವಿಷಯಾತ್ಮಕೇಷು**

ಮನುಜರೆಲ್ಲರೂ ಚಟಗಳಿಗೆ ಬಲಿಯಾಗುತ್ತಾರೆ. ಮೊದಲು ಮದ್ಯವನ್ನು ಇವರು ಕುಡಿಯುತ್ತಾರೆ. ಅನಂತರ ಮದ್ಯವೇ ಇವನನ್ನು ಕುಡಿಯುತ್ತದೆ. ಈ ದುಶ್ಚಟಗಳೆಂಬ ದೈತ್ಯರ ವಿಷವರ್ತುಲದಿಂದ ಬಿಡುಗಡೆಯನ್ನು ಹೊಂದುವುದು ಹೇಗೆ? ಚಿಂತೆ ಬೇಡ. ಮನುವಿಗೆ ತಾರಕವಾದ ಮಂತ್ರಗಳೇ ನಮಗೂ ತಾರಕ. ವಿಷಯ ಸನ್ನಿಹಿತರಾದ ದೈತ್ಯರಿಂದ ರಕ್ಷಣೆ ಪಡೆಯಬೇಕಿದ್ದರೇ ಈಶಾವಾಸ್ಯೋಪನಿಷತ್ತನ್ನೇ ಆಶ್ರಯಿಸಬೇಕು.

## ಬದುಕಿಗೆ 'ನಾಲ್ಕು' ಬೇಕು

ಅಸ್ಥಿರವಾದ ಬದುಕಿಗೂ ಒಂದು ಅರ್ಥವಿದೆ. ಇದು ಅವರವರಿಗೆ ವಿಹಿತವಾದ ಕರ್ತವ್ಯಗಳನ್ನು ಮಾಡಿದಾಗ ಮಾತ್ರ.

ಒಂದು ಮಂಟಪಕ್ಕೆ ನಾಲ್ಕು ಸ್ತಂಭಗಳು ಬೇಕು. ಹಾಗೆಯೇ ಜೀವನವೆಂಬ ಸುಂದರ ಮಂಟಪಕ್ಕೂ ನಾಲ್ಕು ಕಂಬಗಳ ಆಸರೆ ಬೇಕು. ಅದರಲ್ಲಿ ಕರ್ತವ್ಯ ಒಂದಾದರೆ, ಪರಮಾತ್ಮನ ವಿಷಯಕವಾದ ಜ್ಞಾನ, ಭಕ್ತಿಗಳೆರಡು ಜೀವನದ ಉಸಿರಿನಂತಾಗಬೇಕು. ದೇಹದ ತೊಗಲಿನಂತೆ ವೈರಾಗ್ಯವನ್ನು ಮೈಗೂಡಿಸಿಕೊಳ್ಳಬೇಕು.

ಜಗತ್ತಿಗೆ ಸ್ವಾಮಿಯಾದ ಭಗವಂತನಿದ್ದರೆ ಮಾತ್ರ ಜಗತ್ತಿನ ಚಲನೆ. ಆತ್ಮನಿಲ್ಲದೆ ಶರೀರಕ್ಕೆ ಚಲನೆ ಇಲ್ಲ. ಅದರಂತೆ ಭಗವಂತನಿಲ್ಲದೆ ಬದುಕಿಲ್ಲ ಎಂಬ ಈ ಭಗವದ್ಭಕ್ತಿ ಜಾಗೃತವಾಗಬೇಕಾದರೆ ವಿಷಯವೈರಾಗ್ಯ ಅತ್ಯಗತ್ಯ. ಜೀವನದಲ್ಲಿ ಏನು ಬರುವುದೋ

ಅದನ್ನು ಹರಿಪ್ರಸಾದ ಎಂದು ಸ್ವೀಕರಿಸಿ ತೃಪ್ತರಾಗಿರಬೇಕು. ಆಸೆ ಅಹಂಕಾರಗಳಿಂದ ದೂರವಿರಬೇಕು. ಎಲ್ಲಾ ಅವ್ಯವಹಾರಗಳಿಗೆ ದುರಾಶೆಯೇ ಕಾರಣ.

ಈ ದುರಾಶೆ ಎಂಬ ಕೊಡಲಿ ಭಗವದ್ಭಕ್ತಿಯೆಂಬ ಬೇರನ್ನೇ ಕಿತ್ತುಹಾಕುತ್ತದೆ. ವಿಷಯವೈರಾಗ್ಯ, ಭಕ್ತಿಲತೆಯನ್ನು ಬೆಳೆಸುತ್ತದೆ.

'ನ್ಯಾಯಮಾರ್ಗದಿಂದ ಗಳಿಸಿದ್ದು ಭಗವಂತ ಕೊಟ್ಟದ್ದು.
ಅನ್ಯಾಯಮಾರ್ಗದಿಂದ ಗಳಿಸಿದ್ದು, ನಾವು ಕದ್ದದ್ದು' –ಈ ಎಚ್ಚರ ಬೇಕು.

ಹೀಗೆ ಜೀವನದಲ್ಲಿ ಮುಖ್ಯವಾಗಿ ಪಡೆಯಬೇಕಾದ್ದು ಈ ನಾಲ್ಕು –ಜ್ಞಾನ, ಭಕ್ತಿ, ವೈರಾಗ್ಯ, ಕರ್ತವ್ಯ.

ಹೀಗೆ ಸ್ವಾಯಂಭುವ ಮನು ಉತ್ತಮವಾದ ಸಂದೇಶಗಳನ್ನು ಜಗತ್ತಿಗೆ ನೀಡಿದ್ದಾನೆ.

## ತಾಪಸ ಮನ್ವಂತರದ ಕಥೆ

ಮನ್ವಂತರಗಳ ವಿವರಣೆಯನ್ನು ನೀಡಿ, ನಾಲ್ಕನೆಯದ್ದಾದ 'ತಾಪಸ' ಮನ್ವಂತರ ದಲ್ಲಿ ನಡೆದ ಘಟನೆಯೊಂದನ್ನು ಭಾಗವತ ನಿರೂಪಿಸುತ್ತಿದೆ.

'ಹಾಹಾ' 'ಹೂಹೂ' ಎಂಬ ಗಂಧರ್ವರಿದ್ದರು. ಇಚ್ಛಾರೂಪಿಗಳಾದ ಇವರಿಗೆ ವಿನೋದದಲ್ಲಿ ಆಸಕ್ತಿ. ಇದರ ವಿನೋದ ಮಿತಿಮೀರಿತು. ವಿನೋದಕ್ಕಾಗಿ ಒಂದು ದಿನ ಮುನಿಗಳನ್ನು ಉಪಯೋಗಿಸಿಕೊಂಡರು.

ಗಂಗಾತೀರದಲ್ಲಿ 'ದೇವಲ'ರೆಂಬ ಮುನಿಗಳು ತಪೋನಿರತರಾಗಿದ್ದರು. ಗಂಧ ರ್ವರು ಇಲ್ಲಿಗೂ ಬಂದರು. ವಿನೋದಕ್ಕಾಗಿ ದೇವಲರನ್ನು ಹೆದರಿಸಬೇಕೆಂದು ಬಯಸಿದರು. 'ಹೂಹೂ' ಮೊಸಳೆಯಾದ. ಗಂಗೆಯಲ್ಲಿ ಬಂದು ಪೂತ್ಕರಿಸಿದ. ದೇವಲರು ಧ್ಯಾನದಿಂದ ಎದ್ದರು. ಮೊಸಳೆಯನ್ನು ನೋಡಿ ದಡಕ್ಕೆ ಓಡಿ ಬಂದರು. ದಡಕ್ಕೆ ಬರುವಾಗ ಅಲ್ಲಿ 'ಹಾಹಾ' ಆನೆಯಾಗಿ ನಿಂತಿದ್ದ. ದೇವಲರನ್ನು ಹಿಡಿದ. ಆಟವಾಡಿಸಿದ. ದೇವಲರು ಧ್ಯಾನದೃಷ್ಟಿಯಿಂದ ಇವರ ಕುದೃಷ್ಟಿಯನ್ನು ಕಂಡರು. ಹೂಹೂವಿಗೆ ಮೊಸಳೆಯಾಗೆಂದು ಶಪಿಸಿದರು. 'ಹಾಹಾ'ನಿಗೆ ರಾಜನಾಗಿ ಆನೆಯಾಗೆಂದರು.

ಹಾಹಾ ಗಂಧರ್ವ ಇಂದ್ರದ್ಯುಮ್ನ ರಾಜನಾದ. ಪಾಂಡ್ಯದೇಶವನ್ನು ಧರ್ಮದಿಂದ ಆಳಿದ. ಕೊನೆಗೆ ತಪಸ್ಸಿಗಾಗಿ ಕಾಡಿಗೆ ಹೊರಟ. ಕಾಡಿನಲ್ಲಿರುವಾಗ ಒಂದು ದಿನ ಅಗಸ್ತ್ಯರು ಬಂದರು. ಪೂಜಾಸಕ್ತನಾದ ರಾಜ ಋಷಿಗಳನ್ನು ಕಂಡರೂ ಗೌರವಿಸಲಿಲ್ಲ. ಸತ್ಕರಿಸದ ರಾಜನಿಗೆ ಪ್ರಾಣಿಯಾಗೆಂದು ಶಪಿಸಿದರು. ನಡೆದರು.

# ಗಜೇಂದ್ರಮೋಕ್ಷ

ಕ್ಷೀರಸಮುದ್ರದ ಮಧ್ಯದಲ್ಲಿ ತ್ರಿಕೂಟವೆಂಬ ಪರ್ವತ. ಆ ಪರ್ವತದಲ್ಲಿ ಬಂಗಾರಮಯವಾದ ಶಿಖರ. ರಜತಮಯವಾದ ಶಿಖರ. ಕಬ್ಬಿಣದ ಶಿಖರ. ಆದ್ದರಿಂದಲೇ 'ತ್ರಿಕೂಟಪರ್ವತ'ವೆಂದು ಹೆಸರು. ಅಲ್ಲೊಂದು ವರುಣನ ಉದ್ಯಾನ ವನ. ಅದರಲ್ಲೊಂದು ಸರೋವರ. ಉದ್ಯಾನವನದಲ್ಲಿ ಇಂದ್ರದ್ಯುಮ್ನ ಶಾಪಗ್ರಸ್ತನಾಗಿ ಆನೆಯಾಗಿ ಹುಟ್ಟಿದರೆ, ಸರೋವರದಲ್ಲಿ 'ಹೂಹೂ' ಗಂಧರ್ವ ಮಕರವಾಗಿ ಹುಟ್ಟಿದ.

ಸುಂದರ ವನದ ಆಹಾರ ಸೇವನೆಯಿಂದ ಆನೆ ಬಲಿಷ್ಠವಾಯಿತು. ಸುಂದರ ಸಂಸಾರವನ್ನು ಬೆಳೆಸಿತು. 'ಋತುಮತ್' ಎಂಬ ಉದ್ಯಾನವನದಲ್ಲಿ ಸ್ವಚ್ಛಂದ ವಿಹಾರ ಮಾಡುತ್ತಿರಲು, ಒಂದು ದಿನ ದಿನಕರನ ತಾಪಕ್ಕೆ ಗುರಿ ಆಯಿತು. ಬಾಯಾರಿತು. ನೀರಿಗಾಗಿ ಪರಿತಪಿಸಿತು. ಮುನಿಶಾಪಕ್ಕೆ ಗುರಿಯಾದ ಗಜರಾಜನಿಗೆ ಸೂರ್ಯನ ತಾಪ ನೆಪವಾಯಿತು. ಸರೋವರವನ್ನು ಸಮೀಪಿಸಿತು. ನೀರುಕುಡಿದು ಸ್ನಾನಮಾಡಿ ಪರಿವಾರದವರೊಟ್ಟಿಗೆ ಜಲಕೇಳಿಯಲ್ಲಿ ಮೈಮರೆಯಿತು. ವಿಷಯ ವಿಷವನ್ನೇ ಅಮೃತವೆಂದು ಸಂತೋಷದಿಂದ ಅನುಭವಿಸುತ್ತಿದ್ದ ಗಜರಾಜನ ಕಾಲನ್ನು ಮೊಸಳೆ ಹಿಡಿದುಕೊಂಡಿತು.

ಗಜರಾಜನ ಬಲವೆಲ್ಲವೂ ನೀರಲ್ಲಿ ನೀರಾಗಿ ಹೋಯಿತು. ಕರಿರಾಜ ದಡಕ್ಕೆಳೆದರೆ ಮಕರ ಒಳಕ್ಕೆಳೆಯಿತು. ಕರಿಮಕರಿಗಳ ಹೋರಾಟದಲ್ಲಿ ಸಾವಿರ ವರ್ಷಗಳು ಕಳೆದು ಹೋದವು. ಸುಖಕಾರಣರೆಂದು ತಿಳಿದವರಾರೂ ರಕ್ಷಿಸಲಿಲ್ಲ. ಬಂಧುಗಳೆಲ್ಲರೂ ದೂರವಾದರು. ನಿದ್ರೆ ಆಹಾರಗಳಿಲ್ಲದೆ ಸಾಗಿದ ಕದನವ ಕಂಡು ದೇವತೆಗಳು ಬೆರಗಾದರು ರಕ್ಷಕರೆಂದು ಭಾವಿಸಿದ ಬಂಧುಗಳೆಲ್ಲ ದೂರಸರಿದಾಗ ನಿಜವಾದ ರಕ್ಷಕನ ಹಂಬಲ ಹುಟ್ಟಿತು. ಅಂತರಾಳದ ಚಿಂತನೆಯಿಂದ ಮಿಂಚಿನ ಸಂಚಾರವಾಯಿತು. ಶ್ರೀಶನಿಲ್ಲದೆ ರಕ್ಷಕರಿಲ್ಲ ಎಂಬ ಜ್ಞಾನದ ಜ್ಯೋತಿ ಬೆಳಗಿತು. ಕರಿರಾಜನ ವದನದಿಂದ ಮಂಗಳಗೀತೆ ಹೊರಹೊಮ್ಮಿತು. ಕರಿರಾಜನ ಮೊರೆಗಾಗಿ ಕಾದುನಿಂತ ಹರಿ ತ್ವರಿತದಿಂದಲಿ ಬಂದ. ಗರುಡಾರೂಢನಾದ ಹರಿಯನ್ನು ಕಂಡ ಕರಿರಾಜನ ಭಕ್ತಿ ಉಕ್ಕೇರಿತು.

**ಸೋಽಂತಃ ಸರಸ್ಯುರುಬಲೇನ ಗೃಹೀತ ಆರ್ತೋ**
**ದೃಷ್ಟ್ವಾಗರುತ್ಮತಿ ಹರಿಂ ಖ ಉಪಾತ್ತಚಕ್ರಮ್ ।**
**ಉತ್ಕ್ಷಿಪ್ಯ ಸಾಂಬುಜಕರಂ ಗಿರಮಾಹ ಕೃಚ್ಛ್ರಾತ್**
**ನಾರಾಯಣಾಖಿಲಗುರೋ ಭಗವನ್ನಮಸ್ತೇ ॥** — (೮-೩-೩೨)

ಸರೋವರದಲ್ಲಿ ಬೆಳೆದ ಕಮಲ ಒಂದನ್ನು ಕರಾಗ್ರದಲ್ಲಿ ಎತ್ತಿಹಿಡಿದು ಕಷ್ಟದಿಂದ ಭಕ್ತಿಯಿಂದ ನಾರಾಯಣ! ಅಖಿಲಗುರೋ! ಭಗವನ್! ನಮಸ್ತೇ ಎಂದು ಕೂಗಿ ವಂದಿಸಿದ.

ಅವನ ಪ್ರಾರ್ಥನೆ ಮುಗಿಯುವಷ್ಟರಲ್ಲಿ ಭಗವಂತ ಕೆಳಗಿಳಿದು ಬಂದು, ಚಕ್ರದಿಂದ ನಕ್ರನನ್ನು ಕತ್ತರಿಸಿ, ಗಜರಾಜನನ್ನೂ ರಕ್ಷಿಸಿದ. ದಯಾಸಮುದ್ರನ ಭಕ್ತವಾತ್ಸಲ್ಯವನ್ನು ಕಂಡು ದೇವತೆಗಳು ಸಂತೋಷದಿಂದ ಗೋವಿಂದನಿಗೆ ವಂದಿಸಿದರು.

## ಕಥೆ ನೀಡಿದ ಸಂದೇಶ

ಈ ಗಜೇಂದ್ರನ ಕಥೆ, ನಮ್ಮ ನಿಮ್ಮೆಲ್ಲರ ಕಥೆ. ಗಜೇಂದ್ರನ ವಿಹಾರಕ್ಷೇತ್ರ ತ್ರಿಕೂಟಪರ್ವತ. ನಮ್ಮೆಲ್ಲರ ವಿಹಾರಕ್ಷೇತ್ರ ಈ ದೇಹ. ಈ ದೇಹವೇ ತ್ರಿಕೂಟ ಪರ್ವತ. ಈ ತ್ರಿಕೂಟಪರ್ವತದ ಮೂರು ಶಿಖರಗಳೆಂದರೆ ಸಾತ್ವಿಕ, ರಾಜಸ, ತಾಮಸ ಗುಣಗಳು. ಬಂಗಾರ, ಬೆಳ್ಳಿ, ಕಬ್ಬಿಣಗಳು ಇವುಗಳ ಸಂಕೇತ.

ತ್ರಿಕೂಟಪರ್ವತದಲ್ಲಿ ಸ್ವಚ್ಛಂದವಾಗಿ ವಿಹರಿಸುವ ಆನೆಯಂತೆ ನಾವೂ ಮತ್ತರಾಗಿ ವಿಹರಿಸುತ್ತಿದ್ದೇವೆ. ಭೋಗಾಸಕ್ತ ಕರಿರಾಜಗೆ ತನ್ನ ಮೃತ್ಯುವಿನ ಎಚ್ಚರವಿರಲಿಲ್ಲ. ನಮಗಾದರೂ ಎಲ್ಲಿದೆ? ಮೃತ್ಯುವೆಂಬ ಘೋರಾಹಿ ಬಾಯ್ತೆರೆದು ನುಂಗುತ್ತಿದ್ದರೂ 'ಹಾವಿನ ಬಾಯಲ್ಲಿ ಕುಳಿತ ಕಪ್ಪೆ ನೊಣ ನುಂಗಬಯಸುವಂತೆ' ವಿಷಯಪದಾರ್ಥಗಳನ್ನೇ ಬಯಸುತ್ತಿದ್ದೇವೆ. ಮೃತ್ಯುವಿನ ಕಲ್ಪನೆಯೇ ಇಲ್ಲವಾಗಿದೆ.

ಈ ಮೃತ್ಯುವಿನ ದವಡೆಯಿಂದ ಬಿಡುಗಡೆ ಪಡೆಯಲು ಭಗವದ್ಭಕ್ತಿಯೊಂದೇ ತಾರಕ. ಗಜೇಂದ್ರನ ಭಗವದ್ಭಕ್ತಿಯ ಶಕ್ತಿಯಲ್ಲದೇ ಯಾರು ರಕ್ಷಕರಾದರು? ಭಗವಂತನೇ ರಕ್ಷಕ ಎಂಬ ಎಚ್ಚರ ಬಂದಾಗ ಭಗವಂತ ರಕ್ಷಕನಾದ. ನಮಗೂ ಈ ಎಚ್ಚರ ಬೇಕು. ಸದಾ ಅವನ ಅಡಿದಾವರೆಯ ಆಶ್ರಯವೇ ಬೇಕು. ತನ್ನ ಭಕ್ತರನ್ನು ಶ್ರೀಹರಿ ಎಂದೂ ಕೈಬಿಡನು ಎನ್ನುವುದಕ್ಕೆ 'ಗಜೇಂದ್ರಮೋಕ್ಷ' ಉತ್ತಮ ನಿದರ್ಶನವಾಗಿದೆ. ಈ ಗಜೇಂದ್ರಮೋಕ್ಷ ಸ್ಮರಣೆಯಿಂದ ದುರಿತಗಳು ದೂರವಾಗುವುದಲ್ಲದೆ ಭಗವನ್ಮಯವಾದ ಮಂಗಳ ಜೀವನ ನಮ್ಮದಾಗುವುದು.

ರೈವತನು ಐದನೆಯ ಮನುವಾದರೆ ಆರನೆಯ ಮನು ಚಾಕ್ಷುಷ. ಈ ಚಾಕ್ಷುಷ ಮನ್ವಂತರದಲ್ಲಿ ಅಜಿತನಾಮಕ ಭಗವಂತನ ಅವತಾರವಾಯಿತು. ಅಜಿತನಾಮಕ ಭಗವಂತನೇ ಅಮೃತಪ್ರಾಪ್ತಿಗಾಗಿ ದೇವದಾನವರಿಂದ ಅವರಲ್ಲಿ ಪ್ರೇರಕನಾಗಿ ಸಮುದ್ರಮಥನವನ್ನು ಮಾಡಿಸಿದನು.

## ಸಮುದ್ರಮಥನಕ್ಕೆ ಕಾರಣವೇನು?

ಒಮ್ಮೆ ದೂರ್ವಾಸರು ಸಂಚರಿಸುತ್ತಾ ಓರ್ವ ವಿದ್ಯಾಧರ ಸ್ತ್ರೀಯನ್ನು ಕಂಡರು. ಅವಳ ಬಳಿ ಸುಂದರವಾದ ಒಂದು ಹೂವಿನ ಹಾರವಿತ್ತು. ಅದನ್ನು ಕೇಳಿ ಪಡೆದರು. ಪಡೆದ ಮಾಲೆಯನ್ನು ಮೌಲಿಯಲ್ಲಿ ಧರಿಸಿ ಬರುವಾಗ ಗಜಾಧಿರೂಢನಾದ ದೇವೇಂದ್ರ ಎದುರುಗೊಂಡ. ದೂರ್ವಾಸರು ತಮ್ಮ ಬಳಿ ಇದ್ದ ಮಾಲೆಯನ್ನು

ದೇವೇಂದ್ರನಿಗೆ ಕೊಟ್ಟರು. ಅವನು ಅದನ್ನು ಆನೆಯ ಮೇಲೆ ಹಾಕಿದ. ಆನೆ ಕೆಳಗೆ ಹಾಕಿತು. ಅದನ್ನು ಕಂಡ ದುರ್ವಾಸರು ಸಿಟ್ಟಾದರು.

ದೇವೇಂದ್ರ! ನಾನು ಕೊಟ್ಟ ಮಾಲೆಯನ್ನು ಪ್ರಸಾದವೆಂದು ಸ್ವೀಕರಿಸುವ ಬದಲು, ನೆಲಕ್ಕೆ ಹಾಕುವ ಉದ್ಧಟತನವನ್ನು ಪ್ರದರ್ಶಿಸಿದ್ದೀಯಾ! ನಿನ್ನ ಸ್ಥಾನಮದ ವನ್ನು ದಮನಮಾಡುತ್ತೇನೆ. ಸ್ಥಾನಭ್ರಷ್ಟನಾಗೆಂದು ಗುಡುಗಿದರು. ದುರ್ವಾಸರ ದುರ್ವಾಕ್ಯಕ್ಕೆ ದೇವೇಂದ್ರ ನಡುಗಿದ. ಒಡನೆಯೇ ಆನೆಯಿಂದ ಕೆಳಗಿಳಿದ. ದುರ್ವಾಸರ ಅಡಿಗೆರಗಿದ. ಕ್ಷಮೆ ಬೇಡಿದ.

ದುರ್ವಾಸರು ಕ್ಷಮಿಸಲಿಲ್ಲ. ದೇವೇಂದ್ರ! 'ತಪ್ಪುಮಾಡುವುದು ಕ್ಷಮೆಕೇಳುವುದು' ನಿನಗೆ ಅಭ್ಯಾಸವಾಗಿ ಹೋಗಿದೆ. ನಾನು ನಿನ್ನನ್ನು ಖಂಡಿತ ಕ್ಷಮಿಸಲಾರೆ ಎಂದು ಹೊರಟೇ ಹೋದರು. ದೊಡ್ಡವರಲ್ಲಿ ಮಾಡಿದ ಸಣ್ಣ ಪ್ರಮಾದದಿಂದ ದೇವೇಂದ್ರನ ತ್ರಿಲೋಕಾಧಿಪತ್ಯವೇ ನಾಶವಾಯಿತು.

ದುರ್ವಾಸರ ಶಾಪ ದೈತ್ಯರಿಗೆ ತಿಳಿಯಿತು. ದೈತ್ಯರ ಆಕ್ರಮಣ ದೇವತೆಗಳ ಮೇಲೆ ನಡೆಯಿತು. ದೇವತೆಗಳು ಸೋತು ಓಡಿದರು. ಎಲ್ಲೆಡೆಯೂ ದುಷ್ಟ ದೈತ್ಯರ ಅಟ್ಟಹಾಸ. ದೇವತೆಗಳು ಚಿಂತಾಕ್ರಾಂತರಾದರು. ಯಜ್ಞಯಾಗಗಳಿಲ್ಲದೆ ಜಗತ್ತೇ ಅಮಂಗಳವಾದಾಗ ದಾರಿತೋರದೆ ಚತುರ್ಮುಖ ಬ್ರಹ್ಮನ ಬಳಿ ಸಾಗಿದರು. ದುರ್ವಾಸರ ಶಾಪವೇ ಅಮೃತಮಥನಕ್ಕೆ ನಾಂದಿ ಆಯಿತು.

ದೇವತೆಗಳ ಪ್ರಾರ್ಥನೆಗೆ ಓಗೊಟ್ಟ ಬ್ರಹ್ಮದೇವ ದೇವರ ಬಳಿ ಸಾಗೋಣವೆಂದ. ಶರಣಾಗತವತ್ಸಲನಾದ ಅಜಿತನಾಮಕ ಭಗವಂತನ ಬಳಿ ಎಲ್ಲರೂ ಸಾಗಿದರು. ಅಲ್ಲಿ ಭಗವಂತ ದೃಗ್ಗೋಚರನಾಗಲಿಲ್ಲ. ಬ್ರಹ್ಮದೇವರು ಆಗಮಪ್ರತಿಪಾದ್ಯನಾದ ಶ್ರೀಹರಿ ಯನ್ನು ನಾಲ್ಕು ಪದಗಳಿಂದ ಅದ್ಭುತವಾಗಿ ಸ್ತೋತ್ರಮಾಡಿದರು. ಎಲ್ಲ ದೇವತೆಗಳು ಸ್ತುತಿಗೈದರು.

## ದೇವತೆಗಳ ಸ್ತುತಿ – ಅಜಿತನ ಅಭಯದಾನ

ಅಜಿತನಾಮಕ ಹರಿ ಪ್ರತ್ಯಕ್ಷನಾದ. ಅವನ ಪ್ರಭೆಗೆ ಕೋಟಿಸೂರ್ಯರೂ ಸಾಟಿ ಯಾಗರು. ಕಣ್ಕೋರೈಸುವ ಕಾಂತಿಯ ಕಂಡ ಅನಿಮಿಷರೂ ಕಣ್ಮುಚ್ಚಿದರು. ಬ್ರಹ್ಮರುದ್ರರು ಸರ್ವಾಭರಣಭೂಷಿತನಾದ ಹರಿಯನ್ನು ಕಂಡು ಸಾಷ್ಟಾಂಗವೆರಗಿ ದರು. ಸರ್ವಜ್ಞನಾದ ಶ್ರೀಹರಿಗೆ ಬಂದ ಕಾರ್ಯವನ್ನು ವಿಜ್ಞಾಪಿಸುವುದೇನು ಎಂದರು.

ಅಜಿತನಾಮಕ ಹರಿಯು ಅಜಾದಿಗಳ ಆಂತರ್ಯವನ್ನು ಅರಿತನು. ಅವರೆಲ್ಲ ರಿಗೂ ಅಭಯದಾನ ಮಾಡಿದ.

ಬ್ರಹ್ಮಾದಿಗಳೇ! ನಾನು ಹೇಳಿದಂತೆ ಮಾಡಿರಿ. ನಿಮಗೆ ಮಂಗಳವಾಗುವುದು. ಕೆಲವು ಕಾಲ ಶತ್ರುಗಳೊಟ್ಟಿಗೆ ಸಂಧಾನವು ಶ್ರೇಯಸ್ಸಿಗೆ ಕಾರಣವಾಗುತ್ತದೆ. ಅದಕ್ಕೆ ಈ ಕಥೆ ಕೇಳಿರಿ ಎಂದ.

ಒಬ್ಬ ಹಾವಾಡಿಗ ಹಾವೊಂದನ್ನು ಬುಟ್ಟಿಯಲ್ಲಿ ಹಾಕಿಟ್ಟಿದ್ದನು. ಉಸಿರಾಟಕ್ಕಾಗಿ ಸ್ವಲ್ಪ ಜಾಗ ಬಿಟ್ಟಿದ್ದನು. ಬಂಧನದಲ್ಲಿದ್ದ ಸರ್ಪ ಬಹಳ ನೊಂದಿತ್ತು. ಒಂದು ದಿನ ಹಾವಿಗೆ ಆಹಾರವೆಂದು ಇಲಿಯೊಂದನ್ನು ಪೆಟ್ಟಿಗೆಯೊಳಗೆ ಹಾಕಿದ. ಹಸಿದ ಹಾವು ಮೂಷಿಕವನ್ನು ಕೂಡಲೇ ತಿನ್ನಲಿಲ್ಲ. ವಿಚಾರಮಾಡಿತು. 'ಈ ಇಲಿಯನ್ನು ತಿಂದರೂ ಹಾವಾಡಿಗನ ಬಂಧ ತಪ್ಪುವುದಿಲ್ಲ. ಅದಕ್ಕಾಗಿ ಒಂದು ಉಪಾಯವನ್ನು ಹೂಡ ಬೇಕು. ಇಲಿಯನ್ನೂ ತಿನ್ನಬೇಕು. ಬಂಧನವೂ ತಪ್ಪಬೇಕೆಂದು ಆಲೋಚಿಸಿ; ಇಲಿಯ ಒಟ್ಟಿಗೆ ಸ್ನೇಹಬೆಳೆಸುತ್ತದೆ. ಹಿತಶತ್ರುವನ್ನು ನಂಬಿದ ಇಲಿಗೆ ಸರ್ಪ ಹೇಳಿತು 'ನಾನು ಹೆಡೆ ಬಿಡಿಸಿ ಕೂಡುತ್ತೇನೆ. ನೀನು ನನ್ನ ತಲೆಯ ಮೇಲೇರಿ ಬಿದಿರಿನ ಕಡ್ಡಿಯನ್ನು ಕಡಿದುಹಾಕು. ಅನಂತರ ಇಬ್ಬರೂ ಹೊರಗೆ ಹೋಗಬಹುದು ಎಂದಿತು. ನಂಬಿದ ಇಲಿ ಹಾಗೆಯೇ ಮಾಡಿತು. ಕೂಡಲೇ ಸರ್ಪ ಇಲಿಯನ್ನು ಮೆದ್ದು ಹೊರ ಹೋಯಿತು.

ಈ ಕಥೆಯೇ ನಿಮಗೆ ಮಾರ್ಗದರ್ಶಕ. ನೀವೂ ಸ್ವಲ್ಪಕಾಲ ದೈತ್ಯರ ಒಡನೆ ಸಂಧಿಮಾಡಿಕೊಳ್ಳಿ. ಅಮೃತಪ್ರಾಪ್ತಿಯ ನೆಪದಿಂದ ಒಟ್ಟಿಗಿರಿ. ಅಮೃತ ಸಿಕ್ಕಮೇಲೆ ಜಯ ನಿಮಗೇ ಸರಿ ಎಂದು ಹೇಳಿ ಅಂತರ್ಧಾನನಾದ. ಜಗತ್ತಿಗೆ ಹಿತವಾಗುವ ಕಾರ್ಯ ನಡೆಯಬೇಕಿದ್ದರೆ ದೈತ್ಯರ ಬಳಿಯೂ ಸಂಧಾನ ಮಾಡಿಕೊಳ್ಳಬೇಕು' ಎಂಬುದು ಅಜಿತರೂಪಿ ಭಗವಂತನ ಅಭಿಪ್ರಾಯ. ಭಗವಂತನ ಈ ನುಡಿಗಳು ಇಂದಿಗೂ ಅನ್ವಯವಾಗುತ್ತವೆ. ಅಂದು ದೇವಲೋಕದಲ್ಲಿ ದೈತ್ಯರ ಆಕ್ರಮಣ ನಡೆದಂತೆ, ಇಂದು ನಮ್ಮ ಸನಾತನ ಹಿಂದೂಧರ್ಮದ ಮೇಲೂ ಅನೇಕರ ಆಕ್ರಮಣ ನಡೆದಿದೆ. ಸನಾತನಧರ್ಮದ ರಕ್ಷಣೆಯ ಜವಾಬ್ದಾರಿ ನಮ್ಮೆಲ್ಲರ ಕರ್ತವ್ಯವಾಗಿದೆ. ಈ ಸನಾತನಧರ್ಮದ ರಕ್ಷಣೆಯಾಗಬೇಕಿದ್ದರೆ, ಬ್ರಾಹ್ಮಣರಲ್ಲಿ ಅನೇಕ ಮತೀಯ ಭಿನ್ನತೆಗಳಿದ್ದರೂ ಸಂಘಟಿತರಾಗಿ ಧರ್ಮದ ಸಂರಕ್ಷಣೆ ಮಾಡಬೇಕು.

ವಾದಿರಾಜ ಶ್ರೀಪಾದರು ಇದನ್ನು ಅಂಗೀಕರಿಸಿದ್ದಾರೆ. ಅವರು ನಾಸ್ತಿಕ್ಯವಾದ ವನ್ನು ಖಂಡನೆ ಮಾಡುವಾಗ ಹೇಳತ್ತಾರೆ– 'ಅದ್ವೈತ, ವಿಶಿಷ್ಟಾದ್ವೈತ ಮತಗಳಿಗೂ ನಮಗೂ ಮತೀಯ ಭಿನ್ನತೆಗಳಿದ್ದರೂ ವೇದವನ್ನೇ ಅಲ್ಲಗಳೆಯುವ ನಾಸ್ತಿಕಾದಿ ಮತಗಳನ್ನು ಖಂಡಿಸುವಾಗ ನಾವೆಲ್ಲರೂ ಒಂದಾಗಿ ಕಾರ್ಯಪ್ರವೃತ್ತಿ ಮಾಡುತ್ತೇವೆ' ಎಂದು.

ಹಿಂದೂಧರ್ಮದ ರಕ್ಷಣೆಯಲ್ಲಿ ಮತೀಯ ಭಾವನೆ ಅಡ್ಡಿಯಾಗದು. ಇದು ದೇವಾಲಯದ ಒಳಗೆ ಇರುವ ಅನೇಕ ಪಥಗಳಂತೆ, ಒಂದು ಸಂಘಟನೆ ಇನ್ನೊಂದನ್ನು ಭೇದಿಸುವುದಿಲ್ಲ. [ಆದ್ದರಿಂದ ವಿಶ್ವಹಿಂದೂ ಪರಿಷತ್ತಿನಲ್ಲಿ ನನ್ನ ಸಹಾಯವೇನಿದೆ ಅದು ಹಿಂದೂಧರ್ಮದ ಸಂರಕ್ಷಣೆಗಾಗಿ ಹೊರತು ಅದರಿಂದ ನನ್ನ ಮತಕ್ಕೆ ಯಾವ ಚ್ಯುತಿಯೂ ಇರುವುದಿಲ್ಲ.]

## ಹರಿಯ ಬಲದಿ - ಕಡಲ ಕಡೆದರು

ದೇವತೆಗಳೆಲ್ಲರೂ ಸ್ವರ್ಗಕ್ಕೆ ನಡೆದರು. ದೇವತೆಗಳನ್ನು ಕಂಡ ದೈತ್ಯರು ಕದನಕ್ಕೆ ಕಾಲ್ಕೆರೆದು ಬಂದರು. ಆ ಸಂದರ್ಭದಲ್ಲಿ ದೈತ್ಯ ನಾಯಕ ಬಲಿ ಅವರನ್ನು ತಡೆದ. 'ಸ್ವಲ್ಪಕಾಲ ಸುಮ್ಮನಿರಿ. ಅವರೇಕೆ ಬಂದಿರುವರು ವಿಚಾರಮಾಡೋಣ' ಎಂದ. ಅಜಿತನ ಉಪದೇಶದಂತೆ ನಯವಾಗಿ ಮಾತನಾಡಿದರು. ಅಮೃತಪ್ರಾಪ್ತಿಯ ಆಮಿಷವನ್ನು ಒಡ್ಡಿದರು. ದೈತ್ಯರೆಲ್ಲರೂ 'ಓಂ' ಎಂದರು. ಮಂದರಪರ್ವತವನ್ನು ಕಡೆಗೋಲನ್ನಾಗಿ ಮಾಡಲು ನಿಶ್ಚೈಸಿದರು. ಆದರೆ ಮಂದರಾಚಲ ರುದ್ರದೇವರ ವರಬಲದಿಂದ ಅಚಲವಾಗಿದೆ. ಅದರ ಚಲನೆಗೆ ಜಗತ್ಪಾಲಕ ಹರಿಯೇ. ಸಹಾಯಕ ನಾದ. ಪರ್ವತ ಕಿತ್ತು ಗರುಡನ ಮೇಲಿಟ್ಟ. ಬರುವಾಗ ದೇವತೆಗಳು ಪರ್ವತ ಎತ್ತುವ ಚಾಪಲ್ಯವನ್ನು ವ್ಯಕ್ತಪಡಿಸಿದರು. ಸ್ವಲ್ಪ ಸೆಳೆದರು. ಮಂದರಪರ್ವತ ಗರುಡನ ಬೆನ್ನಿನಿಂದ ಕೆಳಕ್ಕೆ ಜಾರಿತು. ದೇವಾಸುರರು ಕೆಳಕ್ಕೆ ಬಿದ್ದು ಪುಡಿಯಾದರು. ಶ್ರೀಹರಿ ಪುನಃ ಗರುಡನ ಮೇಲಿಟ್ಟ. ಅವರನ್ನು ಬದುಕಿಸಿದ. ಗರುಡ ಪರ್ವತವನ್ನು ಸಮುದ್ರತೀರದಲ್ಲಿಟ್ಟು ನಡೆದ. ಅನಂತರ ಸಮುದ್ರಮಥನಕ್ಕಾಗಿ ಹಗ್ಗವನ್ನು ಬಯಸಿದರು. ಸಮರ್ಥನಾದ ವಾಸುಕಿಯ ಬಳಿ ಸಾಗಿದರು. 'ನೀನೇ ಹಗ್ಗವಾಗು' ಎಂದು ಪ್ರಾರ್ಥಿಸಿದರು. ವಾಸುಕಿ ಒಪ್ಪಿದ. ಮಥನಕ್ಕೆ ಬೇಕಾದ ಸಿದ್ಧತೆ ಎಲ್ಲವೂ ನಡೆಯಿತು. ಮಥನ ಪ್ರಾರಂಭವಾಯಿತು. ದೇವಾಸುರರ ಭಯಂಕರ ಮಥನದಲ್ಲಿ ಮಂದರಾದ್ರಿಯೂ ಮುಳುಗತೊಡಗಿತು. ಎಲ್ಲರೂ ಮುಂದೇನು? ಎಂದು ಚಿಂತಿಸಲು ಕರುಣಾಮಯ ಶ್ರೀಹರಿಯೇ ಕೂರ್ಮನಾಗಿ ಬಂದ. ಒಂದು ಲಕ್ಷ ಯೋಜನ ವಿಸ್ತೀರ್ಣವಾದ ಬೆನ್ನಿನಲ್ಲಿ ಮಂದರವನ್ನು ಎತ್ತಿಹಿಡಿದ. ಮತ್ತೆ ಮಥನ ಪ್ರಾರಂಭವಾಯಿತು. ಮಥನದ ಮಧ್ಯೆ ವಿಘ್ನಬಾರದಿರಲೆಂದು ಮಂದರಪರ್ವತಾಂತ ರ್ಯಾಮಿಯಾದ. ದೇವತೆಗಳಿಗೆಲ್ಲಾ ಶಕ್ತಿಪ್ರದನಾದ. ವಾಸುಕಿಯಲ್ಲಿಯೂ ವಾಸ ಮಾಡಿದ. ಮಥನ ನಿರ್ವಿಘ್ನವಾಗಿ ಸಾಗಿತು.

ಅದೇ ಸಂದರ್ಭದಲ್ಲಿ ಭಯಂಕರವಾದ ಹಾಲಾಹಲವಿಷ ಬಂದಿತು. ಇದು ಕಲಿಯಿಂದ ಅಭಿಮನ್ಯವಾದ ವಿಷ. ಆ ವಿಷವನ್ನು ಮುಟ್ಟಲೂ ಸಾಧ್ಯವಿಲ್ಲವೆಂದ ಬಳಿಕ ಕುಡಿಯುವ ಸಾಹಸ ಮಾಡುವವರ್‍ಯಾರು? ಈ ಸಂದರ್ಭದಲ್ಲಿ ಜಗತ್ತಿನ ಪ್ರಾಣ ಮುಖ್ಯಪ್ರಾಣ ಮುಂದೆಬಂದ. ಮುಟ್ಟಲಾಗದ ವಿಷದ ಕಡಲನ್ನು ಚಿನ್ನದ ಬಟ್ಟಲಲ್ಲಿ ಇಟ್ಟುಕೊಂಡು ಗಟಗಟನೆ ಕುಡಿದ. ವಿಷವನ್ನು ಅಮೃತದಂತೆ ಕುಡಿದು ಜೀರ್ಣಿಸಿಕೊಂಡ. ಈ ಮೂಲಕ ಜಗತ್ತನ್ನೇ ಕಾಪಾಡಿದ.

## ಶಂಕರನ ಕರುಣೆ

ಇದೇ ಸಂದರ್ಭದಲ್ಲಿ ಮೃತ್ಯುಂಜಯನೂ ಮುಂದೆಬಂದ. ಸಜ್ಜನರ ವಿಷಯದಲ್ಲಿ ರುದ್ರದೇವರಿಗೆ ಎಲ್ಲಿಲ್ಲದ ಕರುಣೆ. ರುದ್ರದೇವರು ಹೇಳುತ್ತಾರೆ:

ತಪ್ಯಂತೇ ಲೋಕ ತಾಪೇನ ಸಾಧವಃ ಪ್ರಾಯಶೋ ಜನಾಃ ।
ಪರಮಾರಾಧನಂ ತದ್ಧಿ ಪುರುಷಸ್ಯಾಖಿಲಾತ್ಮನಃ ॥ — ೮-೭-೪೪

"ಲೋಕದಲ್ಲಿ ಸಜ್ಜನರಿಗೆ ದುಃಖವಾದರೆ ಸಾಧುಸಂತರ ಹೃದಯ ಕರುಣೆಯಿಂದ ಒದ್ದೆಯಾಗು ತ್ತದೆ. ಇನ್ನೊಬ್ಬರ ಕಷ್ಟವನ್ನರಿತು ಪೂಜಿಸುವುದು ಭಗವಂತನ ಪೂಜೆ." ಹಾಲಾಹಲವಿಷದಿಂದ ಲೋಕವೇ ಹೆದರಿದಾಗ, ರುದ್ರದೇವರು ವಿಷಪಾನಮಾಡಲು ಮುಂದೆ ಬಂದರು.

ಲೋಕದ ಕಷ್ಟಪರಿಹಾರವಾಗಿ ದೇವತೆಗಳಿಗೆ ಅಮೃತ ದೊರೆಯಲಿ ಎಂಬುದು ರುದ್ರದೇವನ ಭಾವನೆ.

ಇನ್ನೊಬ್ಬರಿಗೆ ವಿಷ ಉಣಿಸಿ ನಾವು ಅಮೃತಕುಡಿಯಬೇಕು ಎಂಬುದು ನಮ್ಮೆಲ್ಲರ ಭಾವನೆ. ಇದು ಸರಿಯಲ್ಲ.

ತಪಸ್ಸು ಎಂದರೆ ಇನ್ನೊಬ್ಬರ ಕಷ್ಟಪರಿಹಾರಕ್ಕಾಗಿ ನಾವು ಕಷ್ಟಪಡುವುದು. ಈ ಭಾವನೆ ಇಲ್ಲದ ತಪಸ್ಸು, ಅದು ತಪಸ್ಸಲ್ಲ ಕೇವಲ ತಾಪ.

ಶಂಕರನ ಆಸಕ್ತಿಯನ್ನು ಕಂಡ ಪ್ರಾಣದೇವ ಸ್ವಲ್ಪ ವಿಷ ತೆಗೆದುಕೊಂಡ. ಅದನ್ನು ತಿಕ್ಕಿ, ತೀಡಿ ನಿರ್ವೀರ್ಯವನ್ನಾಗಿಸಿ ಕೊಟ್ಟ. ಆ ವಿಷ ಶಿವನ ನೆತ್ತಿಗೆ ಹತ್ತಿತು. ಕುತ್ತಿಗೆಯಿಂದ ಕೆಳಗಿಳಿಯಲಿಲ್ಲ. ಮೂರ್ಛೆ ಹೋದ. ಮತ್ತೆ ಶ್ರೀಹರಿಯ ಶ್ರೀಕರಸ್ಪರ್ಶ ದಿಂದ ಮೇಲೆದ್ದ. ಅವನಿಗೆ ಹೊಸ ಜನ್ಮವೇ ಬಂದಂತಾಯಿತು. ಹೊಸ ನಾಮ ದೊರೆಯಿತು. ಅಂದಿನಿಂದ ನೀಲಕಂಠನೂ ಆದ. ಗಂಗಾಧರನಾದ, ಚಂದ್ರಮೌಳಿ ಯಾದ. ಅಭಿಷೇಕಪ್ರಿಯನೆನಿಸಿದ.

ಪುನಃ ಮಥನ ಮುಂದುವರೆಸಿದರು. ಮಥನದಿಂದಾಗಿ ಉಚ್ಚೈಃಶ್ರವ ಎಂಬ ಕುದುರೆ, ಐರಾವತವೆಂಬ ಆನೆ, ದೇವತೆಗಳ ಆಯುಧಗಳು, ಆಭರಣಗಳು, ಪಾರಿ ಜಾತವೃಕ್ಷ ಅಪ್ಸರಾಸ್ತ್ರೀಯರು ಎಲ್ಲವೂ ಉದಿಸಿಬಂದವು. ದೇವತೆಗಳು ಸಂಭ್ರಮ ದಿಂದ ಅವುಗಳನ್ನೆಲ್ಲಾ ಸ್ವೀಕರಿಸಿದರು.

ಹೀಗೆ ಸಮುದ್ರಮಥನವು ಅಮೃತಪ್ರಾಪ್ತಿಗಾಗಿ ಮತ್ತೂ ಮುಂದುವರೆಯಲು ಪರಮಮಂಗಳಸ್ವರೂಪಳಾದ ಜಗನ್ಮಾತೆಯಾದ ಸಾಕ್ಷಾತ್ ಲಕ್ಷ್ಮೀದೇವಿ ಉದಿಸಿ ಬಂದಿದ್ದಾಳೆ. ತಾಯಿಯನ್ನು ಕಂಡೊಡನೆ ಇಂದ್ರಾದಿದೇವತೆಗಳೆಲ್ಲರೂ ಪರಮಾನಂದ ದಿಂದ ಸ್ವಾಗತಿಸುತ್ತಿದ್ದಾರೆ.

ಸೌಂದರ್ಯಸಾರಳಾದ ರಮಾದೇವಿಯ ರೂಪ ಶೋಭನರೂಪ. ಜಗತ್ತಿನಲ್ಲಿ ಯಾವ ಸ್ತ್ರೀಯೂ ಇವಳ ಗುಣ ಸೊಬಗನ್ನು ಪಡೆದಿಲ್ಲ. ಅಂತಹ ಸೌಂದರ್ಯ, ಗುಣನಿಧಿಯಾದ ಲಕುಮಿಯು ಕೈಯಲ್ಲೊಂದು ಮಾಲೆಯನ್ನು ಹಿಡಿದುಕೊಂಡು ಬಂದಿದ್ದಾಳೆ.

ಈ ಪ್ರಸಂಗವನ್ನು ಉದ್ದೇಶಿಸಿಯೇ ಶ್ರೀಮದ್ವಾದಿರಾಜಗುರುಚರಣರು 'ಲಕ್ಷ್ಮೀ ಶೋಭಾನ' ಎಂಬ ಉತ್ತಮ ಗ್ರಂಥವನ್ನ ರಚಿಸಿದ್ದಾರೆ. ಲಕ್ಷ್ಮೀದೇವಿಯ ಶ್ರೇಷ್ಠತೆ. ಇತರ

ಸಮಸ್ತ ದೇವತೆಗಳ ಯೋಗ್ಯತೆ, ಭಗವಂತನ ಅನಂತಾನಂತ ಗುಣಗಳ ಮಹತ್ವ ಎಲ್ಲವನ್ನೂ ಪಾಡಿ ಪೊಗಳಿ, ಲಕ್ಷ್ಮೀದೇವಿಗೂ ಭಗವಂತನಿಗೂ ಆದ ಸ್ವಯಂವರದ ಕಥೆಯನ್ನು ಹೃದ್ಯವಾಗಿ ನಿರೂಪಿಸಿದ್ದಾರೆ. ಅವರಿಗೆ ಈ ಭಾಗವತದ

'ಸವ್ರೀಡಹಾಸಂ ದಧತೀ ಸುಶೋಭನಮ್ ॥ — ೮-೮-೧೭

ಮುಂತಾದ ಮಾತುಗಳೇ ಸ್ಫೂರ್ತಿಯನ್ನು ನೀಡಿವೆ.

ಎಲ್ಲರ ಮನೆಮನೆಗಳಲ್ಲಿ ನಡೆಯುವ ವಿವಾಹ. ಅವರವರಿಗೆ ಸೌಖ್ಯವನ್ನುಂಟು ಮಾಡುತ್ತದೆ. ಆದರೆ ಲಕ್ಷ್ಮೀನಾರಾಯಣರ ವಿವಾಹ ಜಗತ್ತಿಗೇ ಮಂಗಲವನ್ನುಂಟು ಮಾಡುತ್ತದೆ. ಅದಕ್ಕಾಗಿ ನಾವೆಲ್ಲರೂ ಮಾಂಗಲ್ಯಬಂಧನದ ಸಮಯದಲ್ಲಿ 'ಮಮ ಜೀವನ ಹೇತುನಾ' ಎಂದರೆ; ಲಕ್ಷ್ಮೀನಾರಾಯಣರ ವಿವಾಹದಲ್ಲಿ 'ಜಗನ್ಮಂಗಲ ಹೇತುನಾ' ಎಂದಿದ್ದಾರೆ. ಆದ್ದರಿಂದ ನಮ್ಮೆಲ್ಲರಿಗೂ ಮಂಗಳವಾಗಬೇಕಾದರೆ ಲಕ್ಷ್ಮೀ–ನಾರಾಯಣರ ವಿವಾಹದ ಕಥೆಯನ್ನು ಮನೆಮನೆಗಳಲ್ಲಿ ಪಠಿಸಬೇಕು. ಲಕ್ಷ್ಮೀ ಶೋಭಾನೆ ತಪ್ಪದೆ ಓದಬೇಕು. ಸೌಂದರ್ಯನಿಧಿಯಾದ ಲಕ್ಷ್ಮಿಯನ್ನು ಕಂಡೊಡನೆಯೇ ದೈತ್ಯರೆಲ್ಲರೂ ಮೋಹಿತರಾಗಿದ್ದಾರೆ. ಕೈಯಲ್ಲಿ ಹಿಡಿದ ಮಾಲೆಯನ್ನು ನಮ್ಮ ಕೊರಳಿಗೇ ಹಾಕಲೆಂದು ಕುತ್ತಿಗೆಯನ್ನು ಚಾಚುತ್ತಿದ್ದಾರೆ. ಆ ಸಂದರ್ಭದಲ್ಲಿ ಲಕ್ಷ್ಮೀದೇವಿಯು ಪ್ರತಿಯೊಬ್ಬರ ಗುಣದೋಷಗಳನ್ನು ಚಿಂತಿಸುತ್ತಿದ್ದಾಳೆ. ಯಾವ ಕೊರತೆಯೂ, ಯಾವ ದೋಷವೂ ಇರದ ಪರಮಪುರುಷನನ್ನರಸಿ ಹೊರಟಿದ್ದಾಳೆ. ಲಕ್ಷ್ಮೀದೇವಿಗೆ ಯಾವ ದೋಷವೂ ಇಲ್ಲದ ಒಬ್ಬ ವ್ಯಕ್ತಿಯೂ ಸಿಗಲಿಲ್ಲ. ಬ್ರಹ್ಮಾದಿಗಳಲ್ಲಿಯೂ ಒಂದೊಂದು ದೋಷವನ್ನು ಕಂಡಳು. ಅಸ್ವಾತಂತ್ರ್ಯವನ್ನು ಎಲ್ಲರಲ್ಲಿಯೂ ಕಂಡಳು. ಕೊನೆಗೆ ನಿರ್ದೋಷನಾದ ಗುಣಸಂಪನ್ನನಾದವ ಜಗತ್ತಿನಲ್ಲಿ ಒಬ್ಬನೇ; ಅವನೇ ಶ್ರೀಮನ್ನಾರಾಯಣ ಎಂದು ನಿರ್ಧರಿಸಿದಳು.

ಏವಂ ವಿಮೃಶ್ಯಾವ್ಯಭಿಚಾರಿಸದ್ಗುಣೈ–
ರ್ವರಂ ನಿಜೈಕಾಶ್ರಯತಾಗುಣಾಶ್ರಯಮ್ ।
ವವ್ರೇ ವರಂ ಸರ್ವಗುಣೈರಪೇಕ್ಷಿತಂ
ರಮಾ ಮುಕುಂದಂ ನಿರಪೇಕ್ಷಮೀಪ್ಸಿತಮ್ ॥ — ೮-೮-೨೩

ಲಕ್ಷ್ಮಿಯನ್ನು ಎಲ್ಲರೂ ಬಯಸಿದರು. ಆದರೆ ಸ್ವರಮಣನಾದ ಭಗವಂತ ನಿರಾಮಯನಾಗಿ ಕುಳಿತಿದ್ದ. ಅವನ ಅಪೇಕ್ಷೆ ಎಲ್ಲರಿಗೂ ಇದೆ. ಅವನಿಗೆ ಯಾರ ಅಪೇಕ್ಷೆಯು ಇಲ್ಲ. ಇಂತಹ ಕುಂದುಕೊರತೆಗಳಿಲ್ಲದ ಪುರುಷೋತ್ತಮನೇ ನನ್ನ ಪತಿಯಾಗಬೇಕೆಂದು ಲಕುಮಿ ನಾರಾಯಣನ ಕೊರಳಿಗೇ ಮಾಲೆಯನ್ನು ಹಾಕಿದಳು. ಲಕ್ಷ್ಮೀದೇವಿಯು ಯಾರು ತನ್ನನ್ನು ಬಯಸುತ್ತಾರೆ ಅವರ ಕಡೆ ಹೋಗಲೇ ಇಲ್ಲ. ಲಕ್ಷ್ಮಿಯನ್ನು ಅಪೇಕ್ಷಿಸದ ಶ್ರೀಮನ್ನಾರಾಯಣನ ಬಳಿ ಸಾಗಿದಳು. ಎಲ್ಲರೂ ಅಪೇಕ್ಷಿಸುವ ಗುಣಗಳು ನಾರಾಯಣನ ಗುಣಗಳು. ಇಂತಹ ಜಗತ್ಪತಿಯೇ ನನ್ನ ಪತಿ ಎಂದು ಜಗನ್ಮಾತೆ ಪರಮಮಂಗಳವಾದ ಹಾರವನ್ನು ಎಲ್ಲರ ಮುಂದೆ ಹರಿ ಸರ್ವೋತ್ತಮತ್ವವನ್ನು ಸಮರ್ಥಿಸಿ ನಾರಾಯಣನ ಕೊರಳಿಗೆ ಹಾಕಿದಳು.

## ಸ್ವಯಂವರದ ಸಂದೇಶ

ಲಕ್ಷ್ಮೀ–ನಾರಾಯಣರ ಮಂಗಳ ಮಹೋತ್ಸವದ ಕಥೆಯನ್ನು ಭಾಗವತದಲ್ಲಿ ನಿರೂಪಿಸಿದ್ದಾರೆ. ಈ ಲಕ್ಷ್ಮೀಸ್ವಯಂವರದ ಕಥೆಯನ್ನು ಕೇಳಿದರೆ ಸಾಲದು. ನಮ್ಮೆಲ್ಲರ ಮನೆಮನೆಗಳಲ್ಲಿ ಶ್ರೀಲಕ್ಷ್ಮೀನಾರಾಯಣರ ಸ್ವಯಂವರ ಪ್ರತಿನಿತ್ಯ ನಡೆಯಬೇಕು. ಸಮುದ್ರಮಥನದ ಸಂದರ್ಭದಲ್ಲಿ ಉದಿಸಿಬಂದ ಲಕ್ಷ್ಮಿಯು ನಾರಾಯಣನ ಕೊರಳಿಗೇ ಮಾಲೆಯನ್ನು ಹಾಕುವ ಮೂಲಕ ನಮ್ಮೆಲ್ಲರಿಗೂ ತಿಳಿಹೇಳಿದಳು. ನಮ್ಮೆಲ್ಲರ ಜೀವನ ಸಮುದ್ರದಲ್ಲಿ ಶ್ರಮವೆಂಬ ಮಥನದಿಂದ ಉದಿಸಿಬರುವ ಲಕ್ಷ್ಮಿಯನ್ನು ನಾರಾಯಣ ನಿಗೇ ಸಮರ್ಪಿಸಬೇಕು ಎಂದು.

ಇಂದು ನಾವು ಬಹಳ ಕಷ್ಟಪಟ್ಟು ಜೀವನದಲ್ಲಿ ಲಕ್ಷ್ಮೀ ಸಂಪಾದನೆ ಮಾಡುತ್ತೇವೆ. ಲಕ್ಷ್ಮೀ ಬಂದೊಡನೆ ಅಸುರರು ಮುನ್ನುಗ್ಗಿದಂತೆ. ಇಂದೂ ಅನೇಕ ಅಸುರರಿದ್ದಾರೆ. ಜೂಜು, ಮದ್ಯಪಾನ, ರೇಸ್‌ಕೋರ್ಸ್, ನೈಟ್ ಕ್ಲಬ್, ಇನ್ನೂ ಅನೇಕ ಮುಖವಾದ ವ್ಯಸನಗಳೇ ದೈತ್ಯರುಗಳು ನಮ್ಮ ಬಳಿ ಹಣ ಬಂದೊಡನೆ ಅಸುರ ಸ್ವರೂಪದ ಇವುಗಳೇ ನಮ್ಮನ್ನು ಮುತ್ತಿಗೆ ಹಾಕುತ್ತವೆ. ಅಂದು ಲಕ್ಷ್ಮಿಯನ್ನು ದೈತ್ಯರು ಕರೆದಂತೆ, ವ್ಯಸನಗಳೆಂಬ ದೈತ್ಯರು ನಮ್ಮನ್ನು ಕರೆಯುತ್ತವೆ.

ಅಸುರರು ಕರೆದರೂ ಲಕ್ಷ್ಮೀ ಅವರ ಬಳಿ ಹೋಗದೆ ನಾರಾಯಣನನ್ನು ಅರಸಿ ಹೊರಟಳು. ಅದರಂತೆ ನಾವು ಶ್ರಮದಿಂದ ಗಳಿಸಿದ ಸಂಪತ್ತೆಂಬ ಲಕ್ಷ್ಮಿಯು ವ್ಯಸನಗಳೆಂಬ ಅಸುರರ ಕರೆಗೆ ಸಾಗಬಾರದು. ಸಂಪತ್ತನ್ನು ಚಟಗಳಿಗೆ ವಿನಿಯೋಗಿಸ ಬಾರದು. ಲಕ್ಷ್ಮಿ ನಾರಾಯಣನಿಗೆ ಮಾಲೆ ಹಾಕಿದಂತೆ, ಭಗವಂತನು ಪ್ರೀತನಾಗು ವಂತಹ ಧಾರ್ಮಿಕ ಕಾರ್ಯಕ್ರಮಗಳಿಗೆ ನಮ್ಮ ಸಂಪತ್ತನ್ನು ವಿನಿಯೋಗಿಸಬೇಕು. ನಮ್ಮ ಸಂಪತ್ತನ್ನು ಕೆಟ್ಟ ಭೌತಿಕ ವಿಷಯಗಳಿಗೆ ವಿನಿಯೋಗಿಸದೆ; ಭಗವಂತನು ಪ್ರೀತನಾಗುವ ಜ್ಞಾನಕಾರ್ಯ, ಸೇವಾಕಾರ್ಯಗಳಿಗೆ ವಿನಿಯೋಗಿಸಿದರೆ ಅದೇ ನಾವು ಆಚರಿಸುವ ಲಕ್ಷ್ಮೀಸ್ವಯಂವರ. ಇಂತಹ ಸ್ವಯಂವರ ಪ್ರತಿನಿತ್ಯ ನಡೆಯ ಬೇಕೆಂಬುದೇ ಲಕ್ಷ್ಮೀಸ್ವಯಂವರ ಕಥೆಯ ಸಂದೇಶವಾಗಿದೆ.

## ಧನ್ವಂತರಿಯ ಉಪಕಾರ

ಲಕ್ಷ್ಮಿಯ ಪ್ರಾದುರ್ಭಾವವಾದರೂ ಸಮುದ್ರ ಮಥನ ನಿಲ್ಲಲಿಲ್ಲ. ಅಮೃತ ಪ್ರಾಪ್ತಿಯ ತನಕ ಸಮುದ್ರಮಥನ ನಡೆಯಬೇಕಿದೆ. ದೇವದಾನವರು ಭರದಿಂದ ಪುನಃ ಮಥನ ನಡೆಸಿದ್ದಾರೆ. ಆ ಸಂದರ್ಭದಲ್ಲಿ ಧನ್ವಂತರಿರೂಪಿ ಭಗವಂತನು ಅಮೃತಕಲಶ ವನ್ನು ಹಿಡಿದುಕೊಂಡು ಸಮುದ್ರದಿಂದ ಮೇಲಕ್ಕೆ ಬರುತ್ತಿದ್ದಾನೆ. ಮೊದಲು ಸಾಕ್ಷಾಲ್ಲಕ್ಷ್ಮೀ ಬಂದರೆ; ಈಗ ನಾರಾಯಣ ಬರುತ್ತಿದ್ದಾನೆ. ಸಮುದ್ರ ಮಥನದ ಅಂತಿಮ ಘಟ್ಟದಲ್ಲಿ ಹರಿಯ ಪ್ರಾದುರ್ಭಾವ. ನವಯೌವನದಿಂದ ಕಂಗೊಳಿಸುತ್ತಿರುವ ಧನ್ವಂತರಿಯ ರೂಪ ಅತ್ಯಂತ ಆಕರ್ಷಕವಾಗಿದೆ. ತರುಣ ತರಣಿಯ ಕೋಟಿಯೂ

ಇವನಿಗೆ ಸಾಟಿ ಎನಿಸದು. ಮುಂಗುರುಳುಗಳಿಂದ ಶೋಭಿ ಸುವ ಮುಖಕಮಲವುಳ್ಳ ಸಿಂಹವಿಕ್ರಮನಾದ ಶ್ರೀಹರಿ ಧನ್ವಂತರಿನಾಮದಿಂದ ಉದಿಸಿದ್ದಾನೆ.

ಧನ್ವಂತರಿರಿತಿ ಖ್ಯಾತಃ ಆಯುರ್ವೇದದೃಗಿಜ್ಯಭಾಕ್ ।
ತಮಾಲೋಕ್ಯಾಸುರಾಃ ಸರ್ವೇ ಕಲಶಂ ಚಾಮೃತಾಭೃತಮ್ ॥ — ೮-೮-೩೬

ದೇವತೆಗಳಿಗೆ ಬೇಕಾದ ಅಮೃತಕಲಶವನ್ನು ಹಿಡಿದುಕೊಂಡುಬಂದವ ಧನ್ವಂತರಿ.

ದೇವತೆಗಳಿಗೆ ಅಮೃತವನ್ನು ಕೊಡುವುದರ ಮೂಲಕ ಅಮೃತತ್ವವನ್ನು ಕರುಣಿಸಿದ. ಇವನ ಕರುಣೆ ಕೇವಲ ದೇವತೆಗಳಿಗೆ ಮಾತ್ರ ಸೀಮಿತವಾಗಿಲ್ಲ. ಸಕಲ ಭೂಲೋಕದ ಸಜ್ಜನರ ಮೇಲೂ ಹರಿದಿದೆ.

ಧನ್ವಂತರಿಯು ಆಯುರ್ವೇದವನ್ನು ಶೋಧಿಸಿ ಉತ್ತಮವಾದ ಔಷಧವೆಂಬ ಅಮೃತವನ್ನು ನೀಡಿ ಸಮಸ್ತ ಮಾನವಕುಲದ ಸಂರಕ್ಷಣೆಯನ್ನು ಮಾಡಿದ್ದಾನೆ.

ಹೀಗೆ ದೇವತೆಗಳಿಗೆ –ಅಮೃತ, ಮಾನವರಿಗೆ –ಔಷಧವೆಂಬ ಅಮೃತ, ತತ್ವಜ್ಞಾನಿಗಳಿಗೆ –ಮೋಕ್ಷವೆಂಬ ಅಮೃತವನ್ನು ಕರುಣಿಸುವ ಧನ್ವಂತರಿಯ ಕರುಣೆ ಅಪಾರ.

## ಶಾಸ್ತ್ರಸಮುದ್ರಮಥನಮಾಡಿರಿ!!

ಈ ಸಂದರ್ಭದಲ್ಲಿ ಭಾಗವತಕ್ಕೆ ವ್ಯಾಖ್ಯಾನಮಾಡುತ್ತಾ ಶ್ರೀಮದ್ವಿಜಯಧ್ವಜ ತೀರ್ಥರು ಅದ್ಭುತವಾದ ಆಧ್ಯಾತ್ಮಿಕ ಸಂದೇಶವನ್ನು ನೀಡಿದ್ದಾರೆ.

ದೇವದಾನವರು ಆಶ್ರಯಿಸಿದ ಕ್ಷೀರಸಮುದ್ರದಂತೆ ನಮ್ಮೆಲ್ಲರ ಕಣ್ಣಮುಂದೆಯೂ ಕ್ಷೀರಸಮುದ್ರವಿದೆ.

ವೇದ, ಪುರಾಣ, ಭಾರತ, ಉಪನಿಷತ್ತುಗಳೇ ಕ್ಷೀರಸಮುದ್ರ. ಈ ಸಮುದ್ರ ವನ್ನು ನಾವು ಮಥನಮಾಡಬೇಕು. ಇಲ್ಲಿಯೂ ಮಥಿಸಲು ಮಂಥಾನ ಬೇಕು. ಇಲ್ಲಿ ಬುದ್ಧಿಯೇ ಕಡೆಗೋಲು. ಬುದ್ಧಿ ಎಂಬ ಮಂದರ ಪರ್ವತದಿಂದ ಶಾಸ್ತ್ರವೆಂಬ ಕ್ಷೀರಸಮುದ್ರವನ್ನು ಮಥನಮಾಡಬೇಕು. ಅಲ್ಲಿ ಮಥನಮಾಡಲು ದೇವದಾನವರು ಸೇರಿದರು. ಇಲ್ಲಿ ದೇವತೆಗಳು = ಸಿದ್ಧಾಂತ. ದಾನವರು = ಪೂರ್ವಪಕ್ಷ. ಪೂರ್ವಪಕ್ಷ ಎಂದರೆ ವಿಪರೀತಜ್ಞಾನ.

ಸಿದ್ಧಾಂತ ಎಂದರೆ ಯಥಾರ್ಥಜ್ಞಾನ.

ನಮ್ಮ ಜೀವನದಲ್ಲಿ ಪೂರ್ವಪಕ್ಷಸಿದ್ಧಾಂತಗಳೆಂಬ ದೇವ ದೈತ್ಯರ ಸಮಾಗಮವಿದೆ. ಪೂರ್ವಪಕ್ಷ ಮೊದಲು, ಅನಂತರ ಸಿದ್ಧಾಂತ.

ಕ್ಷೀರಸಮುದ್ರಮಥನದ ಸಂದರ್ಭದಲ್ಲಿ ವಾಸುಕಿ ಹಗ್ಗವಾದ. ಆ ವಾಸುಕಿಯ ಬಾಲವನ್ನು ಯಾರು ಹಿಡಿಯಬೇಕು? ಮುಖವನ್ನು ಯಾರು ಹಿಡಿಯಬೇಕು ಎಂದು

ಪ್ರಶ್ನೆ ಬಂದಾಗ ದೈತ್ಯರು ಹೇಳಿದರು ನಾವು ಶ್ರೇಷ್ಠರು ನಮಗೆ ಮುಖಭಾಗ ಬೇಕು ಎಂದು. ಮೊದಲು ಮುಖ ಶ್ರೇಷ್ಠವಾದದ್ದು ಅನಂತರ ಬಾಲ ಎಂಬುದು ಅವರ ಭಾವನೆ. ದೈತ್ಯರು ಜ್ಯೇಷ್ಠರೆಂಬ ಪ್ರತಿಷ್ಠೆಯಿಂದ ಮುಖವನ್ನು ಹಿಡಿದರು. ಮಥನ ಪ್ರಾರಂಭವಾದಾಗ ವಾಸುಕಿಯ ಮುಖದಿಂದ ಹೊರಹೊಮ್ಮಿದ ವಿಷದಿಂದ ಕೆಲವರು ಸತ್ತೇ ಹೋದರು. ಆದರೂ ಮುಖವನ್ನು ಬಿಡಲಿಲ್ಲ. ಸತ್ತರೂ ಪ್ರತಿಷ್ಠೆ ಬಿಡೆವು ಎಂಬ ಹಮ್ಮು ಅವರದು. ಪ್ರಕೃತ ನಮ್ಮ ಮನಸ್ಸಿನಲ್ಲಿ ಬರುವ ಪೂರ್ವ ಪಕ್ಷ, ಆಕ್ಷೇಪಗಳೇ ದೈತ್ಯರು.

ಸಿದ್ಧಾಂತ, ಸಮಾಧಾನಗಳೇ ದೇವತೆಗಳು. ಈ ಪೂರ್ವಪಕ್ಷ ಸಿದ್ಧಾಂತಗಳೆಂಬ ದೇವದಾನವರಿಂದ ಶಾಸ್ತ್ರದ ಮಥನವಾಗಬೇಕು. ಸಮುದ್ರಮಥನದಲ್ಲಿ ಮೊದಲು ಹುಟ್ಟಿದ್ದು ಹಾಲಾಹಲ ಮತ್ತೂ ಮಥನಮಾಡಿದಾಗ ಅಮೃತ ದೊರೆಯಿತು. ಅದರಂತೆ, ಶಾಸ್ತ್ರಮಥನ ಸರಿಯಾಗಿ ಮಾಡದಿದ್ದಾಗ ಜ್ಞಾನ ಬರುವುದಿಲ್ಲ. ವಿಪರೀತ ಜ್ಞಾನವೆಂಬ ಹಾಲಾಹಲ ಬರುತ್ತದೆ. ಮತ್ತೂ ಮತ್ತೂ ಮಾಡಿದಾಗ ತತ್ವಜ್ಞಾನವೆಂಬ ಅಮೃತ ಕೊನೆಗೆ ದೊರೆಯುತ್ತದೆ.

ಸಮುದ್ರಮಥನದಲ್ಲಿ ಹಾಲಾಹಲ ಅಮೃತಗಳ ನಡುವೆ ಕೌಸ್ತುಭ, ಅಪ್ಸರ ಸ್ತ್ರೀಯರು, ಐರಾವತ, ಕಲ್ಪವೃಕ್ಷ, ಮುಂತಾದ ಅನೇಕ ವಸ್ತುಗಳು ಬಂದವು. ಇಷ್ಟೆಲ್ಲಾ ಬಂದರೂ ದೇವತೆಗಳು ಇಷ್ಟಕ್ಕೆ ತೃಪ್ತಿಗೊಳ್ಳದೆ ಅಮೃತ ಬರುವ ವರೆಗೆ ಮಥನ ಮುಂದುವರೆಸಿದರು. ಅದರಂತೆ ಶಾಸ್ತ್ರಮಥನ ಮಾಡುವಾಗಲೂ, ಭೌತಿಕವಾದ ಸಂಪತ್ತು, ಉದ್ಯೋಗ, ಆಯುಷ್ಯ, ಸ್ವರ್ಗ, ಅಧಿಕಾರ ಮುಂತಾದ ಇಷ್ಟಾರ್ಥಗಳು ಬಯಸದಿದ್ದರೂ ಬರುತ್ತವೆ. ಇಷ್ಟೆಲ್ಲಾ ಬಂದರೂ ನಾವು ಇಷ್ಟಕ್ಕೆ ತೃಪ್ತಿಗೊಳ್ಳದೆ; ತತ್ವಜ್ಞಾನವೆಂಬ ಅಮೃತವು ದೊರೆಯುವ ತನಕವೂ ಮಥನವನ್ನು ಮುಂದುವರಿಸಬೇಕು.

ವಿಪರೀತಜ್ಞಾನವನ್ನು ಹತ್ತಿಕ್ಕಿ, ಉತ್ತಮ ತತ್ವಜ್ಞಾನದ ಸಿದ್ಧಿಗಾಗಿ ನಮ್ಮ ಸಮಗ್ರ ಜೀವನದ ಶಕ್ತಿಯನ್ನು ಉಪಯೋಗಿಸಬೇಕು. ಅಮೃತತ್ವವನ್ನು ಹೊಂದಬೇಕು. ಇದೇ ಸಮುದ್ರಮಥನದ ಅಂತರಾರ್ಥ ಎಂಬುದಾಗಿ ವಿಜಯಧ್ವಜತೀರ್ಥರು ಸ್ಪಷ್ಟಪಡಿಸಿ ದ್ದಾರೆ.

## ಅಮೃತ ಕುಡಿದವರು ಯಾರು? ಏಕೆ?

ಧನ್ವಂತರಿ ರೂಪಿ ಭಗವಂತ ಅಮೃತವನ್ನು ತಂದದ್ದೇ ತಡ, ಇಷ್ಟರ ತನಕ ಸಹಾಯಕರಾದ ದೈತ್ಯರೆಲ್ಲರೂ ದೇವತೆಗಳನ್ನು ತಿರಸ್ಕರಿಸಿ ಅಮೃತಪ್ರಾಪ್ತಿಗಾಗಿ ಮುನ್ನುಗ್ಗಿದರು. ಹರಿಯ ಕೈಯಿಂದ ಕಲಶವನ್ನಪಹರಿಸಿದರು. ಜನರು ಬಸ್ಸು ಬರುವ ಮುನ್ನ ಸಾಲಾಗಿ ನಿಂತಿರುತ್ತಾರೆ. ಬಸ್ಸು ಬಂದಿತೋ ಎಲ್ಲರೂ ಮುನ್ನುಗ್ಗುತ್ತಾರೆ.

ಇಷ್ಟರ ತನಕದ ಸಾಲು ಹಾಳುಮಾಡಿ ಶಿಸ್ತಿನ ಉಲ್ಲಂಘನೆ ಮಾಡುತ್ತೇವೆ. ಇದರಂತೆ ದೈತ್ಯರ ಸಹಾಯ ಅಮೃತದ ಪ್ರಾಪ್ತಿಯ ತನಕ ಮಾತ್ರ. ಅಮೃತ ಕಲಶ ಕಂಡೊಡನೆ ಸಮಪಾಲೆಂಬ ತೀರ್ಮಾನವನ್ನೇ ಉಲ್ಲಂಘಿಸಿದರು. ಸ್ವಾರ್ಥ ಪರಾಯಣರಾದರು.

ಕಲಶ ಹಿಡಿದು ಓಡಿದ ದೈತ್ಯರನ್ನು ಕಂಡು ದೇವತೆಗಳು ಚಿಂತಾಕ್ರಾಂತರಾಗಿ ನಿಂತಿದ್ದಾರೆ. ದೈತ್ಯರ ಸ್ವಾರ್ಥ ವಂಚನೆಗಳಿಗೆ ಬಲಿಯಾಗಿದ್ದಾರೆ. ದೇವತೆಗಳು ಭಗವಂತನನ್ನೇ ಪ್ರಾರ್ಥಿಸಿದ್ದಾರೆ.

ಭಗವಂತ ಅಭಯದಾನ ಮಾಡಿದ. ದೈತ್ಯರು ಅಮೃತಪಾನ ಮಾಡದಿರ ುವಾಗಲೇ ಸ್ವಾರ್ಥಪರಾಯಣರೂ ದುಷ್ಟರೂ ವಂಚಕರೂ ಆಗಿದ್ದಾರೆ. ಇನ್ನು ಅಮೃತ ಪಾನ ಮಾಡಿದರೆ ಅವರ ಹಾರಾಟ ತಡೆಯುವವರ್ಯಾರು ಎಂದು ಆಲೋಚಿಸಿ ಭಗವಂತನು ದೈತ್ಯರ ನಡತೆಗೆ ತಕ್ಕಂತೆ ತಾನು ದೈತ್ಯರನ್ನು ಮೋಹಗೊಳಿಸುವ ರೂಪವನ್ನು ಧರಿಸಿದ.

ದೈತ್ಯರೆಲ್ಲರೂ ಪರಸ್ಪರ ಕಲಹಮಾಡುತ್ತಾ ಅಮೃತಕಲಶವನ್ನು ಅಪಹರಿಸಿ ಕೊಂಡು ಸಾಗುತ್ತಿದ್ದರು. ಅದೇ ಪರಿಸರಕ್ಕೆ ನವಯೌವನವುಳ್ಳ ಸರ್ವಾಭರಣ ಭೂಷಿತಗಳಾದ ಮೋಹಿನಿಯು ಜಗತ್ತನ್ನೇ ವಶೀಕರಿಸುವ ಮಂದಹಾಸವನ್ನು ಸೂಸುತ್ತಾ ಬಂದಳು. ದೈತ್ಯರೆಲ್ಲರೂ ಮೋಹಿತರಾದರು. ಅಮೃತವನ್ನು ಮರೆತು ಮೋಹಿನಿಯ ಬಳಿ ಬಂದರು. ಕಾಮಾಕರ್ಷಿತರಾದ ದೈತ್ಯರೆಲ್ಲರೂ ಮೋಹಿನಿಯ ರೂಪಕ್ಕೆ ಮಾರುಹೋಗಿದ್ದಾರೆ. ಅವಳ ಪ್ರಾಪ್ತಿಗಾಗಿ ಸರ್ವಸ್ವ ತ್ಯಾಗಕ್ಕೂ ಸಿದ್ಧರಾಗಿ ದ್ದಾರೆ. ಅಮೃತಕಲಶವನ್ನೇ ಅವಳಿಗೆ ಕೊಟ್ಟು ಹಂಚಲು ಹೇಳಿದರು.

ಮೋಹಿನೀ ಅಮೃತಕಲಶವನ್ನು ಸ್ವೀಕರಿಸಿದಳು. ಇಚ್ಛಾನುಸಾರವಾಗಿ ಅಮೃತ ಹಂಚುವುದಾಗಿ ಹೇಳಿದಳು. ರೂಪಮೋಹಿತರಾದ ದೈತ್ಯರು 'ಓಂ' ಎಂದರು. ಅಮೃತಕ್ಕಾಗಿ ಸಾಲಾಗಿ ಕುಳಿತರು. ದೇವತೆಗಳ ಸಾಲಿಗೆ ಮೋಹಿನಿ ಅಮೃತವನ್ನು ಬಡಿಸಿದಳು. ದೈತ್ಯರಿಗೆ ಸ್ವಲ್ಪವೂ ಕೊಡಲಿಲ್ಲ.

ಸಮುದ್ರಮಥನದಲ್ಲಿ ದೇವತೆಗಳೂ ಶ್ರಮವಹಿಸಿದ್ದಾರೆ. ದೈತ್ಯರೂ ದುಡಿದಿದ್ದಾರೆ. ಆದರೆ ಅದರ ಫಲವನ್ನು ದೇವತೆಗಳು ಮಾತ್ರ ಹೊಂದಿದ್ದಾರೆ. ದೈತ್ಯರು ಕಷ್ಟಪಟ್ಟರೂ ಫಲಭಾಗಿಗಳಾಗಲಿಲ್ಲ. ಇದಕ್ಕೇನು ಕಾರಣವೆಂದು ವೇದವ್ಯಾಸರು ನಿರೂಪಿಸಿದ್ದಾರೆ.

**ತತ್ರಾಮೃತಂ ಸುರಗಣಾಃ ಫಲಮಂಜಸಾಪುಃ**
**ಯತ್ಪಾದಪಂಕಜರಜಃಶ್ರಯಣಾನ್ನ ದೈತ್ಯಾಃ ॥** — ೧೮-೯-೨೮

ಇಬ್ಬರೂ ಶ್ರಮವಹಿಸಿದರೂ ದೇವತೆಗಳಲ್ಲಿರುವ ಭಗವದ್ಭಕ್ತಿ, ಸರ್ವೋತ್ತಮತ್ವ ಜ್ಞಾನ, ಸಾತ್ವಿಕತನ ಮುಂತಾದ ಸದ್ಗುಣಗಳ ಲೇಶವೂ ದೈತ್ಯರಲ್ಲಿಲ್ಲ. ಕೇವಲ ಸ್ವಾರ್ಥಪರಾಯಣರಾಗಿ ಅಧಿಕಾರದಾಹದಿಂದ ಮತ್ತೊಬ್ಬರನ್ನು ಘಾಸಿಗೊಳಿಸುವ ದುಷ್ಟ ಪ್ರವೃತ್ತಿಯವರು.

ದೇವತೆಗಳು ಅಮೃತತತ್ವಪ್ರಾಪ್ತಿಗೆ ಅವರ ಭಗವದ್ಭಕ್ತಿಯೇ ಕಾರಣ. ಈ ಮಾತನ್ನು ನಾವೆಲ್ಲರೂ ಮನನ ಮಾಡಬೇಕು. ನಾವು ಏನೆಲ್ಲ ಕಾರ್ಯ ಮಾಡಿದರೂ, ಆ ಕಾರ್ಯಕ್ಕಿಂತ ಅದರ ಹಿಂದಿರುವ ಭಾವನೆಗಳೇ ಮುಖ್ಯವಾಗಿವೆ.

ಸ್ವಾರ್ಥ, ಅಧಿಕಾರ, ಆಸೆಗಳಿಗೆ ಬಲಿಯಾಗಿ ಏನೆಲ್ಲ ಮಾಡಿದರೂ ಅದೆಲ್ಲ ವ್ಯರ್ಥವೇ ಸರಿ! ಅದು ಯಜ್ಞವಾಗಬಹುದು, ಸತ್ಕರ್ಮಗಳಾಗಬಹುದು, ಜಪಾದಿ ಅನುಷ್ಠಾನವು ಇರಬಹುದು. ಅವುಗಳ ಹಿಂದೆ ಭಗವದ್ಭಕ್ತಿ ಸೇರಿದಾಗ ಮಾತ್ರ ಫಲಪ್ರದಗಳಾಗುತ್ತವೆ. ಭಕ್ತಿಯಿಲ್ಲದ ಕರ್ತವ್ಯ, ಅದು ಕೇವಲ ಡಾಂಬಿಕತನ ಪ್ರದರ್ಶನ. ಇದಕ್ಕೆ ದೇವದಾನವರೇ ದೃಷ್ಟಾಂತ. ನಾವು ದೇವತೆಗಳನ್ನೇ ಆದರ್ಶವನ್ನಾಗಿಟ್ಟುಕೊಂಡು ಭಗವದ್ಭಕ್ತಿಯನ್ನು ಮೈಗೂಡಿಸಿಕೊಂಡೆವೆಂದಾದರೆ, ದೇವತೆಗಳು ಅಮೃತಭಾಗಿಗಳಾದಂತೆ, ನಾವು ಅಮೃತಭಾಗಿಗಳಾಗುತ್ತೇವೆ.

ದೇವದಾನವರ ಹೋರಾಟ ಮುಗಿಯುವುದೆಂದಿಲ್ಲ. ನಿರಂತರ ಹೋರಾಟ ನಡೆಯುತ್ತಲೇ ಇರುತ್ತದೆ. ಕೆಲವೊಮ್ಮೆ ದೇವತೆಗಳು ಜಯಿಸುತ್ತಾರೆ. ಕೆಲವೊಮ್ಮೆ ದೈತ್ಯರು ಜಯಿಸುತ್ತಾರೆ.

ಈ ಹೋರಾಟ ನಮ್ಮ ಒಳಗೇ ನಡೆಯುತ್ತಲೇ ಇದೆ. ಕೆಲವೊಮ್ಮೆ ಉತ್ತಮ ಆಚಾರ ವಿಚಾರಗಳಿಗೆ ಮಹತ್ವ ಬಂದರೆ ಕೆಲವೊಮ್ಮೆ ದುಶ್ಚಟಗಳೆಂಬ ದುಷ್ಟಶಕ್ತಿಗಳ ಆಕ್ರಮಣಕ್ಕೆ ತುತ್ತಾಗುತ್ತೇವೆ.

## ಬಲಿಯು ಕಥೆ

ಮುಂದೆ ಭಾಗವತವು ಬಲಿಚಕ್ರವರ್ತಿಯ ಕಥೆಯನ್ನು ವಿವರಿಸುತ್ತದೆ.

ಪರೀಕ್ಷಿತ ಶುಕರ ಬಳಿ ಕೇಳಿದ,

ಶುಕಾಚಾರ್ಯರೇ! ಪರಿಪೂರ್ಣನಾದ ಶ್ರೀಹರಿ ವಾಮನನಾಗಿ ಬಂದು ಬಲಿಯಬಳಿ ಮೂರು ಹೆಜ್ಜೆ ಭೂಮಿಯನ್ನೇಕೆ ಬೇಡಿದ!!

ಪೂರ್ಣನಿಗೂ ಕಾಮನೆಯೆ? ಒಗಟಿನ ವಾಮನನ ಗುಟ್ಟೇನು?!

ಜಿಜ್ಞಾಸುವಿನ ಪ್ರಶ್ನೆಗೆ ಶುಕರು ಭಕ್ತಿಯಿಂದ ಉತ್ತರಿಸಿದರು.

ಹರಿಯ ಕರುಣೆಯಿಂದ ದೇವತೆಗಳೆಲ್ಲರೂ ಅಮೃತಪಾನಮಾಡಿ ಜಯವನ್ನು ಗಳಿಸಿದ್ದಾರೆ. ದೇವೇಂದ್ರನ ಆಡಳಿತದಲ್ಲಿ ಸುಖವಾಗಿದ್ದಾರೆ.

ಪರಾಜಿತರಾದ ಅಸುರರು ಕ್ರೋಧವಶರಾದರು. ದೇವತೆಗಳ ವಿರುದ್ಧ ಪುನಃ ಕದನದ ಕಣಕ್ಕೆ ಇಳಿದು, ಏನಾದರು ಮಾಡಿ ಅವರನ್ನು ಸೋಲಿಸಬೇಕು ಎಂದು ಆಲೋಚಿಸಿದರು. ಪರಾಜಯವೆಂಬ ಅವಮಾನದುಃಖದಿಂದ ಬಲಿಯನ್ನು ಮುಂದೆ ಮಾಡಿಕೊಂಡರು. ಎಲ್ಲರೂ ಶುಕ್ರಾಚಾರ್ಯರ ಬಳಿ ಆಗಮಿಸಿದರು. ಶುಕ್ರಾಚಾರ್ಯರು ದೈತ್ಯರನ್ನು ಎತ್ತುಗಟ್ಟಿದರು. ಅದ್ಭುತವಾದ ವಿಶ್ವಜಿತ್‌ಯಾಗವನ್ನು ಮಾಡಿ ದೈತ್ಯರಿಗೆ ಸಿಂಹಬಲ ಬರುವಂತೆ ಮಾಡಿದರು.

ದೃಪ್ತರಾದ ದೈತ್ಯರು ಬಲಿಯನ್ನು ಮುಂದೆಮಾಡಿಕೊಂಡು ಮತ್ತೆ ಇಂದ್ರಪುರಿಯತ್ತ ಸಾಗಿದರು. ಆಕ್ರಮಣ ಆರಂಭಿಸಿದರು. ದೇವತೆಗಳು ಮತ್ತೆ ಚಿಂತಾಕ್ರಾಂತರಾದರು. ದೈತ್ಯರು ಮೊದಲ ಸ್ಥಿತಿಗಿಂತಲೂ ಈಗ ಬಲಿಷ್ಠರಾಗಿದ್ದಾರೆ. ಸಮುದ್ರ ಮಥನದ ಸಂದರ್ಭದಲ್ಲಿ ದೈತ್ಯರು ಮಾತ್ರ ಇದ್ದರು. ಈಗ ಅವರಿಗೆ ಶುಕ್ರಾಚಾರ್ಯರ ಬೆಂಬಲ ದೊರೆತಿದೆ. ಏನು ಮಾಡುವುದು?! ಹೇಗೆ ಜಯಿಸು ವುದು?! ಎಂಬುದೇ ಎಲ್ಲರ ಚಿಂತೆ.

ಬಲಿ ಬಂದುದನ್ನು ತಿಳಿದ ದೇವೇಂದ್ರ ನೊಂದವನಾಗಿ ದೇವತೆಗಳಿಂದ ಒಂದುಗೂಡಿ ಬೃಹಸ್ಪತ್ಯಾಚಾರ್ಯರ ಬಳಿ ಬಂದ. ಬಲಿಯ ಬಾಧೆಯನ್ನು ಪರಿಹರಿಸಿರೆಂದು ಪ್ರಾರ್ಥಿಸಿದ.

ಬೃಹಸ್ಪತ್ಯಾಚಾರ್ಯರು ಸಾಧ್ಯವೇ ಇಲ್ಲವೆಂದರು. ದೈತ್ಯರೆಲ್ಲರೂ ಬಲಿಷ್ಠರಾಗಿದ್ದಾರೆ, ಅವರನ್ನು ಜಯಿಸುವುದು ಅಷ್ಟು ಸುಲಭವಲ್ಲ. ಆದ್ದರಿಂದ ನೀವೆಲ್ಲರೂ ನಿಮ್ಮ ಜಾಗಬಿಟ್ಟು ಭೂಗತರಾಗುವುದೇ ಒಳ್ಳೆಯದು ಎಂದರು.

**ತಸ್ಮಾನ್ನಿಲಯಮುತ್ಸೃಜ್ಯ ಯೂಯಂ ಸರ್ವೇ ತ್ರಿವಿಷ್ಟಪಮ್ ।**
**ಯಾತ ಕಾಲಂ ಪ್ರತೀಕ್ಷಂತೋ ಯತಃ ಶತ್ರೋರ್ವಿಪರ್ಯಯಃ ॥**

— ೧೧೮-೧೫-೩೦

ವರನ್ನು ಜಯಿಸಲು ಭಗವಂತನೇ ಬರಬೇಕು. ಆದ್ದರಿಂದ ಸ್ವರ್ಗವನ್ನು ಬಿಟ್ಟು ಓಡಿರಿ! ನಿಮ್ಮ ಶತ್ರುವಿಗೆ ವಿಪರೀತ ಕಾಲವು ಬರುವ ತನಕ ತಾಳ್ಮೆವಹಿಸಿರಿ! ಎಂದು ತಿಳಿಸಿದರು.

ಬೃಹಸ್ಪತ್ಯಾಚಾರ್ಯರ ಸಲಹೆಯಂತೆ ದೇವತೆಗಳು ಸ್ವರ್ಗಲೋಕ ಬಿಟ್ಟು ನಡೆದರು. ಒಬ್ಬೊಬ್ಬರು ಒಂದೊಂದು ಕಡೆ ಅಡಗಿಹೋದರು.

ಇತ್ತ ದೈತ್ಯರು ಪುರಪ್ರವೇಶಮಾಡಿದರು. ಯುದ್ಧಕ್ಕಾಗಿ ಬಂದ ದೈತ್ಯರಿಗೆ ದೇವತೆಗಳೇ ಕಾಣಿಸಲಿಲ್ಲ. ದೇವಲೋಕವೆಲ್ಲ ಬರಿದಾಗಿದೆ. ನಿಶ್ಚಿಂತೆಯಿಂದ ದೇವಲೋಕವನ್ನು ಆಕ್ರಮಿಸಿದ್ದಾರೆ. ಸ್ವರ್ಗಾಧಿಪತಿಯನ್ನಾಗಿ ಬಲಿಯನ್ನು ನೇಮಿಸಿ ಹಕ್ಕನ್ನು ಸ್ಥಾಪಿಸಿಕೊಂಡು ಮೂರುಲೋಕವನ್ನೇ ವಶೀಕರಿಸಿಕೊಂಡಿದ್ದಾರೆ.

ಇತ್ತ ದೈತ್ಯರಿಂದ ದುಃಖಿತರಾದ ದೇವತೆಗಳು ಪುನಃ ಭಗವಂತನನ್ನೇ ಮೊರೆ ಹೊಕ್ಕಿದ್ದಾರೆ.

## ವಾಮನನಾಗಿ ಮತ್ತೆ ಬಂದ

ದೇವತೆಗಳ ಪ್ರಾರ್ಥನೆಯಂತೆ ಶರಣಾಗತವತ್ಸಲನಾದ ಶ್ರೀಹರಿ ಅಭಯದಾನ ಮಾಡಿದ. ರಕ್ಷಣೆಗಾಗಿ ತಾನೇ ಅವತರಿಸುವುದಾಗಿ ಹೇಳಿದ. ಬೆಂಬಿಡದೆ ರಕ್ಷಿಸುವ ಹರಿಕರುಣೆಗೆ ಸಾಟಿಯುಂಟೇ?!

ಇತ್ತ ಅದಿತಿ ತನ್ನ ಮಕ್ಕಳ ದುಸ್ಥಿತಿಯಿಂದ ದುಃಖಿತಳಾಗಿದ್ದಾಳೆ. ಈ ಸಂದರ್ಭದಲ್ಲಿ ಒಂದುದಿನ ಕಶ್ಯಪರು ಅದಿತಿಯ ಆಶ್ರಮಕ್ಕೆ ಬಂದರು. ಅದಿತಿಯ ದುಃಖ ಕಂಡು ಹರಿಭಜನೆ ಮಾಡೆಂದು ಉಪದೇಶಿಸಿದರು. ಅದಿತಿ ಕಶ್ಯಪರ ಉಪದೇಶದಂತೆ ಭಗವಂತನೇ ಮಗನಾಗಿ ಬರಲೆಂದು ಉತ್ತಮವಾದ ಭಕ್ತಿ ಮಾಡಿದಳು. ಉಪವಾಸಾದಿ ವ್ರತಗಳನ್ನೂ ಕೈಗೊಂಡಳು. ಅದಿತಿಯ ಅದ್ವಿತೀಯವಾದ ಸೇವೆಯಿಂದ ಸಂತುಷ್ಟನಾದ ಭಗವಂತ ಅವಳಲ್ಲಿ ಅವತರಿಸುತ್ತಿದ್ದಾನೆ.

ಚತುರ್ಭುಜನಾಗಿ, ಶಂಖಚಕ್ರಗದಾಪದ್ಮಧಾರಿಯಾಗಿ, ಪದ್ಮನೇತ್ರನಾಗಿ, ಪೀತಾಂಬರಧಾರಿಯಾಗಿ ಅವತರಿಸಿದ್ದಾನೆ. ನೋಡಲು ಕಣ್ಣು ಸಾಲದು, ಪೊಗಳಲು ಶಬ್ದ ಸಾಲದು. ಮುಂದೆ ಕೃಷ್ಣಾವತಾರದ ಸಮಯದಲ್ಲಿ ಹೇಗೆ ಕೃಷ್ಣನ ಸೊಬಗನ್ನು ವರ್ಣಿಸಿದ್ದಾರೋ ಅದರಂತೆಯೇ ಇಲ್ಲಿಯೂ ವಾಮನರೂಪವನ್ನು ವ್ಯಾಸರು ಬಣ್ಣಿಸಿದ್ದಾರೆ. ಭಗವಂತನು ತನ್ನ ಮಂಗಳರೂಪದಿಂದಲೇ ತನಗೆ ಎಲ್ಲರಂತೆ ಹುಟ್ಟಿಲ್ಲ ಎಂದು ತೋರಿಸಿದ್ದಾನೆ.

ಜಗತ್ತಿನಲ್ಲಿ ಮಕ್ಕಳು ಹುಟ್ಟುವಾಗ, ಆಭರಣಗಳನ್ನು ಧರಿಸಿ ಹುಟ್ಟುವುದಿಲ್ಲ. ಚತುರ್ಭುಜರಾಗಿಯೂ ತೋರುವುದಿಲ್ಲ. ಜಗದ್ವಿಲಕ್ಷಣರೂಪವನ್ನೂ ತೋರಿಸುವ ಮೂಲಕ ಲೋಕಾತೀತನೆಂದು ತಿಳಿಸಿದ್ದಾನೆ.

ನರಸಿಂಹಾವತಾರದಲ್ಲಿಯೂ ಕಂಬದಿಂದ ಪ್ರಕಟನಾದ. ಜಗತ್ತಿನ ಮಕ್ಕಳಿಗೆ ತಂದೆತಾಯಂದಿರು ಇರುವಂತೆ ನನಗೆ ಯಾರೂ ಜನಕರಿಲ್ಲ ಎಂದು ತೋರಿಸಿದ. ಈಗ ವಾಮನನಾಗಿ ಅವತರಿಸುವಾಗ ಚತುರ್ಭುಜನಾಗಿ ಪ್ರಕಟಗೊಂಡು ಹುಟ್ಟಿಲ್ಲ ವೆಂದು ತಿಳಿಸಿದ್ದಾನೆ.

['ಇಂದು ನನಗೆ ತುಂಬಾ ಸಂತೋಷವಾಗುತ್ತಿದೆ. ಇಂದು ಧಧಿವಾಮನ ಜಯಂತೀ. ಪ್ರತಿನಿತ್ಯ ಭಾಗವತ ಹೇಳುವಾಗ ಸಂದರ್ಭಕ್ಕನುಗುಣವಾಗಿ ಇಂದು ವಾಮನನ ಕಥೆಯೇ ಬಂದದ್ದು ಭಗವಂತನ ಅನುಗ್ರಹವೆಂದೇ ಭಾವಿಸುತ್ತೇನೆ.]

ಕೃಷ್ಣನೂ ಚತುರ್ಭುಜರೂಪವನ್ನು ತೋರಿಸಿ ಪುಟ್ಟ ಬಾಲಕನಾದಂತೆ ವಾಮನನೂ ಸುಂದರ ರೂಪವನ್ನು ತೋರಿಸಿ ಮಾಯಾವಟುವಾದ. ವಾಮನನಾಗಿ ಪ್ರಕಟನಾದ. ಸ್ವಲ್ಪ ಸಮಯದ ಅನಂತರ ವಾಮನನಿಗೂ ಉಪನಯನವನ್ನು ಮಾಡಿದರು. ಅಜಿನ, ದಂಡ, ಕಮಂಡಲುಗಳಿಂದ ಕಳೆಕಳೆಯಾಗಿ ಹೊಳೆಯುತ್ತಿರುವ ವಾಮನ ಅವತಾರಕಾರ್ಯಕ್ಕಾಗಿ ಹೊರಟ.

## ವಾಮನಾಯ ನಮಃ

ಇತ್ತ ನರ್ಮದೆಯ ತೀರದಲ್ಲಿ ಬಲಿಯ ನೂರನೆಯ ಅಶ್ವಮೇಧ ನಡೆದಿತ್ತು. ಇದರಿಂದ ದೇವತೆಗಳೂ ನಡುಗುವಂತಾಗಿತ್ತು. ಅಲ್ಲಿಗೆ ನಿಸ್ಸೀಮಮಹಿಮನಾದ ನಿಗಮವಾಕ್ಪಟುವಾದ ಪುಟ್ಟ ವಾಮನ ದಿಟ್ಟ ಹೆಜ್ಜೆಯನಿಡಲು ಥಟ್ಟನೆ ಪ್ರತ್ಯಕ್ಷನಾದ.

ಪೃಥಿವಿಯನ್ನೇ ಮಥಿಸುವ ಪುಟ್ಟ ಹೆಜ್ಜೆಯನಿಕ್ಕುತ್ತಾ ಬರುತ್ತಿರುವ ಬಾಲಬ್ರಹ್ಮಚಾರಿಯ ತೇಜಸ್ಸಿಗೆ ಶುಕ್ರಾಚಾರ್ಯರೇ ಮೊದಲಾದವರು ಬೆರಗಾದರು. ವಾಮನನ ಪ್ರಭೆಯಿಂದ ಎಲ್ಲರೂ ಮುಚ್ಚಿಹೋಗಿದ್ದಾರೆ. ಒಬ್ಬ ಸೂರ್ಯಬಂದ! ಎಂದರೆ ಮತ್ತೊಬ್ಬ ಅಗ್ನಿ ಬಂದನೆಂದ. ಮತ್ತೊಬ್ಬ ಇಲ್ಲಿ ಸನತ್ಕುಮಾರನೇ ಬಂದನೆಂದ. ಬೆಳಕಿಗೆ ಬೆರಗಾಗಿ ಎಲ್ಲರೂ ಎದ್ದುನಿಂತು ಕೈಜೋಡಿಸಿದರು. ದಂಡಕಮಂಡಲು ಧಾರಿಯಾದ ತ್ರೈಲೋಕ್ಯಧಾರಿಯ ಪಾದಪೂಜೆ ಮಾಡಿದರು. ಪಾದಜಲವನ್ನು ಶಿರಸಾಧಾರಣೆ ಮಾಡಿದರು.

ಹರಿಯ ರೂಪಕಂಡ ಬಲಿ ಕೈಮುಗಿದ. ಭಕ್ತಿಯಿಂದ ಭಾವುಕನಾದ. ಕಾಲಿಗೆ ಮುಗಿಬಿದ್ದ.

ಬ್ರಾಹ್ಮಣರೇ! ನಿಮಗೆ ಇದೋ ಸ್ವಾಗತ. ನಿಮಗೆ ಈಪ್ಸಿತವಾದದ್ದನ್ನ ಕೇಳಿರಿ! ಏನು ಮಾಡಲೂ ಸಿದ್ಧನಿದ್ದೇನೆ. ನಿಮ್ಮನ್ನು ಸಾಮಾನ್ಯರೆಂದು ನಾನು ತಿಳಿದಿಲ್ಲ. ಬ್ರಹ್ಮರ್ಷಿಗಳ ತಪಸ್ಸೆಲ್ಲವೂ ಒಟ್ಟುಸೇರಿ ಮೂರ್ತಿಮತ್ತಾಗಿ ಬಂದಿರುವಂತೆ ಭಾವಿಸಿದ್ದೇನೆ ಎಂದ–

ಸ್ವಾಗತಂ ತೇ ನಮಸ್ತುಭ್ಯಂ ಬ್ರಹ್ಮನ್ಕಿಂ ಕರವಾಮ ತೇ ।
ಬ್ರಹ್ಮರ್ಷೀಣಾಂ ತಪಃ ಸಾಕ್ಷಾತ್ ಮನ್ಯೇ ತ್ವಾऽऽರ್ಯ ವಪುರ್ಧರಮ್ ॥
— ೮-೧೮-೨೯

ನಿಮ್ಮ ಆಗಮನದಿಂದ ನಮ್ಮ ಪಿತೃಗಳೆಲ್ಲರೂ ತೃಪ್ತರಾದರು. ನಮ್ಮ ವಂಶ ಪವಿತ್ರವಾಯಿತು. ಇಂದಿನ ಯಜ್ಞ ಉತ್ತಮವಾಯಿತು. ನಿಮ್ಮ ಆಗಮನದಿಂದ ನನ್ನ ಯಜ್ಞ, ಜೀವನ, ಕಾಲ ಎಲ್ಲವೂ ಸಾರ್ಥಕವಾಯಿತು ಎಂದು ಭಕ್ತಿಯಿಂದ ಬಲಿರಾಜ ವಾಮನಾವತಾರಿ ಶ್ರೀಹರಿಯನ್ನು ಸ್ವಾಗತಿಸಿದ್ದಾನೆ.

ವಾಮನನ ದರ್ಶನದಿಂದ ಧನ್ಯನಾದ ಬಲಿರಾಜ ವಾಮನನಿಗೆ ತಾನಾಗಿಯೇ ಹೇಳುತ್ತಿದ್ದಾನೆ:

ವಾಮನ! ನಿನಗೆ ಬೇಕಷ್ಟು ಕೇಳು! ಕೇಳಿದ್ದು ಕೊಡುತ್ತೇನೆ –'ಯದ್ ಯದ್ ವಟೋ! ವಾಂಛಸಿ ತತ್ಪ್ರತೀಚ್ಛ'. ನಿನ್ನನ್ನು ಕಂಡರೆ ಭಿಕ್ಷಾರ್ಥಿಯಾಗಿಯೇ ಬಂದಿರುವಂತೆ ಕಾಣುತ್ತಿದ್ದೀ. ನಿನಗೆ ಹಸುಗಳು ಬೇಕೆ? ಅಥವಾ ಬಂಗಾರ ಬೇಕೇ? ಮನೆಯನ್ನು ಕೊಡಲೇ? ಏನು ಬೇಕು? ಒಳ್ಳೆ ವಾಟ ಬೇಕೆಂದಿದ್ದರೆ ಅದನ್ನೇ ಕೊಡ ತ್ತೇನೆ. ಗ್ರಾಮಗಳು, ಕುದುರೆಗಳು, ಆನೆಗಳು, ರಥ –ಯಾವುದು ಬೇಕಾದರೂ ಕೇಳು. ಅಥವಾ ನೀನು ಕನ್ಯಾರ್ಥಿಯಾಗಿ ಬಂದಿದ್ದೀಯಾ ಹೇಳು; ಒಳ್ಳೆ ಕನ್ಯೆಯನ್ನು ಕೊಟ್ಟು ಮದುವೆಮಾಡುತ್ತೇನೆ ಎಂದ.

ಭಕ್ತಿಯಿಂದ ಬಲಿರಾಜ ಅದ್ಭುತವಾದ ಔದಾರ್ಯದ ಮಾತುಗಳನ್ನಾಡಿದಾಗ ಭಗವಂತ ಸುಂದರ ಪ್ರಸಂಗವನ್ನು ನಿರ್ಮಾಣಮಾಡಿಕೊಳ್ಳುವುದಕ್ಕಾಗಿ ಹೇಳಿದ.

ಬಲಿರಾಜ! ನೀನು ನಿನ್ನ ಕುಲಕ್ಕೆ ಉಚಿತವಾದ ಮಾತುಗಳನ್ನಾಡಿದ್ದಿ. ಪ್ರಹ್ಲಾದನೇ ಮುಂತಾದ ಔದಾರ್ಯ ಶಿಖಾಮಣಿಗಳ ಸುಂದರ ಗಣಿ ನಿನ್ನ ಕುಲ. ಭಕ್ತನಾದ ಪ್ರಹ್ಲಾದ ಚಂದ್ರಮನಂತೆ ಕಂಗೊಳಿಸಿದರೆ, ಹಿರಣ್ಯಕಶಿಪು ಉತ್ತಮ ಪರಾಕ್ರಮದಿಂದ ತ್ರಿಲೋಕಗಳಲ್ಲಿಯೂ ವಿಖ್ಯಾತನಾದವ. ಹರಿಯನ್ನು ತರಿಯುವೆನೆಂದು ಸಮಸ್ತ ಲೋಕವನ್ನು ಸಂಚರಿಸಿದ. ಎಲ್ಲೆಡೆಯೂ ಹಿರಣ್ಯಕಶಿಪು ಹರಿಯನ್ನು ಹುಡುಕುತ್ತಿರುವಾಗ ಶ್ರೀಹರಿಯು ಹಿರಣ್ಯಕಶಿಪುವಿನ ಒಳಗೇ ಸೇರಿದ. ಹೊರದೃಷ್ಟಿಯುಳ್ಳ ದೈತ್ಯ, ಒಳಗೇ ಹರಿಯನ್ನು ಧರಿಸಿ ಮೂರು ಲೋಕಗಳನ್ನು ಸುತ್ತಿ ಬಂದ. ಏನೇ ಆಗಲಿ, ಅವನ ಪರಾಕ್ರಮ ದೊಡ್ಡದು ಎಂದ.

## ಜೀವನದ ದುರಂತ ಯಾವುದು?

ನಮ್ಮ ಸ್ಥಿತಿಯು ಹಿರಣ್ಯಕಶಿಪುವಿನಂತೆಯೇ ಆಗಿದೆ. ನಮಗೂ ಭಗವಂತನನ್ನು ಕಾಣಬೇಕು ಎಂದು ಹಂಬಲ. ಭಗವಂತನನ್ನು ಕಾಣಲು ಎಲ್ಲಿ ಎಲ್ಲಿಯೋ ಸಾಗುತ್ತಿದ್ದೇವೆ. ಆದರೆ ಭಗವಂತ ಎಲ್ಲೋ ಇಲ್ಲ. ನಮ್ಮೆಲ್ಲರ ಹೃದಯದಲ್ಲಿಯೇ ಇದ್ದಾನೆ. ಸರ್ವಾಂತರ್ಯಾಮಿಯಾದ ಎಲ್ಲರನ್ನೂ ಎಲ್ಲಾ ಕಾಲದಲ್ಲಿ ಅವರವರ ಯೋಗ್ಯತೆಗನುಸಾರವಾಗಿ ರಕ್ಷಣೆ ಮಾಡುತ್ತಿದ್ದಾನೆ. ಜಗನ್ನಾಥದಾಸರು ಹೇಳಿದ್ದಾರೆ–

'ಕಣ್ಣಿಗೆ ಎವೆಯಂದದಲಿ' ಎಂದು. ಕಣ್ಣಿನಿಂದ ರೆಪ್ಪೆ ಎಷ್ಟು ದೂರದಲ್ಲಿದೆ?! ರೆಪ್ಪೆ ಕಣ್ಣಿಗೆ ಅಂಟಿಕೊಂಡೇ ಇದೆ. ಭಗವಂತನೂ ಹೀಗೆಯೆ, ರೆಪ್ಪೆಗಿಂತಲೂ ಹತ್ತಿರವಿದ್ದಾನೆ. ಕಣ್ಣಿಗೆ ಯಾವ ಪೆಟ್ಟು ಬೀಳುವುದಿದ್ದರೂ ಕಸಕಡ್ಡಿಗಳು ಬೀಳುವುದಿದ್ದರೂ ರೆಪ್ಪೆ ಕೂಡಲೇ ಅವುಗಳನ್ನು ತಡೆದು ಕಣ್ಣಿನ ರಕ್ಷಣೆಯನ್ನು ಮಾಡುತ್ತದೆ. ರಕ್ಷಣೆ ಮಾಡುವ ರೆಪ್ಪೆ ಕಣ್ಣಿನ ಸಮೀಪದಲ್ಲಿಯೇ ಇದೆ. ಅದರಂತೆ ನಮ್ಮ ರಕ್ಷಕನಾದ ಭಗವಂತನೂ ಎಲ್ಲಿಯೋ ದೂರದಲ್ಲಿ ಇಲ್ಲ. ನಮ್ಮ ಒಳಗೇ ಇದ್ದು ಅನೇಕ ಆಪತ್ತುಗಳಿಂದ ನಮ್ಮನ್ನು ರಕ್ಷಿಸುತ್ತಿದ್ದಾನೆ. ಆದ್ದರಿಂದ ಭಗವಂತನನ್ನು ಎಲ್ಲಿ ಹುಡುಕುವುದು?! ಹೇಗೆ ಪೂಜಿಸುವುದು?! ಈ ಚಿಂತೆ ಬೇಡ. ಹೀಗಿದ್ದರೂ ನಾವು ಭಗವಂತನನ್ನು ಮರೆತಿದ್ದೇವೆ. ಕಣ್ಣಿನ ಬಳಿಯೇ ಇದ್ದು ಕಣ್ಣನ್ನು ಸದಾ ರಕ್ಷಿಸುವ ರೆಪ್ಪೆಯನ್ನು ನಾವು ನೋಡುವುದೇ ಇಲ್ಲ. ಮರ, ಬೆಟ್ಟ, ನದಿ ಎಲ್ಲವನ್ನೂ ಕಾಣುತ್ತೇವೆ. ಅದರಂತೆ ನಮಗೂ ಮಡದಿ, ಮಕ್ಕಳು, ಮನೆ, ಸಂಸಾರ ಎಲ್ಲವೂ ಕಾಣಿಸುತ್ತದೆ. ನಮ್ಮ ಸಮೀಪದಲ್ಲಿಯೂ ಇದ್ದು ನಮ್ಮನ್ನು ಸರ್ವದಾ ರಕ್ಷಿಸುವ ಭಗವಂತ ಮಾತ್ರ ಕಾಣಿಸುವುದಿಲ್ಲ. ಸಮೀಪವರ್ತಿಯಾದ ಭಗವಂತನ ಕಡೆ ದೃಷ್ಟಿ ಹರಿಯದಿರುವುದೇ ನಮ್ಮ ಜೀವನದ ದೊಡ್ಡ ದುರಂತ.

## ಅಜಿತೇಂದ್ರಿಯನಿಗೆಲ್ಲಿದೆ ತೃಪ್ತಿ?

ಬಲಿರಾಜನೇ! ನಿನ್ನ ಕುಲದಲ್ಲಿ ಭಗವದ್ಭಕ್ತಿಯ ಮಹಾಶಕ್ತಿ ಪ್ರಹ್ಲಾದನಾದರೆ, ಅದಕ್ಕೆ ವಿರುದ್ಧವಾಗಿ ಭಗವದ್ವೇಷಮಾಡಿದ ದೊಡ್ಡ ದೈತ್ಯ ಹಿರಣ್ಯಕಶಿಪು. ಏನೇ ಆಗಲಿ

ನಿನ್ನ ಕುಲದವರು ಅಸಾಮಾನ್ಯ ಪುರುಷರು. ನೀನೇನು ಅವರಿಗಿಂತ ಹೊರತಾಗಿ ಇಲ್ಲ. ನಿನ್ನದು ಅಸಾಮಾನ್ಯ ವ್ಯಕ್ತಿತ್ವ. ಬೇಕಾದ್ದನ್ನು ಕೊಡುವ ಸಾಮರ್ಥ್ಯ ನಿನಗಿದೆ. ನಿನ್ನ ಔದಾರ್ಯಕ್ಕೆ ಮೆಚ್ಚಿದೆ. ನಿನ್ನ ಬಳಿ ನಾನು ಹೆಚ್ಚೇನು ಕೇಳುವುದಿಲ್ಲ. 'ಮೂರು ಹೆಜ್ಜೆ ಇಡುವಷ್ಟು ಭೂಮಿಯನ್ನು ಕೊಟ್ಟರೆ ಸಾಕು. ನಾನು ಅಷ್ಟರಿಂದಲೇ ತೃಪ್ತನಾಗುತ್ತೇನೆ' ಎಂದ.

ವಾಮನನ ಮಾತು ಕೇಳಿದ ಬಲಿ ಆಶ್ಚರ್ಯಚಕಿತನಾದ. ಇಷ್ಟರ ತನಕ ಬಹಳ ಉತ್ಸಾಹದಿಂದ ನನ್ನನ್ನು ಹೊಗಳಿ ಅಟ್ಟಕ್ಕೇರಿಸಿ ಇವನು ಕೇಳಿದ್ದು ಮೂರುಹೆಜ್ಜೆ ಜಾಗ! ಈ ಹುಡುಗನಿಗೆ ಏನಾಗಿದೆ?!! ಎಂದು ಆಶ್ಚರ್ಯಚಕಿತನಾದ.

ಬಲಿ ಹೇಳಿದ. ಎಲೈ ಮಾಣವಕ! ನಿನ್ನ ಮಾತು ಹಿರಿಯರಿಗೆ ಸಮ್ಮತವಾಗಿಲ್ಲ. 'ತ್ವಂ ಬಾಲಃ ಬಾಲಿಶಮತಿಃ' –ನೀನು ಹುಡುಗ, ಹುಡುಗರದೇ ಬುದ್ಧಿ. ಏನು ಕೇಳಬೇಕೆಂಬುದೇ ನಿನಗೆ ತಿಳಿದಿಲ್ಲ.

**ಮಾಂ ವಚೋಭಿಃ ಸಮಾರಾಧ್ಯ ಲೋಕಾನಾಮೇಕಮೀಶ್ವರಮ್ ।**
**ಪದತ್ರಯಂ ವೃಣೀತೇ ಯೋಽಬುದ್ಧಿಮಾನ್ ದ್ವೀಪ ದಾಶುಷಮ್ ॥**
— ೮–೧೯–೧೯

ಮೂರು ಲೋಕದ ಪ್ರಭುವಾದ ನನ್ನನ್ನು ಇಷ್ಟು ಹೊತ್ತು ಹೊಗಳಿ, ಸಂತೋಷಪಡಿಸಿ ಕೇವಲ ಮೂರು ಹೆಜ್ಜೆ ಭೂಮಿಯನ್ನು ಬೇಡುತ್ತಿರುವಿಯಲ್ಲಾ! ನಿನ್ನ ಮೌಢ್ಯಕ್ಕೆ ನಾನೇನು ಹೇಳಲಿ? ಒಂದು ದ್ವೀಪವನ್ನೆ ಕೊಡಲು ಸಿದ್ಧನಾದ ನನ್ನಲ್ಲಿ ಕೇವಲ ಮೂರು ಹೆಜ್ಜೆ ಭೂಮಿಯ ಪ್ರಾರ್ಥನೆ!! ಆಶ್ಚರ್ಯ! ಆಶ್ಚರ್ಯ! ಕೇವಲ ಮೂರು ಹೆಜ್ಜೆ ಭೂಮಿಯನ್ನು ದಾನಮಾಡುವುದೆಂದರೆ ನನಗದು ಅಪಮಾನ ಎಂದ.

ಅದಕ್ಕೆ ವಾಮನ ಹೇಳಿದ–

**ಯಾವಂತೋ ವಿಷಯಾಃ ಪ್ರೇಷ್ಠಾಃ ತ್ರಿಲೋಕ್ಯಾಮಜಿತೇಂದ್ರಿಯಮ್ ।**
**ನ ಶಕ್ನುವಂತಿ ತೇ ಸರ್ವೇ ಪ್ರತಿಪೂರಯಿತುಂ ನೃಪ ॥** — ೮–೧೯–೨೧

ಎಂದು. ಭಾರೀ ವೇದಾಂತದ ಮಾತನ್ನು ಆಡುತ್ತಿದ್ದಾನೆ ವಾಮನ. ನನಗೆ ಹೆಚ್ಚು ಆಸೆಯಿಲ್ಲ. ಹೆಚ್ಚು ಆಸೆಯು ತರವಲ್ಲ. 'ಇಂದ್ರಿಯ ನಿಗ್ರಹ ಇಲ್ಲದವನಿಗೆ ಎಷ್ಟು ಇದ್ದರೂ ಸಾಲದು. ಮತ್ತೂ ಬೇಕು ಎಂಬ ದಾಹ ಇವನನ್ನು ದಹಿಸುತ್ತದೆ. ಆಸೆಗೆ ಮುಕ್ತಾಯವೇ ಇಲ್ಲ. ಮೂರು ಲೋಕಗಳಲ್ಲಿರುವ ವಿಷಯಪದಾರ್ಥಗಳೂ ತೃಪ್ತಿಪಡಿಸಲಾರವು. ಆದ್ದರಿಂದ ನಾನು ಅಲ್ಪತೃಪ್ತ. ನನಗೆ ಮೂರು ಹೆಜ್ಜೆ ಭೂಮಿ ಸಾಕು. ಅತಿಯಾದ ಸಂಪತ್ತನ್ನು ಪಡೆದ ರಾಜಾಧಿರಾಜರು ಎಷ್ಟೇ ಗಳಿಸಿಕೊಂಡಿದ್ದರೂ ಕೊನೆಗೆ ಹೋಗುವಾಗ ಎಲ್ಲವನ್ನೂ ಬಿಟ್ಟೇ ನಡೆದರು. ತೆಗೆದುಕೊಂಡು ಹೋದವರು ಯಾರೂ ಇಲ್ಲ. ಆದ್ದರಿಂದ ಅಲ್ಪತೃಪ್ತನಾದ ನನಗೆ ಮೂರುಹೆಜ್ಜೆ ಭೂಮಿ ನೀಡು ಸಾಕು.

ಸಂವಾದಿಯಾಗಿ ಹೀಗೊಂದು ಕಥೆ

ಈ ದೇಶದಲ್ಲಿ ಅಲೆಕ್ಸಾಂಡರ್ ಬಂದ ಕಥೆ ನಿಮಗೆ ತಿಳಿದಿದೆ. ಭಾರೀ ಭಾರೀ ಸೈನ್ಯವನ್ನು ಹೊಂದಿದ ಸಮರ್ಥ ವ್ಯಕ್ತಿ ಈತ.

ಒಮ್ಮೆ ಇವನಿಗೆ ಅನೇಕ ವಿದ್ವಾಂಸರು ವಿಮರ್ಶಕರು ಭೇಟಿಯಾದರು. ಅವನ ಬಳಿ ಕೆಲವು ಪ್ರಶ್ನೆಗಳನ್ನು ಕೇಳಿದರು. ನೀನು ಭಾರತ ದೇಶವನ್ನೇ ಗೆದ್ದುಕೊಳ್ಳುವ ಇಚ್ಛೆಯುಳ್ಳವನಾಗಿದ್ದೀ ಅಲ್ಲವೇ!? ಹೌದು ಎಂದ

ಇಷ್ಟೆಲ್ಲಾ ವಿಜಯ ಸಂಪಾದಿಸಿ ಭಾರತವನ್ನೇ ಗೆದ್ದು ಮುಂದೆ ಏನುಮಾಡುತ್ತೀ? ಎಂದು ಪ್ರಶ್ನಿಸಿದರು.

ಅನಂತರ ಅದಕ್ಕಿಂತ ಮುಂದಿನ ದೇಶಗಳನ್ನು ಜಯಿಸುತ್ತೇನೆ ಎಂದ. ಮುಂದೆ? ಎಂದರು. ಸಮಗ್ರದೇಶಗಳನ್ನು ಗೆದ್ದುಕೊಳ್ಳುತ್ತೇನೆ. ಜಗತ್ತನ್ನೇ ಗೆದ್ದಬಳಿಕ ಮುಂದೇನು ಮಾಡುತ್ತೀ?! ಎಂದರು. ಅದಕ್ಕೆ –ಎಲ್ಲವನ್ನೂ ಗೆದ್ದ ಬಳಿಕ ಆರಾಮವಾಗಿ ಕುಳಿತುಕೊಳ್ಳುತ್ತೇನೆ ಎಂದ. ಅದಕ್ಕೆ ಅವರೆಂದರು –ನೀನು ಕೊನೆಗೆ ಆರಾಮವಾಗಿ ಕುಳಿತುಕೊಳ್ಳುವುದಾಗಿದ್ದರೆ, ಮೊದಲೇ ಆ ಕೆಲಸ ಮಾಡಬಹುದಿತ್ತಲ್ಲ. ಸುಮ್ಮನೆ ಇಷ್ಟೆಲ್ಲಾ ಯುದ್ಧ, ಘರ್ಷಣೆ, ಸಂಹಾರ ಇದೆಲ್ಲ ಏಕೆ?! ಹಗಲೂ ರಾತ್ರಿ, ನೀನೂ ನಿನ್ನ ಸೈನಿಕರು ಎಲ್ಲರೂ ಕಷ್ಟಪಡುತ್ತಿದ್ದಾರೆ. ಸುಮ್ಮನೆ ಕುಳಿತುಕೊಳ್ಳುವುದೇ ಜೀವನದ ಗುರಿಯಾದರೆ ಮೊದಲೇ ಆ ಕೆಲಸವನ್ನು ಏಕೆ ಮಾಡಬಾರದು? ಎಂದು ನಮ್ಮ ಸಂತನೊಬ್ಬ ಕೇಳಿದಾಗ ಅಲಕ್ಸಾಂಡರ್‌ಗೆ ಉತ್ತರಿಸಲೇ ಆಗಲಿಲ್ಲವಂತೆ. ತಬ್ಬಿಬ್ಬಾದನಂತೆ.

ಅವನು ಕೊನೆಗೆ ಸಾಯುವ ಸಂದರ್ಭದಲ್ಲಿ ತನ್ನವರಿಗೆ 'ನಾನು ಸತ್ತಮೇಲೆ ನನ್ನ ಎರಡು ಕೈಗಳನ್ನು ಹೊರಗಿಟ್ಟು ಹೂಳಬೇಕು' ಎಂದು ಆಜ್ಞೆಮಾಡಿದ. ಹೀಗೇಕೆ ಎನ್ನಲು ಅವನು ಹೇಳಿದ –ಜನರಿಗೆ ಒಂದು ಸತ್ಯ ಸಂಗತಿಯನ್ನು ತಿಳಿಸುವುದು ನನ್ನ ಗುರಿ. ಅಲಕ್ಸಾಂಡರ್ ಇಷ್ಟೆಲ್ಲ ಹೋರಾಟ ನಡೆಸಿ ಅದ್ಭುತವಾದ ಜಯ ಸಂಪತ್ತು ಎಲ್ಲವನ್ನೂ ಗಳಿಸಿದ್ದರೂ ಕೊನೆಗೆ ಸಾಯುವಾಗ ಬರಿಗೈಯಲ್ಲಿ ಹೋಗಿದ್ದಾನೆ. ತಾನು ಗೆದ್ದ ಬಿಡಿ ವಸ್ತುವನ್ನೂ ಹೊತ್ತುಕೊಂಡು ಹೋಗಲು ಆಗಲಿಲ್ಲ' ಎಂಬ ಅರಿವು ಜನರಿಗುಂಟಾಗಬೇಕು ಎಂದನಂತೆ.

ಆದ್ದರಿಂದ ನಾವು ಎಷ್ಟು ಗಳಿಸಿದರೂ ಅದನ್ನು ಬಿಟ್ಟೇ ಹೋಗಬೇಕು. ಬಿಟ್ಟೇ ಹೋಗುವುದಾದರೆ ಕಟ್ಟಿಡುವ ಕೆಲಸವೇಕೆ. ವ್ಯರ್ಥವೇ ಸರಿ.

ಈ ವೇದಾಂತ ಸತ್ಯ ತತ್ತ್ವವನ್ನು ವಾಮನನು ಬಲಿಗೆ ಹೇಳಿದ. ಆದ್ದರಿಂದ ನನಗೆ ಮೂರು ಹೆಜ್ಜೆಗಿಂತ ಹೆಚ್ಚು ನೀನು ಕೊಟ್ಟರೂ ನಾನು ಸ್ವೀಕರಿಸಲಾರೆ ಎಂದ.

ಬಲಿಯು ಮರುಮಾತನಾಡಲಾಗದೆ ಉಪಾಯವಿಲ್ಲವೆಂದು ತಿಳಿದು ಮೂರು ಹೆಜ್ಜೆ ಭೂಮಿ ಕೊಡಲು ಸಿದ್ಧನಾದ.

## ಶುಕ್ರಾಚಾರ್ಯರ ಉಪದೇಶ

ವಾಮನನಿಗೆ ಭೂಮಿಯನ್ನು ನೀಡಲು ಬಲಿಯು ಉದ್ಯುಕ್ತನಾದಾಗ ಶುಕ್ರಾಚಾರ್ಯರು ತಡೆದರು. ಬಲಿ! ನೀನು ಬಲಿಯಾಗಬೇಡ, ತಡಿ ಎಂದರು. ಭಗವಂತನ ನಟನೆ ಎಲ್ಲವನ್ನೂ ತಿಳಿಹೇಳಿದರು. ವ್ಯವಹಾರದ ದೃಷ್ಟಿ ಜೀವನದಲ್ಲಿ ಬೇಕು. ವಿಚಾರಮಾಡು ಎಂದು ಹೇಳುತ್ತಿದ್ದಾರೆ–

ಸತ್ಯ ಎನ್ನುವುದು ನಮ್ಮ ಜೀವನವೃಕ್ಷದಲ್ಲಿ ಅರಳಿದ ಪುಷ್ಪ. ಮರಕ್ಕೆ ಪರಿಪೂರ್ಣತೆ ಫಲಪುಷ್ಪಗಳಿಂದಾದರೆ, ಜೀವನವೃಕ್ಷದ ಪರಿಪೂರ್ಣತೆಯ ಪುಷ್ಪ ಮತ್ತು ಫಲ ಸತ್ಯವೇ ಆಗಿದೆ. ಹೀಗಿದ್ದರೂ ಹಣ್ಣು ಪುಷ್ಪಗಳು ದೊರೆಯಬೇಕಾದರೆ ಮರಬೇಕು. ಮರವೇ ಇಲ್ಲವಾದರೆ ಹಣ್ಣು ಇಲ್ಲ ಹೂವು ಇಲ್ಲ. ಅದರಂತೆ ಮೊದಲು ವೃಕ್ಷಸ್ಥಾನದಲ್ಲಿರುವ ನಮ್ಮ ಅಸ್ತಿತ್ವ ಮುಖ್ಯ. ಜೀವನದ ಮುಂದಿನ ಎಲ್ಲ ಸತ್ಕರ್ಮಗಳಿಗೂ ನಮ್ಮ ಅಸ್ತಿತ್ವವೇ ಮುಖ್ಯವಾಗಿದೆ. ನಮ್ಮ ಅಸ್ತಿತ್ವವನ್ನೇ ಹಾಳುಗೆಡಹುವ ದಾನ, ಧರ್ಮ, ಅನರ್ಥಕಾರಿಯಾಗಿವೆ. ಆದ್ದರಿಂದ ವಿಚಾರ ಮಾಡಿದರೆ –ಸತ್ಯವೂ ಬೇಕು. ನಮ್ಮ ಅಸ್ಥಿತ್ವದ ನಿರೂಪಣೆಗೆ ಅಸತ್ಯವೂ ಬೇಕು. ಕೇಳಿದಾಗ ಇಲ್ಲವೆನ್ನಬಾರದು, ಇದೆ ಎಂದು ಎಲ್ಲವನ್ನೂ ಕೊಡಬಾರದು. 'ಅತಿ ಸರ್ವತ್ರ ವರ್ಜಯೇತ್' ಆದ್ದರಿಂದ ದಾನದಲ್ಲಿ ವ್ಯವಹಾರದೃಷ್ಟಿ ಬೇಕು. ಸತ್ಯ–ಅಸತ್ಯಗಳಲ್ಲಿ ಅಸತ್ಯ ಮೂಲ. ಬೇರಿನಂತೆ ಇದೆ. ಅಸತ್ಯದ ಹಿನ್ನೆಲೆಯಲ್ಲಿ ಸತ್ಯಕ್ಕೆ ಬೆಲೆ ಬಂದಿದೆ. ಇಲ್ಲವೆನ್ನದೆ ಇದ್ದದ್ದನ್ನೆಲ್ಲಾ ಕೊಡುತ್ತಾ ಹೋದರೆ ನಮ್ಮನ್ನೇ ನಾವು ಕಳೆದುಕೊಂಡಂತೆ. ಆದ್ದರಿಂದ ಕೊಡುವುದೇ ಇಲ್ಲ ಎನ್ನುವುದು ಬೇಡ. ಕೇಳಿದ್ದೆಲ್ಲಾ ಕೊಡುತ್ತೇನೆ ಎನ್ನುವುದು ಬೇಡ. ಸ್ವಲ್ಪ ದಾನ ಮಾಡಿದರೂ ಸಾಕು. ಆದ್ದರಿಂದ 'ಎಲ್ಲವನ್ನೂ ಕೊಡುತ್ತೇನೆ' ಎಂಬ ನಿನ್ನ ಮಾತು ಪ್ರಾಜ್ಞರಿಗೆ ಸಮ್ಮತವಾಗಿಲ್ಲ.

ಹೀಗೆ ಶುಕ್ರಾಚಾರ್ಯರು ಸುಳ್ಳು ಸತ್ಯಗಳನ್ನು ಬೆರೆಸಿಕೊಂಡು ಹೇಗೆ ವ್ಯವಹಾರಮಾಡಬೇಕು ಎಂದು ಬಲಿಗೆ ವಿವರಿಸಿದರು.

## ಸುಳ್ಳಿಗಿಂತ ಮಿಗಿಲಾದ ಅಧರ್ಮವಿಲ್ಲ

ಆದರೆ ಶುಕ್ರಾಚಾರ್ಯರ ಉಪದೇಶಕ್ಕೆ ಬಲಿ ಕಿವಿಗೊಡಲಿಲ್ಲ. ಶುಕ್ರಾಚಾರ್ಯರೇ! ನೀವು ವ್ಯವಹಾರ್ಯ ಜೀವನಕ್ಕೆ ಏನನ್ನು ಅಳವಡಿಸಿಕೊಳ್ಳಬೇಕು ಎಂಬುದನ್ನು ವಿವರಿಸಿದಿರಿ. ಬದುಕಿಗೆ ಬೇಕಾದ ಸೂತ್ರವನ್ನು ಹೇಳಿದಿರಿ. ಆದರೆ ನಾನು ಇದನ್ನು ಮೀರಿ ನಿಂತಿದ್ದೇನೆ. ನನ್ನ ಪ್ರಾಣಹೋದರೂ ಚಿಂತೆಯಿಲ್ಲ

'ನಹ್ಯಸತ್ಯಾತ್ ಪರೋಽಧರ್ಮಃ'

ಸುಳ್ಳಿಗಿಂತ ಮಿಗಿಲಾದ ಅಧರ್ಮವಿಲ್ಲ. ಅದರಲ್ಲಿಯೂ ಒಬ್ಬ ಬ್ರಹ್ಮಜ್ಞಾನಿಗೆ ಮಾತುಕೊಟ್ಟು ಈಗ ಮೋಸಗೊಳಿಸುವುದು ನನಗೆ ಸರಿಯೆನಿಸುವುದಿಲ್ಲ. ಈ ಸಂದರ್ಭದಲ್ಲಿ ನನ್ನ ಲಾಭ–ನಷ್ಟಗಳ ಬಗ್ಗೆ ವಿಚಾರಮಾಡಲಾರೆ. ನರಕಕ್ಕೂ ಹೆದರ

ಲಾರೆ. ಮೃತ್ಯುವಿಗೂ ಅಂಜಲಾರೆ. ನಾನು ಕೊಟ್ಟ ಮಾತನ್ನು ಉಳಿಸಿಕೊಳ್ಳುತ್ತೇನೆ. ಅದಕ್ಕಾಗಿ ಏನು ಬೇಕಾದರೂ ತ್ಯಾಗವನ್ನು ಮಾಡುತ್ತೇನೆ. ಎಲ್ಲ ವಿಧವಾದ ಕಷ್ಟವನ್ನು ಅನುಭವಿಸಲಿಕ್ಕೆ ಸಿದ್ಧನಾಗಿದ್ದೇನೆ ಎಂದು ಶುಕ್ರನೀತಿಯನ್ನು ಬಲಿರಾಜ ಅಲ್ಲಗಳೆದು, ಮೂರು ಹೆಜ್ಜೆ ಭೂಮಿ ದಾನದಿಂದ ಯಾವುದೇ ಅನರ್ಥ ಸಂಭವಿಸಿದರೂ ಸರಿ. ನಾನು ದಾನಮಾಡಿಯೇ ತೀರುತ್ತೇನೆ ಎಂದು ತನ್ನ ದೃಢನಿರ್ಧಾರವನ್ನು ವ್ಯಕ್ತಪಡಿಸಿದ.

ಶುಕ್ರಾಚಾರ್ಯರು ಉಪದೇಶ ಕೊಟ್ಟು ಸೋತರು. ಔದಾರ್ಯದ ಭರದಲ್ಲಿ ಆತ್ಮಗ್ಲಾನಿಯಾಗುತ್ತದೆ ಎಂದು ಎಷ್ಟು ಹೇಳಿದರು ಬಲಿ ತನ್ನ ದೀಕ್ಷೆ ಬಿಡಲಿಲ್ಲ. ಶುಕ್ರಾಚಾರ್ಯರ ಸಿಟ್ಟು ನೆತ್ತಿಗೇರಿತು. 'ಸಂಪತ್ತೆಲ್ಲವೂ ನಾಶವಾಗಲಿ' ಎಂದು ಶಪಿಸಿದರು. ಆದರೂ ಬಲಿ ಸತ್ಯಮಾರ್ಗವನ್ನು ಬಿಡಲಿಲ್ಲ. ಶ್ರೇಷ್ಠ ಬ್ರಹ್ಮನಿಷ್ಠನಿಗೆ ದಾನಮಾಡಿ ದಾರಿದ್ರ್ಯ ಬಂದರೆ ಅದನ್ನೂ ಭಾಗ್ಯವೆಂದೇ ಪರಿಗಣಿಸುವೆ ಎಂದ. ದಾನಕೊಡಲು ಅಣಿಯಾದ. ಈ ಸಂದರ್ಭದಲ್ಲಿ ಬಲಿಯ ಹೆಂಡತಿಯಾದ ವಿಂಧ್ಯಾವಳಿಯು ನೀರಿನಿಂದ ತುಂಬಿದ ಬಂಗಾರದ ಕಲಶ ತಂದಳು. ವಟುವಿಗೆ ದಾನಕೊಡಲು ಉತ್ಸುಕನಾದ ಬಲಿಗಿಂತಲೂ ಒಂದು ಹೆಜ್ಜೆ ಮುಂದಿದ್ದಾಳೆ. ಯಾವುದೇ ಅಳುಕಿಲ್ಲದೆ ಉತ್ಸಾಹದಿಂದ ಪಾದ ತೊಳೆಯಲು ಮುಂದೆ ಬಂದಿದ್ದಾಳೆ.

ಬಲಿರಾಜ ಮತ್ತು ವಿಂಧ್ಯಾವಳಿಯರ ದಾನ, ಇತಿಹಾಸದಲ್ಲಿಯೇ ಪ್ರಸಿದ್ಧವಾದ ದಾನ. ಇಂದಿಗೂ ಅದ್ಭುತವಾದ ದಾನ ನಡೆದರೆ ಅದನ್ನು ಬಲಿದಾನ ಎನ್ನುತ್ತಾರೆ.

ದಂಪತಿಗಳ ಪರಮಶ್ರೇಷ್ಠವಾದ ದಾನದ ಉತ್ಸವವನ್ನು ಕಂಡು ದೇವತೆಗಳು, ಗಂಧರ್ವರು. ವಿದ್ಯಾಧರರು, ಸಿದ್ಧ, ಚಾರಣರು, ಋಷಿಗಳು ಎಲ್ಲರೂ ಆಶ್ಚರ್ಯ ಪಟ್ಟಿದ್ದಾರೆ. ದೈತ್ಯಕುಲದ ಅಧಿಪತಿಯು, ದೇವತಾಕುಲದ ಪ್ರತಿನಿಧಿಯಾಗಿ ದೇವೇಂದ್ರನ ತಮ್ಮನಾದ ಉಪೇಂದ್ರನು ಬಂದಾಗ ತನ್ನ ಸರ್ವಲೋಕಾಧಿಪತ್ಯ ವನ್ನೂ ಕಡೆಗಣಿಸಿ, ತ್ಯಾಗಕ್ಕೆ ಅಣಿಯಾದ ಸರಳ ವರ್ತನೆಯನ್ನು ಕಂಡು ದೇವತೆಗಳೇ ಪುಷ್ಪವೃಷ್ಟಿ ಮಾಡುತ್ತಿದ್ದಾರೆ. ಗಂಧರ್ವರು, ಕಿಂಪುರುಷರು, ಕಿನ್ನರರು ಹಾಡಿ ಕೊಂಡಾಡಿದ್ದಾರೆ. 'ಸ್ವತಃ ತಾನು, ತನ್ನ ರಾಜ್ಯ, ಸಮಸ್ತ ಸಂಪತ್ತು ಎಲ್ಲವೂ ನಾಶವಾಗುತ್ತದೆ' ಎಂದು ಅರಿತಿದ್ದರೂ ತ್ಯಾಗಕ್ಕೆ ಸಿದ್ಧನಾದ ಬಲಿಯನ್ನು ಎಲ್ಲರೂ ಅದ್ಭುತವಾಗಿ ಅಭಿನಂದಿಸಿದ್ದಾರೆ.

ಮೂರು ಹೆಜ್ಜೆಯ ದಾನವಾಯಿತು. ಪುಟ್ಟ ವಾಮನ ತನ್ನ ವಿಶ್ವರೂಪವನ್ನು ಪ್ರಕಟಗೊಳಿಸಲಾರಂಭಿಸಿದ. ಮೂರುಹೆಜ್ಜೆಯನ್ನು ಪಡೆಯಲು ಉದ್ಯುಕ್ತನಾದ. ಬಲಿಯು ಹರಿಯ ರೂಪವನ್ನೂ ಕಾಣುತ್ತಿದ್ದಾನೆ.

**ತದ್ ವಾಮನಂ ರೂಪಮವರ್ಧತಾದ್ಭುತಂ**
**ಹರೇರನಂತಸ್ಯ ಗುಣತ್ರಯಾತ್ಮಕಮ್ ।**
**ಭೂಃ ಖಂ ದಿಶೋ ದ್ಯೌರ್ವಿವರಾಃ ಪಯೋಧಯಃ**
**ತಿರ್ಯಙ್ನೃದೇವಾ ಋಷಯೋ ಯದಾಸತ ॥** — ೮-೨೦-೨೧

ಭಗವಂತನ ದೇಹದಲ್ಲಿ ಸಮಸ್ತ ಲೋಕಗಳು, ಋತ್ವಿಕ್ಕುಗಳು, ಋಷಿಗಳು, ಪ್ರಾಣಿಗಳು, ಮನುಷ್ಯರು, ದೇವತೆಗಳು, ಸಪ್ತಸಮುದ್ರಗಳು, ಹತ್ತು ದಿಕ್ಕುಗಳು ಎಲ್ಲ ವನ್ನೂ ಕಂಡಿದ್ದಾನೆ. ಎಲ್ಲೆಡೆಯೂ ವ್ಯಾಪ್ತವಾದ ಭಗವಂತನ ದರ್ಶನ ಮಾಡಿದ್ದಾನೆ.

ಕ್ಷಿತಿಂ ಪದೈಕೇನ ಬಲೇರ್ವಿಚಕ್ರಮೇ
ನಭಃ ಶರೀರೇಣ ದಿಶಶ್ಚ ಬಾಹುಭಿಃ ।
ಪದಂ ದ್ವಿತೀಯಂ ಕ್ರಮತಸ್ತ್ರಿವಿಷ್ಟಪಮ್
ನ ವೈ ತೃತೀಯಾಯ ತದೀಯಮಣ್ವಪಿ ॥

ವಿರಾಡ್ರೂಪಿಯಾದ ಭಗವಂತ ಒಂದು ಪಾದದಿಂದ ಕೆಳಗಿನ ಸಮಸ್ತ ಲೋಕ ಗಳನ್ನೂ ಭೂಮಂಡಲವನ್ನೂ ವ್ಯಾಪಿಸಿದ. ತನ್ನ ಎರಡನೆಯ ಕಾಲನ್ನು ಮೇಲೆತ್ತಿ ದ್ದಾನೆ. ಆ ಪಾದವು ಮೇಲಿನ ಸಮಸ್ತ ಲೋಕ 'ಳನ್ನು ಆಕ್ರಮಿಸುತ್ತಾ ನಾಗುತ್ತಿದೆ. ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ ಎಲ್ಲವನ್ನೂ ವ್ಯಾಪಿಸಿದೆ. ಮೂರನೇ ಪಾದವಿನ್ಯಾಸಕ್ಕೆ ಸ್ವಲ್ಪವೂ ಜಾಗವೇ ಇಲ್ಲದಂತಾಯಿತು.

## ಬಲಿಕಥೆಯಲ್ಲಡಗಿದ ಹರಿಕರುಣೆ

ಬಲಿ ಕೊಟ್ಟದ್ದು ಸ್ವಲ್ಪ ಜಾಗ, ಭಗವಂತ ವ್ಯಾಪಿಸಿದ್ದು ಸಮಗ್ರ ಜಗತ್ತು. ಏನು ಇದರ ಅರ್ಥ?! ಇಲ್ಲಿ ಒಂದು ಉತ್ತಮವಾದ ಸಂದೇಶವಿದೆ.

ಬಲಿ ಸ್ವಲ್ಪ ಜಾಗಕೊಟ್ಟಾಗ ಭಗವಂತ ಬ್ರಹ್ಮಾಂಡವನ್ನೇ ವ್ಯಾಪಿಸಿದ. ಅದರಂತೆ ನಿಮ್ಮ ಜೀವನದಲ್ಲಿಯೂ ಭಗವಂತನಿಗೆ ಸ್ವಲ್ಪ ಜಾಗ ಕೊಡಿ ಸಾಕು. ಭಗವಂತ ತ್ರಿವಿಕ್ರಮನಂತೆ ನಮ್ಮ ಸಮಗ್ರ ಜೀವನವನ್ನೂ ವ್ಯಾಪಿಸಿಬಿಡುತ್ತಾನೆ. ಭಗವಂತ ಹೆಚ್ಚೇನು ಬಯಸುವುದಿಲ್ಲ. ದಿನದಲ್ಲಿ ಸ್ವಲ್ಪ ಕಾಲ ಧ್ಯಾನಮಾಡಿದರೂ ಸಾಕು. ಭಗವಂತನ ಅನುಗ್ರಹದಿಂದ ನಮ್ಮ ಜೀವನ ಭಗವನ್ಮಯವಾಗುತ್ತದೆ. ಹಸನಾಗು ತ್ತದೆ. ಭಕ್ತಿಯ ಜೀವನ ನಡೆಯುವಂತೆ ಭಗವಂತ ಅನುಗ್ರಹಿಸುತ್ತಾನೆ. ಇಂತಹ ಕರುಣಾಮಯ ಭಗವಂತ.

ಹೀಗಿದ್ದರೂ ಇಂದು ನಾವೇನು ಮಾಡುತ್ತಿದ್ದೇವೆ?! ಭಗವಂತನಿಗೆ ಜಾಗವನ್ನು ಕೊಡುತ್ತಿಲ್ಲ. ಕಲಿಗೆ ಜಾಗವನ್ನು ಕೊಡುತ್ತಿದ್ದೇವೆ. ಸೈತಾನನು ನಮ್ಮ ಸಮಗ್ರ ಜೀವನ ವನ್ನೇ ನುಂಗುತ್ತಿದ್ದಾನೆ.

ಕಲಿಗೂ ಸ್ವಲ್ಪ ಜಾಗ ಸಿಕ್ಕಿದರೂ ಸಾಕು; ನಲಮಹಾರಾಜ ಪರಮಧಾರ್ಮಿಕ ನಾಗಿದ್ದ. ತನ್ನ ಜೀವನದಲ್ಲಿ ಕಲಿಗೆ ಪ್ರವೇಶಾವಕಾಶವೇ ಸಿಗದಂತೆ ಪ್ರತಿನಿತ್ಯದ ಧರ್ಮಾಚರಣೆ, ಶಿಸ್ತುಬದ್ಧವಾದ ಜೀವನವನ್ನು ನಡೆಸುತ್ತಿದ್ದ. ಕಲಿ ಬಹಳ ನಿರೀಕ್ಷಿ ಸಿದ. ಏನು ಮಾಡಿದರೂ ನಳನ ಒಳಗೆ ಪ್ರವೇಶಿಸಲು ಅವಕಾಶವೇ ಸಿಗಲಿಲ್ಲ. ಆದರೂ ನಿರೀಕ್ಷೆಯಲ್ಲಿಯೇ ಇದ್ದ. ಹೀಗಿರಲು ಒಂದು ದಿನ ನಳರಾಜ ಕಾಲು ತೊಳೆದುಕೊಳ್ಳುವಾಗ ಸ್ವಲ್ಪ ಅಜಾಗ್ರತೆ ಮಾಡಿದ. ಅವಸರದಲ್ಲಿ ಕಾಲಿನ ಸ್ವಲ್ಪ ಭಾಗಕ್ಕೆ

ನೀರನ್ನು ಹಾಕಲೇ ಇಲ್ಲ. ಕಲಿಗೆ ಇಷ್ಟೇ ಸಾಕಾಯಿತು ಕಲಿ ಜಿರಲೆಯಂತೆ. ಜಿರಲೆಗೆ ಮೀಸೆ ತೂರಿಸಲು ಅವಕಾಶ ಸಿಕ್ಕರೆ ಸಾಕು, ತನ್ನ ದೇಹವನ್ನೇ ತೂರಿಸುತ್ತದೆ. ಅದರಂತೆ ಕಲಿಗೆ ಸ್ವಲ್ಪ ಜಾಗ ಸಿಕ್ಕಿದರೂ ಸಾಕು. ತನ್ನ ಸಾಮ್ರಾಜ್ಯವನ್ನೇ ಸ್ಥಾಪಿಸು ತ್ತಾನೆ.

ಹೀಗೆ ಭಗವಂತನಿಗೂ ಸ್ವಲ್ಪ ಜಾಗ ಸಾಕು.

ಕಲಿಗೂ ಸ್ವಲ್ಪ ಜಾಗ ಸಾಕು.

ನಾವು ನಮ್ಮ ಜೀವನದಲ್ಲಿ ಭಗವಂತನಿಗೆ ಹೆಜ್ಜೆ ಇಡಲು ಜಾಗ ನೀಡಬೇಕೇ? ಕಲಿಯ ಹೆಜ್ಜೆಗೆ ಅವಕಾಶ ಕೊಡಬೇಕೇ? ಸರಿಯಾಗಿ ಪರ್ಯಾಲೋಚನೆ ಮಾಡಬೇಕು.

ಬಲಿಯು ಕಲಿಗೆ ಜಾಗಕೊಡದೆ, ಹರಿಗೆ ಸ್ವಲ್ಪ ಜಾಗ ಕೊಟ್ಟ. ತನ್ನ ಆತ್ಮೋದ್ಧಾರವನ್ನೇ ಮಾಡಿಕೊಂಡ ಎಂಬ ಸಂದೇಶ ಈ ಕಥೆಯಲ್ಲಡಗಿದೆ.

* * * * *

ಮೂರನೇ ಹೆಜ್ಜೆಗೆ ಜಾಗವಿಲ್ಲದಂತಾಗಲು ಬಲಿಯನ್ನು ವಾಮನ ಪ್ರಶ್ನಿಸಿದ. ಮೂರು ಹೆಜ್ಜೆಯನ್ನು ಕೇಳಿದಾಗ, ಇದೇನು ಮಹಾ? ಇದಕ್ಕಿಂತ ಹೆಚ್ಚಿನದು ಕೇಳಿಕೊ ಎಂದೆಯಲ್ಲಾ?! ನನಗೆ ಮೂರನೇ ಹೆಜ್ಜೆಗೆ ಜಾಗವಿಲ್ಲ. ನನ್ನ ಮೂರನೇ ಹೆಜ್ಜೆಗೆ ಸ್ಥಳವನ್ನು ತೋರಿಸು! ಎಂದ. ಬಲಿ ಚಿಂತಾಕ್ರಾಂತನಾದ.

ತನ್ನ ನಾಯಕನಿಗಾದ ಹಾನಿಯನ್ನು ಕಂಡ ಸಮಸ್ತ ದೈತ್ಯರೂ ತ್ರಿವಿಕ್ರಮನ ಮೇಲೆ ಎಗರಿದರು. ವಿಪ್ರಚಿತ್ತಿ ನಮುಚಿ ಮುಂತಾದ ದೈತ್ಯರು ಮೊನಚಾದ ಬಾಣಗಳನ್ನು ತ್ರಿವಿಕ್ರಮನ ಮೇಲೆ ಎಸೆದರು. ವಿಧವಿಧದ ಆಯುಧಗಳನ್ನು ಧರಿಸಿ ಬಂದರು. ಇದನ್ನು ಕಂಡ ಬಲಿರಾಜ ತನ್ನವರನ್ನೆಲ್ಲಾ ತಡೆದ. ಸಾಕು ನಿಲ್ಲಿಸಿರಿ! ನಮ್ಮ ಪ್ರಭುತ್ವದ ಕಾಲ ಮುಗಿಯಿತು! ಇಷ್ಟರ ತನಕ ಸ್ವರ್ಗರಾಜ್ಯವನ್ನೇ ಪಡೆದಿದ್ದರೂ ಅದು ಕೇವಲ ಭಗವಂತನ ಅನುಗ್ರಹಬಲದಿಂದ. ಅವನ ಕರುಣಾದೃಷ್ಟಿಯಿಂದ. ಆದರೆ ಇಂದು ಭಗವಂತನ ದೃಷ್ಟಿ ಬದಲಾಗಿದೆ. ಈಗ ಅವನ ದೃಷ್ಟಿ ದೇವತೆಗಳ ಮೇಲೆ ಹರಿದಿದೆ. ನೀವು ಎಷ್ಟು ಹೋರಾಟ ನಡೆಸಿದರೂ ಸೆಣಸಾಡಿದರೂ ಕೇವಲ ಹಾರಾಟ ಹೊರತು ಜಯಿಸಲಾರಿರಿ. ತ್ರಿವಿಕ್ರಮನ ಪರಾಕ್ರಮಕ್ಕೆ ಸಾಟಿಯುಂಟೇ? ತೊಲಗಿರಿ ಎಂದ. ಹೆದರಿದ ದೈತ್ಯರೂ ರಸಾತಲದ ತನಕ ಓಡಿದರು.

ಈ ಕಡೆ ವಚನಭ್ರಷ್ಟನಾದ ಬಲಿಯನ್ನು ಬಂಧಿಸುವಂತೆ ಭಗವಂತನು ಆದೇಶಿಸಲು, ಗರುಡದೇವ ವಾರುಣಪಾಶದಿಂದ ಬಲಿಯನ್ನು ಬಂಧಿಸಿದ.

## ವಿಶ್ವೇಶನ ಬಳಿ ತ್ಯಾಗದ ಮಾತು ಸಲ್ಲದು

ಇಂತಹ ಪರಿಸ್ಥಿತಿಯಲ್ಲಿ ಬಲಿರಾಜ ಹೇಳುತ್ತಿದ್ದಾನೆ–

**ಯದ್ಯುತ್ತಮ ಶ್ಲೋಕ ಭವಾನ್ ಮಮೇರಿತಂ**
**ವಚೋ ವ್ಯಲೀಕಂ ಸುರವರ್ಯ ಮನ್ಯತೇ ।**

ಕರೋಮ್ಯೃತಂ ತನ್ನ ಭವೇತ್ ಪ್ರಲಂಭನಂ
ಪದಂ ತೃತೀಯಂ ಕುರು ಶೀರ್ಷ್ಣಿ ಮೇ ನಿಜಮ್ ॥ — ೮-೨೨-೨

ಬಲಿರಾಜ ಭಕ್ತಿಯಿಂದ ವಿನಮ್ರನಾಗಿ ಕೈಮುಗಿದು ಪ್ರಾರ್ಥಿಸುತ್ತಿದ್ದಾನೆ.

ಭಗವಂತನೇ! ನಾನು ಹೇಳಿದ ಮಾತನ್ನು ಸತ್ಯಗೊಳಿಸುವುದು ನಿನ್ನ ಕೈಯಲ್ಲಿದೆ. ನಾನು ನಿನ್ನ ಮಹಿಮೆಯನ್ನರಿಯದೆ ತಪ್ಪುತಪ್ಪಾಗಿ ಮಾತನಾಡಿದೆ. ನಿನ್ನದೇ ಆದ ಜಗತ್ತಿನಲ್ಲಿ ನನ್ನ ಅಧಿಕಾರದ ಭ್ರಾಂತಿ ಹೊಂದಿದೆ. ದೊಡ್ಡ ತ್ಯಾಗಿ ಎಂದು ಬೀಗಿದೆ. ನನ್ನದಲ್ಲದ ನಿನ್ನದೇ ಆದ ವಸ್ತುವನ್ನು ನಾನು ದಾನಮಾಡುವುದಾದರೂ ಹೇಗೆ? ಆದ್ದರಿಂದ ಅಪರಾಧಿಯಾಗಿ ಇರುವ ನನ್ನ ಮಾತನ್ನು ಸತ್ಯಗೊಳಿಸುವ ಉಪಾಯ ನಿನ್ನಲ್ಲಿಯೇ ಇದೆ.

ಹಿರಣ್ಯಕಶಿಪು, ನನ್ನಜ್ಜ ದೇವರೆಲ್ಲಿ? ಎಂದು ಪ್ರಶ್ನಿಸಿದ. ಸರ್ವಾಂತರ್ಯಾಮಿ ಎಂದ ಪ್ರಹ್ಲಾದ. ಕಂಬವನ್ನು ತೋರಿಸಿ ಇಲ್ಲಿ ಇದ್ದಾನೆಯೇ? ಎಂದ. ಇದ್ದಾನೆ ಎಂದು ನಿಶ್ಚಯವಾಗಿ ಹೇಳಿದ ಹಿರಣ್ಯಕಶಿಪು ಕಂಬವನ್ನು ಹೊಡೆದಾಗ ಕಂಬದಿಂದ ನರಸಿಂಹ ನಾಗಿ ಮೂಡಿಬಂದೆ. ಭಕ್ತನ ಮಾತನ್ನು ಸತ್ಯಗೊಳಿಸುವ ಜವಾಬ್ದಾರಿಯನ್ನು ಹೊತ್ತುಕೊಂಡಿರುವ ನೀನು, ನಿನ್ನ ಭಕ್ತನಾದ ನನ್ನ ಮಾತನ್ನು ಸತ್ಯಗೊಳಿಸಲಾರೆಯಾ?!

ಎಲ್ಲೆಡೆಯೂ ವ್ಯಾಪಿಸಿದ ನಿನಗೆ ಇನ್ನೊಂದು ಸ್ಥಳ ಖಾಲಿ ಇದೆ. ಅದೇ ನನ್ನ ತಲೆ. ನನ್ನ ಮಾತನ್ನು ಸತ್ಯಗೊಳಿಸುತ್ತಿದ್ದೇನೆ. ನಿನ್ನ ಮೂರನೇ ಪಾದವನ್ನು ನನ್ನ ತಲೆಯ ಮೇಲೆ ಇಡು! ಎಂದು ಭಕ್ತಿಯಿಂದ ಪ್ರಾರ್ಥಿಸಿದ.

ಈ ಸಂದರ್ಭದಲ್ಲಿ ಪ್ರಹ್ಲಾದ ಅಲ್ಲಿಗೆ ಬಂದ. ಸಂಗತಿಯನ್ನೆಲ್ಲಾ ತಿಳಿದ ಪ್ರಹ್ಲಾದ ಹೇಳುತ್ತಿದ್ದಾನೆ –ಭಗವನ್! ಬಹಳ ಒಳ್ಳೆಯ ಕೆಲಸ ಮಾಡಿದಿ. ಬಲಿಗೆ ಈ ರಾಜ್ಯವನ್ನು ಕೊಟ್ಟವನು ನೀನೆ. ಕೊಡುವವನೂ ನೀನೆ. ಪಡೆಯುವವನೂ ನೀನೆ. ನಿನಗೆ ಎಲ್ಲರ ಮೇಲೆಯೂ ಅಧಿಕಾರವಿದೆ. ನಿನ್ನನುಗ್ರಹದಿಂದಲೇ ಬಲಿರಾಜನಿಗೆ ರಾಜ್ಯವೈಭವ ದೊರೆತಿದೆ. ಅದನ್ನು ಇಂದು ನೀನೆ ಪಡೆದುಕೊಳ್ಳುತ್ತಿದ್ದೀ. ಇದರಲ್ಲಿ ನಾವೇನೂ ಹೇಳಬೇಕಾದ ಅಂಶವಿಲ್ಲ. ಹೀಗೇಕೆ ಮಾಡಿದಿ? ಎಂದು ಪ್ರಶ್ನಿಸುವ ಅಧಿಕಾರವೂ ಇಲ್ಲ. ಜಗತ್ತೆಲ್ಲವೂ ನಿನ್ನದೆ. ನಿನ್ನ ಸ್ವತ್ತನ್ನು ಬೇಕಾದಾಗ ಮತ್ತೊಬ್ಬರಿಗೆ ಕೊಡಬಹುದು. ಬೇಡವಾದಾಗ ಪಡೆಯಬಹುದು. ಇಂದು ನೀನು ಮಾಡಿದ ಕಾರ್ಯ ಬಹಳ ಉತ್ತಮವಾಗಿದೆ. ಏಕೆಂದರೆ, ನೀನು ಕೊಟ್ಟ ಸಂಪತ್ತಿನಿಂದ ಬಲಿರಾಜ ಸ್ವಲ್ಪ ಮದಭರಿತನಾಗಿದ್ದ. ಇಂದು ಅಹಂಕಾರಕ್ಕೆ ಅಧಿಕಾರಕ್ಕೆ ಕಾರಣವಾದ ಐಶ್ವರ್ಯವನ್ನು ನೀನೇ ಕಸಿದುಕೊಂಡಿದ್ದೀ. ಇದು ನೀನು ಬಲಿಗೆ ಮಾಡಿದ ಪರಮಾನುಗ್ರಹ. ನನಗೆ ಬಹಳ ಸಂತೋಷವಾಗಿದೆ ಎಂದ.

ತನ್ನ ಮೊಮ್ಮಗನಾದ ಬಲಿರಾಜನ ಸಮಗ್ರ ರಾಜ್ಯವನ್ನೇ ಭಗವಂತ ಅಪಹರಿಸಿದರೆ; ಪ್ರಹ್ಲಾದ ಸಂತೋಷಗೊಂಡ. ನಿನ್ನದನ್ನು ನೀನು ಪಡೆದೆ ಎಂದ. ಮೊಮ್ಮಗನ ಅಹಂಕಾರವನ್ನು ಮುರಿದ ನಿನಗೆ ತುಂಬ ಅಭಿನಂದನೆಗಳು ಎಂದು ಹೇಳಿದ.

ಪ್ರಹ್ಲಾದನ ಪ್ರತಿಕ್ರಿಯೆ ಇಷ್ಟು ಉದಾತ್ತವಾಗಿದ್ದರೆ; ಬಲಿಯ ಹೆಂಡತಿಯಾದ ವಿಂಧ್ಯಾವಳಿಯ ಪ್ರತಿಕ್ರಿಯೆಯೂ ಉತ್ತಮವಾದದ್ದು. ವಿಂಧ್ಯಾವಳಿ ಅತ್ಯಂತ ಹೃದ್ಯವಾದ ಮಾತನ್ನು ಹೇಳುತ್ತಿದ್ದಾಳೆ.

ಕ್ರೀಡಾರ್ಥಮಾತ್ಮನ ಇದಂ ತ್ರಿಜಗತ್ ಕೃತಂ ತೇ
ಸ್ವಾಮ್ಯಂ ತು ತತ್ರ ಕುಧಿಯೋಽಪರ ಈಶ ಕುರ್ಯುಃ ।
ಕರ್ತುಃ ಪ್ರಭೋಸ್ತವ ಕಿಮಸ್ಯತ ಆವಹಂತಿ
ತ್ಯಕ್ತಹ್ರಿಯಸ್ತ್ವದವರೋಪಿತ ಕರ್ತೃವಾದಾಃ ॥ — ೮-೨೨-೨೦

"ಸ್ವಾಮಿ! ಭಗವನ್! ನೀನು ಅತ್ಯಂತ ಸ್ತುತ್ಯವಾದ ಕಾರ್ಯವನ್ನು ಮಾಡಿದ್ದೀಯಾ. ನಮ್ಮ ಯಜಮಾನರು ಮೊದಲನೆಯ ಮಾತಿನಲ್ಲಿಯೇ ತಪ್ಪಿದರು. ವಿಶ್ವೇಶನಾದ ನಿನ್ನ ಬಳಿ ದಾನದ ಮಾತನ್ನು ಆಡಿದ್ದು ಮೊದಲನೆಯ ತಪ್ಪು. ಯಾರಿಗೆ, ತನ್ನ ಸ್ವತ್ತು ಎನ್ನುವುದು ಇದೆಯೋ ಅವನು ದಾನ ಮಾಡಬಹುದು. ಬಲಿರಾಜರ ಬಳಿ ತಮ್ಮ ಸ್ವತ್ತು ಎಂಬುದೇ ಇಲ್ಲ. ಎಲ್ಲವೂ ನಿನ್ನದೇ ಆಗಿದೆ. ನಿನ್ನದ್ದಾದ ಆ ಸ್ವತ್ತನ್ನು ದಾನಮಾಡುವ ಅಧಿಕಾರ ಇವರಿಗೆ ಹೇಗೆ ಬಂತು? ತನ್ನದ್ದಲ್ಲದ ಸ್ವತ್ತಿನಲ್ಲಿ ದಾನದ ಚಿಂತನೆ ಮಾಡಿದ್ದೇ ಮೊದಲನೆಯ ತಪ್ಪು. ಈ ನನ್ನದು ಎಂಬ ಅಹಂಭಾವನೆಯೇ ನಮ್ಮ ಆತ್ಮಹಾನಿಯನ್ನು ಮಾಡುತ್ತದೆ. ಭಗವಂತನ ಸ್ವಾಮಿತ್ವವನ್ನು ತನ್ನದು ಎಂದು ಭಾವಿಸಬೇಕಿದ್ದರೆ ಅವರಿಗೆ ಸ್ವಲ್ಪ ತಲೆ ಕೆಟ್ಟಿರಬೇಕು. ಆದ್ದರಿಂದ ಮತ್ತನಾದ ನನ್ನ ಪತಿಗೆ ಏನು ಶಿಕ್ಷೆಯನ್ನು ನೀಡಿದೆಯೋ ಅದು ಸೂಕ್ತವಾಗಿದೆ ಎಂದಳು.

ಪ್ರಹ್ಲಾದ –"ನಿನ್ನ ಸ್ವತ್ತನ್ನು ನೀನು ಸ್ವೀಕರಿಸಿದಿ. ನೀನು ಮಾಡಿದ್ದು ಸರಿ" ಎಂದರೆ

ವಿಂಧ್ಯಾವಳಿ –"ನಿನ್ನದ್ದಲ್ಲದ ಸ್ವತ್ತಿನಲ್ಲಿ ಅಹಂಭಾವನೆಯೇ ತಪ್ಪು. ಬಲಿಗೆ ತಕ್ಕ ಶಿಕ್ಷೆ ನೀಡಿದಿ. ಬಹಳ ಉತ್ತಮ ಕೆಲಸ ಮಾಡಿದಿ." ಎಂದು ತ್ಯಾಗದ ಮಾತಿನಲ್ಲಿ ಒಂದು ಹೆಜ್ಜೆ ಮುಂದಿದ್ದಾಳೆ. ಈ ಮಹಾತಾಯಿ ವಿಂಧ್ಯಾವಳಿ ಆಡಿದ ಮಾತು, ಪ್ರತಿಯೊಬ್ಬರ ಹೃದಯಕವಾಟವನ್ನು ತಟ್ಟಿ ಎಚ್ಚರಿಸಿ ಹೇಳುವ ಮಾತು.

## ಮೂರನೇ ಹೆಜ್ಜೆ ಇಟ್ಟದ್ದು ಎಲ್ಲಿ!!

ಬಲಿರಾಜನಿಗೆ ತನ್ನ ತಪ್ಪಿನ ಅರಿವಾಗಿ ತನ್ನ ತಲೆಯನ್ನೇ ಭಗವಂತನಿಗೆ ಕೊಟ್ಟ. ಮೂರನೇ ಹೆಜ್ಜೆಯಿಂದ ನನ್ನ ತಲೆಯನ್ನೇ ಮೆಟ್ಟು ಎಂದ.

ಇಲ್ಲಿ ಒಂದು ಎಲ್ಲರಿಗೂ ಸಹಜವಾಗಿ ಪ್ರಶ್ನೆ ಬರಬಹುದು.

ತ್ರಿವಿಕ್ರಮ ಎರಡು ಹೆಜ್ಜೆಗಳಿಂದ ಸಮಸ್ತ ಲೋಕಗಳನ್ನು ಅಳೆದ ಬಳಿಕ ಲೋಕಾಂತರ್ಗತನಾದ ಬಲಿಯೂ ಅದರಲ್ಲಿಯೇ ಸೇರಿಹೋದ. ಎರಡು ಹೆಜ್ಜೆಯಲ್ಲಿಯೇ ದಾನವಾಗಿ ಹೋದ. ಹೀಗಿರುವಾಗ ಮತ್ತೆ 'ತನ್ನ ತಲೆಯಲ್ಲಿ ಹೆಜ್ಜೆ ಇಡು' ಎಂದು ಹೇಗೆ ಹೇಳಿದ? ಇದರಲ್ಲಿ ಏನಾದರೂ ಅರ್ಥವಿದೆಯೇ? ಎಂದರೆ–

ಅರ್ಥವಿದೆ. ಬಲಿ ಎಲ್ಲವನ್ನೂ ಎರಡು ಹೆಜ್ಜೆಯಿಂದ ಕೊಟ್ಟ. ತನ್ನನ್ನೂ ಕೊಟ್ಟಿದ್ದ. ಆದರೆ ತನ್ನಲ್ಲಿರುವ 'ಅಹಂ' ಒಂದನ್ನು ತ್ಯಾಗಮಾಡಿರಲಿಲ್ಲ. ನಾನು– ಸರ್ವಲೋಕದ ಒಡೆಯ. ಎಲ್ಲ ಸಂಪತ್ತು ನನ್ನದು. ಸಾರ್ವಭೌಮನಾದ ನನ್ನ ಬಳಿ ಮೂರು ಹೆಜ್ಜೆಯನ್ನು ಕೇಳುವುದೆಂದರೆ ಏನು? ಎಂಬ ಅಹಂಕಾರ. ಈ ಅಹಂಕಾರದ ತ್ಯಾಗವನ್ನು ಮಾಡಿರಲಿಲ್ಲ.

ಆದ್ದರಿಂದ ತಲೆಯನ್ನು ಕೊಡುತ್ತೇನೆ ಎಂದರೆ, ಎಲ್ಲವನ್ನೂ ಕೊಟ್ಟಿದ್ದರೂ ಇಷ್ಟರ ವರೆಗೆ ಕೊಡದ, ನನ್ನಲ್ಲಿದ್ದ ಅಹಂಕಾರದ ಪ್ರತೀಕವಾದ ಶಿರಸ್ಸು –ಅದನ್ನು ಅರ್ಪಿಸುತ್ತಿದ್ದೇನೆ ಎಂದ. ಎಂತಹ ಹೃದ್ಯವಾದ ಮಾತು!! ತನ್ನನ್ನೇ ಅರ್ಪಿಸಿಕೊಂಡ. ಭಗವಂತನಿಗೆ ಬಲಿದಾನವನ್ನು ಮಾಡಿದ. ಅಹಂಕಾರ ಬಿಟ್ಟು ಆತ್ಮಾರ್ಪಣೆಮಾಡಿ ಮಹಾದಾನಿ ಎನಿಸಿದ ಬಲಿಚಕ್ರವರ್ತಿ.

ಈ ಸಂದರ್ಭದಲ್ಲಿ ಬ್ರಹ್ಮದೇವರು ಕೈಮುಗಿದು ಭಗವಂತನ ಬಳಿ ಕೇಳುತ್ತಿದ್ದಾರೆ. ಹೇ! ಭಗವಂತ! ಏನು ನಿನ್ನ ವ್ಯಾಪಾರ.

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಂ ಅಶ್ನಾಮಿ ಪ್ರಯತಾತ್ಮನಃ ॥**

ಎಂದ ನೀನು ಇಂದು ಬಲಿಯು ಆತ್ಮಾರ್ಪಣೆ ಮಾಡಿದರೂ ಹದಿನಾಲ್ಕುಗಳನ್ನು ಅರ್ಪಿಸಿದರೂ ಇವನ ನಿಗ್ರಹದ ಆಗ್ರಹವನ್ನು ಬಿಡುತ್ತಿಲ್ಲ. ಇದು ನಿನಗೆ ನ್ಯಾಯವೇ? ಯಾರು ನಿನ್ನ ಪಾದಗಳಿಗೆ ಭಕ್ತಿಯಿಂದ ಸ್ವಲ್ಪ ನೀರು ಹಾಕಿ ಗರಿಕೆಯಿಂದ ಪೂಜಿಸುತ್ತಾರೋ ಅವರಿಗೆ ಮೋಕ್ಷವನ್ನೇ ಕೊಡುವಿಯಂತೆ. ಹೀಗಿರಲು ಸರ್ವಸ್ವ ತ್ಯಾಗಮಾಡಿದ ಬಲಿರಾಜ ನಿನಗೆ ಕಡಿಮೆ ಎನಿಸಿದನೇ! ಏನು ನಿನ್ನ ಲೀಲೆ ಎಂದು ಬ್ರಹ್ಮದೇವರೂ ಆಕ್ಷೇಪಿಸುತ್ತಿದ್ದಾರೆ.

## ವಿಶ್ವವಂದ್ಯನ ಅಪಾರ ಕರುಣೆ

ಜೀವೋತ್ತಮರಾದ ಬ್ರಹ್ಮದೇವರ ಶಿಫಾರಸ್ಸು ಬರುವುದನ್ನೇ ಭಗವಂತ ನಿರೀಕ್ಷಿಸುತ್ತಿದ್ದ. ಬಲಿಯ ಭಕ್ತಿಯನ್ನು ಕಂಡು ಬ್ರಹ್ಮದೇವರೂ ಅನುಗ್ರಹಿಸು! ಎಂದು ಹೇಳಿದಾಗ, ಪರಮಾತ್ಮ ಹೇಳುತ್ತಿದ್ದಾನೆ–

ಬ್ರಹ್ಮದೇವನೇ! ಬಲಿಚಕ್ರವರ್ತಿಯ ಅಸಾಧಾರಣವಾದ ತ್ಯಾಗವನ್ನು ತಿಳಿಸಬೇಕಿದೆ. ಬಲಿಯು ಎಷ್ಟು ಕಷ್ಟಗಳು ಬಂದರೂ ತನ್ನ ದಾನದ ಮಾತನ್ನು ಕೈಬಿಡಲಿಲ್ಲ. ಶುಕ್ರಾಚಾರ್ಯರು ತಪ್ಪಿಸಲು ಪ್ರಯತ್ನಪಟ್ಟರು. ಶಾಪಕೊಟ್ಟರೂ ಚಿಂತೆಯಿಲ್ಲ, ವಚನಭ್ರಷ್ಟನಾಗಲಾರೆ ಎಂದ. ಸತ್ಯವಚನವನ್ನು ಬಿಡಲಿಲ್ಲ. ಅವನು ಹೇಗೂ ಸುಳ್ಳು ಹೇಳಿ ತಪ್ಪಿಸಿಕೊಳ್ಳಬಹುದಿತ್ತು. 'ಸಣ್ಣಪಾದದ ಮೂರು ಹೆಜ್ಜೆ ಕೊಡುತ್ತೇನೆ ಎಂದದ್ದು' ಎನ್ನಬಹುದಿತ್ತು. ಹಾಗೆ ಹೇಳಲೆ ಇಲ್ಲ. ಇವನ ತ್ಯಾಗಕ್ಕೆ, ಸ್ಥಾನಮಾನ, ಅಧಿಕಾರಗಳಿಗೂ ಏನೂ ಮಾಡಲಾಗಲಿಲ್ಲ. ನನ್ನ ಅನುಗ್ರಹದಿಂದ ಅಹಂಕಾರವನ್ನು

ತೊರೆದಿದ್ದಾನೆ. ಕೇವಲ ತ್ಯಾಗಿಯಾಗದೆ ಅಧ್ಯಾತ್ಮವನ್ನರಿತ ಯೋಗಿಯಾಗಿದ್ದಾನ ತತ್ತ್ವಜ್ಞಾನಿಯಾಗಿದ್ದಾನೆ. ಇವನಿಗೆ ಅಸಾಮಾನ್ಯ ಅನುಗ್ರಹವನ್ನು ಮಾಡುತ್ತೇನೆ. ಭಾವೀ ಇಂದ್ರಪದವಿಯನ್ನೇ ನೀಡಿದ್ದೇನೆ.

ಈಗ ಒಬ್ಬ ಇಂದ್ರನಿದ್ದಾನೆ. ಅವನ ಅಧಿಕಾರದ ಅವಧಿ ಮುಗಿದ ಬಳಿಕ ಇವನಿಗೆ ಅಧಿಕಾರ ಕೊಡುತ್ತೇನೆ ಎಂದ.

ಇಂದು, ಅಧಿಕಾರದ ಅವಧಿ ಇಷ್ಟೆಂದು ನಿಗದಿಪಡಿಸಿದ್ದರೂ ಪ್ರಧಾನಿಗಳು ಐದು ವರ್ಷದಲ್ಲಿ ಎಷ್ಟೋ ಮಂದಿ ಬಂದು ಹೋಗುತ್ತಾರೆ. ಇಲ್ಲಿಯಂತಹ ಅವ್ಯವಸ್ಥೆ ಅಲ್ಲಿ ಇಲ್ಲ.

ಇಷ್ಟೇ ಅಲ್ಲದೆ ಭಗವಂತ ಹೇಳುತ್ತಿದ್ದಾನೆ. ಬಲಿರಾಜ! ಭಾವೀ ಇಂದ್ರಪದವಿಗೆ ಮುನ್ನ, ನೀನು ಸುತಲ ಲೋಕದಲ್ಲಿ ವಾಸಮಾಡು ರಾಜನಾಗಿ ಅಲ್ಲಿ ಮೆರೆ. ನಿನಗೆ ದ್ವಾರಪಾಲಕನಾಗಿ ನಾನು ಬರುತ್ತೇನೆ ಎಂದ. ಎಂತಹ ಹರಿಕರುಣೆ!!

ಭಗವಂತನಿಗಾಗಿ ಭಕ್ತರು ಆತ್ಮಾರ್ಪಣೆ ಮಾಡಿದರೆ;
ಭಗವಂತ ಭಕ್ತರಿಗೆ ತನ್ನನ್ನೇ ಕೊಡುತ್ತಾನೆ. ಇದು ಭಗವಂತನ ವ್ರತ.

ಭಕ್ತರ ತ್ಯಾಗಕ್ಕಿಂತಲೂ ಭಗವಂತನ ಅನುಗ್ರಹ ದೊಡ್ಡದು. ಬಲಿಯ ತ್ಯಾಗಕ್ಕೆ ಇಂದ್ರಪದವಿ ಮಾತ್ರವಲ್ಲ; ಸುತಲಲೋಕಾಧಿಪತ್ಯದಲ್ಲಿ ತಾನೇ ದ್ವಾರಪಾಲಕನಾಗಿ ಬರುತ್ತೇನೆ ಎಂದ. ಸರ್ವದಾ ರಕ್ಷಣೆ ಮಾಡುತ್ತೇನೆ ಎಂದ. ಇದನ್ನೇ ದಾಸರಾಯರು ನುಡಿದರು–

'ಹೂವ ತರುವರ ಮನೆಗೆ ಹುಲ್ಲ ತರುವ' ಎಂದು.

ಭಗವಂತನ ಪರಮಾನುಗ್ರಹವನ್ನು ಕಂಡ ಪ್ರಹ್ಲಾದನಿಗೆ ರೋಮಗಳೆಲ್ಲವೂ ನಿಮಿರಿ ನಿಂತಿವೆ. ಆನಂದದ ಸಾಗರದಲ್ಲಿ ತೇಲಿಹೋಗಿದ್ದಾನೆ. ಕಂಡವನಿಗೇ ಹೀಗಾಗಲೂ ಪಡೆದುಕೊಂಡವನ ಧನ್ಯತೆಗೆ ಎಣೆ ಉಂಟೇ!! ಪರಮಾತ್ಮನ ತ್ಯಾಗದ ಮುಂದೆ ನಮ್ಮದು ಅತ್ಯಲ್ಪ. ಪ್ರಹ್ಲಾದ ಭಕ್ತಿಯಿಂದ ಕೈಮುಗಿದು ಕೇಳುತ್ತಿದ್ದಾನೆ –ಶ್ರೀಹರಿಯೇ! ನಿನ್ನ ಕರುಣೆಯನ್ನು ಎಂತು ಬಣ್ಣಿಸಲಿ! ಇಂತಹ ಅನುಗ್ರಹವನ್ನು ಯಾರು ಪಡೆದಿದ್ದಾರೆ?!

**ನೇಮಂ ವಿರಿಂಚೋ ಲಭತೇ ಪ್ರಸಾದಂ**
**ನ ಶ್ರೀರ್ನ ಶರ್ವಃ ಕಿಮುತಾಪರೇ ತೇ ।**
**ಯನ್ನೋಽಸುರಾಣಾಮಪಿ ದುರ್ಗಪಾಲೋ**
**ವಿಶ್ವಾಭಿವಂದ್ಯೈರಪಿ ವಂದಿತಾಂಘ್ರಿಃ ॥** — ೮–೨೩–೬

ನನ್ನ ಮೊಮ್ಮಗನಾದ ಬಲಿಗೆ ಮಾಡಿದ ಅನುಗ್ರಹ ಮನುಷ್ಯರಿರಲಿ; ದೇವತೆ ಗಳೂ ಪಡೆದಿಲ್ಲ. ಲಕ್ಷ್ಮೀ, ಬ್ರಹ್ಮ, ರುದ್ರ ಮುಂತಾದವರೂ ಇಂತಹ ಅನುಗ್ರಹವನ್ನು ನನ್ನಿಂದ ಹೊಂದಲಿಲ್ಲ (ಅಂದರೆ ತಾತ್ಕಾಲಿಕವಾದ ಅನುಗ್ರಹವನ್ನು ಹೊಂದಿಲ್ಲ ಎಂದರ್ಥ). ದೇವತೆಗಳಿರಲಿ, ಅಸುರನಾದ ಬಲಿರಾಜನಿಗೆ ದ್ವಾರಪಾಲಕನಾಗುತ್ತೇನೆ

ಎಂದೆಯಲ್ಲ. ವಿಶ್ವವಂದ್ಯನಾದ ನಿನ್ನ ಅಪರಂಪಾರವಾದ ಕರುಣೆಯ ಕಡಲಿಗೆ ಕೊನೆ ಉಂಟೆ?! ಬ್ರಹ್ಮಾದಿದೇವತೆಗಳು ನಿನ್ನ ಸೇವಕರಾಗಿರುವಾಗ, ಅವರಿಂದ ವಂದ್ಯನಾದ ನೀನು ನಮ್ಮ ಬಲಿರಾಜನಿಗೆ ದ್ವಾರಪಾಲಕನಾಗುವುದು ಎಂದರೆ ನನ್ನಿಂದ ನಂಬಲಿಕ್ಕೆ ಸಾಧ್ಯವಾಗುತ್ತಿಲ್ಲ. ಅತ್ಯಾಶ್ಚರ್ಯವಾಗುತ್ತಿದೆ ಎಂದು ರೋಮಾಂಚಿತನಾಗಿ ಪ್ರಹ್ಲಾದ ಸ್ತೋತ್ರಮಾಡುತ್ತಿದ್ದಾನೆ.

ಹೀಗೆ ಭಗವಂತನು ಬಲಿಯ ತ್ಯಾಗಕ್ಕೆ, ಭಕ್ತಿಗೆ, ಸತ್ಯಕ್ಕೆ ಮೆಚ್ಚಿ ಪರಮಾನುಗ್ರಹ ವನ್ನೇ ಮಾಡಿದ್ದಾನೆ. ತಾನು ಸುತಲ ಲೋಕದಲ್ಲಿ ಅವನಿಗೆ ದ್ವಾರಪಾಲಕನಾಗಿ ಹೋಗಿದ್ದಾನೆ.

ಬಲಿರಾಜನ ಈ ಕಥೆ ಅತ್ಯಂತ ಉತ್ತಮವಾದದ್ದು. ಭಗವಂತನ ಕರುಣೆ, ಬಲಿರಾಜನ ತ್ಯಾಗ, ಪ್ರಹ್ಲಾದ–ವಿಂದ್ಯಾವಳಿಯರ ಸಂದರ್ಭೋಚಿತವಾದ ಸಂಯಮ –ಇದೆಲ್ಲವೂ ಅಸದೃಶವಾಗಿದೆ. ಎಲ್ಲರಿಗೂ ಆದರ್ಶವಾಗಿದೆ. ಭಕ್ತ ಮತ್ತು ಭಗವಂತನ ಸಂಬಂಧ ಎಷ್ಟು ರೋಮಾಂಚಕಾರಿಯಾಗಿದೆ ಎಂಬುದಕ್ಕೆ ಈ ಘಟನೆ ನಮಗೆ ಉತ್ತಮ ಸ್ಫೂರ್ತಿದಾಯಕವಾಗಿದೆ.

ನಮ್ಮ ಜೀವನದಲ್ಲಿ ಭಗವಂತನು ಒಂದು ಹೆಜ್ಜೆಯನ್ನಾದರೂ ಇಡುವಂತೆ ಅವಕಾಶವನ್ನು ಕಲ್ಪಿಸಿಕೊಡಬೇಕು. ನಾವು ಇಷ್ಟು ಮಾಡಿದರೆ ಸಾಕು ಭಗವಂತನು ನಮ್ಮ ಮುಂದಿನ ಎಲ್ಲ ಆಗುಹೋಗುಗಳಿಗೂ ಜವಾಬ್ದಾರನಾಗುತ್ತಾನೆ. ಭಕ್ತರಿಗೆ ಅನುಗ್ರಹಮಾಡಬೇಕೆಂದು ಬಯಸಿದಾಗ ಮೊದಲು ಬಲಿಗೆ ಮಾಡಿದಂತಹ ಪರೀಕ್ಷೆಯನ್ನು ಮಾಡುತ್ತಾನೆ. ಈ ಪರೀಕ್ಷೆಯ ಪ್ರಶ್ನೆ ಮೊದಲೇ ಎಲ್ಲರಿಗೂ ತಿಳಿದಿದೆ. ಆದರೆ ಅದಕ್ಕೆ ಉತ್ತರ ಎಲ್ಲರಿಂದಲೂ ನೀಡಲು ಸಾಧ್ಯವಾಗುವುದಿಲ್ಲ. ಇದರಲ್ಲಿ ತೇರ್ಗಡೆಯಾದವನಿಗೆ ಅಳುವಿಂದ ಆನಂದವನ್ನು ನೀಡುತ್ತಾನೆ. ಇಂತಹ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಉತ್ತಮ ಫಲವನ್ನು ಹೊಂದಿದವ ಬಲಿಚಕ್ರವರ್ತಿ.

## ಸತ್ಯವ್ರತನಿಗೆ ಒಲಿದ ಶ್ರೀಹರಿ

ಈ ಸ್ಕಂಧದ ಕೊನೆಯಲ್ಲಿ ಮತ್ತೊಬ್ಬ ಭಗವದ್ಭಕ್ತನಾದ ಸತ್ಯವ್ರತರಾಜನ ಕಥೆ ಬರುತ್ತದೆ. ವೈವಸ್ವತಮನುವೆ ಹಿಂದೆ ಸತ್ಯವ್ರತರಾಜನಾಗಿದ್ದ.

ಅವನು ದ್ರವಿಡದೇಶದ ಅಧಿಪತಿ. ಒಂದು ದಿನ ಕೃತಮಾಲಾನದಿಯಲ್ಲಿ ಎಂದಿನಂತೆ ಅರ್ಘ್ಯವನ್ನು ನೀಡುತ್ತಿದ್ದಾನೆ. ಅರ್ಘ್ಯಕ್ಕಾಗಿ ಅಂಜಲಿಯಿಂದ ಜಲವನ್ನು ಸ್ವೀಕರಿಸಿದ. ಆ ಬೊಗಸೆಯಲ್ಲಿ ಮೀನೊಂದನ್ನು ಕಂಡ. ಕಂಡದ್ದು ಮಾತ್ರವಲ್ಲ ಶಬ್ದವನ್ನೂ ಕೇಳಿದ.

ನೀರಿನಲ್ಲಿ ಬಿಟ್ಟ ಮೀನು ಹೇಳಿತು –"ಎಲೈ ರಾಜನೇ! ನೀನು ಕರುಣಾಮಯಿ ಅಲ್ಲವೇ! ಹೀಗಿದ್ದರೂ ನಿನ್ನ ಬಳಿ ಬಂದ ನನ್ನನ್ನು ಏತಕ್ಕೆ ಚೆಲ್ಲಿದೆ? ಈ ನದಿಯಲ್ಲಿ ನನಗಿಂತ ದೊಡ್ಡದಾದ ಅನೇಕ ಮೀನುಗಳಿವೆ. ಅವರಿಗೆ ನನ್ನ ಮೇಲೆ ಕರುಣೆಯಿಲ್ಲ.

ಅವರು ನನ್ನನ್ನು ನುಂಗಿಬಿಡುತ್ತಾರೆ. ಇಂತಹ ಭಯಾನಕವಾದ ನದಿಯಲ್ಲಿ ಬಿಟ್ಟರೆ ನಾನು ಬದುಕುವುದಾದರೂ ಹೇಗೆ? ಭಯಗ್ರಸ್ತರ ಸಂರಕ್ಷಣೆಗೇ ಹುಟ್ಟಿದ ನೀನು ನನ್ನನ್ನಾದರೂ ಹೇಗೆ ಚೆಲ್ಲಿದೆ? "ಕಥಂ ವಿಸೃಜಸೇ ರಾಜನ್ ಭೀತಮಸ್ಮಿನ್ ಸರಿಜ್ಜಲೇ' ಎಂದು ಕೇಳಿತು. ರಕ್ಷಿಸು ಎಂದು ಬೇಡಿತು.

ರಾಜನಿಗೆ ಆಶ್ಚರ್ಯವಾಯಿತು. ಅನುಕಂಪೆ ಮೊಳೆಯಿತು. ಕೈಯಿಂದ ಮೀನನ್ನು ಮೇಲ್ತೆಗೆದ. ಕಲಶದಲ್ಲಿ ತುಂಬಿದ. ಆಶ್ರಮಕ್ಕೆ ಬಂದ. ಅಷ್ಟರಲ್ಲಿ ಮೀನು ಬೆಳೆದಿತ್ತು. ತಂಬಿಗೆಯನ್ನೂ ತುಂಬಿತ್ತು. ರಾಜ ಆಶ್ಚರ್ಯಗೊಂಡ. ಪುನಃ ಆ ಮೀನು ಹೇಳಿತು. ನನಗೆ ಈ ಸ್ಥಳ ಸಾಲದು ನನ್ನನ್ನು ಬೇರೆ ಕಡೆ ಇಡು ಎಂದಿತು. ಅದರಂತೆ ದೊಡ್ಡ ಕೊಪ್ಪರಿಗೆಯಲ್ಲಿ ಇಟ್ಟ. ಕೊಪ್ಪರಿಗೆ ತುಂಬಿತು. ಕೆರೆಗೆ ಬಿಟ್ಟ. ಕೆರೆಯನ್ನೂ ತುಂಬಿತು. ನಿಮಿಷಾರ್ಧದಲ್ಲಿ ಎಲ್ಲೆಡೆಯೂ ಬೆಳೆಯಿತು. ಬೇರೆ ಜಾಗ ಬೇಕೆಂದು ಬಯಸಿತು. ರಾಜನು ತನ್ನ ಪ್ರಯತ್ನ ಮುಂದುವರೆಸಿದ. ದೊಡ್ಡ ದೊಡ್ಡ ಜಲಾಶಯಗಳಲ್ಲಿ ಹಾಕಿದ. ಎಲ್ಲೆಡೆಯೂ ಆಕ್ರಮಿಸಿತು. ನದಿಗೆ ಬಿಟ್ಟ. ನದಿಯೂ ತುಂಬಿತು. ಕೊನೆಗೆ ದಾರಿಕಾಣದೆ ಸಮುದ್ರದಲ್ಲಿಯೇ ಬಿಟ್ಟ. ಆವಾಗ ಅದು ಹೇಳಿತು. ನನ್ನನ್ನು ಸಮುದ್ರ ದಲ್ಲಿ ಹಾಕಿದೆಯಲ್ಲವೇ?! ಇಲ್ಲಿ ನನಗಿಂತ ದೊಡ್ಡ ಜಲಚರಗಳು ನುಂಗುವುದಿಲ್ಲವೇ! ಎಂದಿತು.

ರಾಜ ಆಶ್ಚರ್ಯಗೊಂಡ. ಕುತೂಹಲ ತಾಳಲಾರದೆ ಮೀನಿನ ಬಳಿ ಕೇಳಿದ. ನೀನು ಯಾರು? ನಿನ್ನ ಉದ್ದೇಶವೇನು? ಮತ್ಸ್ಯರೂಪದಿಂದ ಏಕೆ ಮೋಹಿಸುತ್ತಿದ್ದೀ!? ನಾನು ಬಿಟ್ಟ ಸ್ಥಳಗಳಲ್ಲಿ ಕ್ಷಣಕಾಲವೂ ಬಿಡದೆ ತುಂಬಿಕೊಳ್ಳುತ್ತೀಯಲ್ಲಾ!! ನಿನ್ನ ಈ ಅದ್ಭುತವಾದ ವ್ಯಾಪಕ ಶಕ್ತಿಯನ್ನು ನೋಡಿದರೆ ಸಾಕ್ಷಾತ್ ಭಗವಂತನೇ ಆಗಿರಬೇಕೆನಿಸುತ್ತಿದೆ ಎಂದು ಸತ್ಯವ್ರತರಾಜನು ಭಗವಂತನೆಂದೇ ಭಾವಿಸಿ ಅವತಾರದ ಉದ್ದೇಶವೇನೆಂದು ಪ್ರಾರ್ಥಿಸಲು; ಮತ್ಸ್ಯರೂಪಿ ಭಗವಂತ ಹೇಳಿದ–

ಎಲೈ ಸತ್ಯವ್ರತರಾಜನೇ! "ಈ ದಿನದಿಂದ ಆರಂಭಿಸಿ ಏಳನೇ ದಿನದಲ್ಲಿ ಮಹಾ ಪ್ರಳಯ ಉಂಟಾಗುತ್ತದೆ. ಲೋಕಗಳೂ ನೀರುಪಾಲಾಗುತ್ತವೆ. ಆ ಸಂದರ್ಭದಲ್ಲಿ ನಿನ್ನ ಬಳಿ ಒಂದು ನೌಕೆ ಬರುತ್ತದೆ. ಅದರಲ್ಲಿ ಮುಂದಿನ ಸೃಷ್ಟಿಗೆ ಬೇಕಾಗುವ ಎಲ್ಲ ವಿಧವಾದ ಬೀಜಗಳನ್ನು ಔಷಧಿಗಳನ್ನು ಸಂಗ್ರಹಿಸು. ಸಕಲ ಪ್ರಾಣಿಗಳಿಂದ, ಸಪ್ತರ್ಷಿಗಳಿಂದ ಕೂಡಿದ ನಿನ್ನ ದೋಣಿಯನ್ನು ನಾನು ರಕ್ಷಿಸುತ್ತೇನೆ" ಎಂದು ತಿಳಿಸಿದ. ಕಣ್ಮರೆಯಾದ.

## ವಾಮನ, ಮತ್ಸ್ಯರೂಪಗಳ ಸಾಮ್ಯ ಮತ್ತು ಸಂದೇಶ

ವಾಮನನ ಕಥೆಗೂ ಈ ಕಥೆಗೂ ಸಾಮ್ಯವಿದೆ. ಭಗವಂತ ವಾಮನನಾಗಿ ತ್ರಿವಿಕ್ರಮನಾಗಿ ಬೆಳೆದ. ಇಲ್ಲಿ ಸಣ್ಣ ಮೀನಾಗಿ ಸಮುದ್ರವನ್ನೂ ವ್ಯಾಪಿಸುವ ಆಕಾರ ವನ್ನು ತಳೆದ. ಇಂತಹ ಭಗವಂತನ ರೂಪಗಳು ಭಕ್ತರಿಗೆ ಅವನ ಅಚಿಂತ್ಯಾದ್ಭುತ ಮಹಿಮೆಗಳನ್ನು ತಿಳಿಸುತ್ತಿವೆ. ಸಣ್ಣ ರೂಪದಲ್ಲಿದ್ದು ಒಮ್ಮೆಲೆ ಭಾರೀ ಗಾತ್ರದಲ್ಲಿ

ಬೆಳೆಯುವುದು; ಕೂಡಲೇ ಕಣ್ಮರೆಯಾಗುವುದು –ಇದರಿಂದ ಅವನ ಮಹಿಮೆಯನ್ನು ತಿಳಿಯಬಹುದು.

ಮತ್ಸ್ಯರೂಪಿ ಭಗವಂತನಿಗೆ ಸಣ್ಣ ಪಾತ್ರೆ ಸಾಲಲಿಲ್ಲ. ನಮಗೂ ಪರಮಾತ್ಮನ ವಿಷಯಕವಾದ ಭಕ್ತಿಜ್ಞಾನಗಳು ಸ್ವಲ್ಪ ಪ್ರಮಾಣದಲ್ಲಿದ್ದರೆ ಸಾಲದು. ಮತ್ಸ್ಯನ ವಿಭೂತಿರೂಪದಂತೆ –ಭಕ್ತಿ ಜ್ಞಾನಗಳ ಸಾಗರ ರಚನೆಯಾಗಬೇಕು.

ಸತ್ಯವ್ರತರಾಜ ಭಗವಂತನನ್ನು ಎಲ್ಲೆಡೆಯೂ ಇಟ್ಟು ಬೆಳೆಸಿದ. ಅದಕ್ಕೆ ಪ್ರತಿಯಾಗಿ ಭಗವಂತ ಸಮುದ್ರದಲ್ಲಿ ದೋಣಿಯಲ್ಲಿಟ್ಟು ಅವನನ್ನು ಮೆರೆಸಿದ.

ಅವನಂತೆ ನಾವೂ ನಮ್ಮ ಜೀವನದಲ್ಲಿ ಭಗವಂತನನ್ನು ಬೆಳೆಸಬೇಕು. ಅವನನ್ನು ಬೆಳೆಸುವುದು ಎಂದರೆ ಅವನ ವಿಷಯಕವಾದ ಜ್ಞಾನ, ಭಕ್ತಿಗಳನ್ನು ಹೆಚ್ಚುಹೆಚ್ಚು ಮೈಗೂಡಿಸಿಕೊಳ್ಳಬೇಕು. ಹೀಗೆ ಮಾಡಿದಾಗ ಸಂಸಾರವೆಂಬ ಪ್ರಲಯಸದೃಶವಾದ ದುಃಖಮಯವಾದ ಸಾಗರದಲ್ಲಿ ಬವಣೆಪಡುತ್ತಿರುವ ನಮ್ಮೆಲ್ಲರ ಸಂರಕ್ಷಣೆಯನ್ನು ಭಗವಂತ ಮಾಡುತ್ತಾನೆ. ಸಂಸಾರವೆಂಬ ಸಮುದ್ರದಲ್ಲಿ ಜೀವನವೆಂಬ ನಾವೆಯಲ್ಲಿ ಕುಳಿತ ಮನುಕುಲದ ಮಾನವರನ್ನು ಭಗವಂತನು ರಕ್ಷಣೆಮಾಡಿ ನಮ್ಮನ್ನು ಅನುಗ್ರಹಿಸುತ್ತಾನೆ ಎಂಬ ಸಂದೇಶವನ್ನು ತಿಳಿಯಬಹುದು.

ಭಗವಂತನೇ ಹೀಗೆ ತಿಳಿಸಿದ್ದಾನೆ –"ನನ್ನನ್ನು ಸರಿಯಾಗಿ ಹೃದಯದಲ್ಲಿ ಬೆಳೆಸಿರಿ. ನನಗೆ ಬೇಕಾದ ಭಕ್ತಿ–ಜ್ಞಾನಜಲದ ಸರೋವರ–ಸಮುದ್ರಗಳನ್ನು ನಿರ್ಮಿಸಿರಿ. ನಾನು ನಿಮ್ಮನ್ನು ರಕ್ಷಿಸುತ್ತೇನೆ" ಎಂದು ಈ ಕಥೆಯ ಮೂಲಕ ನಮಗೆ ತೋರಿಸಿ ಕೊಟ್ಟಿದ್ದಾನೆ.

## ಜೀವಾತ್ಮನನ್ನು ಪರಮಾತ್ಮನೆಂಬ ಬೆಂಕಿಯಲ್ಲಿ ಹಾಕಿರಿ!!

ಸತ್ಯವ್ರತಮಹಾರಾಜ ಮತ್ಸ್ಯರೂಪಿ ಹರಿಯನ್ನು ಸ್ತೋತ್ರಮಾಡುತ್ತಿದ್ದಾನೆ.
– (೮–೨೪–೪೮)

ನಮ್ಮಲ್ಲಿ ಏನೆಲ್ಲಾ ಕಾಮಕ್ರೋಧಾದಿಗಳೆಂಬ ಕೆಸರಿದೆ. ಈ ಅಂತಃಕರಣದ ಕೆಸರನ್ನು ತೊಳೆಯಬೇಕಿದ್ದರೆ, ಭಗವಂತನ ಸಂಪರ್ಕವಾಗಬೇಕು. ಇವನ ಧ್ಯಾನ, ಸಂಪರ್ಕಗಳಿಂದ ಮಾತ್ರ ಆತ್ಮನಿಗಂಟಿದ ಕಶ್ಮಲವನ್ನು ತೊಳೆಯಲು ಸಾಧ್ಯ. ಉಪನಿಷತ್ತಿನಲ್ಲಿ ಬರುವ ದೃಷ್ಟಾಂತವನ್ನು ಇಲ್ಲಿ ಹೇಳಿದ್ದಾರೆ.

ಬಂಗಾರವಿದೆ. ಅದರಲ್ಲಿ ಅನೇಕ ಲೋಹಗಳು ಸೇರಿಕೊಂಡಿವೆ. ಕಬ್ಬಿಣ, ಹಿತ್ತಾಳೆ, ತಾಮ್ರ ಮುಂತಾದ ಲೋಹಗಳು ಸೇರಿದಾಗ ಅದನ್ನು ಬಂಗಾರ ಎನ್ನಲಾಗದು. ಅದು ಬೆಟ್ಟುಬಂಗಾರ. ಯಾವುದಕ್ಕೂ ಉಪಯೋಗವಿಲ್ಲ. ಪ್ರಕಾಶಹೀನವಾಗಿರುತ್ತದೆ. ಬಂಗಾರವು ಶುಭ್ರವಾಗಿದ್ದರೂ ಇತರ ಲೋಹ ಸಂಪರ್ಕದಿಂದ ಪ್ರಭೆಯೆಲ್ಲವೂ ಕುಗ್ಗಿ ಬೆಲೆ ಕಡಿಮೆಯಾಗುತ್ತದೆ. ಅದರ ಪ್ರಕಾಶವನ್ನು ಕಾಣಬೇಕಿದ್ದರೆ ಆ ಬಂಗಾರವನ್ನು

ಬೆಂಕಿಗೆ ಹಾಕಬೇಕು. ಬೆಂಕಿಗೆ ಹಾಕಿದಾಗ ಬಂಗಾರ ತನ್ನಲ್ಲಿರುವ ಶುಭ್ರ ಪ್ರಕಾಶವನ್ನು ಪ್ರಕಟಗೊಳಿಸುತ್ತದೆ. ಕಬ್ಬಿಣ ಸಂಪರ್ಕದಿಂದ ಕಳೆಗುಂದಿದ ಬಂಗಾರಕ್ಕೆ ಪ್ರಕಾಶ ಬರ ಬೇಕೆಂದಿದ್ದರೆ ಬೆಂಕಿಯ ಸಂಪರ್ಕ ಅನಿವಾರ್ಯ –ಅಗತ್ಯ.

ಸಜ್ಜೀವರೆಲ್ಲರೂ ಒಳ್ಳೆಯ ಚಿನ್ನ. ಆದರೆ ಬೆಟ್ಟುಬಂಗಾರದಂತೆ ಸಾತ್ವಿಕತೆಯ ಅಭಿವ್ಯಕ್ತಿಯೇ ಇಲ್ಲ. ಪ್ರಕೃತಿಯ ಸಂಪರ್ಕ ಪೂರ್ವಸಂಚಿತ ಪ್ರಾರಬ್ಧಕರ್ಮಗಳ ಸಂಬಂಧದಿಂದ ಲೋಹಸಂಪರ್ಕದಿಂದ ಕಳೆಗುಂದಿದ ಬಂಗಾರದಂತೆ. ನಮ್ಮ ಸಾತ್ವಿಕತೆಯೂ ಮುಚ್ಚಿಹೋಗಿದೆ. ಅದಕ್ಕಾಗಿ ಸಜ್ಜೀವರೆಂಬ ಬಂಗಾರವನ್ನು ಬೆಂಕಿಗೆ ಹಾಕಬೇಕು. ಇಲ್ಲಿ ಯಾವುದು ಬೆಂಕಿ?! ಜ್ಯೋತೀರೂಪನಾದ ಭಗವಂತನೇ ಬೆಂಕಿ. ಬೆಂಕಿಯಲ್ಲಿ ಬಂಗಾರವನ್ನು ಹಾಕುವಂತೆ ಭಗವಂತನೆಂಬ ಜ್ಯೋತಿಯಲ್ಲಿ ಸಜ್ಜೀವರೆಂಬ ಬಂಗಾರವನ್ನು ಹಾಕಬೇಕು. ಇದು ಜೀವನ ಹೋಮ. ಇದನ್ನೇ ನಾವು ಪ್ರತಿನಿತ್ಯ ಹೇಳುತ್ತೇವೆ.

'ಸೂರ್ಯೇ ಜ್ಯೋತಿಷಿ ಜುಹೋಮಿ ಸ್ವಾಹಾ' ಎಂದು ಪ್ರತಿನಿತ್ಯವೂ ಬೆಳಗ್ಗಿನಿಂದ ಸಂಜೆಯ ತನಕ. ಸಂಜೆಯಿಂದ ಬೆಳಗಾಗುವ ತನಕ ಏನೆಲ್ಲ ಪಾಪಕರ್ಮಗಳನ್ನು ಮಾಡುತ್ತೇವೆ. ಇಂತಹ ಪಾಪಕರ್ಮಗಳೆಂಬ ಕಷ್ಮಲದಿಂದ ತುಂಬಿದ ಜೀವನನ್ನು ಪರಮಾತ್ಮನೆಂಬ ಜ್ಯೋತಿಯಲ್ಲಿ ಹೋಮಿಸಬೇಕು. ನಮಗೆ ಧ್ಯಾನ, ನಮನ, ಭಕ್ತಿ ಮುಂತಾದವುಗಳ ಮೂಲಕ ಭಗವಂತನ ಸಂಪರ್ಕವಾದಾಗ, ಬೆಂಕಿಯ ಸಂಪರ್ಕದಿಂದ ಪರಿಶುದ್ಧಿಯನ್ನು ಹೊಂದಿದ ಚಿನ್ನದಂತೆ ನಾವೂ ಬೆಳಗುತ್ತೇವೆ. ಪಾಪಕರ್ಮಗಳೆಂಬ ಕಷ್ಮಲವನ್ನು ತೊಳೆದುಕೊಳ್ಳುತ್ತೇವೆ. ಸಂಧ್ಯಾಕಾಲವೆಂದರೆ ಕೇವಲ ಹಗಲು–ರಾತ್ರಿಗಳ, ರಾತ್ರಿ–ಹಗಲುಗಳ ಸಂಧಿಕಾಲವೆಂದು ಅರ್ಥವಲ್ಲ. ಭಗವಂತನನ್ನು ಜೀವನು ಸಂಧಿಸುವ ಕಾಲ. ತನ್ನ ಅಪರಾಧಗಳನ್ನು ತೊಳೆದುಕೊಳ್ಳುವ ಪವಿತ್ರಕಾಲ. ಇದು ಒಂದು ದಿನಕ್ಕೆ ಸೀಮಿತವಲ್ಲ. ಪ್ರತಿನಿತ್ಯ ಸಂಧಿಕಾಲಗಳಲ್ಲಿ ಭಗವಂತನ ಧ್ಯಾನವನ್ನು ವಿಶೇಷವಾಗಿ ಮಾಡಬೇಕು. ಹಗಲುರಾತ್ರಿಗಳೆಂಬ ಸರಪಳಿಯಂತೆ ಜೀವನನ್ನು ಪುಣ್ಯಪಾಪಗಳೆಂಬ ಸರಪಳಿ ಬಂಧಿಸಿದೆ. ಸಕಾಲ ಸಂಧ್ಯಾವಂದನೆಯಿಂದ ಈ ಬಂಧನ ಕಳಚಿಕೊಳ್ಳುತ್ತದೆ. ಸಂಧ್ಯಾವಂದನೆ ಯಾವುದೋ ಒಂದು ದಿನಕ್ಕೆ ಒಂದು ಸಮಯಕ್ಕೆ ಸೀಮಿತವಾಗಬಾರದು.

ನಾವು ಪಾತ್ರೆಯನ್ನು ತೊಳೆಯುತ್ತೇವೆ. ಬಟ್ಟೆಯನ್ನು ಶುದ್ಧೀಕರಿಸುತ್ತೇವೆ. ಒಂದು ದಿನ ವಿಳಂಬ ಮಾಡಿದರೆ ದುರ್ವಾಸನೆ ಬರುತ್ತದೆ. ಅದರಂತೆ ಈ ಗಾತ್ರದ ಪಾತ್ರೆ ಹೃದಯ. ಅಂತಃಕರಣ, ಇದನ್ನೂ ಪ್ರತಿನಿತ್ಯ ಶುಭ್ರಗೊಳಿಸಬೇಕು. ಶುಭ್ರಗೊಳಿಸಲು ಪ್ರಾಕೃತಿಕ ಜಲವಲ್ಲ; ಪರಮಾತ್ಮನ ಭಕ್ತಿ ಎಂಬ ಜಲಧಾರೆ ಬೇಕು. ಈ ಭಕ್ತಿ ಎಂಬ ಜಲದಿಂದ ಪ್ರತಿನಿತ್ಯ ಶುದ್ಧೀಕರಿಸಬೇಕು. ಇದಕ್ಕೂ ಅವನ ಅನುಗ್ರಹ ಬೇಕು.

## ರತ್ನ ತುಂಬಿದ ಚೀಲ–ಜೀವ

ಹೀಗೆ ನಿರ್ದೋಷನಾದರೂ ದೋಷಸಂಬಂಧವನ್ನು ಹೊಂದಿದ ಪ್ರಕೃತಿಬಂಧನ ದಿಂದ ನೊಂದ ನನ್ನನ್ನು ಉದ್ಧರಿಸು ಎಂದು ಸತ್ಯವ್ರತಮಹಾರಾಜ ಕೇಳುತ್ತಿದ್ದಾನೆ.

ಜೀವನು ಅಗ್ನಿಯಂತೆ ಎಂದು ಹೇಳಿ, ಈಗ ಬೇರೆ ದೃಷ್ಟಾಂತ ಹೇಳುತ್ತಾರೆ. ಜೀವನೆಂದರೆ ರತ್ನತುಂಬಿದ ಚೀಲವಿದ್ದಂತೆ. ಜೀವನ ತುಂಬ ಆನಂದವೆಂಬ ರತ್ನ ತುಂಬಿಕೊಂಡಿದೆ. ಆದರೆ ಈ ಚೀಲದ ಗಂಟನ್ನು ಬಿಡಿಸಲು ಬಹಳ ಕಷ್ಟ. ಈ ಕಗ್ಗಂಟು ಬ್ರಹ್ಮಗಂಟಿನಂತಿದೆ. ಪ್ರಕೃತಿಬಂಧನವೇ ಈ ಕಗ್ಗಂಟು. ಅನಾದಿಯಾದ ಅಜ್ಞಾನವೆಂಬ ಚೀಲ ಜೀವಸ್ವರೂಪವನ್ನು ಮುಚ್ಚಿಬಿಟ್ಟಿದೆ. ಹೀಗಾಗಿ ಆನಂದ ನಮ್ಮಲ್ಲಿ ತುಂಬಿ ಕೊಂಡಿದ್ದರೂ, ಚೀಲ–ಗಂಟುಗಳೆಂಬ ಅಜ್ಞಾನ ಪ್ರಕೃತಿಗಳ ಸಂಬಂಧದಿಂದ ಅನುಭವಿಸಲಾಗುತ್ತಿಲ್ಲ. ಈ ಚೀಲ ಕತ್ತಲೆಯಲ್ಲಿ ಅಡಗಿಹೋಗಿದೆ. ಅದನ್ನು ಕಾಣಲು ಗಂಟುಬಿಡಿಸಲು ಒಂದು ದೀಪದ ಆವಶ್ಯಕತೆ ಇದೆ. ಭಗವಂತನ ತತ್ತ್ವೋಪದೇಶ ವೆಂಬುದೇ ಇಲ್ಲಿ ಬೆಳಕು. ಭಗವದ್ವಚನವೆಂಬ ದೀಪದಿಂದ ಅಜ್ಞಾನಾಚ್ಛಾದಿತನಾದ ಜೀವನೆಂಬ ಚೀಲವನ್ನು ಹುಡುಕಬೇಕು. ಅದರ ಸಹಾಯದಿಂದಲೇ ಪ್ರಕೃತಿಯ ಸಂಬಂಧವೆಂಬ ಗಂಟನ್ನು ಬಿಚ್ಚಬೇಕು. ಅನಂತರ ಒಳಗೆ ತುಂಬಿದ ಸ್ವರೂಪಾನಂದ ವೆಂಬ ದಿವ್ಯ ರತ್ನಗಳನ್ನು ಪಡೆದುಕೊಳ್ಳಬಹುದು.

ಹೀಗೆ ಜೀವರಿಗೆ ಸ್ವರೂಪಾನಂದ ದೊರೆಯಬೇಕಾದರೆ, ನಿನ್ನ ಉಪದೇಶ ಅತ್ಯಗತ್ಯ. ನಿನ್ನ ಉಪದೇಶವನ್ನು ನೀಡು ಎಂದು ಕಳಕಳಿಯಿಂದ ಮನುವು ಪ್ರಾರ್ಥಿಸಿದ.

ಕಗ್ಗತ್ತಲೆಯಿಂದ ಕೂಡಿದ ಸಂಸಾರವೆಂಬ ಕಾನನದಲ್ಲಿ ಸಂಚರಿಸುವ ನಮಗೆ, ಕಣ್ಣುಗಳೂ ಕುರುಡಾಗಿವೆ. ಕಣ್ಣಿಲ್ಲದವ ಎಲ್ಲೆಲ್ಲೋ ತಿರುಗುತ್ತಾನೆ. ಅನರ್ಥಕ್ಕೆ ಗುರಿಯಾಗುತ್ತಾನೆ.

ಅವನಂತೆ ನಾವು ಕುರುಡಾಗಿದ್ದೇವೆ. ನಮ್ಮೊಳಗಡಗಿರುವ ಆನಂದವನ್ನು ಕಾಣದೆ, ಬಾಹ್ಯ ವಿಷಯಪದಾರ್ಥಗಳ ಸೀಳಿ ಸಾಗುತ್ತಿದ್ದೇವೆ. ಆನಂದದ ಭ್ರಾಂತಿಯಿಂದ ಸಾಗಿ ಅನರ್ಥಕ್ಕೆ ಗುರಿಯಾಗಿದ್ದೇವೆ. ನಮ್ಮಂಥ ಅಜ್ಞಾನಿ ಕುರುಡರಿಗೆ ಭಗವಂತನ ತತ್ತ್ವೋಪ ದೇಶವೆಂಬ ಜ್ಞಾನದ ಬೆಳಕು ಬೇಕು. ಹೃದಯಗುಹೆಯಲ್ಲಿ ಈ ಬೆಳಕು ಹರಿಯಬೇಕು. ಅದರಿಂದ ಅಜ್ಞಾನದ ಚೀಲ ಹರಿಯಬೇಕು. ಪ್ರಕೃತಿ ಬಂಧನ ತರಿಯಬೇಕು. ಇದಕ್ಕೆಲ್ಲಾ ಶ್ರೀಹರಿಯ ದಯೆ ಇರಬೇಕು ಎಂದು ಮನುವು ಭಗವಂತನ ಬಳಿ ಪ್ರಾರ್ಥಿಸುತ್ತಿದ್ದಾನೆ.

ಭಗವಂತನೇ! ನೀನು ಕೇವಲ ಜಗತ್ಪತಿ ಮಾತ್ರವಲ್ಲ, ನಮ್ಮ ಸಾಕಿ ಸಲಹುವ ತಂದೆ ಮಾತ್ರವಲ್ಲ, ಅಕ್ಕರೆಯ ಮಮತೆಯನ್ನು ಹರಿಸುವ ತಾಯಿಯ ಪಾತ್ರ ಮಾತ್ರವಲ್ಲ –ತತ್ತ್ವೋಪದೇಶಕನಾದ ಗುರುವು ನೀನೇ ಆಗಿದ್ದೀಯೆ ಎಂದು ಅವನು ಪ್ರಾರ್ಥಿಸುತ್ತಾನೆ–

ತಂ ತ್ವಾಮಹಂ ದೇವವರಂ ವರೇಣ್ಯಂ
ಪ್ರಪದ್ಯ ಈಶಂ ಪ್ರತಿಬೋಧನಾಯ ।
ಛಿಂಧ್ಯರ್ಥದೀಪ್ತೈರ್ಭಗವನ್ ವಚೋಭಿಃ
ಗ್ರಂಥೀನ್ ಹೃದಯ್ಯಾನ್ ವಿವೃಣು ಸ್ವವೋಕಃ ॥ — ೮-೨೪-೫೩

ಎಂದು. ಹೀಗೆ ಅಷ್ಟಮ ಸ್ಕಂಧವು ಸಾಧಕರ ಸಾಧನೆಗೆ ಅನುಕೂಲವಾಗುವಂತ ಅತ್ಯಪೂರ್ವವಾದ ವಿಷಯಗಳಿಂದ ಕೂಡಿದೆ. ಈ ಉಪದೇಶಗಳೆಲ್ಲವು ಪುನಃ ಪುನಃ ಮನನವಾಗುವಂತೆ ಭಗವಂತನು ಅನುಗ್ರಹಿಸಲಿ ಎಂಬಲ್ಲಿಗೆ ಅಷ್ಟಮಸ್ಕಂಧವು ಲಕ್ಷ್ಮೀಹಯಗ್ರೀವನಿಗೆ ಸಮರ್ಪಿತವಾಯಿತು.

ಮಧ್ವೇಶಾರ್ಪಣಮಸ್ತು.

# ಅಥ ನವಮ ಸ್ಕಂಧಃ

ಒಂಬತ್ತನೆಯ ಸ್ಕಂಧದಲ್ಲಿ ವಿಷ್ಣುಭಕ್ತರಾದ ರಾಜರ ಕಥೆಯನ್ನು ಹೇಳುತ್ತಾರೆ. ದೇವತೆಗಳ ಋಷಿಗಳ ಮತ್ತು ವಿಷ್ಣುಭಕ್ತರ ಕಥೆಗಳ ಸಂಕಲನವೇ ಒಂಭತ್ತನೇ ಸ್ಕಂಧ. ಭಗವದ್ಭಕ್ತರ ಮಹತ್ವವನ್ನು, ಮಂತ್ರಗಳ ಶಕ್ತಿಯನ್ನು ತಿಳಿಸುವುದರ ಮೂಲಕ ಭಗವಂತನಲ್ಲಿ ಮತ್ತಷ್ಟೂ ಪ್ರೇಮ ಬೆಳೆಯುವಂತಹ ಉಪದೇಶವನ್ನು ನೀಡುತ್ತಿದ್ದಾರೆ.

## ತ್ಯಾಗಿ, ಯೋಗಿ, ಸಾಧ್ವಿಯರ ಚರಿತ್ರೆ

ಪ್ರಾರಂಭದಲ್ಲಿ ಸಂಕ್ಷಿಪ್ತವಾಗಿ ಕನ್ಯಾಮಣಿಯಾದ ಸುಕನ್ಯೆಯ ಚರಿತ್ರೆಯನ್ನು ತಿಳಿಸುತ್ತಿದ್ದಾರೆ.

ಸರ್ಯಾತಿರಾಜನಿಗೆ ಸುಕನ್ಯೆ ಎಂಬ ಮಗಳಿದ್ದಳು. ಒಂದು ದಿನ ಅವಳನ್ನು ಕರೆದು ಕೊಂಡು ಸೈನ್ಯಸಮೇತನಾಗಿ, ಶರ್ಯಾ ಯು ಚ್ಯವನರ ಆಶ್ರಮಕ್ಕೆ ನಡೆದ. ಆಶ್ರಮದ ಸುಂದರ ಪರಿಸರ ಸುಕನ್ಯೆಗೆ ಅತ್ಯಂತ ಮುದನೀಡಿತು. ಅಲ್ಲಿಯೇ ಸಖಿಯರೊಟ್ಟಿಗೆ ವಿಹರಿಸುತ್ತಾ ಒಂದು ಹುತ್ತದಲ್ಲಿ ಹೊಳೆಯುವ ಎರಡು ಬೆಳಕುಗಳನ್ನು ಕಂಡಳು. ಮಿಣುಕುಹುಳದಂತೆ ಫಳಫಳ ಹೊಳೆಯುವ ಎರಡು ಬೆಳಕುಗಳನ್ನು ಕಂಡ ಸುಕನ್ಯೆಗೆ ಕುತೂಹಲ ಮೂಡಿತು. ಕಡ್ಡಿಯೊಂದನ್ನು ಹಿಡಿದು ಬಾಲಬುದ್ಧಿಯಿಂದ ಬೆಳಕಿನ ಜಾಗಕ್ಕೆ ಚುಚ್ಚಿದಳು.

ಆ ಬೆಳಕು ಮತ್ತೇನಲ್ಲ. ಅಲ್ಲಿ ಚ್ಯವನಋಷಿಗಳು ತಪಸ್ಸಿಗೆ ಕುಳಿತಿದ್ದಾರೆ. ಅವರ ದೇಹವನ್ನೆಲ್ಲಾ ಹುತ್ತ ವ್ಯಾಪಿಸಿದೆ. ದೀರ್ಘಕಾಲದ ತಪಸ್ಸಿನ ಸೂಚನೆಗಾಗಿಯೇ ಎಂಬಂತೆ ಅವರ ಕಣ್ಣುಗಳು ಮಾತ್ರ ಹುತ್ತದ ರಂಧ್ರದಿಂದ ಕಾಣಿಸುತ್ತಿತ್ತು. ಸುಕನ್ಯೆ ಇದಾವುದನ್ನರಿಯದೆ ಚುಚ್ಚಿದಳು. ಕೂಡಲೇ ನೆತ್ತರು ಚಿಮ್ಮಿತು. ಸುಕನ್ಯೆ ಗಾಬರಿ ಗೊಂಡಳು.

ಇತ್ತ ಶರ್ಯಾತಿಯ ಸೈನ್ಯದವರೆಲ್ಲರೂ ಮಲ–ಮೂತ್ರ ಬಂಧನವಾಗಿ ಸಂಕಟ ಕ್ಕೀಡಾದರು. ಋಷಿಗುಂಟಾದ ಅಪಚಾರದ ಪರಿಣಾಮವಿದು. ಎಲ್ಲರೂ ಏಕೆ ಹೀಗಾಗುತ್ತಿದೆ ಎಂದು ಕಳವಳಗೊಂಡರು. ಸುಕನ್ಯೆ ಗುಟ್ಟಾಗಿ ಕುಳಿತುಕೊಂಡಿದ್ದಾಳೆ. ಅನಂತರ ಶರ್ಯಾತಿ ಇಲ್ಲಿ ಯಾರೋ ಅಪರಾಧ ಮಾಡಿದ್ದಾರೆ. ಯಾರು? ಎಂದು ವಿಚಾರಿಸಲು ಎಲ್ಲರೂ ಗೊತ್ತಿಲ್ಲವೆಂದರು. ಸುಕನ್ಯೆ ಅನಿವಾರ್ಯವಾಗಿ ಸಂಗತಿಯನ್ನು ತಿಳಿಸಬೇಕಾಯಿತು. ಯಥಾವತ್ತಾಗಿ ತಿಳಿಸಿದಳು.

ಶರ್ಯಾತಿರಾಜ ವಿನಯದಿಂದ ವಿನಮ್ರನಾಗಿ ಚ್ಯವನರ ಬಳಿ ಕ್ಷಮೆಯಾಚಿಸಿದ. ಚ್ಯವನರು ನಿನ್ನ ಮಗಳನ್ನು ಮದುವೆಮಾಡಿಕೊಡು ಕ್ಷಮಿಸುವೆ ಎಂದರು. ಅವರ ಅನುಗ್ರಹಕ್ಕಾಗಿ ಸೈನ್ಯದ ರಕ್ಷಣೆಗಾಗಿ ತನ್ನ ಮಗಳನ್ನೇ ಧಾರೆ ಎರೆದ. ವೃದ್ಧ ಋಷಿಗಳ

ಕೈಯನ್ನು ನನ್ನ ಮಗಳು ಹಿಡಿದರೂ ಚಿಂತೆಯಿಲ್ಲ. ಆದರೆ ಸೈನ್ಯದ ರಕ್ಷಣೆಯಾಗಬೇಕು. ರಾಷ್ಟ್ರಕ್ಕೆ ಕ್ಷೇಮ ಒದಗಬೇಕು ಎಂಬುದು ಶರ್ಯಾತಿಯ ಉದ್ದೇಶವಾಗಿತ್ತು. ಅಪರಾಧಕ್ಕನುಗುಣವಾಗಿ ಸುಕನ್ಯೆಯೂ ಒಪ್ಪಿದಳು. ಮಹರ್ಷಿ ಚ್ಯವನರ ಕೈಯನ್ನು ಹಿಡಿದ ಸುಕನ್ಯೆಯನ್ನು ಆಶ್ರಮದಲ್ಲಿಯೇ ಬಿಟ್ಟು ರಾಜ ಊರಿಗೆ ನಡೆದ.

ಆಶ್ರಮದಲ್ಲಿ ಸುಕನ್ಯೆಯು ಪತಿವ್ರತಾಶಿರೋಮಣಿಯಾಗಿ ಅತ್ಯಂತ ಆಸಕ್ತಿಯಿಂದ ಎಚ್ಚರದಿಂದ ಚ್ಯವನರ ಸೇವೆಯನ್ನು ಮಾಡುತ್ತಿದ್ದಳು. ಹೀಗಿರಲು ಒಂದು ದಿನ ಆಶ್ರಮಕ್ಕೆ ಅಶ್ವಿನೀಕುಮಾರರು ಆಗಮಿಸಿದರು. ಅವರನ್ನು ಚ್ಯವನ–ಸುಕನ್ಯೆಯರು ಉತ್ತಮ ರೀತಿಯಲ್ಲಿ ಸತ್ಕರಿಸಿದರು. ಅಶ್ವಿನಿದೇವತೆಗಳ ಬಳಿ 'ನನಗೆ ನವತಾರುಣ್ಯ ಕೊಡಿ' ಎಂದು ಚ್ಯವನರು ಬೇಡಿದರು. ಪ್ರತಿಯಾಗಿ ಯಜ್ಞದಲ್ಲಿ ಸೋಮಪಾನ ಮಾಡಿಸುವೆ ಎಂದರು.

ಒಪ್ಪಿದ ಅಶ್ವಿನೀಕುಮಾರರು, ವೃದ್ಧ ಋಷಿಗಳ ಕೈಹಿಡಿದು ಸಿದ್ಧರಿಂದ ನಿರ್ಮಿತ ವಾದ ಸರೋವರದಲ್ಲಿ ಮುಳುಗಿದರು. ಮೇಲೆದ್ದಾಗ ಹದಿನಾರರ ಮೂವರು ತರುಣರು ನಿಂತಿದ್ದಾರೆ. ಹಣ್ಣು ಹಣ್ಣು ಮುದುಕರಾದ ಚ್ಯವನರು ಕಾಣುತ್ತಿಲ್ಲ. ಸುಕನ್ಯೆಗೆ ತನ್ನ ಪತಿ ಯಾರು ಎಂಬುದೇ ತಿಳಿಯಲಿಲ್ಲ. ಅಶ್ವಿನೀದೇವತೆಗಳ ಬಳಿ ಪತಿಯನ್ನು ಕರುಣಿಸಿ ಎಂದು ಮೊರೆಹೋದಳು. ಸುಕನ್ಯೆಯ ಪಾತಿವ್ರತ್ಯಕ್ಕೆ ಮೆಚ್ಚಿದ ನಾಸತ್ಯದಸ್ರರು ಚ್ಯವನರನ್ನು ತೋರಿಸಿ ಹರಸಿ ಹೋದರು.

ಪತಿವ್ರತೆಯಾದ ಸುಕನ್ಯೆಯು ತನ್ನ ಪಾತಿವ್ರತ್ಯದಿಂದ ಪ್ರಾಮಾಣಿಕವಾದ ಪತಿ ಸೇವೆಯಿಂದ ಮುದುಕನಾದ ಪತಿಯನ್ನು ತರುಣನನ್ನಾಗಿ ಮಾಡಿದಳು. ರೋಗಗ್ರಸ್ತ ನಾದ ಜರ್ಜರಿತನಾದ ವೃದ್ಧಪತಿಯನ್ನು ಕೇವಲ ತನ್ನ ಪತಿಭಕ್ತಿಯಿಂದ ಬದಲಿಸಿ ದಳು. ಇಂತಹ ಸುಕನ್ಯೆ ಎಲ್ಲಿ!! ಇಂದಿನ ಪತ್ನಿಯರೆಲ್ಲಿ?! ಸುಕನ್ಯೆ ಮುದುಕನನ್ನು ತರುಣನನ್ನಾಗಿ ಮಾಡಿದರೆ, ಇಂದಿನ ಪತ್ನಿಯರು ತರುಣನನ್ನು ತಮ್ಮ ಉಪಟಳದಿಂದ ಮುದುಕನನ್ನಾಗಿ ಮಾಡುತ್ತಾರೆ!! ನಾವೆಲ್ಲರೂ ಸುಕನ್ಯೆಯಂತಹ ಪತಿಭಕ್ತಿಯನ್ನು ಮೈಗೂಡಿಸಿಕೊಳ್ಳಬೇಕಿದೆ.

ಕೆಲವು ಸಮಯದ ಅನಂತರ ಶರ್ಯಾತಿರಾಜ ತನ್ನ ಮಗಳನ್ನು ನೋಡ ಬಯಸಿದ. ವೃದ್ಧಪತಿಯನ್ನು ಕೈಹಿಡಿದ ತನ್ನ ಮಗಳ ಯೋಗಕ್ಷೇಮಚಿಂತನೆಗಾಗಿ ಚ್ಯವನರ ಆಶ್ರಮಕ್ಕೆ ಬಂದ. ಬಂದವನೇ ಆಶ್ರಮದಲ್ಲಿ ದೃಶ್ಯ ಒಂದನ್ನು ನೋಡಿ ಗಾಬರಿಯಾದ. ತನ್ನ ಮಗಳು ಯಾವನೋ ಒಬ್ಬ ತರುಣನ ಬಳಿ ವಿಹರಿಸುತ್ತಿದ್ದಾಳೆ. ವೃದ್ಧಪತಿಯನ್ನು ಪರಿತ್ಯಜಿಸಿದ್ದಾಳೆ ಎಂದು ಕ್ರುದ್ಧನಾದ. ಸುಕನ್ಯೆಯು ತಂದೆಯ ಬಳಿಬಂದು ನಮಸ್ಕರಿಸಲು ಉದ್ಯುಕ್ತಳಾದಾಗ ಶರ್ಯಾತಿ ಹೇಳಿದ–

**ಚಿಕೀರ್ಷಿತಂ ತೇ ಕಿಮಿದಂ ಪತಿಸ್ತ್ವಯಾ**
**ಪ್ರಲಂಭಿತೋ ಲೋಕನಮಸ್ಕೃತೋ ಮುನಿಃ ॥**

ಮಗಳೇ! ಏನು ಮಾಡುತ್ತಿದ್ದಿ? ಜಗದ್ವಂದ್ಯನಾದ ವೃದ್ಧನಾದ ಜ್ಞಾನಿಯಾದ ಗಂಡನನ್ನು ಬಿಟ್ಟು ಅನ್ಯ ಪುರುಷನ ಸಂಗ ಮಾಡುತ್ತಿರುವಿಯಲ್ಲಾ! ·ಇಂತಹ

ವಂಚನೆಯನ್ನೇಕೆ ಮಾಡಿದೆ? ಸತ್ಕುಲಪ್ರಸೂತಳಾದ ನಿನಗೆ ಇಂತಹ ಬುದ್ಧಿ ಹೇಗೆ ಬಂತು? ತಂದೆಯ ವಂಶವನ್ನೂ ಗಂಡನ ವಂಶವನ್ನೂ ನರಕಕ್ಕೆ ತಳ್ಳುವಂತಹ ಕೆಟ್ಟ ವ್ಯಭಿಚಾರ ಕರ್ಮದಲ್ಲಿ ತೊಡಗಿರುವಿಯಲ್ಲಾ? ನಿನಗೆ ಹೇಗೆ ಮನಸ್ಸು ಬಂತು? –ಎಂದು ತುಂಬಾ ನೊಂದವನಾಗಿ ಮಗಳನ್ನು ನಿಂದಿಸುತ್ತಿದ್ದಾನೆ.

ಶರ್ಯಾತಿಗೆ ಮಗಳು ಹೇಳಿದಳು:

ತಂದೆಯೇ ಇವರು ಬೇರೆ ಯಾರೂ ಅಲ್ಲ; ನಿನ್ನ ಅಳಿಯ ಎಂದು ನಡೆದ ಸಂಗತಿಯನ್ನೆಲ್ಲಾ ತಿಳಿಸಿದಾಗ ಶರ್ಯಾತಿ ಅತ್ಯಾನಂದ ಹೊಂದಿದ. ಮಗಳ ಶಿರವನ್ನು ಆಘ್ರಾಣಿಸಿದ.

ಸುಕನ್ಯೆಯು ಒಬ್ಬ ರಾಜನ ಮಗಳಾಗಿ, ಉತ್ತಮ ಪಾತಿವ್ರತ್ಯ, ಭಕ್ತಿ, ತವಸ್ಸು, ತ್ಯಾಗ, ಶುಶ್ರೂಷೆಗಳಿಂದ ಪತಿಯ ಬದುಕಿಗೆ ಬದಲಾವಣೆ ನೀಡಿ ಅವನನ್ನು ಮತ್ತೂ ಸಾಧನೆಯಲ್ಲಿ ತೊಡಗುವಂತೆ ಮಾಡಿದ ಸಾಧ್ವೀ ಕನ್ಯಾಮಣಿ ಸುಕನ್ಯಾ ಆದರ್ಶ ಮಾತೆಯಾಗಿದ್ದಾಳೆ. ಇಂತಹ ಸುಕನ್ಯಾಳನ್ನು ನಾವು ಪ್ರತಿನಿತ್ಯವೂ ಸ್ಮರಿಸಬೇಕು. ಶರ್ಯಾತಿ, ಚ್ಯವನರನ್ನೂ ಸ್ಮರಿಸಬೇಕು.

ಶರ್ಯಾತಿಂ ಚ ಸುಕನ್ಯಾಂ ಚ ಚ್ಯವನಂ ಚೇಂದ್ರಮಶ್ವಿನೌ ।
ಯಃ ಸ್ಮರಿಷ್ಯತಿ ವೈ ನಿತ್ಯಂ ತಸ್ಯ ಚಕ್ಷುರ್ನ ನಶ್ಯತಿ ॥

ರಾಜನಾಗಿದ್ದರೂ ಒಬ್ಬ ಬೈರಾಗಿ ಋಷಿಗೆ ಮಮತೆಯ ಮಗಳನ್ನು ಧಾರೆ ಎರೆದ ತ್ಯಾಗಿ ಶರ್ಯಾತಿ ರಾಜ. ತನ್ನ ತಪಸ್ಸಿನಿಂದ ಶರ್ಯಾತಿಯ ಸೈನ್ಯವನ್ನೇ ಸ್ತಂಭನ ಗೊಳಿಸಿದ ಮಹಾನುಭಾವ ಚ್ಯವನ. ಚ್ಯವನನನ್ನು ಸೇವಿಸಿ ಪಾತಿವ್ರತ್ಯದ ಶಕ್ತಿಯಿಂದ ಗಂಡನಿಗೂ ತಾರುಣ್ಯ ಬರುವಂತೆ ಮಾಡಿದ ಸುಕನ್ಯೆ; ಇಂತಹ ಆದರ್ಶ ಮಹಾತ್ಮರನ್ನು ಪ್ರತಿದಿನ ಊಟಮಾಡಿದ ಬಳಿಕ ಸ್ಮರಿಸಬೇಕು.

ಈ ಸುಕನ್ಯಾಳ ಕಥೆಯಿಂದ ನಮ್ಮ ಮಾತೆಯರೂ ಪತಿ ಶುಶ್ರೂಷೆಯ ಮಹತ್ವ ವನ್ನು ಅರಿತು ನಡೆಯಬೇಕು. ಮಾತೆಯರು ತಮ್ಮ ಗಂಡಂದಿರನ್ನು ತರುಣರಾಗು ವಂತೇನು ಮಾಡುವುದು ಬೇಡ. ಸಾಧ್ಯವೂ ಇಲ್ಲ. ತರುಣರಾದ ಗಂಡಂದಿರನ್ನು ತರುಣರನ್ನಾಗಿಯೇ ನೋಡಿಕೊಂಡರೂ ಸಾಕು!! ಅವರ ಪ್ರತಿಯೊಂದು ಕೆಲಸ ಗಳಲ್ಲಿಯೂ ನೆರವುನೀಡಿದರೆ ಅದೇ ಒಂದು ತಪಸ್ಸು. ಪ್ರತಿನಿತ್ಯ ಇದನ್ನು ಮರೆಯ ದಿರಲು ಸುಕನ್ಯೆಯ ಸ್ಮರಣೆಯನ್ನು ಮಾಡಬೇಕು.

ಶರ್ಯಾತಿರಾಜ ಚ್ಯವನರನ್ನು ಯಜ್ಞಕ್ಕಾಗಿ ಕರೆದುಕೊಂಡು ಹೋದ. ಆ ಯಜ್ಞದಲ್ಲಿ ಚ್ಯವನರು ಅಶ್ವಿನೀದೇವತೆಗಳಿಗೆ ಸೋಮವನ್ನು ಕೊಟ್ಟರು. ಅಶ್ವಿನೀ ದೇವತೆಗಳಿಂದ ಉಪಕೃತರಾಗುವ ಕಾಲದಲ್ಲಿ ಕೊಟ್ಟ ಮಾತಿನಂತೆ ಚ್ಯವನರು ನಡೆದುಕೊಂಡರು. ಸೋಮರಸವನ್ನು ಕೊಡುವ ಸಂದರ್ಭದಲ್ಲಿ ಇಂದ್ರದೇವರು ವಜ್ರಾಯುಧ ಹಿಡಿದುಕೊಂಡು ತಡೆಯಲು ಬಂದರು. ಸೋಮಪಾನಕ್ಕೆ ಅಶ್ವಿನೀ ದೇವತೆಗಳನ್ನು ಅನರ್ಹರು ಎಂದರು. ತಡೆಯಲು ಬಂದ ದೇವೇಂದ್ರನ ಕೈಯನ್ನು ಚ್ಯವನರು ಮಂತ್ರಶಕ್ತಿಯಿಂದ ಸ್ತಂಭನಮಾಡಿದರು. ಅನಂತರ ಎಲ್ಲರೂ

ಅಶ್ವಿನೀದೇವತೆಗಳಿಗೆ ಸೋಮರಸ ಕೊಡಬೇಕೆಂದು ಅನುಮೋದಿಸಿದರು. ಅನಂತರ ಅಶ್ವಿನೀ ದೇವತೆಗಳು ಸೋಮಪಾನ ಅಧಿಕಾರಿಗಳಾದರು. ಹೀಗೆ ಭಗವಂತನ ಭಕ್ತಿಯ ಶಕ್ತಿಯಿಂದ ಯಜ್ಞದ ಕ್ರಮದಲ್ಲಿಯೇ ಹೊಸ ಬದಲಾವಣೆ ಉಂಟುಮಾಡಿದ ಮಹಾನುಭಾವರು ಚ್ಯವನಋಷಿಗಳು.

## ಪ್ರಾಮಾಣಿಕತೆಯ ಬೆಲೆ

ಮುಂದೆ ವೈವಸ್ವತಮನುವಿನ ಹತ್ತು ಮಕ್ಕಳಲ್ಲಿ ಒಬ್ಬನಾದ ನಾಭಾಗನ ಕವಿ ಚರಿತ್ರೆಯನ್ನು ಹೇಳುತ್ತಿದ್ದಾರೆ. ಇವನು ಬ್ರಹ್ಮಚಾರಿ. ಗುರುಕುಲದಲ್ಲಿಯೇ ವಾಸಿಸು ತ್ತಿದ್ದಾನೆ. ಇನ್ನೂ ಅಧ್ಯಯನ ಮುಗಿದಿಲ್ಲ. ಈ ಸಂದರ್ಭದಲ್ಲಿ ಅವನ ಇತರ ಸಹೋದರರು ತಂದೆಯ ಆಸ್ತಿಯನ್ನು ವಿಭಾಗಮಾಡಿಕೊಂಡರು. ನಾಭಾಗನಿಗೆ ಯಾವುದೇ ಭಾಗವನ್ನೂ ನೀಡಲಿಲ್ಲ. ಬ್ರಹ್ಮಚಾರಿಯಾದ ಬ್ರಹ್ಮನಿಷ್ಠನಾದ ಅವನಿಗೇಕೆ ಆಸ್ತಿ? ಎಂದು ಅಲಕ್ಷಿಸಿದರ . ನಾಭಾಗ ಬಂದು ನೋಡಿದ. ಆಸ್ತಿ ಎಲ್ಲವೂ ಪಾಲಾಗಿದೆ. ಬೇಸರಗೊಂಡ. ಕೊಡುವುದಿರಲಿ ಬೇಕೋ? ಬೇಡವೋ? ಎಂದು ಕೇಳುವಷ್ಟೂ ಸೌಜನ್ಯವಿಲ್ಲವೇ? ನನಗೆಲ್ಲಿದೆ ಆಸ್ತಿ? ಎಂದು ಹಕ್ಕು ಕೇಳಿದ. ಅದಕ್ಕೆ ಅವರೆಲ್ಲರೂ ನಿನ್ನ ತಂದೆಯ ಬಳಿಯೇ ಹೋಗಿ ಕೇಳು ಎಂದರು. ತಂದೆಯ ಬಳಿ ಕೇಳಿದ. ಆಸ್ತಿ ನನಗೆ ಬೇಡವೇ? ಎಂದ. ಅದಕ್ಕೆ ತಂದೆ ಸಮಾಧಾನಪಡಿಸಿದ. ಈ ಆಸ್ತಿ ವಿಭಾಗವಾಗಿ ಆಗಿದೆ. ಮತ್ತೆ ಅದರ ಬಗ್ಗೆ ಚರ್ಚೆ ಬೇಡ. ನೋಡು ನಿನಗೆ ಬೇರೆ ಮಾರ್ಗ ತಿಳಿಸುತ್ತೇನೆ. ಇಲ್ಲೊಂದು ದೊಡ್ಡ ಸತ್ರ ಪ್ರಾರಂಭವಾಗಿದೆ. ಅಲ್ಲಿ ಹೋಮಿಸುವಾಗ ಮಂತ್ರಗಳನ್ನು ಮರೆಯುತ್ತಾರೆ. ನೀನು ಹೋಗಿ ಅಲ್ಲಿ ಮಂತ್ರವನ್ನು ಹೇಳು. ಅದರಿಂದ ಸಂತುಷ್ಟರಾದ ಅವರು ಸತ್ರ ಮುಗಿದ ಬಳಿಕ ಏನೆಲ್ಲ ದ್ರವ್ಯ ಉಳಿಯುವುದೋ ಅವೆಲ್ಲವನ್ನೂ ನಿನಗೆ ಕೊಟ್ಟು ಹೋಗುತ್ತಾರೆ. ಅದರಿಂದ ನಿನ್ನ ಜೀವನ ನಿರ್ವಹಣೆಮಾಡು. ಕಲಹಬೇಡ ಎಂದ. ನಾಭಾಗ ತಂದೆಯ ಮಾತಿಗೆ ಪ್ರತಿಯಾಡದೆ ಮಾತಿನಂತೆ ನಡೆದ. ಮಂತ್ರ ಹೇಳಿದ. ಸಂತೋಷಗೊಂಡರು. ಯಾಗಾವಶಿಷ್ಟದ್ರವ್ಯವನ್ನು ಬ್ರಹ್ಮನಿಷ್ಠನಾದ ನಿನಗೆ ಕೊಡುವುದಾಗಿ ಹೇಳಿದರು. ಅದರಂತೆ ಕೊಟ್ಟು ನಡೆದರು. ಸಂತುಷ್ಟನಾದ ನಾಭಾಗ ಗಂಟನ್ನು ಹಿಡಿದು ಇನ್ನೇನು ಹೊರಡಲು ಅನುವಾದಾಗ, ಅಲ್ಲಿಗೊಬ್ಬ ಕಡು ಕಪ್ಪಗಿನ ವ್ಯಕ್ತಿ ಬಂದ. ದ್ರವ್ಯ ನನಗೆ ಸೇರಿದ್ದು ಎಂದ. ನಾಭಾಗನು 'ಋಷಿಗಳು ನನಗೆ ಕೊಟ್ಟದ್ದು' ಎಂದು ಹೇಳಿದ. ಕಪ್ಪಗಿನ ಮನುಷ್ಯ ಹೇಳಿದ. ನನ್ನಲ್ಲಿ ಕಲಹ ಬೇಡ; ನಿನ್ನ ತಂದೆಯ ಬಳಿಯೇ ಕೇಳು ಎಂದ. ನಾಭಾಗ ತಂದೆಯ ಬಳಿ ಬಂದ. ನಡೆದ ವಿಚಾರವನ್ನೆಲ್ಲಾ ತಿಳಿಸಿದ. ತಂದೆ ಆ ವ್ಯಕ್ತಿಯನ್ನು ಕಂಡು ನಮಸ್ಕರಿಸಿದ. ಮಗನೇ ಈ ವ್ಯಕ್ತಿ ಮತ್ಯಾರೂ ಅಲ್ಲ. ಸಾಕ್ಷಾತ್ ರುದ್ರದೇವರೇ ಆಗಿದ್ದಾರೆ. ಯಜ್ಞದ ಅವಶಿಷ್ಟ ದ್ರವ್ಯಕ್ಕೆ ಅಧಿಕಾರಿಗಳು ರುದ್ರದೇವರೇ ಆಗಿರುತ್ತಾರೆ. ('ಉಚ್ಛೇಷಣ ಭಾಗೋ ವೈ ರುದ್ರಃ' ಎಂದು ಶ್ರುತಿಯೂ ಇದೆ.) ಅದೆಲ್ಲವೂ ರುದ್ರನದ್ದು. ಅದರಲ್ಲಿ ನಿನಗೆ ಅಧಿಕಾರವಿಲ್ಲ. ಆದ್ದರಿಂದ ಅವರಿಗೇ ಕೊಡು ಎಂದ. ನಾಭಾಗನಿಗೆ ಅಣ್ಣತಮ್ಮಂದಿರಿಂದ ತಂದೆಯ ಪಾಲೂ ಬರಲಿಲ್ಲ. ತಂದೆ

ಕಳುಹಿಸಿದ ಯಜ್ಞದಲ್ಲಿ ಪಾಲೂ ಸಿಗಲಿಲ್ಲ. ಆದರೂ ತನ್ನ ಪ್ರಾಮಾಣಿಕತೆಯನ್ನು ಬಿಡಲಿಲ್ಲ. ತಂದ ಗಂಟನ್ನು ತೆಗೆದುಕೊಂಡು ಬಂದು ರುದ್ರದೇವರಿಗೇ ಕೊಟ್ಟ. ತಂದೆ ನಿನಗೇ ಕೊಡಲು ಹೇಳಿದ್ದಾನೆ ಎಂದ. ತಂದೆ ಧರ್ಮ ಬಿಡಲಿಲ್ಲ. ತನಯ ಸತ್ಯ ಬಿಡಲಿಲ್ಲ. ತಂದೆ ಮಗನ ಪರವಾಗಿ ಮಾತನಾಡಿ ನ್ಯಾಯಮಾರ್ಗವನ್ನು ಬಿಡಲಿಲ್ಲ. ದ್ರವ್ಯವು ಯಾರಿಗೆ ಸಲ್ಲಬೇಕೋ ಅದನ್ನು ಅವರಿಗೇ ತಲುಪಿಸು ಎಂದು ನ್ಯಾಯ ಮಾರ್ಗದಲ್ಲಿ ನಡೆದ. ನಾಭಾಗನು ತಂದೆ ತಿಳಿಸಿದಂತೆ ಬಂದು ರುದ್ರನಿಗೆ ತಿಳಿಸಿದ. ಇವರೀರ್ವರ ಪ್ರಾಮಾಣಿಕತೆಗೆ ರುದ್ರದೇವ ಪರಮಸಂತುಷ್ಟನಾದ. ಸಂತೋಷದಿಂದ ನಾಭಾಗನನ್ನು ಹರಸಿದ. ನಿನಗೆ ಯಜ್ಞಕ್ಕೆ ಸಂಬಂಧಿಸಿದ ಮಂತ್ರ ಮಾತ್ರವಲ್ಲ, ಬ್ರಹ್ಮ ಜ್ಞಾನವೇ ನಿನಗೆ ಬರಲಿ!! ಭಗವಂತನ ಸಾಕ್ಷಾತ್ಕಾರವನ್ನೇ ನೀನು ಪಡೆ! ಇಷ್ಟೇ ಅಲ್ಲದೆ ನನಗೆ ಸಂಬಂಧಿಸಿದ ದ್ರವ್ಯವನ್ನು ನಿನಗೇ ಕೊಡುತ್ತಿದ್ದೇನೆ ಸ್ವೀಕರಿಸು ಎಂದ.

ಸತ್ಯದಿಂದ, ತ್ಯಾಗದಿಂದ, ಧರ್ಮದಿಂದ ನಮಗೇನು ಲಾಭ ಎನ್ನುವುದನ್ನು ತೋರಿಸಿಕೊಟ್ಟ ಧೀರ ಬಾಲಕ ನಾಭಾಗ. ಪ್ರಾಮಾಣಿಕತೆಯಿಂದ ಆಧ್ಯಾತ್ಮಿಕ ಸಂಪತ್ತು ಭೌತಿಕ ಸಂಪತ್ತು ಎರಡನ್ನೂ ಪಡೆದುಕೊಂಡ. ಅಣ್ಣತಮ್ಮಂದಿರಿಗೆ ತನ್ನ ಸಂಪತ್ತನ್ನು ಕೊಟ್ಟ. ತಂದೆ ರುದ್ರನಿಗೆ ದ್ರವ್ಯವನ್ನು ಕೊಡು ಎಂದಾಗ ಬೇಸರಿಸದೆ ಕೊಟ್ಟ. ತಂದೆಯ ಮಾತಿಗೆ ಬೆಲೆಕೊಟ್ಟ. ಸತ್ಯವನ್ನೇ ಹೇಳಬೇಕೆಂಬ ಪಣವನ್ನೂ ತೊಟ್ಟ. ಇದೆಲ್ಲದರಿಂದ ಸಂತುಷ್ಟರಾದ ರುದ್ರದೇವರು ಉಭಯವಿಧ ಸಂಪತ್ತನ್ನು ಕೊಟ್ಟರು.

ಸತ್ಯ, ಪ್ರಾಮಾಣಿಕತೆ, ತ್ಯಾಗದ ಫಲವೇನು? ನಾವು ಏಕೆ ಇವುಗಳನ್ನು ಹೊಂದಿಸಿಕೊಳ್ಳಬೇಕು ಎಂಬುದಕ್ಕೆ ನಾಭಾಗನ ಕಥೆ ಉದ್ಬೋಧಕವಾಗಿದೆ.

## ಭಕ್ತ ಅಂಬರೀಷ

ನಾಭಾಗನಿಗೆ ಅಂಬರೀಷನೆಂಬ ಮಗ ಹುಟ್ಟಿದ. ಅಂಬರೀಷನು ಪರಮ ಧಾರ್ಮಿಕ. ಅತ್ಯಂತ ಭಗವದ್ಭಕ್ತ. ಭಗವದ್ಭಕ್ತರಲ್ಲಿಯೂ ಭಕ್ತಿಯನ್ನು ಮಾಡುತ್ತಿದ್ದ. ಭೌತಿಕವಾದ ಸಂಪತ್ತೆಲ್ಲವನ್ನೂ ನಶ್ವರವೆಂದು ತಿಳಿದಿದ್ದ. ಬಂಗಾರವನ್ನೂ ಕಲ್ಲನ್ನೂ ಸಮಾನವಾಗಿ ಕಾಣುತ್ತಿದ್ದ. ಇಂತಹ ಶ್ರೇಷ್ಠ ತತ್ವಜ್ಞಾನಿಯಾಗಿ ಧರ್ಮಕ್ಕೆ ಚ್ಯುತಿ ಬಾರದಂತೆ ರಾಜ್ಯದ ಪರಿಪಾಲನೆಯನ್ನು ಮಾಡುತ್ತಿದ್ದ.

ಸ ವೈ ಮನಃ ಕೃಷ್ಣಪದಾರವಿಂದಯೋಃ
ವಚಾಂಸಿ ವೈಕುಂಠಗುಣಾನುವರ್ಣನೇ ।
ಕರೌ ಹರೇರ್ಮಂದಿರಮಾರ್ಜನಾದಿಷು
ಶ್ರುತಿಂ ಚಕಾರಾಚ್ಯುತಸತ್ಕಥೋದಯೇ ॥
ಮುಕುಂದಲಿಂಗಾಲಯದರ್ಶನೇ ದೃಶೌ
ತದ್ಭೃತ್ಯಗಾತ್ರಸ್ಪರ್ಶೇಂಗಸಂಗಮ್ ।
ಘ್ರಾಣಂ ಚ ತತ್ಪಾದಸರೋಜಸೌರಭ
ಶ್ರೀಮತ್ತುಳಸ್ಯಾಂ ರಸನಾಂ ತದರ್ಪಿತೇ ॥ — ೯-೪-೧೮-೧೯

ಅಂಬರೀಷನು ಭಕ್ತಿಯುಕ್ತವಾದ ನಿರ್ಮಲ ಮನಸ್ಸಿನಿಂದ ಭಗವಂತನ ಪಾದ ಕಮಲಗಳನ್ನು ನೆನೆಯುತ್ತಿದ್ದ. ಇದರಲ್ಲಿಯ ಆಸಕ್ತಿ ಭೌತಿಕ ಜಗತ್ತಿನಲ್ಲಿರಲಿಲ್ಲ. ಭಗ ವಂತನ ಗುಣವರ್ಣನೆ ಎಂದರೆ ಬಲು ಉತ್ಸಾಹ. ಹರಿಮಂದಿರವನ್ನು ಸ್ವಚ್ಛಗೊಳಿಸು ವುದಕ್ಕಾಗಿ ತನ್ನ ಕೈಗಳನ್ನು ಬಳಸುತ್ತಿದ್ದ. ಹರಿಕಥೆಯನ್ನು ಕೇಳಲು ಅವನ ಕಿವಿಗಳು ನಿಮಿರಿ ನಿಲ್ಲುತ್ತಿದ್ದವು. ಹರಿಮೂರ್ತಿಯನ್ನು ಕಾಣಲು ಕಣ್ಣುಳು ಹವಣಿಸುತ್ತಿದ್ದವು. ಭಗವದ್ಭಕ್ತರ ಪಾದಸೇವೆ ಮಾಡಲು ತನ್ನ ದೇಹವನ್ನು ದಂಡಿಸುತ್ತಿದ್ದ. ಹರಿನಿರ್ಮಾಲ್ಯ ವನ್ನು ಆಘ್ರಾಣಿಸುತ್ತಿದ್ದ. ಭಗವದರ್ಪಿತ ನೈವೇದ್ಯವನ್ನು ಮಾತ್ರ ಸ್ವೀಕರಿಸುತ್ತಿದ್ದ. ಕ್ಷೇತ್ರಗಳಿಗೆ ಪಾದಯಾತ್ರೆ ಮೂಲಕ ಸಾಗುತ್ತಿದ್ದ. ಅಂಬರೀಷ ತಲೆಯನ್ನು ಅಹಂಕಾರ ದಿಂದ ಮೇಲೆತ್ತಲಿಲ್ಲ. ಹರಿಪಾದಗಳಲ್ಲಿ ವಿನಮ್ರನಾಗಿ ನಮಿಸಲು ವಿನಿಯೋಗಿಸಿದ್ದ. ಹೀಗೆ ಭಕ್ತಿಯಿಂದ ಸಕಲ ಅವಯವಗಳಿಂದ ಭಗವಂತನ ಸೇವೆಯನ್ನು ಮಾಡುತ್ತಿದ್ದ.

ಇಂದು ನಾವೇನು ಮಾಡುತ್ತಿದ್ದೇವೆ. ಯಾವುದಕ್ಕಾಗಿ ನಮ್ಮ ಇಂದ್ರಿಯಗಳನ್ನು ಉಪಯೋಗಿಸಿಕೊಳ್ಳುತ್ತಿದ್ದೇವೆ? ಇದನ್ನು ಪ್ರತ್ಯೇಕವಾಗಿ ಬಿಡಿಸಿ ಹೇಳುವ ಅಗತ್ಯವಿಲ್ಲ. ಅಂಬರೀಷನನ್ನು ಮುಂದಿಟ್ಟುಕೊಂಡು ಎಲ್ಲರೂ ತಮ್ಮ ತಮ್ಮ ಆತ್ಮಾವಲೋಕನ ವನ್ನು ಮಾಡಿಕೊಂಡರೆ ಸಾಕು. ನಮ್ಮ ವ್ಯಾಪಾರಗಳು ಅರ್ಥವಾಗುತ್ತವೆ.

ಒಂದು ಬಾರಿ ಅಂಬರೀಷರಾಜನು ದಿನತ್ರಯ ವ್ರತದಲ್ಲಿ ರತನಾಗಿದ್ದನು. ನಿಷ್ಠೆಯಿಂದ ಏಕಾದಶೀ ಅನುಷ್ಠಾನ ಮಾಡಿ ದ್ವಾದಶಿಯ ದಿವಸ ಅನೇಕ ಸದ್ಬ್ರಾಹ್ಮಣರಿಗೆ ಹೇರಳವಾದ ಸಂಪತ್ತನ್ನು ದಾನಮಾಡುತ್ತಿದ್ದನು. ದಾನ ಸ್ವೀಕರಿಸಿದ ಬ್ರಾಹ್ಮಣರು ಭೂರಿ ಭೋಜನವನ್ನು ಮಾಡಿದರು. ಎಲ್ಲರ ಅಂತರ್ಯಾಮಿಯಾದ ಭಗವಂತನು ತೃಪ್ತನಾಗಲಿ ಎಂದು ಕೃಷ್ಣಾರ್ಪಣಮಾಡಿ ತಾನೂ ಭೋಜನ ಮಾಡಲು ಉದ್ಯುಕ್ತನಾದನು. ಆ ಸಂದರ್ಭಕ್ಕೆ ಸರಿಯಾಗಿ ದುರ್ವಾಸರು ಬಂದರು. ಅವರನ್ನೂ ಆದರದಿಂದ ಸ್ವಾಗತಿಸಿದ. ಭೋಜನಮಾಡಬನ್ನಿ! ಎಂದ. ಸ್ನಾನಮಾಡಿ ಬರುತ್ತೇನೆ ಎಂದು ಯಮುನಾನದಿಗೆ ಹೊರಟರು.

ಇಲ್ಲಿ ಅಂಬರೀಷ ದುರ್ವಾಸರ ನಿರೀಕ್ಷೆಯಲ್ಲಿಯೇ ಕುಳಿತ. ದುರ್ವಾಸರು ಎಷ್ಟು ಹೊತ್ತಾದರೂ ಬರಲೇ ಇಲ್ಲ. ದ್ವಾದಶಿಯ ಅರ್ಧಮುಹೂರ್ತ ಉಳಿದಿದೆ. ದ್ವಾದಶೀ ಮೀರಿದರೆ ಹನ್ನೆರಡು ಏಕಾದಶೀಪುಣ್ಯ ನಾಶವಾಗುತ್ತದೆ. ಏನುಮಾಡಲಿ? ಎಂದು ಚಿಂತಿಸಿದ. ಬ್ರಾಹ್ಮಣರನ್ನು ಬಿಟ್ಟು ಉಂಡರೆ ದೋಷ ಬರುವುದು. ಉಪವಾಸವೇ ಇದ್ದರೇ ವ್ರತಲೋಪವಾಗುವುದು. ಧರ್ಮ ಸಂಕಟದಲ್ಲಿ ಸಿಲುಕಿದ. ಆಲೋಚಿಸಿ ಧರ್ಮಲೋಪಬಾರದಂತೆ ಮಧ್ಯಮಾರ್ಗವನ್ನು ಹುಡುಕಿದ.

ಜಲಪ್ರಾಶನ ಮಾಡಿದರೆ ವ್ರತಲೋಪವಿಲ್ಲ. ಬ್ರಾಹ್ಮಣರನ್ನು ಬಿಟ್ಟು ಉಂಡ ಪಾಪವೂ ಇಲ್ಲ. ನೀರಿಗೆ ಇಂತಹ ಶಕ್ತಿ ಇದೆ ಎಂದು ಜ್ಞಾನಿಗಳೂ ಹೇಳುತ್ತಾರೆ.

'ಅಶಿತಾನಶಿತಾ ಯಸ್ಮಾದಾಪೋ ವಿದ್ವದ್ಭಿರೀರಿತಾಃ' ಎಂದು ಭಾವಿಸಿ ಸ್ವಲ್ಪ ನೀರನ್ನು ಕುಡಿದ.

ಕಡುಕೋಪಿ ದುರ್ವಾಸರು ಬಂದರು. ರಾಜನ ಜಲಪಾರಣೆ ವಿಷಯ ತಿಳಿಯಿತು. ದುರ್ವಾಸರು ಕೋಪಗೊಂಡರು. ಕೋಪದಿಂದ ಅವರ ದೇಹವೇ ಕಂಪಿಸಿತು. ಮೊದಲೇ ಹಸಿದ ಬ್ರಾಹ್ಮಣ. ಸಿಟ್ಟಿನಿಂದ ಹುಬ್ಬುಗಂಟಿಕ್ಕಿದರು. ಕೈಮುಗಿದು ನಿಂತ ರಾಜನನ್ನು ನಿಂದಿಸತೊಡಗಿದರು.

ಎಲೈ! ದುಷ್ಟಕ್ಷತ್ರಿಯ! ಸಂಪತ್ತಿನ ಮದವೇರಿದವನೇ! ಅತಿಥಿಗೆ ಅಪಚಾರ ಮಾಡುತ್ತೀಯಾ? ವಿಷ್ಣುಭಕ್ತನೆಂದು ಹಮ್ಮಿನಿಂದ ಬೀಗುತ್ತೀಯಾ? ನಿನಗೆ ಸರಿಯಾದ ಪಾಠ ಕಲಿಸುವೆ ನೋಡು ಎಂದು ತಮ್ಮ ಜಟೆಯನ್ನು ನೆಲಕ್ಕೆ ಅಪ್ಪಳಿಸಿದರು. ಥಟ್ಟನೆ ಪಿಶಾಚವೊಂದು ಹುಟ್ಟಿತು. ಕೈಯಲ್ಲಿ ಖಡ್ಗ ಹಿಡಿದ ವಿಕಾರಾಕೃತಿಯ ಪಿಶಾಚವು ಅಂಬರೀಷನ ಬಳಿ ಬಂದಿತು. ಅಂಬರೀಷನು ಭಕ್ತಿಯಿಂದ ಕೈಮುಗಿದು ಕುಳಿತು ಕೊಂಡಿದ್ದಾನೆ. ಬಾಯ್ತೆರೆದು ನುಂಗಲು ಬಂದರೂ ನಿರ್ವಿಕಾರನಾಗಿ ಕುಳಿತು ಕೊಂಡಿದ್ದಾನೆ.

ಈ ಸಂದರ್ಭದಲ್ಲಿ ರಾಜನ ರಕ್ಷಣೆಗಾಗಿಯೇ ಭಗವಂತನಿಂದ ಆಜ್ಞಪ್ತವಾದ ಸುದರ್ಶನಚಕ್ರ ಹಾರಿ ಬಂತು. ಭಯಂಕರವಾದ ಕೃತ್ಯೆಯನ್ನು ಸುಟ್ಟಿತು. ಸುದರ್ಶನ ಚಕ್ರದ ಮುಂದೆ ಕೃತ್ಯೆಯ ಪರಾಕ್ರಮ ನಡೆಯಲಿಲ್ಲ. ಇಷ್ಟಕ್ಕೆ ಚಕ್ರದ ಆಟವೂ ಮುಗಿಯಲಿಲ್ಲ. ಹರಿಭಕ್ತನಲ್ಲಿ ಸಿಟ್ಟುಮಾಡಿದ ದುರ್ವಾಸರ ಬೆನ್ನಟ್ಟಿತು. ದುರ್ವಾಸರು ಎಲ್ಲಿ ಓಡಿದರೂ ಚಕ್ರ ಓಡಿಸುವುದು ಬಿಡಲಿಲ್ಲ.

ದುರ್ವಾಸರೇ! ಮತ್ತ್ಯಾರೂ ಅಲ್ಲ. ಸಾಕ್ಷಾತ್ ರುದ್ರದೇವರ ಅವತಾರ. ಒಮ್ಮೆ ರುದ್ರದೇವರು ಬ್ರಹ್ಮದೇವರ ಐದನೆಯ ಶಿರವನ್ನು ಕಡಿದರು. ಆ ಬ್ರಹ್ಮಕಪಾಲ ರುದ್ರದೇವರ ಕೈಯನ್ನು ಹಿಡಿಯಿತು. ಕಪಾಲಮೋಚನೆಗಾಗಿ ಭೂಮ್ಯಂತರಿಕ್ಷಗಳನ್ನು ಸುತ್ತಾಡಿದರು. ಆದರೂ ಕಪಾಲ ಬಿಡಲಿಲ್ಲ. ಅದರಂತೆ ರುದ್ರದೇವರ ಅವತಾರಿ ಯಾದ ದುರ್ವಾಸರನ್ನೂ ಚಕ್ರವು ಬೆನ್ನಟ್ಟಿತು. ಇದು ರುದ್ರದೇವರಿಗೆ ಎರಡನೇ ಪಾಠ. 'ಲೋಕ ಸುತ್ತಿದರು ಶೋಕ ತಪ್ಪಲಿಲ್ಲ'. ಎಲ್ಲರಿಗೂ ನಡುಕ ಹುಟ್ಟಿಸುವ ದುರ್ವಾಸರೇ ನಡುಗುವಂತಾಯಿತು. ಬ್ರಹ್ಮದೇವರ ಸತ್ಯಲೋಕಕ್ಕೂ ಓಡಿದರು. ಬ್ರಹ್ಮದೇವರ ಬಳಿ ರಕ್ಷಿಸಿ ಎಂದು ಪ್ರಾರ್ಥಿಸುತ್ತಿದ್ದಾರೆ. ಆ ಸಂದರ್ಭದಲ್ಲಿ ಬ್ರಹ್ಮದೇವರು ಹೇಳುತ್ತಾರೆ–

**ಅಹಂ ಭವೋ ದಕ್ಷಭೃಗು ಪ್ರಧಾನಾಃ**
**ಪ್ರಜೇಶಭೂತೇಶ ಸುರೇಶ ಮುಖ್ಯಾಃ ।**
**ಸರ್ವೇ ವಯಂ ಯನ್ನಿಯಮಂ ಪ್ರಪನ್ನಾಃ**
**ಮೂರ್ಧ್ನ್ಯರ್ಪಿತಂ ಲೋಕಹಿತಂ ವಹಾಮಃ ॥** — ೯-೬-೫೨

ದುರ್ವಾಸರೇ! ಇದು ಸಾಮಾನ್ಯವಾದ ಆಯುಧವಲ್ಲ. ಭಗವಂತನ ಆಯುಧ. ನನ್ನ ಸ್ಥಾನವನ್ನೂ ನನ್ನನ್ನೂ ನೂರುವರ್ಷಗಳ ಬಳಿಕ ಸಂಹರಿಸುವ ಆಯುಧ. ಹರಿಯ ಕೃಪೆಯಿಂದ, ಹರಿಯ ಅಧೀನನಾಗಿ ಸತ್ಯಲೋಕಾಧಿಪನಾಗಿದ್ದೇನೆ. ಹೀಗೆ ನಾನೊಬ್ಬನೆ ಅವನ ಅಧೀನನಾಗಿರುವುದಲ್ಲ. 'ನಾನು, ರುದ್ರ, ದಕ್ಷ, ಭೃಗು

ಮುಂತಾದವರೆಲ್ಲರೂ ಭಗವಂತನ ಅಣತಿಯಂತೆ ಕಾರ್ಯನಿರತರಾಗಿದ್ದೇವೆ.' ಹೀಗಿರಲು ಭಗವಂತನ ವಿರುದ್ಧವಾಗಿ ಚಕ್ರದಿಂದ ರಕ್ಷಿಸುವುದಾದರೂ ಹೇಗೆ? ನನ್ನಿಂದ ಸಾಧ್ಯವಾಗಲಾರದು. ಆದ್ದರಿಂದ ನೀನು ಸಹಸ್ರಬ್ರಹ್ಮಾಂಡಾಧಿಪನಾದ ಭಗವಂತನ ಬಳಿಗೇ ಸಾಗು –ಎಂದು ಬ್ರಹ್ಮದೇವರು ನುಡಿದರು.

ದುರ್ವಾಸರು ದಾರಿಕಾಣದೆ ಕೈಲಾಸಕ್ಕೆ ಧಾವಿಸಿದರು. ರುದ್ರನ ಬಳಿ ಪ್ರಾರ್ಥಿಸಿದರು. ರುದ್ರದೇವರು ಹೇಳುತ್ತಾರೆ–

ವಯಂ ನ ತಾತ ಪ್ರಭವಾಮ ಭೂಮ್ನಿ
ಯಸ್ಮಿನ್ ಪರೇಽನ್ಯೇಽಪ್ಯಜಜೀವಕೋಶಾಃ ।
ಭವಂತಿ ಕಾಲೇ ನ ಭವಂತಿ ಹೀದೃಶಾಃ
ಸಹಸ್ರಶೋ ಯತ್ರ ವಯಂ ಭ್ರಮಾಮಃ ॥ — ೯-೪-೫೫

ನಮ್ಮಿಂದಲೂ ರಕ್ಷಿಸಲು ಸಾಧ್ಯವಿಲ್ಲ. ಭಗವಂತನ ಅಧೀನದಲ್ಲಿ ನಾವೆಲ್ಲರೂ ಇದ್ದೇವೆ. ನನ್ನಂತಹ ಸಾವಿರಾರು ಮಂದಿ ಅವನಿಂದ ಹುಟ್ಟುತ್ತೇವೆ. ಸಾಯುತ್ತೇವೆ. ಅವನ ಆಜ್ಞಾಚಕ್ರದ ಅರದಲ್ಲಿ ಸಿಲುಕಿ ನಾವೂ ತಿರುಗುತ್ತಿದ್ದೇವೆ. ಚಕ್ರದಂತೆ ನಮ್ಮನ್ನು ತಿರುಗಿಸುತ್ತಾನೆ. ಅವನ ಕಾನೂನು ಶಾಸನಗಳಂತೆ ನಾವೆಲ್ಲರೂ ವ್ಯವಹಾರವನ್ನು ನಡೆಸುತ್ತಿದ್ದೇವೆ. ಆದ್ದರಿಂದ ನೀನು ಯಾರಲ್ಲಿ ಎಷ್ಟು ಪ್ರಾರ್ಥಿಸಿದರೂ ನಿನಗೆ ರಕ್ಷಣೆ ದೊರೆಯದು. ನೀನು ವಿಷ್ಣುವಿಗೆ ಶರಣಾಗು ಎಂದು ನುಡಿದರು. ರುದ್ರದೇವರ ಮಾತು ಕೇಳಿದ ದುರ್ವಾಸರು ತಡಮಾಡಲಿಲ್ಲ. ಓಡಿದರು. ವೈಕುಂಠವನ್ನು ಸೇರಿದರು. 'ಕರಿರಾಜವರದನೇ ಇದೋ ವಂದನೆ' ಎಂದು ಮುಗಿಬಿದ್ದರು. 'ನನ್ನನ್ನು ರಕ್ಷಿಸು, ರಕ್ಷಿಸು' ಎಂದು ಪರಿಪರಿಯಾಗಿ ಪ್ರಾರ್ಥಿಸುತ್ತಿದ್ದಾರೆ. ಚಕ್ರದ ತಾಪದಿಂದ ಸಂತಪ್ತರಾಗಿದ್ದಾರೆ. ಅಚ್ಯುತ! ಅನಂತ! ಪ್ರಭೋ! ನಿನ್ನ ಭಕ್ತನಿಗೆ ಅನ್ಯಾಯ ಮಾಡಿದ ಮಹಾಪರಾಧಿಯಾದ ನನ್ನನ್ನು ಇಂದೊಮ್ಮೆ ಕ್ಷಮಿಸು, ಚಕ್ರದಿಂದ ರಕ್ಷಿಸು ಎಂದು ಗೋಳಾಡಿದರು.

## ಭಕ್ತಿಗೆ ಸೋಲುವ ದಯಾಳು

ಈ ಸಂದರ್ಭದಲ್ಲಿ ಭಗವಂತನಾಡಿದ ಮಾತು ಅತ್ಯಂತ ಹೃದ್ಯವಾಗಿದೆ ದುರ್ವಾಸರಿಗೆ ಭಗವಂತ ಹೇಳಿದ–

**ಅಹಂ ಭಕ್ತಪರಾಧೀನೋ ಹ್ಯಸ್ವತಂತ್ರ ಇವ ದ್ವಿಜ.....**
**ಸಾಧುಭಿರ್ಗ್ರಸ್ತಹೃದಯೋ ಭಕ್ತೈರ್ಭಕ್ತಜನಪ್ರಿಯಃ ॥** — ೪-೪-೬೧

**ಯೇ ದಾರಾಗಾರ ಪುತ್ರಾಪ್ತಾನ್**
**ಪ್ರಾಣಾನ್ ವಿತ್ತಮಿದಂ ಪರಮ್ ।**
**ಹಿತ್ವಾ ಮಾಂ ಶರಣಂ ಯಾತಾಃ**
**ಕಥಂ ತಾಂಸ್ತ್ಯಕ್ತುಮುತ್ಸಹೇ ॥** — ೯-೪-೬೫

ದುರ್ವಾಸರೇ, ನಾನು ಭಕ್ತರ ವಿಷಯದಲ್ಲಿ ಅಸ್ವತಂತ್ರನಂತೆ ಇದ್ದೇನೆ. ನಾನು ಅವರ ಅಧೀನ. ಆದ್ದರಿಂದ ನೀನು ನನ್ನ ಬಳಿ ಬಂದರೂ ನನ್ನಿಂದ ಏನೂ ಮಾಡಲಾಗದು ಎಂದು ಕೈಚೆಲ್ಲಿ ಕುಳಿತ. ದುರ್ವಾಸರ ರಕ್ಷಣೆಗೆ ಬರಲಿಲ್ಲ. ದುರ್ವಾಸರ ಅವಸ್ಥೆ ಹೇಳತೀರದು. ಬ್ರಹ್ಮ, ರುದ್ರ, ಹರಿ ಯಾರೂ ರಕ್ಷಿಸುತ್ತಿಲ್ಲ. ಕಂಗಾಲಾಗಿದ್ದಾರೆ. ಭಗವಂತ ತನ್ನ ಭಕ್ತರ ಬಗ್ಗೆ ಬಣ್ಣಿಸುತ್ತಿದ್ದಾನೆ. ಯಾವ ಭಕ್ತರು ನನಗಾಗಿ ಮನೆ, ಮಡದಿ, ಮಕ್ಕಳು ಎಲ್ಲವನ್ನೂ ನನ್ನ ಮುಂದೆ ತೃಣವೆಂದು ಅರಿತು ಎಲ್ಲವನ್ನೂ ತೊರೆದು, ಹರಿಯೇ ಪರದೈವವೆಂದು ಅರಿತು, ವಿತ್ತ-ಚಿತ್ತ ಎಲ್ಲವನ್ನೂ ನನಗಾಗಿ ಒತ್ತೆ ಇಟ್ಟಿದ್ದಾರೆ. ಶರಣಾಗತರಾಗಿದ್ದಾರೆ. ಇಂತಹ ಭಕ್ತರನ್ನು ಹೇಗೆತಾನೆ ಬಿಡಲಿ! ಅಂತಹ ಭಕ್ತರಿಗೆ ಅಪಚಾರಮಾಡಿದ್ದಿ. ಅಂತಹ ನಿನ್ನನ್ನು ನಾನು ರಕ್ಷಿಸುವುದಾದರೂ ಹೇಗೆ? ಆದ್ದರಿಂದ ನಿನ್ನನ್ನು ರಕ್ಷಿಸಲು ನನ್ನಿಂದಲೂ ಸಾಧ್ಯವಿಲ್ಲ ಎಂದ.

## ಭಕ್ತನ ಹಿರಿಮೆ

ಭಗವಂತನ ಈ ಮಾತಿಗೆ ಸಂವಾದಿಯಾಗಿ ಒಂದು ಕಥೆಯನ್ನು ಉಲ್ಲೇಖಿಸಬಹುದು.

ಒಮ್ಮೆ ಪ್ರಕೃತಿಗಳಲ್ಲಿ (ದೇವತೆಗಳಲ್ಲಿ) ಪರಸ್ಪರ ಚರ್ಚೆ ನಡೆಯಿತು. ಯಾವುದು ಶ್ರೇಷ್ಠ?

ಎಲ್ಲೆಡೆಯೂ ವ್ಯಾಪ್ತವಾದ ಆಕಾಶಮಂಡಲ ಶ್ರೇಷ್ಠ! ಇಲ್ಲವೆಂದರು. ಆಕಾಶಕ್ಕಿಂತ ಮೋಡವೇ ಶ್ರೇಷ್ಠ. ಸಮಸ್ತ ಆಕಾಶವನ್ನೂ ಮೋಡವು ಮುಚ್ಚುವುದರಿಂದ ಮೋಡವೇ ಶ್ರೇಷ್ಠ! ಸಲ್ಲದು ಎಂದರು.

ಆ ಮೋಡವನ್ನೂ ಚೆಲ್ಲಾಪಿಲ್ಲಿಗೊಳಿಸಿ ಅತ್ತಿಂದಿತ್ತ ಕೊಂಡೊಯ್ಯುವ ವಾಯುವೇ ಶ್ರೇಷ್ಠ.

ಗಾಳಿಯೂ ಅಲ್ಲ. ಆ ಗಾಳಿಯ ಆಟ ಬೆಟ್ಟದಲ್ಲಿ ನಡೆಯಲಾರದು. ಆದ್ದರಿಂದ ಪರ್ವತಗಳೇ ಶ್ರೇಷ್ಠ. ಅದೂ ಅಲ್ಲ. ಬೆಟ್ಟಗಳು ಎಲ್ಲಿವೆ? ಭೂಮಿಯಲ್ಲಿವೆ. ಬೆಟ್ಟವನ್ನು ಧರಿಸಿದವಳು ಧರಿತ್ರೀ ಆದ್ದರಿಂದ ಧರಣಿಯೇ ಶ್ರೇಷ್ಠ. ಆವಾಗ ಭೂಮಿ ಹೇಳಿತು:

ನಾನು ಎಲ್ಲವನ್ನೂ ಧರಿಸಿರಬಹುದು. ಆದರೆ ನನ್ನನ್ನೂ ತನ್ನ ಉದರದಲ್ಲಿ ಭರದಿಂದ ಧರಿಸಿರುವ ಭಗವಂತನೇ ದೊಡ್ಡವನು.

ಅನಂತರ ನೀನೇ ಶ್ರೇಷ್ಠನೆಂದು ಭಗವಂತನ ಬಳಿ ಎಲ್ಲರೂ ನಡೆದರು. ಆದರೆ ಅಲ್ಲಿ ಭಗವಂತ ಹೇಳಿದ:

ಸಮಸ್ತ ಬ್ರಹ್ಮಾಂಡವನ್ನು ಉದರದಲ್ಲಿ ಧರಿಸಿದ ನನ್ನನ್ನೇ ಹೃದಯದಲ್ಲಿ ಧರಿಸಿದ ನನ್ನ ಭಕ್ತನೇ ನನಗಿಂತಲೂ ಶ್ರೇಷ್ಠ ಎಂದು ಪರಮಾತ್ಮ ಉತ್ತರಿಸಿದನಂತೆ.

ಇಲ್ಲಿಯೂ ಹಾಗೆಯೇ ಆಯಿತು. ದುರ್ವಾಸರು ಎಲ್ಲೆಡೆಯೂ ಸಂಚರಿಸಿದರು. ಬ್ರಹ್ಮರುದ್ರರೆಲ್ಲರೂ ಹರಿಯನ್ನೇ ಶ್ರೇಷ್ಠ ಎಂದು ಹೇಳಿ ಕಳುಹಿಸಿದರು. ಭಗವಂತನ ಬಳಿ ಬಂದರೆ, ಭಗವಂತನು ಭಕ್ತನ ಮುಂದೆ ನಾನೂ ಅಸ್ವತಂತ್ರನಂತೆ. ಆದ್ದರಿಂದ ನಾನೂ ನಿನ್ನನ್ನು ರಕ್ಷಿಸಲಾರೆ. ನೀನು ಅವನ ಬಳಿಯೇ ಸಾಗು. ಅಂಬರೀಷನಿಗೆ ಶರಣುಹೊಗದೆ ಚಕ್ರದಿಂದ ಬಿಡುಗಡೆ ದೊರೆಯದು ಎಂದು ಹೇಳಿದ. ಈ ಮೂಲಕ ತನ್ನ ಭಕ್ತರ ಮಹತ್ತ್ವವನ್ನು ಎತ್ತಿ ತೋರಿಸಿದ.

ಬಳಿಕ ದುರ್ವಾಸರು ಬೇರೆ ದಾರಿ ತೋರದೆ ಅಂಬರೀಷನ ಬಳಿಗೇ ತೆರಳು ವಂತಾಯಿತು. ಯಾರನ್ನು ಕೃತ್ಯೆಯ ಮೂಲಕ ಸಂಹರಿಸಬೇಕೆಂದು ಬಯಸಿದ್ದರೋ ಆ ಅಂಬರೀಷನ ಬಳಿಯೇ ಸಾಗುವಂತೆ ಭಗವಂತ ಮಾಡಿದ. ದುರ್ವಾಸರು ಓಡಿಬಂದರು. ಅಂಬರೀಷನಿಗೆ ಮುಗಿಬಿದ್ದು 'ನನ್ನನ್ನು ರಕ್ಷಿಸು' ಎಂದರು. ಅದರಿಂದ ಅಂಬರೀಷನು ಬಹಳ ಸಂಕೋಚಗೊಂಡ. ಛೆ! ಛೆ! ನಿಮ್ಮಂತಹ ಜ್ಞಾನಿಗಳು ನನ್ನ ಪಾದಕ್ಕೆರಗುವುದು ಸರಿಯಲ್ಲವೆಂದು ಸಂತೈಸಿದ. ನಮಸ್ಕಾರ ಬೇಡವೆಂದು ತಡೆದ. ಕೂಡಲೇ ಚಕ್ರಾಭಿಮಾನಿದೇವತೆಯನ್ನು ಪ್ರಾರ್ಥಿಸುತ್ತಿದ್ದಾನೆ. ತನ್ನನ್ನೇ ಕೃತ್ಯೆಯ ಮೂಲಕ ಸಂಹರಿಸಲು ಉದ್ಯುಕ್ತರಾದ ದುರ್ವಾಸರ ಬಗ್ಗೆ ಸ್ವಲ್ಪವೂ ಸಿಟ್ಟಾಗಲಿಲ್ಲ. ಬಹಳ ಶಾಂತ ಸ್ವಭಾವದವ. ಅವರಿಗಾಗಿ ಪ್ರಾರ್ಥಿಸಿದ:

"ಎಲೈ ದೇವದೇವೋತ್ತಮ! ಶ್ರೀಕೃಷ್ಣ! ನಾನು ಏನಾದರೂ ಸ್ವಧರ್ಮ ಪರಿಪಾಲನೆ ಮಾಡಿದ್ದರೆ, ಉತ್ತಮ ಕೆಲಸಗಳನ್ನು ಮಾಡಿದ್ದರೆ, ಈ ಸದ್ಬ್ರಾಹ್ಮಣರು ಸುದರ್ಶನಚಕ್ರದಿಂದ ಬಿಡುಗಡೆ ಪಡೆಯಲಿ! ಭಗವಂತ ನನ್ನ ವಿಷಯದಲ್ಲಿ ಪ್ರೀತನಾಗಿದ್ದಲ್ಲಿ; ನಾನೇನಾದರೂ ಭಗವಂತನ ಸೇವೆ ಮಾಡಿದ್ದಲ್ಲಿ ಅದರ ಫಲವಾಗಿ ದುರ್ವಾಸರು ಚಕ್ರದಿಂದ ಮೋಚನೆಗೊಳ್ಳಲಿ! ಎಂದ. ತನ್ನ ತಪಸ್ಸು, ಧರ್ಮ, ಶ್ರಮ ಎಲ್ಲವನ್ನೂ ಧಾರೆ ಎರೆದು ದುರ್ವಾಸರು ಸಂಕಟದಿಂದ ಮುಕ್ತನಾಗಲಿ ಎಂದು ಪ್ರಾರ್ಥಿಸಿದ. ಅಂಬರೀಷನ ಭಗವದ್ಭಕ್ತಿ, ತ್ಯಾಗ, ಕರುಣೆ ಅನುಪಮವಾಗಿದೆ.

ಅಂಬರೀಷ ಹೀಗೆ ಪ್ರಾರ್ಥಿಸುವುದೇ ತಡ, ಚಕ್ರ ಮಾಯವಾಗಿದೆ. ದುರ್ವಾಸರು ಕ್ಷೇಮವಾಗಿ ಉಳಿದರು.

ಅಂಬರೀಷನ ಔದಾರ್ಯವನ್ನು ಕಂಡ ದುರ್ವಾಸರು ಹೇಳುತ್ತಿದ್ದಾರೆ– ಎಲೈ ರಾಜನೇ! ವಿಷ್ಣುಭಕ್ತರ ಮಹಿಮೆ ಏನು ಅನ್ನುವುದು ನನಗೆ ಈಗ ತಿಳಿಯಿತು. ನಾನು ಎಷ್ಟೆಲ್ಲಾ ಅಪರಾಧ ಮಾಡಿದರೂ ಅದನ್ನು ಎಣಿಸದೆ ಏನು ತ್ಯಾಗಮಾಡಿದೆ! –'ಅಹೋ ಅನಂತದಾಸಾನಾಂ ಮಹತ್ತ್ವಂ' ಎಂದು ಆಶ್ಚರ್ಯ ವ್ಯಕ್ತಪಡಿಸಿದರು. ಮುಕ್ತಕಂಠದಿಂದ ಪ್ರಶಂಸಿಸಿದ್ದಾರೆ.

ನಿಜವಾದ ವಿಷ್ಣುಭಕ್ತರು ಹೇಗಿರುತ್ತಾರೆ ಎನ್ನುವುದಕ್ಕೆ ಅಂಬರೀಷನ ಕಥೆಯೇ ಸಾಕ್ಷಿಯಾಗಿದೆ. ಭಕ್ತರ, ತ್ಯಾಗ, ಔದಾರ್ಯ, ಭಕ್ತಿ, ಕರುಣೆಗಳನ್ನು ಎತ್ತಿ ತೋರಿಸುತ್ತಿದೆ. ಇಂತಹ ಶಾಂತವಾದ ತ್ಯಾಗಪೂರ್ಣವಾದ ಜೀವನವನ್ನು ನಡೆಸಿದಾಗ ಮಾತ್ರ ನಮ್ಮ ಬದುಕು ಸಾರ್ಥಕ ಎಂಬ ಸಂದೇಶ ಈ ಕಥೆಯಲ್ಲಡಗಿದೆ.

## ಗಂಡಿನಿಂದ ಗಂಡು ಹುಟ್ಟಿದ ಕಥೆ

ಯುವನಾಶ್ವ ಎಂಬ ರಾಜನಿದ್ದ. ಅವನಿಗೆ ನೂರುಮಂದಿ ಹೆಂಡತಿಯರು. ಆದರೂ ಒಬ್ಬ ಮಗನ ತಂದೆ ಎಂದು ಎಂದೂ ಕರೆಸಿಕೊಳ್ಳಲಿಲ್ಲ. ಇದೇ ಅವನ ವೈರಾಗ್ಯಕ್ಕೆ ನಾಂದಿ ಆಯಿತು. ರಾಜ ವಿರಕ್ತನಾಗಿ ರಾಜ್ಯ ತೊರೆದ. ಕಾಡಿಗೆ ನಡೆದ.

ರಾಜನ ಸ್ಥಿತಿ ಕಂಡ ಋಷಿಗಳ ಹೃದಯ ಕರಗಿತು. ಇವನಿಗೆ ಮಕ್ಕಳಾಗುವಂತೆ ಯಾಗವೊಂದನ್ನು ಮಾಡಿದರು. ಆ ಯಾಗದಲ್ಲಿ ರಾಜಪತ್ನಿಗೆ ಕುಡಿಸಲು ಕಲಶ ವೊಂದರಲ್ಲಿ ಮಂತ್ರಪೂತ ಜಲವನ್ನಿಟ್ಟಿದ್ದರು. ಅಂದು ರಾತ್ರಿ ರಾಜನಿಗೆ ಬಹಳ ನೀರಡಿಕೆ ಆಯಿತು. ತೃಷೆಯಿಂದ ಬಳಲಿದ ರಾಜ ವಿಚಾರಮಾಡಲು ಹೋಗಲಿಲ್ಲ. ಮಂತ್ರಪೂತ ಕಲಶವನ್ನು ಕಂಡ. ಕಲಶ ಖಾಲಿಯಾಗುವಂತೆ ನೀರು ಕುಡಿದ. ಹಾಗೆ ಮಲಗಿದ. ಮರುದಿನ ಋಷಿಗಳು ಕಲಶ ಬರಿದಾಗಿರುವುದನ್ನು ಕಂಡರು. ಕಂಗಾಲಾದರು. ಶ್ರಮದಿಂದ ಮಂತ್ರಿಸಿದ್ದ ನೀರು ಖಾಲಿಯಾಗಿದೆ. ಯಾರು ನೀರು ಕುಡಿದದ್ದು? ಮಂತ್ರಪೂತ ಜಲವನ್ನೇಕೆ ಕುಡಿದಿರಿ?! ಎಂದು ಎಲ್ಲರ ಬಳಿ ಪ್ರಶ್ನಿಸಿದರು. ಕೊನೆಗೆ ರಾಜ ನಾನೇ ಕುಡಿದದ್ದು ಎಂದ. ಋಷಿಗಳು ಏನೂ ಮಾಡಲಾಗದೆ ಹರಿಚಿತ್ತವೆಂದರು. ಹರಿಯೇ ಮುಂದಿನ ಕಾರ್ಯವನ್ನು ನೆರವೇರಿಸಲಿ ಎಂದು ಪ್ರಾರ್ಥಿಸಿದರು.

ಕಾಲ ಕಳೆಯಿತು. ಮಂತ್ರವು ಫಲಿಸಿತು. ಯುವನಾಶ್ವನ ಉದರದಲ್ಲಿ ಮಗುವು ಬೆಳೆಯಿತು. ಪ್ರಕೃತಿಯಲ್ಲಿ ವಿಚಿತ್ರ ಪವಾಡ ನಡೆಯಿತು. ತಾಯಿಯ ಉದರದಲ್ಲಿ ಬೆಳೆಯಬೇಕಿದ್ದ ಮಗು ತಂದೆಯ ಉದರದಲ್ಲಿ ಬೆಳೆಯಿತು. ಹೊಸ ಇತಿಹಾಸವನ್ನು ಹುಟ್ಟುಹಾಕಿತು. ತಂದೆಯ ಬಲಬದಿಯ ಕಿಬ್ಬೊಟ್ಟೆಯನ್ನು ಹರಿದು ಹೊರಬಂದಿತು. ಹೀಗಿದ್ದರೂ ಹರಿಯ ಅನುಗ್ರಹಬಲದಿಂದ ರಾಜನಿಗೆ ಏನೂ ಆಗಲಿಲ್ಲ. ಮಗು ಬೆಳೆದದ್ದೇ ಒಂದು ವಿಚಿತ್ರವಾದರೆ, ಹೊಟ್ಟೆ ಸೀಳಿದರೂ ತಂದೆ ಸಾಯದಿರುವುದು ಎರಡನೇ ವಿಚಿತ್ರ.

ಹುಟ್ಟಿದ ಮಗು ಅಳಲು ಆರಂಭಿಸಿತು. ಹುಟ್ಟಿದ ಮಗು ಅತ್ತರೆ ಎಲ್ಲರಿಗೂ ಸಂತೋಷ. ಕುಣಿದಾಡಿದರು. ಆದರೆ ಮಗುವು ಯಾರ ಹಾಲನ್ನುಣಬೇಕೆಂಬ ಪ್ರಶ್ನೆ ಬಂತು. ಗಂಡಿನಿಂದ ಹುಟ್ಟಿದ ಗಂಡುಮಗುವಿಗೆ ಸ್ತನ್ಯಪಾನಕ್ಕೆ ಅವಕಾಶವೆಲ್ಲಿ? ಎಲ್ಲರೂ ಚಿಂತಿಸತೊಡಗಿದರು. ಈ ಸಂದರ್ಭದಲ್ಲಿ ಸಾಕ್ಷಾತ್ ದೇವೇಂದ್ರನೇ ಬಂದ. ಈ ಮಗು ನನ್ನ ಹೆಬ್ಬೆರಳನ್ನೇ ಚೀಪಲಿ; ಅಮೃತರಸವನ್ನು ಇದರಿಂದ ಸವಿಯಲಿ!! ಎಂದು ತನ್ನ ಬೆರಳನ್ನು ಬಾಯಲ್ಲಿ ಇಟ್ಟ. ಅಮೃತರಸವನ್ನು ಕುಡಿಸಿದ. ಋಷಿಗಳು 'ಕಂ ಧಾಸ್ಯತಿ?!' ಎಂದು ಕೇಳಿದಾಗ ಇಂದ್ರದೇವ 'ಮಾಂ ಧಾಸ್ಯತಿ' ಎಂದ. ಅಂದಿನಿಂದ ಆ ಶಿಶುವಿಗೆ 'ಮಾಂಧಾತಾ' ಎಂದೇ ಕರೆದರು.

ಮಾಂಧಾತಾ ದೊಡ್ಡ ಚಕ್ರವರ್ತಿಯಾಗಿ ಬೆಳೆದ. ಅನೇಕ ಯಜ್ಞಗಳನ್ನು ಮಾಡಿದ. ಹೇರಳವಾದ ಸಂಪತ್ತನ್ನು ದಾನಮಾಡಿದ. ತನ್ನ ಸಚ್ಚಾರಿತ್ರ್ಯ ಸನ್ನಡತೆಸದ್ಗುಣಗಳಿಂದ

ಸಮಸ್ತ ಭೂಮಂಡಲವನ್ನೇ ಗೆದ್ದ ರಾಜ ಮಾಂಧಾತ. ಶಸ್ತ್ರಾಸ್ತ್ರಗಳ ಹಿಡಿದು ಕೇವಲ ಹಿಂಸೆಯಿಂದಲೇ ಭೂಮಿಯನ್ನು ಗೆದ್ದದ್ದಲ್ಲ.

'ಏಕ ರಾತ್ರೇಣ ಮಾಂಧಾತಾ ಶೀಲೇನೈವಾಜಯನ್ಮಹೀಂ' ಎನ್ನುತ್ತದೆ ಭಾಗವತ.

ಹಿಂದೆ ಜನ ಹೇಳುತ್ತಿದ್ದರು –ಬ್ರಿಟಿಷ್ ಸಾಮ್ರಾಜ್ಯದಲ್ಲಿ ಸೂರ್ಯ ಕಂತುವುದೇ ಇಲ್ಲ ಎಂದು. ಇದರರ್ಥ: ಸಮಗ್ರ ದೇಶಗಳನ್ನು ಬ್ರಿಟಿಷರು ಸ್ವಾಧೀನಪಡಿಸಿಕೊಂಡಿದ್ದಾರೆ ಎಂದು. ಸೂರ್ಯ ಇಲ್ಲಿ ಮುಳುಗಿದಾಗ ಮತ್ತೊಂದು ಕಡೆ ಹುಟ್ಟಿರುತ್ತಾನೆ. ಸೂರ್ಯನಿರುವ ಪ್ರದೇಶಗಳೆಲ್ಲವೂ ಇವರದ್ದೇ ಎಂದರೆ ಸಮಗ್ರದೇಶವೇ ಇವರದ್ದೆಂದಾಯಿತು. ಹೀಗಿರುವಾಗ ಸೂರ್ಯ ಕಂತುವುದೆಲ್ಲಿ!!

ಹಾಗೆಯೇ ಮಾಂಧಾತ ರಾಜನು ತನ್ನ ಸದ್ಗುಣಗಳಿಂದ ಸಮಗ್ರ ದೇಶಗಳನ್ನು ತನ್ನ ವಶದಲ್ಲಿ ಇಟ್ಟುಕೊಂಡಿದ್ದನು. ಇವನ ಆಧಿಪತ್ಯದಲ್ಲಿಯೂ ಸೂರ್ಯ ಮುಳುಗುವಂತೆಯೇ ಇಲ್ಲ. ಸೂರ್ಯನ ರಶ್ಮಿ ಸಂಚರಿಸುವ ಜಾಗವನ್ನೆಲ್ಲ ತನ್ನ ವಶಮಾಡಿಕೊಂಡ.

ದೇವತೆಗಳ ಮತ್ತು ಋಷಿಗಳ ತಪಸ್ಸಿನ ಫಲವಾಗಿ ಇಂತಹ ಸಾಮರ್ಥ್ಯವನ್ನು ಪಡೆದ ಸಮಸ್ತ ಪ್ರಜೆಗಳಿಗೂ ಸೌಖ್ಯವನ್ನು ಉಂಟುಮಾಡುವ ಚಕ್ರವರ್ತಿ ಮಾಂಧಾತೃವಿನ ಕೀರ್ತಿ ಲೋಕವಿಶ್ರುತವಾದದ್ದು. ಮಾಂಧಾತೃವಿನ ಜನನವೇ ಇಂದಿನ ಎಲ್ಲಾ ವಿಜ್ಞಾನಯುಗಕ್ಕೂ ಸವಾಲು ಎಸಗುವಂತಿದೆ. ಮಂತ್ರಪೂತವಾದ ನೀರಿಗೆ ಗರ್ಭಾಧಾನಶಕ್ತಿ ಇದೆ ಎಂಬುದೇ ಸೋಜಿಗದ ಸಂಗತಿಯಾಗಿರುವಾಗ ಗಂಡು ಗರ್ಭಧರಿಸಿದ ಎಂಬುದು ಯಾರಿಗೆ ಆಶ್ಚರ್ಯವನ್ನುಂಟುಮಾಡುವುದಿಲ್ಲ?! ಅಧ್ಯಾತ್ಮ ಬಲವುಳ್ಳವ ಜಗತ್ತನ್ನೇ ಗೆಲ್ಲಬಲ್ಲ ಎಂಬುದಕ್ಕೆ ಬೇರೆ ದೃಷ್ಟಾಂತ ಬೇಕೇ?!

## ಸೌಭರಿಯ ತಪಸ್ಸು

ಒಂದು ದಿನ ಯಮುನಾನದಿಯ ಬದಿಯಲ್ಲಿ ಸಾಧಕ ಸೌಭರಿಯ ತಪಸ್ಸು ನಡೆದಿದೆ. ಒಳಗಣ್ಣಿನಿಂದ ಹರಿಯನ್ನು ಕಾಣುವ ಋಷಿ, ಋಷಿಯಿಂದ ಹೊರಗಣ್ಣು ಅರಳಿಸಿದ. ಮನಸ್ಸಿನಲ್ಲಿ ಹರಿಯ ರೂಪ ಅಳಿಸಿಹೋಯಿತು. ದೊಡ್ಡ ಮೀನೊಂದು ಹೆಣ್ಣುಮೀನಿನೊಂದಿಗೆ ವಿಹರಿಸುತ್ತಿತ್ತು. ಯಮುನೆಯ ಸ್ವಚ್ಛ ಜಲದಲ್ಲಿ ಕಂಡ ಈ ದೃಶ್ಯ ಋಷಿಯ ನಿರ್ಮಲ ಹೃದಯವನ್ನು ಕದಡಿತು. ತನಗೂ ಸ್ತ್ರೀಸುಖ ಬೇಕೆಂಬ ಬಯಕೆ ಅಂಕುರಿಸಿತು.

ಜ್ಞಾನ–ಧ್ಯಾನ ರತನಾದ ಸೌಭರಿ ಸ್ವಲ್ಪ ಎಡವಿದ. ತಪಸ್ಸಿಗಾಗಿ ಬಂದವ ಮೀನುಗಳ ಪ್ರಣಯವ್ಯವಹಾರವನ್ನು ಕಂಡು ಐಹಿಕ ವಿಷಯಸುಖಕ್ಕೆ ಬಲಿಯಾದ.

ಬಯಕೆಯನ್ನು ಈಡೇರಿಸುವುದಕ್ಕಾಗಿ ಮಾಂಧಾತೃವಿನ ಬಳಿ ಧಾವಿಸಿದ. ಅವನ ಜೀರ್ಣವಾದ ಧನುಸ್ಸಿನಂತೆ ಬಗ್ಗಿದ ದೇಹ, ನೆರಿಗೆ ಹಿಡಿದ ಚರ್ಮ. ಬಡಕಲು ದೇಹದಲ್ಲಿ ಬೆಳ್ಳನೆ ಕೂದಲು. ಅವನ ಬಯಕೆಯ ವೈಪರೀತ್ಯವನ್ನು ಸೂಚಿಸುತ್ತಿತ್ತು.

ಋಷಿಯ ಆಗಮನದಿಂದ ರಾಜ ಸಂತುಷ್ಟನಾದ. ಉಪಚರಿಸಿದ. ನಿಮ್ಮ ಸೇವೆಗೆ ಸದಾ ಸಿದ್ಧ; ಎನಲು ತನ್ನ ಬಯಕೆ ಮುಂದಿಟ್ಟ. ಮಾಂಧಾತೃವಿನ ಮಗಳನ್ನು ಬಯಸಿದ. ಮಾಂಧಾತೃವಿಗೆ ಉಭಯಸಂಕಟ. ವೃದ್ಧ ಋಷಿಗೆ ಕನ್ಯಾದಾನ ಮಾಡದಿದ್ದರೆ ಕ್ರುದ್ಧನಾಗಿ ಶಪಿಸುತ್ತಾನೆ. ಮಾಡಿದರೆ ಮಗಳ ಅವಸ್ಥೆ ಏನು?! ಉಪಾಯ ಮಾಡಿದ. "ಋಷಿಗಳೇ! ಅದಕ್ಕೇನಂತೆ, ನನ್ನ ಅಂತಃಪುರಕ್ಕೆ ನೀವೆ ಸಾಗಿರಿ! ಅಲ್ಲಿ ನನ್ನ ಐವತ್ತುಮಂದಿ ಮಕ್ಕಳಿದ್ದಾರೆ. ಅವರಲ್ಲಿ ನಿಮ್ಮನ್ನು ಯಾರು ಬಯಸುತ್ತಾರೋ ಅವರನ್ನು ಮದುವೆಮಾಡಿಕೊಡುವೆ. ಹುಡುಗಿ ಒಪ್ಪದೆ ಒತ್ತಾಯದ ವಿವಾಹ ನನಗೆ ಸಮ್ಮತವಲ್ಲ. ಹುಡುಗಿ ಒಪ್ಪಿದರೆ ನಮ್ಮ ಅಭ್ಯಂತರವೂ ಇಲ್ಲ!" ಎಂದು ಹೇಳಿದ.

ರಾಜನಿಗೆ ನಿಶ್ಚಯ. 'ವೃದ್ಧ ಸೌಭರಿಯನ್ನು ಸ್ನಿಗ್ಧ ಕನ್ಯೆಯರು ವರಿಸರು! ಎಂದು.

ಸೌಭರಿಗೆ ರಾಜನ ಉಪಾಯ ತಿಳಿಯಿತು. ರಾಜನಿಗೆ ಸರಿಯಾದ ಪಾಠ ಕಲಿಸಬೇಕೆಂದು ತಾನು ಒಂದು ಉಪಾಯ ಹೂಡಿದ. ತಪಶ್ಶಕ್ತಿಯಿಂದ ತಾರುಣ್ಯ ಪಡೆದ. ಸೌಂದರ್ಯ ಶಿಖಾಮಣಿಯಾಗಿ ಅಂತಃಪುರದೆಡೆ ನಡೆದ.

ಚಂಚಲ ಕುಡಿನೋಟದಿಂದ ಅಚಲ ಹೃದಯವನ್ನೂ ಚಲಿಸುವಂತೆ ಮಾಡುವ ಷೋಡಶಿಯರು ಸೌಭರಿಯ ರೂಪಕ್ಕೆ ಮರುಳಾದರು. ಅವನೆಡೆ ಹೃದಯ ಚಲಿಸಿತು. ದೇಹವೂ ಚಲಿಸಿತು. ರಾಜನ ಐವತ್ತೂ ಕನ್ಯೆಯರು ಮುಗಿಬಿದ್ದರು. 'ಈ ತರುಣ ನನಗೆ ಬೇಕು', 'ಈ ನಲ್ಲ ನಿನಗಲ್ಲ; ನನಗೆ ವಲ್ಲಭ' ಎಂದು ಸ್ನೇಹಬಿಟ್ಟು ಜಗಳವಾಡಿದರು. ಇವನೇ ಪತಿಯಾಗಬೇಕೆಂದು ಎಲ್ಲರೂ ಹಟಹಿಡಿದರು.

ಒಬ್ಬ ಕನ್ಯೆಯೂ ವರಿಸಲಾರಳೆಂದು ರಾಜ ಭಾವಿಸಿದರೆ; ಐವತ್ತು ಕನ್ಯೆಯರೂ ವರಿಸಬಯಸಿದರು. ರಾಜ ವಿಧಿಯಿಲ್ಲದೆ ವಿವಾಹಮಾಡಿ ಕೊಟ್ಟ.

ಸೌಭರಿ ತನ್ನ ತಪಸ್ಸಿನಿಂದ ವಾರ್ಧಕ್ಯವನ್ನು ಗೆದ್ದ; ಮೃತ್ಯುವನ್ನು ಮುರಿದ. ಐವತ್ತು ಕನ್ಯೆಯರ ಮನಸ್ಸನ್ನು ತನ್ನೆಡೆ ಸೆಳೆದ. ಒಬ್ಬನಿಗೆ ೫೦ ಮಂದಿ?! ಒಬ್ಬಳನ್ನೇ ಸುಧಾರಿಸುವುದು ಕಷ್ಟ. ಐವತ್ತು ಮಂದಿಯನ್ನು ಸಂಭಾಳಿಸುವುದೆಂದರೆ ಗಗನ ಸರೋವರ ಸ್ನಾನವೇ ಸರಿ! ಸೌಭರಿ ಚಿಂತಿಸಿದ.

ತನ್ನ ತಪಸ್ಸನ್ನು ಮತ್ತೆ ಬಳಸಿಕೊಂಡ. ಐವತ್ತು ದೇಹಗಳನ್ನು ಧರಿಸಿದ. ಐವತ್ತು ಸೌಧಗಳನ್ನು ನಿರ್ಮಿಸಿದ. ಐವತ್ತು ಮಡದಿಯರಲ್ಲಿ ವಿಹರಿಸಿದ.

## ಸೌಭರಿಯು ಹೆಣ್ಣುಮರುಳನೇ!!

ಇದೇನು? ಯೋಗಿಯಾದ ಸೌಭರಿ ಭೋಗಪ್ರಪಂಚದಲ್ಲಿ ಬಿದ್ದ!! ಇಷ್ಟೊ ಮೌಢ್ಯವೇ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಇದು ಸರಿ ಅಲ್ಲ. ಇಲ್ಲಿ ಉದ್ದೇಶ ಬೇರೆ ಇದೆ.

ಸೌಭರಿ ಋಷಿಗಳು ಅಪರೋಕ್ಷಜ್ಞಾನಿಗಳು. ಭಗವದನುಗ್ರಹದಿಂದ ತಮಗೆ ಮುಂದೆ ಐವತ್ತು ಜನ್ಮಗಳು ಬರಲಿವೆ ಎಂದು ತಿಳಿದುಕೊಂಡರು. ಮೋಕ್ಷಕ್ಕಾಗಿ ಮತ್ತೂ ಐವತ್ತು ಜನ್ಮ ಕಳೆಯುವುದು ವ್ಯರ್ಥವೆನಿಸಿತು. ಅದಕ್ಕಾಗಿ ಈ ಉಪಾಯ. ಐವತ್ತು ಸಂಸಾರ ಒಂದೇ ಜನ್ಮದಲ್ಲಿ ನಡೆಸಿದರೆ; ಮುಂದಿನ ಜನ್ಮಕ್ಕೇ ಮೋಕ್ಷ. ಕಾಯುವ ಆವಶ್ಯಕ ೀ ಇಲ್ಲ. ಆದ್ದರಿಂದ ಅನೇಕ ಅಂಶಗಳಿಂದ ಒಬ್ಬನೇ ಜೀವ ಐವತ್ತು ಶರೀರಗಳಲ್ಲಿ ಇದ್ದು ಸಂಸಾರಸುಖವನ್ನು ಮೆದ್ದು, ಐವತ್ತೇ ವರ್ಷಗಳಲ್ಲಿ ಐವತ್ತು ಜನ್ಮದ ಪ್ರಾರಬ್ಧವನ್ನೂ ತೀರಿಸಿಬಿಟ್ಟ.

ಸೌಭರಿಯ ಈ ಚಮತ್ಕಾರ ಇಂದಿನ ವಿಜ್ಞಾನಿಗಳಿಗೆ ನಿಲುಕದ ಸಂಗತಿಯಾಗಿದೆ. ಇಂತಹ ಕಥೆಗಳನ್ನೇ ಅಲ್ಲಗಳೆಯುವ ಪ್ರಯತ್ನ ಮಾಡುತ್ತಾರೆ. ಹಾಸ್ಯ ಮಾಡುತ್ತಾರೆ. ಆದರೆ ಅಧ್ಯಾತ್ಮಸಿದ್ಧಿಯ ಮುಂದೆ ವಿಜ್ಞಾನ, ಖದ್ಯೋತಸದೃಶ ಎಂಬುದಂತೂ ನಿಶ್ಚಯ.

ದ್ರುಪದ ಮಹಾರಾಜನೂ ಅಗ್ನಿಗೆ ಹವಿಸ್ಸನ್ನು ಹಾಕಿ ದ್ರೌಪದಿಯನ್ನು ಪಡೆದ ಕಥೆ ಎಲ್ಲರಿಗೂ ತಿಳಿದಿದೆ. ಅಲ್ಲಿಯೂ ಯಾವ ದೇಹ ಸಂಪರ್ಕವಾಗಲಿ ಇತರ ಭೌತಿಕ ಸಾಮಗ್ರಿಗಳಾಗಲೀ ಕಾರಣವಾಗದೆ ಮಂತ್ರಸಿದ್ಧಿಯಿಂದಲೇ ಮಕ್ಕಳನ್ನು ಪಡೆದ. ಎಲ್ಲ ಶಕ್ತಿಗಳನ್ನು ಮೀರಿ ನಿಂತಿರುವುದು ಮಂತ್ರಶಕ್ತಿ.

## ಸಾರ್ವಭೌಮನಿಗೂ ಸಿಗದ ಸೌಭರಿಯ ಭೋಗ

ಒಮ್ಮೆ ಮಾಂಧಾತೃರಾಜನಿಗೆ ತನ್ನ ಮಕ್ಕಳ ಸ್ಥಿತಿಯನ್ನು ಕಾಣಬೇಕೆನ್ನಿಸಿತು. ಅವರ ಕಷ್ಟದಲ್ಲಿ ತಾನೂ ಭಾಗಿಯಾಗಬೇಕೆಂದು ಸೌಭರಿಯ ಆಶ್ರಮಕ್ಕೆ ಭರದಿಂದ ಸಾಗಿದ. ಅಲ್ಲಿ ಹೋಗಿ ನೋಡುತ್ತಾನೆ, ಚಕ್ರವರ್ತಿಯಾದ ತನಗೂ ಸೌಭರಿಯಂತಹ ಸಂಸಾರ ನಡೆಸಲಾಗದೆಂದು ತೀರ್ಮಾನಿಸಿದ. ಯಾರ ಮನೆಯಲ್ಲಿಯೂ ಕೊರತೆ ಇಲ್ಲದಷ್ಟು ಭೋಗಸಾಮಗ್ರಿಗಳು, ರಾಜರ ಭೋಗದೆದುರು ಋಷಿಭೋಗ ಅಲ್ಪವೆಂದು ಭಾವಿಸಿದ ಮಾಂಧಾತೃವಿನ ಅಹಂಕಾರ ಮುರಿಯಿತು. ತಪಶ್ಶಕ್ತಿಯ ಅರಿವಾಯಿತು. ಆಶ್ಚರ್ಯಚಕಿತನಾಗಿ, ಪಶ್ಚಾತ್ತಾಪದಗ್ಧನಾದ.

ಬಹಳ ಸಮಯದ ಅನಂತರ ಸೌಭರಿ ಹೇಳುತ್ತಾನೆ:

**ಅಹೋ ಇಮಂ ಪಶ್ಯತ ಮೇ ವಿನಾಶಂ**
**ತಪಸ್ವಿನಸ್ಸಚ್ಚರಿತವ್ರತಸ್ಯ ।**
**ಅಂತರ್ಜಲೇ ವಾರಿಚರ ಪ್ರಸಂಗಾತ್**
**ಪ್ರಸ್ರಾವಿತಂ ಬ್ರಹ್ಮ ಚಿರಂ ಧೃತಂ ಯತ್ ।**
**ಸಂಗಂ ತ್ಯಜೇತ ಮಿಥುನವ್ರಜಿನಾಂ ಮುಮುಕ್ಷುಃ**
**ಸರ್ವಾತ್ಮನಾ ನ ವಿಸೃಜೇದ್ಬಹಿರಿಂದ್ರಿಯಾಣಿ ।**
**ಏಕಶ್ಚರಂ ರಹಸಿ ಚಿತ್ತಮನಂತ ಈಶೇ**
**ಯುಂಜೀತ ತದ್‌ರತಿಷು ಸಾಧುಷು ಚೇತ್ ಪ್ರಸಂಗಃ ॥**

ನಾನು ಎಲ್ಲಿಂದ ಎಲ್ಲಿಗೆ ಬಂದೆ. ಉತ್ತಮ ತಪಸ್ವಿಯಾಗಿ ಆಧ್ಯಾತ್ಮಿಕ ಜೀವನವನ್ನು ನಡೆಸಬೇಕೆಂದು ಬಯಸಿ, ಒಂದು ಸಣ್ಣ ಪ್ರಣಯದೃಶ್ಯ ಕಂಡು ಉಂಟಾದ ಮನಸ್ಸಿನ ದೌರ್ಬಲ್ಯದಿಂದ ಎಷ್ಟೆಲ್ಲಾ ಅವಾಂತರ ಸೃಷ್ಟಿಸಿಕೊಂಡೆ. ನಾನು ಒಬ್ಬ ಇದ್ದೆ. ಬಯಕೆಯಿಂದ ಐವತ್ತನ್ನು ಕಟ್ಟಿಕೊಂಡೆ. ಅದರಿಂದ ಐದುಸಾವಿರ ಮಕ್ಕಳನ್ನು ಪಡೆದೆ. ಇನ್ನು ಮಕ್ಕಳ ಉಪನಯನ, ಮದುವೆ ಹೀಗೆ ನಡೆಯುತ್ತಾ ಹೋದರೆ ನನ್ನ ಜೀವನವೇ ಮುಗಿದುಹೋಗುತ್ತದೆ.

ಅಯ್ಯೋ! ನನ್ನ ವಿನಾಶವನ್ನು ನೋಡಿರಿ! ಸಚ್ಚಾರಿತ್ರ್ಯದ ರಕ್ಷಣೆ, ತಪಸ್ಸುಗಳಲ್ಲಿ ರತನಾದ ನನ್ನ ಬಹುಕಾಲದ ತಪಸ್ಸು ಜಾರಿಹೋಯಿತು. ಜಲಚರ ಮತ್ಸ್ಯದ ಪ್ರಣಯ ವ್ಯವಹಾರದರ್ಶನವೇ ಇದಕ್ಕೆ ಕಾರಣವಾಯಿತು. ಸಂಸಾರಸುಖಕ್ಕೆ ಬಾಯ್ಬಿಡುವವ ಮುಕ್ತನಾಗಲಾರ. ಇಂದ್ರಿಯಗಳನ್ನು ಸರ್ವಾತ್ಮನಾ ನಿಗ್ರಹಿಸಿಕೊಂಡವ ಮಾತ್ರ ಮುಕ್ತನಾಗಬಲ್ಲ. ನಿರಂತರ ಹರಿಯುವ ಮನಸ್ಸನ್ನು ಹರಿಯ ಕಡೆ ಹರಿಭಕ್ತರ ಕಡೆ ತಿರುಗಿಸಿ, ಅಮೃತರಸದ ಸವಿಯನ್ನು ಆಸ್ವಾದಿಸಿರಿ!!" ಎಂದು ನುಡಿದ.

ಮನೆಯನ್ನು ಮರೆತ. ಕಾಡಿಗೆ ನಡೆದ. ಆಧ್ಯಾತ್ಮಿಕ ಜೀವನವನ್ನೂ ನಡೆಸಿದ. ಪತ್ನಿಯರೂ ಪತಿವ್ರತೆಯರಾಗಿ ಕಾಡಿಗೆ ಬಂದರು. ಭಕ್ತಿ, ಜ್ಞಾನ, ವೈರಾಗ್ಯಗಳೆಂಬ ಗಂಗೆಯಲ್ಲಿ ಮುಳುಗಿ ಅಧ್ಯಾತ್ಮಜ್ಯೋತಿಯ ಬೆಳಕನ್ನು ಕಂಡರು. ಎಲ್ಲರೂ ಪ್ರಾರಬ್ಧವನ್ನು ಕಳೆದುಕೊಂಡು ಮೋಕ್ಷವನ್ನು ಪಡೆದರು.

ಸೌಭರಿಯ ಈ ಕಥೆ ಅದ್ಭುತವಾದದ್ದು.

ಅವನು ಸಾಂಸಾರಿಕ ಜೀವನವನ್ನು ನಡೆಸಿದ್ದು ಅದ್ಭುತವಾಗಿದೆ. ಆದರಲ್ಲಿಯೂ ವಿಸ್ತಾರವಾದ ಸಂಸಾರವನ್ನು ಸಂಸರ್ಗವನ್ನು ಬೆಳೆಸಿಕೊಂಡು ಒಮ್ಮೆಲೆ ಅದೆಲ್ಲದಕ್ಕೂ ವಿದಾಯ ಹೇಳಿದ್ದು ಮತ್ತೂ ಅದ್ಭುತವಾದದ್ದು.

[ಸೌಭರಿ ಕಂಡ ಸಣ್ಣ ಸಂಸರ್ಗದ ಘಟನೆಯು ಅವನ ತಪಸ್ಸಿಗೆ ಪ್ರತಿಬಂಧಕವಾಯಿತು. ಇನ್ನೂ ನಿರಂತರ ದೂರದರ್ಶನದ ಮುಂದೆ ಕುಳಿತು ನೋಡಬಾರದ ದೃಶ್ಯಗಳನ್ನು ನೋಡಬಯಸುವ ಇಂದಿನವರ ಸಾಧನೆ, ತಪಸ್ಸು ಎಲ್ಲಿಗೆ ಬಂದಿದೆ!

ಇಂದ್ರಿಯಗಳ ಬಯಕೆಗೆ ಓಗೊಟ್ಟರೆ ನಮ್ಮ ಬದುಕು ನರಕದ ಬದುಕು. ಈ ಭವಬಂಧನದಿಂದ ಮುಕ್ತರಾಗಬೇಕಾದರೆ ಕೆಟ್ಟ ದೃಶ್ಯಗಳಿಂದ ದೂರವಿರಬೇಕು ಎಂಬುದೂ ಇಲ್ಲಿಯ ಸಂದೇಶವಾಗಿದೆ.]

## ಅಸತ್ಯ ಹರಿಶ್ಚಂದ್ರ

ಮುಂದೆ ಭಾಗವತ ಹರಿಶ್ಚಂದ್ರನ ಕಥೆಯನ್ನು ನಿರೂಪಿಸುತ್ತದೆ.

ನಾವು ತಿಳಿದಿರುವ ಹರಿಶ್ಚಂದ್ರ, ಸತ್ಯಹರಿಶ್ಚಂದ್ರ. ಆದರೆ ಇಲ್ಲಿ ಬರುವ ಹರಿಶ್ಚಂದ್ರ ಅಸತ್ಯ ಹರಿಶ್ಚಂದ್ರ.

ಈ ಹರಿಶ್ಚಂದ್ರನಿಗೆ ಮಕ್ಕಳಿರಲಿಲ್ಲ. ಮಕ್ಕಳಿಲ್ಲದ ಚಿಂತೆ ಇವನಿಗೆ. ಪುತ್ರಸಂತಾನಕ್ಕಾಗಿ ಹರಕೆ ಹೇಳಿಕೊಂಡ. ವರುಣನ ಬಳಿ ಸಂತಾನಕ್ಕಾಗಿ ಬಯಸಿದ. ಸಂತಾನ ಪ್ರಾಪ್ತಿಯ ಭರದಲ್ಲಿ ಏನೋ ಹರಕೆಯನ್ನು ಹೇಳಿದ.

"ನನಗೆ ಮಗು ಹುಟ್ಟಿದರೆ ಹುಟ್ಟಿದ ಮಗುವನ್ನು ಬಲಿಕೊಡುತ್ತೇನೆ" ಎಂದ.

ಹುಟ್ಟಿದ ಮಗುವನ್ನು ಬಲಿಕೊಡುವುದಾದರೆ ಮಗುವನ್ನು ಪಡೆದಾದರೂ ಏನು ಪ್ರಯೋಜನ?!

ಪುರುಷಮೇಧದ ಹರಕೆ ಹೊತ್ತ ಹರಿಶ್ಚಂದ್ರನಿಗೆ ಮಗು ಹುಟ್ಟಿತು. ವರುಣನು ಪ್ರತ್ಯಕ್ಷನಾದ. 'ನಿನ್ನ ಮಾತಿಗೆ ತಕ್ಕಂತೆ ಮಗುವನ್ನು ಬಲಿಕೊಡು!!' ಎಂದ.

ಅದಕ್ಕೆ ಹರಿಶ್ಚಂದ್ರ ಹೇಳಿದ:

"ಮಗು ಈಗ ಹುಟ್ಟಿದ್ದಷ್ಟೇ! ನಮಗೆ ವೃದ್ಧಿಯಿದೆ. ಈ ಸಂದರ್ಭದಲ್ಲಿ ದಾನ ಅಯುಕ್ತವಾದದ್ದು. ವೃದ್ಧಿ ಮುಗಿದು ಶುದ್ಧವಾಗಲಿ, ಮಗುವನ್ನು ನೀಡುತ್ತೇನೆ" ಎಂದ.

ಹತ್ತು ದಿವಸ ಕಳೆಯಿತು. ವರುಣ ಮತ್ತೆ ಪ್ರತ್ಯಕ್ಷನಾದ. "ಶುದ್ಧಿ ಆಗಿದೆ ಅಲ್ಲವೇ? ಮಗು ಕೊಡು!" ಎಂದ.

ಹರಿಶ್ಚಂದ್ರ ಹೇಳಿದ:

"ಮಗುವಿಗೆ ಇನ್ನು ಹಲ್ಲೇ ಬಂದಿಲ್ಲ. ಹಲ್ಲು ಬರಲಿ ನಿನಗೆ ಒಪ್ಪಿಸುತ್ತೇನೆ" ಎಂದ. ಕೊಡಲು ಮನಸ್ಸಿಲ್ಲದೆ ಮುಂದೂಡಿದ. ವರುಣ ಹಲ್ಲು ಬರುವತನಕ ನಿರೀಕ್ಷಿಸಿ, ಹಲ್ಲು ಬಂದನಂತರ ಬಂದು, ಹಲ್ಲು ಬಂದಿದೆ, ಕೊಡು ಎಂದ. ಅದಕ್ಕೂ ಹೇಳಿದ.

"ಈಗ ಬಂದ ಹಲ್ಲು ದುರ್ಬಲವಾದದ್ದು. ಈ ಹಲ್ಲು ಉದುರಿಹೋಗುತ್ತದೆ. ಸರಿಯಾದ ಅಂಗವಿಲ್ಲದಾಗ ದಾನಮಾಡಿದರೆ ಫಲಿಸದು. ಆದ್ದರಿಂದ ಈ ಹಲ್ಲು ಉದುರಿ ಹೊಸ ಗಟ್ಟಿಹಲ್ಲು ಮೊಳೆಯಲಿ. ದಾನ ನೀಡುವೆ" ಎಂದ. ಮತ್ತೆ ಹಲ್ಲು ಬಂದಮೇಲೆ ಬಂದ. ಆವಾಗ ಮತ್ತೊಂದು ಕಾರಣ ಹೇಳಿದ. ಹೀಗೆ ತನ್ನ ಮಾತನ್ನು ನಡೆಸದ ಅಸತ್ಯ ಹರಿಶ್ಚಂದ್ರ ಇವನು.

ಇವನ ಮಗನಾದ ರೋಹಿತಾಶ್ವ ಬೆಳೆದ. ತನ್ನ ಅಪ್ಪನ ಹರಕೆ ಇವನಿಗೆ ತಿಳಿಯಿತು.

"ನನ್ನನ್ನು ವರುಣನಿಗೆ ಬಲಿಕೊಡುತ್ತಾರೆ"ಂದು ತಿಳಿದು ಕಾಡಿನಲ್ಲಿ ತಲೆಮರೆಸಿಕೊಂಡ. ತೀರ್ಥಯಾತ್ರೆಗಳನ್ನು ಮಾಡಿದ.

## ಶುನಶ್ಶೇಫನ ಮಹತ್ತ್ವ

ಇತ್ತ ತಂದೆ ಪ್ರತಿಜ್ಞೆಯನ್ನು ಪೂರೈಸದೆ ವರುಣನ ಅವಗ್ರಹಕ್ಕೆ ಗುರಿಯಾದ. ಜಲೋದರ ರೋಗಕ್ಕೆ ತುತ್ತಾದ. ಇದನ್ನು ತಿಳಿದ ರೋಹಿತಾಶ್ವ ಮನೆಗೆ ಬಂದ.

ತಂದೆಯ ಹರಕೆಯನ್ನು ಪೂರೈಸಲು ನಿಶ್ಚಯಿಸಿದ. ಅಜೀಗರ್ತನೆಂಬ ಋಷಿಗೆ ನೂರು ಹಸುಗಳನ್ನು ಕೊಟ್ಟು, ಅವನ ಮಧ್ಯಮ ಸುತನಾದ ಶುನಶ್ಶೇಫನನ್ನು ಕೊಂಡು ಕರೆತಂದ. ನನ್ನ ಬದಲಿಗೆ ಇವನನ್ನು ಬಲಿಕೊಡು ಎಂದು ತಂದೆಗೆ ಪುರುಷಮೇಧ ಮಾಡಲು ಒಪ್ಪಿಸಿದ. ತನ್ನನ್ನು ಉಳಿಸೆಂದು ಪ್ರಾರ್ಥಿಸಿದ.

ಅದರಂತೆ ಪುರುಷಮೇಧವನ್ನು ಮಾಡಲಿಕ್ಕಾಗಿ ಶುನಶ್ಶೇಫನನ್ನು ಕರೆದುಕೊಂಡು ಹೋದರು. ಶುನಶ್ಶೇಫನು ನನ್ನನ್ನು ಬದುಕಿಸಿ ಎಂದು ವಿಶ್ವಾಮಿತ್ರರ ಬಳಿ ಪ್ರಾರ್ಥಿಸಿದ. ವಿಶ್ವಾಮಿತ್ರರು ಕರುಣೆಯಿಂದ ಮಂತ್ರ ಒಂದನ್ನು ಉಪದೇಶಿಸಿದರು. ಅದರ ಪ್ರಭಾವದಿಂದ ದೇವತೆಗಳಲ್ಲಿ ತನ್ನ ಪ್ರಾರ್ಥನೆಯನ್ನು ಸಲ್ಲಿಸಿದ. ದೇವತೆಗಳು ಅಭಯದಾನ ಮಾಡಿದರು. ಶುನಶ್ಶೇಫ ತನ್ನ ಭಕ್ತಿ ಪ್ರಾರ್ಥನೆಗಳಿಂದ ಬಲಿಯಾಗದೆ ಉಳಿದ. ಹರಿಶ್ಚಂದ್ರನನ್ನು ರೋಗದಿಂದಲೂ ಉಳಿಸಿದ. ಹರಕೆಯಿಂದಲೂ ರಕ್ಷಿಸಿದ. ನರಮೇಧ ನಿಲ್ಲುವಂತೆ ಮಾಡಿದ. ವಿಶ್ವಾಮಿತ್ರರ ಮಹಿಮೆ, ಅವರ ಮಂತ್ರಸಿದ್ಧಿಯ ಮಹಿಮೆ ಎಲ್ಲವನ್ನೂ ತೋರಿಸಿದ ಶುನಶ್ಶೇಫ ಮಹಾನ್ ವ್ಯಕ್ತಿಯಾದ.

ಮುಂದೆ ಇದೇ ಅಸತ್ಯ ಹರಿಶ್ಚಂದ್ರನೇ ದೊಡ್ಡ ತ್ಯಾಗಿಯಾದ. ತನ್ನ ಮಾತನ್ನು ಉಳಿಸಿಕೊಳ್ಳುವುದಕ್ಕಾಗಿ, ತನ್ನ ಪತ್ನಿ, ಪುತ್ರ ಎಲ್ಲರನ್ನೂ ಬಿಟ್ಟ. ತನ್ನ ಮೊದಲನೆಯ ವ್ಯಕ್ತಿತ್ವವನ್ನು ಬಿಟ್ಟು ಸಂಪೂರ್ಣ ಬದಲಾದ. ಸತ್ಯಕ್ಕಾಗಿ ಸರ್ವಸ್ವ ದಾನಮಾಡಿದ. ಅವನ ಹೆಸರು ಇತಿಹಾಸದಲ್ಲಿ ಪ್ರಸಿದ್ಧವಾಗುವಂತೆ ಸತ್ಯಹರಿಶ್ಚಂದ್ರನಾಗಿ ಮೆರೆದ.

ಹಿಂಸೆ ಕ್ರೌರ್ಯಗಳಿಂದ ಜಗತ್ತನ್ನೇ ಘಾಸಿಗೊಳಿಸಿ ಅನಂತರ ಪಶ್ಚಾತ್ತಾಪ ಹೊಂದಿದ ಅಶೋಕ ಚಕ್ರವರ್ತಿಯಂತೆ ಈ ಸತ್ಯಹರಿಶ್ಚಂದ್ರನೂ ಮೊದಲು ವರುಣನಿಗೆ ಮಾತುಕೊಟ್ಟು, ತನ್ನ ಮಗನ ಬದಲು ಮತ್ತೊಬ್ಬರ ಮಗುವನ್ನು ಬಲಿಕೊಡುವಷ್ಟು ಕ್ರೂರನಾಗಿದ್ದವ. ಶುನಶ್ಶೇಫ ವಿಶ್ವಾಮಿತ್ರರ, ದೇವತೆಗಳ ಪ್ರಭಾವದಿಂದ ಸಂಪೂರ್ಣ ಬದಲಾದ. ತನ್ನ ಜೀವನವನ್ನೂ ಸತ್ಯಕ್ಕಾಗಿ ಮುಡಿಪಿಟ್ಟ. ಸತ್ಯಹರಿಶ್ಚಂದ್ರನೆಂದು ಖ್ಯಾತಿಗಳಿಸಿದ.

ಶುನಶ್ಶೇಫನ ವ್ಯಕ್ತಿತ್ವ ಅಸದೃಶವಾಗಿ ಇಲ್ಲಿ ಮೂಡಿದೆ. ತ್ಯಾಗಿಯಾದ ಪ್ರಾಮಾಣಿಕನಾದ ಈ ಶುನಶ್ಶೇಫನನ್ನು ವಿಶ್ವಾಮಿತ್ರರು ತನ್ನ ಮಗನನ್ನಾಗಿಯೇ ಸ್ವೀಕರಿಸುತ್ತಾರೆ.

ಹೀಗೆ ನವಮ ಸ್ಕಂಧದ ಒಂದೊಂದು ಕಥೆಗಳೂ ಉತ್ತಮ ಸ್ಫೂರ್ತಿಯನ್ನು ನೀಡುತ್ತವೆ. ತ್ಯಾಗ, ಪ್ರಾಮಾಣಿಕತೆ, ಭಕ್ತಿ, ಜ್ಞಾನ, ವೈರಾಗ್ಯ, ಸತ್ಯ, ಮಂತ್ರಸಿದ್ಧಿ –ಮುಂತಾದ ಅನೇಕ ವಿಷಯಗಳಲ್ಲಿ ಬೆಳಕನ್ನು ಚೆಲ್ಲುವ ಕಥೆಗಳಾಗಿವೆ.

## ಸಗರನ ಕಥೆ

ಹರಿಶ್ಚಂದ್ರನ ಪರಂಪರೆಯಲ್ಲಿಯೇ ಬಾಹುಕ ಎಂಬ ರಾಜನಿದ್ದನು. ಇವನು ಮುದುಕನಾದ. ಮ್ಲೇಚ್ಛರು ಹೂಣರೇ ಮುಂತಾದ ವಿದೇಶೀಯರು ಇವನ

ರಾಜ್ಯವನ್ನು ಅಪಹರಿಸಿದರು. ರಾಜ್ಯ ಕಳೆದುಕೊಂಡು ಕಾಡಿಗೆ ನಡೆದ. ಕಾಡಿನಲ್ಲಿ ಮೃತನಾದ. ಅದನ್ನು ನೋಡಿ ಅವನ ಗರ್ಭಿಣಿ ಹೆಂಡತಿಯು ಸಹಗಮನ ಮಾಡಹೋದಳು. ಆ ಸಂದರ್ಭದಲ್ಲಿ ಔರ್ವಮುನಿಗಳು ಬಂದರು. 'ಗರ್ಭಿಣಿಯಾದ ನೀನು ಸಹಗಮನ ಮಾಡಬಾರದು. ವಂಶ ಬೆಳೆಸುವ ಪುತ್ರನನ್ನು ಹಡೆಯಬೇಕು' ಎಂದು ತಡೆದರು. ಇವರು ತಡೆದರೂ ಇವರ ಸವತಿಯರು ಮಾತ್ಸರ್ಯದಿಂದ ಗರ್ಭನಾಶ ಮಾಡಲು ವಿಷವುಣಿಸಿದರು. ಕಷ್ಟದಲ್ಲಿ ಬದುಕಿದ ಬಾಹುಕನ ಮಡದಿ ವಿಷಸಹಿತವಾದ ಮಗುವನ್ನೇ ಹಡೆದಳು. ವಿಷಸಹಿತನಾಗಿ ಹುಟ್ಟಿದ್ದರಿಂದ ಅವನು 'ಸಗರ'ನೆಂದೇ ಪ್ರಸಿದ್ಧನಾದ.

ಸಗರ ಚಕ್ರವರ್ತಿಯಾದ. ವಿದೇಶೀಯರ ಮೇಲೆ ಆಕ್ರಮಣ ನಡೆಸಿದ. ಮ್ಲೇಚ್ಛರು, ಬರ್ಬರರು, ಹೂಣರು ಇವರೆಲ್ಲರಿಂದ ಅಪಹೃತವಾದ ರಾಜ್ಯವನ್ನು ತನ್ನ ಸಾಮರ್ಥ್ಯದಿಂದ ಮತ್ತೆ ಪಡೆದ. ಅವರೆಲ್ಲರನ್ನೂ ಕೊಲ್ಲಲು ಹೊರಟಾಗ ವಸಿಷ್ಠರು ತಡೆದರು. ಶರಣಾಗತರಾದವರನ್ನು ಕೊಲ್ಲಲಿಲ್ಲ. ಆದರೆ ಅಪರಾಧಿಗಳಾದ ಅವರಿಗೆ ವಿಕಾರರೂಪಗಳನ್ನು ಸೃಷ್ಟಿಸಿದ. ಕೆಲವರ ತಲೆ ಬೋಳಿಸಿ ಗಡ್ಡ ಬಿಡಿಸಿದ. ಕೆಲವರಿಗೆ ಮೀಸೆಗಡ್ಡಗಳನ್ನು ಬೋಳಿಸಿ ತಲೆಕೂದಲನ್ನು ಮಾತ್ರ ಬಿಟ್ಟ. ಹೀಗೆ ನಾನಾ ತರದ ವಿಕಾರಗಳನ್ನು ಮಾಡಿದ–

**ಮುಂಡಾನ್ ಶ್ಮಶ್ರುಧರಾನ್ ಕಾಂಶ್ಚಿತ್**
**ಮುಕ್ತಕೇಶಾಂಶ್ಚ ಮುಂಡಿತಾನ್**

–ಮುಂತಾಗಿ ಶಿಕ್ಷೆ ವಿಧಿಸಿದ. ಅವರ ಪರಾಜಯವನ್ನು ವಿಕೃತ ವೇಷಗಳ ಮೂಲಕ ಸೂಚಿಸಿದ.

ಅಂದು ಮ್ಲೇಚ್ಛ–ಹೂಣರಿಗೆ ಪರಾಜಯ ಸೂಚಕವಾಗಿ ನೀಡಿದ ಶಿಕ್ಷೆಯನ್ನು ನಾವು ಇಂದು ಉತ್ತಮವೇಷವೆಂದು ಪರಿಗಣಿಸಿದ್ದೇವೆ. ಕ್ರಾಫ್ ಕಟಿಂಗ್ ಮುಂತಾಗಿ ವಿಕಾರಗಳನ್ನೇ ಫ್ಯಾಷನ್ ಎಂದು ತಿಳಿದಿದ್ದೇವೆ. ಆದರೆ ಇದು ಪಾಶ್ಚಾತ್ಯರ ಪರಾಜಯದ ವಿಕೃತವೇಷ ಎಂದು ಸ್ಪಷ್ಟವಾಗಿ ಭಾಗವತ ನಿರೂಪಿಸಿದೆ.

ಸಗರರಾಜ ಅಶ್ವಮೇಧಯಾಗ ಮಾಡಬಯಸಿದ. ಪ್ರಾರಂಭಿಸಿದ. ಕೊನೆಗೆ ಯಜ್ಞದ ಕುದುರೆಯನ್ನು ಇಂದ್ರದೇವರು ಅಪಹರಿಸಿದರು. ಪಾತಾಳದಲ್ಲಿರುವ ಕಪಿಲನ ಬಳಿ ಕುದುರೆಯನ್ನು ಕಟ್ಟಿ ಓಡಿದರು.

ಇತ್ತ ಸಗರರಾಜನ ೬೦,೦೦೦ ಮಕ್ಕಳು ಯಜ್ಞಾಶ್ವಕ್ಕಾಗಿ ಭೂಮಿಯನ್ನು ಕೊರೆದುಕೊಂಡು ಪಾತಾಳಕ್ಕಿಳಿದರು. ಕಪಿಲನ ಬಳಿ ಇದ್ದ ಕುದುರೆಯನ್ನು ಕಂಡರು. ಕಂಡು ಕ್ರುದ್ಧರಾಗಿ ಹೇಳಿದರು.

**ಏಷ ವಾಜಿಹರಶ್ಚೋರ ಆಸ್ತೇ ಮೀಲಿತಲೋಚನಃ ।**
**ಹನ್ಯತಾಂ ಹನ್ಯತಾಂ ಪಾಪಃ ॥**

"ಕುದುರೆಯನ್ನು ಕದ್ದ ಕಳ್ಳ, ಧ್ಯಾನಸ್ಥ ಯೋಗಿಯಂತೆ ನಾಟಕ ಮಾಡುತ್ತಿದ್ದಾನೆ. ಈ ಕಳ್ಳನನ್ನು ಕೊಲ್ಲಿರಿ ಕೊಲ್ಲಿರಿ!!" ಎಂದು ಕಪಿಲದೇವನನ್ನೆ ಕೊಲ್ಲ ಬೇಕೆಂದು

ಸಗರಪುತ್ರರು ಆಕ್ರಮಣ ಮಾಡಹೋದರು. ಆಗ ಕಪಿಲ ಕೆಂಗಣ್ಣನ್ನು ತೆರೆದ. ಕ್ಷಣದಲ್ಲಿ ಸಗರನ ಅರವತ್ತುಸಾವಿರ ಪುತ್ರರು ಭಸ್ಮಾವಶೇಷರಾದರು. ಅವರ ಅಹಂಕಾರವೇ ಅವರ ಮುಳುವಿಗೆ ಕಾರಣವಾಗಿದೆ.

## ಕಪಿಲರ ಬಳಿ ಪ್ರಾರ್ಥನೆ ಮತ್ತು ಸಂದೇಶ

ಅನಂತರ ಸಗರನ ಮೊಮ್ಮಗ ಅಂಶುಮಂತ ಹುಡುಕಿಕೊಂಡು ಬಂದ. ಕಪಿಲನನ್ನೂ ಕಂಡ, ಕುದುರೆಯನ್ನೂ ಕಂಡ. ಆದರೆ ಅವರಂತೆ ದುಡುಕಲಿಲ್ಲ. ಕಪಿಲದೇವರ ಬಳಿ ಉತ್ತಮ ಪ್ರಾರ್ಥನೆ ಸಲ್ಲಿಸಿದ.

ಭಗವಂತನೇ! ಅಜ್ಞಾನಿಗಳು ನಿನ್ನನ್ನು ಕಾಣಲಾರರು. ಜ್ಞಾನಿಗಳಿಂದಲೂ ನಿನನ್ನು ಸಂಪೂರ್ಣ ತಿಳಿಯಲಾಗದು. ೯ಗಿರಲು ಇಂದ್ರಿಯಗಳಿಂದ ಭೌತಿಕ ಆಕರ್ಷಣೆಗೆ ಒಳಗಾದ ನಮ್ಮಂಥವರು ನಿನ್ನನ್ನು ತಿಳಿಯುವುದೆಂತೋ!! ಕರುಣಾಳು ಭಗವಂತನೇ! ನಮ್ಮಂತಹ ಅಜ್ಞಾನಿಗಳ ಕತ್ತಲಿನ ಹೃದಯ ಗುಹೆಯಲ್ಲಿ; ಜ್ಞಾನದ ಪಂಜನ್ನು ಹೊತ್ತಿಸಲು ಬಂದ ಪರಂಜ್ಯೋತಿ ನೀನು! ಜ್ಞಾನೋಪದೇಶಕ್ಕಾಗಿಯೇ ಕಪಿಲ ರೂಪವನ್ನು ಧರಿಸಿರುವಿ. ನಿನ್ನ ಮಹಿಮೆ, ಲೀಲೆಗಳನ್ನು ಅರಿಯದ ಮಕ್ಕಳು ಮೌಢ್ಯದಿಂದ ಅಪರಾಧವೆಸಗಿದ್ದಾರೆ. ಆ ಸಗರನ ಮಕ್ಕಳನ್ನು ರಕ್ಷಿಸು! ಎಂದು ಭಕ್ತಿರಸಭರಿತವಾದ ವಾಕ್ಕುಸುಮಗಳಿಂದ ಕಪಿಲನನ್ನು ಆರಾಧಿಸಿದಾಗ ಹರಿ ಕರುಣೆಯ ಕಡಲಿನ ದಡ ಒಡೆಯಿತು. ಯಜ್ಞಪಶುವನ್ನು ಕೊಟ್ಟ. ಮಕ್ಕಳ ಉದ್ಧಾರದ ಬಗೆಯನ್ನು ತಿಳಿಸಿಕೊಟ್ಟ. ಇದೇ ಭಗವಂತನ ಗುಣ.

**ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ ॥**

ಸಗರನ ಮಕ್ಕಳು ಅಪರಾಧವೆಸಗಿದಾಗ ಕೋಪಾಗ್ನಿಯಿಂದ ಭಸ್ಮಮಾಡಿದ. ಅಂಶುಮಂತ ಪ್ರಾರ್ಥನೆ ಸಲ್ಲಿಸಿದಾಗ ಅವನ ಭಕ್ತಿ ಜ್ಞಾನಕ್ಕೆ ಮೆಚ್ಚಿ ಯಜ್ಞಾಶ್ವವನ್ನು ನೀಡಿದ. ಅರುವತ್ತುಸಹಸ್ರ ಸಗರಪುತ್ರರಿಗೆ ಹರಿಪಾದೋದಕಸ್ಪರ್ಶವಾಗಬೇಕು. ಅದರಿಂದ ಅವರ ಸದ್ಗತಿ ಎಂದು ತಿಳಿಸಿದ.

ನಾವು ಸಹ ಸಂಸಾರವೆಂಬ ದಾವಾಗ್ನಿಯಲ್ಲಿ ಸುಟ್ಟು ಭಸ್ಮವಾಗುತ್ತಿದ್ದೇವೆ. ಬಗೆಬಗೆಯ ಕಷ್ಟಗಳೇ ಬೆಂಕಿಯಂತಿವೆ. ಈ ಭವಬಂಧನದಿಂದ ಬೆಂದು ಬಸವಳಿದ ನಮಗೆ ಸದ್ಗತಿಯಾಗಬೇಕಿದ್ದರೆ ಜ್ಞಾನಗಂಗೆ ನಮ್ಮ ಜೀವನದಲ್ಲಿ ಹರಿಯುಬೇಕು. ಸಗರಪುತ್ರರ ಉದ್ಧಾರಕ್ಕೆ ಹರಿಪಾದೋದ್ಭವೆಯಾದ ಗಂಗೆಯ ಸ್ಪರ್ಶವಾಗಬೇಕು ಎಂದು ಕಪಿಲ ಹೇಳಿದಂತೆ ಸಂಸಾರ ದುಃಖಾಗ್ನಿಯಿಂದ ಬೆಂದ ನಮಗೂ ತತ್ವಜ್ಞಾನದ ಗಂಗೆಯ ಸ್ಪರ್ಶವಾಗಬೇಕು. ಈ ಗಂಗೆ ನಮ್ಮ ಜೀವನದಲ್ಲಿ ಹರಿದಾಗ ಮಾತ್ರ ದೋಷನಿರ್ಮುಕ್ತರಾಗಿ ಮುಕ್ತರಾಗಬಹುದು. ಜ್ಞಾನವಿಲ್ಲದೆ ಮೋಕ್ಷವಿಲ್ಲ. ಮೋಕ್ಷ ವಿಲ್ಲದೆ ದುಃಖದಿಂದ ಬಿಡುಗಡೆಯಿಲ್ಲ. ಅದಕ್ಕಾಗಿ ಜ್ಞಾನಗಂಗೆಯ ಹಂಬಲ ಬೇಕು. ಪ್ರಯತ್ನ ಬೇಕು ಎಂಬ ಸಂದೇಶ ಇಲ್ಲಿ ಅಡಕವಾಗಿದೆ.

ಅಂಶುಮಂತ ಯಜ್ಞಾಶ್ವವನ್ನು ತಂದ. ಸಗರನ ಯಜ್ಞ ಪೂರ್ಣವಾಯಿತು. ಸಗರನಿಗೆ ಇಷ್ಟು ಸಮಯಕ್ಕೆ ಸಾಕಷ್ಟು ವೈರಾಗ್ಯ ಬಂದಿತ್ತು. ಅಂಶುಮಂತನಿಗೆ ರಾಜ್ಯವಿತ್ತ ವನಕ್ಕೆ ಚಿತ್ತೈಸಿದ.

## ಕೇವಲ ಸಂಕಲ್ಪ ಸಾಲದು

ಅನಂತರ ಕಪಿಲರ ಉಪದೇಶದಂತೆ ಅಂಶುಮಂತ ದೇವಗಂಗೆಯನ್ನು ತರಲು ಪ್ರಯತ್ನಪಟ್ಟ. ಪ್ರಯತ್ನ ಮಾತ್ರ. ಕಾರ್ಯಗತವಾಗಲಿಲ್ಲ. ಅವನ ಮಗ ದಿಲೀಪ ನೆಂಬ ಪ್ರಸಿದ್ಧ ರಾಜ ಬಂದ. ಗಂಗೆಗಾಗಿ ಕಠಿಣ ತಪಸ್ಸನ್ನಾಚರಿಸಿ ಬೆಂದ. ಆದರೂ ಗಂಗೆಯನ್ನು ಪೂರ್ವಜರ ಮೇಲೆ ಹರಿಸಲು ಸಮರ್ಥನಾಗಲಿಲ್ಲ. ಇವರ ಜೀವನ 'ಗಂಗೆಯನ್ನು ತರಬೇಕು' ಎಂಬ ಸಂಕಲ್ಪದಲ್ಲಿಯೇ ಕಳೆಯಿತು.

ನಮ್ಮ ಸ್ಥಿತಿಯೂ ಹೀಗೆಯೇ. ನಾವು ಬಹಳ ಸಂಕಲ್ಪಗಳನ್ನು ಮಾಡುತ್ತಿರುತ್ತೇವೆ. ಜೀವನದಲ್ಲಿ 'ಹೀಗೆ ಮಾಡಬೇಕು' 'ಹಾಗೆ ಮಾಡಬೇಕು' ಎಂದು ಸಂಕಲ್ಪವನ್ನು ಮಾಡುತ್ತೇವೆ. 'ಪುಣ್ಯಕಾಲವೆಲ್ಲ ಸಂಕಲ್ಪದಲ್ಲಿ ಹೋಯಿತು' ಎಂಬಂತೆ ಕೇವಲ ಸಂಕಲ್ಪದಲ್ಲಿಯೇ ಕಳೇವರವನ್ನು ಕಳೆದುಕೊಳ್ಳುತ್ತೇವೆ. ಸಾಧನೆಯಲ್ಲಲ್ಲ! ದಿಲೀಪ, ಅಂಶುಮಂತರ ಸಂಕಲ್ಪದಂತೆಯೇ ನಮ್ಮ ಸಂಕಲ್ಪವಾಗಿದೆ.

ಅನಂತರ ಭಗೀರಥನೆಂಬ ಸಾಧಕ ಕ್ಷತ್ರಿಯ ಬಂದ. ಗಂಗೆಯನ್ನು ಕುರಿತು ಉಗ್ರ ತಪಸ್ಸನ್ನಾಚರಿಸಿದ. ದೇವಿ ಪ್ರತ್ಯಕ್ಷಳಾಗಿ ಬಂದಾಗ ಉಪಚರಿಸಿದ. ಸಂತುಷ್ಟಳಾದ ಗಂಗೆ "ನಾನು ಭುವಿಗೆ ಬರಲು ಸಿದ್ಧ. ಆದರೆ ನನ್ನ ಭಾರವನ್ನು ಭರಿಸುವವ ರಾರು?" ಎಂದಳು. ರುದ್ರದೇವರ ಹೆಸರನ್ನು ಹೇಳಿದ.

ರುದ್ರದೇವರನ್ನು ಕುರಿತು ತಪಸ್ಸನ್ನಾಚರಿಸಿದ. ರುದ್ರ ತಪಸ್ಸಿಗೆ ಮೆಚ್ಚಿದ. ಅಚ್ಯುತನ ಪಾದಚ್ಯುತಳಾದ ಗಂಗೆಯನ್ನು ಧರಿಸುವೆನೆಂದು ಹರಸಿದ.

ಭಗೀರಥನ ಸಾಧನೆಯ ರಥ ಎರಡು ಹೆಜ್ಜೆ ಮುಂದಿಟ್ಟಿತು.

ಗಂಗೆ ವೇಗವಾಗಿ ಹರಿದು ಬಂದಳು. ಗರ್ವದಿಂದ ಹರನನ್ನು ಭೇದಿಸಲು ಬಂದಾಗ, ಅವಳನ್ನು ಜಟಾಜೂಟದಲ್ಲಿ ಬಂಧಿಸಿದ. ಅವರೀರ್ವರ ತಿಕ್ಕಾಟದಲ್ಲಿ ಭಗೀರಥನ ಸಾಧನರಥ ನಿಂತಿತು. ಆದರೂ ಹಟ ಬಿಡಲಿಲ್ಲ. ಮತ್ತೆ ದೇವತೆಗಳನ್ನು ಪೂಜಿಸಿದ. ಹರನನ್ನು ಒಲಿಸಿದ. ರಥವನ್ನು ಚಲಿಸಿದ. ಗಂಗೆಯನ್ನು ಹರ ಹರಿಸಿದ. ಹರಿದ ಗಂಗೆ ಜಹ್ನು ಋಷಿಗಳ ಆಶ್ರಮ ಪ್ರವೇಶಿಸಿ ಅವರ ಅವಗ್ರಹ ಸಂಪಾದಿಸಿ ಉದರ ಪ್ರವೇಶಿಸಿದಳು. ಮತ್ತೆ ದೇಹ ದಂಡಿಸಿದ ಭಗೀರಥ! ಋಷಿಕರುಣೆ ಹರಿಯಿತು. ಜಾಹ್ನವಿಯೂ ಹರಿದು ಬಂದಳು. ಪ್ರಯತ್ನಶೀಲನಾದ ಭಗೀರಥನ ರಥ ಚಲಿಸಿದಂತೆ ಗಂಗೆಯೂ ಚಲಿಸಿದಳು. ವಿಶಾಲವಾದ ಸಮಗ್ರ ಭಾರತದ ಎಲ್ಲೆಡೆಯೂ ಹರಿಪಾದ ರಜೋಧಾರಿಣಿಯಾದ ಜಾಹ್ನವಿಯು ಹರಿಯುವಂತೆ ಮಾಡಿದ. ಪವಿತ್ರ ಭಾರತವೆನಿಸಿದ. ಪಾತಾಳಕ್ಕೂ ಚಲಿಸಿದ. ಅಚಲರಾಗಿದ್ದ ಪೂರ್ವಜರ ಮೇಲೆ

ಗಂಗೆಯನ್ನು ಹರಿಸಿದ. ಅವರು ಸ್ಪರ್ಶಮಾತ್ರದಿಂದ ಬ್ರಹ್ಮಶಾಪಮುಕ್ತರಾದರು. ಅಮರತ್ವವನ್ನು ಪಡೆದರು. ತನ್ನ ಉತ್ತಮವಾದ ಉನ್ನತ ಪ್ರಯತ್ನದಿಂದ ಭಗೀರಥನು ಅವಿಸ್ಮರಣೀಯ ಉಪಕಾರವನ್ನು ಮಾಡಿದ.

## ಭಗೀರಥಪ್ರಯತ್ನ ಬೇಕು

ನಾವೆಲ್ಲರು ಭಗೀರಥರಾಗಬೇಕು. ಭಗೀರಥನು ತನ್ನ ಪ್ರಯತ್ನದಿಂದ ಶಿವಜಟೆಯಲ್ಲಿ ಅಡಗಿದ ಗಂಗೆಯನ್ನು ತಂದ. ನಾವೂ ಸಹ ಶಾಸ್ತ್ರವೆಂಬ ಜಟೆಯಲ್ಲಿ ಬಂಧಿತವಾದ ತತ್ತ್ವಜ್ಞಾನದ ಗಂಗೆಯನ್ನು ತರಬೇಕು. ಅಂದು ಶಿವಜಟೆಯಲ್ಲಿ ಮುಚ್ಚಿದ ಗಂಗೆಯಂತೆ, ಇಂದು ನಮ್ಮ ತತ್ವಜ್ಞಾನ ಶಾಸ್ತ್ರವೆಂಬ ಜಟೆಯಲ್ಲಿ ಬಂಧಿತ ವಾಗಿದೆ. ಈ ತತ್ವಜ್ಞಾನವನ್ನು ನಮ್ಮ ನಿರಂತರ ಪ್ರಯತ್ನದಿಂದ ಹೊರತರಬೇಕು. ಸಮಗ್ರ ಭಾರತದ ಮೈದಾನದಲ್ಲಿ ಗಂಗೆಯ ನಿನಾದ ಹೊರಹೊಮ್ಮಿದಂತೆ, ಸಮಗ್ರ ಭಾರತೀಯರ ಹೃದಯಗಳೆಂಬ ಮೈದಾನದಲ್ಲಿ ಅವಿಚ್ಛಿನ್ನವಾಗಿ ತತ್ವಜ್ಞಾನದ ಜಲಧಾರೆಯನ್ನು ಹರಿಸಬೇಕು. ಅದರ ನಿನಾದ ಮೊರೆಯುವಂತೆ ಮಾಡ ಬೇಕು. ನಾವೆಲ್ಲರು ತತ್ತ್ವಜ್ಞಾನದ ಪ್ರಸಾರಕಾರ್ಯದಲ್ಲಿ ಭಗೀರಥರಾಗಿ ಪ್ರಯತ್ನ ನಡೆಸಬೇಕು.

ಭಗೀರಥನು ತನ್ನ ಪ್ರಯತ್ನದಿಂದ ಗಂಗೆಯನ್ನು ಹರಿಯುವಂತೆ ಮಾಡಿದ. ಅದರಿಂದ ಅವನ ಪೂರ್ವಜರು ಮುಕ್ತರಾದರು. ಅದರಂತೆ ನಮ್ಮ ತತ್ತ್ವಜ್ಞಾನದ ಗಂಗೆಯೂ ಎಲ್ಲರ ಹೃದಯದಲ್ಲಿ ಹರಿಯುವಂತಾಗಬೇಕು. ಹೀಗಾದಾಗ ಕೇವಲ ಪೂರ್ವಜರಲ್ಲ; ಮುಂದಿನ ಮನುಕುಲದ ಪೀಳಿಗೆಯೇ ಉದ್ಧಾರವಾಗುತ್ತದೆ. ಇಂತಹ ಅದ್ಭುತವಾದ ಸಾಧನೆ ನಮ್ಮ ಹೊಸ ಪೀಳಿಗೆಯಿಂದ ಆಗಬೇಕು. ತತ್ತ್ವಜ್ಞಾನಗಂಗೆ ನಮ್ಮ ನಾಡಿನ ಯುವಕರ ಹೃದಯಮೈದಾನದಲ್ಲಿ ಅವಿಚ್ಛಿನ್ನವಾಗಿ ಹರಿದು ಜ್ಞಾನ, ಸಂಸ್ಕೃತಿ, ಭಕ್ತಿ, ವೈರಾಗ್ಯಗಳು ಪುಟಿದು ಅಲೆ ಅಲೆಯಾಗಿ ಹರಿಯಬೇಕು. ಪ್ರಯತ್ನದ ಸ್ಫೂರ್ತಿಯನ್ನು ಭಗೀರಥನಿಂದ ಪಡೆಯಬೇಕು. ಬಲಿಯ ಅದ್ಭುತವಾದ ದಾನದಿಂದ ಇಂದು ಲೋಕದಲ್ಲಿ 'ಬಲಿದಾನ' ಎಂದು ಪ್ರಸಿದ್ಧವಾದಂತೆ ಭಗೀರಥನು ನಿರಂತರ ನಡೆಸಿದ ಉನ್ನತ ಪ್ರಯತ್ನದಿಂದ ಭಗೀರಥಪ್ರಯತ್ನ ಎನ್ನುತ್ತಿದ್ದೇವೆ. ಹೀಗೆ ಒಬ್ಬೊಬ್ಬರಿಂದ ಒಂದೊಂದು ಸ್ಫೂರ್ತಿಯನ್ನು ಪಡೆದು ಜೀವನದಲ್ಲಿ ಪರಿವರ್ತಿತ ರಾಗಬೇಕು.

## ರಾಮಾವತಾರದಿಂದ ಸಂದೇಶಗಳು

ಮುಂದೆ ರಾಮಚಂದ್ರನ ಮಹತ್ತ್ವಚಿತ್ರಣವನ್ನು ಭಾಗವತ ಮಾಡುತ್ತಿದೆ. ಅನೇಕ ಗುಣಗಣಮಣಿನಿಧಿಯಾದ ಶ್ರೀರಾಮಚಂದ್ರನು ಮಾಡಿದ ಲೋಕೋದ್ಧಾರಕಾರ್ಯ, ಚಾರಿತ್ರ್ಯಕ ಶಿಕ್ಷಣ, ಭಕ್ತರ ಉದ್ಧಾರ, ದುಷ್ಟನಿಗ್ರಹ, ಮುಂತಾದ ಗುಣಗಳನ್ನು ಸಮಗ್ರ ರಾಮಾಯಣವನ್ನೂ ಒಂದೇ ಶ್ಲೋಕದಿಂದ ಸೆರೆಹಿಡಿದಿದ್ದಾರೆ.

ಗುರ್ವರ್ಥೇ ತ್ಯಕ್ತರಾಜ್ಯೋ ವ್ಯಚರದನುವನಂ ಪದ್ಮಪದ್ಭ್ಯಾಂ ಪ್ರಿಯಾಯಾಃ
ಪಾಣಿಸ್ಪರ್ಶಾಕ್ಷಮಾಭ್ಯಾಂ ಮೃಜಿತಪಥಿರುಜೋ ಯೋ ಹರೀಂದ್ರಾನುಜಾಭ್ಯಾಮ್ ।
ವೈರೂಪ್ಯಾಚ್ಛೂರ್ಪಣಖ್ಯಾಃ ಪ್ರಿಯವಿರಹರುಷಾಽರೋಪಿತಭ್ರೂವಿಜೃಂಭ-
ತ್ರಸ್ತಾಬ್ಧಿರ್ಬದ್ಧಸೇತುಃ ಖಲದವದಹನಃ ಕೋಸಲೇಂದ್ರೋಽವತಾನ್ನಃ ॥

— ೯-೮-೮೭

ಪಿತೃವಾಕ್ಯಪರಿಪಾಲನೆಗಾಗಿ ಸಾಮ್ರಾಜ್ಯಲಕ್ಷ್ಮಿಯನ್ನೂ ತೊರೆದ. ಕಾಲ್ಬುಡಕ್ಕೆ ಬಂದು ಬಿದ್ದ ಸಂಪತ್ತನ್ನೂ ತಂದೆಯ ಮಾತಿನ ಪಾಲನೆಗಾಗಿ ತಿರಸ್ಕರಿಸಿದ. ರಾಜ್ಯ, ಸಂಪತ್ತು, ಸ್ನೇಹಿತರು, ಮನೆ ಎಲ್ಲವನ್ನೂ ತ್ಯಾಗಮಾಡಿದ.

ಮಂಥರೋಪದಿಷ್ಟಳಾದ ಕೈಕೇಯಿಯ ಮಾತಿಗೆ ಬೆಲೆ ಕೊಡದೆ 'ರಾಜ್ಯ ನನ್ನ ಹಕ್ಕಿನದ್ದು' ಎಂದು ಕುಳಿತಿದ್ದರೆ ಇವನನ್ನು ಆಕ್ಷೇಪಿಸುವವರು ಯಾರೂ ಇರಲಿಲ್ಲ. ಸಮಸ್ತ ಪ್ರಜೆಗಳ ಒಕ್ಕೊರಳಿನ ಅನುಮೋದನೆ ಇತ್ತು. ಜನರ ಬೆಂಬಲ ದಶರಥನಿಗೆ ಇರಲಿಲ್ಲ. ಕೈಕೇಯಿ, ಭರತರಿಗೆ ಇರಲಿಲ್ಲ. ರಾಮನೇ ರಾಜನಾಗಬೇಕೆಂದು ಸ್ತ್ರೀಯರು, ಪುರುಷರು, ಮಂತ್ರಿಗಳು, ಜ್ಞಾನಿಗಳಾದ ವಸಿಷ್ಠರು ಎಲ್ಲರೂ ಹಟ ಹಿಡಿದಿದ್ದರು.

ಈ ಸ್ಥಾನದಲ್ಲಿ ರಾಮನಲ್ಲದೇ ಯಾರು ಇದ್ದರೂ ಇಂತಹ ಅವಕಾಶವನ್ನು ಬಿಟ್ಟುಕೊಡುತ್ತಿರಲಿಲ್ಲ. ನಾವಾಗಿದ್ದರೆ? ದಶರಥನಿಗೇನು ಹಕ್ಕು, ನನ್ನದೇ ರಾಜ್ಯ ಎಂದು ಸುಪ್ರೀಮ್ ಕೋರ್ಟ್ ತನಕವೂ ಹೋಗಲು ಸಿದ್ಧರಾಗುತ್ತಿದ್ದೆವು. ಆದರೆ ಶ್ರೀರಾಮಚಂದ್ರ ಎಷ್ಟೇ ಜನರು ಒತ್ತಾಯಿಸಿದರು ಕಾಲಿನ ಕಸದಂತೆ ರಾಜ್ಯವನ್ನು ತಿರಸ್ಕರಿಸಿದ. ತ್ಯಾಗದ ಪರಮೋನ್ನತ ಆದರ್ಶವನ್ನು ಶ್ರೀರಾಮ ತೋರಿಸಿದ್ದಾನೆ. ನಮ್ಮ ಸಮಗ್ರ ಇತಿಹಾಸದಲ್ಲಿ ಇಂತಹ ತ್ಯಾಗವನ್ನು ನೋಡಲಾರೆವು.

ಇಂತಹ ಶ್ರೀರಾಮಚಂದ್ರ ಸೀತಾಲಕ್ಷ್ಮಣರಿಂದೊಡಗೂಡಿ ಕಾಡಿಗೆ ನಡೆದ.

ಕಾಡಿನಲ್ಲಿ ಶ್ರೀರಾಮ ಸಂಚರಿಸುವಾಗ ಶೂರ್ಪಣಖೆ ದುರ್ಬುದ್ಧಿಯಿಂದ ಬಂದಳು. ಅವಳನ್ನು ಶಿಕ್ಷಿಸಿದ. ಸಚ್ಚಾರಿತ್ರ್ಯಸಂಪನ್ನಳಾದ ಅಹಲ್ಯೆಯನ್ನು ಹಿಂದೆ ರಕ್ಷಿಸಿದ್ದ. ವಿಕೃತ ಮನಸ್ಸಿನ (ಕಠೋರ ಹೃದಯದ) ಶೂರ್ಪಣಖೆಯನ್ನು ವಿಕಾರ ಗೊಳಿಸಿದ. ಸ್ವಚ್ಛಹೃದಯದ ಕಲ್ಲಿನ ದೇಹದ ಅಹಲ್ಯೆಯನ್ನು ಸುಂದರಗೊಳಿಸಿದ್ದ. ಶಿಷ್ಟರ ರಕ್ಷಣೆ, ದುಷ್ಟರ ದಮನರೂಪವಾದ ತನ್ನ ಅವತಾರಕಾರ್ಯವನ್ನು ಮುಂದುವರೆಸಿದ.

ರಾವಣನು ತನ್ನ ಮಡದಿಯಾದ ಸೀತೆಯನ್ನು ಅಪಹರಿಸಿದನಂತರ ಸಮುದ್ರದ ಬಳಿ ಸಾಗಿದ. ಲಂಕೆಗೆ ಸಾಗಲು ಅಡ್ಡಿಯಾದ ಸಮುದ್ರದ ಬಳಿ ಉಪವಾಸಕ್ಕೆ ಕುಳಿತ. ಉಪವಾಸಸತ್ಯಾಗ್ರಹ ಮಾಡಿದಾಗಲೂ ದಾರಿಬಿಡದ ಸಮುದ್ರರಾಜನ ಮೇಲೆ ಸಿಟ್ಟಾದ ಲಕ್ಷ್ಮಣನಿಗೆ ಹೇಳಿದ 'ಚಾಪಮಾನಯ ಸೌಮಿತ್ರೇ!' ಲಕ್ಷ್ಮಣ ನನ್ನ ಬಿಲ್ಲನ್ನು ತಾ, ಸರ್ಪಾಸ್ತ್ರಗಳನ್ನು ತಾ. 'ಸಮುದ್ರಂ ಶೋಷಯಿಷ್ಯಾಮಿ' 'ಸಮುದ್ರವನ್ನು ಒಣಗಿಸಿಬಿಡುತ್ತೇನೆ', 'ಪದ್ಭ್ಯಾಂ ಯಾತು ಪ್ಲವಂಗಮಾಃ' –ಕಪಿಗಳು ಲಂಕೆಗೆ ನಡೆದೇ ಹೋಗಲಿ." ಎಂದು ಸಿಟ್ಟಿನಿಂದ ಬಾಣವನ್ನು ಪ್ರಯೋಗಿಸಹೊರಟದ್ದೇ ತಡ. ಸಿಂಧುರಾಜ ತಲೆಯ ಮೇಲೆ ಕೈಯಿಟ್ಟುಕೊಂಡು ಕಾಲಿಗೆ ಬೀಳಲು ಓಡಿಬಂದ.

ಮೊದಲು ಕ್ಷಮೆ. ಅದಕ್ಕೆ ಬೆಲೆ ಕೊಡದಿದ್ದಾಗ ಶಿಕ್ಷೆ.

ಇದು ರಾಮನ ನಡೆ. ಅನಂತರ ಚಿರಸ್ಥಾಯಿಯಾದ ಸೇತುವೆಯನ್ನು ನಿರ್ಮಾಣ ಮಾಡಿಸಿದ.

ಶ್ರೀರಾಮ ಲಂಕೆಗೆ ಕಪಿಗಳು ಸಾಗಲು ಹನುಮಂತನ ಮೂಲಕ ಸೇತುವೆಯನ್ನು ನಿರ್ಮಿಸಿದ. ಅಂತೆಯೇ ಮೋಕ್ಷಕ್ಕೆ ಹೋಗಬಯಸಿದ ನಾವು ಕಪಿಗಳೇ ಆಗಿದ್ದೇವೆ. ಸಂಸಾರಸುಖವನ್ನೇ ಸುಖವೆಂದು ತಿಳಿದು ದುಃಖಪಡುತ್ತಿದ್ದೇವೆ. ಈ ಸಾಗರವನ್ನು ದಾಟಲು ಸೇತುವೆಯಿದೆ. ರಾಮನ ಭಕ್ತ ಆಂಜನೇಯ ಅಂಗದ, ಜಾಂಬವಂತ ಮುಂತಾದವರ ಮೂಲಕ ಅಲ್ಲಿ ಸೇತು ನಿರ್ಮಿಸಿದರೆ, ಅದೇ ಹನುಮಂತನೇ ಮಧ್ವರಾಗಿ ಅವತರಿಸಿ, ವೇದವ್ಯಾಸರ ಶಿಷ್ಯರಾಗಿ ಟೀಕಾಕೃತ್ಪಾದರೇ ಮುಂತಾದವರ ಮೂಲಕ ಸೇತುವೆಯನ್ನು ನಿರ್ಮಿಸಿದ್ದಾರೆ. ಅಲ್ಲಿ ಬೆಟ್ಟಗಳ ಸೇತುವೆಯಾದರೆ, ಇಲ್ಲಿ ಶಾಸ್ತ್ರಗಳೆಂಬ ಬೆಟ್ಟಗಳ ಸೇತುವೆ. ಇಂತಹ ಮೋಕ್ಷದ ದಾರಿಯನ್ನೇ ತೋರಿಸುವ ಸೇತುವೆಯನ್ನು ನಿರ್ಮಿಸಿದವ ಭಗವಂತ. ಅವನ ಉಪಕಾರವನ್ನು ಎಂದೂ ಮರೆಯಲು ಸಾಧ್ಯವಿಲ್ಲ.

ಸೇತುವೆಯನ್ನು ದಾಟಿ, ರಾವಣನ ಸಂಹಾರ ಮಾಡಿ, ಅತ್ಯುತ್ತಮವಾದ ಲೋಕೋಪಕಾರವನ್ನು ಮಾಡಿದ, ಇಂತಹ ಕರುಣಾಮೂರ್ತಿ ಶ್ರೀರಾಮಚಂದ್ರನನ್ನು ಸ್ತೋತ್ರಮಾಡುತ್ತಿದ್ದಾರೆ!

ರಕ್ಷೋವಧೋ ಜಲಧಿಬಂಧನಮಸ್ತ್ರಪೂಗೈಃ
ಕಿಂ ತಸ್ಯ ಶತ್ರುಹನನೇ ಕಪಯಃ ಸಹಾಯಾಃ ।
ಯಸ್ಯಾಮಲಂ ನೃಪಸದಸ್ಸು ಯಶೋಽಧುನಾಪಿ
ಗಾಯಂತ್ಯಘಘ್ನಮೃಷಯೋ ದಿಗಿಭೇಂದ್ರಪಟ್ಟಮ್ ॥
ತಂ ನಾಕಪಾಲವಸುಪಾಲಕಿರೀಟ ಜುಷ್ಟ-
ಪಾದಾಂಬುಜಂ ರಘುಪತಿಂ ಶರಣಂ ಪ್ರಪದ್ಯೇ ॥ — (೯-೧೧-೨೦-೨೧)

ಲೆಕ್ಕವಿಲ್ಲದಷ್ಟು ರಾಕ್ಷಸರ ಸಮೂಹವನ್ನು ಸದೆಬಡೆಯುವ ಶ್ರೀರಾಮಚಂದ್ರನಿಗೆ ಕಪಿಗಳು ಸಹಾಯಕರಾಗಬಲ್ಲರೇ!! ಇದೇ ಕಪಿಗಳು ರಾವಣನ ಬಳಿ ಯುದ್ಧಕ್ಕೆ ರಾಮಚಂದ್ರನ ಒಟ್ಟಿಗೆ ಸಾಗಿದರು. ರಾವಣನ ಸೈನ್ಯ ಕಂಡ ಕಪಿಗಳು ಹಿಂತಿರುಗದೆ ಓಡಿದರು. ಶ್ರೀರಾಮಚಂದ್ರ ಒಬ್ಬನೇ ಯುದ್ಧಮಾಡಿದ. ಅವನ ಯುದ್ಧದ ಚಮತ್ಕಾರವೇ ಅದ್ಭುತ. ರಾವಣನ ಸೈನ್ಯದವರೆಲ್ಲರೂ ಕಂಗಾಲಾದರು.

ಅವರು ಎಲ್ಲಿ ನೋಡಿದರಲ್ಲಿ ಶ್ರೀರಾಮ

ರಾಮಃ ಪುರಸ್ತಾತ್ ಪರತೋಽಪಿ ರಾಮಃ
ರಾಮಃ ಪರಂದಿಕ್ಷು ವಿದಿಕ್ಷು ರಾಮಃ
ರಾಮೈರನಂತೈರಿತಿ ವಿಶ್ವರೂಪೋ
ನಿಘ್ನನ್ನರಾತೀನ್ವಿರರಾಜ ರಾಮಃ ॥ — ಮಣಿಮಂಜರೀ

ಎಂದು ನಾರಾಯಣ ಪಂಡಿತಾಚಾರ್ಯರು ಶ್ರೀರಾಮನ ಯುದ್ಧಕೌಶಲ್ಯವನ್ನು ಸುಂದರವಾಗಿ ನಿರೂಪಿಸಿದ್ದಾರೆ.

ಋಷಿಮುನಿಗಳಿಗೆಲ್ಲ ಹಿಂಸೆ ಕೊಡುತ್ತಿದ್ದ ಹದಿನಾಲ್ಕು ಸಹಸ್ರ ರಾಕ್ಷಸರನ್ನು ಏಕಾಕಿಯಾಗಿ ಸಂಹರಿಸಿದ. ರಾವಣ, ಕುಂಭಕರ್ಣ, ಇಂದ್ರಜಿತು ಎಲ್ಲರೂ ಸತ್ತರು.

ಇವರು ಸತ್ತ ಬಳಿಕ ರಾವಣನನ್ನು ಸಿದ್ಧಗೊಳಿಸಿ ಇಟ್ಟಿದ್ದ. ಕೋಟಿ ಕೋಟಿ ಸೈನ್ಯ ಕೂಡಲೇ ಹುಟ್ಟಿಕೊಂಡಿತು.

ಪ್ರತಿಯೊಬ್ಬರು ಬ್ರಹ್ಮದೇವರಿಂದ ಅವಧ್ಯತ್ವ ವರ ಗಳಿಸಿದವರು. ಅವರನ್ನು ಕಂಡ ಕಪಿಗಳು ಶರಸೇತುವೆ ದಾಟಿ ದಡ ಮುಟ್ಟಿದ್ದರು. ಅವರೆಲ್ಲರನ್ನು ಶ್ರೀರಾಮ ಒಬ್ಬನೇ ತನ್ನ ಅನಂತ ರೂಪಗಳಿಂದ ಸಂಹರಿಸಿದ.

ದಾಸರಾಯರೂ ಕೂಡ ಇದನ್ನೇ ಹಾಡಿದ್ದಾರೆ.

ಅಲ್ಲಿ ನೋಡಲು ರಾಮ
ಇಲ್ಲಿ ನೋಡಲು ರಾಮ
ಎಲ್ಲಿ ನೋಡಿದರಲ್ಲಿ ಶ್ರೀರಾಮ
ಅವನಿಗೆ ಇವ ರಾಮ. ಇವನಿಗೆ ಅವ ರಾಮ –ಮುಂತಾಗಿ ಬಣ್ಣಿಸಿದ್ದಾರೆ.

ಇಂತಹ ಶ್ರೀರಾಮನಿಗೆ ಕಪಿಗಳ ಸಹಾಯದ ಅಪೇಕ್ಷೆ ಉಂಟೇ?! ತನ್ನ ಭಕ್ತರಿಗೆ ಸೇವೆಗೆ ಅವಕಾಶ ಕಲ್ಪಿಸಿಕೊಡುವುದು ಭಗವಂತನ ಸ್ವಭಾವ. ಅವರು ಕಪಿಯಾಗ ಬಹುದು, ಮನುಷ್ಯರಾಗಬಹುದು. ಎಲ್ಲಾ ತರಹದ ಪ್ರಾಣಿಗಳನ್ನು ಎಲ್ಲ ವರ್ಗದ ಜನರನ್ನು ಸಾಕಿ ಸಲಹಿದ ಅನುಗ್ರಹಿಸುವ ಕರುಣಾಮೂರ್ತಿ ಶ್ರೀರಾಮಚಂದ್ರ.

ತನ್ನ ಭಕ್ತರೆಲ್ಲರಿಗೂ ಭೌತಿಕ ರಾಜ್ಯವನ್ನು ಇಲ್ಲಿ ಕೊಟ್ಟರೆ; ತಾನು ವೈಕುಂಠಕ್ಕೆ ಮರಳಿ ಹೋಗುವಾಗ ವೈಕುಂಠಕ್ಕೂ ಕರೆದೊಯ್ದನೆಂದರೆ ಅವನ ಕರುಣೆಗೆ ಎಣೆ ಉಂಟೇ?!

ಕವಿಯೊಬ್ಬ ವರ್ಣಿಸುತ್ತಾನೆ:

**ಯಾಂತಿ ನ್ಯಾಯ ಪ್ರವೃತ್ತಸ್ಯ ತಿರ್ಯಂಚೋಪಿ ಸಹಾಯತಾಮ್ ।**
**ಅಪಂಥಾನಂ ತು ಗಚ್ಛಂತಂ ಸೋದರೋಽಪಿ ವಿಮುಂಚತಿ ॥**

ನ್ಯಾಯಮಾರ್ಗದಲ್ಲಿ ನಡೆಯುವವರಿಗೆ ಕೆಳಮಟ್ಟದ ಪ್ರಾಣಿಗಳೂ ಸಹಾಯ ಮಾಡುತ್ತವೆ. ನ್ಯಾಯಮಾರ್ಗ ಭ್ರಷ್ಟರಾದವರನ್ನು ಅವರ ಸೋದರರೂ ತೊರೆಯು ತ್ತಾರೆ.

ಶ್ರೀರಾಮಚಂದ್ರನು ನ್ಯಾಯಮಾರ್ಗಗಾಮಿಯಾದ್ದರಿಂದ ಅವನಿಗೆ ಜಟಾಯು ಕಪಿಗಳು ಮುಂತಾದ ಕೆಳಮಟ್ಟದ ಪ್ರಾಣಿಗಳೂ ಸಹಾಯ ಮಾಡಿದವು. ನ್ಯಾಯ ಮಾರ್ಗವನ್ನು ಬಿಟ್ಟರೆ ಮನುಷ್ಯರಿರಲಿ ತನ್ನ ಒಡಹುಟ್ಟಿದ ಸೋದರನೂ ತಿರಸ್ಕರಿಸುತ್ತಾನೆ. ದುರ್ಮಾರ್ಗಗಾಮಿಯಾದ ರಾವಣನನ್ನು ಅವನ ತಮ್ಮನಾದ

ಸನ್ಮಾರ್ಗಗಾಮಿಯಾದ ವಿಭೀಷಣನೇ ತೋರಿದನು. ಆದ್ದರಿಂದ ಶ್ರೀರಾಮಚಂದ್ರನಿಗೆ ಸೇವೆ ಸಲ್ಲಿಸಲು ಕಪಿಗಳೂ ಮುಂದೆ ಬಂದರು ಎಂಬರ ಅದು ಶ್ರೀರಾಮಚಂದ್ರನ ಉತ್ತಮ ಆದರ್ಶವನ್ನು ತೋರಿಸುತ್ತಿದೆ ಹೊರತು ಶ್ರೀರಾಮನ ಅಲ್ಪತೆಯನ್ನಲ್ಲ.

ಹೀಗೆ ಎರಡು ಅಧ್ಯಾಯಗಳಲ್ಲಿ ರಾಮನ ಆದರ್ಶಗುಣಗಳನ್ನು ಭಾಗವತವು ಸಂಕ್ಷಿಪ್ತವಾಗಿ ನಿರೂಪಿಸಿದೆ.

## ಪರಶುರಾಮನ ಅವತಾರವೇಕೆ?

ಮುಂದೆ ಭಾಗವತವು ಅನೇಕ ರಾಜರ ಕಥೆಗಳನ್ನು ಬಣ್ಣಿಸಿ ಪರಶುರಾಮದೇವರ ಚರಿತ್ರೆಯನ್ನೂ ನಿರೂಪಿಸುತ್ತದೆ.

ಕಾರ್ತವೀರ್ಯಾರ್ಜುನ ಎಂಬ ಹೈಹಯ ವಂಶದ ರಾಜನಿದ್ದ. ಅತ್ಯಂತ ಪರಾಕ್ರಮಿಯಾದ ರಾಜ. ಶ್ರೇಷ್ಠನಾಗಿದ್ದ. ಆದರೆ ರಾಜತ್ವದ ಹಮ್ಮಿನಿಂದ ಬೀಗುತ್ತಿದ್ದ.

ಒಂದು ದಿನ ರಾಜ ಬೇಟೆಗೆಂದು ಕಾಡಿಗೆ ನಡೆದ. ದಾರಿಯಲ್ಲಿ ಸಿಕ್ಕ ಜಮದಗ್ನಿಗಳ ಆಶ್ರಮವನ್ನೂ ಹೊಕ್ಕಿದ. ರಾಜ ಬಂದನೆಂದು ಜಮದಗ್ನಿಗಳು ಅದ್ಭುತವಾದ ಔತಣಕೂಟವನ್ನೇರ್ಪಡಿಸಿದರು. ರಾಜನಿಗೂ ಆಶ್ಚರ್ಯವನ್ನುಂಟು ಮಾಡುವಂತಹ ಅಪೂರ್ವ ರೀತಿಯ ಆತಿಥ್ಯವನ್ನು ನೀಡಿದರು.

ಸಾಮಾನ್ಯವಾಗಿ ಈ ರೀತಿಯಾದ ಉಪಚಾರದ ಕಥೆಗಳನ್ನು ಅಲ್ಲಲ್ಲಿ ಪುರಾಣ ಗಳಲ್ಲಿ ಕಾಣುತ್ತೇವೆ. ಭರದ್ವಾಜರ ಆತಿಥ್ಯ, ವಸಿಷ್ಠರ ಆತಿಥ್ಯ ಮುಂತಾಗಿ.

ಭರದ್ವಾಜರು ರಾಮನನ್ನರಸಿ ಭರತ ಬಂದಾಗ ಸಮಸ್ತ ಅಯೋಧ್ಯೆಯ ಪ್ರಜೆ ಗಳಿಗೂ ಕೊರತೆಯಾಗದಂತೆ ಅಭೂತಪೂರ್ವ ಉಪಚಾರವನ್ನು ನೀಡಿದರು. ನಗರದಲ್ಲಿಯೂ ದೊರೆಯದ ಆತಿಥ್ಯವನ್ನು ಸ್ವೀಕರಿಸಿದ ಪೌರರು ಹಿರಿಹಿಗ್ಗಿದರು. ಅಯೋಧ್ಯೆಯೂ ಬೇಡ, ಕಾಡೂ ಬೇಡ. ಈ ಆಶ್ರಮವೇ ಹಿತವಾಗಿದೆ ಎಂಬ ಭಾವನೆ ಮೂಡುವಂತೆ ಭರದ್ವಾಜರು ಉಪಚರಿಸಿದ್ದರು.

ಹೀಗೆಯೇ ವಸಿಷ್ಠರ ಆಶ್ರಮಕ್ಕೆ ವಿಶ್ವಾಮಿತ್ರನು ರಾಜನಾದಾಗ ಸೈನ್ಯದೊಟ್ಟಿಗೆ ಬಂದ. ಬಂದ ಅತಿಥಿಗೆ ಸಂತೋಷವಾಗಲೆಂದು ಕಾಮಧೇನುವಿನ ಮೂಲಕ ಅದ್ಭುತ ತಿನಿಸುಗಳ ಲೋಕವನ್ನೇ ಸೃಷ್ಟಿಸಿದರು. ವಿಶ್ವಾಮಿತ್ರ ದೇವಲೋಕದ ಉಪಚಾರವನ್ನು ಸ್ವೀಕರಿಸಿದ. ಅವನ ಆನಂದದ ಪರಿಣಾಮ ಅವನ ಬುದ್ಧಿ ಕೆಡಿಸಿತು. ಉಪಚರಿಸಿದ ಕಾಮಧೇನುವನ್ನೇ ಅಪಹರಿಸಲನುವಾದ. ಬಡ ಋಷಿಗೆ ಎಂತಹ ಸಂಪತ್ತು?! ಎಂದು ಮತ್ಸರದ ಮುಸುರೆಯಾದ. ವಸಿಷ್ಠರ ಔದಾರ್ಯ ತ್ಯಾಗಗಳನ್ನು ಅರ್ಥಮಾಡಿಕೊಳ್ಳದೆ ಅವರ ನಲ್ಮೆಯ ಕಾಮಧೇನುವನ್ನೇ ಅಪಹರಿಸುವಷ್ಟು ದುಷ್ಟ ಕೃತ್ಯಕ್ಕೆ ಕೈಹಾಕಿದ.

ಭರದ್ವಾಜರ ಆತಿಥ್ಯದಿಂದ ಭರತ ಸಂತುಷ್ಟನಾಗಿ ನಮಿಸಿ ನಡೆದ. ಆದರೆ ವಿಶ್ವಾಮಿತ್ರ ಮತ್ಸರಿಯಾದ, ಅಹಂಕಾರಿಯಾದ. ಕೊನೆಗೆ ಪಶ್ಚಾತ್ತಾಪದಗ್ಧನಾಗಿ ಬ್ರಹ್ಮರ್ಷಿಯಾಗಿ ಮೆರೆದ.

ಆದರಂತೆ ಕಾರ್ತವೀರ್ಯಾರ್ಜುನನೂ ಜಮದಗ್ನಿಗಳ ಉಪಚಾರದಿಂದ ದಾರಿ ತಪ್ಪಿದ. ಜಮದಗ್ನಿಗಳ ಗೋವಿನ ಪ್ರಭಾವವನ್ನರಿತ ರಾಜನು 'ಬಡ ಋಷಿಗೇಕೆ ಇಂತಹ ಹಸು?! ರಾಜನ ಬಳಿ ಇರುವುದು ಒಳಿತು' ಎಂದು ಅವರ ಹಸುವನ್ನು ಬಲಾತ್ಕಾರವಾಗಿ ಸೆಳೆದುಕೊಂಡು ಹೋದ. ಅವರ ಆತಿಥ್ಯವನ್ನು ಔದಾರ್ಯವನ್ನು ಅರ್ಥಮಾಡಿಕೊಳ್ಳದೆ ಅವಮಾನ ಮಾಡಿದ. ಅವರ ಮಾತನ್ನು ತಿರಸ್ಕರಿಸಿದ.

ಈ ಚರ್ಯೆ ಅಂದಿನ ಸಾಮಾನ್ಯ ರಾಜರಲ್ಲೆಲ್ಲಾ ಇತ್ತು. ಅಧಿಕಾರದ ಬಲ, ರಾಜ್ಯದ ಸಂಪತ್ತು, ಯೌವನದ ಮದ ಇವುಗಳಿಂದ ಬುದ್ಧಿಯ ಸ್ತಿಮಿತವನ್ನು ಕಳೆದುಕೊಂಡು ಪ್ರಜೆಗಳ ಮೇಲೆ ದೌರ್ಜನ್ಯವನ್ನು ತೋರಿಸುತ್ತಿದ್ದರು. ಕಾರ್ತವೀರ್ಯಾರ್ಜುನ ಸಾಮಾನ್ಯ ರಾಜರ ಪ್ರತೀಕವಾಗಿ ಜಮದಗ್ನಿಗಳ ಗೋವನ್ನು ಅಪಹರಿಸಿದ. ಇವನು ಉಪಲಕ್ಷಣ. ರಾಜರುಗಳು ಅಧಿಕಾರ ಮದದಿಂದ ಪ್ರಜೆಗಳ ಮೇಲಲ್ಲದೆ ಆಶ್ರಮದ ಋಷಿಗಳ ಮೇಲೂ ದರ್ಪವನ್ನು ತೋರಿಸುತ್ತಿದ್ದರು.

ಕ್ಷತ್ರಿಯ ಬಲ ಪ್ರಜೆಗಳ ಹಿತಕ್ಕಾಗಿ. ಮುನಿಗಳ ರಕ್ಷಣೆಗಾಗಿ. ದುಃಸ್ಥಿತಿಯಲ್ಲಿರುವವರ ಉಪಕಾರಕ್ಕಾಗಿ. ಆದರೆ ಇದಕ್ಕೆ ವಿಪರೀತವಾಗಿ ಸಜ್ಜನರ ಮೇಲೆ ದೌರ್ಜನ್ಯವನ್ನೆಸಗಲು ಕ್ಷಾತ್ರ ಶಕ್ತಿ ವಿನಿಯೋಗವಾಗಲಾರಂಭಿಸಿತು. ಆ ಸಂದರ್ಭದಲ್ಲಿ ಭಗವಂತನು ಪರಶುರಾಮನಾಗಿ ಸಮಸ್ತ ಕ್ಷತ್ರಿಯರ ವಿರುದ್ಧ ದೊಡ್ಡ ಹೋರಾಟವನ್ನೇ ನಡೆಸಿದ.

ರಾಜಸತ್ತೆಯು ತನ್ನ ನೀತಿ ನಿಯಮಗಳನ್ನು ಉಲ್ಲಂಘಿಸಿ ಮಿತಿಮೀರಿ ಅಧರ್ಮದಿಂದ ಅನ್ಯಾಯದಿಂದ ಪ್ರಜೆಗಳ ಶೋಷಣೆಯನ್ನು ಮಾಡಲು ಪ್ರವರ್ತಿಸಿದಾಗ ಸಮಸ್ತ ಪ್ರಜೆಗಳಿಗೆ ಹಿತವಾಗಲೆಂದು ಪರಶುರಾಮ ಕ್ರಾಂತಿಯ ಕಹಳೆಯನ್ನು ಊದಿದ. ಮಾಹಿಷ್ಮತೀ ನಗರದ ಅರಸನಾದ ಕಾರ್ತವೀರ್ಯಾರ್ಜುನನ ಸಾವಿರಾರು ಕೈಗಳನ್ನು ನೂರಾರು ತಲೆಗಳನ್ನು ಕೊಡಲಿಯಿಂದ ತುಂಡರಿಸಿದ. ಅಪಹರಿಸಿದ್ದ ಆಕಳನ್ನು ಆಶ್ರಮಕ್ಕೆ ಕರೆತಂದ.

ಪರಶುರಾಮದೇವರಿಂದ ಪರಾಜಿತರಾದ ಕಾರ್ತವೀರ್ಯಾರ್ಜುನನ ಮಕ್ಕಳು ಜಮದಗ್ನಿಗಳ ಆಶ್ರಮಕ್ಕೆ ಬಂದರು. ಪರಶುರಾಮದೇವರಿಲ್ಲದ್ದನ್ನು ಗುರುತಿಸಿ ಧ್ಯಾನದಲ್ಲಿ ಕುಳಿತ ಜಮದಗ್ನಿಗಳ ಕತ್ತನ್ನು ಕತ್ತರಿಸಿದರು. ಭಯಂಕರ ದೃಶ್ಯವನ್ನು ಕಂಡ ರೇಣುಕೆಯು ಆರ್ತನಾದ ಗೈಯಲು ಪರಶುರಾಮ ಆವಿರ್ಭಾವಗೊಂಡ. ಕ್ಷಾತ್ರಕುಲದವರ ದುರ್ವರ್ತನೆ ಎಲ್ಲೆ ಮೀರುತ್ತಿದೆ ಎಂದು ತಿಳಿದ. ಪ್ರಜೆಗಳ ಹಿಂಸೆ ಶೋಷಣೆಗಳಲ್ಲಿ ಆಸಕ್ತಚಿತ್ತರಾದ ದುಷ್ಟ ಕ್ಷತ್ರಿಯರಿಗೆ ಸರಿಯಾದ ಪಾಠವನ್ನು ಕಲಿಸಬೇಕೆಂದು ಸಂಕಲ್ಪಿಸಿ ಇಪ್ಪತ್ತೊಂದು ಬಾರಿ ಸಮಸ್ತ ಭೂಮಂಡಲವನ್ನು ಬಳಸಿ ದುಷ್ಟ ದೊರೆಗಳ ಶಿರವನ್ನು ತರಿದ. ರಾಜಸತ್ತೆಯ ವಿರುದ್ಧ ಭಾರೀ ಹೋರಾಟವನ್ನು ನಡೆಸಿದ. ರಾಜರೇ ತಪ್ಪಿತಸ್ಥರಾಗಲು ಜಗತ್ತಿನ ನೀತಿನಿಯಮಗಳೆಲ್ಲವೂ ಮಣ್ಣು ಪಾಲಾದೀತೆಂದು ಪರಶುವಿನಿಂದ ರಾಜರ ಶಿರವನ್ನು ಕಡೆದು ಬೆಟ್ಟ ರಚಿಸಿದ. ರಕ್ತದ ಮಡುಗಳನ್ನು ನಿರ್ಮಿಸಿದ. ಸಮಗ್ರಭೂಮಂಡಲದ ಆಧಿಪತ್ಯವು ನಿಜಭುಜಬಲದಿಂದ

ಲಭ್ಯವಾಗಿದ್ದರೂ ಸೂಜಿಕಾಗ್ರ ಮೊನೆಯಷ್ಟು ಭೂಮಿಯ ಸಂಚಯನವನ್ನು ವಾಂಛಿಸಲಿಲ್ಲ. ಉತ್ತಮ ಬ್ರಾಹ್ಮಣರಿಗೆ ಅದೆಲ್ಲವನ್ನೂ ಹಂಚಿದ.

ಜಗತ್ತೆಲ್ಲವೂ ದುಷ್ಟ ಕ್ಷತ್ರಿಯರಿಂದಲೇ ತುಂಬಿಕೊಂಡು ವಿನಾಶದ ಅಂಚಿಗೆ ಸಾಗುತ್ತಿರಲು ಸಾಕ್ಷಾತ್ ಭಗವಂತನೇ ಪರಶುರಾಮನಾಗಿ ಬಂದು ಶೋಷಣೆಗೆ ಒಳಪಟ್ಟ ಆರ್ತ ಸಜ್ಜನರ ರಕ್ಷಣೆಯನ್ನು ಮಾಡಿದ. ಧರೆಗೆ ದೊರೆಯಾಗಿ ದುರ್ಜನರ ದಮನಮಾಡಿ ಧರ್ಮಾತ್ಮರ ಧರ್ಮದ ಉಸಿರಾಟಕ್ಕೆ ಬಲದಾತನಾಗಿ ಉಪಕರಿಸಿದ.

ಭಗವಂತನು ಪರಶುರಾಮನಾಗಿ ಇನ್ನೊಂದು ವಿಶಿಷ್ಟ ಕಾರ್ಯ ಮಾಡಿದ. ತಾಯಿಯ ಶಿರವ ತರಿದವನೆಂದೇ ಪ್ರಸಿದ್ಧನಾದ. ತಂದೆಯ ಮಾತಿನಂತೇ ತಾಯಿಯ ಶಿರವನ್ನು ತರಿದವ ಪರಶುರಾಮ. ಇದು ಸರಿಯೆ? ಎಂಬುದು ಕೆಲವರ ಪ್ರಶ್ನೆ. ಆದರೆ ಇದು ಅವನ ಅರ್ಥಪೂರ್ಣವಾದ ಕೃತಿ.

ಪರಶುರಾಮನ ತಾಯಿಯ ಶಿರವನ್ನು ತರಿಯುವ ಮೊದಲೇ ಬದುಕಿಸುತ್ತೇನೆಂಬ ಸಂಕಲ್ಪವನ್ನೂ ಮಾಡಿದ್ದ. ತಾಯಿಯನ್ನು ಕೊಂದು ಬದುಕಿಸಿದ ಎಂದರೆ ಅವಳ ಕೆಟ್ಟ ವ್ಯಕ್ತಿತ್ವವನ್ನು ನಾಶಪಡಿಸಿ ಹೊಸ ವ್ಯಕ್ತಿತ್ವವನ್ನು ಪಡೆಯುವಂತೆ ಮಾಡಿದ.

ರೇಣುಕೆಯು ಗಂಡನಿಗೆ ನೀರು ಬೇಕೆಂದು ಗಂಗೆಗೆ ನೀರು ತರಲು ಹೋಗಿ ಗಂಧರ್ವನೊಬ್ಬನ ಸೌಂದರ್ಯವನ್ನು (ರಸವನ್ನು) ಕಣ್ಣಿನ ಮೂಲಕ ಹೃದಯದಲ್ಲಿ ಕ್ಷಣಕಾಲ ತುಂಬಿಕೊಂಡಳು. ನೀರನ್ನೂ ತುಂಬಿಕೊಂಡು ಬಂದಳು. ಮಾನಸಿಕವಾಗಿ ಕ್ಷಣಕಾಲ ಕೆಟ್ಟದಾಗಿ ಆಲೋಚಿಸಿದ ರೇಣುಕೆಯ ಶಿರವನ್ನೇ ಕಡಿದುಹಾಕಿ ಎಂದು ಜಮದಗ್ನಿಯು ಮಕ್ಕಳಿಗೆ ಆದೇಶಿಸಿದ. ಯಾರೂ ಅಕೃತ್ಯವೆಂದು ಆದೇಶವನ್ನು ಪಾಲಿಸಲಿಲ್ಲ. ಕೊನೆಗೆ ಪರಶುರಾಮನಿಗೆ ಆದೇಶಿಸಲು ವಿಚಾರಮಾಡದೆ ಎಲ್ಲ ಸಹೋದರರೊಟ್ಟಿಗೆ ತಾಯಿಯ ಶಿರವನ್ನೂ ತರಿದ. ಬಳಿಕ ತಂದೆಯ ಮಾತಿಗೆ ಮಂತ್ರದ ಬೆಲೆಯನ್ನು ನೀಡಿದನೆಂದು ಜಮದಗ್ನಿಯು 'ವರಂ ವೃಣೀಶ್ವ!' ಎಂದ. ಪರಶುರಾಮನು 'ಎಲ್ಲರನ್ನೂ ಬದುಕಿಸು' ಎಂದ. ಎಲ್ಲರಿಗೂ ಹೊಸ ವ್ಯಕ್ತಿತ್ವ ಬಂತು.

ನಾವೂ ಇವರಂತೆ ಸತ್ತು ಬದುಕಬೇಕಿದೆ. ಪ್ರತಿನಿತ್ಯವೂ ಸತ್ತು ಬದುಕಬೇಕು. ಅಷ್ಟು ದುಷ್ಟತನ ನಮ್ಮಲ್ಲಿದೆ. ದುಷ್ಟ ಪ್ರವೃತ್ತಿ ದುರ್ವ್ಯಸನಗಳೆಂದು ತಲೆಗಳನ್ನು ಕತ್ತರಿಸಿ ಸದ್ವರ್ತನೆಗಳೆಂಬ ತಲೆಗಳು ಚಿಗುರುವಂತಾಗಬೇಕು. ಇದಕ್ಕೆ ಪರಶುರಾಮನ ದಯೆ ಬೇಕು. ಆದ್ದರಿಂದ ಪರಶುರಾಮನು ತಾಯಿಯನ್ನು ನಿರ್ಮಲ ವ್ಯಕ್ತಿತ್ವವುಳ್ಳ ತಾಯಿಯನ್ನಾಗಿ ಮಾಡಿ ಉದ್ಧಾರಮಾಡಿದನೇ ಹೊರತು; ತಾಯಿಯನ್ನು ಕೊಂದ ವನೆಂದು ತಪ್ಪಾಗಿ ತಿಳಿಯಬಾರದು.

## ಯಯಾತಿಯ ಜೀವನವೃತ್ತಾಂತ

ಮುಂದೆ ಅನೇಕ ರಾಜರ ಕಥೆಯನ್ನು ನಿರೂಪಿಸುತ್ತಾ ಯಯಾತಿ ರಾಜನ ಚರಿತ್ರೆಯನ್ನು ವಿವರಿಸುತ್ತಾರೆ.

ಯಯಾತಿ ರಾಜನು ಒಮ್ಮೆ ಕಾಡಿಗೆ ಹೋದಾಗ ಬಾವಿಯೊಂದರಲ್ಲಿ ಬಿದ್ದ ದೇವಯಾನಿ ಎಂಬ ಕನ್ಯೆಯನ್ನು ಮೇಲೆತ್ತಿದ್ದ. ಅವಳನ್ನೇ ಮದುವೆಯಾದ. ಈ ದೇವಯಾನಿಯು ಶುಕ್ರಾಚಾರ್ಯರ ಕುವರಿ. ಯಯಾತಿಯಾದರೂ ಕ್ಷತ್ರಿಯ. ಇವರೀರ್ವರ ಸಂಬಂಧಕ್ಕೇನು ಕಾರಣವೆಂದು ತಿಳಿಸುತ್ತಾರೆ.

ವೃಷಪರ್ವರಾಜನ ರಾಜಪುರೋಹಿತರು ಶುಕ್ರಾಚಾರ್ಯರು. ಆ ರಾಜನಿಗೆ ಶರ್ಮಿಷ್ಠೆ ಎಂಬ ಸುಪುತ್ರಿ ಇದ್ದಳು. ಶುಕ್ರಾಚಾರ್ಯರಿಗೆ ದೇವಯಾನಿಯು ಕುವರಿಯಾಗಿದ್ದಳು. ಇವರೀರ್ವರಿಗೂ ಸಖ್ಯ ಬೆಳೆದಿತ್ತು. ಹೀಗೆ ಒಂದು ದಿವಸ ಶರ್ಮಿಷ್ಠೆಯು ಸಾವಿರಾರು ಸಖಿಯರು ಮತ್ತು ದೇವಯಾನಿ ಮುಂತಾದವರೆಲ್ಲರಿಂದಲೂ ಒಡಗೂಡಿ ಪುಷ್ಪೋದ್ಯಾನಕ್ಕೆ ವಿಹಾರಕ್ಕೆಂದು ನಡೆದಳು. ಆ ಉದ್ಯಾನ ವನದಲ್ಲಿ ನಿರ್ಮಲ ಸರೋವರ ಒಂದನ್ನು ಕಂಡಳು. ಜಲವಿಹಾರದ ಹಂಬಲದಿಂದ ಶರ್ಮಿಷ್ಠೆಯು ಸಖಿಯರನ್ನೆಲ್ಲ ಕರೆದಳು. ಎಲ್ಲರೂ ಸ್ವಚ್ಛ ಜಲದಲ್ಲಿ ಸ್ವಚ್ಛಂದ ವಿಹಾರವನ್ನು ಮಾಡತೊಡಗಿದರು. ಅದೇ ಸಂದರ್ಭದಲ್ಲಿ ರುದ್ರದೇವರು ಪಾರ್ವತಿ ಸಹಿತರಾಗಿ ಅದೇ ಮಾರ್ಗದಲ್ಲಿ ಬರುತ್ತಿದ್ದರು. ಇವರನ್ನು ಕಂಡ ಯುವತಿಯರೆಲ್ಲ ನಾಚಿಕೆಯಿಂದ ಮೇಲೆ ಬಂದು ಅವಸರದಲ್ಲಿ ವಸ್ತ್ರವನ್ನು ಧರಿಸಿಕೊಂಡರು. ಆ ಅವಸರದಲ್ಲಿ ಶರ್ಮಿಷ್ಠೆಯು ದೇವಯಾನಿಯ ಸೀರೆಯನ್ನುಟ್ಟುಕೊಂಡಳು. ಇದನ್ನು ಕಂಡ ದೇವಯಾನಿ ಶರ್ಮಿಷ್ಠೆಯನ್ನು ನೀಚ ವಾಕ್ಯಗಳಿಂದ ನಿಂದಿಸಿದಳು. ಪ್ರತಿಯಾಗಿ ಶರ್ಮಿಷ್ಠೆಯೂ ನಿಂದಿಸಿದಳು. ರಾಜಪುತ್ರಿ ಎಂಬ ಮದದಿಂದ ನಿಂದಿಸಿದ್ದಲ್ಲದೆ ದೇವಯಾನಿಯನ್ನು ಅಲ್ಲಿಯ ಕೂಪ ಒಂದಕ್ಕೆ ತಳ್ಳಿ ಸಖಿಯರೊಟ್ಟಿಗೆ ಅಂತಃಪುರಕ್ಕೆ ತೆರಳಿದಳು.

ಇತ್ತ ಬೇಟೆಯ ಚಪಲದಿಂದ ಯಯಾತಿ ಕಾಡಿಗೆ ಬಂದ. ನೀರಡಿಕೆಯಿಂದ ಬಾಯಾರಿದ ರಾಜ ನೀರಿಗಾಗಿ ಬಾವಿಗೆ ಇಣುಕಿದ. ನೀರಿನ ಬದಲಾಗಿ ನೀರೆಯಾದ ದೇವಯಾನಿಯನ್ನು ಕಂಡ. ಆರ್ತಳಾದ ಅವಳಿಗೆ ತನ್ನ ವಸ್ತ್ರವನ್ನು ಕೊಟ್ಟು ಮೇಲಕ್ಕೆತ್ತಿದ್ದ. ಆಪತ್ತಿನ ಕಾಲದಲ್ಲಿ ಆಪ್ತಬಂಧುವಿನಂತೆ ಕೈಹಿಡಿದು ಮೇಲಕ್ಕೆತ್ತಿದ ರಾಜನಲ್ಲಿ ಅನುರಾಗ ಮೂಡಿತು. ದೇವಯಾನಿಯೂ ನೀನೇ ಪತಿಯಾಗೆನ್ನಲು ಯಯಾತಿಯು ಸಮ್ಮತಿ ಇಲ್ಲದಿದ್ದರೂ ದೈವೇಚ್ಛೆಯೆಂದು ಅವಳನ್ನು ಸ್ವೀಕರಿಸಿದ.

ದೇವಯಾನಿಗೆ ಶರ್ಮಿಷ್ಠೆಯ ಮೇಲೆ ಪ್ರತೀಕಾರಬುದ್ಧಿ ಬೆಳೆಯಿತು. ಅಧಿಕಾರದ ದರ್ಪವನ್ನು ಅಹಂಕಾರವನ್ನು ತೋರಿದ ಶರ್ಮಿಷ್ಠೆಗೆ ತಕ್ಕ ಪಾಠ ಕಲಿಸಬೇಕೆಂದು ಹಠತೊಟ್ಟಳು. ರಾಜನ ಮಗಳಾಗಿ ಶರ್ಮಿಷ್ಠೆಯು ತಪ್ಪನ್ನು ಮಾಡಿದ್ದರೂ ದೇವಯಾನಿಯು ಯಯಾತಿ ರಾಜನ ಕೈಹಿಡಿದ ಬಳಿಕ ಹಿಂದಿನ ದುರ್ಘಟನೆಯನ್ನು ಮರೆಯಬಹುದಿತ್ತು. ಅಹಂಕಾರದಿಂದ ಅವಮಾನ ಮಾಡಿದ ಶರ್ಮಿಷ್ಠೆಯ ವಿರುದ್ಧ ಯಾವುದಾದರೊಂದು ರೀತಿಯಲ್ಲಿ ಸೇಡುತೀರಿಸಿಕೊಳ್ಳಲೇಬೇಕೆಂಬ ಛಲ ಹೊಂದಿದಳು.

ಶುಕ್ರಾಚಾರ್ಯರು ಪ್ರಿಯ ಪುತ್ರಿಯಾದ ದೇವಯಾನಿಯು ಅವರ ಬಳಿಗೆ ಅಳುತ್ತಾ ಸಾಗಿದಳು. ನಡೆದ ಸಂಗತಿಯನ್ನೆಲ್ಲ ಹೃದಯಕರಗುವಂತೆ ತಿಳಿಸಿದಳು. ಮಗಳಿಗೆ

ರಾಜಕುಮಾರಿಯಿಂದಾದ ಅವಮಾನವನ್ನು ಕೇಳಿದ ಶುಕ್ರಾಚಾರ್ಯರು ಬಹಳ ನೊಂದುಕೊಂಡರು. ಹಂಗಿನ ಜೀವನಕ್ಕೆ ವಿದಾಯಹೇಳುವೆನೆಂದು ವೃಷಪರ್ವನ ರಾಜ್ಯವನ್ನೇ ಬಿಟ್ಟು ನಡೆದರು. ದೈತ್ಯರಾಜನಾದ ವೃಷಪರ್ವನಿಗೆ ಶುಕ್ರಾಚಾರ್ಯರ ನಿರ್ಗಮನವು ಭಯವನ್ನುಂಟುಮಾಡಿತು. ಶುಕ್ರಾಚಾರ್ಯರು ದೇವತಾಪಕ್ಷವನ್ನು ವಹಿಸಿಯಾರೆಂಬ ಭಯದಿಂದ ಅವರ ಕಾಲಿಗೆ ರಾಜನು ಕ್ಷಮಿಸಿರೆಂದು ಮುಗಿಬಿದ್ದ. ನಿಮ್ಮ ಆದೇಶಕ್ಕೆ ಅನುಗುಣವಾಗಿ ವರ್ತಿಸುವೆನೆಂದು ಕೈಮುಗಿದು ಪ್ರಾರ್ಥಿಸಿದ. ಶಾಂತರಾದ ಶುಕ್ರಾಚಾರ್ಯರು ದೇವಯಾನಿಯನ್ನು ಸಮಾಧಾನಪಡಿಸೆಂದರು. ದೇವಯಾನಿಯ ಬಳಿಗೆ ರಾಜನು ತೆರಳಿದ. ದೇವಯಾನಿಯು "ಸಾವಿರ ದಾಸಿಯ ರೊಟ್ಟಿಗೆ ನಿನ್ನ ಮಗಳನ್ನೂ ದಾಸಿಯನ್ನಾಗಿ ಕಳುಹಿಸಿಕೊಡು. ಹಾಗಿದ್ದಲ್ಲಿ ಮಾತ್ರ ನನ್ನ ತಂದೆಯು ಇಲ್ಲಿರುತ್ತಾನೆ" ಎಂದಳು. ದೈತ್ಯಕುಲಹಿತಕ್ಕಾಗಿ ಶರ್ಮಿಷ್ಠೆಯು ದೇವ ಯಾನಿಯ ದಾಸ್ಯಕ್ಕೆ ಸಿದ್ಧಳಾದಳು.

ದೇವಯಾನಿಯ ದಾಂಪತ್ಯವು ಯಯಾತಿ ರಾಜನ ಒಟ್ಟಿಗೆ ಸುಖದಿಂದ ಸಾಗುತ್ತಿರಲು ಯದು, ತುರ್ವಸು ಎಂಬ ಇಬ್ಬರು ಮಕ್ಕಳನ್ನು ಪಡೆದರು. ದಾಸ್ಯ ವೃತ್ತಿಯಲ್ಲಿ ಕಾಲಕಳೆಯುತ್ತಿರುವ ಶರ್ಮಿಷ್ಠೆಗೆ ವಯಸ್ಸಿಗನುಗುಣವಾದ ಬಯಕೆಗಳು ಉಲ್ಬಣಗೊಂಡು ಯಯಾತಿ ರಾಜನನ್ನು ನಾನೂ ವರಿಸಬೇಕೆಂದುಕೊಂಡಳು. ಯಯಾತಿ ಬಳಿ ತನ್ನ ಬಯಕೆಯನ್ನು ಮುಂದಿಟ್ಟಳು. ರಾಜನು ಗಾಂಧರ್ವ ವಿಧಿಯಿಂದ ಕೈಹಿಡಿದ. ಇದ್ಯಾವುದೂ ದೇವಯಾನಿಗೆ ತಿಳಿದಿರಲಿಲ್ಲ. ಕಾಲಕ್ರಮದಂತೆ ಶರ್ಮಿಷ್ಠೆಯು ದ್ರುಹ್ಯು, ಅನು, ಪೂರು ಎಂಬ ಮೂವರು ಮಕ್ಕಳಿಗೆ ಜನ್ಮ ನೀಡಿದಳು. ಬಹಳ ಸಮಯದ ಅನಂತರ ದೇವಯಾನಿಗೆ ಮಕ್ಕಳನ್ನು ಕಂಡು ಸತ್ಯಸಂಗತಿ ಗೋಚರಿಸಿತು. ಯಯಾತಿಯು ದಾಸಿಯ ಬಳಿ ಪ್ರಣಯ ವ್ಯವಹಾರ ಕ್ಕಿಳಿದಿದ್ದಾನೆಂದು ಭಾರೀ ಸಿಟ್ಟುಗೊಂಡಳು. ದೇವಯಾನಿಯು ಶರ್ಮಿಷ್ಠೆಯನ್ನು ನೀಚಳನ್ನಾಗಿ ಕಂಡು ಹಂಗಿಸಿ ಹಿಂಸಿಸಬೇಕೆಂದು ಸ್ವಪ್ನ ಕಾಣುತ್ತಿರಬೇಕಾದರೆ; ತನ್ನ ಗಂಡನ ಏಕಾಂತಕ್ಕೆ ಸುಖದರಸಿಯಾಗಿದ್ದಾಳೆಂದು ಸುದ್ದಿ ಕಿವಿಗೆ ಎರಕಹೊಯ್ದಂ ತಾಯಿತು. ದೇವಯಾನಿಯು ಸಿಟ್ಟಿನ ಸಾಕಾರಮೂರ್ತಿಯಾಗಿ ತಂದೆಯ ಬಳಿಗೆ ಹೋದಳು. ನಡೆದ ಸಂಗತಿಯನ್ನೆಲ್ಲ ತಿಳಿಸಿದಳು. ಶುಕ್ರಾಚಾರ್ಯರು ಅತ್ಯಂತ ಕುಪಿತರಾದರು. ಯಯಾತಿಯನ್ನು ಉರಿಗಣ್ಣಿನಿಂದ ದಿಟ್ಟಿಸುತ್ತಾ ಉಗ್ರಮಾತುಗಳಿಂದ "ಎಲೈ! ಸ್ತ್ರೀಕಾಮುಕನೇ! ನಿನ್ನ ಪತ್ನಿಯನ್ನು ಬಿಟ್ಟು ಗುಪ್ತವಾಗಿ ಪ್ರಣಯ ವ್ಯವಹಾರವನ್ನು ನಡೆಸಿದ ನಿನಗೆ ಪ್ರಾಪಂಚಿಕ ಸುಖವನ್ನು ಅನುಭವಿಸುವ ಶಕ್ತಿಯೇ ಉಡುಗಿಹೋಗಲಿ!" ಎಂದು ಶಪಿಸಿದರು. ನವಯೌವನದ ಗಡುಸಾದ ಮೈಕಟ್ಟಿನ ರಾಜ ಎಪ್ಪತ್ತರ ಮುದಕನಾದ. ಅಕಾಲದಲ್ಲಿ ಮುದಿತನಕ್ಕೆ ತುತ್ತಾದ. ವಿಷಯ ಭೋಗಗಳಲ್ಲಿ ಅತಿಯಾದ ಕಾಮಾಂಧತನ ಅಧಃಪತನಕ್ಕೆ ನಾಂದಿಯಾಯಿತು.

ಶರ್ಮಿಷ್ಠೆಯು ಕ್ಷಣಕಾಲ ಹಮ್ಮಿನಿಂದ ಬೀಗಿದ್ದರಿಂದ ದೇವಯಾನಿಯ ದಾಸಿ ಯಾಗಿ ಗುಪ್ತಪ್ರಣಯ ನಡೆಸುವ ಸ್ಥಿತಿ ಮುಟ್ಟಿದಳು. ಅಲ್ಲಿಗೆ ನಿಲ್ಲದೆ ಯಯಾತಿಯೂ ಶಾಪಗ್ರಸ್ತನಾದ. ಯಯಾತಿಯು ಶುಕ್ರಾಚಾರ್ಯರ ಬಳಿ ಪರಿಪರಿಯಾಗಿ ಯೌವನ

ಕೊಡಿರೆಂದು ಬೇಡಿದ. "ಯುವಕರು ಅವರ ಯೌವನ ಕೊಟ್ಟರೆ ಸ್ವೀಕರಿಸಿ ನಿನ್ನ ವಾರ್ಧಕ್ಯ ಅವರಿಗೆ ಕೊಡು. ನಿನಗೆ ಅವರ ಯೌವನ ಬರಲಿ!" ಎಂದು ಹೇಳಿದರು. ಮಂತ್ರಬಲವುಳ್ಳವರ ಮಾತುಗಳಲ್ಲಿ ಎಂತಹ ಶಕ್ತಿ ಇದೆ ಎನ್ನಲು ಇದೊಂದು ದೊಡ್ಡ ನಿದರ್ಶನ.

ಯಯಾತಿ ಮುದಿತನವನ್ನು ಹೊತ್ತುಕೊಂಡು ಅರಮನೆಗೆ ಬಂದ. ಮಕ್ಕಳನ್ನು ಬಳಿಗೆ ಕರೆದ. ಕ್ರಮವಾಗಿ ಎಲ್ಲರ ಬಳಿಯೂ ಸಾಂಸಾರಿಕ ಸುಖದ ಬಯಕೆಯಿಂದ ತಾರುಣ್ಯವನ್ನು ಬೇಡಿದ. ಯಯಾತಿಯ ಬೇಡಿಕೆಗೆ ಯಾರೂ ಸ್ಪಂದಿಸಲೇ ಇಲ್ಲ. "ತಂದೆಯಾದವನು ತರುಣರಾದ ನಮಗೆ ವಿವಾಹಮಾಡುವುದನ್ನು ಬಿಟ್ಟು ಕಾಮಾಂಧನಾಗಿ ನಮ್ಮ ತಾರುಣ್ಯವನ್ನೇ ಕಸಿದುಕೊಳ್ಳುವ ಪ್ರಯತ್ನದಲ್ಲಿದ್ದಾನೆ" ಎಂಬ ಭಾವನೆಯನ್ನು ವ್ಯಕ್ತಪಡಿಸಿದರು. ಕೊನೆಗೆ ಯಯಾತಿಯು ತನ್ನ ಕೊನೆಯ ಮಗನಾದ ಪುರುವನ್ನು ಪ್ರಾರ್ಥಿಸಿದ. "ತಂದೆಯ ಸುಖಕ್ಕಾಗಿ ನಾನು ಮುದಿತನವನ್ನು ಧರಿಸಲು ಸಿದ್ಧನಿದ್ದೇನೆ" ಎಂದು ಮುಂದೆ ಬಂದ. ತನ್ನ ತಂದೆಗೆ ತಾರುಣ್ಯವನ್ನು ಕೊಟ್ಟ. ಮುದಿತನವನ್ನು ಸ್ವೀಕರಿಸಿದ.

ದೇವಯಾನಿ, ಶರ್ಮಿಷ್ಠೆ, ಉಳಿದ ಮಕ್ಕಳು ಎಲ್ಲರೂ ಒಂದೊಂದು ತೆರನಾದ ಸ್ವಾರ್ಥದಿಂದಲೇ ಬದುಕುತ್ತಿದ್ದರು. ಸ್ವಾರ್ಥಸಾಧಕರ ನಡುವೆ ಪುರು ಧ್ರುವನಕ್ಷತ್ರದಂತೆ ಸದ್ಗುಣಗಳಿಂದ ಬೆಳಗಿದ. ನವಯೌವನವಿತ್ತು. ಬೊಕ್ಕಸ ತುಂಬಿತ್ತು. ಸ್ವಾರ್ಥಕ್ಕೂ ಅವಕಾಶವಿತ್ತು. ಆದರೂ ತ್ಯಾಗಿಯಾಗಿ ಭೋಗಜೀವನಕ್ಕೆ ವಿದಾಯ ಹೇಳಿ ಬದುಕಿದ. ಶ್ರೇಷ್ಠ ಪುರುಷರು ಬಾಹ್ಯ ವಿಕಾರಗಳಿಗೆ ತಮ್ಮನ್ನು ಮಾರಿಕೊಳ್ಳರು ಎನ್ನುವುದಕ್ಕೆ ಪುರು ಉತ್ತಮ ನಿದರ್ಶನವಾಗಿದ್ದಾನೆ.

## ಆಸೆಗೆ ಕೊನೆಯಿಲ್ಲ!

ಪುರುವಿನ ಯೌವನವನ್ನು ಪಡೆದುಕೊಂಡ ಯಯಾತಿರಾಜನು ಸಾವಿರವರುಷ ವಿಷಯಸುಖದಲ್ಲಿಯೇ ಮಗ್ನನಾದನು. ಇಂದ್ರಿಯಗಳನ್ನು ವಿಷಯಸುಖದ ಕಡೆ ಹರಿಸಿದಷ್ಟೂ ದಾಹವನ್ನೇ ಹೆಚ್ಚಿಸುತ್ತವೆ ವಿನಾ ಸಾಕೆನ್ನುವುದಿಲ್ಲ. ಸಾವಿರ ವರುಷ ಇಂದ್ರಿಯಗಳನ್ನು ವಿಷಯಪದಾರ್ಥಗಳಿಂದ ತಣಿಸಬೇಕೆಂದು ಪ್ರಯತ್ನಿಸಿದರೂ ಸಾಧ್ಯವಾಗದಾದಾಗ ಸಮಗ್ರ ಜೀವನದೆಡೆ ಹಿನ್ನೋಟ ಹರಿಸಿದ. ಒಮ್ಮಿಂದೊಮ್ಮೆಲೆ ವೈರಾಗ್ಯದ ಹೊಸ ಬೆಳಕು ಹೃದಯದಲ್ಲಿ ಬೆಳಗಿತು. ಅನುಭವದ ಉದ್ಗಾರ ಹೊರಟಿತು.

**ನ ಜಾತು ಕಾಮಃ ಕಾಮಾನಾಂ ಉಪಭೋಗೇನ ಶಾಮ್ಯತಿ ।**
**ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥** — (೯-೧೯-೧೪)

"ವಿಷಯೋಪಭೋಗದಿಂದ ಕಾಮನೆಯನ್ನು ತಣಿಸಲಾಗದು. ಬೆಂಕಿಗೆ ಹವಿಸ್ಸನ್ನ ರ್ಪಿಸಿದಷ್ಟು ಜ್ವಾಲೆಯು ಜ್ವಲಿಸೀತೇ ವಿನಾ ಉಪಶಮನವಾಗದು. ವಿಷಯ

ವೈರಾಗ್ಯವೇ ಕಾಮವನ್ನು ದಹಿಸೀತು!'' ಎನ್ನುವ ತೀರ್ಮಾನಕ್ಕೆ ಬಂದ. ಯಯಾತಿಯ ಸಾವಿರಾರು ವರುಷಗಳ ಜೀವನಾನುಭವದ ಈ ಉದ್ಗಾರ ಲೋಕವಿಖ್ಯಾತವಾಗಿದೆ.

ನಾವೆಲ್ಲರೂ ಪ್ರಾಪಂಚಿಕ ಸುಖದ ಭೋಗದಲ್ಲಿಯೇ ಮಗ್ನರಾಗಿ ವ್ಯರ್ಥವಾಗಿ ಕಾಲಹರಣ ಮಾಡುತ್ತಿದ್ದೇವೆ. ವಿಷಯುಗಳತ್ತ ಚಲಿಸಿದಷ್ಟೂ ಬಯಕೆಗಳ ಸರ ಮಾಲೆಯು ಬೆಳೆದೀತೇ ವಿನಾ ಸಾಕೆನ್ನಿಸುವುದು ಬಲು ಕಷ್ಟ. ಬೆಂಕಿಗೆ ಕಟ್ಟಿಗೆ ರಾಶಿಗಳನ್ನು ಒಡ್ಡಿದಷ್ಟೂ ಬೆಂಕಿಯು ಜ್ವಲಿಸೀತೆ ವಿನಾ ಸಾಕೆನ್ನುವುದೇ?

ವಿಷಯಕಾಮನೆಯು ರಜೋಗುಣದ ಪರಿಣಾಮವಾಗಿದೆ. ಇದೊಂದು ದೊಡ್ಡ ಹೊಟ್ಟೆಬಾಕ. ಮಹಾಪಾಪಿಷ್ಠ. ನಮ್ಮ ಜೀವನದ ದೊಡ್ಡ ಶತ್ರುವೇ ಕುತ್ಸಿತಕಾಮನೆ ಎನ್ನುತ್ತಾನೆ ಗೀತಾಚಾರ್ಯ–

ಕಾಮ ಏಷ ಕ್ರೋಧ ಏಷಃ ರಜೋಗುಣಸಮುದ್ಭವಃ ।
ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥ — (ಗೀತಾ ೩-೩೭)

ಮುಪ್ಪು ನಮ್ಮನ್ನಡವರಿಸಿಕೊಂಡರೂ ಕಾಮದ ಬಯಕೆ ತಣಿಸದು. ಕೂದಲು ಉದುರಿ, ಹಲ್ಲುಗಳುದುರಿ ಹೋದರೂ ಮನದಲ್ಲಿ ಬೀಡುಬಿಟ್ಟ ಕಾಮನೆ ಅಳಿಯದು.

ಎಷ್ಟು ಭೋಗ ಸಾಮಗ್ರಿಗಳಿದ್ದರೂ ಕಾಮನೆಯು ಅಭಿವೃದ್ಧಿಯಾಗುತ್ತವೆ ಹೊರತು, ತಣಿಸಲು ಸಾಧ್ಯವೇ ಇಲ್ಲ. ಜೀವನ ಜೀವನದ ಶತ್ರು ಕಾಮ. ಗೀತಾ ಚಾರ್ಯನೇ ಹೇಳಿದ ಮಾತಿದು.

ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।
ಕಾಮರೂಪೇಣ ಕೌಂತೇಯ! ದುಷ್ಪೂರೇಣಾನಲೇನ ಚ ॥

ಎಂದು. ರೋಮ್ ದೇಶದಲ್ಲಿ ಒಬ್ಬ ರಾಜನಿದ್ದ. ಅವನಿಗೆ ನಿರಂತರ ತಿನ್ನಬೇಕೆಂಬ ಆಸೆ. ಎಷ್ಟು ತಿಂದರೂ ತೃಪ್ತಿ ಎಂಬುದು ಇವನಿಗಿಲ್ಲ. ನಿರಂತರ ತಿನ್ನುವುದೇ ತಿನ್ನುವುದು. ಹೊಟ್ಟೆ ತುಂಬಿದರೆ ವಾಂತಿ ಮಾಡುವುದು. ಮತ್ತೇ ತಿನ್ನುವುದು ಮತ್ತೆ ವಾಂತಿ. ದಿನಕ್ಕೆ ಇಪ್ಪತ್ತೊಂದು ಬಾರಿ ಊಟ ಮಾಡುತ್ತಿದ್ದನಂತೆ. ಆಸೆಯಿಂದ ತಿನ್ನ ಬೇಕೆಂದು ವಾಂತಿ ಮಾಡುತ್ತಿದ್ದ. ಎಷ್ಟು ತಿಂದರೂ ಈ ರಾಜನಿಗೆ ತೃಪ್ತಿ ಇರಲಿಲ್ಲವಂತೆ.

ಆದ್ದರಿಂದ ''ಸುಖಭೋಗದಿಂದ ನಮ್ಮ ಮನಸ್ಸಿಗೆ ಆಸೆಗಳನ್ನು ತಣಿಸಲು ಸಾಧ್ಯವಿಲ್ಲ'' ಎಂಬುದನ್ನು ತನ್ನ ಅನುಭವದಿಂದ ಯಯಾತಿರಾಜನು ಹೇಳಿದ. ಇದನ್ನರಿತು ವಿರಕ್ತನಾಗಿ ಸಾಧನೆಮಾರ್ಗ ಹಿಡಿದು ಮುಂದೆ ರಾಜರ್ಷಿಯಾಗಿ ಮೆರೆದ ಎಂಬ ಚರಿತ್ರೆ ಭಾಗವತದಲ್ಲಿದೆ.

ಇದನ್ನು ನಾವೆಲ್ಲರೂ ಅರ್ಥಮಾಡಿಕೊಳ್ಳಬೇಕು. ಅತಿಯಾದ ಆಸೆಯನ್ನು ಬಿಟ್ಟು ಭಗವಂತ ಕೊಟ್ಟಿದ್ದರಲ್ಲಿ ತೃಪ್ತರಾಗಿರಬೇಕು. ಈ ನಲ್ನುಡಿಯನ್ನು ನೆನಪಿನಲ್ಲಿಟ್ಟು ಕೊಳ್ಳಬೇಕು.

**ಜೀರ್ಯಂತಿ ಜೀರ್ಯತಃ ಕೇಶಾಃ ದಂತಾ ಜೀರ್ಯಂತಿ ಜೀರ್ಯತಃ ।**
**ಧನಾಶಾ ಜೀವಿತಾಶಾ ಚ ಜೀರ್ಯತೋಽಪಿ ನ ಜೀರ್ಯತಃ ॥**

ಹಣ್ಣಾದವನ ತಲೆ ಹಣ್ಣಾಗುತ್ತದೆ. ಹಲ್ಲುಗಳು ಉದುರುತ್ತವೆ. ಧನದ ಆಸೆ, ಜೀವಿಸಬೇಕೆಂಬ ಆಸೆಗಳು ಮಾತ್ರ ನೀಗುವುದೇ ಇಲ್ಲ.

ವಿಷಯವಿರಕ್ತನಾದ ಯಯಾತಿಯು ಭೌತಿಕ ಸಾಮ್ರಾಜ್ಯವನ್ನೆಲ್ಲ ತ್ಯಜಿಸಿ ತಪಸ್ವಿಗಾಗಿ ಕಾಡಿಗೆ ಹೋಗಬಯಸಿದಾಗ ಮಕ್ಕಳಿಗೆ ರಾಜ್ಯವನ್ನು ಹಂಚಿದರೂ ತ್ಯಾಗಮನೋಭಾವದ ಕಿರಿಯ ಪುತ್ರ ಪುರುವಿಗೆ ಹಿರಿಯಸ್ಥಾನ ಕೊಟ್ಟನು. ತನ್ನ ಯೌವನವನ್ನೂ ಅವನಿಗೆ ನೀಡಿದನು. ಮುಂದೆ ಕಾಡಿಗೆ ಹೋಗಿ ಅಧ್ಯಾತ್ಮದ ಸೌಧವನ್ನೇರಿ ಉತ್ತಮ ತಪವನ್ನಾಚರಿಸಿ ಉತ್ತಮ ಲೋಕವನ್ನು ಹೊಂದಿದನು.

ಯಯಾತಿಯ ಜೀವನವು ನಮ್ಮ ಜೀವನದ ಏಳುಬೀಳುಗಳಿಗೆ ಕನ್ನಡಿ ಹಿಡಿದಂತಿದೆ. ಒಳ್ಳೆಯ ಮತ್ತು ಕೆಟ್ಟ ಸಂಸ್ಕಾರಗಳ ತಿಕ್ಕಾಟ ನಡೆದಿದೆ ಯಯಾತಿಯ ಸಂಸಾರದಲ್ಲಿ ದ್ವೇಷ, ಪ್ರತೀಕಾರ, ಶಾಪ ಮುಂತಾದ ಜೀವನದ ಹತ್ತಾರು ಬೀಳಲುಗಳಿಗೆ ಸಿಕ್ಕಿಬಿದ್ದು ಏನೋ ವ್ಯರ್ಥ ಬದುಕನ್ನು ಸಾಗಿಸಿದ. ಕೊನೆಗೊಮ್ಮೆ ಘನ ವೈರಾಗ್ಯವನ್ನು ಹೊಂದಿದ. ಪಶ್ಚಾತ್ತಾಪದಗ್ಧನಾಗಿ ಋಷಿಗಳಿಗೆ ಅಗ್ರಣಿ ಎನಿಸಿದ. ನಮ್ಮ ಜೀವನದಲ್ಲಿ ಎಂದಾದರೂ ಇವನಿಗೆ ಬಂದಂತಹ ವೈರಾಗ್ಯ ಅನುಭವ ಹಾಯ್ದು ಬರಲಿ!!

ಮುಂದೆ ಪುರುವಿನಿಂದ ಅನೇಕ ವಿಷ್ಣುಭಕ್ತರಾದ ರಾಜರ ಸಂತಾನ ಮುಂದುವರಿಯಿತು. ಮಹಾಭಾರತದಲ್ಲಿಯ ರಾಜರುಗಳಾದ ಭೀಮಾರ್ಜುನ–ದುರ್ಯೋಧನಾದಿಗಳೆಲ್ಲರೂ ಇವನ ವಂಶದವರಾದ್ದರಿಂದ ಅವರೆಲ್ಲರೂ ಪೌರವರೆಂದೇ ವಿಖ್ಯಾತರು. ಪುರುವಿನ ತ್ಯಾಗ ಔದಾರ್ಯಗಳನ್ನು ನೆನಪಿಸಿಕೊಳ್ಳುವುದಕ್ಕಾಗಿಯೇ ಪೌರವರೆಂಬ ಹೆಸರು ವಾಡಿಕೆಯಾಯಿತು.

## ತ್ಯಾಗಯೋಗಿ ರಂತಿದೇವ

ಪುರುವಂಶದಲ್ಲಿ ರಂತಿದೇವನೆಂಬ ರಾಜನ ಉದಯವಾಯಿತು. ದೇಶದಲ್ಲಿ ಕ್ಷಾಮ ಉಂಟಾಗಲು ಜನರ ಸಖ್ಯಕ್ಕಾಗಿ ತನ್ನ ಸರ್ವಸ್ವವನ್ನೂ ದಾನಮಾಡಿದ. ಸಮಗ್ರ ಕುಟುಂಬವೇ ೪೮ ದಿವಸಗಳ ಕಾಲ ಉಪವಾಸವನ್ನಾಚರಿಸಿತು. ನೀರೂ ಕುಡಿಯಲು ದೊರೆಯಲಿಲ್ಲ. ರಾಜನಾಗಿ ಬೇಕಾದಂತೆ ಮೆರೆಯಬಹುದಾಗಿದ್ದರೂ ಪ್ರಜೆಗಳು ಉಪವಾಸವಿರಲು ತಾನೊಬ್ಬನೇ ಸ್ವಾರ್ಥಿಯಾಗಿ ಭುಂಜಿಸಲು ಬಯಸಲಿಲ್ಲ. ಈ ಮನೋಭಾವ ಇಂದು ಯಾವ ಮಂತ್ರಿಮಹೋದಯರಲ್ಲಿಯೂ ಇಲ್ಲ. ಏನೇ ಕಾಯಿದೆ ಕಾನೂನುಗಳಿದ್ದರೂ ರಾಜನು ಅದನ್ನು ಮೊದಲು ಅಳವಡಿಸಿಕೊಳ್ಳಬೇಕು. ಅನಂತರ ಮಂತ್ರಿಗಳಿಗೆ. ಅನಂತರ ಪ್ರಜೆಗಳಿಗೆ. 'ಆತ್ಮಾನಂ ಪ್ರಥಮಂ ರಾಜಾ ವಿನಯೇನೋಪಪಾದಯೇತ್' ಎನ್ನುತ್ತಾರೆ. ಇಂದು ಈ ಕ್ರಮ ಬದಲಾಗಿದೆ. ಏನೇ ಕಾಯಿದೆ–ಕಾನೂನುಗಳಿದ್ದರೂ ಮೊದಲು ಪ್ರಜೆಗಳಿಗೆ. ಮಂತ್ರಿಗಳು ಬೇಕಾದಲ್ಲಿ ಸ್ವೀಕರಿಸಬಹುದು. ಇಂತಹ ಸ್ಥಿತಿಯನ್ನು ಇಂದು ನಾವೆಲ್ಲರೂ ಕಾಣುತ್ತಿದ್ದೇವೆ.

೪೮ ದಿನಗಳ ಅನಂತರ ಸ್ವಲ್ಪ ಆಹಾರ ದೊರೆಯಿತು. ಹರಿಗೆ ಅದನ್ನು ಅರ್ಪಿಸಿ ಇನ್ನೇನು ಸ್ವೀಕರಿಸಲು ಉದ್ಯುಕ್ತನಾದಾಗ ಒಬ್ಬ ಅತಿಥಿ ಬ್ರಾಹ್ಮಣನು ಬಂದು ಹಸಿವೆ ಎಂದು ಮನೆಗೆ ಬಂದ. ರಂತಿದೇವ ಸಂತುಷ್ಟನಾಗಿ ಅತಿಥಿಸತ್ಕಾರವನ್ನು ಮಾಡಿ ಭೋಜನ ಮಾಡಿಸಿದ. ಉಳಿದದ್ದನ್ನು ಭುಂಜಿಸಹೊರಟಾಗ ಒಬ್ಬ ಶೂದ್ರನು ಬಂದು ಅನ್ನ ಬೇಡಿದ. ರಾಜನು ಅವನಿಗೆ ನೀಡಿದ. ಹೀಗೆಯೇ ಅವನು ತೃಪ್ತನಾಗಿ ಹೋದಬಳಿಕ ಬೇಡನೊಬ್ಬ ನಾಯಿಗಳೊಟ್ಟಿಗೆ ಅನ್ನವನ್ನರಸಿ ಅರಸನ ಬಳಿ ಬಂದು ಬೇಡಿದ. ರಂತಿದೇವ ಏನೂ ಉದ್ವೇಗಗೊಳ್ಳದೆ 'ಭಗವಂತನು ಪ್ರೀತನಾಗಲಿ!' ಎಂದು ಅವರಿಗೆ ಅನ್ನ ನೀರುಗಳನ್ನುಣಿಸಿದ. ಕೊನೆಗೆ ಒಬ್ಬರಿಗೆ ಸಾಕಾಗುವಷ್ಟು ನೀರು ಉಳಿದಿತ್ತು. ಅಷ್ಟನ್ನೇ ಕುಡಿದು ತೃಪ್ತನಾಗುತ್ತೇನೆಂದು ನೀರು ಕುಡಿಯಲು ಮುಂದಾದ ಆ ಸಂದರ್ಭದಲ್ಲಿಯೂ ವಿಧಿಯು ತನ್ನ ಪರೀಕ್ಷೆಯನ್ನು ಬಿಡಲಿಲ್ಲ. ಅತ್ಯಂತ ಹೀನಸ್ಥಿತಿಯಲ್ಲಿದ್ದ ಶ್ವಪಚನೊಬ್ಬ ಆಗಮಿಸಿ ನೀರು ಕೊಡಿ! ಎಂದು ಬೇಡಿದ. ರಂತಿದೇವನು ಉಳಿದ ಆ ಸ್ವಲ್ಪ ನೀರನ್ನೂ 'ಸರ್ವಪ್ರಾಣಿಹೃದಿಸ್ಥನಾದ ಭಗವಂತನು ಪ್ರೀತನಾಗಲಿ!' ಎಂದು ಚಿಂತಿಸಿ ಅರ್ಪಿಸಿದ. ಇಂತಹ ತ್ಯಾಗವನ್ನು ಮಾಡಿದರೂ ಕಿಂಚಿತ್ತೂ ಗರ್ವದಿಂದ ಬೀಗದೆ ಅಮೃತಮಯ ಮಾತುಗಳನ್ನಾಡಿದ–

**ನ ಕಾಮಯೇಽಹಂ ಗತಿಮೀಶ್ವರಾತ್ಪರಾಂ**
**ಮಹದ್ಧಿಯುಕ್ತಾಮಪುನರ್ಭವಂ ವಾ ।**
**ಆರ್ತಿಂ ಪ್ರಪದ್ಯೇಽಖಿಲದೇಹಭಾಜಾಂ**
**ಅಂತಃಸ್ಥಿತಾಂ ಯೇನ ಭವಂತ್ಯದುಃಖಾಃ ॥**
— (೯–೨೧–೧೨)

"ನನಗೆ ಭೂದೇವಿಯ ಒಡೆತನ ಬೇಡ. ಸ್ವರ್ಗಸಿರಿಯೂ ಬೇಡ. ಎಲ್ಲ ಜನರ ದುಃಖವೂ ನನಗೊಬ್ಬನಿಗೇ ಒದಗಿ ಬರಲಿ! ಎಲ್ಲರೂ ನಿರ್ದುಃಖಿಗಳಾಗಲಿ!" ಎಂದ.

ಇಂತಹ ಮಾತನ್ನು ಇಂದಿನ ಯಾವ ರಾಜರೂ ಆಡರು. ರಾಜ್ಯ, ಐಶ್ವರ್ಯ, ಹೆಂಡತಿ, ಮಕ್ಕಳು ಎಲ್ಲವನ್ನೂ ಕೊಡು –ಎಂದು ದೇವರ ಮುಂದೆ ತಕರಾರು ಮಾಡುತ್ತೇವೆ. ಆದರೆ ರಂತಿದೇವನು ಜಗತ್ತಿನಲ್ಲಿ ಯಾರೂ ಬೇಡದ ವರವನ್ನು ಬೇಡಿದ. 'ಭಗವಂತನು ಸಕಲದುಃಖವನ್ನು ನನಗೆ ಕರುಣಿಸಲಿ!' ಎಂದು ಯಾರು ಕೇಳುತ್ತಾರೆ? ಇತಿಹಾಸದಲ್ಲಿ ಇಂತಹ ಉದಾಹರಣೆಯೇ ಇಲ್ಲ. "ಹಸಿದ ಜನರಿಗೆ ಅನ್ನ–ನೀರುಗಳನ್ನು ನೀಡಿದ್ದರಿಂದ ನನ್ನ ಹಸಿವು, ನೀರಡಿಕೆ, ದೇಹದ ಶ್ರಮ ಎಲ್ಲವೂ ಇಂಗಿಹೋಯಿತು" ಎನ್ನುತ್ತಾನೆ–

**ಕ್ಷುತ್ತೃಟ್ಶ್ರಮೋ ಗಾತ್ರಪರಿಭ್ರಮಶ್ಚ**
**ದೈನ್ಯಂ ಕ್ಲಮಃ ಶೋಕವಿಷಾದಮೋಹಾಃ ।**
**ಸರ್ವೇ ನಿವೃತ್ತಾಃ ಕೃಪಣಸ್ಯ ಜಂತೋಃ**
**ಜಿಜೀವಿಷೋರ್ಜೀವಜಲಾರ್ಪಣಾನ್ಮೇ ॥** — (೯–೨೧–೧೩)

ಎಂತಹ ಉದ್ಗಾರ! ತನ್ನ ಪ್ರಾಣದ ಕಡೆಗೂ ಗಮನಹರಿಸದೆ ಕರುಣೆಯಿಂದ ನೀರನ್ನುಣಿಸಲು ದೇವತೆಗಳು ಸಂತುಷ್ಟರಾಗಿ ದರ್ಶನವನ್ನಿತ್ತರು ರಾಜನು ಮತ್ತಷ್ಟೂ ಭಗವಂತನಲ್ಲಿ ಭಕ್ತಿ ಮಾಡುತ್ತಾ ಮುಕ್ತನಾದನು.

ಭಾಗವತದಲ್ಲಿಯ ಯಯಾತಿ ಮತ್ತು ರಂತಿದೇವನ ಕಥೆಗಳ ಜೋಡಣೆಯಿಂದ ಭೋಗ ಮತ್ತು ಸದ್ವರ್ತನೆಯ ಜೀವನವನ್ನು ಸೂಚಿಸಿದ್ದಾರೆ. ನಮ್ಮ ಜೀವನವನ್ನು ಹೇಗೆ ನಿರೂಪಿಸಿಕೊಳ್ಳಬೇಕೆನ್ನುವುದಕ್ಕೆ ಈ ಎರಡು ಕಥೆಗಳು ಉತ್ತಮ ಪ್ರೇರಣೆಯನ್ನು ನೀಡುತ್ತವೆ.

ಇಂತಹ ನೂರಾರು ಮಂದಿಯನ್ನು ನವಮಸ್ಕಂಧವು ತೆರೆಸುವಂತೆ ವ್ಯಾಸರು ಚಿತ್ರಿಸಿದ್ದಾರೆಂಬಲ್ಲಿಗೆ ನವಮಸ್ಕಂಧವು ಲಕ್ಷ್ಮೀಹಯಗ್ರೀವನಿಗೆ ಸಮರ್ಪಿತವಾಯಿತು.

ಶ್ರೀ ಮಧ್ವೇಶಾರ್ಪಣಮಸ್ತು

# ಅಥ ದಶಮಸ್ಕಂಧಃ

ಶುಕಮುನಿಗಳಿಂದ ಅನೇಕ ರಾಜರ ಪರಮಾದ್ಭುತ ಚರಿತ್ರೆಯನ್ನು ಕೇಳಿದ ಪರೀಕ್ಷಿತನು ಪುನಃ ಪ್ರಶ್ನಿಸುತ್ತಾನೆ.

ಶುಕಾಚಾರ್ಯರೇ! ಸೋಮ ಸೂರ್ಯ ಕುಲಗಳ ವಿಸ್ತಾರ ಚರಿತ್ರೆಯನ್ನು, ವಾಮನ ರಾಮ ನರಸಿಂಹ ಮುಂತಾದ ಭಗವಂತನ ಅವತಾರಮಹಿಮೆಗಳನ್ನು ತಿಳಿಸಿದ್ದೀರಿ. ಆದರೆ ವೃಷ್ಣಿವಂಶಪ್ರದೀಪನಾದ ಭಗವಾನ್ ಶ್ರೀಕೃಷ್ಣನ ಪುಣ್ಯಕಥೆಯನ್ನು ನಾನು ಕೇಳಬೇಕು. "ಯಾವ ಶ್ರೀಹರಿಯು ನನ್ನ ತಾಯಿಯು ನನ್ನನ್ನು ಗರ್ಭದಲಿ ಧರಿಸಿ ದ್ರೌಣಿಯ ಬಾಣಕ್ಕೆ ಹೆದರಿ ಬಂದಾಗ ಗರ್ಭದ ಒಳಗೆ ನಿಂತು ರಕ್ಷಿಸಿದನೋ, ಕುರುಕುಲದ ಬೀಜವಾಗಿದ್ದ ನನ್ನನ್ನು, ಅಶ್ವತ್ಥಾಮನ ಅಸ್ತ್ರವು ಸುಡದಿರುವಂತೆ ಸಲಹಿದನೋ ಅಂತಹ ದೇವದೇವೋತ್ತಮನಾದ ಶ್ರೀಕೃಷ್ಣನ ಮಹಿಮೆಯನ್ನು ವಿವರಿಸಿರಿ" ಎನ್ನುತ್ತಾನೆ–

**ದ್ರೌಣ್ಯಸ್ತ್ರವಿಪ್ಲುಷ್ಟಮಿದಂ ಮದಂಗಂ**
**ಸಂತಾನಬೀಜಂ ಕುರುಪಾಂಡವಾನಾಮ್ ।**
**ಜುಗೋಪ ಕುಕ್ಷಿಂ, ಗತ ಆತ್ತಚಕ್ರಃ**
**ಮಾತುಶ್ಚ ಮೇ ಯಃ ಶರಣಂ ಗತಾಯಾಃ ॥**

— (೧೦–೧–೬)

ಎಂದು. ಪರಮಭಾಗವತನಾದ ಪರೀಕ್ಷಿತನ ಜಿಜ್ಞಾಸೆಯನ್ನು ಗಮನಿಸಿದ ಶುಕಮುನಿಗಳು ವಿಸ್ತಾರವಾಗಿ ಶ್ರೀಕೃಷ್ಣನ ಕಥೆಯನ್ನು ನಿರೂಪಿಸುತ್ತಾರೆ.

ಜಗತ್ತಿನ ತುಂಬ ಜಘನ್ಯವೃತ್ತಿಯ ದುರ್ಜನರೇ ತುಂಬಿಕೊಂಡಿರಲು ಧರೆಯು ಅಧರ್ಮಭಾರದಿಂದ ಖಿನ್ನಳಾದಳು. ತನ್ನ ದುಃಖವನ್ನೂ ಅದಕ್ಕೆ ಕಾರಣವನ್ನೂ ಬ್ರಹ್ಮದೇವನಿಗೆ ತಿಳಿಸಿದಳು. ಬ್ರಹ್ಮದೇವರು ಧರ್ಮದ ಸಂರಕ್ಷಣೆಗಾಗಿ ದೇವತೆಗಳಿಂದೊಡಗೂಡಿ ಕ್ಷೀರಸಾಗರಕ್ಕೆ ನಡೆದ. ಶ್ರೀಮನ್ನಾರಾಯಣನಿಗೆ ಭೂಲೋಕದ ಅನರ್ಥಗಳೆಲ್ಲವೂ ಅರ್ಥವಾಗಿತ್ತು. "ದುಷ್ಟ ಶಕ್ತಿಗಳ ದಮನಕ್ಕಾಗಿ ದೇವತೆಗಳೆಲ್ಲರೂ ಅವತರಿಸಿರಿ" ಎಂದು ಆದೇಶಿಸಿದ. ತಾನು ಅವತರಿಸುವುದಾಗಿ ತಿಳಿಸಿ ಅಭಯ ದಾನಮಾಡಿದ.

## ಕಂಸನಿಗೆ ಅಶರೀರವಾಣಿ

ಒಂದು ದಿನ ಶೂರನ ಮಗನಾದ ವಾಸುದೇವನು ಕಂಸನ ತಂಗಿಯಾದ ದೇವಕಿಯ ಕರಕಮಲವನ್ನು ಹಿಡಿದನು. ಅನಂತರ ಮರಳಿ ತೆರಳಲು ರಥವನ್ನೇರಿದನು. ಕಂಸನು ದೇವಕಿಯ ಸಂತಸಕ್ಕಾಗಿ ಸಾರಥ್ಯವನ್ನು ಸ್ವತಃ ತಾನೇ

ವಹಿಸಿಕೊಂಡನು. ಬಹಳ ಉತ್ಸಾಹದಲ್ಲಿ ದಿಬ್ಬಣವನ್ನು ಕರೆದೊಯ್ಯುತ್ತಿದ್ದ ಕಂಸನಿಗೆ ಅಶರೀರವಾಣಿಯೊಂದು ಕೇಳಿಸಿತು–

**ಪಥಿ ಪ್ರಗ್ರಹಿಣಂ ಕಂಸಮಾಭಾಷ್ಯಾಹಾಶರೀರವಾಕ್ ।**
**ಅಸ್ಯಾಸ್ತ್ವಾಮಷ್ಟಮೋ ಗರ್ಭೋ ಹಂತಾ ಯಾಂ ನಯಸೇಬುಧ! ॥**

— (೧೦–೧–೩೪)

"ಎಲೈ! ಮೂಢನೇ! ತಂಗಿ ಎಂಬ ಮೋಹದ ಬಲೆಗೆ ಸಿಕ್ಕಿಬಿದ್ದಿರುವಿ! ಇವಳ ಎಂಟನೆಯ ಗರ್ಭವೇ ನಿನಗೆ ಮೃತ್ಯುವಾಗಲಿದೆ" ಎಂದು ಅಂತರಿಕ್ಷದಲ್ಲಿ ವಾಯು ದೇವರು ನುಡಿದದ್ದೇ ತಡ; ಕಂಸನು ರಭಸದಿಂದ ಖಡ್ಗವನ್ನು ಸೆಳೆದು, ದೇವಕಿಯ ಜುಟ್ಟನ್ನು ಹಿಡಿದು ಸಾಯಿಸಲು ಸನ್ನದ್ಧನಾದನು. ಇಲ್ಲಿಯ ತನಕ ಇದ್ದ ಉತ್ಸಾಹ, ಸಂಭ್ರಮಗಳೇ ಬೇರೆ. ಈಗಿನ ಪ್ರವೃತ್ತಿಯೇ ಬೇರೆ. ತನ್ನ ಜೀವನಕ್ಕೆ ತನ್ನ ಅಧಿಕಾರಕ್ಕೆ ಭಂಗಬರುತ್ತದೆಂಬ ವಾರ್ತೆಯನ್ನು ಕೇಳಿದ ಕೂಡಲೇ ಯಾರೆಂದೂ ಆಲೋಚಿಸದೆ ತನ್ನ ತಂಗಿಯ ಶಿರವನ್ನೇ ಉರುಳಿಸಲು ಹೊರಟ. ವಸುದೇವನು ಪರಿಪರಿಯಾಗಿ ಪ್ರಾರ್ಥಿಸಿ ಬಗೆಬಗೆಯಾಗಿ ಉಪದೇಶಿಸುತ್ತಾನೆ.

'ಆಪತ್ತುಗಳೊದಗಿದಾಗ ತಪ್ಪಾದ ಅಡಿಗಳನ್ನಿಡಬಾರದು. ಉದ್ದೇಶವನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಅನರ್ಥಕ್ಕೆ ತುತ್ತಾಗದಿರುವಂತೆ ಜಾಗ್ರತರಾಗ ಬೇಕು. ದೇವವಾಣಿಯ ಮೂಲಕ ದೇವತೆಗಳು ನಮಗೆ ಎಚ್ಚರವನ್ನು ಕೊಡುತ್ತಾರೆ. ಅದನ್ನು ಅರ್ಥಮಾಡಿಕೊಂಡು ದೇವತೆಗಳೂ ಸಂತುಷ್ಟರಾಗುವಂತೆ ಜೀವನ ನಡೆಸಬೇಕೇ ವಿನಾ ಉದ್ವೇಗದಿಂದ ದ್ವೇಷದಿಂದ ಅಮಾನುಷ ಕ್ರಿಯೆಗಿಳಿಯಬಾರದು' ಎಂದೆಲ್ಲ ಉಪದೇಶಿಸುತ್ತಾ ಹೇಳುತ್ತಾನೆ–

**ಜ್ಯೋತಿರ್ಯಥೈವೋದಕಪಾರ್ಥಿವೇಶ್ವದಃ**
**ಸಮೀರವೇಗಾನುಗತಂ ವಿಭಾವ್ಯತೇ ।**
**ಏವಂ ಸ್ವಮಾಯಾರಚಿತೇಷ್ವಸೌ ಪುಮಾನ್**
**ಗುಣೇಷು ರಾಗಾನುಗತೋ ವಿಮುಹ್ಯತಿ ॥** — (೧೦–೧–೪೩)

ಎಂದು. ಚಲವಿಚಲವಾದ ನೀರಿನಲ್ಲಿ ನಮ್ಮ ಪ್ರತಿಬಿಂಬ ವಿಕೃತವಾಗಿ ಮೂಡುತ್ತದೆ. ಅದೇ ಘನವಾದ ನೀರಿನ ಹಿಮದ ಗಡ್ಡೆಯಲ್ಲಿ ನಮ್ಮ ಮುಖವು ಸ್ಥಿರವಾಗಿ ಕಾಣುತ್ತದೆ. ತೆರೆಗಳಿಲ್ಲದ ನೀರಿನಲ್ಲಿ ಸ್ವಚ್ಛವಾದ ಪ್ರತಿಬಿಂಬವು ಮೂಡಿತೇ ವಿನಾ ಅಲ್ಲೋಲಕಲ್ಲೋಲವಾದ ನೀರಿನಲ್ಲಿ ಪ್ರತಿಬಿಂಬ ಮೂಡಲಾರದು. ಅದರಂತೆ ಸತ್ವರಜಸ್ತಮೋಗುಣಗಳ ಸಂಪರ್ಕದಿಂದ ಆತ್ಮನು ವಿಕೃತನಾಗಿ ಕಾಣುತ್ತಾನೆ. ತ್ರಿಗುಣ ಗಳನ್ನು ಮೀರಿ ನಿಂತಾಗ ನಮ್ಮ ಸರಿಯಾದ ರೂಪ ಪ್ರಕಟವಾಗುತ್ತದೆ. ನಮ್ಮ ನೈಜರೂಪದ ಅಭಿವ್ಯಕ್ತಿಗಾಗಿ ನಮಗಂಟಿದ ಮೂರು ಗುಣಗಳನ್ನು ಮೀರಿ ನಿಲ್ಲಬೇಕು. ಯಾರಿಗೂ ದ್ರೋಹವನ್ನೆಸಗಬಾರದು.

'ದೇವಕಿಯ ಎಂಟನೇ ಗರ್ಭ ಮೃತ್ಯುವಾಗುತ್ತದೆ' ಎಂಬ ಅಶರೀರವಾಣಿಯು, ಹಿಂಸೆ–ಕ್ರೌರ್ಯ–ಸ್ವಾರ್ಥ–ಅಹಂಕಾರವೇ ಮೊದಲಾದ ದುರ್ಗುಣಗಳನ್ನು ತೊರೆದು

ಸನ್ಮಾರ್ಗದಲ್ಲಿ ನಡೆಯಬೇಕೆಂದು ಸೂಚಿಸುತ್ತದೆ. ಹಿಂಸೆ ಅನ್ಯಾಯಗಳಿಂದ ದೇವತೆಗಳಿಗೆ ಹಿಂಸೆಯಾಗುತ್ತದೆ. ದೇವತೆಗಳ ನಿಯಮದಂತೆ ಸಾಗುವ ಸಂಕಲ್ಪವನ್ನು ಮಾಡಬೇಕೇ ವಿನಾ ಕಂಸನಂತೆ ತಂದೆಯನ್ನೇ ಬಂಧನದಲ್ಲಿಟ್ಟು ಸ್ವಾರ್ಥಿಯಾಗಿ ಬದುಕುವುದರಿಂದ ಒಳಿತಿಲ್ಲ. ನಮ್ಮನ್ನು ನಾವು ಸರಿಯಾಗಿ ತಿದ್ದಿಕೊಂಡು, ದೇವತೆಗಳಿಗೆ ಸಂತೋಷವಾಗುವಂತೆ ನಡೆದುಕೊಳ್ಳಬೇಕು. ಧರ್ಮಾತಿಕ್ರಮವಾದಲ್ಲಿ ದೇವತೆಗಳು ಅಶರೀರವಾಣಿಯ ಮೂಲಕ ಎಚ್ಚರಿಕೆಯ ಕರೆಗಂಟೆಯನ್ನು ಬಾರಿಸುತ್ತಾರೆ. ಅವಾಗಲೂ ಅಪರಾಧಗಳನ್ನು ಒಪ್ಪಿಕೊಳ್ಳದೆ ತಪ್ಪುದಾರಿಯಲ್ಲಿ ಸಾಗಿದರೆ ಅನರ್ಥಕ್ಕೆ ತುತ್ತಾಗುತ್ತೇವೆ.

ವಸುದೇವನು ಕಂಸನಿಗೆ ವಿಸ್ತಾರವಾಗಿ ಉಪದೇಶಿಸಿದ. ಯಾವ ಉಪದೇಶವೂ ಅಂತಃಕರಣವನ್ನು ಮುಟ್ಟಲಿಲ್ಲ. ಬೇರೆ ದಾರಿಯನ್ನು ಕಾಣದೆ "ಇವಳಲ್ಲಿ ಹುಟ್ಟಿದ ಮಕ್ಕಳನ್ನೆಲ್ಲ ನಿನಗೊಪ್ಪಿಸುತ್ತೇನೆ. ಇವಳನ್ನು ಮಾತ್ರ ಸಂಹರಿಸಬೇಡ" ಎಂದು ಹೇಳಿದ. ಕಂಸನು ವಸುದೇವನ ಈ ಶರತ್ತಿನ ಮೇಲೆ ಒಪ್ಪಿಕೊಂಡು ತಂಗಿಯನ್ನು ಬಿಟ್ಟುಕೊಟ್ಟ. ಅವತ್ತಿನ ದುರಂತ ಅಂದಿಗೆ ಮುಕ್ತಾಯವಾಯಿತು.

ಕಾಲಕ್ರಮದಲ್ಲಿ ದೇವಕಿಯು ಗರ್ಭವತಿಯಾಗಿ ಗಂಡುಮಗುವಿಗೆ ಜನ್ಮವಿತ್ತಳು. ಸುಳ್ಳಿನಿಂದ ಹೆದರುವ ವಸುದೇವ ಆ ಮಗುವನ್ನು ಕಂಸನಿಗೊಪ್ಪಿಸಿದ. ವಸುದೇವನ ಪ್ರಾಮಾಣಿಕತೆಗೆ ಮೆಚ್ಚಿದ ಕಂಸನು ಎಂಟನೇ ಗರ್ಭವು ಮೃತ್ಯುವಲ್ಲವೇ. 'ಇದನ್ನು ತೆಗೆದುಕೊಂಡು ಹೋಗು! ಎಂದನು. ವಸುದೇವನು ಅವ್ಯವಸ್ಥಿತಚಿತ್ತನಾದ ಕಂಸನ ಈ ಪ್ರಸಾದವನ್ನು ಭಯಂಕರವೆಂದೇ ಪರಿಗಣಿಸಿ, ಶಿಶುವನ್ನು ಕೊಂಡೊಯ್ದನು.

## ನಾರದರ ಆಗಮನ

ವಸುದೇವನು ತೆರಳಲು ಕಂಸನ ಬಳಿಗೆ ನಾರದರು ಬಂದರು. "ಕಂಸನೇ! ನಿನಗೆ ದೇವತೆಗಳ ಯಾವ ಸಂಚೂ ತಿಳಿಯುತ್ತಿಲ್ಲ. ಗೋಕುಲದಲ್ಲಿರುವ ನಂದಗೋಪ-ಗೋಪಾಲಕರು-ಸ್ತ್ರೀಯರೆಲ್ಲರೂ ದೇವತೆಗಳಾಗಿದ್ದಾರೆ. ಎಲ್ಲರೂ ನಿನ್ನನ್ನು ಸಂಹರಿಸುವ ಪ್ರಯತ್ನದಲ್ಲಿದ್ದಾರೆ" ಎಂದು ದೇವಸಂಕಲ್ಪವನ್ನು ತಿಳಿಸಿ ಹೊರಟರು. ಕಂಸನಿಗೆ ನಾರದನ ಈ ಕಿವಿಮಾತು ಮೂರನೇ ಎಚ್ಚರಿಕೆ. "ನಿನ್ನ ಅಕೃತ್ಯಗಳು ಅಧಿಕವಾಗುತ್ತಿವೆ. ದೈವೀಶಕ್ತಿಗಳ ವಿಕೋಪಕ್ಕೆ ತುತ್ತಾಗುತ್ತಿರುವೆ. ಆದ್ದರಿಂದ ಎಲ್ಲೆಮೀರಿ ವರ್ತಿಸಬೇಡ! ಧರ್ಮಬಾಹಿರನಾಗಿ ವರ್ತಿಸಿದವರನ್ನು ಶ್ರೀಹರಿಯು ಎಂದೂ ಸುಮ್ಮನೆ ಬಿಡನು" ಎಂದು ಎಚ್ಚರಿಸಿದರು. ಆದರೆ ತಿಳಿಗೇಡಿಯಾದ ಕಂಸನು ಮತ್ತಷ್ಟೂ ನೀಚವಾಗಿ ವರ್ತಿಸಿದ. ವಸುದೇವ ದೇವಕಿಯರನ್ನು ಸೆರೆಮನೆಯಲ್ಲಿ ಬಂಧಿಸಿದ. ಅವರ ಪ್ರತಿ ಮಕ್ಕಳನ್ನು ಕರುಣೆಯಿಲ್ಲದೆ ಕೊಲ್ಲಹತ್ತಿದ.

ಇಲ್ಲಿ ಕೆಲವರು ನಾರದರನ್ನು ಆಕ್ಷೇಪಿಸುತ್ತಾರೆ. ನಾರದರು ಒಬ್ಬರ ಸುದ್ದಿಯನ್ನು ಇನ್ನೊಬ್ಬರಿಗೆ ತಿಳಿಸಿ ಪರಸ್ಪರ ವೈರವನ್ನು ಹುಟ್ಟಿಸುತ್ತಾರೆ. ಭಾವನೆಯನ್ನು ಕೆದಕಿ ತಮಾಷೆಯನ್ನು ನೋಡುತ್ತಾರೆ ಎಂದು ಅನೇಕರು ತಪ್ಪು ತಿಳಿಯುತ್ತಾರೆ. ಚಾಡಿಕೋರರನ್ನು ಕಂಡು 'ನಾರದ!' ಎಂದು ಗೇಲಿಮಾಡುವ ಮಂದಿಯೂ ಇದ್ದಾರೆ.

ಆದರೆ ನಾರದರ ಬಗ್ಗೆ ಇಂತಹ ತಪ್ಪು ಭಾವನೆ ಸರಿಯಲ್ಲ. ಭಗವಂತನ ಸಂಕಲ್ಪಕ್ಕನು ಗುಣವಾಗಿ ನಾರದರು ವರ್ತಿಸುತ್ತಾರೆ. ಸತ್ಯಸಂಗತಿ ತಿಳಿಸುವುದು ನಾರದರ ಉದ್ದೇಶ ವಾಗಿದೆ. ಆದ್ದರಿಂದ ಪರಮಜ್ಞಾನಿಗಳ ವಿಷಯದಲ್ಲಿ ಎಚ್ಚರಿಕೆಯಿಂದ ವರ್ತಿಸಬೇಕು. ಉದ್ದೇಶ ಅರಿಯದೆ ಅವಹೇಳನ ಮಾಡಿದಲ್ಲಿ ಅನರ್ಥಕ್ಕೆ ಭಾಗಿಗಳಾಗಬೇಕಾದೀತು.

ನಾರದರಿಗೆ ಮತ್ತೊಂದು ಉದ್ದೇಶವೂ ಇತ್ತು. ವಸುದೇವನಿಗೆ ಮುಂದೆ ಹುಟ್ಟಲಿರುವ ಆರುಮಂದಿ ಮಕ್ಕಳು ಮರೀಚಿಋಷಿಗಳ ಮಕ್ಕಳು. ಹಿಂದೊಮ್ಮೆ ಅವರು ಕೃಶಕಾಯರಾದ ದೇವಲ ಮುನಿಗಳನ್ನು ಕಂಡು ಹಾಸ್ಯ ಮಾಡಿದರು. ಅವರ ಶಾಪದಿಂದ ಕಾಲನೇಮಿಯ ಮಕ್ಕಳಾಗಿ ಜನಿಸಿದರು. ಷಡ್‌ಗರ್ಭರೆಂದು ಪ್ರಸಿದ್ಧರಾದ ಅವರು ಅವಧ್ಯತ್ವ ವರವನ್ನು ಬಯಸಿ ಬ್ರಹ್ಮನನ್ನು ಕುರಿತು ತಪಸ್ಸು ಮಾಡಿದರು. ಒಲಿದು ಬಂದ ಬ್ರಹ್ಮದೇವ ವರವಿತ್ತ. ಆದರೆ ಈ ಸುದ್ದಿ ಅಂದಿನ ಹಿರಣ್ಯಕಶಿಪುವಿಗೆ ತಿಳಿಯಿತು. ಜಗದೀಶ್ವರನಾಗಿ ನಾನಿರಲು ಅನ್ಯರಿಂದ ವರಪಡೆದಿದ್ದಾರೆಂದು ಕುಪಿತ ನಾಗಿ ಕುವಲಯದಲ್ಲಿ ಹುಟ್ಟಿರಿ! ಅಲ್ಲಿ ನಿಮ್ಮ ತಂದೆಯೇ ನಿಮ್ಮನ್ನು ಕೊಲ್ಲುತ್ತಾ ನೆಂದು ಶಪಿಸಿದ. ಅದರಂತೆ ಸ್ವಭಾವತಃ ಸಾತ್ವಿಕರಾದ ಷಡ್‌ಗರ್ಭರ ಶಾಪನಿವೃತ್ತಿ ಯಾಗಲಿ ಎಂಬ ಉದ್ದೇಶದಿಂದಲೂ ನಾರದರು ಕಂಸನಿಗೆ ಎಚ್ಚರಿಕೆ ನೀಡಿದರು. ಹೀಗೆ ನಾರದರು ಉದಾತ್ತ ಉದ್ದೇಶಗಳಿಂದ ವರ್ತಿಸುತ್ತಾರೇ ವಿನಾ ಕಲಹಪ್ರಿಯ ರಾಗಿ ಕಿಚ್ಚುಹಚ್ಚಿ ತಮಾಷೆನೋಡಿ ಖುಷಿಪಡುವ ತುಚ್ಛ ಬುದ್ಧಿಯವರಲ್ಲ.

ರಾವಣನಿಗೆ ಹನುಮಂತ ಮೊದಲಿಗೆ ಎಚ್ಚರಿಕೆ ನೀಡಿದ. ವಿಭೀಷಣನು ಬುದ್ಧಿವಾದ ಹೇಳಿದ. ಶ್ರೀರಾಮಚಂದ್ರನೂ ಕೊನೆಯದಾಗಿ ಶರಣಾಗಲು ತಿಳಿಹೇಳಿದ. ಆದರೂ ಯಾರ ಮಾತನ್ನೂ ಕೇಳದೆ ಹಠಮಾರಿಯಾದ ರಾವಣ ರಾಮನಿಂದ ಹತನಾದ. ಅದರಂತೆ ಕಂಸನಿಗೆ ವಾಯುದೇವರು ಅಶರೀರವಾಣಿಯ ಮೂಲಕ ಎಚ್ಚರಿಸಿದರು. ವಸುದೇವ ಉಪದೇಶಿಸಿದ. ಮೂರನೆಯರಾಗಿ ನಾರದರು ಬಂದು ದೇವತೆಗಳ ಉದ್ದೇಶ ತಿಳಿಹೇಳಿದರು. ಆದರೂ ತನ್ನ ದುಷ್ಟ ಸ್ವಭಾವವನ್ನು ಕಂಸನು ಬಿಡಲೇ ಇಲ್ಲ. ಹಸುಗೂಸುಗಳ ಹತ್ಯೆ ಎಂಬ ಕರಾಳ ಕೃತ್ಯದಲ್ಲಿ ತನ್ನನ್ನು ತೊಡಗಿಸಿಕೊಂಡ.

## ಶ್ರೀಕೃಷ್ಣಪ್ರಾದುರ್ಭಾವ

ಕಂಸನು ವಸುದೇವನ ಆರುಮಂದಿ ಮಕ್ಕಳನ್ನು ಸಂಹರಿಸಿದ. ಏಳನೆಯದ್ದು ಗರ್ಭಸ್ರಾವವಾಯಿತೆಂದು ಭಾವಿಸಿದರು. ಅನಂತರ ಭೂಮಾತೆಯ ಪ್ರಾರ್ಥನೆಯಂತೆ ಸಕಲ ದೇವತೆಗಳ ಒಟ್ಟಿಗೆ ಭಗವಂತನು ಆವಿರ್ಭವಿಸಲು ನಿಶ್ಚೈಸಿದ ಭಗವಂತನು ದೇವಕಿಯ ಗರ್ಭದಲ್ಲಿ ಪ್ರಕಟನಾಗಿದ್ದಾನೆ–

**ತತೋ ಜಗನ್ಮಂಗಲಮಚ್ಯುತಾಂಶಂ ಸಮಾಹಿತಂ ಶೂರಸುತೇನ ದೇವೀ ।**
**ದಧಾರ ಸರ್ವಾತ್ಮಕಮಾತ್ಮಭೂತಂ ಕಾಷ್ಠಾ ಯಥಾಽಽನಂದಕರಂ ಮನಸ್ತಃ ॥**

— (೧೦-೨-೧೮)

ಸಕಲಜನರ ಕಣ್ಮನಗಳನ್ನು ತಣಿಸುವ ಪೂರ್ಣಿಮೆಯ ಚಂದ್ರಮನು ಪೂರ್ವ ದಿಕ್ಕಿನಲ್ಲಿ ಪ್ರಕಟನಾಗುವಂತೆ ಸರ್ವಪ್ರಾಣಿಹೃದಯಗಳಲ್ಲಿ ನೆಲೆನಿಂತ ಜಗನ್ಮಂಗಳನಾದ ಭಗವಂತನು ದೇವಕಿಯ ಗರ್ಭದಲ್ಲಿ ಪ್ರಕಟನಾಗಿದ್ದಾನೆ

ಬ್ರಹ್ಮಾದಿ ದೇವತೆಗಳೆಲ್ಲರೂ ಗರ್ಭದಲ್ಲಿರುವ ಭಗವಂತನನ್ನು ವಿಶೇಷವಾಗಿ ಪ್ರಾರ್ಥಿಸುತ್ತಿದ್ದಾರೆ–

ಸತ್ಯವ್ರತಂ ಸತ್ಯಪರಂ ತ್ರಿಸತ್ಯಂ ಸತ್ಯಸ್ಯ ಯೋನಿಂ ನಿಹಿತಂ ಚ ಸತ್ಯೇ ।
ಸತ್ಯಸ್ಯ ಸತ್ಯಮುತ ಸತ್ಯನೇತ್ರಂ ಸತ್ಯಾತ್ಮಕಂ ತ್ವಾಂ ಶರಣಂ ಪ್ರಪನ್ನಾಃ ॥
— (೧೦-೨-೨೬)

ಪೂರ್ಣಾನಂದಜ್ಞಾನರೂಪನಾದ, ಸತ್ಯಕ್ಕೂ ಸತ್ಯನಾದ, ಮೂರು ವೇದಗಳಿಂದ ಪ್ರತಿಪಾದ್ಯನಾದ, ಸತ್ಯವಾದ ಜಗತ್ತಿನ ಅಸ್ತಿತ್ವಕ್ಕೆ ಕಾರಣನಾದ, ಸತ್ಯವಾದ ಜಗತ್ತಿನ ನಿಯಾಮಕನಾದ, ನಿರ್ದುಷ್ಟ ಜ್ಞಾನಪ್ರದನಾದ, ಸತ್ಯಸ್ವರೂಪನಾದ ನಿನ್ನನ್ನು ಶರಣುಹೊಂದುವೆವು.

ಏಕಾಯನೋಽಸೌ ದ್ವಿಫಲಸ್ತ್ರಿಮೂಲಃ ಚತುರಸಃ ಪಂಚವಿಧಃ ಷಡಾತ್ಮಾ ।
ಸಪ್ತತ್ವಗಷ್ಟವಿಟಪೋ ನವಾಕ್ಷೋ ದಶಚ್ಛದೀ ದ್ವಿಖಗೋ ಹ್ಯಾದಿವೃಕ್ಷಃ ॥
— (೧೦-೨-೨೮)

'ಜಗತ್ತೆಂಬ ವೃಕ್ಷಕ್ಕೆ ಪ್ರಕೃತಿಯು ಮೂಲಾಧಾರವಾಗಿದೆ. ಮರದಲ್ಲಿ ಹುಳಿ ಮತ್ತು ಸಿಹಿಯಾದ ಹಣ್ಣುಗಳಿರುವಂತೆ ಪುಣ್ಯ-ಪಾಪಗಳೆಂಬ ಫಲಗಳಿವೆ. ಸತ್ವರಜಸ್ತಮೋ ಗುಣಗಳೆಂಬ ಮೂರು ಬೇರುಗಳಿವೆ. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ರಸದಿಂದ ತುಂಬಿದೆ. ಮರದಲ್ಲಿ ಇಳಿಬಿದ್ದ ಬಿಳಲಿನಂತೆ ಶಬ್ದ, ರೂಪ, ರಸ, ಗಂಧ, ಸ್ಪರ್ಶಗಳಿವೆ. ಆರು ಬಗೆಯ ವಿಕಾರಗಳಿಗೊಳಗಾಗಿದೆ. ಇರುವಿಕೆ, ಹುಟ್ಟುವಿಕೆ, ಅಭಿವೃದ್ಧಿ, ವಿಪರಿಣಾಮ, ಕ್ಷಯ, ಮೃತಿಗಳೆಂಬ ಆರು ವಿಕಾರಗಳಿವೆ. ನಮ್ಮ ದೇಹದ ಸಪ್ತಧಾತುಗಳೇ ತೊಗಟೆಗಳಂತಿವೆ. ತ್ವಕ್, ಚರ್ಮ, ಮಾಂಸ, ರುಧಿರ, ಮಜ್ಜಾ, ಮೇದಸ್ಸು ಮತ್ತು ಅಸ್ಥಿ. ಪೃಥವೀ, ಜಲ, ತೇಜಸ್ಸು, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಂಕಾರಗಳೆಂಬ ಎಂಟು ಕೊಂಬೆಗಳಿವೆ. ಎರಡು ಕಣ್ಣು, ಎರಡು ಕಿವಿ, ನಾಸಿಕಾರಂಧ್ರಗಳು, ಬಾಯಿ, ಮಲಮೂತ್ರ ದ್ವಾರಗಳೆಂಬ ಒಂಭತ್ತು ಪೊಟರೆಗಳಿವೆ. ಪಂಚಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳೆಂಬ ಹತ್ತು ಎಲೆಗಳಿವೆ. ಪ್ರವೃತ್ತಿ ಕರ್ಮಗಳು ಮತ್ತು ನಿವೃತ್ತಿಕರ್ಮಗಳೆಂಬ ಎರಡು ಹಕ್ಕಿಗಳಿವೆ. ಇಂಥಹ ಜಗತ್ತೆಂಬ ವೃಕ್ಷವು ಭಗವಂತನನ್ನು ಆಶ್ರಯಿಸಿಕೊಂಡಿದೆ. ಅವನ ಆಸರೆಯಿಂದಲೇ ಜಗತ್ತಿನ ಪ್ರವೃತ್ತಿಗಳೆಲ್ಲವೂ ನಡೆಯುತ್ತಿವೆ ಎಂದು ದೇವತೆ ಗಳೆಲ್ಲರೂ ಭಗವಂತನನ್ನು ವಿಶೇಷವಾಗಿ ಸ್ತೋತ್ರಮಾಡುತ್ತಿದ್ದಾರೆ.

ಅನಂತರ ಪರಮಶೋಭನವಾದ ಮುಹೂರ್ತದಲ್ಲಿ ಶ್ರೀಕೃಷ್ಣಪಕ್ಷದ ಅಷ್ಟಮಿಯ ಮಧ್ಯರಾತ್ರಿಯಲ್ಲಿ ದೇವದೇವೋತ್ತಮನಾದ ಭಗವಂತನು ಲೋಕದ ಕತ್ತಲೆಯನ್ನೆಲ್ಲ ನಾಶಪಡಿಸಲು ದೇವಕಿಯ ಗರ್ಭದಿಂದುದಿಸಿಬಂದಿದ್ದಾನೆ–

ತಮದ್ಭುತಂ ಬಾಲಕಮಂಬುಜೇಕ್ಷಣಂ
ಚತುರ್ಭುಜಂ ಶಂಖಗದಾದ್ಯುದಾಯುಧಮ್ ।
ಶ್ರೀವತ್ಸಲಕ್ಷ್ಮಂ ಗಳಶೋಭಿ ಕೌಸ್ತುಭಂ
ಪೀತಾಂಬರಂ ಸಾಂದ್ರಪಯೋದಸೌಭಗಮ್ ॥
ಮಹಾರ್ಹವೈಡೂರ್ಯಕಿರೀಟಕುಂಡಳ-
ತ್ವಿಷಾ ಪರಿಷ್ವಕ್ತಸಹಸ್ರಕುಂತಳಮ್ ।
ಉದ್ದಾಮಕಾಂಚ್ಯಂಗದಕಂಕಣಾದಿಭಿಃ
ವಿರೋಚಮಾನಂ ವಸುದೇವ ಐಕ್ಷತ ॥
— (೧೦-೩-೯, ೧೦)

ಕಮಲನಯನನಾದ, ಶಂಖಚಕ್ರಗದಾಪದ್ಮಗಳನ್ನು ಧರಿಸಿದ, ಶ್ರೀವತ್ಸಚಿಹ್ನೆಯಿಂದ ಅಲಂಕೃತನಾದ, ಕೌಸ್ತುಭಾಭರಣಧಾರಿಯಾದ, ಪೀತಾಂಬರವನ್ನುಟ್ಟ, ನೀಲ ಮೇಘಶ್ಯಾಮನಾದ, ವೈಡೂರ್ಯಮಣಿಗಳಿಂದ ಹೆಣೆದ ಕಿರೀಟದ ಕಾಂತಿಯೊಂದಿಗೆ ಬೆರೆತಿರುವ ಸಾವಿರಾರು ಮುಂಗುರುಳುಗಳಿಂದ ಕಂಗೊಳಿಸುವ, ಉತ್ತಮವಾದ ಬಾಹುಪುರಿ, ಒಡ್ಯಾಣ, ಬಳೆಗಳಿಂದ ಬೆಳಗುತ್ತಿರುವ ಅದ್ಭುತ ಶಿಶುವನ್ನು ವಸುದೇವನು ಕಂಡನು. ಆಯುಧಗಳನ್ನು ಧರಿಸಿದ ಆಭರಣಗಳಿಂದ ಸಹಿತವಾಗಿಯೇ ಪ್ರಕಟನಾದುದರಿಂದ ಅದ್ಭುತಶಿಶು ಎಂದಿದ್ದಾರೆ. ಲೋಕದ ಯಾವ ಮಕ್ಕಳೂ ಈ ರೀತಿಯಾಗಿ ಜನ್ಮತಾಳರು. ಭಗವಂತನು ತನ್ನ ಅವತಾರದ ಆರಂಭದಲ್ಲಿಯೇ ತಾನು ಲೋಕಾತೀತನಾಗಿದ್ದಾನೆಂದು ಸಾರಿ ತಿಳಿಸಿದ್ದಾನೆ. ವಸುದೇವ ದೇವಕಿಯರು ಅದ್ಭುತ ರೂಪವನ್ನು ಕಂಡು ಆನಂದಸಾಗರದಲ್ಲಿ ಮುಳುಗಿದ್ದಾರೆ.

## ಶ್ರೀಕೃಷ್ಣನ ಮೊದಲನೆ ಸಂದೇಶ

ಪ್ರಕಟನಾದ ಭಗವಂತನು ಅವರಿಗೆ ವಿಶೇಷಾನುಗ್ರಹವನ್ನು ಮಾಡಿ ಮುಂದೆ ವಸುದೇವನು ಮಾಡಬೇಕಾದ ಕಾರ್ಯವನ್ನೂ ತಿಳಿಸಿ ಬಾಲರೂಪವನ್ನು ತಾಳಿದನು.

ಭಗವಂತನ ಆದೇಶದಂತೆ ವಸುದೇವನು ಶ್ರೀಕೃಷ್ಣನನ್ನು ನಂದಗೋಕುಲಕ್ಕೆ ಕೊಂಡೊಯ್ಯಲಣಿಯಾದ. ಕೃಷ್ಣನನ್ನು ಕರದಲ್ಲೆತ್ತಿಕೊಂಡು ಅಡಿಯನಿರಿಸಿದ. ಕಾರಾಗೃಹದ ಬೃಹದಾಕಾರದ ಕಬ್ಬಿಣದ ದ್ವಾರಗಳಿಗೆ ಬಿಗಿದ ಸರಪಳಿಗಳು, ಬೀಗಗಳೆಲ್ಲವೂ ಮುರಿದು ಬಿದ್ದವು. ಸೂರ್ಯ ಬಂದಾಗ ತಮಸ್ಸು ಸಹಜವಾಗಿ ಹೋಗುವಂತೆ ಕೃಷ್ಣ ಬಂದಾಗ ಬಂಧನಗಳು ಸಹಜವಾಗಿ ಕಳಚಿಬಿದ್ದವು. 'ಸ್ವಯಂ ವ್ಯಶೀರ್ಯಂತ ಯಥಾ ತಮೋ ರವೇಃ' ಮೆಲ್ಲನೆ ಮೇಘನಾದವಾಯಿತು. ಮಳೆಯು ಆರಂಭವಾಯಿತು. ಶೇಷನು ಹೆಡೆಗಳನ್ನು ಬಿಡಿಸಿ ಹಿಡಿದ ವಸುದೇವ ಮುಂದೆ ಸಾಗಿದ.

ನಿತ್ಯವೂ ಕಾರಾಗೃಹದಲ್ಲಿಯೇ ಬಂಧಿತನಾದ ವಸುದೇವನು ಶ್ರೀಕೃಷ್ಣನನ್ನು ಕೈಯಲ್ಲಿ ಧರಿಸಿದ್ದೇ ತಡ ಸಕಲ ಬಂಧನಗಳು ಕಳಚಿಬಿದ್ದವು. ನಾವೂ ನಮ್ಮ ಹೃದಯಕಮಲದಲ್ಲಿ ಭಗವಂತನನ್ನು ಧರಿಸಿದರೆ ನಮ್ಮ ಸಂಸಾರವೆಂಬ ಕಾರಾಗೃಹ

ಬಂಧನದಿಂದ ಸುಲಭವಾಗಿ ಬಿಡುಗಡೆಯನ್ನು ಹೊಂದಬಹುದೆಂದು ತಿಳಿಸಿದ್ದಾನೆ. ನಮ್ಮ ಹೃದಯಕಮಲದಲ್ಲಿ ಭಗವಂತನ ದರ್ಶನವಾದಾಗ ಸಕಲ ಸಂಶಯಗಳು ನುಚ್ಚುನೂರಾಗುತ್ತವೆ. ಬ್ರಹ್ಮಾದಿಗಳನ್ನೂ ಮೀರಿ ನಿಂತ ಸರ್ವೋತ್ತಮನ ದರ್ಶನವು ಅನಾದಿ ಅವಿದ್ಯೆಯನ್ನು, ಅದರಿಂದುದಿಸಿದ ರಾಗದ್ವೇಷಾದಿಗಳನ್ನು ದೂರ ಓಡಿಸುತ್ತದೆ. ಈ ಅಪರೋಕ್ಷಜ್ಞಾನಿಯ ಸಂಚಿತ ಆಗಮಿಗಳಾದ ಅಪ್ರಾರಬ್ಧಕರ್ಮಗಳು ದೂರವಾಗುತ್ತವೆ. ಮುಕ್ತನಾಗುತ್ತಾನೆ ಎನ್ನುತ್ತದೆ ಆಥರ್ವಣ–

**ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।**
**ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರ ॥**

ಎಂದು. ವಾಸುದೇವನನ್ನು ಧರಿಸಿದ ವಸುದೇವನು ಯಮುನೆಯ ಬಳಿ ಸಾಗಲು ಯಮುನೆಯು ಆಚೆ ಈಚೆ ಸರಿದು ಮಾರ್ಗ ನೀಡಿದಳು. ಭಗವಂತನು ಜೊತೆಗಾರನಾದರೆ ನಮ್ಮ ಭವಸಾಗರವೂ ಹೇಗೆ ದೂರವಾಗುತ್ತದೆ ಎಂದು ತಿಳಿಸುತ್ತಿತ್ತು. ಶ್ರೀಕೃಷ್ಣನನ್ನು ಕಂಡ ಯಮುನೆಯು ಹೆದರಿ ದಾರಿಬಿಟ್ಟಳಂತೆ. ಏಕೆಂದರೆ ಹಿಂದೆ ಶ್ರೀರಾಮಚಂದ್ರನು ಲಂಕೆಗೆ ಹೋಗಲು ಸಮುದ್ರರಾಜನು ದಾರಿಬಿಡದಿದ್ದಾಗ ಸಮುದ್ರವನ್ನೇ ಒಣಗಿಸಹೊರಟಿದ್ದ. ಇಂದು ತನಗೂ ಅಂತಹ ಸಂದರ್ಭ ಒದಗಿ ಬಾರದಿರಲೆಂದು ದಾರಿಬಿಟ್ಟಳೋ ಎಂಬಂತಿತ್ತು ಎನ್ನುತ್ತಾರೆ ವಾದಿರಾಜರು.

ವಸುದೇವನು ನಂದಗೋಪನ ಮನೆಗೆ ತೆರಳಿ ಅಲ್ಲಿ ಶ್ರೀಕೃಷ್ಣನನ್ನು ಇರಿಸಿ ಯಶೋದೆಯ ಗರ್ಭಾಂಬುಧಿಯಲ್ಲಿ ಪ್ರಕಟಳಾದ ದುರ್ಗಾದೇವಿಯನ್ನು ಕರೆದು ತಂದಿದ್ದಾನೆ.

ಮರುದಿವಸ ಮುಂಜಾವದಲ್ಲಿಯೇ ಶಿಶುಜನನದ ಸುದ್ದಿಯನ್ನು ತಿಳಿದ ಕಂಸನು ಮೃತ್ಯುವಿಗೆ ಹೆದರಿ ಎಡವಿಕೊಂಡು ಓಡೋಡಿ ಬಂದ. ದೇವಕಿಯು ದೀನಳಾಗಿ ಇದೊಂದು ಶಿಶುವನ್ನು ಉಳಿಸಿಕೊಡೆಂದು ಅಂಗಲಾಚಿದಳು. ಹೃದಯದಲ್ಲಿ ಕರುಣೆಯ ಒಸರೂ ಇಲ್ಲದ ಕಂಸನು ವನ್ಯಮೃಗದಂತೆ ಅಬ್ಬರಿಸಿ ಶಿಶುವನ್ನು ಕಿತ್ತುಕೊಂಡನು. ಮೃತ್ಯುವನ್ನು ಹೊಸೆಯುವೆನೆಂದು ಹಸುಗೂಸಿನ ಕಾಲುಗಳನ್ನು ಹಿಡಿದು ಆಗಸಕ್ಕೆಸೆದನು. ಕೂಡಲೇ ದುರ್ಗಾಮಾತೆ ಗಗನಮಂಡಲಕ್ಕೆ ಹಾರಿದಳು. ಬಿಲ್ಲು–ಬಾಣ–ಗುರಾಣಿಗಳನ್ನು ಹಿಡಿದ ಅಷ್ಟಭುಜದ ದುರ್ಗೆ ಕಂಸನನ್ನು ಎಚ್ಚರಿಸಿದಳು. 'ಎಲೈ! ಬುದ್ಧಿಹೀನನೇ! ನಿನ್ನ ಮೃತ್ಯು ಬೇರೆ ಕಡೆ ಹುಟ್ಟಿಯಾಗಿದೆ. ನನ್ನ ಸಂಹಾರದಿಂದ ನಿನಗೇನು ಲಾಭ! ದೀನರಾದವರನ್ನು ವೃಥಾ ಹಿಂಸಿಸಬೇಡ' ಎಂದಳು.

ಇದನ್ನು ಕೇಳಿದ ಕಂಸನು ನಾಲ್ಕನೆಯ ಬಾರಿಯೂ ಎಚ್ಚರಗೊಳ್ಳಲಿಲ್ಲ. ಮತ್ತಷ್ಟು ದುಷ್ಕೃತ್ಯಗಳಿಗಣಿಯಾದ. ಊರಿನಲ್ಲಿರುವ ಎಲ್ಲ ಮಕ್ಕಳನ್ನು ಕೊಲ್ಲಲು ಆದೇಶಿಸಿದ.

ನಂದಗೋಕುಲದಲ್ಲಿ ಯಶೋದೆ–ನಂದಗೋಪರು ಬೆಳಗ್ಗೆ ಎದ್ದು ಹಾಸಿಗೆಯಲ್ಲಿ ಪವಡಿಸಿದ್ದ ಗಂಡುಮಗುವನ್ನು ಕಂಡು ಪರಮಾನಂದಭರಿತರಾದರು. ನಂದಗೋಕುಲದ ಸಮಸ್ತ ನಾಗರಿಕರೂ ಶ್ರೀಕೃಷ್ಣಜನ್ಮೋತ್ಸವವನ್ನು ವೈಭವದಿಂದ ನಡೆಸಿದರು.

## ಪೂತನಾ ಪ್ರಾಣಾಪಹಾರಿ

ಯಶೋದೆಯು ನಸುನಗೆಯ ಹೊಸ ಸೊಬಗಿನ ಕೃಷ್ಣನ ದರ್ಶನದಿಂದ ಆನಂದದ ದಿನಗಳನ್ನು ಕಳೆಯುತ್ತಿರಲು; ಕಂಸನು ಕಳುಹಿಸಿದ ಬಾಲಘಾತಿನಿಯಾದ ಪೂತನಿಯು ಸುಂದರ ವನಿತೆಯ ರೂಪ ಧರಿಸಿ ಆ ಪರಿಸರಕ್ಕೆ ಬಂದಳು. ವ್ರಜದ ವನಿತೆಯರನ್ನೂ ನಾಚಿಸುವ ಸೌಂದರ್ಯದ ವೇಷ ತೊಟ್ಟಿದ್ದಳು. ಸ್ತ್ರೀಪುರುಷ ಭೇದವಿಲ್ಲದೆ ಎಲ್ಲರೂ ವಶರಾಗುವ ಸೌಂದರ್ಯ ಹೊಂದಿದ್ದಳು. ಕೃಷ್ಣನನ್ನು ಕಂಡ ಅವಳು ಕೃಷ್ಣನರ್ಪವನ್ನು ಹಗ್ಗವೆಂದು ಭ್ರಮಿಸಿ ಕೈಗೆತ್ತಿಕೊಳ್ಳುವಂತೆ ಎತ್ತಿಕೊಂಡಳು ಯಶೋದೆಯು ಎದುರಿಗೇ ಇದ್ದರೂ ಪೂತನೆಯ ಮಾಯಾರೂಪವನ್ನು ಕಂಡು ಬೆರಗಾಗಿ ಮೋಹದಿಂದ ನೋಡು ತ್ತಲೇ ನಿಂತಿದ್ದಳು. ಪೂತನಿಯು ಮಗುವಿಗೆ ಭಯಂಕರ ವಿಷವುಳ್ಳ ಕ್ರೂರವಾದ ಸ್ತನ್ಯ ಪಾನವನ್ನು ಮಾಡಿಸಿದಳು ಕೂಡಲೇ ಭಗವಂತನು ಅವಳ ಎದೆಯಲ್ಲಿಯ ಪ್ರಾಣ ವನ್ನೇ ಹೀರಿದನು. ಪೂತನಾಸಂಹಾರಿ ಎನಿಸಿದ.

ಶ್ರೀಕೃಷ್ಣನು ತನ್ನ ಅವತಾರಕಾರ್ಯದಲ್ಲಿ ಮೊದಲು ಸಂಹರಿಸಿದ್ದು ಪೂತನಿ ಯನ್ನು. ಸ್ತ್ರೀವಧೆಯು ನಿಷಿದ್ಧವೆನಿಸಿದ್ದರೂ ಪೂತನಾವಧೆಯು ದೋಷವೆನಿಸದು. ಸಾವಿರಾರು ಮನೆಗಳಿಗೆ ನುಗ್ಗಿ ಶಿಶುಗಳಿಗೆ ವಿಷ ಉಣಿಸುತ್ತಿದ್ದ ಮಹಾಪಾತಕಿ ಪೂತನೆ. ಆದ್ದರಿಂದ ಅವಳನ್ನು ಸಂಹರಿಸಿ ಜಗತ್ತಿಗೆ ಕ್ಷೇಮವನ್ನುಂಟುಮಾಡಿದ

ವ್ರಜದ ಜನರೆಲ್ಲ ಆಶ್ಚರ್ಯಚಕಿತರಾದರು. ಘೋರಾಕೃತಿಯ ಪೂತನೆಯ ಶರೀರವನ್ನು ಕೊಡಲಿಗಳಿಂದ ತುಂಡರಿಸಿ ಒಂದೊಂದು ಅವಯವಗಳಿಗೂ ಕಟ್ಟಿಗೆಯ ರಾಶಿಯನ್ನಿಟ್ಟು ಸುಟ್ಟರು. ಸುಡುವ ಆಕೆಯ ದೇಹದಿಂದ ಚಂದನದ ಪರಿಮಳದ ಹೊಗೆಯು ಹೊರಹೊಮ್ಮಿತು. ದುರಾತ್ಮಳ ದೇಹದಿಂದ ಇದೆಂತಹ ಪರಿಮಳ! ಎಂದು ಎಲ್ಲರೂ ಆಶ್ಚರ್ಯಪಟ್ಟರು. ಪೂತನೆ ಊರ್ವಶಿಯಿಂದ ಆವಿಷ್ಟಳಾದ ತಾಟಕೆ ಅಪರಾಧಿನಿಯಾದ ತಾಟಕೆ ವಿಷವುಣಿಸಿ ತಮಸ್ಸನ್ನು ಹೊಕ್ಕಳು. ಎದೆಹಾಲನ್ನುಣಿಸಿದ ಊರ್ವಶಿ ಸ್ವರ್ಗ ಸೇರಿದಳು–

**ಸಾ ತಾಟಕಾ ಚೋರ್ವಶೀಸಂಪ್ರವಿಶ್ಯಾ ಕೃಷ್ಣಾವಧ್ಯಾನ್ನಿರಯಂ ಸಂಜಗಾಮ ।**
**ಸಾ ತೂರ್ವಶೀ ಕೃಷ್ಣಭುಕ್ತಸ್ತನೇನ ಪೂತಾ ಸ್ವರ್ಗಂ ಪ್ರಯಯೌ ತತ್ ಕ್ಷಣೇನ ॥**
– (ಮ. ತಾ. ನಿ. ೧೨-೮೭)

ಎನ್ನುತ್ತಾರೆ ಶ್ರೀಮದಾಚಾರ್ಯರು.

ಪೂತನಿಯು ಒಂದು ಕಡೆ ಕ್ರೌರ್ಯ ತೋರಿದರೆ; ಮತ್ತೊಂದು ಕಡೆ 'ಶ್ರೀಕೃಷ್ಣನಿಗೆ ಸ್ತನ್ಯಪಾನ ಮಾಡಿಸುತ್ತಿರುವ ನಾನೇ ಧನ್ಯಳು' ಎಂಬ ಮಾತೃತ್ವದ ವಾತ್ಸಲ್ಯಧಾರೆ ಅವಳಿಂದ ಹರಿಯಿತು. ಕ್ರೌರ್ಯ ವಾತ್ಸಲ್ಯಗಳು ಪೂತನಿಯಲ್ಲಿ ಏಕಕಾಲದಲ್ಲಿ ವ್ಯಕ್ತವಾಯಿತು. ಆದ್ದರಿಂದ ಪೂತನಿ ಎಂದರೆ ಅದೊಂದು ಸಂಕೀರ್ಣ ವ್ಯಕ್ತಿತ್ವ. ಕ್ರೌರ್ಯ, ಮಾತೃತ್ವಗಳ ಸಮ್ಮಿಲನ ಅವಳಲ್ಲಿದೆ. ಊರ್ವಶಿ ಎಂಬ ಸಜ್ಜೀವವೂ ಸೇರಿದ್ದರಿಂದ ಪರಿಮಳದ ಹೊಗೆ ಹೊರಹೊಮ್ಮಿತು.

ಯಾತುಧಾನ್ಯಪಿ ಸಾ ಸ್ವರ್ಗಮವಾಪ ಜನನೀ ಗತಿಮ್ ।
ಕೃಷ್ಣಭುಕ್ತಸ್ತನಕ್ಷೀರಾಃ ಕಿಮು ಗಾವೋಽನುಮಾತರಃ ॥ — (೧೦-೬-೩೮)

ಎನ್ನುವುದಕ್ಕೆ ಕೆಲವರು, 'ಪೂತನಿಯು ದ್ವೇಷನಾಧಿಸಿಯೂ ಸ್ವರ್ಗಕ್ಕೆ ಹೋದಳು' ಎನ್ನುತ್ತಾರೆ. ಆದರೆ ಇದು ಸರಿಯಲ್ಲ. ಹಾಗಿದ್ದಲ್ಲಿ ನಿತ್ಯ ಹರಿದ್ವೇಷಸ್ವಭಾವದ ಅಸುರರೆಲ್ಲರೂ ಸ್ವರ್ಗಕ್ಕೆ ಹೋಗಬೇಕಾದೀತು.

ಭಗವಂತನು, ಕ್ಷಣಕಾಲ ಸ್ತನ್ಯಪಾನ ಮಾಡಿಸಿದ ನಜ್ಜೀವಕ್ಕೆ ಸ್ವರ್ಗಕೊಟ್ಟನೆಂದ ಬಳಿಕ ನಿರಂತರ ಪಯೋಧಾರೆಯನ್ನು ಪ್ರೇಮದಿಂದ ಸುರಿಸಿದ ಯಶೋದಾ, ನಂದ ಗೋಕುಲದ ಹಸುಗಳು, ಗೋಪಿಕಾಸ್ತ್ರೀಯರಿಗೆಲ್ಲ ಮೋಕ್ಷವನ್ನೇ ಕೊಟ್ಟನೆಂದು ಹೇಳಬೇಕೆ? ಕೃಷ್ಣನ ಮುಖಕಾಂತಿಯ ಬೆಳದಿಂಗಳಿನಲ್ಲಿ ನಿರಂತರ ಸ್ನಾನಮಾಡುತ್ತಾ ವ್ರಜದ ಸ್ತ್ರೀಯರು, ತಾಯಂದಿರು ಕ್ಷಣಕ್ಷಣಕ್ಕೂ ಸ್ನೇಹದ ಧಾರೆಯನ್ನೇ ಹರಿಸಿದ್ದಾರೆ. ಕ್ಷಣಕಾಲದ ಭಕ್ತಿಗೇ ಒಲಿದು ಬರುವ ಶ್ರೀಹರಿ ಇವರೆಲ್ಲರ ಪ್ರೀತಿಗೆ ಪ್ರತಿಕ್ರಿಯಿಸದಿರುವನೇ! ಸಂಸಾರವೇ ಬಾರದಿರುವಂತೆ ಮೋಕ್ಷವನ್ನು ಕೊಟ್ಟು ಎಲ್ಲರನ್ನೂ ಅನುಗ್ರಹಿಸಿದ.

ಪೂತನಿಯ ಕಥೆ ನಮ್ಮ ಜೀವನಕ್ಕೂ ಅನ್ವಯವಾಗುತ್ತದೆ. ನಮ್ಮ ಜೀವನದಲ್ಲಿ ಬರುವ ಸಾಂಸಾರಿಕ ವ್ಯಾಮೋಹವೇ ಪೂತನಿ. ಪೂತನಿಯ ಮೋಹದ ಬಲೆಗೆ ಸಿಕ್ಕಿಬಿದ್ದ ಯಶೋದೆಯು ಶ್ರೀಕೃಷ್ಣನನ್ನೇ ಕೊಟ್ಟುಬಿಟ್ಟಳು. ನಾವೂ ಸಂಸಾರದ ಮೋಹವೆಂಬ ಬಲೆಗೆ ಸಿಕ್ಕಿಬಿದ್ದು ಶ್ರೀಕೃಷ್ಣನನ್ನೇ ಮರೆತುಬಿಡುತ್ತಿದ್ದೇವೆ. ಮೋಹಕೆ ಬಲಿಯಾದರೆ ಭಗವಂತನಿಂದ ದೂರವಾಗಬೇಕಾದೀತು! ಆದ್ದರಿಂದ ಸಂಸಾರದಲ್ಲಿಯ ಪ್ರೇಮಪಾಶಗಳಿಗೆ ಸಿಕ್ಕಿಬೀಳಬಾರದೆಂಬ ಸಂದೇಶವನ್ನು ಪೂತನಿಯ ಕಥೆಯಿಂದ ತಿಳಿಯಬಹುದು.

## ಶಕಟಾಸುರಭಂಜನ

ಒಂದು ದಿನ ಯಶೋದೆಯು ಬಹಿರ್ನಿಷ್ಕ್ರಮಣ ಸಂಸ್ಕಾರಕ್ಕಾಗಿ ಕೃಷ್ಣನಿಗೆ ಮಂಗಳಸ್ನಾನ ಮಾಡಿಸಿ ದೇವರ ಗುಡಿಗೆಂದು ಕರೆದೊಯ್ದಳು. ತೂಕಡಿಸಿದಂತೆ ನಟಿಸಿದ ಶಿಶುವನ್ನು ಮೆಲ್ಲನೆ ಚುಕ್ಕು ತಟ್ಟಿ ಒಂದು ಶಕಟದ ಬುಡದಲ್ಲಿ ಮಲಗಿಸಿದಳು. ಕಾರ್ಯಕ್ರಮದ ಸಡಗರದಲ್ಲಿ ಪಾಲ್ಗೊಂಡ ಯಶೋದೆಯು ಮಗುವಿನ ಕಡೆ ಲಕ್ಷ್ಯ ವಹಿಸಿರಲಿಲ್ಲ. ಸ್ತನ್ಯಪಾನದ ನೆಪಹೂಡಿ ಅಳಲಾರಂಭಿಸಿದ. ಪುಟ್ಟ ಮಕ್ಕಳಂತೆಯೇ ಸಿಟ್ಟನ್ನು ನಟಿಸುತ್ತಾ ಚಿಗುರೆಲೆಯಂತೆ ಕೋಮಲವಾದ ಕಾಲುಗಳಿಂದ ಶಕಟಕ್ಕೆ ಒದ್ದ. ಕೃಷ್ಣನ ಪಾದಸ್ಪರ್ಶವಾಗುವುದೇ ತಡ ಸಮಗ್ರ ಬಂಡಿಯು ಪುಡಿಪುಡಿಯಾಯಿತು. ರಸಭರಿತ ಭಕ್ಷ್ಯಗಳನ್ನು ಹೊತ್ತ ಬಂಡಿಯು ತಲೆಕೆಳಗಾಗಿ ಮುರಿದು ಬಿತ್ತು. ಕೃಷ್ಣನ ಕಾರ್ಯಕ್ರಮಕ್ಕೆ ಬಂದು ಕೃಷ್ಣನನ್ನೇ ಮರೆತ ಕೃಷ್ಣಭಕ್ತರೆಲ್ಲರೂ ಕೃಷ್ಣ ನಿದ್ದಲ್ಲಿಗೆ ಓಡೋಡಿ ಬಂದರು. ಕೃಷ್ಣನು ನಿದ್ರೆಯ ನಟನೆಯನ್ನು ಮುಂದುವರಿಸಿದ. ಎಲ್ಲರಿಗೂ ಹೊಸದಾದ ನಂಬಲಾರದ ದೃಶ್ಯ. ಕಾರಣವಿಲ್ಲದೆ ಗಾಡಿಯು ಅಡಿಮೇಲಾ

ದುದನ್ನು ಕಂಡು ಕಂಗಾಲಾದರು. ಬಂಡಿ ಉರುಳಿದ ಕಾರಣ ವನ್ನು ಕಾಣಲಾರದೆ ಮೂಕವಿಸ್ಮಿತರಾಗಿ ನೋಡುತ್ತಿರಲು ಅಲ್ಲಿಯೇ ಆಡುತ್ತಿದ್ದ ಪುಟ್ಟ ಬಾಲಕರು ಈ ಪುಟ್ಟ ಬಾಲಕನೇ ಕಾಲಿನಿಂದ ಒದ್ದು ಉರುಳಿಸಿದ್ದಾನೆ. 'ರುದ್ರತಾಽನೇನ ಪಾದೇನ ಕ್ಷಿಪ್ರಮೇತನ್ನ ಸಂಶಯಃ' ಇದರಲ್ಲಿ ಸಂಶಯವಿಲ್ಲ ಎಂದು ಹೇಳಿದರು. ಆದರೂ ಗೋಪಿಯರು ಮಕ್ಕಳ ಮಾತೆಂದು ಉಪೇಕ್ಷಿಸಿದರು. ನಂಬಲು ಸಾಧ್ಯವೇ ಆಗಲಿಲ್ಲ. ಜ್ಞಾನದ ಬಲವೆ ಇಲ್ಲದ ಅಬಲೆಯರು ಬಾಲಕನ ಅಪ್ರಮೇಯ ಪರಾಕ್ರಮವನ್ನು ತಿಳಿವುದಾದರೂ ಎಂತು?! ಯಶೋದೆಯೂ ಯಾವುದೋ ಗ್ರಹದ ಉಪದ್ರವವಿರ ಬೇಕೆಂದು ತನ್ನ ಕಂದನಿಗೆ ಬ್ರಾಹ್ಮಣರಿಂದ ಮಂತ್ರ ಜಪಗಳನ್ನು ಮಾಡಿಸಿ ಮೊಲೆಯು ಣಿಸಿದಳು.

ಶ್ರೀಕೃಷ್ಣನ ಈ ನಟನೆಯಲ್ಲಿಯೂ ದುಷ್ಟಸಂಹಾರವಾಗಿದೆ. ಶಕಟಾಕ್ಷನೆಂಬ ದೈತ್ಯನು ಕೃಷ್ಣನನ್ನು ಕೊಲ್ಲಲೆಂದು ಬಂಡಿಯಲ್ಲಿ ಸೇರಿಕೊಂಡಿದ್ದ.

**ಅನಃ ಸಮಾವಿಶ್ಯ ದಿತೇಃ ಸುತೋಽಸೌ**
**ಸ್ಥಿತಃ ಪ್ರತೀಪಾಯ ಹರೇಃ ಸುಪಾಪಃ ॥** — (ಮ. ತಾ. ನಿ. ೧೨-೯೦)

ಅವನನ್ನು ಕಾಲಿನಲ್ಲಿ ತಳ್ಳಿದ. ಬಂಡಿಸಮೇತ ಬಿದ್ದ ಅಸುರನ ಮೈ ಪುಡಿಪುಡಿಯಾಯಿತು. ಹೀಗೆ ಶ್ರೀಕೃಷ್ಣನು ಅನಾಯಾಸವಾದ ಮಹತ್ವಪೂರ್ಣ ಚೇಷ್ಟೆಗಳಿಂದ ಎಲ್ಲರಿಗೂ ಆನಂದವನ್ನುಣಬಡಿಸಿದ್ದಾನೆ.

## ತೃಣಾವರ್ತನ ಸಂಹಾರ –ಮೂರು ಸಂದೇಶ

ಹೀಗಿರಲಾಗಿ, ಒಂದು ದಿನ ಯಶೋದೆಯು ಶ್ರೀಕೃಷ್ಣನನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಪ್ರೀತಿಯಿಂದ ಆಡಿಸುತ್ತಿದ್ದಾಳೆ. ಕೃಷ್ಣನು ಇದ್ದಕ್ಕಿದ್ದಂತೆ ಬೆಟ್ಟದಷ್ಟು ಭಾರವಾದ. ಭಾರವನ್ನು ಭರಿಸಲಾಗದೆ ಯಶೋದೆಯು ಭೂಮಿಯಲ್ಲಿ ಕುಳ್ಳಿರಿಸಿದಳು. ಮನೆಕೆಲಸದಲ್ಲಿ ಆಸಕ್ತಳಾದಳು. ಇತ್ತ ತೃಣಾವರ್ತನೆಂಬ ಕಂಸನ ದೂತನು ಗಾಳಿಯ ರೂಪದಿಂದ ಬಂದು ಮಗುವನ್ನು ಹಾರಿಸಿಕೊಂಡು ಅಂತರಿಕ್ಷಕ್ಕೆ ಹಾರಿದನು. ನಂದಗೋಕುಲವೆಲ್ಲ ಸುಂಟರಗಾಳಿಯಿಂದೆದ್ದ ಧೂಳಿನಿಂದ ತುಂಬಿ ಹೋಯಿತು. ಮಣ್ಣಿನ ಕಣ್ಣಿಗೆ ಮಣ್ಣು ಬಿದ್ದುದರಿಂದ ಏನನ್ನೂ ಕಾಣಲಾಗದವ ರಾದರು. ಕೃಷ್ಣನನ್ನು ಕಾಣದೆ ಯಶೋದೆಯು ಕಣ್ಣೀರು ಸುರಿಸಲಾರಂಭಿಸಿದಳು. ಅವಳ ಅಳುವನ್ನು ಕೇಳಿ ಅನೇಕ ವ್ರಜದ ಸ್ತ್ರೀಯರು ಅಳಲು ಆರಂಭಿಸಿದರು. ಕೃಷ್ಣನು ಬೇಕೆಂದು ಕಣ್ಣೀರು ಸುರಿಸಿದರು.

ಯಶೋದೆಗೆ ಕೃಷ್ಣನು ಭಾರವೆನಿಸಿದ. ನಾವೂ ಕೃಷ್ಣನನ್ನು ಭಾರ ಎನ್ನುತ್ತೇವೆ. ದೇವರೆಂದರೆ 'ರಗಳೆ' ಎಂದು ಭಾವಿಸುತ್ತೇವೆ. ಭಾರವೆಂದು ಕ್ಷಣಕಾಲ ಯಶೋದೆಯು ಕೆಳಗಿಟ್ಟದ್ದಕ್ಕೆ ಶ್ರೀಕೃಷ್ಣನು ಕಣ್ಮರೆಯಾದ. ಇನ್ನು ಸಮಗ್ರ ಜೀವನದಲ್ಲಿಯೇ ದೇವರನ್ನು ದೂರವಿಟ್ಟರೆ ಅಧಃಪತನಕ್ಕೆ ತುತ್ತಾಗುತ್ತೇವೆ.

ತೃಣಾವರ್ತ ಶ್ರೀಕೃಷ್ಣನನ್ನು ಮೇಲೆತ್ತಿಕೊಂಡು ಹೋಗುವಾಗ ಅವನಿಗೂ ಭಾರವಾದ. ಶಿಶುವಿನ ಭಾರವನ್ನು ಸಹಿಸಲಾರದೆ ಕಲ್ಲುಬಂಡೆಯನ್ನೇ ಹೊತ್ತು ತಂದೆನೋ ಎಂದು ಆಲೋಚಿಸುತ್ತಿರುವಾಗಲೇ ತೃಣಾವರ್ತನ ಕುತ್ತಿಗೆಯನ್ನು ಹಿಡಿದು ಪ್ರಾಣಬಂಧನ ಮಾಡಿದ ಶಿಶುವಿನ ಕಪಿಮುಷ್ಟಿಗೆ ಸಿಲುಕಿದ ಅಸುರನು ಚಲಿಸಲಾಗದೆ ಬೊಬ್ಬಿಡಲೂ ಆಗದೆ ಮೃತನಾಗಿ ಗೋಕುಲದೊಳಗೆ ಬಿದ್ದನು.

ಪೂತನೆಯ ಮೋಹದ ರೂಪಕ್ಕೆ ಸಿಕ್ಕು ಯಶೋದೆಯು ಕೃಷ್ಣನನ್ನು ಕೊಟ್ಟುಬಿಟ್ಟಳು. ಹಾಗೆಯೇ ಸಂಸಾರದ ವ್ಯಾಮೋಹಕ್ಕೆ ಬಲಿಯಾಗಿ ಭಗವಂತನನ್ನು ಬಿಟ್ಟುಬಿಡುತ್ತೇವೆ. ನಮ್ಮ ಸಂಸಾರದಲ್ಲಿಯೂ ಶಕಟಾಕ್ಷನ ಉಪದ್ರವವಿದೆ. ಶಕಟ ಎಂದರೆ ಸಂಸಾರದ ಭಾರದ ಹೊಣೆಗಾರಿಕೆಗಳು. ಇವುಗಳೇ ಅಧಿಕವಾಗಿ ಭಗವಂತನನ್ನು ಮರೆಯುತ್ತಿದ್ದೇವೆ. ಶ್ರೀಕೃಷ್ಣನನ್ನು ನಿರಂತರ ಸ್ಮರಿಸಿದರೆ ಸಂಸಾರಭಾರವನ್ನು ನಾಶಮಾಡುತ್ತಾನೆ. ಕೆಟ್ಟ ವಿಚಾರಗಳೂ ಕೆಟ್ಟ ದರ್ಶನಗಳೇ ತೃಣಾವರ್ತನಂತಿವೆ. ಸುಂಟರಗಾಳಿಯು ಕೃಷ್ಣನನ್ನೇ ಎತ್ತಿಕೊಂಡು ಹೋದಂತೆ ನಾನಾ ರೀತಿಯ ಕುಚೋದ್ಯ ಕುತರ್ಕಗಳು ಭಗವತ್ತತ್ವವಿಚಾರವನ್ನೇ ನಮ್ಮಿಂದ ಮರೆಮಾಚುತ್ತವೆ. ಹೀಗೆ ಮೋಹ, ಭಾರ, ಕುತರ್ಕಗಳೆಂಬ ಪೂತನೆ, ಶಕಟ, ತೃಣಾವರ್ತರಿಂದ ಆಕ್ರಮಿಸಲ್ಪಟ್ಟ ನಾವು ದೇವರನ್ನು ಮರೆಯುತ್ತಿದ್ದೇವೆ. ಭಗವಂತನನ್ನು ಹೃದಯದಲ್ಲಿ ಆದರದಿಂದ ಧರಿಸಿದಾಗ ಮೂವರ ಉಪದ್ರವದಿಂದ ದೂರವಾಗುತ್ತೇವೆ. ಅನಂತರ ಗೋಕುಲದಲ್ಲಿ ಶ್ರೀಕೃಷ್ಣನು ಬೆಳೆದಂತೆ ನಮ್ಮ ಜೀವನವೆಂಬ ನಂದಗೋಕುಲದಲ್ಲಿ ಶ್ರೀಕೃಷ್ಣಪರಮಾತ್ಮನು ಬೆಳೆಯುತ್ತಾನೆ.

## ಬಾಲಲೀಲೆಗಳಿಂದ ಮೂಡಿಬಂದ ಸಂದೇಶಗಳು

ಮುಂದೆ ಶ್ರೀಕೃಷ್ಣನ ಅನೇಕ ಬಾಲಲೀಲೆಗಳನ್ನು ನಿರೂಪಿಸಿದ್ದಾರೆ. ಪ್ರತಿನಿತ್ಯವೂ ನಮ್ಮ ತಂದೆತಾಯಂದಿರು ತಮ್ಮ ಮಕ್ಕಳ ಬಾಲಲೀಲೆಗಳನ್ನು ಕಾಣುವಾಗ ಶ್ರೀಕೃಷ್ಣನ ಬಾಲಲೀಲೆಗಳನ್ನು ನೆನಪುಮಾಡಿಕೊಳ್ಳಬೇಕು. ದಿನನಿತ್ಯದ ಸಕಲ ಕ್ರಿಯೆಗಳಲ್ಲಿಯೂ ಕೃಷ್ಣನ ಎಚ್ಚರ ಜಾಗೃತವಾಗಿರಬೇಕು. ಹರಿಕಥಾಮೃತಸಾರದ 'ನಾಮಸ್ಮರಣೆ' ಸಂಧಿಯಲ್ಲಿ ಜಗನ್ನಾಥದಾಸರು ನಿರಂತರ ಹರಿಯ ಸ್ಮರಿಸುವವನಿಗೆ ದೊರೆಯಬಹುದಾದ ಫಲವೇನೆಂದು ಬಣ್ಣಿಸಿದ್ದಾರೆ–

ಮಕ್ಕಳಾಡಿಸುವಾಗ ಮಡದಿಯೊ–
ಳಕ್ಕರದಿ ನಲಿವಾಗ ಹಯ ಪ–
ಲ್ಲಕ್ಕಿ ಗಜ ಮೊದಲಾದ ವಾಹನಗಳೇರಿ ಮೆರೆವಾಗ ।
ಬಿಕ್ಕುವಾಗಾಕಳಿಸುತಲಿ ದೇ–
ವಕ್ಕಿ ತನಯನ ಸ್ಮರಿಸುತಿಹ ನರ
ಸಿಕ್ಕುವನೆ ಯಮದೂತರಿಗೆ ಆವಲ್ಲಿ ನೋಡಿದರು ॥ — (೧೩–೧)

ಕೃಷ್ಣನನ್ನು ಭಕ್ತಿಪಾಶದಲ್ಲಿ ಕಟ್ಟಿಹಾಕಿದವರು ಎಂದೂ ಯಮಪಾಶವನ್ನು ನೋಡರು ಎನ್ನುತ್ತಾರೆ. ಶ್ರೀಕೃಷ್ಣನನ್ನು ಸಕಲ ದಾನವರೇಣ್ಯರು, ಉತ್ತರದ ಸಂತರೂ ಮನತುಂಬಿ ಕೊಂಡಾಡಿದ್ದಾರೆ.

ನಂದಗೋಕುಲದ ತುಂಟ ಕೃಷ್ಣನ ಚೇಷ್ಟೆಗಳನ್ನು ಯಶೋದೆಯ ಬಳಿ ಗೋಪಿಯರೆಲ್ಲರೂ ಒಪ್ಪಿಸುತ್ತಾರೆ.

ವತ್ಸಾನ್ ಮುಂಚನ್ ಕ್ವಚಿದಸಮಯೇ ಕ್ರೋಶಸಂಜಾತಹಾಸಃ
ಸ್ತೇಯಂ ಸ್ವಾದ್ವತ್ತ್ಯಥ ದಧಿ ಪಯಃ ಕಲ್ಪಿತೈಃ ಸ್ತೇಯಯೋಗೈಃ ।
ಮರ್ಕಾನ್ ಭೋಕ್ಷ್ಯನ್ ವಿಭಜತಿ ಸ ಚೇನ್ನಾತ್ತಿಭಾಂಡಂ ಭಿನತ್ತಿ
ದ್ರವ್ಯಾಲಾಭೇ ಸುಭೃಶಕುಪಿತೋ ಯಾತ್ಯನುಪಕ್ರೋಶ್ಯ ತೋಕಾನ್ ॥
— (೧೦-೨೯-೩೦)

'ತಾಯಿ ಯಶೋದೆ! ನಿನ್ನ ಮಗನು ಕಾಲಾಕಾಲಗಳನ್ನು ಗಮನಿಸದೆ ಕಟ್ಟಿದ ಕರುಗಳನ್ನು ಬಿಚ್ಚಿ ಆಟವಾಡುತ್ತಾನೆ. ಕರುಗಳನ್ನೇಕೆ ಬಿಚ್ಚುತ್ತೀ ಎಂದರೆ ಬಂಧನವನ್ನು ಬಿಚ್ಚುವುದೇ ನನ್ನ ಸ್ವಭಾವವೆಂದು ಉತ್ತರಿಸುತ್ತಾನೆ. (ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ) ಕರುಗಳು ಬೊಬ್ಬಿಟ್ಟರೆ ಇವನು ಖುಷಿಪಡುತ್ತಾನೆ. ಹಾಲು ಮೊಸರನ್ನೆಲ್ಲ ಯಥೇಷ್ಟವಾಗಿ ಮೆಲ್ಲುತ್ತಾನೆ. ಹೀಗೆಯೇ ಅನೇಕ ಪದಾರ್ಥಗಳನ್ನು ಕದ್ದು ತಿನ್ನುತ್ತಾ ಹೆಚ್ಚಿನ ಹಾಲು ಮೊಸರನ್ನು ಬೆಕ್ಕುಗಳಿಗೆ ಹಂಚುತ್ತಾನೆ. ಹಾಲು ಮೊಸರು ಇಲ್ಲವೆಂದಾದಾಗ ಅವುಗಳ ಪಾತ್ರೆಗಳನ್ನೇ ಒಡೆದು ಹಾಕುತ್ತಾನೆ. ತಿನ್ನಲು ಯಾವ ಪದಾರ್ಥಗಳೂ ಸಿಗದಿದ್ದಲ್ಲಿ ಎಲ್ಲರ ಮೇಲೂ ಸಿಟ್ಟುಗೊಂಡವನಾಗಿ ಮನೆಯ ಮಕ್ಕಳನ್ನು ಅಳಿಸಿ ಹೋಗುತ್ತಾನೆ. ಮಕ್ಕಳು ಅತ್ತಾಗ ಇವ ನಗುತ್ತಾನೆ. ಕಳ್ಳತನ ಮಾಡಿ ಗೊತ್ತಿಲ್ಲದಂತೆ ಕುಳಿತುಕೊಳ್ಳುತ್ತಾನೆ. ಕತ್ತಲೆಯ ಕೋಣೆಯಲ್ಲಿಟ್ಟಿದ್ದ ಹಾಲು ಮೊಸರುಗಳನ್ನು ಗುರುತು ಹಿಡಿದು ಕುಡಿಯುತ್ತಾನೆ. ತಪ್ಪು ಮಾಡದವನೆಂದು ಒರಳಿಗೆ ಕಟ್ಟಿದರೆ ಒರಳನ್ನೇ ಸೆಳೆದುಕೊಂಡು ಹೋಗುತ್ತಾನೆ. ಒರಳು ಸೆಳೆಯುವವನೆಂದು ಮನೆಯ ಕಂಬಕ್ಕೆ ಕಟ್ಟೋಣವೆಂದರೆ ನಮಗೇ ಭಯ. ಒರಳನ್ನು ಸೆಳೆದವನು ಅದರಂತೆ ನಮ್ಮ ಮನೆಯ ಕಂಬವನ್ನೇ ಸೆಳೆದು ನಡೆದರೆ ನಮ್ಮ ಮನೆಯ ಗತಿ ಏನು? ಎಂದು. ಹೀಗೆ ಕೃಷ್ಣನ ಬಗ್ಗೆ ಎಷ್ಟು ಮಾತನಾಡಿದರೂ ಗೋಪಿಯರಿಗೆ ತೃಪ್ತಿಯಿಲ್ಲ. ಯಶೋದೆಗೆ ಎಷ್ಟು ಕೇಳಿದರೂ ತೃಪ್ತಿಯಿಲ್ಲ. ಹೀಗೆಯೇ ಸಕಲ ಸಜ್ಜನರನ್ನೂ ತನ್ನ ಲೀಲೆಗಳಿಂದ ಸಂತೋಷ ಪಡಿಸುತ್ತಿದ್ದಾನೆ.

ಶ್ರೀಕೃಷ್ಣನ ಬಾಲ್ಯಲೀಲೆಯ ಅರ್ಥವೇನು? ಎಂದರೆ, ಭಗವಂತನಿಗೆ ಬೆಣ್ಣೆ ಬೇಕು. ಬೆಣ್ಣೆ ಬೇಕಾದರೆ ಮೊಸರನ್ನು ಕಡೆಯಬೇಕು. ನಮ್ಮ ಜೀವನವನ್ನು ಮಥಿಸಿದಾಗಲೂ ಅದರ ಫಲವಾಗಿ ಉತ್ತಮ ಜ್ಞಾನವು ಉದಿಸಿ ಬರುತ್ತದೆ. ನಮ್ಮ ನಶ್ವರವಾದ ಜೀವನದ ಸ್ಥಿರವಾದ ಸೊತ್ತು ಯಾವುದೆಂದು ಶ್ರೀಮದಾಚಾರ್ಯರು ಹೇಳಿದ್ದಾರೆ–

ಪತಿತಸ್ಯಾಸ್ಯ ದೇಹಸ್ಯ ಕಾಷ್ಠಾವಿಷ್ಟ ಸಮಸ್ಯ ಚ ।
ಫಲಾನಿ ತ್ರೀಣಿ ಶಿಷ್ಯಂತಿ ವಿದ್ಯಾ, ಕರ್ಮ, ಸುತಾ ಇತಿ ॥

ಜೀವನದ ಅಮೃತಫಲಗಳು ಮೂರು. ಒಂದು ಉತ್ತಮವಾದ ತತ್ವಜ್ಞಾನ, ಮತ್ತೊಂದು ಸತ್ಕರ್ಮ, ಮೂರನೆಯದಾಗಿ ಉತ್ತಮ ಮಕ್ಕಳು –ಇವುಗಳೇ ಜೀವನ ವೆಂಬ ಸುಖದುಃಖಗಳಿಂದ ಮಿಶ್ರಿತವಾದ ನದಿಯಲ್ಲಿ ತೇಲಿಬರುವ ಬೆಣ್ಣೆಯಾಗಿದೆ. ಭಗವಂತನು ನಮ್ಮ ಸತ್ಕರ್ಮ, ಜ್ಞಾನಗಳೆಂಬ ನವನೀತಕ್ಕಾಗಿ ಕಾಯುತ್ತಿದ್ದಾನೆ. ಅವುಗಳನ್ನು ಸ್ವೀಕರಿಸಿ ಮೋಕ್ಷವನ್ನೇ ನೀಡುತ್ತಾನೆ. ಶ್ರೀಕೃಷ್ಣ ಎಂದೂ ಜಡವಾದ ಬೆಣ್ಣೆಯನ್ನು ತಿನ್ನಲಾರ. ಅವನಿಗೆ ಬೇಕಾಗಿರುವ ಬೆಣ್ಣೆ ಎಂದರೆ ಜ್ಞಾನ ಕರ್ತವ್ಯಗಳೆಂಬ ಬೆಣ್ಣೆ. ಬೆಣ್ಣೆ ಸಿಗದಿರುವಾಗ ಬಾಂಢವನ್ನೇ ಒಡೆದಂತೆ ನಮ್ಮ ಜೀವನ(ಶರೀರ)ವೆಂಬ ಮನೆಗೆ ಬರುತ್ತಾನೆ. ಬೆಣ್ಣೆಯನ್ನರಸುತ್ತಾನೆ. ಇಲ್ಲವಾದರೆ ಸಂಸಾರವನ್ನೇ ಒಡೆಯು ತ್ತಾನೆ. ಮತ್ತಷ್ಟು ತೊಂದರೆಗೆ ಸಿಲುಕಿಕೊಳ್ಳುತ್ತೇವೆ. ಉತ್ತಮ ಕಾರ್ಯ, ಜ್ಞಾನಗಳಿದ್ದಲ್ಲಿ ಪುಟ್ಟ ಬಾಲಕೃಷ್ಣನು ತನ್ನ ದಿಟ್ಟ ಪಜ್ಜೆಗಳನ್ನು ನಮ್ಮ ಹೃದಯಮಂಟಪದಲ್ಲಿಟ್ಟು ಥಟ್ಟನೆ ಸಂಸಾರವನ್ನು ಕಡೆದೊಗೆಯುತ್ತಾನೆ. ನಮ್ಮನ್ನು ಅನುಗ್ರಹಿಸುತ್ತಾನೆ ಎನ್ನುವ ಸಂದೇಶ ಬೆಣ್ಣೆ ಕದಿಯುವ ಆಟದಲ್ಲಡಗಿದೆ.

ಒಂದು ದಿನ ಎಲ್ಲರೂ ಆಟವಾಡುತ್ತಿದ್ದರು. ದಿನವೂ ಬೆಣ್ಣೆಯನ್ನು ತಿನ್ನುತ್ತಿದ್ದ ಕೃಷ್ಣ ಅಂದು ಮಣ್ಣು ತಿಂದ. ಬಲರಾಮನೇ ಮೊದಲಾದ ಗೋಪಾಬಾಲಕರೆಲ್ಲರೂ ಸೇರಿ ಯಶೋದೆಗೆ ದೂರು ಹೇಳಿದರು. 'ಕೃಷ್ಣೋ ಮೃದಂ ಭಕ್ಷಿತವಾನ್' ಎಂದು. ನಿರಂತರ ತನ್ನ ತನಯನ ಹಿತವನ್ನೇ ಬಯಸುತ್ತಿದ್ದ ಯಶೋದೆಯೇ ಭಯ ಗೊಂಡವರಂತೆ ನಟಿಸುತ್ತಿರುವ ಶ್ರೀಕೃಷ್ಣನನ್ನು ಕುರಿತು 'ತುಂಟ! ಮಣ್ಣನ್ನೇಕೆ ತಿಂದೆ?' ಎಂದು ಗದರಿಸಿದಳು. ಕೃಷ್ಣ ಹೇಳಿದ–

ನಾಹಂ ಭಕ್ಷಿತವಾನಂಬ! ಸರ್ವೇ ಮಿಥ್ಯಾಭಿಶಂಸಿನಃ ।
ಯದಿ ಸತ್ಯಂ ಗಿರಸ್ತರ್ಹಿ ಸಮಕ್ಷಂ ಪಶ್ಯ ಮೇ ಮುಖಮ್ ॥ – (೧೦–೬–೩೫)

ಎಂದು. ಇಲ್ಲಿ ಕೆಲವರು ಶ್ರೀಕೃಷ್ಣನು ಸುಳ್ಳು ಹೇಳಿದ ಎನ್ನುತ್ತಾರೆ. ಎಂದೂ ಶ್ರೀಕೃಷ್ಣನು ಸುಳ್ಳುಮಾತನಾಡನು. ಭಗವಂತನು ಮಣ್ಣು ತಿಂದಿಲ್ಲವೆಂದದ್ದು ಸರಿಯೇ ಆಗಿದೆ. ಅವನ ದೃಷ್ಟಿಯಲ್ಲಿ ಜಗತ್ತಿನ ಖಾದ್ಯ ಪ್ರಪಂಚವೆಲ್ಲವೂ ಮಣ್ಣೇ ಎನಿಸಿದೆ. ಅವನು ಬೆಣ್ಣೆಯನ್ನು ತಿಂದಿಲ್ಲ ಮಣ್ಣನ್ನು ತಿಂದಿಲ್ಲ. ನೋಡುಗರಿಗೆ ತಿಂದಂತೆ ನಟಿಸಿದ. ಪ್ರತಿಯೊಬ್ಬರಲ್ಲಿಯೂ ನಿಂತು ಸ್ವಾದುರಸವನ್ನು ಮಾತ್ರ ಭುಂಜಿಸುವ ಶ್ರೀಹರಿಯು ಪ್ರಕೃತಿಯ ಫಲವನ್ನು ಉಣ್ಣುತ್ತಾನೆನ್ನುವುದು ಎಷ್ಟು ಸರಿ! ಆದ್ದರಿಂದ ಬಲರಾಮಾದಿ ಗಳೇ ಸುಳ್ಳು ಹೇಳಿದ್ದಾರೆ ಹೊರತು ಶ್ರೀಕೃಷ್ಣನು ಸುಳ್ಳು ಹೇಳಿಯೇ ಇಲ್ಲ. ಕೃಷ್ಣಚೇಷ್ಟೆಯನ್ನು ಅರ್ಥಮಾಡಿಕೊಳ್ಳುವಲ್ಲಿ ಜ್ಞಾನಿಗಳೂ ತಬ್ಬಿಬ್ಬಾಗುತ್ತಾರೆ–

ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್ ।
ಪೂರ್ಣಾನಂದಮಯಸ್ಯಾಸ್ಯ ಚೇಷ್ಟಾ ನ ಜ್ಞಾಯತೇ ಕ್ವಚಿತ್ ॥

ನಿನಗೆ ನನ್ನ ಮೇಲೆ ಅಪನಂಬಿಕೆ ಇದ್ದಲ್ಲಿ ನನ್ನ ಬಾಯನ್ನು ಪರೀಕ್ಷಿಸು! ಎಂದ. ಯಶೋದೆಯು 'ಯದ್ಯೇವಂ ತರ್ಹಿ ವ್ಯಾದೇಹಿ = ಸರಿ! ಹಾಗಾದರೆ ಬಾಯಿತೆರೆ!' ಎಂದಳು. ಲೀಲಾಮಾನುಷವಿಗ್ರಹನಾದ ಶ್ರೀಕೃಷ್ಣ ತನ್ನ ಹರವುಳ್ಳ ಬಾಯನ್ನು ತೆರೆದ.

ಯಶೋದೆಯು ನಿಬ್ಬೆರಗಾಗಿ ನಿಂತಳು. ಪುಟ್ಟ ಬಾಲಕನ ಬಾಯಲ್ಲಿ ಮಹಾಕಾಶ, ದಿಕ್ಕುಗಳು, ಅಗ್ನಿ, ವಾಯು, ನಕ್ಷತ್ರ, ಬೆಟ್ಟ, ಸಮುದ್ರ, ದ್ವೀಪ –ಮುಂತಾದವುಗಳಿಂದ ತುಂಬಿದ ಬ್ರಹ್ಮಾಂಡವನ್ನೇ ಕಂಡಳು. ಅದರೊಳಗೆ ತನ್ನನ್ನೂ ಕೃಷ್ಣನನ್ನೂ ಕಂಡಳು. ಇದೇನೆಂದು ಆಶ್ಚರ್ಯಚಕಿತಳಾದ ಯಶೋದೆಯು ತನ್ನಲ್ಲಿಯೇ ಹೀಗೆ ಹೇಳಿಕೊಂಡಳು–

ಕಿಂ ಸ್ವಪ್ನ ಏತದುತ ದೇವಮಾಯಾ ಕಿಂ ವಾ ಮದೀಯೋ ಬತ ಬುದ್ಧಿ ಮೋಹಃ ।
ಅಥೋ ಅಮುಷ್ಯೈವ ಮಮಾರ್ಭಕಸ್ಯ ಯಃ ಕಶ್ಚನೌತ್ಪತ್ತಿಕ ಆತ್ಮಯೋಗಃ ॥
– (೧೦–೯–೪೦)

'ಇದೇನು ಕನಸೆ? ಅಥವಾ ದೇವತೆಗಳ ಮಾಯೆಯೆ? ಅಥವಾ ನನ್ನದೇ ಏನಾದರೂ ಬುದ್ಧಿಭ್ರಮಣೆಯೇ? ಅಥವಾ ನನ್ನ ಮಗನಲ್ಲಿ ಸಹಜವಾಗಿ ಇರುವ ಮಹಿಮೆಯೋ?!' ಎಂದು ಆಶ್ಚರ್ಯಪಡುತ್ತಲೇ ಇದ್ದಾಳೆ.

ಹೀಗೆ ಸಮಗ್ರ ಬ್ರಹ್ಮಾಂಡವನ್ನೇ ತನ್ನ ವದನದಲ್ಲಿ ತೋರುವ ಮೂಲಕ ಸಮಗ್ರ ಜಗತ್ತಿಗೆ ತಾನು ಆಧಾರನಾದ ಶ್ರೀಹರಿ ಎಂದು ಸಾರಿದ. ಅಷ್ಟೈಶ್ವರ್ಯದ ವಿಭೂತಿ ರೂಪವನ್ನು ತೋರಿದ.

ಶ್ರೀಕೃಷ್ಣನು ಬಗೆಬಗೆಯಾಗಿ ತನ್ನ ರೂಪಗಳನ್ನು ಮಾರ್ಪಾಡು ಮಾಡಿಕೊಳ್ಳುತ್ತಿದ್ದ. ಒಮ್ಮೊಮ್ಮೆ ಚಿಕ್ಕ ಮಗುವಿನಂತೆ ವರ್ತಿಸಿದರೆ; ಮತ್ತೊಮ್ಮೆ ಜಗತ್ಸ್ವಾಮಿತ್ವವನ್ನು ಸಾಬೀತುಪಡಿಸುತ್ತಿದ್ದ.

ಒಮ್ಮೆ ಯಶೋದೆಯು ಮೊಸರನ್ನು ಕಡೆಯಲಾರಂಭಿಸಿದಳು. ಕೃಷ್ಣನು ಸ್ತನ್ಯಾಪೇಕ್ಷಿಯಾಗಿ ಅವಳ ಬಳಿ ಸಾಗಿದ. ಮುದ್ದು ಮುಖದಿಂದ ಅವಳನ್ನು ರಂಜಿಸುತ್ತಾ ಕಡೆವ ಕೋಲನ್ನು ಹಿಡಿದುಕೊಂಡು ಮೊಸರುಕಡೆಯಲಾಗದಂತೆ ತಡೆದ. ಯಶೋದೆಯು ವಾತ್ಸಲ್ಯಭರಿತಳಾಗಿ ಶ್ರೀಕೃಷ್ಣನ ಮುದ್ದುಮುಖವನ್ನು ಕಂಡು ತೊಡೆಯಮೇಲೇರಿಸಿ ಸಹಜವಾಗಿ ಉಕ್ಕಿಬಂದ ಸ್ತನ್ಯವನ್ನುಣಿಸಿದಳು. ಅಷ್ಟರಲ್ಲೇ ಒಲೆಯ ಮೇಲಿಟ್ಟ ಹಾಲು ಉಕ್ಕಿ ಬಂತು: ಹಾಲಿನ ಪಾತ್ರೆಯನ್ನು ಕೆಳಗಿಳಿಸಲು ಕ್ಷೀರಸಾಗರದೊಡೆಯನನ್ನು ತೊಡೆಯಿಂದ ಕೆಳಗಿಳಿಸಿದಳು. ಹಾಲಿಳಿಸಲು ತವಕಿಸಿದಳು. ಆವಾಗ ಕೃಷ್ಣನಾದರೂ–

ಸಂಜಾತಕೋಪ ಸ್ಫುರಿತಾರುಣಾಧರಂ ಸಂದಶ್ಯ ದದ್ಭಿರ್ದಧಿಮಂಡಭಾಜನಮ್ ।
ಭಿತ್ತ್ವಾ ಮೃಷಾಶ್ರುರ್ದೃಷದಶ್ಮನಾ ರಹೋ ಜಘಾಸ ಹೈಯಂಗವಮಂತರಂ ಗತಃ ॥
– (೧೦–೧೦–೬)

'ಕೋಪದಿಂದ ಕಂಪಿಸುತ್ತಿರುವ ಕೆಂಪಾದ ಓಷ್ಠಪುಟಗಳನ್ನು ಕಚ್ಚಿದನು. ಎದುರಿನಲ್ಲಿಯ ಮೊಸರಿನ ಗಡಿಗೆಯನ್ನು ಅರೆವ ಗುಂಡುಕಲ್ಲಿನಿಂದ ಹೊಡೆದು ಒಡೆದನು. ನಟನೆಯ ನೇತ್ರಜಾಲವನ್ನು ಸುರಿಸುತ್ತಾ ಒಳಮನೆಗೆ ನುಸುಳಿ ನವನೀತವನ್ನೆಲ್ಲ ಕಬಳಿಸಿದನು' ಕೃಷ್ಣನೇ ತೊಡೆಯ ಮೇಲಿರಲು ಕಾಸಿನ ಬೆಲೆಯ ಹಾಲಿನ ಆಸೆಯಿಂದ

ಓಡಿಹೋದ ತಾಯಿಗೆ ಬುದ್ಧಿ ಕಲಿಸಲು ಹೀಗೆ ಮಾಡಿದ. ಅಲ್ಪ ಆಸೆಗೆ ಬಲಿಯಾದರೆ ಎಷ್ಟೆಲ್ಲ ನಷ್ಟವಾಗುತ್ತದೆ ಎನ್ನುವುದನ್ನು ಯಶೋದೆ ಅನುಭವಿಸಿದಳು.

ನಾವೂ ಕೂಡ ಜೀವನದಲ್ಲಿ ಅಲ್ಪವಾದ ಸಾಂಸಾರಿಕಸುಖಕ್ಕಾಗಿ ದೇವರನ್ನೇ ಮರೆಯುತ್ತೇವೆ ಮರೆತರೆ ಆಗುವ ನಷ್ಟವೇನೆಂಬುದನ್ನು ಗಡಿಗೆಯನ್ನು ಒಡೆಯುವುದರ ಮೂಲಕ ಸೂಚಿಸಿದ.

ಕೃಷ್ಣನು ಎಲ್ಲಿಗೆ ಹೋದನೆಂದು ಹುಡುಕಲಾರಂಭಿಸಿದಳು. ಕೃಷ್ಣನು ಒಳಕೋಣೆಯಲ್ಲಿ ಒರಳಿನ ಮೇಲೆ ನಿಂತು ಮೇಲಿಟ್ಟ ಬೆಣ್ಣೆಯನ್ನು ತೆಗೆದು ಬೆಕ್ಕಿಗೆ ಹಾಕುತ್ತಿದ್ದನು. ಯಶೋದೆಯು ಹಿಂಬದಿಯಿಂದ ಮೆಲ್ಲನೆ ಬಂದಳು. ವಿಶ್ವತಶ್ಚಕ್ಷುವು ಕೋಲು ಹಿಡಿದ ತಾಯಿಯನ್ನು ಕಂಡು ಓಡಲಾರಂಭಿಸಿದ. ಯೋಗಿಗಳ ಮನಸ್ಸಿಗೂ ನಿಲುಕದ ನಿಗಮವೇದ್ಯನನ್ನು ಹಿಡಿಯುವೆನೆಂದು ಹಿಂಬಾಲಿಸಿದಳು. ಬಹಳ ದೂರ ಓಡಿಸಿದ. ತನ್ನನ್ನು ಹಿಡಿಯಲು ಶ್ರಮಪಟ್ಟು ಓಡಿಬಂದ ತಾಯಿಗೆ ಸಿಕ್ಕಿದ. ಗದರಿಸಿದಳು. ಹಗ್ಗದಿಂದ ಕಟ್ಟಿಹಾಕಲು ಯೋಚಿಸಿದಳು. ಒರಳಿಗೆ ಕಟ್ಟಬೇಕೆಂದು ಹಗ್ಗದಿಂದ ಕಟ್ಟುವಾಗ ಎರಡಂಗುಲ ಕಡಿಮೆಯಾಯಿತು. ಅದರೊಟ್ಟಿಗೆ ಮತ್ತೊಂದು ಹಗ್ಗವನ್ನು ಸೇರಿಸಿದಳು. ಅದೂ ಸಾಲದಾಯಿತು. ಹೀಗೆ ನೂರಾರು ಹಗ್ಗಗಳನ್ನು ಸೇರಿಸಿದರೂ ಎಲ್ಲವೂ ಎರಡಂಗುಲ ಕಡಮೆಯೇ ಆದವು.

ಶ್ರೀಕೃಷ್ಣನು ಯಶೋದೆಗೆ ಎರಡು ಕಡಿಮೆಯಾಗಿದೆ ಎಂಬುದನ್ನು ಸೂಚನೆ ಮಾಡಿದ. ಯಶೋದೆಗೆ ನನ್ನ ಮಗನೆಂಬ ಪ್ರೇಮವಿದ್ದರೂ ನಿತ್ಯಮುಕ್ತನಾದ ಶ್ರೀಹರಿಯನ್ನು ಹಗ್ಗದಿಂದ ಕಟ್ಟಲಾಗದು ಎಂಬ ಪರಿಜ್ಞಾನವಿರಲಿಲ್ಲ. ಮತ್ತು ಅಲ್ಪವಾದ ಹಾಲಿಗಾಗಿ ಕೃಷ್ಣನನ್ನು ಕೆಳಗಿರಿಸುವ ಸಾಹಸ ಮಾಡಿದ್ದರಿಂದ ವೈರಾಗ್ಯವು ಅಷ್ಟಕ್ಕಷ್ಟೇ ಇದ್ದಿತು. ಇವೆರಡನ್ನು ಜೀವನದಲ್ಲಿ ಸೇರಿಸಿಕೊಂಡರೆ ನಿನ್ನ ಗಂಟಿಗೆ ಸಿಲುಕುತ್ತೇನೆ ಎಂದು ಸೂಚನೆ ಮಾಡಿದ.

ನಮಗೆ ಜ್ಞಾನ ಭಕ್ತಿ ವೈರಾಗ್ಯ ಮೂರು ಇವೆ. ಆದರೆ ಎಲ್ಲಿ ಇರಬೇಕೋ ಅಲ್ಲಿ ಇಲ್ಲ. ಭಗವಂತನ ಜ್ಞಾನ, ಅವನಲ್ಲಿ ಭಕ್ತಿ ಜಗತ್ತಿನಲ್ಲಿ ವೈರಾಗ್ಯವೆಂದಿದ್ದರೆ; ಭಗವಂತನಲ್ಲಿ ವೈರಾಗ್ಯ, ಸಂಸಾರದಲ್ಲಿ ಭಕ್ತಿಜ್ಞಾನಗಳಿವೆ. ಇವು ಬದಲಾಗದೆ ಭಗವಂತ ಒಲಿಯುವುದಿಲ್ಲ. ಯಶೋದೆಗೆ ತನ್ನ ನಡತೆಗಳ ಮೂಲಕ ಇಂತಹ ಪಾಠವನ್ನು ಮಾಡಿದ. ಅದು ಸಮಗ್ರ ಮನುಕುಲಕ್ಕೆ ಉಪದೇಶಿಸಿದಂತಾಯಿತು.

## ಯಮಳಾರ್ಜುನಭಂಜನ

ಮುಂದೆ ಯಶೋದೆಯ ಪರಿಶ್ರಮವನ್ನು ಕಂಡ ಶ್ರೀಕೃಷ್ಣ ಕನಿಕರದಿಂದ ತಾಯಿಗೆ ವಶನಾದ. ತಾಯಿಯು ಶ್ರೀಕೃಷ್ಣನ ಅತಿಯಾದ ತುಂಟತನವನ್ನು ಸಹಿಸಲಾರದೆ ಒರಳಿಗೆ ಕಟ್ಟಿದಳು. ಪುಟ್ಟ ಬಾಲಕನಾದ ಕೃಷ್ಣ ಒರಳುಕಲ್ಲನ್ನೇ ಸೆಳೆದು ನಡೆದ. ದಾರಿಯಲ್ಲಿರುವ ಜೋಡಿಯಾದ ಅರ್ಜುನ ವೃಕ್ಷಗಳ ನಡುವೆ ಅಡಿಯನಿರಿಸಿದ. ಒರಳುಕಲ್ಲು ಅಡ್ಡವಾಗಿ ಸಿಕ್ಕಿಕೊಂಡಿತು. ಹಾಗೆಯೇ ಸೆಳೆದು ನಡೆದ. ಬೃಹದಾಕಾರದ

ಮರಗಳು ಕೆಳಗುರುಳಿಬಿದ್ದವು. ಅಲ್ಲಿಂದ ನಾರದರ ಶಾಪಕ್ಕೆ ತುತ್ತಾಗಿದ್ದ ನಲಕೂಬರ ಮಣಿಗ್ರೀವರು ಎದ್ದುಬಂದರು. ಶಾಪದ ತಾಪವನ್ನು ಕಳೆದ ಭವಾಪಹನಾದ ಶ್ರೀಹರಿಗೆ ಮುಗಿಬಿದ್ದರು. ಕೃಷ್ಣನ ಪ್ರತಿಯೊಂದು ಕ್ರಿಯೆಗಳಲ್ಲಿಯೂ ದಯೆ ತುಂಬಿದೆ ದಾನವರ ದಮನವೂ ಇದೆ. ನಲಕೂಬರ ಮಣಿಗ್ರೀವ ಶಾಪಮುಕ್ತರಾದರೆ ಅದೇ ವೃಕ್ಷದಲ್ಲಿದ್ದ ದುನಿ, ಚಮು ಎಂಬ ರಾಕ್ಷಸರನ್ನು ದಮನಮಾಡಿದ್ದಾನೆ.

ಶಾಪವಿಮುಕ್ತರಾಗಿದ್ದ ಯಕ್ಷರಾದರೂ ಭಗವಂತನ ಬಳಿ ಎಲ್ಲರೂ ಮಾಡಲೇ ಬೇಕಾದ ಪ್ರಾರ್ಥನೆಯೊಂದನ್ನು ಮಾಡಿದ್ದಾರೆ–

ಇತ್ತ ಮರಗಳು ಬಿದ್ದ ಮಹಾಶಬ್ದವನ್ನು ಕೇಳಿದ ವ್ರಜದ ಜನರೆಲ್ಲರೂ ಗಾಬರಿ ಯಿಂದ ಓಡೋಡಿ ಬಂದರು. ಗಾಳಿ ಇಲ್ಲ, ಗುಡುಗು ಮಿಂಚಿಲ್ಲ. ಆನೆಗಳು ಬಂದಿಲ್ಲ. ಹೀಗಿದ್ದರೂ ಬಲವಾದ ಮರಗಳು ಉರುಳಲು ಕಾರಣವೇನು? ಎಂದು ಆಶ್ಚರ್ಯ ಪಡುತ್ತಿರಲು ಸಮೀಪದಲ್ಲಿ ಆಡುತ್ತಿರುವ ಮಕ್ಕಳು ಆ ಮಗುವಿನಿಂದ ಉರುಳಿಬಿದ್ದವು' ಎಂದು ಕೃಷ್ಣನ ಕಡೆ ಕೈಮಾಡಿದರು. ನಂದಗೋಪನು ಒಂದನ್ನೂ ಅರಿಯದೆ ಕೃಷ್ಣನನ್ನು ಎತ್ತಿಕೊಂಡು ನಡೆದ.

**ವಾಣೀ ಗುಣಾನುಕಥನೇ ಶ್ರವಣೌ ಕಥಾಯಾಂ**
**ಹಸ್ತೌ ಚ ಕರ್ಮಸು ಮನಸ್ತವ ಪಾದಯೋರ್ನಃ ।**
**ಸ್ಮೃತ್ಯಾಂ ಶಿರಸ್ತವ ಸುರಪ್ರವರ ಪ್ರಣಾಮೇ**
**ದೃಷ್ಟಿಃ ಸತಾಂ ದರ್ಶನೇಽಸ್ತು ಭವತ್ತನೂನಾಮ್ ॥**
– (೧೦-೧೧-೩೮)

"ದೇವ ನಾಲಿಗೆಯು ನಿನ್ನ ನಾಮಸಂಕೀರ್ತನೆಯಲ್ಲಿ, ಕಿವಿಗಳು ನಿನ್ನ ಕಥೆ ಕೇಳುವುದರಲ್ಲಿ, ಕೈಗಳು ಕೈಂಕರ್ಯದಲ್ಲಿ, ಮನವು ನಿನ್ನ ಪಾದದ ಸ್ಮರಣೆಯಲ್ಲಿ, ನನ್ನ ಶಿರಸ್ಸು ನೀನು ನೆಲೆನಿಂತ ಜಗದಲ್ಲಿ ವಂದಿಸುವಲ್ಲಿ, ಕಣ್ಣು ನಿನ್ನ ನಿನ್ನವರ ದರ್ಶನದಲ್ಲಿ ನಿರಂತರ ನಿರತವಾಗುವಂತೆ ಮಾಡು!" ಎಂದು ಪ್ರಾರ್ಥಿಸಿ ತಮ್ಮ ಲೋಕಕ್ಕೆ ತೆರಳಿದನು.

## ಹರಿಯು ಎರಡನ್ನು ತರಿಯಲಿ!!

ಅರಣಿಗಳ ಮಥನದಿಂದ ಅಗ್ನಿಯು ಹುಟ್ಟುತ್ತದೆ. ಹುಟ್ಟಿದ ಅಗ್ನಿಯು ಪ್ರಜ್ವಲಿಸಬೇಕಾದರೆ ನಿರಂತರ ಘೃತಧಾರೆ ಬೀಳಬೇಕು. ಅದರಂತೆ ಗುರುಶಿಷ್ಯರೆಂಬ ಅರಣಿಗಳಿಂದ ಭಗವಂತನೆಂಬ ಅಗ್ನಿಯು ಹೃದಯದಲ್ಲಿ ಮೂಡುತ್ತಾನೆ. ಇವನು ಜ್ವಲಿಸುವುದು ವೇದಗಳಿಂದ. ವೇದಗಳಿಂದ ಭಗವದ್‌ಜ್ಞಾನವನ್ನು ಹೊಂದಬೇಕು.

ಇಲ್ಲಿ ಒಂದು ಪ್ರಶ್ನೆ ಬರುತ್ತದೆ.

ಜ್ಞಾನವೆಂಬುದು ಅಂತಃಕರಣದ ಧರ್ಮ. ಅಂತಃಕರಣವು ಲಿಂಗದೇಹದ ನಾಶದ ಒಟ್ಟಿಗೇ ನಾಶವಾಗುತ್ತದೆ. ಆವಾಗ ಪೂರ್ವಾರ್ಜಿತ ಜ್ಞಾನವೂ ನಾಶವಾಗುತ್ತದೆ

ಯಲ್ಲವೇ? ಹೌದು. ಅರಣ್ಯದಲ್ಲಿನ ಕಾಡ್ಗಿಚ್ಚು ಎಲ್ಲವನ್ನೂ ದಹಿಸಿ ಕೊನೆಗೆ ತಾನೂ ನಂದಿಹೋಗುವಂತೆ. ಅಂತಃಕರಣದಲ್ಲಿರುವ ಭಗವದ್‌ಜ್ಞಾನವು ಸ್ವರೂಪಾಚ್ಛಾದಿಕಾ, ಪರಮಾಚ್ಛಾದಿಕಾ ಎಂಬ ಎರಡು ಮಾಯೆಗಳನ್ನು ದಹಿಸಿ ಕೊನೆಗೆ ತಾನೂ ನಾಶವಾಗುತ್ತದೆ.

ಹಾಗಾದರೆ ಮೋಕ್ಷದಲ್ಲಿ ಜ್ಞಾನವಿಲ್ಲವೇ?

ಇದೆ ಅಂತಃಕರಣದಿಂದ ವಿಕೃತವಾದ ಜ್ಞಾನವು ಮೋಕ್ಷದಲ್ಲಿ ಇಲ್ಲದ ಹೊರತು ಜ್ಞಾನವೇ ಇಲ್ಲವೆಂದಿಲ್ಲ. ಜೀವನು ತನ್ನ ಸಹಜವಾದ ದಿವ್ಯವಾದ ಸ್ವರೂಪಜ್ಞಾನ ವನ್ನು ಮೋಕ್ಷದಲ್ಲಿ ಪಡೆದುಕೊಂಡಿರುತ್ತಾನೆ. ಎರಡು ಮಾಯೆಗಳ ನಾಶಕ್ಕೆ ಅಂತಃಕರಣದಲ್ಲಿಯ ಜ್ಞಾನ ಅತ್ಯಗತ್ಯ.

ಸ್ವರೂಪಾಚ್ಛಾದಿಕಾ ಎಂದರೇನು?

ನಮ್ಮ ಜ್ಞಾನ–ಸುಖಗಳ ಅರಿವು ನಮಗಿಲ್ಲ. ಜೀವರ ಸ್ವರೂಪಭೂತವಾದ ಜ್ಞಾನ–ಸುಖಗಳನ್ನು ಮುಚ್ಚಿದ ಮಾಯೆಯು ಸ್ವರೂಪಾಚ್ಛಾದಿಕಾ ಎನ್ನಿಸುತ್ತದೆ.

ಪರಮಾಚ್ಛಾದಿಕಾ ಎಂದರೇನು?

ಭಗವಂತನನ್ನು ಮುಚ್ಚಿದ ಮಾಯೆಗೆ ಪರಮಾಚ್ಛಾದಿಕ ಎನ್ನುತ್ತೇವೆ. ಈ ಮಾಯೆ ನಾಶವಾದರೆ ಭಗವಂತನನ್ನು ಸಮಗ್ರವಾಗಿ ತಿಳಿಯಬಹುದೇ? ಇಲ್ಲ. ನಮ್ಮ ಯೋಗ್ಯತೆಗನುಗುಣವಾಗಿ ತಿಳಿಯಬಹುದೇ ಹೊರತು ಗುಣಸಾಗರನಾದ ಹರಿಯನ್ನು ಅರಿಯಲಾಗದು. ನಾವು ಎಷ್ಟು ತಿಳಿದರೂ ತಿಳಿಯಲಾಗದಷ್ಟು ಭಗವಂತನಿದ್ದಾನೆ. ಇದನ್ನೇ 'ಅತ್ಯತಿಷ್ಠದ್ದಶಾಂಗುಲಮ್' ಎನ್ನುತ್ತದೆ ಪುರುಷಸೂಕ್ತ.

ಶ್ರೀ–ಬ್ರಹ್ಮ–ರುದ್ರರೂ ಅರಿಯರೆಂದಮೇಲೆ ನಮ್ಮಂಥ ಪಾಮರರ ಪಾಡೇನು?

ಭಗವಂತನನ್ನು ಮುಚ್ಚಿದ ಮಾಯೆಯು ಸ್ವಲ್ಪವೇ ಸರಿಯುತ್ತದೆಯೇ ಹೊರತು ಪೂರ್ಣ ನಾಶವಾಗಲಾರದು. ಪರದೆಯು ಸ್ವಲ್ಪ ಸರಿದಾಗ ಸ್ವಲ್ಪ ತೋರುವಂತೆ ಭಗವಂತನ ಬಗ್ಗೆ ಸ್ವಲ್ಪ ತಿಳಿದೇವು. ಎರಡು ಮಾಯೆಗಳನ್ನು ನಾಶಪಡಿಸಿಂದು ಪ್ರಾರ್ಥಿಸಬೇಕು. ಏಕೆಂದರೆ–

ಒಮ್ಮೆ ಶ್ರೀಕೃಷ್ಣನನ್ನು ಯಶೋದೆಯು ಒರಳುಕಲ್ಲಿಗೆ ಕಟ್ಟಿದಳು. ಶ್ರೀಕೃಷ್ಣನು ವರಳುಕಲ್ಲನ್ನೇ ಎಳೆದು ಹೊರಟ. ಮುಂದೆ ಸಾಗುತ್ತಾ ಎರಡು ಮರಗಳ ಮಧ್ಯದಲ್ಲಿ ನುಸುಳಿದ. ವರಳನ್ನೂ ಸೆಳೆದ. ಬಾಲಕೃಷ್ಣನ ಪ್ರಬಲ ಬಲದಿಂದ ಮರಗಳೆರಡೂ ಉರುಳಿದವು. ಹರಿಯ ಹಿರಿಮೆಯ ಕಂಡ ಹರಿದಾಸರು ಹಾಡಿ ಕೊಂಡಾಡಿದರು. ಈ ಕಥೆಯಲ್ಲಿಯೂ ಆಧ್ಯಾತ್ಮಿಕ ಸಂದೇಶ ಅಡಕವಾಗಿದೆ.

ನಾವೆಲ್ಲರೂ ವರಳುಕಲ್ಲಿನಂತಿದ್ದೇವೆ. ಸ್ವಯಂ ಚಲಿಸುವ ಶಕ್ತಿ ವರಳಿಗೂ ಇಲ್ಲ ನಮಗೂ ಇಲ್ಲ. ಯಶೋದೆಯು ಕೃಷ್ಣನನ್ನು ವರಳಿಗೆ ಕಟ್ಟಿದಂತೆ ನಮ್ಮನ್ನು ದೇವರಿಗೆ ಕಟ್ಟಬೇಕು. ದೇವರ ಸಂಬಂಧ ಕಡಿದು ಹೋಗದಂತೆ ದೃಢವಾದ ಭಕ್ತಿಪಾಶದಿಂದ ಗಟ್ಟಿ ಕಟ್ಟಬೇಕು. ಅನಂತರ ವರಳನ್ನು ಎಳೆದು ನಡೆದಂತೆ ಶ್ರೀಹರಿಯು ನಮ್ಮನ್ನು ಎಳೆದುಕೊಂಡು ಹೋಗುತ್ತಾನೆ. ಮುಂದೆ ಮರಗಳನ್ನು ಮುರಿದ. ಅದರಂತೆ ನಮಗೆ

ಸಂಬಂಧಿಸಿದ ಎರಡು ಮರಗಳೆಂದರೆ ಸ್ವರೂಪಾಚ್ಛಾದಿಕಾ, ಪರಮಾಚ್ಛಾದಿಕಾ ಎಂಬ ಎರಡು ಮಾಯೆಗಳೇ ಮರಗಳಂತಿವೆ. ಭಕ್ತಿಯಿಂದ ಕಟ್ಟಿದಾಗ ಜ್ಞಾನದ ಬಳಿ ಸೆಳೆದುಕೊಂಡು ಹೋಗಿ ಎರಡು ಮಾಯೆಗಳನ್ನು ಕಿತ್ತೊಗೆಯುತ್ತಾನೆ. ಅನಂತರ ಶಾಪವಿಮುಕ್ತರಾದ ನಲಕೂಬರ–ಮಣಿಗ್ರೀವರು ಮುಕ್ತರಾದಂತೆ ಮಾಯಾನಿರ್ಮುಕ್ತರಾದ ನಾವೂ ಸಹ ಮುಕ್ತರಾಗಿ ನಿತ್ಯಾನಂದದಿಂದ ತೃಪ್ತಿ ಹೊಂದಬಹುದು. 'ಇಂತಹ ಹರಿಕರುಣೆ ನಿರಂತರ ಹರಿದುಬರಲಿ' ಎಂಬುದೆ ನಮ್ಮೆಲ್ಲರ ಪ್ರಾರ್ಥನೆಯಾಗಲಿ!!

## ಎರಡರ ಶುದ್ಧಿ ಅಗತ್ಯ

ಮುಂದೆ ಶ್ರೀಕೃಷ್ಣನು ವೃಂದಾವನಕ್ಕೆ ತೆರಳಲು ಇಚ್ಛಿಸಿದನು. ಕೂಡಲೇ ತನ್ನ ರೋಮಕೂಪಗಳಿಂದ ಅನೇಕ ಭಯಂಕರವಾದ ತೋಳುಗಳನ್ನು ಸೃಷ್ಟಿಸಿದ. ಹಸುಕರುಗಳನ್ನು ದನಗಳನ್ನು ಅವುಗಳು ಕಚ್ಚಲು ಬಂದವು. ಇವುಗಳ ಉಪದ್ರವವನ್ನು ಸಹಿಸಲಾರದೆ ಎಲ್ಲರೂ ವೃಂದಾವನಕ್ಕೆ ತೆರಳಿದರು.

ಎರಡರ ಶುದ್ಧಿ ಅಗತ್ಯ ಬೇಕು!

ವೃಂದಾವನದ ಮಂಗಳ ಪರಿಸರದಲ್ಲಿ ನಂದನ ಕಂದನಾದ ಗೋವಿಂದ ತನ್ನ ಮಂಗಳಕರವಾದ ಅನೇಕ ಚೇಷ್ಟೆಗಳಿಂದ ಎಲ್ಲರನ್ನೂ ಆನಂದಗೊಳಿಸಿದ್ದ.

ಒಂದು ದಿನ ಯಮುನೆಯ ಪರಿಸರಕ್ಕೆ ಹಸುಗಳ ಮೇಯಿಸಲು ಗೋಪಾಲಕರಿಂದೊಡಗೂಡಿ ನಡೆದ.

ಅಲ್ಲಿಯ ಯಮುನಾನದಿ ಭಯಂಕರ ಕಾಳಿಂಗನ ಆವಾಸಸ್ಥಾನ. ಕಾಲೀಯನಾಗ ತನ್ನ ಉಲ್ಬಣವಾದ ವಿಷದಿಂದ ಸುತ್ತಲಿನ ಪರಿಸರವನ್ನೆಲ್ಲ ದೂಷಿತಗೊಳಿಸಿದ್ದ. ಮುಗ್ಧ ಜನರು, ಹಸುಗಳು, ಪ್ರಾಣಿಗಳು, ಪಕ್ಷಿಗಳು ಯಮುನೆ ನೀರನ್ನು ಕುಡಿದು ಪ್ರಾಣಾಪಾಯಕ್ಕೆ ತುತ್ತಾಗುತ್ತಿದ್ದರು. ಸಮಗ್ರ ಪರಿಸರದ ಚೈತನ್ಯವನ್ನೇ ನಾಶಪಡಿಸಿದ್ದ.

ಇಂತಹ ವಿಷಮ ಪರಿಸ್ಥಿತಿಯಲ್ಲಿ ಶ್ರೀಕೃಷ್ಣ ಮುಂದೆ ಬಂದ. ಕಾಲಿಯನಿಗೆ ಸರಿಯಾದ ಪಾಠ ಕಲಿಸಬೇಕೆಂದು ಬಂದ. ಯಮುನೆಯ ಬಳಿ ಇರುವ ಮರವೊಂದನ್ನೇರಿದ. ಯಮುನೆಯ ಮಡುವಿಗೆ ಹಾರಿದ.

ಕಾಳಿಂಗ ಕೃಷ್ಣನನ್ನು ಆಕ್ರಮಿಸಿದ. ಎಲ್ಲರೂ ಕಂಗಾಲಾದರು.

ಕೃಷ್ಣನು ಕಾಳಿಂಗನ ಫಣಗಳಲ್ಲಿ ಝಣಝಣನೆ ಕುಣಿಕುಣಿದಾಡಿದ. ಅವನ ನಾಟ್ಯ ನೋಡಲು ದೇವತೆಗಳು, ಗಂಧರ್ವರು, ಸಿದ್ಧರು, ಚಾರಣರು, ದೇವತಾ ಸ್ತ್ರೀಯರೆಲ್ಲರೂ ಬಂದರೂ ನಾಟ್ಯಕ್ಕೆ ಪಕ್ಕವಾದ್ಯಗಳನ್ನು ಹಿಡಿದುಕೊಂಡು ಬಂದರು–

**ತಂ ವರ್ತುಮುದ್ಯತಮವೇಕ್ಷ್ಯ ತದಾ ತದೀಯು**
**ಗಂಧರ್ವ ಸಿದ್ಧ ಸುರ ಚಾರಣ ದೇವವಧ್ವಃ ।**
**ಪ್ರೀತ್ಯಾ ಮೃದಂಗ ಪಣವಾನಕ ವಾದ್ಯಗೀತ**
**ಪುಷ್ಪೋಪಹಾರನುತಿಭಿಃ ಸಹಸೋಪಸೇದುಃ ॥**

— (೧೦-೧೬-೨೭)

ಬ್ರಹ್ಮ ಮೃದಂಗ ನುಡಿಸಿದ. ಆಂಜನೇಯ ಹಾಡಿದ. ರುದ್ರದೇವ ತಾಳ ತಟ್ಟಿದ. ಕೃಷ್ಣ ನರ್ತಿಸಿದ. ಕೃಷ್ಣನ ಈ ವರ್ತನ ಜಗತ್ತಿಗೇ ಮಂಗಳಕರವಾದದ್ದು. ಪಶುಪಕ್ಷಿಗಳಿಗೆ ಮನುರೆಲ್ಲರಿಗೂ ದುಃಸ್ವಪ್ನವಾಗಿದ್ದ ಕಾಳಿಂಗನನ್ನು ಮರ್ದಿಸಿದ. ವಿಷವನ್ನೆಲ್ಲಾ ಹಿಂಡಿದ.

ಶ್ರೀಕೃಷ್ಣನು ಎರಡು ವಿಧವಾಗಿ ಪರಿಸರರಕ್ಷಣೆ ಮಾಡಿದ್ದಾನೆ. ಪರಿಸರ ರಕ್ಷಣೆಯಲ್ಲಿ ವಿಶೇಷ ಕಾಳಜಿ ವಹಿಸಿದವ ಶ್ರೀಕೃಷ್ಣ.

ಶ್ರೀಕೃಷ್ಣನು ನಂದಗೋಕುಲವನ್ನು ಬಿಟ್ಟು ವೃಂದಾವನಕ್ಕೆ ಬಂದ.

ನಂದಗೋಕುಲವನ್ನು ಬಿಟ್ಟದ್ದೇಕೆ?

ಶ್ರೀಕೃಷ್ಣನೇ ಹೇಳುತ್ತಾನೆ–

"ನನ್ನ ಬಾಲ್ಯದಲ್ಲಿ ನಂದಗೋಕುಲ ಹೇಗಿತ್ತು! ಬಳ್ಳಿಗಳು, ಮರಗಿಡಗಳು, ಉದ್ಯಾನವನಗಳು ಇವುಗಳಿಂದ ತುಂಬಿತುಳುಕುತ್ತಿತ್ತು. ಇಂತಹ ಸುಂದರ ಪರಿಸರವನ್ನು ನಗರದ ಆಸುಪಾಸಿನ ವ್ಯಾಪಾರಿಗಳು ಹಣಕ್ಕಾಗಿ ಎಲ್ಲವನ್ನೂ ಧ್ವಂಸಗೊಳಿಸಿದ್ದಾರೆ. ನಗರವೆಲ್ಲ ಮೈದಾನವಾಗಿದೆ. ಆಕಾಶವೇ ಕಾಣಿಸದಷ್ಟು ಮರಗಿಡಗಳಿಂದ ತುಂಬಿದ ಕಾಡಿನ ನಾಡೆಲ್ಲವೂ ಮಾಯವಾಗಿ ಮೈದಾನವಾಗಿದೆ. ನಾನಿಲ್ಲಿ ಇರಲಾರೆ ಎಂದು ಪರಿಸರವನ್ನು ಹಾಳುಮಾಡುವ ಜನರ ಮೇಲೆ ಆಕ್ರೋಶ ವ್ಯಕ್ತಪಡಿಸಿದ್ದ. ನಂದಗೋಕುಲಕ್ಕೆ ಬಂದ.

ನಂದಗೋಕುಲದಲ್ಲಿಯೂ ಕಾಲಿಯನಿಂದ ನೆಲ, ನೀರು, ಗಾಳಿ ಎಲ್ಲವೂ ವಿಷಪೂರಿತವಾದಾಗ ಜನರ ಬದುಕಿಗೆ ಕಾರಣವಾದ ಪರಿಸರ ರಕ್ಷಣೆಗಾಗಿ ಕಾಲಿಯನನ್ನು ಮರ್ದಿಸಿದ.

ಶ್ರೀಕೃಷ್ಣನಿಂದ ಎರಡು ವಿಧದ ಪರಿಸರ ರಕ್ಷಣೆಯ ಸ್ಫೂರ್ತಿಯನ್ನು ನಾವು ಪಡೆಯಬೇಕು. ಹೊರಗಿನ ಪರಿಸರ ಮತ್ತು ಒಳಗಿನ ಪರಿಸರಗಳನ್ನು ಸ್ವಚ್ಛವಾಗಿರಿಸಬೇಕು.

ಇಂದು ನಮ್ಮ ದೇಶದಲ್ಲಿ ಪರಿಸರವೆಲ್ಲವೂ ಕಲುಷಿತವಾಗಿದೆ. ಅಂದಿನ ಯುಗದ ಕಾಲೀಯನಂತೆ, ಹೊಸ ಹೊಸ ಉದ್ಯಮದ ಕಾರ್ಖಾನೆಗಳೆಂಬ ಕಾಲೀಯನಾಗರಿಂದ ನಮ್ಮ ನಿರ್ಮಲ ಪರಿಸರವೆಲ್ಲವೂ ನಾಶವಾಗುತ್ತಿದೆ. ಕಾರ್ಖಾನೆಗಳ ಕಷ್ಮಲಗಳೆಲ್ಲವೂ ನದಿಗೆ ಸೇರಿ ಜೀವನದಿಗಳೆಲ್ಲವೂ ನಿರ್ಜೀವಗಳಾಗಿವೆ. ಭದ್ರಾನದಿ ಪೂರ್ಣ ಹಾಳಾಗಿದೆ. ವಾಹನಗಳ ಸಂಚಾರದಿಂದ ಉಸಿರಾಡುವ ಗಾಳಿ ವಿಷವಾಗಿದೆ. ನದಿ, ನೀರು, ಗಾಳಿ ಎಲ್ಲದರ ಸ್ವಚ್ಛತೆಯನ್ನು ನಾವು ಕಾಪಾಡಬೇಕು. ಆರೋಗ್ಯಕರವೂ ಹಿತಕರವಾಗಿಯೂ ಇರುವಂತೆ ಎಚ್ಚರವಹಿಸಬೇಕು.

ಇದರಂತೆ ನಮ್ಮ ಅಂತರಂಗವೂ ಮಲಿನವಾಗಿದೆ. ಯಮುನೆಯ ನೀರು ವಿಷದಿಂದ ದೂಷಿತವಾದಂತೆ ನಿರ್ಮಲಹೃದಯವೂ ರಾಗದ್ವೇಷಾದಿ ವಿಷದಿಂದ ದೂಷಿತವಾಗಿದೆ. ಇವುಗಳನ್ನು ತೊಳೆಯಬೇಕು. ನಿರ್ಮಲಹೃದಯಿಗಳಾಗಲು ಪ್ರಯತ್ನಿಸಬೇಕು. ಇದಕ್ಕೆ ಅವನ ಕರುಣೆ ಬೇಕು.

ಯಮುನೆಯ ಮಡುವಿನೊಳು ಕೃಷ್ಣ ಧುಮುಕಿದ. ಕಾಲಿಯನನ್ನು ಮರ್ದಿಸಿದ. ಮಡುವನ್ನು ನಿರ್ಮಲಗೊಳಿಸಿದ ಅಂತೆಯೇ ನಮ್ಮ ಹೃದಯಮಡುವಿನೊಳಗೆ ಪೊಡವಿಗೊಡೆಯನಾದ ಉಡುಪಿಯ ಶ್ರೀಕೃಷ್ಣ ಧುಮುಕಬೇಕು. ಹೃದಯದಲ್ಲಿ ಕುಣಿಯಬೇಕು. ಹೃದಯಮಡುವಿನಲ್ಲಡಗಿರುವ ದುರಾಶೆ ಎಂಬ ಕಾಲಿಯನ ಮೇಲೆ ನರ್ತಿಸಬೇಕು.

ಸಾವಿರ ಹೆಡೆಯ ಕಾಳಿಂಗ ಹೆಡೆ ಎತ್ತಿ ನಿಂತಿದ್ದ. ಈ ದುರಾಶೆ ಎಂಬ ಕಾಲಿಯನಿಗೂ ಅನೇಕ ಹೆಡೆಗಳಿವೆ. ಬೇಕು–ಬೇಡಗಳೆಂಬ ದುರಾಶೆಗಳು ಹೃದಯ ಮಡುವಿನಲ್ಲಿ ತಲೆ ಎತ್ತಿ ನಿಂತಿದೆ. ಇವುಗಳ ಮೇಲೆ ಶ್ರೀಕೃಷ್ಣ ಕುಣಿಯಬೇಕು. ನಮ್ಮನ್ನು ಎತ್ತಿ ಹಿಡಿಯಬೇಕು. ಕಾಲಿಯಮರ್ದನ ಶ್ರೀಕೃಷ್ಣನಲ್ಲಿ ಈ ರೀತಿಯ ಪ್ರಾರ್ಥನೆಯನ್ನು ಸಲ್ಲಿಸಬೇಕು.

ಶ್ರೀಕೃಷ್ಣನಿಗೆ ಈ ಎರಡು ಪರಿಸರದ ನೈರ್ಮಲ್ಯ ಇಷ್ಟವಾಗಿದೆ ಎಂದರಿತು ಪರಿಸರ, ನಮ್ಮ ಮನೆ, ಮನಸ್ಸುಗಳನ್ನು ಹರಿಗೆ ಸಂತೋಷವಾಗುವ ರೀತಿಯಲ್ಲಿ ನಿರ್ಮಲವಾಗಿಟ್ಟುಕೊಳ್ಳಬೇಕು.

ಮುಂದೆ ಶ್ರೀಕೃಷ್ಣನಪರಮಾತ್ಮನು ಒಂದೊಮ್ಮೆ ಗೋಪಾಲಕರೆಲ್ಲರೂ ಯಮುನೆಯ ತೀರದಲ್ಲಿ ರಾತ್ರಿ ತಂಗಿರಲು ಕಾಡ್ಗಿಚ್ಚು ವ್ಯಾಪಿಸಿತು. ಪ್ರಾಣವೇ ಹೋಗುವಂತಹ ಸ್ಥಿತಿಯಲ್ಲಿ ಶ್ರೀಕೃಷ್ಣನು ಕಾಡ್ಗಿಚ್ಚಿನಿಂದ ಸಕಲ ಗೋಪಾಲಕರನ್ನು ರಕ್ಷಿಸಿದ. 'ಮುಖಾದಿಂದ್ರಶ್ಚಾಗ್ನಿಶ್ಚ' ಎಂಬ ಶ್ರುತಿಯಲ್ಲಿ ಹೇಳಿದಂತೆ ಅಗ್ನಿಯ ಜನ್ಮಸ್ಥಾನ ಭಗವಂತನ ಮುಖವಾದುದರಿಂದ ಅಗ್ನಿಯನ್ನು ಅಲ್ಲಿಯೇ ಸೇರಿಸಿಕೊಳ್ಳುವುದು ಆಶ್ಚರ್ಯವೇನಲ್ಲ ಎನ್ನುತ್ತಾರೆ ರಾಜರು.

ಹೀಗೆ ಗೋಪಾಲಕರ ಸಮಗ್ರ ಜೀವನದ ನೇತಾರನಾದ ಭಗವಾನ್ ಶ್ರೀಕೃಷ್ಣನು ಮಧುರ ಅಧರದಿಂದ ಹೊರ ನುಸುಳುವ ಸಿಹಿ ನಗುವಿನಿಂದ ಬೃಂದಾವನವನ್ನು ಆನಂದವನವನ್ನಾಗಿ ಮಾಡಿದ್ದ. ತನ್ನವರ ಆನಂದಕ್ಕೆ ಅಡ್ಡಿಮಾಡುವ ಅಸುರರನ್ನು ಪುಡಿಗುಟ್ಟಿ ಒರೆಸಿಹಾಕುತ್ತಿದ್ದ.

ಕೃಷ್ಣನ ಆಕರ್ಷಕ ಗುಣರೂಪಗಳಿಂದ ಗೋಪಕನ್ಯೆಯರೆಲ್ಲರೂ ಮೋಹಿತ ರಾಗಿದ್ದರು. ಕೃಷ್ಣನೇ ಪತಿಯಾಗಬೇಕು. ಶ್ರೀಪತಿಯೇ ನಮಗೆ ಪರಮಗತಿ ಎಂದು ದುರ್ಗೆಯನ್ನು ಆರಾಧಿಸಲಾರಂಭಿಸಿದರು. ಯಮುನೆಯಲ್ಲಿ ಮಿಂದು ಆನಂದ ಕಂದನನ್ನು ವಂದಿಸುವ ಮಂದಗಮನೆಯರು ಒಂದು ದಿನ ಉಟ್ಟ ಬಟ್ಟೆಗಳನ್ನೆಲ್ಲ ತೆಗೆದಿಟ್ಟು ಯಮುನೆಗಿಳಿದರು. ವ್ರತದ ಫಲವಾಗಿ ಶ್ರೀಕೃಷ್ಣನು ಒಲಿದು ಬಂದ. ಗೋಪಿಯರ ವಸ್ತ್ರಗಳನ್ನೆಲ್ಲ ಅಪಹರಿಸಿದ. ಗೋಪೀವಸ್ತ್ರಾಪಹಾರಕನೆನಿಸಿದ. ಅವರ ಅಪರಾಧಗಳನ್ನೆಲ್ಲ ಮನ್ನಿಸಿದ. ತನ್ನ ಭಕ್ತರನ್ನೆಲ್ಲ ಸ್ವೀಕರಿಸಿದ.

## ಸ್ವಕರ್ತಗಳನ್ನು ಹರಿಗರ್ಪಿಸಿರಿ!!

ಗೋವಳನಾದ ಶ್ರೀಕೃಷ್ಣನು ಎಂದಿನಂತೆ ಒಂದು ದಿನ ಗೋಪಾಲಕರೊಟ್ಟಿಗೆ ದನಗಳನ್ನು ಮೇಯಿಸಲು ಅರಣ್ಯದ ಪರಿಸರಕ್ಕೆ ಸಾಗಿದ್ದಾನೆ. ಕಡುಕಿರಣನಾದ ತರಣಿಯು ನಡುನೆತ್ತಿಗೆ ಬರುತ್ತಿರಲು ಪರಿಭ್ರಮಣದಿಂದ ಪರಿಕ್ಲಾಂತರಾದ ಗೋಪಾಲ ಕರು ಹಸಿವೆಯಿಂದ ತರ್ಪಿತರಾದರು. ಹಸಿವೆಯನ್ನು ಪರಿಹರಿಸೆಂದು ಕೃಷ್ಣನ ಪಾದವನ್ನೇ ಆಶ್ರಯಿಸಿದರು. ಶ್ರೀಕೃಷ್ಣನು ಅವರಿಗೆ ಹೇಳಿದ –ಇಲ್ಲಿಯೇ ಸಮೀಪದಲ್ಲಿ ಬ್ರಾಹ್ಮಣರು ಸತ್ರಯಾಗ ಒಂದನ್ನು ಕೈಗೊಂಡಿದ್ದಾರೆ. ಅಲ್ಲಿಗೆ ತೆರಳಿರಿ! ನಮ್ಮ ಹೆಸರನ್ನು ಹೇಳಿ ಅನ್ನ ಬೇಡಿರಿ! ಎಂದ ಅದರಂತೆ ಗೋಪಾಲಕರೆಲ್ಲರೂ ತೆರಳಿದರು. ಋತ್ವಿಜರ ಬಳಿ "ನಾವು ಶ್ರೀಕೃಷ್ಣ ಕಡೆಯಿಂದ ಬಂದವರು. ಕೃಷ್ಣಬಲರಾಮರಿಗೆ ಹಸಿವಾಗಿದೆಯಂತೆ. ಅನ್ನ ಕೊಡಿರಿ! ಎಂದು ಬೇಡಿದರು–

ಗಾಶ್ಚಾರಯಂತಾವವಿದೂರ ಓದನಂ
ರಾಮಾಚ್ಯುತೌ ವೋ ಲಷತೋ ಬುಭುಕ್ಷಿತೌ ॥
ತಯೋರ್ದ್ವಿಜಾ ಓದನಮರ್ಥಿನೋರ್ಯದಿ
ಶ್ರದ್ಧಾ ಚ ವೋ ಯಚ್ಛತ ಧರ್ಮವಿತ್ತಮಾಃ ॥
— (೧೦-೨೧-೭)

"ಧರ್ಮವನ್ನು ತಿಳಿದಿರುವ ಜ್ಞಾನಿಗಳೇ! ಅನತಿದೂರದಲ್ಲಿಯೇ ಗೋವುಗಳನ್ನು ಮೇಯಿಸುತ್ತಿರುವ ಬಲರಾಮಕೃಷ್ಣರು ಹಸಿವಿನಿಂದ ಬಳಲಿದ್ದಾರೆ. ನಿಮ್ಮಿಂದ ಅನ್ನವನ್ನು ಬಯಸುತ್ತಿದ್ದಾರೆ. ಅವರಲ್ಲಿ ಭಕ್ತಿ ಶ್ರದ್ಧೆಗಳಿದ್ದರೆ ಅನ್ನಾರ್ಥಿಗಳಾದ ಅವರಿಗೆ ಅನ್ನವನ್ನು ನೀಡಿರಿ!" ಎಂದು ಪ್ರಾರ್ಥಿಸಿದಾಗ ಅಲ್ಲಿಯ ಋತ್ವಿಜರು ಇವರ ಮಾತು ಗಳು ಕೇಳಿಸಿದ್ದರೂ ಕೇಳಿಸದಂತೆಯೇ ಸುಮ್ಮನೆ ಕುಳಿತುಕೊಂಡರು. 'ಶೃಣ್ವಂತೋಽಪಿ ನ ಶುಶ್ರುವುಃ' ಆಯಿತು ಕೊಡುತ್ತೇವೆ ಎಂದಾಗಲೀ ಕೊಡೆವು ಎಂದಾಗಲೀ ಏನೂ ಹೇಳಲಿಲ್ಲ. ಪತಿಕ್ರಿಯಿಸದೇ ಇದ್ದಾಗ ಹಸಿದ ಗೋಪಾಲಕರು ಭಾವನೆಯ ಹಸಿವಿ ನಿಂದಲೂ ಕಂಗೆಟ್ಟು ರಾಮಕೃಷ್ಣರ ಬಳಿಗೆ ಆಗಮಿಸಿದರು. ನಿಸ್ತೇಜರಾಗಿ ಎಲ್ಲವನ್ನೂ ವಿವರಿಸಿದರು. ಶ್ರೀಕೃಷ್ಣನು ನಸುನಕ್ಕು ಉತ್ತರಿಸಿದ. 'ನೀವು ಬ್ರಾಹ್ಮಣರ ಬಳಿ ಏಕೆ ಪ್ರಾರ್ಥಿಸಿದಿರಿ? ಇನ್ನೊಮ್ಮೆ ತೆರಳಿರಿ! ಯಜ್ಞಶಾಲೆಯ ಹಿಂಬದಿಯಲ್ಲಿ ಯಜ್ಞಪತ್ನಿ ಯರಿದ್ದಾರೆ. ಆ ಮಾತೆಯರ ಬಳಿ ಶ್ರೀಕೃಷ್ಣನಿಗೆ ಹಸಿವಾಗಿದೆ ಎಂದು ತಿಳಿಸಿರಿ. ಕೂಡಲೇ ನನ್ನ ಮೇಲಿನ ಭಕ್ತಿಯಿಂದ ಬೇಕಾದಷ್ಟು ನೀಡುತ್ತಾರೆ ಎಂದು ಹೇಳಿದ. 'ಯಾರ ಅಂತರಂಗ ಹೇಗಿದೆ' ಎಂದು ಶ್ರೀಕೃಷ್ಣನಿಗೆ ಚೆನ್ನಾಗಿ ಗೊತ್ತು. ಕೃಷ್ಣನ ಮಾತಿನಂಥೆ ಗೋಪಾಲಕರೆಲ್ಲರೂ ಯಾಜ್ಞಿಕರ ಪತ್ನಿಯರಲ್ಲಿ ಕೇಳಿದ್ದೇ ತಡ ಸಂಭ್ರಮ ಸಡಗರಗಳಿಂದ ಕುಣಿದಾಡುತ್ತಾ, ಬೇಕಾದಷ್ಟು ಭಕ್ಷ್ಯ, ಭೋಜ್ಯ, ಚೂಷ್ಯ, ಲೇಹ್ಯ ಗಳೆಂಬ ನಾಲ್ಕು ವಿಧದ ಪದಾರ್ಥಗಳನ್ನೆಲ್ಲ ತಾವೇ ಧರಿಸಿಕೊಂಡು ನದಿಗಳು ಸಮುದ್ರವನ್ನು ಸಮೀಪಿಸುವಂತೆ ಶ್ರೀಕೃಷ್ಣನನ್ನು ಸಮೀಪಿಸಿದರು. ಸಕಲ ಪದಾರ್ಥ ಗಳನ್ನು ಹರಿಯ ಅಡಿದಾವರೆಗಳಲ್ಲಿ ಸಮರ್ಪಿಸಿ ಮುಗಿಬಿದ್ದರು. ಅವರು

ಹೊರಡುವಾಗ ಕೆಲವು ಋತ್ವಿಜರು ತಡೆದರು. ಕೃಷ್ಣನನ್ನು ನೋಡುವ ಭಾಗ್ಯವು ದೊರೆಯುತ್ತಿರಲು ಹೋಗಬೇಡಿರೆಂಬ ಋತ್ವಿಜರ ಮಾತುಗಳು ಕಿವಿಗಳಿಗೆ ಬೇಡವಾಯಿತು. ಅವರ ಮಾತುಗಳಿಗೆ ಬೆಲೆಗೊಡದೆ ಸರ್ವಯಜ್ಞಭೋಕ್ತೃವಾದ ಶ್ರೀಕೃಷ್ಣನ ಬಳಿ ಬಂದರು. ಕೃಷ್ಣನೇ ಕೇಳಿ ಬಂದಿರುವಾಗ ಇದಕ್ಕಿಂತೇನು ದೊಡ್ಡದಿದೆ? ಎಂಬ ಭಾವನೆಯೇ ಇದಕ್ಕೆ ಪೂರಕವಾಯಿತು. ಇದು ಭಾಗವತದ ಕಥೆ.

ಈ ಕಥೆಯ ಸಂದೇಶವನ್ನು ನಮ್ಮ ಮಹಿಳೆಯರು ಪುರುಷರು ಎಲ್ಲರೂ ಅರ್ಥಮಾಡಿಕೊಳ್ಳಬೇಕು. ಇಷ್ಟೆಲ್ಲಾ ಪದಾರ್ಥಗಳನ್ನು ಸ್ತ್ರೀಯರು ಅರ್ಪಣಮಾಡಿ ಬಂದ ಬಳಿಕ ಋತ್ವಿಜರಿಗೆ ತಿಳಿಯಿತು. "ಅಯ್ಯೋ! ಶ್ರೀಕೃಷ್ಣನೇ ನಮಗೆ ಉತ್ತಮ ಸೇವೆಯ ಅವಕಾಶವನ್ನು ದೊರಕಿಸಿಕೊಟ್ಟ. ಆದರೆ ನಾವು ಪ್ರತಿಸ್ಪಂದಿಸಲೇ ಇಲ್ಲ. ನಾವೆಂಥಹ ಪಾಪಿಗಳು. ನಮ್ಮ ಆಚರಣೆ, ಪಾಂಡಿತ್ಯ, ಕುಲ, ನಾವಾಚರಿಸದ ವ್ರತ ಎಲ್ಲದಕ್ಕೂ ಧಿಕ್ಕಾರ. ನಾವು ಬಲ್ಲವರೆಂದು ಹಮ್ಮಿನಿಂದ ಬೀಗಿದೆವಲ್ಲದೆ ಕೃಷ್ಣನ ಸಂದೇಶವನ್ನು ಅರ್ಥಮಾಡಿಕೊಳ್ಳಲಿಲ್ಲ" ಎಂದು ಪಶ್ಚಾತ್ತಾಪದಿಂದ ನೊಂದು ಕೊಂಡರು. ಇಂಥಹ ಸನ್ನಿವೇಶ ಅಂದು ಮಾತ್ರ ನಡೆದಿದ್ದಲ್ಲ. ಈಗಲೂ ನಮ್ಮ ತಾಯಂದಿರಿಗೆ ಇದೇ ಮಾತನ್ನು ಹೇಳುತ್ತಿದ್ದೇನೆ. ಅಂದು ನಮ್ಮ ಕೃಷ್ಣನಿಗೆ ಹಸಿವಾದಂತೆ ಇಂದೂ ಹಸಿವಾಗಿದೆ. ಶ್ರೀಕೃಷ್ಣನಿಗೆ ಬೇಕಾದ ಆಹಾರವೆಂದರೆ ಕೇವಲ ಭಕ್ಷ್ಯ, ಭೋಜ್ಯ ಇವುಗಳೇ ಅಲ್ಲ. ನಾವಾಚರಿಸುವ ಸದ್ಧರ್ಮವೆಂಬ ಅನ್ನವನ್ನು ಭಗವಂತ ಬಯಸುತ್ತಾನೆ. ಸತ್ಕರ್ಮಗಳ ಆಚರಣೆಯೇ ನಾವು ಭಗವಂತನಿಗೆ ಸಲ್ಲಿಸುವ ಆಹಾರವಾಗಿದೆ. 'ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ' –ಯಾವುದೇ ಫಲಾಪೇಕ್ಷೆ ಇಲ್ಲದೆ ಹರಿಪ್ರೀತ್ಯರ್ಥವಾಗಿ ಸತ್ಕರ್ಮಗಳನ್ನು ನಡೆಸಿ ಧರ್ಮಜ್ಯೋತಿಯನ್ನು ಬೆಳಗಬೇಕು. ಇದರ ಜವಾಬ್ದಾರಿ ಪ್ರಧಾನವಾಗಿ ಮಹಿಳೆಯರದಾಗಿದೆ. ಶ್ರೀಕೃಷ್ಣನು ಮಹಿಳೆಯರರ್ಪಿಸಿದ ಪದಾರ್ಥಗಳನ್ನು ಗುರುತಿಸಿದಂತೆ ಭಗವಂತನು ಗುರುತಿಸುವ ತ್ಯಾಗದಿಂದ ಅವನನ್ನು ಸಂತೋಷಗೊಳಿಸಬೇಕು ಎಂಬ ಉತ್ತಮ ಸಂದೇಶವನ್ನು ಈ ಕಥೆಯಿಂದ ತಿಳಿಯಬಹುದಾಗಿದೆ.

## ಗೋವರ್ಧನೋದ್ಧಾರ

ಇನ್ನೊಮ್ಮೆ ಎಲ್ಲ ಗೋಪಾಲಕರೂ ಸೇರಿ, ಉತ್ತಮವಾದ ಉತ್ಸವವನ್ನು ಕೈಗೊಂಡರು. ಕೃಷ್ಣನು ಉದ್ದೇಶವನ್ನರಿತಿದ್ದರೂ ಅಜ್ಞಜನರಂತೆ 'ಉತ್ಸವ ಏತಕ್ಕಾಗಿ?' ಎಂದು ಪ್ರಶ್ನಿಸಿದನು. ಇಂದ್ರನನ್ನು ಪ್ರತಿವರ್ಷವು ಪೂಜಿಸುವಂತೆ ಈ ವರುಷವೂ ಮಳೆ–ಬೆಳೆಗಾಗಿ ಪೂಜಿಸುತ್ತಿದ್ದೇವೆ ಎಂದರು. ಅದಕ್ಕೆ ಶ್ರೀಕೃಷ್ಣನು ಮಾರ್ಮಿಕವಾಗಿ ಉತ್ತರಿಸಿದ–

"ಗೋಪಾಲಕರೇ! ನೀವು ಇಂದು ಗೋವುಗಳು, ಬ್ರಾಹ್ಮಣರು, ಅಗ್ನಿ ಇವುಗಳನ್ನು ಪೂಜಿಸಿರಿ! ನಾವು ಪ್ರತಿನಿತ್ಯವೂ ನಮ್ಮ ಸಮೀಪದಲ್ಲಿಯೇ ಇರುವ ಪ್ರಕೃತಿ, ಗೋವುಗಳು, ಬೆಟ್ಟ, ಮರಗಳಿಂದ ಪ್ರಯೋಜನವನ್ನು ಪಡೆಯುತ್ತಿದ್ದೇವೆ.

ಇವುಗಳ ಒಳಗೆ ಭಗವಂತನು ಅಂತರ್ಯಾಮಿಯಾಗಿದ್ದಾನೆಂದು ಭಾವಿಸುವ ಪ್ರಕೃತಿ ಪೂಜೆಯೂ ನಮ್ಮ ಬದುಕಿಗೆ ಕಾರಣವಾಗಿದೆ. ಆದ್ದರಿಂದ ಇಂಥಹ ಗೋವರ್ಧನ ಗಿರಿಯನ್ನು ಕುರಿತು ನಾವೆಲ್ಲರೂ ಸೇರಿ ಆರಾಧಿಸಬೇಕು. ನಮ್ಮ ಕಣ್ಣೆದುರಿಗೆ ಕಾಣುವ ಪ್ರಕತಿರೂಪದಲ್ಲಿರುವ ಭಗವಂತನ ಪೂಜೆಯನ್ನು ಮಾಡೋಣ!'' ಎಂದು ಎಲ್ಲರೂ ಅವಶ್ಯವಾಗಿ ಅನುಷ್ಠಾನ ಮಾಡಬೇಕಾದ ಸಂದೇಶವನ್ನು ಶ್ರೀಕೃಷ್ಣ ನೀಡಿದ್ದಾನೆ. ಶ್ರೀಕೃಷ್ಣನು ಪರಿಸರಪ್ರೇಮಿಯಾಗಿ ಜನರೆಲ್ಲರಿಗೂ ಉಪಕರಿಸಿದ್ದಾನೆ.

ಭುವಿಯಲ್ಲಿನ ಜನರೆಲ್ಲ ಗೋವರ್ಧನಗಿರಿಯ ಆರಾಧನೆಯಲ್ಲಿ ತೊಡಗಿದರು. ಅತ್ತ ದೇವೇಂದ್ರನು ಸಿಟ್ಟಾದನು. ಬೃಂದಾವನವನ್ನೆಲ್ಲ ನಿರಂತರ ಮಳೆಸುರಿಸಿ ಮುಳುಗಿಸಿಬಿಡುತ್ತೇನೆ ಎಂದು ಅಖಂಡವಾದ ಮಳೆ ಸುರಿಸಿದ. ಆದರೆ ಶ್ರೀಕೃಷ್ಣನು ಅದೇ ಗೋವರ್ಧನ ಗಿರಿಯನ್ನು ಜನರ ರಕ್ಷಣೆಗೆಂದು ಎತ್ತಿಹಿಡಿದ. ಭಕ್ತನಾದ ದೇವೇಂದ್ರನು ಉನ್ಮತ್ತನಾಗಿ ವರ್ತಿಸಿದಾಗ ಅವನ ಮದವನ್ನು ದಮನಮಾಡಲು, ಗೋಪಾಲಕರೆಲ್ಲರೂ ಇಂದ್ರನ ಪ್ರಳಯಕಾಲದ ವೃಷ್ಟಿಯಿಂದ ಕಂಗೆಡಲು ಗಿರಿಯನುದ್ಧರಿಸುತ್ತಾ ಶ್ರೀಕೃಷ್ಣನು ಹೇಳುತ್ತಾನೆ–

**ತಸ್ಮಾನ್ಮಚ್ಛರಣಂ ಗೋಷ್ಠಂ ಮನ್ನಾಥಂ ಮತ್ಪರಿಗ್ರಹಮ್ ।**
**ಗೋಪಾಯೇ ಸ್ವಾತ್ಮಯೋಗೇನ ಸೋಽಯಂ ಮೇ ವ್ರತ ಆಹಿತಃ ॥**

— (೧೦-೨೩-೧೮)

"ನನ್ನ ಪಾದಕಮಲಗಳನ್ನೇ ಆಶ್ರಯಿಸಿರುವ, ನನ್ನನ್ನೇ ಸ್ವಾಮಿ ಎಂದರಿತಿರುವ ನಮ್ಮ ಮನೆಯವರಾದ ಗೋಪಾಲಕರನ್ನು ನನ್ನ ಅದ್ಭುತವಾದ ಯೋಗ ಸಾಮರ್ಥ್ಯದಿಂದ ಕಾಪಾಡುತ್ತೇನೆ. ಇದು ನಾನು ಮನಬಿಚ್ಚಿ ಧರಿಸಿದ ವ್ರತ'' ಎಂದು ಗಿರಿಯನ್ನು ಒಂದು ಸಣ್ಣ ಕೊಡೆಯನ್ನು ಹಿಡಿಯುವಂತೆ ಅನಾಯಾಸವಾಗಿ ಎತ್ತಿ ಹಿಡಿದ. ಎಲ್ಲರನ್ನೂ ಇಂದ್ರನ ಉಪದ್ರವದಿಂದ ರಕ್ಷಿಸಿದ.

ಶ್ರೀಕೃಷ್ಣನು ಗೋವರ್ಧನ ಪರ್ವತವನ್ನು ಮಾತ್ರ ಎತ್ತಿದ್ದಲ್ಲ. ಸಮಗ್ರ ಗೋಪಾಲಕ ಸಮಾಜದ ಸ್ವಾಭಿಮಾನವನ್ನೇ ಎತ್ತಿಹಿಡಿದ. ನೊಂದ ಮನಗಳನ್ನೆಲ್ಲ ತುಂಬು ಕರುಣೆಯಿಂದ ಸಂತೈಸಿದ. ಏಳು ದಿನಗಳ ಕಾಲ ಕೇವಲ ತನ್ನ ಸಿಹಿನೋಟ ದಿಂದಲೇ ಅಮೃತಾನಂದವನ್ನು ನೀಡಿದ. ಕೊನೆಗೊಮ್ಮೆ ಗೋಪಾಲಕರನ್ನು ಕರೆದು ಮಳೆ ನಿಂತಿದೆಯೆ ನೋಡಿ ಬನ್ನಿರೆಂದು ಕಳುಹಿಸಿದ. ಗೋಪಾಲಕರು ನೋಡಿ ಬಂದು ಕೃಷ್ಣನ ಬಳಿ ಮಾತನಾಡಿದ ಮಾತನ್ನು ವಾದಿರಾಜರು ಸುಂದರವಾಗಿ ನಿರೂಪಿಸಿದ್ದಾರೆ.

ಕೃಷ್ಣ: ಮತ್ತೂ ಮಳೆ ಬರುತ್ತಿರುವಂತೆ ಕಾಣಿಸುತ್ತಿದೆಯಲ್ಲ?!

ಗೋಪಾಲಕ: ಸ್ವಾಮಿ ಅದು ಮಳೆಯಲ್ಲ. ನಮ್ಮ ಆನಂದದಿಂದ ಸುರಿಸುತ್ತಿರುವ ಕಣ್ಣೀರಿನ ಧಾರೆ.

ಕೃಷ್ಣ: ಮೇಘನಿನಾದವು ಕೇಳಿಬರುತ್ತಿದೆಯಲ್ಲ!!

ಗೋಪಾಲಕ: ಸ್ವಾಮಿ! ಅದು ಸಿದ್ಧೇಶ್ವರರೆಲ್ಲರೂ ನಿನ್ನ ಪರಾಕ್ರಮವನ್ನು ಕಂಡು ಸ್ತುತಿಸುವ ಇನಿದನಿ.

ಕೃಷ್ಣ: ಮಿಂಚು ಮಿಂಚುತ್ತಿದೆಯಲ್ಲ!

ಗೋಪಾಲಕ: ಸ್ವಾಮಿ, ಅದು ಆನಂದದಿಂದ ನರ್ತಿಸುತ್ತಿರುವ ವಿದ್ಯುಲ್ಲತಾಂಗಿನಿಯರ ಆಭರಣಗಳ ಝಳಪು.

ಕೃಷ್ಣ: ಗಾಳಿ ಬೀಸುವ ಶಬ್ದ ಕೇಳಿಬರುತ್ತಿದೆ?!

ಗೋಪಾಲಕ: ಸ್ವಾಮಿ! ದೇವತೆಗಳು ನಿನಗಾಗಿ ಸುರಿಸಿದ ಪುಷ್ಪಗಳನ್ನು ದುಂಬಿಗಳ ಸಾಲು ಮುಕುರುತ್ತಿವೆ. ಅವುಗಳ ಗಮನಾಗಮನದ ಸಂಭ್ರಮದಲ್ಲಿ ಝೇಂಕರಿಸುವ ರೆಕ್ಕೆಗಳಿಂದ ಮಂದಾನಿಲವು ಹೊರಹೊಮ್ಮುತ್ತಿದೆಯಷ್ಟೆ.

ಕೃಷ್ಣ: ಆಕಾಶವು ಕಪ್ಪಾಗಿರುವುದೋ?

ಗೋಪಾಲಕ: ದೇವ! ಆಕಾಶದ ನೀಲ ಮೇಘಗಳೆಲ್ಲವೂ ಇಂದ್ರಮುಖವನ್ನು ಹೊಕ್ಕಿವೆ. (ಇಂದ್ರನ ಮುಖ ಕಪ್ಪಿಟ್ಟಿದೆ).

ಕೃಷ್ಣ: ಮೇಘಗಳು ಇವೆಯೋ.

ಗೋಪಾಲಕ: ಮೇಘಗಳು ಇಲ್ಲ. ಆದರೆ ದೇವತೆಗಳ ವಿಮಾನಗಳ ಸಾಲು ಮೇಘಭ್ರಾಂತಿಯನ್ನು ಹುಟ್ಟಿಸುತ್ತಿವೆ.

ಕೃಷ್ಣ: ಕತ್ತಲಿದೆಯೋ?

ಗೋಪಾಲಕ: ಹೊರಗೆ ಕತ್ತಲಿಲ್ಲ. ಹೊರಗಿನ ಕತ್ತಲೆಲ್ಲವೂ ನಿನ್ನನ್ನು ಮಾನವನೆಂದು ಸಾರುವ ಅಜ್ಞಾನಿಗಳ ಮನಸ್ಸಿನಲ್ಲಡಗಿದೆ.

ಕೃಷ್ಣ: ಛಳಿ ಇದೆಯೇ?

ಗೋಪಾಲಕ: ಮದೋನ್ಮತ್ತನಾದ ದೇವೇಂದ್ರನಲ್ಲಿ ಸೇರಿಕೊಂಡಿದೆ. (ಪ್ರಕೃತಿಯಲ್ಲಿ ಛಳಿ ಇಲ್ಲ. ಇಂದ್ರ ನಿನಗೆ ಹೆದರಿ ನಡುಗುತ್ತಿದ್ದಾನೆ ಎಂದು ಭಾವ.)

ಹೀಗೆ ಸಕಲ ಪ್ರಜೆಗಳಿಗೂ ನಿರಂತರ ಆನಂದವನ್ನು ದೊರಕಿಸಿಕೊಟ್ಟ. ಇದಕ್ಕೆ ಅಡ್ಡಿಯಾದವರನ್ನು ತಗ್ಗಿಸಿದ. ಪ್ರಕೃತಿಯಲ್ಲಿ ಭಗವಂತನನ್ನು ಕಂಡು ಆರಾಧಿಸಬೇಕೆಂದು ಲೋಕಕ್ಕೆ ತಿಳಿಹೇಳಿದ. ಗೋವುಗಳು ಭಗವಂತನ ಭಕ್ತರು. ಸುಂದರವಾದ ಪ್ರಕೃತಿ ಇವುಗಳಲ್ಲಿ ಭಗವಂತನನ್ನು ಕಾಣಬೇಕೆಂದು ಸಾರಿ ಹೇಳಿದ. ಇಂದ್ರನು ನಿಗರ್ವಿಯಾಗಿ ಹರಿಯ ಮಹಿಮೆಯನ್ನರಿತು ಪ್ರಾಕೃತಿಕ ಪೂಜೆಯನ್ನು ಸಲ್ಲಿಸಿದ.

## ಸರ್ವರಿಗೂ ಗತಿಯಾದವ ಶ್ರೀಪತಿ

ಮುಂದೆ ಶರದೃತುವಿನ ನಿರ್ಮಲವಾದ ಬೆಳದಿಂಗಳಿನಲ್ಲಿ ವೇಣುಗಾನ ವಿಶಾರದ ನಾದ ಶ್ರೀಕೃಷ್ಣನ ಕೊಳಲಿನ ನಾದಕ್ಕೆ ಸಕಲ ಗೋಪಿಕಾಸ್ತ್ರೀಯರು ಮೋಹಿತರಾಗಿ ಬಂದಿದ್ದಾರೆ ನೂರಾರು ಕಾರ್ಯಗಳಲ್ಲಿ ವ್ಯಾಪೃತರಾದ ಗೋಪಿಯರು ಆ ಕಾರ್ಯಗಳನ್ನೆಲ್ಲ ಮಧ್ಯದಲ್ಲಿಯೇ ಕೈಬಿಟ್ಟು ಓಡೋಡಿ ಬಂದಿದ್ದಾರೆ. ಮನೆ, ಮಕ್ಕಳು, ಒಡೆಯನೆಂಬ ಅಭಿಮಾನಗಳನ್ನೆಲ್ಲ ತೊರೆದು ಹೃದಯದಲ್ಲಿ ತುಂಬಿದ ಸಮಗ್ರ ಪ್ರೀತಿಯನ್ನು ಶ್ರೀಕೃಷ್ಣನ ಮೇಲೆ ಹರಿಸಿದ್ದಾರೆ. ಶ್ರೀಕೃಷ್ಣನಾದರೂ ಮನೆಯನ್ನು ಬಿಟ್ಟು ಬಂದಿರುವಿರಿ! ಮರಳಿ ತೆರಳಿರಿ ಮನೆಯಲ್ಲಿ ತಂದೆ ತಾಯಿ ಗಂಡ ಮಕ್ಕಳು ಬಾಂಧವರೆಲ್ಲರೂ ಇರುವಾಗ ಎಲ್ಲರನ್ನೂ ಬಿಟ್ಟು ಮಧ್ಯರಾತ್ರಿಯಲ್ಲಿ ಬರುವುದು ಉಚಿತವಲ್ಲ. ಅವರ ಸೇವೆಯನ್ನು ಮಾಡಿರಿ! ಎಂದು ಹೇಳಿದಾಗ ಗೋಪಾಕಾ ಸ್ತ್ರೀಯರು ಪ್ರಾರ್ಥಿಸುತ್ತಾರೆ–

ಯತ್ಪತ್ಯಪತ್ಯಸುಹೃದಾಮನುವೃತ್ತಿರಂಗ!
ಸ್ತ್ರೀಣಾಂ ಸ್ವಧರ್ಮ ಇತಿ ಧರ್ಮವಿದಾ ತ್ವಯೋಕ್ತಮ್ ।
ಅಸ್ತ್ವೇವ ದೇವಮುಪದೇಶಪದೇ ತ್ವಯೀಶೇ
ಪ್ರೇಷ್ಠೋ ಭವಾಂಸ್ತನುಭೃತಾಂ ಕಿಲ ಬಂಧುರಾತ್ಮಾ ॥
— (೧೦–೨೯–೩೨)

ಒಡೆಯನೇ! "ಪತಿಯನ್ನು, ಮಕ್ಕಳನ್ನು, ಮಿತ್ರರನ್ನು ಅನುಸರಿಸಿಕೊಂಡಿರುವುದೇ ಸ್ತ್ರೀಯರಿಗೆ ಸ್ವಧರ್ಮವೆನಿಸುತ್ತದೆ" ಎಂದು ಧರ್ಮಜ್ಞನಾದ ನೀನು ಹೇಳಿರುವಿ ಖಂಡಿತವಾಗಿ ನಿನ್ನ ಮಾತನ್ನು ಮಾನ್ಯಮಾಡುವೆವು. ಆದರೆ ನಮ್ಮೆಲ್ಲರಿಗೂ ಮುಖ್ಯವಾಗಿ ನೀನೇ ಪತಿ, ಪುತ್ರ, ಮಿತ್ರ ಎಲ್ಲವೂ ಆಗಿರುವಿ. ಅಷ್ಟೇ ಏನು! ಸಮಸ್ತ ಪ್ರಪಂಚದ ಭೂತಕೋಟಿಗೆಲ್ಲ ಅತ್ಯಂತ ಹಿತವನ್ನು ನೀಡುವ ಬಂಧು, ಅಂತರಾತ್ಮ ಎಲ್ಲವೂ ಆಗಿರುವಿ! ಹೀಗಿರಲು ಒಂದು ಜನ್ಮಕ್ಕೆ ಸೀಮಿತರಾದ ಪತಿ ಪುತ್ರರ ಬಳಿ ತೆರಳಿ ನಮಗೇನಾಗಬೇಕಾಗಿದೆ? ನಮಗೆಷ್ಟು ಜನ ತಂದೆ. ಎಷ್ಟು ಜನ ತಾಯಂದಿರು. ಎಷ್ಟು ಜನ ಮಕ್ಕಳು. ನೂರಾರು ತಂದೆತಾಯಂದಿರ ಬಂಧುಬಾಂಧವರ ಹಿಂದೆ ಸಾಗಿ ಸಾಗಿ ಸಾಕಾಗಿದೆ. ಈ ಜನ್ಮ ಮುಗಿದರೆ ಪುನಃ ಬೇರೆ ತಂದೆತಾಯಂದಿರು. ಆದರೆ ನಿತ್ಯವೂ ಕ್ಷಣವೂ ಜೀವರನ್ನು ಬಿಟ್ಟಗಲದ ನೀನು ನಿಜವಾದ ತಂದೆಯಲ್ಲವೇ? ನಮ್ಮ ಜೀವನದ ಸರ್ವಸ್ವ ನೀನು. ನಿನ್ನನ್ನು ನಾವೆಂದೂ ಬಿಡೆವು ಎಂದರು.

ಬದಲಾಗುವ ಬಾಂಧವ್ಯ ನಮಗೆ ಬೇಡವೇ ಬೇಡ. ನಿತ್ಯವಾದ ನಿನ್ನ ಬಾಂಧವ್ಯ ಕೊಡದಿರಬೇಡ. ತಂದೆಯಾದವ ತಾಯಿಯಾಗಲಾರ. ಮಗನು ತಂದೆಯಾಗಲಾರ. ಒಬ್ಬೊಬ್ಬರು ಒಂದೊಂದು ಪಾತ್ರವನ್ನು ವಹಿಸಿರುವರು. ಆದರೆ ಹರಿಯು ಸಕಲವೂ ಆಗಿರುತ್ತಾನೆ. ಭಕ್ತರೆಲ್ಲರ ಉದ್ಗಾರವು ಹೀಗೆ ಇರುತ್ತದೆ–

ತ್ವಮೇವ ಮಾತಾ ಚ ಪಿತಾ ತ್ವಮೇವ ತ್ವಮೇವ ಬಂಧುಶ್ಚ ಸಖಾ ತ್ವಮೇವ ।
ತ್ವಮೇವ ವಿದ್ಯಾ ದ್ರವಿಣಂ ತ್ವಮೇವ ತ್ವಮೇವ ಸರ್ವಂ ಮಮ ದೇವದೇವ ॥

ತಂದೆ, ತಾಯಿ, ಬಂಧು, ಮಿತ್ರ, ವಿದ್ಯೆ, ಧನ ನಮ್ಮ ಸರ್ವಸ್ವವೂ ಭಗವಂತನಾಗಿದ್ದಾನೆ. ಹೀಗೆ ಗೋಪಿಯರೆಲ್ಲರೂ ನಿನ್ನ ಅಡಿಗಳನ್ನು ಬಿಡೆವು ಎಂದು ಹಟಹಿಡಿದಾಗ ಅವರ ಭಕ್ತಿಯುಕ್ತ ಮಾತುಗಳಿಗೆ ಭಗವಂತ ಸಿಕ್ಕಿಬೀಳುತ್ತಾನೆ. ಉತ್ತರಿಸಲಾಗಲಿಲ್ಲ. ಅವರ ಪ್ರಾರ್ಥನೆಗೆ ಓಗೊಟ್ಟು ಅವರನ್ನೆಲ್ಲ ತನ್ನವರನ್ನಾಗಿ ಸ್ವೀಕರಿಸಿದ. ಬಗೆಬಗೆಯಾಗಿ ಎಲ್ಲರೂ ಶ್ರೀಕೃಷ್ಣಸೇವೆಯನ್ನು ಮಾಡಿ ಆನಂದದ ಮಹಡಿಗಳನ್ನೇರಿದರು. ಎಡೆಬಿಡದೆ ಕೃಷ್ಣನೊಟ್ಟಿಗೆ ವಿಹರಿಸುತ್ತಿರುವ ಗೋಪಿಯರಿಗೆ ಒಮ್ಮಿಂದೊಮ್ಮೆಲೆ ಅಹಂಕಾರ ಬಂತು. ಕೃಷ್ಣನಿಗೆ ನಾವು ಬಹಳ ಬೇಕಾದವರು ಎಂದು ಬಿಂಕದಿಂದ ಬೀಗಲಾರಂಭಿಸಿದರು. ಅಹಂಕಾರ ಬಂದದ್ದೇ ತಡ ಶ್ರೀಕೃಷ್ಣನು ಒಮ್ಮಿಂದೊಮ್ಮೆಲೆ ಮಾಯವಾದ. ಕಣ್ಣಿಗೂ ಕಾಣಿಸಲಿಲ್ಲ. ಸುತ್ತಲೂ ಹುಡುಕಿದರು. ಆರ್ತನಾದ ಮಾಡಿದರು. ಅಡಿಗೊಂದು ಗಿಡಗಳನ್ನು ನಮಿಸುತ್ತಾ ಕೃಷ್ಣನನ್ನು ತೋರಿಸಿರೆಂದು ಕಾಡಿ ಬೇಡಿದರು. ಸಮಗ್ರ ಪ್ರಕೃತಿಯಲ್ಲಿ ಅರಸನಾದ ಶ್ರೀಕೃಷ್ಣನನ್ನರಸಿದರು. ಎಲ್ಲಿಯೂ ಸಿಗದಿರಲು ಭಕ್ತಿಯಿಂದ ಕಣ್ಣೀರು ಸುರಿಸುತ್ತಾ ಸಮೂಹ ಪ್ರಾರ್ಥನೆಯನ್ನು ಸಲ್ಲಿಸಿದರು–

**ಜಯತಿ ತೇಽಧಿಕಂ ಜನ್ಮನಾ ವ್ರಜಃ**
**ಶ್ರಯತ ಇಂದಿರಾ ಸಾಧು ತತ್ರ ಹಿ ।**
**ದಯಿತ ದೃಶ್ಯತಾಂ ತ್ವಾಂ ದಿದೃಕ್ಷತಾಂ**
**ತ್ವಯಿ ಗತಾಸವಸ್ತ್ವಾಂ ವಿಚಿನ್ವತೇ ॥** — (೧೦–೩೧–೧)

"ಪ್ರಿಯಕರನೇ ಕೃಷ್ಣ! ನಿನ್ನ ಅವತಾರದಿಂದ ಗೋಕುಲವೂ ಜಯಶೀಲವಾಗಿದೆ. ಇಂದಿರೆಯು ಅಲ್ಲಿ ಪಾದವಿರಿಸಿದ್ದಾಳೆ. ನಿನ್ನಲ್ಲಿ ಪ್ರಾಣವಿಟ್ಟು ನಿನ್ನನ್ನೇ ಹುಡುಕುತ್ತಿದ್ದೇವೆ. ತಡಮಾಡದೆ ನಮಗೆ ಗೋಚರಿಸೋ" ಎಂದು ಅನೇಕ ವಿಧವಾಗಿ ಮನಕರಗುವಂತಹ ಪ್ರಾರ್ಥನೆಯನ್ನು ಸಲ್ಲಿಸಿದರು. ಭಕ್ತಿಯ ತುತ್ತತುದಿಯನ್ನು ಮುಟ್ಟಿದಾಗ ಗೋಪಿಯರ ಅಹಂಕಾರದ ಕರಿಗಲ್ಲು ಪುಡಿಯಾಯಿತು. ಕೃಷ್ಣನು ನಮಗಾಗಿಯೇ ಹೊರತು ಕೃಷ್ಣನಿಗೆ ನಮ್ಮಿಂದ ಆಗಬೇಕಾದ್ದೇನೂ ಇಲ್ಲ ಎಂದು ಭಕ್ತಿಯ ಉನ್ಮಾದದಲ್ಲಿ ಹುಚ್ಚರಾಗಿ ಪ್ರಾರ್ಥಿಸಲು ಭಗವಾನ್ ಶ್ರೀಕೃಷ್ಣ ಪ್ರತ್ಯಕ್ಷನಾದ–

**ತಾಸಾಮಾವಿರಭೂಚ್ಛೌರಿಃ ಸ್ಮಯಮಾನಮುಖಾಂಬುಜಃ ।**
**ಪೀತಾಂಬರಧರಃ ಸ್ರಗ್ವೀ ಸಾಕ್ಷಾನ್ಮನ್ಮಥಮನ್ಮಥಃ ॥** — (೧೦–೩೨–೨)

ಅರಳುವ ಕಮಲದ ಮುಖಕಾಂತಿಯಿಂದ ಬೆಳಗುವ, ಪೀತಾಂಬರವನ್ನುಟ್ಟ ವನಮಾಲಾಧಾರಿಯಾದ ಮನ್ಮಥನನ್ನು ಮೋಹಿಸುವ ಸರ್ವಾಂಗಸುಂದರನಾದ ಶ್ರೀಕೃಷ್ಣನು ಆವಿರ್ಭವಿಸಿದನು.

ಕಾರ್ಯಾಂತರ ವ್ಯಾಪೃತಳಾದ ತಾಯಿಯು ಮಗುವು ಕರೆಯುತ್ತಿದ್ದರೂ ಕಿವಿಗೊಡಳು. ಅದೇ ಮಗುವು ತಾರಸ್ವರದಲ್ಲಿ ದುಃಖದಿಂದ ಚೀರಲು ಆರಂಭಿಸಿದಾಗ ಎಲ್ಲ ಕೆಲಸಗಳನ್ನು ಬಿಟ್ಟು ಓಡೋಡಿ ಬರುವಳು. ಅದರಂತೆ ಗೋಪಿಯರು ಕರೆಯಲಾರಂಭಿಸಿದಾಗ ಹರಿಯು ಬರಲಿಲ್ಲ. ಅವರೆಲ್ಲರೂ ತಾರಸ್ವರದಲ್ಲಿ ಅಳಲು

ಆರಂಭಿಸಿದಾಗ ಪ್ರತ್ಯಕ್ಷನಾದ. ನಗುನಗುತ್ತಾ ಆಗಮಿಸಿದ. ಅವರ ಮುಖದಲ್ಲಿಯು ನಗುವನ್ನು ಬಿತ್ತಿದ.

## ರಾಸವಿಲಾಸದಿಂದ ದೋಷವಿಲ್ಲ

ಈ ಸಂದರ್ಭದಲ್ಲಿ ವ್ಯಾಸರು 'ಸುಸ್ವರಂ ರುರುದುಃ' ಎಂದಿದ್ದಾರೆ. ಗೋಪಿಕಾ ಸ್ತ್ರೀಯರೆಲ್ಲರೂ 'ಬಹಳ ಇಂಪಾಗಿ ಅತ್ತರು' ಎಂದಿದ್ದಾರೆ. ಅಳುವಿಕೆಯು ಇಂಪಾಗುವುದು ಹೇಗೆ? ಎಂದರೆ ರೋದನದಲ್ಲಿ ಸ್ವಾರ್ಥದ ಉದ್ದೇಶವು ಸೇರಿದ್ದರೆ ಅದು ಕರ್ಕಶರೋದನವೆನಿಸುತ್ತದೆ. ಸ್ವಾರ್ಥವಿಲ್ಲದೆ ಭಗವಂತನಿಗಾಗಿ ಅತ್ತರೆ ಅದು ಸುಸ್ವರರೋದನವೆನಿಸುತ್ತದೆ. ನಾವೆಲ್ಲರೂ ಅಳುತ್ತೇವೆ. ನಮ್ಮ ಅಳುವಿನಲ್ಲಿ ಸ್ವಾರ್ಥ, ಅಧಿಕಾರದಾಹ ಮುಂತಾದ ನೂರೆಂಟು ದುರ್ಗುಣಗಳು ತುಂಬಿಕೊಂಡಿವೆ. ಗೋಪಿಯರ ಅಳುವಿನಲ್ಲಿ ಇದಾವುದೂ ಇಲ್ಲ. ಅಲ್ಲಿ ಭಗವಂತನ ಕಾಮನೆ ಒಂದೇ ಇದೆ. ಇದು ಗುಣವೇ ಆಗುತ್ತದೆ. ನಮಗೆ ಭಗವಂತನಿಗಾಗಿ ಅಳುವ ಯೋಗ್ಯತೆ ಬಂದಾಗ ಮಾತ್ರ ಭಗವಂತ ಒಲಿದು ಬರುತ್ತಾನೆ. ದರ್ಶನವನ್ನು ನೀಡುತ್ತಾನೆ –ಎಂಬ ಸಂದೇಶವನ್ನು ಇಲ್ಲಿ ಮನಗಾಣಬೇಕು.

ಹೀಗೆ ಗೋಪಿಕಾಸ್ತ್ರೀಯರ ಭಕುತಿಯ ಕರೆಗೆ ಕಿವಿಗೊಟ್ಟು ಆಗಮಿಸಿದ. ಅವರನ್ನು ಅನುಗ್ರಹಿಸಿದ ಎಂಬ ಕಥೆ ಭಾಗವತದಲ್ಲಿ ಉಲ್ಲಿಖಿತವಾಗಿದೆ. ಗೋಪಿಕಾಸ್ತ್ರೀಯರ ರಾಸವಿಲಾಸದ ಘಟನೆಯು ಭಕ್ತಸಮುದಾಯಕ್ಕೆ ಉತ್ತಮ ಸ್ಫೂರ್ತಿ ನೀಡುವಂತಿದೆ. ಏನು ಬಣ್ಣಿಸಿದರೂ ರಾಸಲೀಲೆ ಬಾಲಲೀಲೆಗಳನ್ನು ವರ್ಣಿಸಿ ಮುಗಿಸಲಾಗದು.

ಈ ಸಂದರ್ಭದಲ್ಲಿ ಪರೀಕ್ಷಿತನು ಸಕಲ ಜನರ ಹೃದಯದಲ್ಲಿ ಹುದುಗಿದ ಪ್ರಶ್ನೆಯೊಂದನ್ನು ಕೆದಕಿ ಶುಕಾಚಾರ್ಯರ ಬಳಿ ಕೇಳುತ್ತಾನೆ– ಜಗದೀಶ್ವರನಾದ ಭಗವಂತನು ಧರ್ಮವನ್ನು ನೆಲೆಗೊಳಿಸುವುದಕ್ಕಾಗಿ, ಅಧರ್ಮವನ್ನು ಅಡಗಿಸುವುದಕ್ಕಾಗಿ ಭುವಿಯಲ್ಲಿ ಅವತರಿಸಿದ್ದಾನೆ. ಲೋಕಕ್ಕೆಲ್ಲ ಧರ್ಮೋಪದೇಶಕನಾಗಿದ್ದಾನೆ. ಧರ್ಮವನ್ನು ಸರಿಯಾಗಿ ಸಂರಕ್ಷಿಸುವ ಹೊಣೆಗಾರಿಕೆಯನ್ನು ಹೊತ್ತಿರುವ ಶ್ರೀಕೃಷ್ಣನು ಹೊತ್ತಿಲ್ಲದ ಹೊತ್ತಿನಲ್ಲಿ ಧರ್ಮಕ್ಕೆ ಅತ್ಯಂತ ವಿರುದ್ಧವಾದ ಪರಸ್ತ್ರೀಯರ ಒಡನಾಟವನ್ನು ಕೈಗೊಂಡನೇಕೆ? ಇದು ಎಷ್ಟು ಉಚಿತ?

**ಆಪ್ತಕಾಮೋ ಯದುಪತಿಃ ಕೃತವಾನ್ ವೈ ಜುಗುಪ್ಸಿತಮ್ ।**
**ಕಿಮಭಿಪ್ರಾಯ ಏತಂ ನಃ ಸಂಶಯಂ ಛಿಂಧಿ ಸುವ್ರತ ॥** — (೧೦-೩೧-೩೦)

"ಪೂರ್ಣಕಾಮನಾದ ಯದುನಾಥನು ಯಾವ ಕಾರಣದಿಂದ ಇಂತಹ ಲೋಕ ನಿಂದಿತವಾದ ಕೆಲಸವನ್ನು ಆಚರಿಸಿದನು? ಸದಾಚಾರಸಂಪನ್ನರಾದ ಶುಕಮುನಿಗಳೇ! ನೀವೇ ನನ್ನ ಬಗೆಯ ಈ ಸಂಶಯವನ್ನು ಕಿತ್ತೊಗೆಯಿರಿ!" ಎಂದು ಪ್ರಾರ್ಥಿಸಿದ. ಶುಕಾಚಾರ್ಯರು ಉತ್ತರಿಸುತ್ತಾರೆ–

**ಧರ್ಮವ್ಯತಿಕ್ರಮೋ ದೃಷ್ಟ ಈಶ್ವರಾಣಾಂ ಚ ಸಾಹಸಮ್ ।**
**ತೇಜೀಯಸಾಂ ನ ದೋಷಾಯ ವಹ್ನೇಃ ಸರ್ವಭುಜೋ ಯಥಾ ॥**
— (೧೦-೩೧-೩೧)

ಸರ್ವತಂತ್ರಸ್ವತಂತ್ರರಾದ ಧರ್ಮಸಂಸ್ಥಾಪಕರಾದವರು ಲೋಕಕ್ಕಿಂತ ವಿಲಕ್ಷಣ ವಾಗಿ ನಡೆದುಕೊಳ್ಳುವುದು ಕಂಡರೂ ಅದು ದೋಷವೆನಿಸದು. ಸರ್ವಭಕ್ಷಕನಾದ ಅಗ್ನಿಗೆ ಯಾವುದರ ಸಂಪರ್ಕದಲ್ಲಿಯೂ ದೋಷ ಅಂಟುವುದೇ ಇಲ್ಲ. ತೇಜಸ್ಸಂಪನ್ನ ರಾದ ಮಹಾತ್ಮರಿಗೂ ಧರ್ಮೋಲ್ಲಂಘನೆಯು ದೋಷಕರವೆನಿಸದು.

ಇಷ್ಟಾಗಿ ಶ್ರೀಕೃಷ್ಣನ ರಾಸವಿಲಾಸವು ಎಲ್ಲ ಜನರಿಗೂ ತೋರಲೇ ಇಲ್ಲ. ಇದನ್ನು ಕಂಡವರು ಋಷಿಗಳು ದೇವತೆಗಳು ಮಾತ್ರ. ಜಗತ್ತಿನ ದೃಷ್ಟಿಯಲ್ಲಿ ಗೋಪಿಕಾ ಸ್ತ್ರೀಯರೆಲ್ಲರೂ ತಮ್ಮ ತಮ್ಮ ಮನೆಯಲ್ಲಿಯೇ ಇದ್ದಾರೆ. ಈ ಘಟನೆಯೇ ನಡೆದಿಲ್ಲ. ಏಕೆಂದರೆ ರಾಸವಿಲಾಸವು ಅಪ್ರಾಕೃತವಾದ ಅಲೌಕಿಕವಾದ ಘಟನೆ. ಲೌಕಿಕ ದೃಷ್ಟಿಯ ಚಾರಿತ್ರ್ಯಹಾನಿ ಮುಂತಾದವುಗಳೇನೂ ಸಂಭವಿಸಿಲ್ಲ. ನಡೆದದ್ದು ದೇವತೆಗಳ ದೃಷ್ಟಿಯಲ್ಲಿ. ಆದ್ದರಿಂದ ರಾಸಲೀಲೆ ಎಂದರೆ ಜೀವ–ಪರಮಾತ್ಮರ ಆಧ್ಯಾತ್ಮಿಕ ಸಂಬಂಧವನ್ನು ಸಾಂಕೇತಿಸುವ ವಿಶಿಷ್ಟ ಘಟನೆಯೇ ಹೊರತು ಜಗತ್ತಿನ ಪ್ರೇಮವ್ಯವಹಾರವಲ್ಲ. ಹೀಗೆ ಶ್ರೀಕೃಷ್ಣಪರಮಾತ್ಮನು ಅಲೌಕಿಕ ಆನಂದದಿಂದ ಭಕ್ತಜನರನ್ನೆಲ್ಲ ಸಂತೋಷಪಡಿಸಿ ಸಮಗ್ರ ವೃಂದಾವನವೇ ಹರುಷಪಡುವಂತೆ ಹರಸಿ ಕಳುಹಿಸಿದ.

ಇತ್ತ ಸೋದರಮಾವನೆನಿಸಿದ ಕಂಸ ಕೃಷ್ಣನನ್ನು ಸಂಹರಿಸಲು ನೂರಾರು ದೈತ್ಯ ಶಕ್ತಿಗಳನ್ನು ಕಳುಹಿಸಿದ. ಅವರೆಲ್ಲರೂ ಶ್ರೀಕೃಷ್ಣನಿಂದ ಹತರಾದರು. ನಿತ್ಯವೂ ತನ್ನ ಭೃತ್ಯರ ಸುತ್ತ ಸುದ್ದಿಗಳನ್ನು ಕೇಳುತ್ತಿದ್ದನು. ಜಗತ್ತಿಗೇ ಅರಿಷ್ಟದಂತಿದ್ದ ಅರಿಷ್ಟಾಸುರ ಧೇನುಕಾಸುರ ಮುಂತಾದವರನ್ನು ಶ್ರೀಕೃಷ್ಣನು ಸದೆಬಡಿಯಲು, ಕಂಸನು ಭಯ–ಹತಾಶೆಗಳಿಂದ ಚಿಂತಾಕ್ರಾಂತನಾದನು.

ಶ್ರೀಕೃಷ್ಣನ ಅಳಿವನ್ನೇ ಹಗಲಿರುಳು ನೆನೆಯುತ್ತಿರುವ ಕಂಸನು ಒಂದು ಒಳಸಂಚಿನ ನಿರ್ಧಾರ ಮಾಡಿದ. ಶ್ರೀಕೃಷ್ಣನ ಬಳಿಗೆ ಸೇವಕರನ್ನು ಕಳುಹಿಸಿದರೆ ಅವರು ಮತ್ತೆ ಮರಳಿ ಬಾರರು. ಆದ್ದರಿಂದ ಶ್ರೀಕೃಷ್ಣನನ್ನೇ ಏನಾದರೂ ಮಾಡಿ ಮಥುರೆಗೆ ಕರೆಸಬೇಕು. ಕೃಷ್ಣನ ಕ್ಷೇತ್ರಕ್ಕೆ ತೆರಳಿದವರೆಲ್ಲರೂ ಬದುಕಿ ಉಳಿಯರು. ಅವರೆಲ್ಲರೂ ಅಳಿದರೆ ನಾನೂ ಅಳಬೇಕಾದೀತು. ಆದ್ದರಿಂದ ನಮ್ಮ ಕ್ಷೇತ್ರಕ್ಕೆ ಕೃಷ್ಣನನ್ನು ಕರೆಸಬೇಕೆಂದು ತೀರ್ಮಾನಿಸಿದ.

ಮಥುರೆಯು ಮುಷ್ಟಿಕ–ಚಾಣೂರರೆಂಬ ಜಗಜಟ್ಟಿಗಳಿಂದ, ಭೂಮಂಡಲವನ್ನೇ ಹಂದಾಡಿಸುವ ಕುವಲಿಯಾಪೀಡ ಎಂಬ ಆನೆಯಿಂದ, ಸಾವಿರಾರು ವೀರಯೋಧ ರಿಂದ ಅಭೇದ್ಯವೆನಿಸಿದೆ. ಇಲ್ಲಿಗೆ ಕೃಷ್ಣ ಬಂದರೆ ಬಹಳ ಸುಲಭವಾಗಿ ಸಂಹರಿಸ ಬಹುದು. ಒಬ್ಬೊಬ್ಬರನ್ನೇ ಕಳುಹಿಸಿದರೆ ಕಬಳಿಸಿಯಾನು. ಇಷ್ಟು ಶಕ್ತಿಗಳು ಒಟ್ಟಾದರೆ ಖಂಡಿತ ಕೃಷ್ಣನು ಉಳಿಯನು ಎಂಬುದು ಕಂಸನ ಆಲೋಚನೆಯಾಗಿತ್ತು. ಆದರೆ ಕೃಷ್ಣನನ್ನು ಕರೆಸುವುದು ಹೇಗೆ? ನಿಜ ಸಂಗತಿ ತಿಳಿದರೆ ಬಾರನು. ಆದ್ದರಿಂದ ಅವನಿಗೆ ವಿಶ್ವಾಸಪಾತ್ರರಾದವರನ್ನೇ ಕಳುಹಿಸಿ ಇಲ್ಲಿಗೆ ಕರೆಸಬೇಕೆಂದು ವಿಚಾರಮಾಡಿ ಅತ್ಯಂತ ಸಜ್ಜನನಾದ ವಿಶ್ವಾಸಪಾತ್ರನಾದ ಅಕ್ರೂರನನ್ನು ಕಳುಹಿಸಬೇಕೆಂದು ತೀರ್ಮಾನಿಸಿದ.

ಅನಂತರ ಕಂಸನು ಯದುಕುಲದ ಶ್ರೇಷ್ಠ ವ್ಯಕ್ತಿಯಾದ ತನ್ನ ಅಮಾತ್ಯನಾದ ಅಕ್ರೂರನನ್ನು ಕರೆಸಿದ. ಬಿಲ್ಲುಹಬ್ಬವನ್ನು ನೆವಮಾಡಿಕೊಂಡು ಉಪಾಯದಿಂದ ಕೃಷ್ಣನನ್ನು ಕರೆದು ತಾ ಎಂದು ಆದೇಶಿಸಿದ ಅಕ್ರೂರನು ಕಂಸನ ಕೀಳುಬುದ್ಧಿಗೆ ಮನದೊಳಗೇ ನಸುನಕ್ಕು ಉತ್ತರಿಸಿದ. ಕಂಸನೇ! ಮೃತ್ಯುವಿನ ಭಯದಿಂದ ತತ್ತರಿಸಿದ ಈ ನಿನ್ನ ಆಲೋಚನೆ ನಿನಗುಚಿತವಾಗಿಯೇ ಇದೆ. ಆದರೆ ಕಾರ್ಯವು ಕೈಗೂಡುವ ವಿಷಯದಲ್ಲಿ ಸಮಬುದ್ಧಿಯನ್ನು ಬೆಳೆಸಿಕೊಳ್ಳಬೇಕು. ಕೆಲವೊಮ್ಮೆ ನಾವು ನೆನೆದಂತೆ ಕಾರ್ಯವು ಈಡೇರಬಹುದು. ದೈವವಿರೋಧದಿಂದ ವಿಫಲವೂ ಆಗಬಹುದು. ಯಾವುದಕ್ಕೂ ಸಿದ್ಧರಾಗಿ ಪ್ರವೃತ್ತಿಯನ್ನು ಹೊಂದಬೇಕು. ಎಲ್ಲವನ್ನೂ ಸಾಧಿಸುತ್ತೇವೆ ಎಂಬವರೂ ಲೋಕದಲ್ಲಿದ್ದಾರೆ. ನಾವು ಮಾತ್ರ ನಿನ್ನಾಜ್ಞೆಯಂತೆ ಕೃಷ್ಣನನ್ನು ಕರೆತರುವ ಪ್ರಾಮಾಣಿಕ ಪ್ರಯತ್ನವನ್ನು ಮಾಡುತ್ತೇನೆ. ಫಲಕಾರಿಯಾಗುತ್ತದೆ ಎಂಬ ವಿಶ್ವಾಸವಿಲ್ಲ ಎಂದು.

ನಾವೂ ಸಹ ಹೀಗೆ ಮಾಡಬೇಕು ಹಾಗೆ ಮಾಡಬೇಕು ಎಂದು ಹಂಚಿಕೆ ಮಾಡುತ್ತೇವೆ. ಆದರೆ ಕೆಲವೊಮ್ಮೆ ಅದೃಷ್ಟದಿಂದ ಅಂದುಕೊಂಡಂತೆ ನಡೆದರೂ ಹೆಚ್ಚಾಗಿ ದೈವವಿರೋಧದಿಂದ ವೈಫಲ್ಯವನ್ನೇ ಅನುಭವಿಸುತ್ತೇವೆ. ಇದಕ್ಕೆ ಕಾರಣ ವಾದರೂ ಕಂಸನಂತೆ ದೈವದ ಕಲ್ಪನೆಯೇ ಇಲ್ಲದೆ ಎಲ್ಲವನ್ನು ನಾನೇ ಮಾಡಬಲ್ಲೆ ಎಂಬ ಅತಿಯಾದ ಅಹಂಕಾರದ ಭಾವನೆಯೇ ಆಗಿದೆ. ಆದರೆ ಅಕ್ರೂರ ಹೇಳುತ್ತಾನೆ –ನಿನ್ನ ಆಜ್ಞೆಯಂತೆ ಪ್ರಾಮಾಣಿಕ ಪ್ರಯತ್ನವನ್ನು ಮಾಡುತ್ತೇನೆ. ಫಲವು ದೈವಾಯತ್ತ ಎಂದು ನಮ್ಮ ಕರ್ತವ್ಯಗಳನ್ನು ನಿಗರ್ವಿಗಳಾಗಿ ಸಮಭಾವದಿಂದ ಹರಿಯನ್ನು ನಂಬಿ ಮಾಡಿದಾಗ ಫಲಪ್ರದಗಳಾಗುತ್ತವೆ ಎಂಬುದನ್ನು ಅಕ್ರೂರನ ವರ್ತನೆಯಿಂದ ಅರ್ಥಮಾಡಿಕೊಳ್ಳಬೇಕು.

ಅಕ್ರೂರನಿಗೆ ಒಳಗಿಂದ ಒಳಗೆ ಬಹಳ ಸಂತೋಷವಾಗುತ್ತಿದೆ. ಏಕೆಂದರೆ ಅಕ್ರೂರನಿಗೆ ಶ್ರೀಕೃಷ್ಣನು ಸಾಕ್ಷಾತ್ ಶ್ರೀಮನ್ನಾರಾಯಣ ಎಂಬ ಪರಿಜ್ಞಾನವಿದೆ. ಭಗವಂತನನ್ನು ಕಾಣುವ ಸೌಭಾಗ್ಯ ನನ್ನದಾಯಿತಲ್ಲ ಎಂದು ಸಂತಸಗೊಂಡ ಅಕ್ರೂರನು ಕಂಸನು ಈ ದೃಷ್ಟಿಯಲ್ಲಿ ನನಗೆ ಉಪಕಾರವನ್ನೇ ಮಾಡಿದ್ದಾನೆಂದು ಭಾವಿಸಿದ. ಉತ್ತಮ ಭಕ್ತರು ಎಲ್ಲಿದ್ದರೂ ಸಜ್ಜನಿಕೆಯಿಂದಲೇ ಬದುಕುತ್ತಾರೆ ಎನ್ನಲು ಅಕ್ರೂರನೇ ಸಾಕ್ಷಿಯಾಗಿದ್ದಾನೆ.

ಕಂಸನ ಆದೇಶದಂತೆ ಅಕ್ರೂರನನ್ನು ಸಕಲ ಸಿದ್ಧತೆಗಳನ್ನು ಹೊಂದಿಸಿಕೊಂಡು ಕೃಷ್ಣನನ್ನು ಕರೆತರಲು ಹೊರಟ. ನಿರಂತರವೂ ಶ್ರೀಕೃಷ್ಣನಲ್ಲಿಯೇ ನೆಲೆಗೊಳಿಸಿದ ಮನಸ್ಸುಳ್ಳ ಅಕ್ರೂರನು ಗೋಕುಲವನ್ನು ಪ್ರವೇಶಿಸಿದ. ಅಕ್ರೂರನು ಒಳಗೆ ಪ್ರವೇಶಿಸುತ್ತಿರಲು ವೃಂದಾವನದ ಅಂಗಳವೆಲ್ಲವೂ ಮಂಗಳಾಂಗನಾದ ಶ್ರೀಕೃಷ್ಣನ ಪಾದಚಿಹ್ನೆಗಳಿಂದ ಕಂಗೊಳಿಸುತ್ತಿತ್ತು. ಕೃಷ್ಣನ ಪಾದದ ಚಿಹ್ನೆಗಳನ್ನು ಕಂಡ ಶ್ವಫಲ್ಕಜನು ಭಾವುಕನಾದ. ರೋಮಾಂಚಿತನಾದ. ರಥದಿಂದ ಕೆಳಗಿಳಿದ. ತ್ರಿಲೋಕವಂದ್ಯನಾದ ಹರಿಯ ಚರಣದ ಧ್ವಜ, ವಜ್ರ, ಅಂಕುಶ, ಸರೋರುಹ

ಚಿಹ್ನೆಗಳನ್ನು ಮೆಟ್ಟುವುದೂ ಉಚಿತವಲ್ಲವೆಂದು ಭಾವಿಸಿದ. ಅವುಗಳನ್ನು ಕಂಡೊಡನೆಯೇ ಅಕ್ರೂರನ ಅಂತರಾಳದಿಂದ ಧುಮ್ಮಿಕ್ಕಿ ಬಂದ ಭಗವದ್ಭಕ್ತಿಯ ತೆರೆಗಳು ಅಭಿಮಾನ–ಬಿಗುಮಾನಗಳೆಂಬ ಕಟ್ಟೆಗಳನ್ನೊಡೆದವು. ಕಣ್ಣಿಳಿಂದ ಸುರಿವ ಆನಂದಾಶ್ರುಧಾರೆ ಆಂತರ್ಯದ ಭಕ್ತಿರಸವನ್ನು ಸೂಚಿಸುತ್ತಿತ್ತು. ಭಗವದ್ ಜ್ಞಾನವೆಂಬ ತಟಿಲ್ಲತೆಯ ಸ್ಪರ್ಶದಿಂದ ಚಕಿತನಾಗಿ ರಥದಿಂದ ಧುಮುಕಿದ. 'ಜಗದೊಡೆಯನ ಪಾದಧೂಳಿಗಳಿವು' ಎಂದು ಆಶ್ಚರ್ಯ, ಆನಂದ, ಉದ್ಗಾರಗಳಿಂದ ಹೊರಳಾಡಿದ–

ತದ್ದರ್ಶನಾಹ್ಲಾದವಿವೃದ್ಧಸಂಭ್ರಮಃ ಪ್ರೇಮ್ಣೋರ್ಧ್ವರೋಮಾಶ್ರುಕಲಾಕುಲೇಕ್ಷಣಃ ।
ರಥಾದವಸ್ಕಂದ್ಯ ಸ ತೇಷ್ವಚೇಷ್ಟತ ಪ್ರಭೋರಮೂನ್ಯಂಘ್ರಿರಜಾಂಸ್ಯಹೋ ಇತಿ ॥
— (೧೦–೩೬–೨೫)

'ವೃಂದಾವನದ ಪರಿಸರವೆಲ್ಲವೂ ಹರಿಸನ್ನಿಧಾನಯುಕ್ತವಾಗಿದೆ' ಎಂದು ಅಕ್ರೂರನು ಕಲ್ಲು, ಮಣ್ಣು, ಮುಳ್ಳು ಯಾವುದನ್ನೂ ಲೆಕ್ಕಿಸದೆ ಭಕ್ತಿಯಿಂದ ಹೊರಳಾಡಿದ.

ಇಂದೂ ಭಗವಂತನ ಕ್ಷೇತ್ರಗಳಿಗೆಲ್ಲ ಇಂತಹ ಪಾವಿತ್ರ್ಯವಿದೆ. ಹರಿಯು ಪದವಿಟ್ಟ ಕ್ಷೇತ್ರಗಳಲ್ಲಿ ಪಾವಿತ್ರ್ಯವಿದೆ. ಪಾವಿತ್ರ್ಯವನ್ನು ಲೆಕ್ಕಿಸದೆ ಸ್ವೇಚ್ಛಾಚಾರಿಗಳಾಗಿ ವರ್ತಿಸಬಾರದು. ಶ್ರೀಮದಾಚಾರ್ಯರು ನಡೆದಾಡಿದ ಆಚಾರ್ಯರ ಜನ್ಮಭೂಮಿಯಾದ ಪಾಜಕಕ್ಷೇತ್ರದಲ್ಲಿಯೂ ವಿಶೇಷ ಸನ್ನಿಧಾನವಿದೆ. ಅಲ್ಲಿಯ ಮಣ್ಣಿನ ಕಣಕಣಗಳಲ್ಲಿಯೂ ಪಾವಿತ್ರ್ಯ ತುಂಬಿದೆ. ಇಂತಹ ಪಾವನ ಕ್ಷೇತ್ರವನ್ನು ಸ್ವಾರ್ಥಕ್ಕಾಗಿ ಹಣದ ದಾಹಕ್ಕಾಗಿ ನಾಶಮಾಡುವುದು ಆಚಾರ್ಯರಿಗೆ ಮತ್ತು ಭಗವಂತನಿಗೆ ಮಾಡುವ ಅಪಚಾರ. ಇದನ್ನು ನಾವೆಲ್ಲರೂ ತಡೆಗಟ್ಟಬೇಕು. ಅಕ್ರೂರನಂತೆ ಪರಿಸರ ಪಾವಿತ್ರ್ಯವನ್ನು ಅರಿತುಕೊಳ್ಳಬೇಕು.

## ಅಕ್ರೂರನ ಪ್ರಾರ್ಥನೆ

ಅಕ್ರೂರನು ಕೃಷ್ಣನ ಬಳಿ ಸಾಗಿದ. ಕೃಷ್ಣನ ದರ್ಶನದಿಂದ ಮೋಕ್ಷಾನಂದವನ್ನೇ ಅನುಭವಿಸಿದ. ಅನಂತರ ಅವರು ಮಥುರೆಗೆ ನಡೆದರು. ದಾರಿಯಲ್ಲಿ ಅಕ್ರೂರನು ಸ್ನಾನಕ್ಕಾಗಿ ನದಿಗೆ ಇಳಿದ. ಮುಳುಗಿ ಅಘಮರ್ಷಣ ಮಂತ್ರ ಪಠಿಸಿದ. ಪ್ರತಿನಿತ್ಯವೂ ನೀರಿನೊಳಗೆ ಶೇಷನನ್ನು ಕಾಣುತ್ತಿದ್ದ. ಅಕ್ರೂರ ಇಂದು ವಿಶೇಷವೊಂದನ್ನು ಕಂಡ. ಶೇಷಶಾಯಿಯಾದ ಅನಂತಪದ್ಮನಾಭನನ್ನೇ ಕಂಡ. ಅಕ್ರೂರ ತನ್ನ ಜೀವಿತವೇ ಧನ್ಯ ಎಂದು ಭಕ್ತಿಯಿಂದ ಬಗೆಬಗೆಯಾಗಿ ಭಗವಂತನನ್ನು ಪ್ರಾರ್ಥಿಸಿದ.

ಅಕ್ರೂರನ ಪ್ರಾರ್ಥನೆಯನ್ನು ಶ್ರೀಮದ್ವಾದಿರಾಜಪೂಜ್ಯಚರಣರು ಒಂದೇ ಪದ್ಯದಲ್ಲಿ ಹೃದ್ಯವಾಗಿ ಬಣ್ಣಿಸಿದ್ದಾರೆ.

ಸಂಸಾರಾಸಾರಸಿಂಧೋರ್ಜನಿಮರಣಜರಾದ್ಯೂರ್ಮಿಭಿರ್ಬಾಧಿತಾನಾಂ
ದಾರಾಗಾರಾದಿಭಾರಾಃ ಕಿಮಿಹಸುಖಕರಾಃ ಪ್ರೇಮಪಾಶೈರ್ನಿಬದ್ಧಾಃ ।
ಕೃಷ್ಣ! ತ್ವತ್ಪಾದಪೋತಂ ಪ್ರದಿಶ ತದನಿಶಂ ಸತ್ಪತಾಕಂ ಸಕೇತುಂ
ರಮ್ಯಂ ಕರ್ಮಂದಿಗಮ್ಯಂ ಭವಜಲಧಿಭವಕ್ಲೇದವಿಚ್ಛೇದ ಹೇತುಮ್ ॥
— (ರು. ವಿಜಯ. ಸರ್ಗ– ೧೦)

ನಾವೆಲ್ಲರೂ ಸಂಸಾರವೆಂಬ ಸಾಗರದಲ್ಲಿ ಮುಳುಗುತ್ತಿದ್ದೇವೆ. ಸಾಯುವ ಘಟ್ಟದಲ್ಲಿದ್ದೇವೆ. ಇದಕ್ಕೆ ಕಾರಣ ನಮಗೆ ಈಜುವ ಕಲೆ ಗೊತ್ತಿಲ್ಲ. ಹೇಗೆ ಜೀವನ ನಡೆಸಬೇಕು ಎಂಬುದನ್ನರಿಯದೆ ಸ್ವಾರ್ಥಿಗಳಾಗಿ ರಾಗದ್ವೇಷಗಳಿಂದ ಕಾಲಹರಣ ಮಾಡುತ್ತಿದ್ದೇವೆ. ಜೀವನದ ಕಲೆಯನ್ನು ಕೃಷ್ಣ ತಿಳಿಸಿದ್ದಾನೆ. ಇದನ್ನು ನಾವು ತಿಳಿದಿಲ್ಲ.

ಕೃಷ್ಣ ಗೀತೆಯಲ್ಲಿ ಹೇಳಿದ 'ಕರ್ತವ್ಯವೇ ಜೀವನದ ಕಲೆ' –'ಯೋಗಃ ಕರ್ಮಸು ಕೌಶಲಮ್' ಎಂದು. ಸ್ವಾರ್ಥವಿಲ್ಲದೆ ಭಕ್ತಿಭಾವದಿಂದ ಮಾಡುವ ಕರ್ತವ್ಯ ಯೋಗ ವೆನಿಸುತ್ತದೆ. ಇದನ್ನರಿಯದೆ ನಿಸ್ಸಾರವಾದ ಸಂಸಾರದಲ್ಲಿ ಮುಳುಗಿದ್ದೇವೆ. ಇದಕ್ಕೆ ಸರಿಯಾಗಿ ಜನನಮರಣಗಳೇ ಮೊದಲಾದ ಅಲೆಗಳು ನಮ್ಮನ್ನು ಅಪ್ಪಳಿಸುತ್ತಿವೆ. ಇಂತಹ ದಾರುಣ ಸ್ಥಿತಿಯಲ್ಲಿದ್ದರೂ ಮನೆ, ಮಡದಿ, ಮಕ್ಕಳು ಎಂಬ ಭಾರೀ ಭಾರಗಳನ್ನು ಹೊತ್ತುಕೊಂಡು ಮುಳುಗುತ್ತಿದ್ದೇವೆ. ಬಂಡೆಕಲ್ಲನ್ನು ಕಟ್ಟಿಕೊಂಡು ನೀರಿಗೆ ಬಿದ್ದವನಂತೆ ನಮ್ಮ ಸ್ಥಿತಿಯಾಗಿದೆ.

ಹೀಗಾದರೂ ಭಯಂಕರ ಪ್ರಾಣಾಂತಿಕ ಭವಸಾಗರದಲ್ಲಿ ಮುಳುಗಿದ ನಮಗೆ ಒಂದೇ ಒಂದು ಆಸರೆ ಇದೆ.

ನೀರಿನಲ್ಲಿ ಮುಳುಗಿದವಗೆ ದೋಣಿ ಸಿಕ್ಕರೆ ಸುರಕ್ಷಿತವಾಗಿ ದಡಸೇರುತ್ತಾನೆ. ಅದರಂತೆ ಸಂಸಾರಸಾಗರದಲ್ಲಿ ನಾನಾ ತರದ ಅಲೆಗಳಿಂದ ಅಪ್ಪಳಿಸಿದ ನಮಗೆ ಸಿಕ್ಕುವ ಒಂದೇ ಒಂದು ಆಸರೆ ಶ್ರೀಕೃಷ್ಣನ ಪಾದಕಮಲ. ಹರಿಪಾದವೆಂಬ ನಾವೆ ಸಿಕ್ಕಿದರೆ ಭವಸಾಗರದಲ್ಲಿ ಮುಳುಗುವ ದುರಂತ ನಮಗಿಲ್ಲ.

ನಾವೆಲ್ಲರೂ ಆಪತ್ತಿನಿಂದ ಬಿದ್ದಿರುವುದಂತೂ ಸತ್ಯ. ಆದರೆ ಆಸರೆಯನ್ನು ಹೊಂದುವ ಗೋಜಿಗೆ ಹೋಗಿಲ್ಲ. ಹರಿಪಾದ ಹೊಂದದೆ ಮುಂದೆ ಒಳಿತಿಲ್ಲ.

ಹರಿಪಾದವೆಂಬ ನಾವೆ ಎಲ್ಲಿಯೋ ಇಲ್ಲ. ನಮ್ಮೊಳಗೇ ಇದೆ.

ಒಂದು ಸರೋವರದಲ್ಲಿ ಹುಲ್ಲು ಬೆಳೆದು, ಪಾಚಿ ಕಟ್ಟಿದಾಗ ನೀರು ಕಾಣಿಸದು. ನೀರಡಿಕೆಯಾದವನು ಸರೋವರದ ಬಳಿಯೇ ಇದ್ದರೂ ದೂರದಲ್ಲಿ ಕಾಣಿಸುವ ಬಿಸಿಲುಗುದುರೆಯನ್ನು ನೀರೆಂದು ಭ್ರಮಿಸಿ ಅಲ್ಲಿಗೆ ಓಡುತ್ತಾನೆ. ಎದುರಿಗಿರುವ ನೀರನ್ನು ಬಿಟ್ಟು ಬಿಸಿಲುಗುದುರೆಯನ್ನು ನೀರೆಂದು ಭ್ರಮಿಸಿ ಘಾಸಿಗೊಳಗಾಗು ವಂತೆಯೇ ನಮ್ಮ ಸ್ಥಿತಿಯೂ ಆಗಿದೆ. ನಮ್ಮ ಹೃದಯದಲ್ಲಿ ಭಗವಂತನಿದ್ದಾನೆ. ಆದರೆ ಅಜ್ಞಾನವೆಂಬ ಪಾಚಿ ಇವನನ್ನು ಮುಚ್ಚಿಬಿಟ್ಟಿದೆ. ಶ್ರೀನಿಕೇತನನ್ನು ಕಾಣದೆ ಜೀವನನ್ನು ಘಾಸಿಗೊಳಿಸುವ ವಿಷಯಪದಾರ್ಥಗಳ ಬಳಿ ಓಡುತ್ತಿದ್ದೇವೆ. ಸುಖನಿಧಿಯನ್ನಾಶ್ರ ಯಿಸಿ ನಿತ್ಯಸುಖಿಗಳಾಗುವುದು ಬಿಟ್ಟು; ಭೌತಿಕವಿಷಯಗಳಲ್ಲಿಯೇ ಬಳಲುವ ಮೂಢಾತ್ಮರಾಗಿದ್ದೇವೆ''. ನಮ್ಮೆಲ್ಲರಿಗೂ ನಿನ್ನ ಪಾದವೆಂಬ ನಾವೆಯನ್ನು ಕೊಡು ಎಂದು ಭಕ್ತಿಪಾಶದಿಂದ ಅವನನ್ನು ಕಟ್ಟಿದಾಗ ಭವಪಾಶದಿಂದ ಮುಕ್ತನನ್ನಾಗಿಸುವ. ಅಕ್ರೂರನ ಈ ಪ್ರಾರ್ಥನೆ ಹೃದ್ಗತವಾಗಬೇಕು!!

ಯಮುನೆಯಿಂದ ಮೇಲೆದ್ದು ಬರುವ ಅಕ್ರೂರನನ್ನು ಕಂಡು ಶ್ರೀಕೃಷ್ಣನು ಕೇಳುತ್ತಾನೆ. "ಅಕ್ರೂರ! ಇಂದು ನಿನ್ನ ಮುಖದಲ್ಲಿ ವಿಶೇಷವಾದ ಪ್ರಭೆ ಎದ್ದು ತೋರುತ್ತಿದೆಯಲ್ಲ! ನಿನ್ನ ಆ ಪರಮಾನಂದಕ್ಕೇನು ನಿದಾನ? ನನಗೆ ಹೇಳುವೆಯಾ?" ಎಂದು ಮಾರ್ಮಿಕವಾಗಿ ಪ್ರಶ್ನಿಸಿದಾಗ ಅಕ್ರೂರನು ಹೇಳುತ್ತಾನೆ–

**ಅದ್ಭುತಾನೀಹ ಯಾವಂತಿ ಭೂಮೌ ವಿಯತಿ ವಾ ಜಲೇ ।**
**ತ್ವಯಿ ವಿಶ್ವಾತ್ಮಕೇ ತಾನಿ ಕಿಂ ಮೇಽದೃಷ್ಟಂ ವಿಪಶ್ಯತಃ ॥** — (೩೯–೪)

ದೇವ! ಭೂಮಿ, ಅಂತರಿಕ್ಷ, ಜಲಗಳಲ್ಲಿ, ಸಮಗ್ರ ಜಗತ್ತಿನಲ್ಲಿ ಏನೇನು ಆಶ್ಚರ್ಯ ಗಳಿವೆಯೋ ಅವೆಲ್ಲವೂ ವಿಶ್ವಾತ್ಮಕವಾದ ನಿನ್ನಲ್ಲೆ ನಾನು ನೋಡುತ್ತಿರುವಾಗ, ನಿನಗಿಂತ ವ್ಯತಿರಿಕ್ತವಾದ ಅದ್ಭುತವನ್ನು ನಾನೇನು ಕಾಣಲಿ!!

ಜಗತ್ತಿನಲ್ಲಿಯ ಎಲ್ಲ ಅದ್ಭುತಗಳ ಮ್ಯೂಸಿಯಂ ಭಗವಂತ. ಅದ್ಭುತಕ್ಕಿಂತಲೂ ಅದ್ಭುತ ಎಂಬ ಭಾವದಿಂದ ಬಗೆಬಗೆಯಾಗಿ ಬಣ್ಣಿಸುತ್ತಾನೆ ಅಕ್ರೂರ. ಭಗವಂತ ನೊಬ್ಬನನ್ನು ತಿಳಿದರೆ ಸಮಗ್ರ ಜಗತ್ತನ್ನೇ ತಿಳಿದಂತೆ 'ಯೇನ ವಿಜ್ಞಾತೇನ ಸರ್ವಂ ವಿಜ್ಞಾತಂ ಭವತಿ' ಎಂಬ ಉಪನಿಷತ್ತು ಇದನ್ನೇ ತಿಳಿಸುತ್ತಿದೆ. ಭಗವಂತನನ್ನು ತಿಳಿದ ಬಳಿಕ ಮತ್ತೂ ತಿಳಿಯಬೇಕಾದ್ದೇನೂ ಉಳಿಯುವುದಿಲ್ಲ. ಜಗತ್ತಿನಲ್ಲಿಯ ಬೇರೆ ಬೇರೆ ವಸ್ತುಗಳನ್ನು ಹುಡುಕಿ ತಿಳಿದುಕೊಳ್ಳುವುದು ಕಷ್ಟ. ಅದೇ ಮ್ಯೂಸಿಯಂಗೆ ಹೋದರೆ, ಎಲ್ಲ ವಸ್ತುಗಳನ್ನು ಒಟ್ಟಿಗೇ ಕಾಣುತ್ತೇವೆ. ಜಗತ್ತಿನ ಅತ್ಯಂತ ಬೃಹತ್ತಾದ ಮ್ಯೂಸಿಯಂ ಎಂದರೆ ಭಗವಂತನೊಬ್ಬನೇ ಸತ್ಯ. ಇವನಲ್ಲಿ ಎಲ್ಲಾ ಅದ್ಭುತಗಳೂ ತುಂಬಿಕೊಂಡಿವೆ. ಭಗವಂತನನ್ನು ತಿಳಿದರೆ ಪ್ರಪಂಚದ ಪ್ರಸಿದ್ಧವಾದ ಬೊಟಾನಿಕಲ್ ಗಾರ್ಡನ್ ನೋಡಿ ದಂತೆಯೇ. ಈ ಗಾರ್ಡನ್‌ಗೆ ಹೋಗಿ ಬಂದವರು ಪ್ರಪಂಚದ ಎಲ್ಲ ಮರಗಳನ್ನು ನೋಡುವ ಅಗತ್ಯವೇ ಇಲ್ಲ. ಎಲ್ಲವನ್ನೂ ಅಲ್ಲಿಯೇ ನೋಡಬಹುದಾಗಿದೆ. ಹಾಗೆಯೇ ಭಗವಂತನಿದ್ದಾನೆ. ನೋಡುವ ಕಣ್ಣು ಬೇಕು. ಅದನ್ನು ಭಗವಂತನೇ ಕರುಣಿಸಬೇಕು!!

## ಪುರಪ್ರವೇಶ ಸಂಭ್ರಮ

ಅನಂತರ 'ಕೃಷ್ಣನನ್ನು ಬಿಟ್ಟು ಒಂದು ಕ್ಷಣವೂ ಇರಲಾರೆ' ಎಂದು ಹಠಹಿಡಿದ ಅಕ್ರೂರನನ್ನು ಶ್ರೀಕೃಷ್ಣನು ಸಮಾಧಾನಪಡಿಸಿದ. ಕರ್ತವ್ಯದ ಹೊಣೆಗಾರಿಕೆಯನ್ನು ನಿರೂಪಿಸಿ ಸಂತೈಸಿದ. ಅನಂತರ ಮಥುರೆಯ ಒಳಗೆ ಪ್ರವೇಶಮಾಡಿದ.

ರಾಮಕೃಷ್ಣರು ಮಥುರಾಪುರಿಯನ್ನು ಪ್ರವೇಶಿಸುವುದೇ ತಡ ಪಟ್ಟಣದ ಸ್ತ್ರೀಯ ರೆಲ್ಲರೂ ಓಡೋಡಿ ಬಂದರು. ರಾಜಮಾರ್ಗದ ಬದಿಯಲ್ಲಿ ಮಹಡಿಗಳ ಮೇಲ್ಭಾಗ ದಲ್ಲಿ ಗುಂಪುಗೂಡಿದರು. ಎಲ್ಲರಿಗೂ ಶ್ರೀಕೃಷ್ಣನನ್ನು ಕಾಣಬೇಕೆಂಬ ಕಾತುರತೆ ಬಹಳವಾಗಿತ್ತು. ಕಂಸನ ಹಿಂಸೆಯಿಂದ ಎಲ್ಲರೂ ಬೇಸತ್ತು ಹೋಗಿದ್ದರು. ಕಂಸನಿಂದ ಎಂದು ವಿಮೋಚನೆಯಾದೀತೆಂಬ ಆಲೋಚನೆಯಲ್ಲಿಯೇ ಮಗ್ನರಾಗಿದ್ದರು. ಕೃಷ್ಣನ ಆಗಮನದ ನಿರೀಕ್ಷಣೆಯಲ್ಲಿ ಇದ್ದರು. ಕಂಸನ ಆಡಳಿತದಲ್ಲಿದ್ದರೂ ಗೋಕುಲ ಬಾಲಕನ ಬಾಲ್ಯಲೀಲೆಗಳ ಸ್ಮರಣೆಯಿಂದ ಆಗುವ ಆನಂದ ಒಂದು ಇವರ

ಪಾಲಿಗಿತ್ತು ಇಂದು ಆನಂದಕ್ಕೆ ಕಾರಣನಾದ ಆ ನಂದನ ಕಂದನೇ ಆಗಮಿಸಲು ಮೈಮನಗಳನ್ನು ಮರೆತು ಓಡೋಡಿ ಬಂದಿದ್ದಾರೆ. ಬರಗಾಲದಿಂದ ನೊಂದ ಮಂದಿಗೆ ಆಗಸದ ಒಂದು ಬಿಂದುವೂ ಆನಂದಕ್ಕೆ ನಾಂದಿಯಾಗುವಂತೆ, ಕೇವಲ ಕೃಷ್ಣನ ಆಗಮನದ ವಾರ್ತೆಯಿಂದಲೇ ಕುಣಿದಾಡಿದರು. ಅವರೆಲ್ಲರ ಆಗಿನ ಅವಸ್ಥೆಯನ್ನು ಹೃದಯಂಗಮವಾಗಿ ಭಾಗವತವು ಬಣ್ಣಿಸುತ್ತದೆ

ಕಾಶ್ಚಿದ್ ವಿಪರ್ಯಕ್ಕೃತವಸ್ತ್ರಭೂಷಣಾಃ
ವಿಸ್ಮೃತ್ಯ ಚೈಕಂ ಯುಗಳೇಷ್ವಥಾಪರಾಃ ।
ಕೃತೈಕವಸ್ತ್ರಶ್ರವಣೈಕನೂಪುರಾ
ನಾಙ್ಕ್ತ್ವಾ ದ್ವಿತೀಯಂ ತ್ವಪರಾಶ್ಚ ಲೋಚನಮ್ ॥
— (೧೦-೩೯-೨೫)

ಕೆಲವರು ತಲೆಕೆಳಗಾಗಿ ವಸ್ತ್ರಭೂಷಣಗಳನ್ನು ಧರಿಸಿದರು. ಮತ್ತೆ ಕೆಲವರು ಜೋಡಿ ಆಭರಣಗಳನ್ನು ಧರಿಸಬೇಕಿದ್ದಲ್ಲಿ ಒಂದನ್ನು ಮರೆತು ಒಂದನ್ನು ಮಾತ್ರ ಧರಿಸಿದರು. ಒಂದು ಗೆಜ್ಜೆ, ಒಂದು ಓಲೆಗಳನ್ನು ಧರಿಸಿ ಬಂದಿದ್ದರು. ಮತ್ತೆ ಕೆಲವರು ಒಂದು ಕಣ್ಣಿಗೆ ಮಾತ್ರ ಕಾಡಿಗೆಯನ್ನು ಹಚ್ಚಿಕೊಂಡು ಬಂದಿದ್ದರು. ಕೆಲವರು ಊಟವನ್ನು ಅರ್ಧದಲ್ಲಿಯೇ ಬಿಟ್ಟು ನಂದಕಂದನ ಸಿಹಿನೋಟದ ಊಟಕ್ಕಾಗಿ ಬಂದಿದ್ದರು. ಅರ್ಧ ಸ್ನಾನಮಾಡಿ ಬಂದಿದ್ದರು. ಹಾಲುಣಿಸುತ್ತಿದ್ದ ಮಾತೆಯರು ಮಕ್ಕಳನ್ನೂ ಬಿಟ್ಟು ಬಂದರೆಂದ ಬಳಿಕ ಕೃಷ್ಣನ ಪುರಪ್ರವೇಶದ ಸಂಭ್ರಮವನ್ನು ಬಣ್ಣಿಸಬೇಕೆ?

ಮದವೇರಿದ ಗಜದಂತೆ ಗಮನವುಳ್ಳ ಶ್ರೀಕೃಷ್ಣನು ರಾಜಮಾರ್ಗದಲ್ಲಿ ಆಗಮಿಸುತ್ತಿದ್ದಾನೆ. ಶ್ರೀಕೃಷ್ಣನ ಮೋಹಕ ರೂಪ, ಆದರ್ಶ ವ್ಯಕ್ತಿತ್ವ, ಅದ್ಭುತ ಮಹಿಮೆಗಳನ್ನೆಲ್ಲ ಕಾಣುತ್ತಾ ಮಂತ್ರಮುಗ್ಧರಾಗಿ ನಿಂತಿದ್ದಾರೆ. ಆನಂದಮೂರ್ತಿಯನ್ನು ಕಂಡು ಆನಂದ ಭರಿತರಾಗಿ ಹೂಮಳೆಗರೆದಿದ್ದಾರೆ.

ಶ್ರೀಕೃಷ್ಣನು ಮುಂದೆ ಸಾಗುತ್ತಾ ಎದುರಿನಲ್ಲಿ ಕಂಸನ ಪ್ರತಿನಿಧಿಯಾದ ಅಗಸನೊಬ್ಬನನ್ನು ಕಂಡ. ಮಡಿವಾಳನ ಬಳಿ ಆಪ್ತಕಾಮನಾದ ಕೃಷ್ಣ ವಸ್ತ್ರ ಕೇಳಿದ. ದುರಾತ್ಮನಾದ ರಜಕನು ಕೃಷ್ಣನಿಗೇ ಪ್ರಾಣದ ಬೆದರಿಕೆ ಹಾಕಲಾರಂಭಿಸಿದ. ತಾಮಸ ರಜಕನನ್ನು ಕೃಷ್ಣನು ಕೇವಲ ತನ್ನ ಮುಂಗೈಯಿಂದಲೇ ಸಂಹರಿಸಿದ. ಅನಂತರ ಉತ್ತಮ ವಸ್ತ್ರಾಭರಣಗಳನ್ನು ಧರಿಸಿ ಮುಂದೆ ಸಾಗಿದ. ದಾರಿಯಲ್ಲಿ ಅನೇಕ ಭಗವದ್ಭಕ್ತರು ಬಗೆಬಗೆಯಾಗಿ ಶ್ರೀಕೃಷ್ಣನನ್ನು ಉಪಚರಿಸಿದರು.

ಮಥುರೆಯಲ್ಲಿ ಎರಡೂ ರೀತಿಯ ಜನರಿದ್ದರು. ಅಗಸನಂತಹ ದುರಾತ್ಮರು ಕೃಷ್ಣನ ಪ್ರಾಣವನ್ನೇ ಅಪಹರಿಸುತ್ತೇವೆಂದು ಬಂದರೆ; ಕೃಷ್ಣನನ್ನೇ ಸರ್ವಾತ್ಮನಾ ನಂಬಿ ಅವನಿಗಾಗಿ ತಮ್ಮ ಪ್ರಾಣವನ್ನೇ ಅರ್ಪಣೆ ಮಾಡಲು ಸಿದ್ಧರಾಗಿ ಅನೇಕ ಜನರು ಬಂದರು. ಸುಜನರನ್ನೆಲ್ಲ ಅನುಗ್ರಹಿಸುತ್ತಾ ಅಸುರಜನರನ್ನೆಲ್ಲ ನಿಗ್ರಹಿಸುತ್ತಾ ಕೃಷ್ಣನು ಮುಂದೆ ಸಾಗಿದ.

ದಾರಿಯಲ್ಲಿ ಸೌಂದರ್ಯವತಿಯಾದ ಗೂನುಬೆನ್ನಿನ ಕುಬ್ಜೆಯನ್ನು ಕಂಡ. ಬಿಲ್ಲು ಹಬ್ಬಕ್ಕೆಂದು ಹೊರಟ ಶ್ರೀಕೃಷ್ಣನು ಕುಜ್ಬೆಯನ್ನು ಕಂಡು ಧನುಸ್ಸೆಂದೇ ಭಾವಿಸಿದ ನೆಂದು ರಾಜರು ರುಕ್ಮಿಣೀಶವಿಜಯದಲ್ಲಿ ಬಣ್ಣಿಸುತ್ತಾರೆ.

ಮುಷ್ಟಿಪ್ರಮಾಣತನುಮಧ್ಯವತೀಂ ಸ್ವಕರ್ಣ-
ವಿಶ್ರಾಂತನಿರ್ಮಲಗುಣಾಂ ರುಚಿರಾಂ ತ್ರಿವಕ್ರಾಮ್ ।
ಉಷ್ವಕ್ ಪ್ರಯುಕ್ತ ನಯನಾಂತ ಶರಾಂ ನಿರೀಕ್ಷ್ಯ
ಕೋದಂಡಮುದ್ಧವಕಥಾ ವಿಷಯಂ ಸಮೇನೇ ॥ — (ರು.ವಿ. ೧೧-೬)

'ಧನುಸ್ಸಿನ ನಡುಭಾಗ ಮುಷ್ಟಿಯಿಂದ ಹಿಡಿಯುವಂತಿರುತ್ತದೆ. ಸೆಳೆದು ಜೋಡಿಸಿದ ಹೊಸೆದ ದಾರ ಕಿವಿಯ ತನಕ ಸೆಳೆಯುವಂತಿರುತ್ತದೆ. ಮನೋಜ್ಞವಾದ ಮೂರು ವಕ್ರತೆಗಳಿರುತ್ತವೆ. ಎಲ್ಲೆಡೆಯೂ ಬಾಣಗಳನ್ನೆರಚುತ್ತದೆ. ಅದರಂತೆ ಕುಬ್ಜೆಯ ನಡುಭಾಗವು ತೆಳುವಾಗಿದೆ. ಕಿವಿಗಿಂಪುನೀಡುವ ಗುಣಗಳುಳ್ಳವಳಾಗಿದ್ದಾಳೆ. ದೇಹದ ಮೂರು ಭಾಗದಲ್ಲಿ ವಕ್ರತೆಗಳೂ ಇವೆ. ಎಲ್ಲೆಡೆಯೂ ನೋಟವೆಂಬ ಬಾಣಗಳನ್ನು ಹೂಡುತ್ತಿದ್ದಾಳೆ. ಇವಳನ್ನು ಕಂಡ ಶ್ರೀಕೃಷ್ಣನು ಬಿಲ್ಲಹಬ್ಬಕ್ಕೆಂದು ನಿರ್ಮಿಸಿದ ಧನುಸ್ಸೆಂದು ಭಾವಿಸಿದ' ಎನ್ನುತ್ತಾರೆ.

ಇಂತಹ ಕುಬ್ಜೆಯ ಬಳಿ ಇದ್ದ ಶ್ರೀಗಂಧವನ್ನು ಶ್ರೀಕೃಷ್ಣನು ಕೇಳಿದನು. ಕೃಷ್ಣನು ಕೇಳುವುದೇ ತಡ, ಭಕ್ತಿಯಿಂದ ಸಮರ್ಪಿಸಿದಳು. ಕುಬ್ಜೆಯ ಮೈ ವಕ್ರವಾಗಿದ್ದರೂ ಅವಳ ಮನವು ಅಬ್ಜದಂತೆ ಅರಳಿತ್ತು. ನಿರ್ಮಲವಾಗಿತ್ತು. ಮೈ ವಕ್ರವಾಗಿದ್ದರೂ ಮನದಲ್ಲಿ ಋಜುತ್ವವೇ ಇತ್ತು.

ಜನರಲ್ಲಿಯೂ ಎರಡು ವಿಧದ ಮನೋವೃತ್ತಿಯವರಿದ್ದಾರೆ. ಕೆಲವರು ತಮ್ಮ ಜೀವನದ ಸಕಲ ಭಾಗ್ಯಗಳೂ ಭಗವಂತನದ್ದೇ. ಅವನಿಗಾಗಿ ಅವರು ಏನು ತ್ಯಾಗ ಮಾಡಲೂ ಸಿದ್ಧರಿರುತ್ತಾರೆ. ಮತ್ತೆ ಕೆಲವರಿದ್ದಾರೆ –ಇದು ನನ್ನದು. ಇದು ನನ್ನ ಅಧಿಕಾರಕ್ಕೆ ಒಳಪಟ್ಟದ್ದು. ಇದನ್ನು ನನಗೆ ಬೇಕಾದಂತೆ ಉಪಭೋಗಿಸುತ್ತೇನೆ ಎನ್ನುತ್ತಾರೆ. ಮೊದಲು ಸಿಕ್ಕ ರಜಕನು ಈ ಗುಂಪಿಗೆ ಸೇರಿದವ. 'ಎಲ್ಲವೂ ನನ್ನದೇ' ಎಂದು ಅಹಂಕಾರದಿಂದ ಬೀಗುತ್ತಾ ಶ್ರೀಕೃಷ್ಣನ ವಿರುದ್ಧ ಎದೆಯುಬ್ಬಿಸಿ ನಿಂತ. ಆದರೆ ಸಾಧ್ವಿಯಾದ ಕುಬ್ಜೆಯು ಶ್ರೀಕೃಷ್ಣನ ಬಳಿಯಲ್ಲಿ ತ್ಯಾಗ ಸಮರ್ಪಣಾಭಾವಗಳ ಸಮ್ಮೂರ್ತಿಯಾಗಿ ನಿಲ್ಲುತ್ತಾಳೆ.

ಅಗಸ ಕುಬ್ಜೆಯರ ಬಳಿ ಭಗವಂತನು ಕೇಳಿದಂತೆ ನಮ್ಮ ಬಳಿಯೂ ಕೇಳುತ್ತಾನೆ. ಅವನು ಕೇಳುವುದು ನಮಗೆ ಕೇಳುತ್ತಲೇ ಇಲ್ಲ. ನಮ್ಮ ಬಳಿ ಇರುವ ಸಂಪತ್ತೆಲ್ಲವೂ ಅವನ ಸೇವೆಗೋಸ್ಕರವೇ ಮೀಸಲಾಗಿದೆ. ಅವನಿಗೋಸ್ಕರ ನಮ್ಮ ಸ್ವತ್ತನ್ನು ಸಮರ್ಪಿಸಿದಾಗ ನಮಗೇ ತಿರುಗಿ ನೀಡುತ್ತಾನೆ. ಆದ್ದರಿಂದ ತ್ಯಾಗದ ಮನೋಭಾವ ವನ್ನು ಬೆಳೆಸಿಕೊಳ್ಳಬೇಕೆಂಬುದು ಈ ಕಥೆಯಿಂದ ತಿಳಿದುಬರುತ್ತದೆ. ಮುಂದೆ ಗಂಧ ನೀಡಿದ ಕುಬ್ಜೆಯ ಗಲ್ಲವನ್ನು ಎತ್ತಿ ಹಿಡಿದು ಅವಳ ವಕ್ರತೆಯನ್ನು ಪರಿಹರಿಸಿದ. ನಮ್ಮ ಸೊತ್ತನ್ನು ಭಗವಂತನಿಗಾಗಿಯೇ ಸಮರ್ಪಿಸಿದರೆ ಕುಬ್ಜೆಯನ್ನು

ಸರಳಗೊಳಿಸಿದಂತೆ ನಮ್ಮನ್ನು ಸರಿಪಡಿಸುತ್ತಾನೆ. ನಾವೆಲ್ಲರೂ ನೇರವಾಗಿ ವರ್ತಿಸುತ್ತಿಲ್ಲ. ಮನಸ್ಸು ಕುಬ್ಜವಾಗಿದೆ. ಅಂಕುಡೊಂಕಿನ ವ್ಯವಹಾರದ ಮನಸ್ಸಿನ ಓರೆಕೋರೆಗಳನ್ನು ಶ್ರೀಕೃಷ್ಣನು ತಿದ್ದಿ ಸರಿಪಡಿಸುತ್ತಾನೆ.

ವಕ್ರ ಜೀವನವನ್ನು ಬಿಟ್ಟು ಭಕ್ತಿ ಜೀವನವನ್ನು ನಡೆಸಿದಲ್ಲಿ ನಮ್ಮ ಮನಸ್ಸಿನ ಕುಟಿಲತೆಯನ್ನೂ ಪರಿಹರಿಸುತ್ತಾನೆ ಎಂಬ ಸಂದೇಶವನ್ನು ಈ ಪ್ರಸಂಗದಿಂದ ಅರಿತು ಕೊಳ್ಳಬೇಕು.

ಅನಂತರ ಶ್ರೀಕೃಷ್ಣನು ಧನುಸ್ಸಿರುವ ಜಾಗಕ್ಕೆ ತೆರಳಿದನು ಬಲಿಷ್ಠವಾದ ಧನುಸ್ಸನ್ನು ಅನಾಯಾಸವಾಗಿ ಹೆದೆ ಏರಿಸಿದನು. ಆ ಕ್ಷಣದಲ್ಲಿಯೇ ಮದ್ದಾನೆಯ ಕೈಯಲ್ಲಿ ಸಿಕ್ಕಿದ ಕಬ್ಬಿನ ಜಲ್ಲೆಯಂತೆ ಧನುಸ್ಸು ಭಗ್ನವಾಗಿ ಕೆಳಗೆ ಬಿತ್ತು. ಧನುಸ್ಸಿನ ಭೀಕರವಾದ ಶಬ್ದವನ್ನು ಕೇಳಿದ ಕಂಸನ ಧೈರ್ಯವೂ ಭಗ್ನವಾಯಿತು. ರಾತ್ರಿ ಇಡೀ ನಿದ್ರೆಯೇ ಬರಲಿಲ್ಲ. ತನಗಿನ್ನು ಉಳಿಗಾಲವೇ ಇಲ್ಲ ಎಂದು ಭಯಗ್ರಸ್ತನಾದ. ಕಂಸನ ಅಹಂಕಾರ ಗರ್ವಗಳೆಲ್ಲವೂ ನುಚ್ಚುನೂರಾಯಿತು. ನೂರಾರು ದುಃಸ್ವಪ್ನಗಳನ್ನು ಕಂಡ. ವಿಪರೀತ ಹೆದರಿದ. ಆದರೂ ಭಂಡ ಧೈರ್ಯವನ್ನು ಮಾಡಿ ದೊಡ್ಡ ಸಭೆಯೊಂದನ್ನು ಏರ್ಪಡಿಸಿದ. ಅರಮನೆಯ ಹೊರಗೆ ಬಲಿಷ್ಠವಾದ ಕುವಲಯಾ ಪೀಡನೆಂಬ ಆನೆಯನ್ನು ಒಳ ಭಾಗದಲ್ಲಿ ಜಗತ್ಪ್ರಸಿದ್ಧ ಮಲ್ಲರನ್ನು, ಇವರೆಲ್ಲರನ್ನು ದಾಟಿ ಬಂದರೆ ಸಾವಿರಾರು ಸೈನ್ಯಗಳಿಂದ ಸಹಿತನಾದ ಸ್ವತಃ ಕಂಸ. ಹೀಗೆ ಅನೇಕ ತಂತ್ರಗಾರಿಕೆಯನ್ನು ಹೂಡಿ ಕಂಸನು ಯುದ್ಧಕ್ಕೆ ಸಿದ್ಧನಾದ.

ಮರುದಿವಸ ಸಿರಾಡಂಬರದ ನೀಲಾಂಬರದ ಸೊಬಗಿನ ಶ್ರೀಕೃಷ್ಣನು ಎಳವೆಯ ರಾದ ಗೋಪಾಲರೊಟ್ಟಿಗೆ ಸಂತೋಷದ ಹೆಜ್ಜೆಗಳನ್ನಿಡುತ್ತಾ ಬರುತ್ತಿದ್ದಾನೆ. ಬರು ವಾಗ ಎದುರಿಗೆ ಯಾರಿಗೂ ಎದುರಿಸಲಾಗದ ಸಲಗವಾದ ಕುವಲಯಾಪೀಡನೆಂಬ ಆನೆಯು ಕೃಷ್ಣನನ್ನು ಪೀಡಿಸಲು ಬಂತು. ಲೀಲಾವಿಹಾರಿಯಾದ ಶ್ರೀಕೃಷ್ಣನು ಅದರ ದಂತವನ್ನು ಹಿಡಿದು ಹಿಂದೆ ಮುಂದೆ ಜಗ್ಗಾಡಿ ಸಂಹರಿಸಿದ. ಕೃಷ್ಣ ಬಲರಾಮರು ಒಂದೊಂದು ದಂತಗಳನ್ನು ಧರಿಸಿ ಕಂಸನ ನರಕಪ್ರಯಾಣಕ್ಕೆ ನಿರ್ವಿಘ್ನತೆಯನ್ನು ಸೂಚಿಸುತ್ತಾ ಮುಂದೆ ಸಾಗಿದರು.

## ರಂಗನ ರಂಗೇರಿದ ರೂಪ

ರಂಗಮಂಟಪದೊಳಗೆ ಪ್ರವೇಶಿಸುತ್ತಿರುವ ಶ್ರೀಕೃಷ್ಣನು ರಂಗೇರಿದ ಪ್ರಭೆಯಿಂದ ಕಂಗೊಳಿಸುತ್ತಿದ್ದಾನೆ. ಅಲ್ಲಿ ನೆರೆದ ಜನರಿಗೆಲ್ಲ ಶ್ರೀಕೃಷ್ಣನು ಒಂದೊಂದು ರೀತಿಯಲ್ಲಿ ಗೋಚರಿಸಿದನೆಂದು ಬಹಳ ಸುಂದರವಾಗಿ ಬಣ್ಣಿಸುತ್ತಾರೆ–

**ಮಲ್ಲಾನಾಮಶನಿರ್ನೃಣಾಂ ನರವರಃ ಸ್ತ್ರೀಣಾಂ ಸ್ಮರೋ ಮೂರ್ತಿಮಾನ್ ।**
**ಗೋಪಾನಾಂ ಸ್ವಜನೋಽಸತಾಂ ಕ್ಷಿತಿಭೃತಾಂ ಶಾಸ್ತಾ ಸ್ವಪಿತ್ರೋಃ ಶಿಶುಃ ।**
**ಮೃತ್ಯುರ್ಭೋಜಪತೇರ್ವಿರಾಡವಿದುಷಾಂ ತತ್ತ್ವಂ ಪರಂ ಯೋಗಿನಾಮ್ ।**
**ವೃಷ್ಣೀನಾಂ ಚ ಗತಿಃ ಸದೈವ ಶುಶುಭೇ ರಂಗೇಽಚ್ಯುತಃ ಸಾಗ್ರಜಃ ॥**

— (೧೦-೪೧-೧೭)

ಜಗಜ್ಜಟ್ಟಿಗಳಿಗೆಲ್ಲ ಸಿಡಿಲಿನಂತೆ ಗೋಚರಿಸಿದ. ಮಾನವರಿಗೆಲ್ಲ ಸರ್ವೋತ್ತಮನಂತೆ, ಸ್ತ್ರೀಯರಿಗೆಲ್ಲ ಸಾಕ್ಷಾತ್ ಮನ್ಮಥನಂತೆ, ಗೋಪಾಲಕರಿಗೆ ತಮ್ಮನಂತೆ ಕ್ಷತ್ರಿಯರಿಗೆಲ್ಲ ಶಾಸಕನಂತೆ, ವಸುದೇವದೇವಕಿಯರಿಗೆ ಮಗನಂತೆ, ಕಂಸನಿಗೆ ಮೃತ್ಯುವಿನಂತೆ, ಯೋಗಿಗಳಿಗೆಲ್ಲ ಪರಮತತ್ವದಂತೆ, ಯಾದವರಿಗೆಲ್ಲ ಪರದೈವನಾಗಿಯೂ ಗೋಚರಿಸುತ್ತಾ ಸಕಲ ಕಣ್ಮನಗಳನ್ನು ಸೆಳೆಯುತ್ತಾ ಬಲಾಗ್ರಜನೊಟ್ಟಿಗೆ ರಂಗಸ್ಥಳವನ್ನು ಪ್ರವೇಶಿಸಿದ.

ಜನರಿಗೆಲ್ಲ ಕೃಷ್ಣನನ್ನು ನೋಡಿದಷ್ಟೂ ಮತ್ತೂ ನೋಡಬೇಕೆನಿಸುತ್ತವೆ ವಿನಾ ಸಾಕು ಎನಿಸಲಿಲ್ಲ.

ಕೃಷ್ಣನ ಸ್ವಾದುವಾದ ಸೌಂದರ್ಯವನ್ನು ಕಣ್ಣಿಳಿಂದ ಕುಡಿದರು. ಅನಿಮಿಷರಾಗಿ ನೋಡಿದರು ತೋಳುಗಳಿಂದ ಓಡಿದಪ್ಪಿಕೊಳ್ಳುವ ಆನಂದವನ್ನನುಭವಿಸಿದರು. ನಾಲಿಗೆಯಿಂದ ರಸದ ಸವಿಯನ್ನನುಭವಿಸಿ ಸುಖವನ್ನು ಹೊಂದಿದರು. ನಾಸಾಪುಟಗಳಿಂದ ಮೂಸುವ ಆನಂದವನ್ನನುಭವಿಸಿದರು ಎನ್ನುತ್ತಾರೆ ವ್ಯಾಸರು–

ಪಿಬಂತ ಇವ ಚಕ್ಷುರ್ಭ್ಯಾಂ ಲಿಹಂತ ಇವ ಜಿಹ್ವಯಾ ।
ಜಿಘ್ರಂತ ಇವ ನಾಸಾಭ್ಯಾಂ ಶ್ಲಿಷ್ಯಂತ ಇವ ಬಾಹುಭಿಃ ॥ — (೪೧–೨೧)

ಎಂದು. ಮುಂದೆ ವಜ್ರಕಾಯರಾದ ಚಾಣೂರಮುಷ್ಟಿಕರು ಕೃಷ್ಣ–ಬಲರಾಮರನ್ನು ಸಮೀಪಿಸಿದರು. ಬೆಟ್ಟದ ಗಾತ್ರದ ಜಟ್ಟಿಗಳು ಪುಟ್ಟ ಬಾಲಕರ ವಿರುದ್ಧವಾಗಿ ಮುಷ್ಟಿಯುದ್ಧಕ್ಕೆ ಬರುತ್ತಿರಲು ಅಲ್ಲಿ ನೆರೆದ ಜನರೆಲ್ಲರೂ ಬಾಯಿಯ ಮೇಲೆ ಬೆರಳಿಟ್ಟರು. ಪುಟ್ಟ ಬಾಲಕರೊಡನೆ ಇಂತಹ ಮಲ್ಲರು ಸೆಣಸಾಡುವುದು ಅನ್ಯಾಯ ಅಧರ್ಮವೆಂದು ಸಮಗ್ರ ಸಭೆಯೇ ಆಕ್ರೋಶ ವ್ಯಕ್ತಿಪಡಿಸಿತು. ಸುಕುಮಾರ ರೂಪದ ಬಾಲಕರಿಗೂ ಭಯಂಕರಾಕೃತಿಯ ಮಲ್ಲರಿಗೂ ಸಾಮ್ಯವಿದೆಯೆ? ಈ ಬಾಲಕರೊಡನೆ ಮಲ್ಲಯುದ್ಧವನ್ನು ಏರ್ಪಡಿಸಿದುದು ಅಧರ್ಮವಲ್ಲವೇ? ಎಂದು ಎಲ್ಲರೂ ಕಂಸನನ್ನು ಶಪಿಸಿದರು. ಯುದ್ಧ ಆರಂಭವಾಯಿತು. ಎಲ್ಲರೂ ಕೃಷ್ಣನೇ ಗೆಲ್ಲಲಿ ಎಂದು ಹಾರೈಸುತ್ತಿದ್ದಾರೆ. ಶ್ರೀಕೃಷ್ಣಬಲರಾಮರಾದರೂ ತಡಮಾಡದೆ ಮಿಂಚಿನ ವೇಗದಿಂದ ಅವರ ಮೇಲೆರಗಿ ಅತ್ತ ಇತ್ತ ಸುತ್ತು ವರಸೆಗಳನ್ನು ಪ್ರಕಟಿಸುತ್ತಾ ಅವರೀರ್ವರನ್ನೂ ಸಂಹರಿಸಿದರು. ಪ್ರಬಲರಾದ ಜಟ್ಟಿಗಳೇ ಅಸು ನೀಗಲು ಉಳಿದ ಅಲ್ಪಬಲದ ಮಲ್ಲರೆಲ್ಲರೂ ಬದುಕುವ ಆಸೆಯಿಂದ ಒಡನೆ ಓಡಿಹೋದರು.

ಶ್ರೀಕೃಷ್ಣನು ಚಾಣೂರನನ್ನು ಓಡಿದು ಭುವಿಗಪ್ಪಳಿಸಿದನೇಕೆ? ಎಂಬುದಕ್ಕೆ ಸ್ವಾರಸ್ಯಪೂರ್ಣವಾಗಿ ಉತ್ತರಿಸಿದ್ದಾರೆ–

ಬಾಲಮಲ್ಲಕರ ಚೂರ್ಣಿತ ಭಾಸ್ವನ್ನಾರಿಕೇಲ ತುಲನಾಂ ಸ ಜಗಾಮ ।
ಅನ್ಯಲೋಕಗಮನೋದ್ಯತ ಭೀತೋತ್ತಂಸಕಂಸ ಪರಿಪಂಥಿಸುಶಾಂತ್ಯೈ ॥
— (ರು. ವಿ. ೧೧–೪೬)

ಕಂಸನ ಪರಲೋಕಯಾತ್ರೆಯು ಪ್ರಾರಂಭವಾಗಿದೆ. ಯಮಸದನಕ್ಕೆ ನಿರ್ವಿಘ್ನವಾಗಿ ಸಾಗಬೇಕಿದೆ. ಯಾತ್ರೆಯ ನಿರ್ವಿಘ್ನತೆಗೆ ನಾವೆಲ್ಲರೂ ತೆಂಗಿನಕಾಯಿಯನ್ನು ನೀವಳಿಸಿ ಒಡೆಯುತ್ತೇವೆ. ಅದರಂತೆ, ಹೆದರಿದ ಕಂಸನ ಪರಲೋಕಯಾತ್ರೆಯೂ ನಿರ್ವಿಘ್ನ ವಾಗಿ ಸಾಗಲೆಂದು ಚಾಣೂರನ ತಲೆ ಎಂಬ ನಾರಿಕೇಲವನ್ನು ಕೃಷ್ಣನು ಒಡೆದ ಎನ್ನುತ್ತಾರೆ.

ಬಲರಾಮನೂ ಮುಷ್ಟಿಯಿಂದ ಮುಷ್ಟಿಕನನ್ನು ಮರ್ದಿಸಿ ಸಂಹರಿಸಿದ ಬಳಿಕ ಜನರೆಲ್ಲರೂ ಆನಂದಭರಿತರಾದರು. ಕಂಸನೊಬ್ಬನು ಹತಾಶನಾದ. ಜನರೆಲ್ಲರು ಸಂತೋಷ ಸಂಭ್ರಮಗಳಿಂದ ಭಲೆ ಭಲೆ ಎನ್ನುತ್ತಾ ಚಪ್ಪಾಳೆ ತಟ್ಟಲಾರಂಭಿಸಿದರು. ವಾದ್ಯ, ಕಹಳೆ ಎಲ್ಲವನ್ನು ಊದಲಾರಂಭಿದರು. ಕಂಸನಿಗೆ ಈ ಹಿಂಸೆಯನ್ನು ಸಹಿಸಲಾರದೆ ಎಲ್ಲರಿಗೂ ಆದೇಶಿಸಿದ –"ಯಾರೂ ಕರತಾಡನ ಮಾಡಬೇಡಿರಿ. ಭೇರಿ ಬಾರಿಸದಿರಿ. ವಾದ್ಯ ಊದಬೇಡಿ ಆನಂದದಿಂದ ಹಿರಿಹಿಗ್ಗಬೇಡಿ" ಎಂದು ಆದೇಶಿಸಿದ. ಜನರ ಸಂತಸವನ್ನು ಸಹಿಸಲಾರದೆ ಅಸಹನೆಯಿಂದ ತಡೆದ. ಭಟರಿಗೆಲ್ಲ ಯುದ್ಧಕ್ಕೆ ಆದೇಶ ನೀಡಿದ.

ಕೃಷ್ಣನು ತಡಮಾಡದೆ ಥಟ್ಟನೆ ಕಂಸನು ಕುಳಿತಿದ್ದ ಎತ್ತರದ ಸಿಂಹಾಸನಕ್ಕೇರಿದ. ಕಂಸನೂ ಖಡ್ಗ ಹಿರಿಯಲು ಕಂಸನ ಜುಟ್ಟನ್ನು ಹಿಡಿದ ಗರುಡನು ಹಾವನ್ನು ಹಿಡಿವಂತೆ ಹಿಡಿದು ಮಂಚದಿಂದ ಕೆಳಗಡೆ ನೆಲಕ್ಕೆ ಕೆಡವಿದ. ತಾನು ಧುಮುಕಿದ. ಕಂಸನ ಪ್ರಾಣವನ್ನು ದೇಹದಿಂದ ಬೇರ್ಪಡಿಸಿದ.

ಕಂಸನ ಹಿಂಸೆಯಿಂದ ಅನೇಕ ಮಂದಿ ಯಾದವರು ದುಃಖಿತರಾಗಿ ಊರುಬಿಟ್ಟು ದೂರ ಓಡಿಹೋಗಿದ್ದರು. ಅವನ ದಬ್ಬಾಳಿಕೆಯನ್ನು ಸಹಿಸಲಾಗದೆ ಮಥುರೆಯನ್ನೇ ಬಿಟ್ಟು ನಿರಾಶ್ರಿತರಂತೆ ಬೇರೆಡೆ ಬದುಕುವ ನೀಚಾವಸ್ಥೆಯನ್ನು ಹೊಂದಿದ್ದರು.

ಜರ್ಮನ್‌ನಲ್ಲಿ ಹಿಟ್ಲರ್ ಎಲ್ಲರನ್ನೂ ಹೆದರಿಸಿ ಓಡಿಸಿದ್ದು ಅವನಿಗೆ ಹೆದರಿ ಜನರೆಲ್ಲ ಓಡಿಹೋದಂತೆ ಕಂಸನಿಗೆ ಹೆದರಿ ಜನರೆಲ್ಲ ಪಾಲಾಯನ ಮಾಡಿದ್ದರು. ಇಂತಹ ದುರಂತ ಹಿಂಸಾಕಾರ್ಯನಿರತನಾದ ಕಂಸನ ದಮನವನ್ನು ಮಾಡಿ ಜಗತ್ತಿಗೆ ಹಿತವನ್ನುಂಟುಮಾಡಿದ.

ಜನರೆಲ್ಲರೂ ದೊಡ್ಡ ಪೀಡೆ ತೊಲಗಿತೆಂದು ಆನಂದಭರಿತರಾಗಿದ್ದಾರೆ.

## ಅಧರ್ಮದ ನಾಶವಾಗಲಿ!

ಮಥುರಾಧಿಪನಾದ ಕಂಸ ಅಧರ್ಮದ ಮೂರ್ತಿಯಾಗಿದ್ದ. ಕೃಷ್ಣನ ಸಂಹಾರವೇ ಅವನ ಜೀವನದ ಉದ್ದೇಶವಾಗಿತ್ತು. ಅಕ್ರೂರನ ಮೂಲಕ ಮಥುರೆಗೆ ಕರೆತಂದ. ಶ್ರೀಕೃಷ್ಣನು ತನ್ನ ಅರಮನೆಗೆ ಬರಬಾರದೆಂದು ಊರಿನ ಹೊರಗೆ ಕುವಲಯಾಪೀಡ ಎಂಬ ಆನೆಯನ್ನು ನಿಲ್ಲಿಸಿದ್ದ. ಚಾಣೂರಮುಷ್ಟಿಕರೆಂಬ ಜಟ್ಟಿಗಳನ್ನು ನಿಲ್ಲಿಸಿದ್ದ. ಆದರೆ

ಸರ್ವಶಕ್ತನಾದ ಶ್ರೀಕೃಷ್ಣ ಎಲ್ಲರನ್ನೂ ಸಂಹರಿಸಿ ಕಂಸನ ಅರಮನೆಗೂ ಧಾವಿಸಿದ. ಜನರೆದುರಿಗೇ ಕಂಸನನ್ನು ಸಂಹರಿಸಿದ.

'ಅಹನ್ ಪರಿಘಮುದ್ಯಮ್ಯ ಪಶೂನಿವ ಮೃಗಾಧಿಪಃ'

ಭಾಗವತದ ಈ ಕಥೆಯು ನಮ್ಮ ಜೀವನಕ್ಕೂ ಅನ್ವಯವಾಗುತ್ತದೆ.

ನಮ್ಮ ಜೀವನವೇ ಮಥುರಾನಗರ. ನಮ್ಮ ಜೀವನದ ಕಂಸ ಎಂದರೆ ಅಧರ್ಮ. ಜೀವನದಲ್ಲಿ ಅಧರ್ಮವೇ ಅಧಿಕಾರ.

ಕಂಸನು ಕೃಷ್ಣನು ತನ್ನ ಅರಮನೆಗೆ ಬರಲೇಬಾರದೆಂದು ಆನೆಯನ್ನು ನಿಲ್ಲಿಸಿದ್ದ. ಆದರಂತೆ ಹೃದಯವೆಂಬ ಅರಮನೆಯಲ್ಲಿ ಕಂಸನೆಂಬ ಅಧರ್ಮ ಸ್ಥಿರವಾಗಿದೆ. ಭಗವಂತನಿಗೆ ಹೃದಯದಲ್ಲಿ ಸ್ಥಾನವೇ ಇಲ್ಲ. ಕುವಲಯಾಪೀಡ ಹೊರಗೆ ನಿಂತು ಹರಿಯನ್ನು ತಡೆದಂತೆ ಅಹಂಕಾರವೆಂಬ ಪೀಡೆ ಕೃಷ್ಣನು ಹೃನ್ಮಂದಿರಕ್ಕೆ ಬಾರದಂತೆ ತಡೆಯುತ್ತಿದೆ.

ಕೃಷ್ಣ ಒಳಗೆ ಬರಬೇಕಿದ್ದರೆ ಕುವಲಯಾಪೀಡನ ಸಂಹಾರ ಅನಿವಾರ್ಯವಾಯಿತು. ಅದರಂತೆಯೇ ನಮ್ಮೊಳಗೆ ಭಗವಂತ ನೆಲಸಬೇಕಿದ್ದರೆ ಅಹಂಕಾರ, ಮದ, ದರ್ಪಗಳ ದಮನ ಅತ್ಯಗತ್ಯ.

ಕಂಸನು ಅಧರ್ಮದ ಸಂಕೇತವಾದರೆ ಕೃಷ್ಣನು ಧರ್ಮದ ಸಂಕೇತ.

ಕೃಷ್ಣನು ಕಂಸನ ಅರಮನೆಗೆ ಪ್ರವೇಶಿಸಿ ಅವನನ್ನು ಸಂಹರಿಸಿದಂತೆ, ನಮ್ಮ ಜೀವನವೆಂಬ ಮಥುರಾನಗರಿಯನ್ನು ಶ್ರೀಕೃಷ್ಣನು ಪ್ರವೇಶಿಸಿ ಕಂಸನಂತಿರುವ ಅಧರ್ಮವನ್ನು ನಾಶಪಡಿಸಬೇಕು.

ಚಾಣೂರ, ಮುಷ್ಟಿಕ ಅವರ ಭೃತ್ಯರು ಎಲ್ಲರೂ ಶ್ರೀಕೃಷ್ಣನ ಗಮನಕ್ಕೆ ಅಡ್ಡಿಯಾದವರೇ. ಅದರಂತೆ ಧರ್ಮಕ್ಕೆ ಅಡ್ಡಿಯಾದದ್ದು ಅಹಂಕಾರ ಒಂದೇ ಅಲ್ಲ. ಕಾಮ, ಕ್ರೋಧ ಮುಂತಾದ ಅನೇಕ ಅಡ್ಡಿಗಳಿವೆ. ಧರ್ಮಮೂರ್ತಿಯಾದ ಕೃಷ್ಣನ ಆಗಮನಕ್ಕೆ ಪ್ರತಿಬಂಧಕವಾದ ಎಲ್ಲಾ ಆಸುರೀಶಕ್ತಿಗಳನ್ನು ಹತ್ತಿಕ್ಕಬೇಕು. ಅಧರ್ಮದ ನಾಶವೂ ಆಗಬೇಕು.

ಇದೇ ಕಂಸವಧೆಯನ್ನು ಮಾಡಿದ ಶ್ರೀಕೃಷ್ಣನ ಸಂದೇಶ. ಇದನ್ನರಿತು ನಡೆಯುವುದೇ ಜೀವನದ ಉದ್ದೇಶವಾಗಬೇಕು.

ಇಂತಹ ಉತ್ತಮ ಸಂದೇಶವನ್ನು ಉಪದೇಶಿಸಿದ ಮಹಾನುಭಾವರು ಶ್ರೀ ಶ್ರೀ ವಿಜಯಧ್ವಜತೀರ್ಥರು.

## ಭಕ್ತ ಭಗವಂತರ ಸಂಬಂಧ

ಕಂಸನ ಸಂಹಾರವಾದ ಬಳಿಕ ವಸುದೇವ ದೇವಕಿಯರನ್ನು ಬಂಧನದಿಂದ ಬಿಡಿಸಿದ. ಅವರಿಗೆ ವಂದಿಸಿದ. ನಂದಗೋಪನ ಬಳಿಸಾರಿ ಈ ರೀತಿ ಹೇಳಿದ.

ಪಿತರ್ಯುವಾಭ್ಯಾಂ ಸ್ನಿಗ್ಧಾಭ್ಯಾಂ ಪೋಷಿತೌ ಲಾಳಿತೌ ಭೃಶಮ್ ।
ಪಿತ್ರೋರಭ್ಯಧಿಕಾ ಪ್ರೀತಿರಾತ್ಮಜೇಷ್ವಾತ್ಮನೋಽಪಿ ಹಿ ॥ — (೧೦-೪೩-೨೧)

ತಂದೆಯೇ! ನೀವಿಬ್ಬರೂ ಅತ್ಯಂತ ಸ್ನೇಹದಿಂದ ನಮ್ಮಿಬ್ಬರನ್ನೂ ಪೋಷಿಸಿ ಲಾಲಿಸಿದಿರಿ! ನೀವು ನಿಮ್ಮನ್ನು ಪ್ರೀತಿಸುವುದಕ್ಕಿಂತಲೂ ಹೆಚ್ಚು ನಮ್ಮನ್ನು ಪ್ರೀತಿಸಿದ್ದೀರಷ್ಟೇ! ಎಂದು ಅವರನ್ನು ಸಮಾಧಾನಪಡಿಸಿದ. ನಂದನ ಸೇವೆಯಿಂದ ಸಂತುಷ್ಟನಾದ ಶ್ರೀಹರಿಯು ನಂದಕುಮಾರನೆಂದೇ ಪ್ರಸಿದ್ಧಿಯಾದ.

ಉಗ್ರಸೇನನನ್ನು ಪಟ್ಟಣದಲ್ಲಿರಿಸಿದ. ದೇಶವನ್ನು ಬಿಟ್ಟು ಬಹಳ ದೂರದ ತನಕ ಓಡಿಹೋಗಿದ್ದ ನಿರಾಶ್ರಿತರನ್ನೆಲ್ಲ ಕರೆದು ಅವರಿಗೆ ಜೀವನವನ್ನು ಕಲ್ಪಿಸಿಕೊಟ್ಟ. ಕೃಷ್ಣನ ಆಹ್ವಾನದಿಂದ ಸಂತಸದಿಂದ ಎಲ್ಲರೂ ಓಡೋಡಿ ಬಂದರು ಕೃಷ್ಣನ ಮುಖಾರವಿಂದದ ಸೊಬಗನ್ನು ಕಂಡ ವೃದ್ಧರೂ ಯೌವನವನ್ನು ಹೊಂದಿದರು.

ಉಗ್ರಸೇನನು ಕೃಷ್ಣನಿಗೆ ರಾಜ್ಯದಲ್ಲಿ ನೀನೇ ಕುಳಿತುಕೊಳ್ಳು ಎಂದು ಹೇಳಿದರೂ ಕೃಷ್ಣನು ಒಪ್ಪಲಿಲ್ಲ. ಕೃಷ್ಣನು ರಾಜ್ಯಕ್ಕಾಗಿ ಅಧಿಕಾರದ ದಾಹಕ್ಕಾಗಿ ಸ್ಥಾನವನ್ನೇರಬೇಕೆಂಬ ಹಂಬಲದಿಂದಾಗಿ ಕಂಸನನ್ನು ಸಂಹರಿಸಿದ್ದಲ್ಲ. ಲೋಕಕಂಟಕನಾಗಿ ಅಧರ್ಮಗಾಮಿಯಾದುದರಿಂದ ಅವನನ್ನು ಸದೆಬಡಿದಿರುವೆ. ಉತ್ಕೃಷ್ಟ ಮಾನವೀಯತೆಯನ್ನು ತೋರಿದ ಶ್ರೀಕೃಷ್ಣ ಸಾಮಾನ್ಯ ಮಾನವನಂತೆ ನಿರಾಡಂಬರದ ಜೀವನ ನಡೆಸುತ್ತಿದ್ದ. ಕಾಡಿನಂತಿದ್ದ ಮಥುರೆಯನ್ನು ಉತ್ತಮ ನಗರಿಯನ್ನಾಗಿ ಮಾಡಿದ

ಮುಂದೆ ಗರ್ಗಾಚಾರ್ಯರಿಂದ ಉಪನಯನ ಸಂಸ್ಕಾರವನ್ನು ೮ನೇ ವರ್ಷದಲ್ಲಿ ಪಡೆದ ಶ್ರೀಕೃಷ್ಣನು ಸಾಂದೀಪನಿಗಳ ಆಶ್ರಮಕ್ಕೆ ವಿದ್ಯಾಭ್ಯಾಸದ ನೆಪದಲ್ಲಿ ಅವರಿಗೆ ಅನುಗ್ರಹಿಸಲು ತೆರಳಿದ. ಗುರುದಕ್ಷಿಣೆಯಾಗಿ ಅವರ ಮೃತಪುತ್ರನು ಮರಳಿ ಬರುವಂತೆ ಮಾಡಿದ. ಮುಂದೆ ಶ್ರೀಕೃಷ್ಣನು ಯಾದವಶ್ರೇಷ್ಠನಾದ ಉದ್ಧವನನ್ನು ಕರೆದು ನಂದಗೋಕುಲಕ್ಕೆ ಹೋಗಿ ಬಾ ಎಂದನು. ಭಕ್ತವತ್ಸಲನಾದ ಶ್ರೀಕೃಷ್ಣನನ್ನು ನಿರೀಕ್ಷಿಸುತ್ತಾ ಸರ್ವಸುಖ ವನ್ನು ತ್ಯಾಗ ಮಾಡಿದ ಯಶೋದೆ, ಗೋಪಿಯರು, ಗೋಪಾಲಕರಿಗೆಲ್ಲ ಸಾಂತ್ವನ ವನ್ನು ಹೇಳಲೋಸುಗ ಕಳುಹಿಸಿಕೊಟ್ಟರು. ಗೋಕುಲಕ್ಕೆ ಆಗಮಿಸಿದ ಉದ್ಧವನು ಯಶೋದೆಯ ಬಳಿ ಒಂದು ಉತ್ತಮವಾದ ಮಾತನ್ನು ಶ್ರೀಕೃಷ್ಣನ ಬಗ್ಗೆ ಹೇಳುತ್ತಾನೆ.

ಯುವಯೋರೇವ ನೈವಾಯಮಾತ್ಮಜೋ ಭಗವಾನ್ ಹರಿಃ ।
ಸರ್ವೇಷಾಮಾತ್ಮಜೋ ಹ್ಯಾತ್ಮಾ ಪಿತಾ ಮಾತಾ ಸ ಈಶ್ವರಃ ॥
— (೧೦-೪೬-೪೧)

ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಕೃಷ್ಣನು ಕೇವಲ ನಿನಗೆ ಮಾತ್ರ ಪುತ್ರನೆಂದು ಭಾವಿಸಬೇಡ. ಅವನು ಸಕಲ ಜಗತ್ತಿಗೆ ಮಾನವಕೋಟಿಗೆ ತಂದೆ, ತಾಯಿ, ಪ್ರಭು ಎಲ್ಲವೂ ಆಗಿರುತ್ತಾನೆ. ಯಾರು ಕುಲವನ್ನು ಉದ್ಧರಿಸುತ್ತಾನೆಯೋ ಅವನೇ ಪುತ್ರನೆನಿಸುತ್ತಾನೆ. ನಮ್ಮೆಲ್ಲರ ಕುಲವನ್ನು ಉದ್ಧರಿಸುವ ಭಗವಂತ ನಮ್ಮೆಲ್ಲರಿಗೂ ಮಗನೇ ಆಗಿದ್ದಾನೆ. ಆದ್ದರಿಂದ ಕೇವಲ ನಿಮ್ಮೊಬ್ಬಳ ಸೊತ್ತಾಗಿ ಶ್ರೀಕೃಷ್ಣನು ಉಳಿದಿಲ್ಲ.

ಪ್ರಪಂಚದ ಸೊತ್ತಾಗಿ ಇದ್ದಾನೆ. ಅವನನ್ನು ಅಗಲಿದ್ದೇನೆ ಎಂದು ಎಂದೂ ದುಃಖಿಸಬೇಡ –ಎಂದು ಸಮಾಧಾನಪಡಿಸಿದ. ಕೃಷ್ಣ ಮತ್ತು ಯಶೋದೆಯರ ಸಂಬಂಧ– ಆಧ್ಯಾತ್ಮಿಕವಾದ ಭಕ್ತ ಮತ್ತು ಭಗವಂತರ ಸಂಬಂಧವೇ ಹೊರತು ಲೌಕಿಕವಾದ ವಿಕೃತ ಸಂಬಂಧವಲ್ಲ.

ನಾವು ಹತ್ತಿರದಲ್ಲಿದ್ದವರಿಗಿಂತಲೂ ಮಿಗಿಲಾಗಿ ದೂರದಲ್ಲಿದ್ದವರನ್ನೇ ಹೆಚ್ಚು ಆಲೋಚಿಸುತ್ತೇವೆ. ಮಗು ದೂರದಲ್ಲಿದ್ದಾಗ ತಾಯಿಯ ಕಾಳಜಿ ವಹಿಸುವಷ್ಟು ತೊಡೆಯಲ್ಲೇ ಇದ್ದಾಗ ಅಥವಾ ಹತ್ತಿರದಲ್ಲಿದ್ದಾಗ ವಹಿಸುವುದಿಲ್ಲ. ಅದರಂತೆ ನಿಮ್ಮೆಲ್ಲರಿಗೂ ಈ ಒಳ್ಳೆಯ ಸಂದರ್ಭ ಒದಗಿಬಂದಿದೆ. ಗೋಕುಲದಲ್ಲಿದ್ದಾಗ ಶ್ರೀಕೃಷ್ಣನನ್ನು ಎಷ್ಟು ಧ್ಯಾನ ಮಾಡುತ್ತಿದ್ದೀರೋ ಮಥುರೆಗೆ ತೆರಳಿದ ಬಳಿಕ ದುಪ್ಪಟ್ಟು ಮಾಡುತ್ತಿದ್ದೀರಿ ಹೆಚ್ಚು ಸ್ಮರಣೆಗೆ ಶ್ರೀಕೃಷ್ಣನು ಅವಕಾಶ ಮಾಡಿಕೊಟ್ಟಿರುತ್ತಾನೆ. ದೂರದಲ್ಲಿದ್ದರೂ ಮೊದಲಿಗಿಂತಲೂ ಹೆಚ್ಚು ನಿಮ್ಮಲ್ಲಿ ನೆಲೆಸಿದ್ದಾನೆ. ಚಿಂತಿಸಬೇಡಿ ಎಂದು ಉದ್ಧವನು ಶ್ರೀಕೃಷ್ಣ ಹೇಳಿದ ಸಂದೇಶವನ್ನು ಎಲ್ಲರಿಗೂ ತಿಳಿಸಿ ಸಾಂತ್ವನಗೊಳಿಸಿದ.

## ಎಲ್ಲವೂ ಹರಿ ಇಚ್ಛೆ ಎಂದು ಜಾರಿಕೊಳ್ಳದಿರಿ!!

ಶ್ರೀಕೃಷ್ಣಪರಮಾತ್ಮನು ಸಮಗ್ರ ದೇಶಕ್ಕಾಗುವ ಹಾನಿಯನ್ನು ತಪ್ಪಿಸಲು ಧೃತರಾಷ್ಟ್ರನಿಗೆ ಮೊದಲೇ ಎಚ್ಚರಿಕೆಯನ್ನು ನೀಡಬೇಕೆಂದು ತೀರ್ಮಾನಿಸಿ ಅಕ್ರೂರನನ್ನು ಕರೆಸಿದನು. ''ನನ್ನ ಪ್ರತಿನಿಧಿಯಾಗಿ ಧೃತರಾಷ್ಟ್ರನ ಬಳಿಗೆ ಹೋಗಿ ನನ್ನ ಸಂದೇಶಗಳನ್ನು ತಲುಪಿಸು'' ಎಂದು ಕಳುಹಿಸಿಕೊಟ್ಟನು. ಅದರಂತೆ ಅಕ್ರೂರನು ಧೃತರಾಷ್ಟ್ರನಿಗೆ ಪಾಂಡವರ ವಿಷಯದಲ್ಲಿ ದುರ್ಯೋಧನಾದಿಗಳು ಮಾಡಿರುವ ಪ್ರವೃತ್ತಿಗಳು ಜಗತ್ತಿಗೇ ಹಿತಕರವಾಗಿಲ್ಲ. ನಿನ್ನ ಸಹೋದರನಾದ ಪಾಂಡುವಿನ ಮಕ್ಕಳನ್ನು ನಿನ್ನ ಮಕ್ಕಳನ್ನು ಸಮಾನವಾಗಿ ಪಕ್ಷಪಾತವಿಲ್ಲದೆ ನೋಡಬೇಕು. ಧರ್ಮದಲ್ಲಿ ನಿಷ್ಠೆ, ವ್ಯವಹಾರದಲ್ಲಿ ಪ್ರಾಮಾಣಿಕತೆಗಳನ್ನು ಅಳವಡಿಸಿಕೊಂಡು ನಡತೆ–ಶೀಲಗಳಿಂದ ಪ್ರಜೆಗಳನ್ನೆಲ್ಲ ಸಂತೋಷಪಡಿಸುತ್ತಾ ಧರ್ಮದಿಂದ ರಾಜ್ಯಪರಿಪಾಲನೆ ಮಾಡಬೇಕು. ಸಾಮಾಜಿಕ ನ್ಯಾಯದಲ್ಲಿ ಯಾರಿಗೂ ವಂಚನೆಯಾಗಬಾರದು. ನೀನು ನಿನ್ನ ಮಕ್ಕಳ ಮೋಹಕ್ಕೆ ಬಲಿಯಾಗಬೇಡ'' ಮುಂತಾಗಿ ಕೃಷ್ಣನ ಸಂದೇಶವನ್ನು ಅರುಹಿದನು.

ಅಕ್ರೂರನ ಮಾತುಗಳನ್ನು ಸಾವಧಾನ ಚಿತ್ತದಿಂದ ಕೇಳಿದ ಧೃತರಾಷ್ಟ್ರನು –''ಅಕ್ರೂರ ನಿನ್ನ ಹಿತನುಡಿಗಳಿಗೆ ಕೃತಜ್ಞತೆಯನ್ನರ್ಪಿಸುತ್ತೇನೆ. ನಿನ್ನ ಮಾತು ನನಗೆ ಬಹಳ ಹಿತವಾಗಿದೆ. ಆದರೆ ಅದರ ಅನುಷ್ಠಾನ ಕಷ್ಟವಾಗಿದೆ. ನನ್ನ ಮಕ್ಕಳ ಮೇಲಿನ ಕುರುಡು ವ್ಯಾಮೋಹದಿಂದ ಅವರು ಕುಣಿಸಿದಂತೆ ಕುಣಿಯುತ್ತಿದ್ದೇನೆ''. ಇದೆಲ್ಲವೂ ಸತ್ಯ. ಆದರೆ ಎಲ್ಲದಕ್ಕೂ ಪ್ರೇರಕನಾದವ ಭಗವಂತನೇ ಅಲ್ಲವೇ? ಭೂಭಾರಹರಣಾರ್ಥವಾಗಿ ಅವತರಿಸಿದ ಶ್ರೀಕೃಷ್ಣನ ಸಂಕಲ್ಪವೇ ಹೀಗಿರಲು ನಾವೇನು ಮಾಡಲಾದೀತು. ಅವನು ಸ್ವತಂತ್ರನಾದ್ದರಿಂದ ಅವನ ಇಚ್ಛೆ ಹೇಗಿದೆಯೋ ಅದರಂತೆ

ನಡೆಯುತ್ತದೆ'' ಎಂದು ಹಾರಿಕೆಯ ಉತ್ತರವನ್ನು ನೀಡಿದ. ಕೃಷ್ಣನ ಸಂದೇಶವನ್ನು ಸ್ವೀಕರಿಸಿ ನ್ಯಾಯಮಾರ್ಗದಲ್ಲಿ ನಡೆಯುವುದರ ಬದಲಾಗಿ 'ಎಲ್ಲವೂ ದೇವರ ಇಚ್ಛೆಯಂತೆ ನಡೆಯುತ್ತದೆ; ನಾವೇನು ಮಾಡೋಣ!'' ಎಂದ.

ಇಂದೂ ಅನೇಕ ಮಂದಿ ಹೀಗೆಯೇ ಹೇಳುವುದುಂಟು. ಸರಿಯಾಗಿ ಜೀವನದಲ್ಲಿ ವರ್ತಿಸಬೇಕೆಂದು ಹೇಳಿದರೆ, ಇದು ಕಲಿಯುಗ! ದೇವರ ಸಂಕಲ್ಪವೇ ಹೀಗಿದೆ! ನಾವೇನು ಮಾಡೋಣ! ಎಂದು ಉತ್ತರಿಸುತ್ತಾರೆ. ನಮ್ಮ ಕರ್ತವ್ಯ ಜವಾಬ್ದಾರಿಗಳನ್ನು ಮರೆತು ಎಲ್ಲವನ್ನೂ ಕಲಿಯುಗದ ಮೇಲೆ ಹೊರೆಸಿ ಯಾವುದೇ ಧಾರ್ಮಿಕ ಜವಾಬ್ದಾರಿಯನ್ನು ಹೊಂದದೆ ಸ್ವಚ್ಛಂದ ಜೀವನ ನಡೆಯುತ್ತಿದ್ದೇವೆ. ಇದು ಧೃತ ರಾಷ್ಟ್ರನ ಮಾರ್ಗಾನುಸರಣೆಯಾದೀತು. ಕೃಷ್ಣ ಮೆಚ್ಚಬೇಕಾದರೆ ನಮಗೆ ವಿಹಿತವಾದ ಕರ್ತವ್ಯಗಳನ್ನು ಕಡ್ಡಾಯವಾಗಿ ಆಚರಿಸಲೇಬೇಕು! ಧೃತರಾಷ್ಟ್ರನಂತೆ ವರ್ತಿಸ ಬಾರದು.

ಧೃತರಾಷ್ಟ್ರ ಪುತ್ರವ್ಯಾಮೋಹದಿಂದ ಬಂಧಿತನಾಗಿ ಅದನ್ನು ಮುಚ್ಚಿಕೊಳ್ಳಲು ವೇದಾಂತ ಬಣ್ಣದ ಲೇಪಹಾಕಿ ಹಾರಿಕೆಯ ಉತ್ತರ ಕೊಟ್ಟ. ಇದನ್ನು ಕೇಳಿದ ಅಕ್ರೂರನು ಕುರುಕುಲಕ್ಕೆ ನಾಶ ತಪ್ಪಿದ್ದಲ್ಲ ಎಂದು ಭಾವಿಸಿ ಹಸ್ತಿನಾವತಿಗೆ ಮರಳಿ ಬಂದ– ಎಂಬಲ್ಲಿಗೆ ದಶಮ ಸ್ಕಂಧದ ಪೂರ್ವಾರ್ಧವು ಲಕ್ಷ್ಮೀಹಯಗ್ರೀವನಿಗೆ ಸಮರ್ಪಿತವಾಯಿತು.

## ಉತ್ತರಾರ್ಧ

## ಕುಲದ ಅಳಿವು ಉಳಿವುಗಳಿಗೆ ಕನ್ಯೆಯರು ಕಾರಣ!!

ಕಂಸನ ಮರಣದ ಅನಂತರ ಕಂಸನ ಪತ್ನಿಯರಾದ ಅಸ್ತಿ–ಪ್ರಾಸ್ತಿಯರು ತಮ್ಮ ತಂದೆಯಾದ ಜರಾಸಂಧನ ಬಳಿ ಆಗಮಿಸಿದರು. ತಮಗೆ ಶ್ರೀಕೃಷ್ಣನಿಂದ ಒದಗಿಬಂದ ವೈಧವ್ಯದ ಕಥೆಯನ್ನು ಪರಿಪರಿಯಾಗಿ ವಿಲಿಪಿಸುತ್ತಾ ತಿಳಿಸಿದರು. ಕೃಷ್ಣನ ಬಗ್ಗೆ ಮಗಧೇಶ್ವರನಿಗೆ ದ್ವೇಷವು ಉಕ್ಕೇರುವಂತೆ ಮಾತನಾಡಿದರು.

ಅಸ್ತಿಪ್ರಾಸ್ತಿಯರ ದುಷ್ಟ ಮನೋಭಾವದಿಂದ ಕಂಸನೇ ಮೃತನಾಗಿ ಹೋದ. ಈಗ ತಮ್ಮ ದುಷ್ಟ ಭಾವನೆಯಿಂದ ತಂದೆಯ ಕುಲವನ್ನು ನಾಶಪಡಿಸಲು ಪ್ರಯತ್ನಿಸು ತ್ತಿದ್ದಾರೆ.

ಮಥುರಾ ಯಾವುದು ಸರಿ.ಕನ್ಯೆಯರು ತಾವು ಹುಟ್ಟಿದ ಕುಲ ಮತ್ತು ತಾವು ಸೇರಿದ ಕುಲ ಎರಡನ್ನೂ ಉದ್ಧಾರಮಾಡಬೇಕು. ತಮ್ಮ ಧರ್ಮನಿಷ್ಠೆ ಭಗವದ್ಭಕ್ತಿ ಪತಿಸೇವೆಗಳಿಂದ ಕುಲವನ್ನುದ್ಧರಿಸುವ ಯೋಗ್ಯತೆ ಕನ್ಯೆಯರಿಗಿದೆ. ಆದರೆ ಅಸ್ತಿಪ್ರಾಸ್ತಿ ಯರ ದುರ್ನಡತೆಗಳಿಂದ ಕಂಸನು ಸತ್ತುಹೋದ. ಮಗಧನೂ ಅನರ್ಥದ ದಾರಿ ಹಿಡಿದ. ಉಭಯಕುಲವನ್ನೂ ಉದ್ಧಾರಮಾಡುವ ಬದಲು ಉಭಯಕುಲವನ್ನು

ನಾಶಪಡಿಸುವ ರೀತಿಯಲ್ಲಿ ಕೆಟ್ಟ ವ್ಯವಹಾರವನ್ನು ನಡೆಸಿದ್ದಾನೆ. ಅವರ ಮಾತಿನಿಂದ ಪ್ರಭಾವಿತನಾದ ಮಗಧೇಶನ ಸಿಟ್ಟು ಮುಗಿಲು ಮುಟ್ಟಿದೆ. ಸಮಗ್ರ ಯಾದವಕುಲ ವನ್ನೇ ವಧಿಸುವೆನೆಂದು ಸಂಕಲ್ಪಿಸಿದ. ಯಾರಿಗೂ ತಲೆಬಾಗದ ಪ್ರಪಂಚದ ಅದ್ವಿತೀಯ ಬಲವಂತನಾದ ನನ್ನನ್ನೇ ಎದುರಿಸುವಂತಹ ನನ್ನ ಅಳಿಯನನ್ನೇ ಸಂಹರಿಸುವಂತಹ ಎದೆಗಾರಿಕೆ ಒಬ್ಬ ಎಳೆಯ ಹುಡುಗನಿಗೆ ಬೆಳೆಯುತ್ತಿರುವುದು ನನಗೆ ದೊಡ್ಡ ಅಪಮಾನ'' ಎಂದು ಭಾವಿಸಿದ.

## ಅನ್ಯಾಯದಿಂದ ಅನರ್ಥ

ಒಮ್ಮೆ ಕೃಷ್ಣನನ್ನು ಸಂಹರಿಸುವ ಇಚ್ಛೆಯಿಂದ ಜರಾಸಂಧನು ಕುಳಿತಲ್ಲಿಂದಲೇ ಗದೆಯನ್ನು ಕೃಷ್ಣನ ಅರಮನೆಗೆ ಬಿಸುಟಬೇಕೆಂದು ತೀರ್ಮಾನಿಸಿದ.

ಇಂದು ಕುಳಿತ ಸ್ಥಳದಿಂದಲೇ ಕ್ಷಿಪಣಿಯನ್ನು ಹಾರಿಸಿ ನಗರವನ್ನೆಲ್ಲ ಧ್ವಂಸ ಮಾಡುವ ಪ್ರವೃತ್ತಿಯನ್ನು ನೋಡುತ್ತಿದ್ದೇವೆ. ಇದನ್ನು ಪ್ರಾರಂಭಿಸಿದವ ಜರಾಸಂಧ. ಅವನು ತನ್ನ ಪಾಟಲೀಪುತ್ರದಿಂದ ನೂರು ಯೋಜನದ ದೂರದ ಮಥುರೆಗೆ ಕೃಷ್ಣನ ಅರಮನೆಗೆ ತನ್ನ ಗದೆಯನ್ನು ಎಸೆದು ಕೃಷ್ಣನನ್ನು ಸಂಹರಿಸಬೇಕೆಂದು ಇಚ್ಛಿಸಿದ.

ಆದರೆ ಜರಾಸಂಧನಿಗೆ ಮಥುರೆಯು ಎಷ್ಟು ದೂರವಿದೆ ಎಂದು ನಿಖರವಾಗಿ ತಿಳಿದಿರಲಿಲ್ಲ. ಈ ಸಂದರ್ಭಕ್ಕೆ ಸರಿಯಾಗಿ ನಾರದರು ಅಲ್ಲಿಗೆ ಬಂದರು. ಜರಾಸಂಧನು ''ನಾರದರೇ! ಇಲ್ಲಿಂದ ಮಥುರಾನಗರಿಯು ಎಷ್ಟು ಯೋಜನ ದೂರದಲ್ಲಿದೆ ಎಂದು ಕರಾರುವಾಕ್ಕಾಗಿ ತಿಳಿಸಿರಿ'' ಎಂದ. ಜರಾಸಂಧನ ಉದ್ದೇಶವನ್ನರಿತ ನಾರದರು ಸ್ವಲ್ಪ ಚಮತ್ಕಾರಮಾಡಿದರು. ''ಮಗಧೇಶ! ಮಥುರೆಯು ಒಂದು ನೂರು ಯೋಜನವಿದೆ'' ಎಂದು ಹೇಳಿದರು. ಜರಾಸಂಧನು ನೂರುಯೋಜನವೆಂದು ತಿಳಿದು ಅದಕ್ಕೆ ಸರಿಯಾಗಿ ಬಲಪ್ರಯೋಗಿಸಿ ಗದೆಯನ್ನು ಎಸೆದ. ಗದೆಯು ಮಥುರೆಯ ಅರಮನೆ ಯಲ್ಲಿ ಬೀಳುವ ಬದಲು 'ಒಂದು' ಯೋಜನ ತಪ್ಪಿದ್ದರಿಂದ ಮಥುರೆಯ ಹೊರ ವಲಯದಲ್ಲಿ ಬಿದ್ದಿತು. ಕಾಡುಪ್ರದೇಶವಾದ್ದರಿಂದ ಪ್ರಜೆಗಳಿಗೂ ಏನೂ ತೊಂದರೆ ಯಾಗಲಿಲ್ಲ. ಆದರೆ ಜರಾಸಂಧನ ತಾಯಿಯಾದ ಜರೆಯ ತಲೆಗೇ ಬಿತ್ತು. ಕೃಷ್ಣನನ್ನು ಕೊಲ್ಲಬೇಕೆಂದಿದ್ದವ ಮಾತೃಹತ್ಯೆಯ ಘೋರ ಶಿಕ್ಷೆಗೆ ತುತ್ತಾದ. ಕೃಷ್ಣನಿಗೆ ಏನೂ ತೊಂದರೆಯಾಗಲಿಲ್ಲ. ಗದೆ ಬಿದ್ದಿದ್ದರೂ ತೊಂದರೆಯಾಗುತ್ತಿರಲಿಲ್ಲ.

ವಾದಿರಾಜರು ಈ ಸಂದರ್ಭದಲ್ಲಿ 'ಮಹಾತ್ಮರಿಗೆ ಏನಾದರೂ ಅನ್ಯಾಯ ಮಾಡಿದರೆ ಪರಿಣಾಮವನ್ನು ನಾವೇ ಅನುಭವಿಸಬೇಕಾಗುತ್ತದೆ. ಇದಕ್ಕೆ ಜರಾಸಂಧನೇ ಸಾಕ್ಷಿ ಎಂದು ತಿಳಿಸಿಕೊಟ್ಟಿದ್ದಾರೆ.

## ಜರಾಸಂಧ ಪರಾಭವ

ಮುಂದೆ ಅಸ್ತಿಪ್ರಾಸ್ತಿಯರ ಮಾತು ಕೇಳಿದ ಜರಾಸಂಧನು ಶ್ರೀಕೃಷ್ಣನನ್ನು ಸಂಹರಿಸಬೇಕೆಂಬ ಇಚ್ಛೆಯಿಂದ ಇಪ್ಪತ್ತಮೂರು ಅಕ್ಷೋಹಿಣಿ ಸೈನ್ಯವನ್ನು ಮಥುರೆಗೆ ತೆರಳಲು ಆಜ್ಞಾಪಿಸಿದ. ಜರಾಸಂಧನ ಆದೇಶದಂತೆ ಸಮರ್ಥ ರಾಜನಾದ ದ್ರುಪದ ಬಾಹ್ಲೀಕ ಮುಂತಾದವರೆಲ್ಲರೂ ಬಂದಿದ್ದಾರೆ. ವೀರಾಧಿವೀರರನ್ನೆಲ್ಲ ಜೊತೆ ಸೇರಿಸಿ ಬೃಹತ್ ಸೈನ್ಯದ ಜೊತೆಗೆ ಸಣ್ಣ ರಾಜ್ಯವಾದ ಮಥುರಾ ನಗರದ ಮೇಲೆ ಭಯಂಕರವಾದ ಆಕ್ರಮಣ ನಡೆಸಿದ.

ಜರಾಸಂಧನು ಯುದ್ಧದ ಮುನ್ನ ವಿದ್ಧ ಅನುವಿದ್ಧರನ್ನು ತನ್ನ ಸಂದೇಶ ಕೊಟ್ಟು ಕೃಷ್ಣನ ಬಳಿ ಕಳುಹಿಸಿದ. ಕೃಷ್ಣನ ಬಳಿ ಬಂದ ಅವರು "ನಮ್ಮ ಜರಾಸಂಧ ನಿನ್ನ ದರುಶನಕ್ಕಾಗಿ ಬಂದಿದ್ದಾನೆ. ನಿನ್ನನ್ನು ಕಾಣಬೇಕಂತೆ. ಅವನು ವಿಚಾರಮಾಡದೆ ತನ್ನ ಈರ್ವರು ಕುವರಿಯರನ್ನು ಕಂಸನಿಗೆ ಮದುವೆಮಾಡಿ ಕೊಟ್ಟ. ನಿನ್ನಂಥಹ ವೀರಾಧಿ ವೀರರು ಅವನ ಗಮನಕ್ಕೆ ಬರಲಿಲ್ಲ. ಅದಕ್ಕೆ ವೈರಾಗ್ಯ ಬಂದು ಜರಾಸಂಧನು ಅರಣ್ಯಕ್ಕೆ ಹೊರಟಿದ್ದಾನೆ.

ಅದಕ್ಕೆ ಮುನ್ನ ನಿನ್ನನ್ನೊಮ್ಮೆ ನೋಡಬೇಕಂತೆ. ಆದ್ದರಿಂದ ದರ್ಶನ ನೀಡಬೇಕೆಂದು ಗೇಲಿ ಮಾತನ್ನು ಹೇಳಿ ಕಳುಹಿಸಿದ್ದ.

ಶ್ರೀಕೃಷ್ಣನು ಪ್ರತಿಯಾಗಿ "ಜರಾಸಂಧನ ಮಾತು ಸತ್ಯವೇ ಆಗಲಿ! ಕಾಡಿಗೆ ಹೋಗುವಂತಾಗಲಿ. ಇದರಿಂದ ಲೋಕಕ್ಕೂ ಶ್ರೇಯಸ್ಸಿದೆ. ಅವನಿಗೂ ಶ್ರೇಯಸ್ಸಿದೆ" ಎಂದು ಹೇಳಿ ಕಳುಹಿಸಿದ. ಮುಂದೆ ಭಯಂಕರವಾದ ಕದನ ಏರ್ಪಟ್ಟಿತು. ಜರಾಸಂಧನನ್ನು ಬಲರಾಮನೇ ಸೋಲಿಸಿದ. ಕೃಷ್ಣನಿಂದ ತಪ್ಪಿಸಿಕೊಂಡು ಅವನ ಬಳಿ ಯುದ್ಧಮಾಡಿದರೆ ಅಲ್ಲಿಯೂ ಘೋರ ಪರಾಜಯವನ್ನನುಭವಿಸಿದ. ಮೊದಲನೆಯ ಯುದ್ಧದಲ್ಲಿಯೇ ಭಾರೀ ಅಪಮಾನವನ್ನನುಭವಿಸಿದ. ಜಗತ್ತಿನಲ್ಲಿ 'ಜರಾಸಂಧನಿಗೆ ಸಮಾನರಾದವರೇ ಇಲ್ಲ' ಎಂದು ವಿಖ್ಯಾತನಾದ ಜರಾಸಂಧನು ವೀರಾಧಿವೀರರೊಟ್ಟು ಸೇರಿ ಬಂದಿದ್ದರೂ ಸಣ್ಣ ನಗರವೆನಿಸಿದ ಮಥುರಾಪುರವನ್ನು ಜಯಿಸಲಾಗಲಿಲ್ಲ. ವಿಪರೀತವಾಗಿ ಅಪಮಾನಿತನಾಗಿ ಓಂದೆ ಓಡುವಂತಹ ಅತ್ಯಂತ ನೀಚ ಮಟ್ಟದ ಸಂದರ್ಭ ಒದಗಿ ಬಂದಿತು. ಓಂದೆ ತಮಾಷೆಗೆ ಹೇಳಿದ ಸಂದರ್ಭವೇ ಸತ್ಯವಾಗಿ ಪರಿಣಮಿಸಿತು.

'ಅರಣ್ಯಕ್ಕೆ ತೆರಳುವೆನೆಂದು' ದುಃಖಿತನಾಗಿ ಹೊರಟ. ಆವಾಗ ಅವನ ಅನುಚರರೆಲ್ಲರೂ ಸಮಾಧಾನಪಡಿಸಿದರು. ಯುದ್ಧವೆಂದ ಬಳಿಕ ಜಯ–ಪರಾಜಯ ಇದ್ದದ್ದೇ. ಚಿಂತಿಸದಿರು! ಮರಳಿ ಯತ್ನವ ಮಾಡು! ಎಂದು ಹೇಳಿದಾಗ ನಾಚಿಕೆಯಿಂದ ಊರನ್ನು ಸೇರಿದ.

ಜರಾಸಂಧನನ್ನು ಅನಾಯಾಸವಾಗಿ ಸೋಲಿಸಿ ಕಳುಹಿಸಲು ಶ್ರೀಕೃಷ್ಣನ ಕೀರ್ತಿ ಲೋಕದಲ್ಲೆಲ್ಲ ಬೆಳಗಿತು. ಜಗತ್ತಿನ ಸರ್ವೋತ್ತಮಪುರುಷನೆಂದು ಜನರೆಲ್ಲ ಕೊಂಡಾಡಿದರು.

ಆದರೆ ಜರಾಸಂಧನು ತನ್ನ ಪ್ರಯತ್ನವನ್ನು ಬಿಡಲಿಲ್ಲ. ಹತ್ತಾರು ಬಾರಿ ಸೋತು ಕಂಗೆಟ್ಟು ಮತ್ತಷ್ಟು ಸೈನ್ಯವನ್ನು ಕಟ್ಟಿದನು. ಇತ್ತ ನಾರದರು ಕಾಲಯವನನೆಂಬ ಮಹಾ ದುಷ್ಟ ದೈತ್ಯನಿಗೆ ಶ್ರೀಕೃಷ್ಣಪರಾಕ್ರಮವನ್ನೆಲ್ಲ ಬಣ್ಣಿಸಲು ತನ್ನ ಪರಾಕ್ರಮವನ್ನು ತೋರಲೆಂದು ಮಥುರೆಯ ಮೇಲೆ ದಂಡೆತ್ತಿ ಬರುವುದಾಗಿ ಆಲೋಚಿಸಿದ.

ಮಥುರೆಯ ಮೇಲೆ ಎರಡು ಸೇನೆಗಳು ಎಗರಿದರೆ ಕೃಷ್ಣನು ಖಂಡಿತ ಉಳಿಯನೆಂದು ಜರಾಸಂಧನು ಆಲೋಚಿಸಿದ.

ಕೃಷ್ಣನ ಶಕ್ತಿ, ಬುದ್ಧಿ, ಸಾಮರ್ಥ್ಯಗಳನ್ನು ಎದುರಿಸಲಾಗದೆ ಜರಾಸಂಧನು ಹತ್ತಾರು ಬಾರಿ ಓಡಿಹೋಗಿದ್ದನು. ಆದರೆ ಅನೇಕ ಮಂದಿ ಕೃಷ್ಣನೇ ಓಡಿದನೆಂದು ತಪ್ಪು ಭಾವಿಸಿದ್ದಾರೆ. ಇದು ಸರಿಯಲ್ಲ. ಯಕ್ಷಗಾನ ಪ್ರಸಂಗಗಳಲ್ಲಿಯೂ ಕೃಷ್ಣನನ್ನು ಜರಾಸಂಧನೇ ಸೋಲಿಸಿದ ಎಂದು ಚಿತ್ರಿಸುತ್ತಾರೆ. ಎಂದೆಂದಿಗೂ ಶ್ರೀಕೃಷ್ಣನು ಸೋತಿಲ್ಲ.

ಹಾಗಿದ್ದಲ್ಲಿ ಜರಾಸಂಧನನ್ನು ಕೊಲ್ಲಬಹುದಿತ್ತಲ್ಲವೇ? ಎಂದರೆ ಶ್ರೀಕೃಷ್ಣನ ಉದ್ದೇಶ ವ್ಯಾಪಕವಾಗಿದೆ. ಅವನು ಅನೇಕಾನೇಕ ಸಂಖ್ಯೆಯ ದುಷ್ಟರನ್ನು ಸಂಹರಿಸಬೇಕಿದೆ. ಅವರನ್ನೆಲ್ಲ ಅಲ್ಲಲ್ಲಿ ಹೋಗಿ ಸಂಹರಿಸುವ ಬದಲು ಅವರನ್ನೆಲ್ಲ ಸಂಗ್ರಹಿಸಿ ತಾನಾಗಿಯೇ ಬಳಿಗೆ ಕರೆದು ತರುವ ಜವಾಬ್ದಾರಿಯನ್ನು ಜರಾಸಂಧನೇ ಭರಿಸಿದ್ದಾನೆ. ಬಳಿ ಬಂದಾಗ ಭೂಭಾರ ದುಷ್ಟರನ್ನು ನಿಗ್ರಹಿಸಬಹುದು ಎಂದು ಆಲೋಚಿಸಿ ಜರಾಸಂಧನನ್ನು ಬಿಟ್ಟ. ಪ್ರತಿ ಬಾರಿಯೂ ಸೈನ್ಯವನ್ನು ಸಂಹರಿಸಿ ಅವನನ್ನು ಬಿಡುತ್ತಿದ್ದ. ಹೀಗೆ ದುಷ್ಟಸಂಹಾರದ ಕಾರ್ಯದ ಉದ್ದೇಶದಿಂದ ಉಳಿಯಬಿಟ್ಟನೇ ಹೊರತು ಸುಮ್ಮನೆ ಬಿಟ್ಟಾನೇ?!

## ಇತಿಹಾಸದ ಅದ್ಭುತ ದೊರೆ

ವಿದೇಶೀ ದೊರೆಯಾದ ಕಾಲಯವನನು ಶ್ರೀಕೃಷ್ಣನನ್ನು ಸಂಹರಿಸುವ ಉದ್ದೇಶದಿಂದ ಮೂರುಕೋಟಿ ಸೈನ್ಯವನ್ನು ಹೊಂದಿ ಬಂದ. ಒಂದು ಬದಿಯಿಂದ ಜರಾಸಂಧನ ಸೈನ್ಯ. ಮತ್ತೊಂದು ಬದಿಯಿಂದ ಕಾಲಯವನನ ಸೈನ್ಯ. ಎರಡೂ ಕಡೆಯಿಂದ ಮಥುರೆಯನ್ನು ಆಕ್ರಮಿಸಿ ಧೂಳೀಪಟವನ್ನಾಗಿ ಮಾಡಬೇಕೆಂದು ಆಲೋಚಿಸಿದ್ದರು. ಇಂತಹ ಭಾರೀ ದೊಡ್ಡ ಆಕ್ರಮಣತಂತ್ರವನ್ನು ಆಲೋಚಿಸಿದಾಗ ಶ್ರೀಕೃಷ್ಣನು ಅದ್ಭುತವಾದ ಕಾರ್ಯವನ್ನೇ ಮಾಡಿದ.

ತನ್ನ ರಾಜಧಾನಿಯನ್ನೇ ಬದಲಾಯಿಸಿದ. ಮಥುರೆಗೆ ಕಾಲಯವನ ಬರುವುದ ರೊಳಗೆ ಸಮುದ್ರದ ಮಧ್ಯದಲ್ಲಿ ನೂತನವಾದ ದ್ವಾರಕೆಯನ್ನು ನಿರ್ಮಿಸಿ ಜನರೆಲ್ಲರೂ ನಿರಾತಂಕವಾಗಿ ಉಸಿರೆಳೆಯುವಂತೆ ಮಾಡಿದ.

ಇತಿಹಾಸದಲ್ಲಿಯೇ ಇಂತಹ ಅದ್ಭುತವನ್ನು ಯಾರೂ ಮಾಡಿಲ್ಲ. ದುರಾತ್ಮರು ಭಾರೀ ನಾಶಮಾಡಬೇಕೆಂದು ಆಲೋಚಿಸಿದಾಗ ರಾಜಧಾನಿಯನ್ನೆಲ್ಲ ದ್ವಾರಕೆಗೆ ಬದಲಾಯಿಸಿ ಎಲ್ಲರನ್ನು ಉಳಿಸಿದ. ಇಂತಹ ಅದ್ಭುತವಾದ ರಾಜಕೀಯ ತಂತ್ರವನ್ನು ಯಾರೂ ಊಹಿಸಲು ಸಾಧ್ಯವಿಲ್ಲ.

ಹಿಂದೆ ಹೀಗೆಯೇ ಒಬ್ಬ ತುಘಲಕ್ ಎಂಬುವವ ತನ್ನ ರಾಜಧಾನಿಯನ್ನು ಬದಲಾಯಿಸಲು ಪ್ರಯತ್ನಮಾಡಿ ಹುಚ್ಚು ದೊರೆ ಎನಿಸಿಕೊಂಡ. ಬದಲಾವಣೆ ಮಾಡುವಾಗ ಸೈನಿಕರು ನಾಗರಿಕರೆಲ್ಲ ನಾಶಗೊಂಡು ಹುಚ್ಚು ಕೆಲಸವೆಂದು ನಿಂದಿಸಿದರು. ಆದರೆ ನಮ್ಮ ಶ್ರೀಕೃಷ್ಣ ಯಾರಿಗೂ ಯಾವುದೇ ತೊಂದರೆಯಾಗದಂತೆ ಬದಲಾಯಿಸಿ ಅಪಾಯದಿಂದ ಉಳಿಸಿದ. ಎಣೆ ಉಂಟೆ ಹರಿಕರುಣೆಗೆ!!

## ಅನರ್ಥಕ್ಕೆ ಕಾರಣವಾದ ಐಕ್ಯ

ಶ್ರೀಕೃಷ್ಣನು ಬಲರಾಮನೊಂದಿಗೆ ಕಾಲಯವನನನ್ನು ಎದುರಿಸಲು ಸಿದ್ಧನಾದನು. ಶ್ರೀಕೃಷ್ಣನು ಎಂದಿನಂತೆ ಒಂದು ಪದ್ಮಮಾಲೆಯನ್ನು ಧರಿಸಿ ನಿರಾಯುಧನಾಗಿ ಪುರದ್ವಾರದಿಂದ ಹೊರಬಂದನು. ಸುಂದರ ಸುಕುಮಾರಗಾತ್ರನಾದ ಶ್ಯಾಮವರ್ಣದ ಶ್ರೀಕೃಷ್ಣನನ್ನು ಕಾಲಯವನನು ಕಂಡನು. ನಿರಾಯುಧನಾದ ಶ್ರೀಕೃಷ್ಣನನ್ನು ನಿರಾಯುಧನಾಗಿಯೇ ಎದುರಿಸುವೆನೆಂದು ಆಲೋಚಿಸಿ, ಕೃಷ್ಣನನ್ನು ಹಿಡಿಯಲು ಬಂದನು. ಹಸನ್ಮುಖದಿಂದಲೇ ಗಂಭೀರ ಹೆಜ್ಜೆಗಳನ್ನಿಡುತ್ತಿದ್ದ ಶ್ರೀಕೃಷ್ಣನು ಕಾಲ ಯವನನು ಬಳಿಗೆ ಬಂದ ಕೂಡಲೇ ಓಡಲಾರಂಭಿಸಿದ. ಕಾಲಯವನನು ಮತ್ತಷ್ಟು ಉನ್ಮತ್ತನಾದ. ಶ್ರೀಕೃಷ್ಣನು ತನಗೇ ಹೆದರಿ ಓಡುತ್ತಿರುವನೆಂದು ಭಾವಿಸಿದ. ಅವನ ಬೆನ್ನಿಡಿದು ಓಡಿದ. ಕೃಷ್ಣನು ಗುಹೆಯೊಂದನ್ನು ಪ್ರವೇಶಿಸಿದ. ತಾನು ಒಳಗೆ ನುಸುಳಿದ. ಕೃಷ್ಣನು ಅಲ್ಲಿ ಕಾಣಿಸಲಿಲ್ಲ. ಮಲಗಿದ ಒಬ್ಬ ವ್ಯಕ್ತಿ ಕಂಡ.

ಶ್ರೀಕೃಷ್ಣನೇ ಕಪಟವೇಷತೊಟ್ಟು ಮಲಗಿದ್ದಾನೆಂದು ಭಾವಿಸಿದ. ಅಲ್ಲಿ ಮಲಗಿದ ಮುಚುಕುಂದ ರಾಜನನ್ನೇ ಕೃಷ್ಣನೆಂದು ಭಾವಿಸಿ ಝಾಡಿಸಿ ಒದ್ದ. ಅಕಾರಣವಾಗಿ ಎಬ್ಬಿಸಿದವರು 'ಯಾರೆಂದು ಎಚ್ಚರಗೊಂಡ ಮುಚುಕುಂದ ಮುಕುಂದನ ಪ್ರೇರಣೆ ಯಂತೆ ಉರಿ ಕಣ್ಣಳನ್ನು ಅರಳಿಸಿದ. ಕಾಲಯವನನು ಕ್ಷಣಮಾತ್ರದಲ್ಲಿ ಸುಟ್ಟು ಭಸ್ಮೀಭೂತನಾದ.

ಇಕ್ಷ್ವಾಕುವಂಶದಲ್ಲಿ ಸತ್ಯಸಂಧನಾದ ಮುಚುಕುಂದ ರಾಜನಿದ್ದನು. ದೈತ್ಯ ದಾನವರು ದೇವತೆಗಳಿಗೆ ಅನ್ಯಾಯವೆಸಗಲು ದೇವತೆಗಳ ಪ್ರಾರ್ಥನೆಯಂತೆ ಅವರ ವಿರುದ್ಧ ಹೋರಾಟ ನಡೆಸಿ ದೇವತೆಗಳಿಗೆ ಜಯವನ್ನು ದೊರಕಿಸಿಕೊಡುತ್ತಿದ್ದ.

ಪರಮಸಂತುಷ್ಟರಾದ ದೇವತೆಗಳು ಸಹಾಯಮಾಡಿದ ಮುಚುಕುಂದ ರಾಜನಿಗೆ 'ಮೋಕ್ಷವನ್ನೊಂದು ಬಿಟ್ಟು ಮತ್ತೇನು ಬೇಕಾದರೂ ಬೇಡಿಕೋ'' ಎಂದರು. ಬಹುಕಾಲ ಯುದ್ಧದಿಂದ ಶ್ರಮಗೊಂಡ ಮುಚುಕುಂದನು ''ನೀವು ಸಂತುಷ್ಟರಾಗಿದ್ದಲ್ಲಿ ಏಕಾಂತ ಸ್ಥಳದಲ್ಲಿ ನಿಶ್ಚಿಂತೆಯಿಂದ ಮಲಗಿ ನಿದ್ರಿಸುವಂತೆ ಅನುಗ್ರಹಿಸಿರಿ!'' ಎಂದು ಬೇಡಿದ. ದೇವತೆಗಳು 'ತಥಾಸ್ತು' ಎಂದರು. ಅದರೊಟ್ಟಿಗೆ ಯಾರು ನಿನ್ನ ನಿದ್ರೆಗೆ ಭಂಗ ತರುವರೋ ಅವರು ನಿನ್ನ ದೃಷ್ಟಿಮಾತ್ರದಿಂದ ನಷ್ಟವಾಗಿ ಹೋಗುವರೆಂದೂ ನುಡಿದರು. ಆ ಮುಚುಕುಂದ ಮಹಾರಾಜನು ಮಲಗಿ ನಿದ್ರಿಸುತ್ತಿದ್ದಾಗ ಕಾಲಯವನ ಬಿದ್ದು ಭಸ್ಮವಾದ.

ಮುಚುಕುಂದ ನಿದ್ರೆಮಾಡಬೇಕೆಂಬ ಹುಚ್ಚು ವರವನ್ನು ಬೇಡಿಕೊಂಡಿದ್ದ. ಅವನು ಮಾಡಿದ ಉಪಕಾರಕ್ಕೆ ಇದೊಂದು ವರವೇ ಎನಿಸಿರಲಿಲ್ಲ. ಶ್ರೀಕೃಷ್ಣಪರಮಾತ್ಮನು ಆ ಗುಹೆಯಲ್ಲಿ ತಾನು ಅವಿತು ನಿಂತು ತನ್ನ ಭಕ್ತನ ಮೂಲಕ ಕಾಲಯವನನನ್ನು ಸಂಹರಿಸಿದ. ಕಾಲಯವನನ ದಹನದಿಂದ ಲೋಕಕ್ಕೇ ಕಲ್ಯಾಣ ಉಂಟಾಯಿತು.

ವಾದಿರಾಜ ಗುರುಸಾರ್ವಭೌಮರು ಈ ಸಂದರ್ಭದಲ್ಲಿ ಒಂದು ಮೌಲಿಕವಾದ ಅಧ್ಯಾತ್ಮ ಸಂದೇಶವನ್ನು ತಿಳಿಸಿದ್ದಾರೆ. ಕೃಷ್ಣನನ್ನು ಕಾಲಯವನ ಬೆನ್ನಟ್ಟಿ ಬಂದ. ಕೃಷ್ಣನು ಗುಹೆಯೊಳಗೆ ಅಡಗಿದ. ಅಲ್ಲಿ ಮುಚುಕುಂದನು ಇದ್ದಾನೆ. ಕಾಲಯವನನಿಗೆ ಇಬ್ಬರಿದ್ದಾರೆ ಎಂದು ತಿಳಿಯಲೇ ಇಲ್ಲ. ಮಲಗಿದ ಮುಚುಕುಂದನೇ ಮುಕುಂದ ನೆಂದು ಭ್ರಮಿಸಿ ಅವನನ್ನು ತುಳಿದ. ಉರಿಗಣ್ಣಿಗೆ ತುತ್ತಾಗಿ ಬೂದಿಯಾದ. ಅದರಂತೆ ತಮ್ಮ ಹೃದಯಗುಹೆ ...ಲ್ಲಯೂ ಭಗವಂತನಿದ್ದಾನೆ. ಜೀವನೂ ಇದ್ದಾನೆ. 'ದ್ವಾ ಸುಪರ್ಣಾ' ಎನ್ನುವ ಮಂತ್ರದಲ್ಲಿ ಇದು ಇದೆ. ಜೀವ-ಬ್ರಹ್ಮರು ಭಿನ್ನರಾಗಿಯೇ ಇದ್ದಾರೆ. ಇದು ಶ್ರೀಮದಾಚಾರ್ಯರು ನೀಡಿದ ಉಪನಿಷತ್ತಿನ ಸಂದೇಶ. ಒಬ್ಬನೇ ಜೀವ ಬ್ರಹ್ಮವಾಗನು. ದೇವ ಬೇರೆ. ದೇಹಿ ಬೇರೆ. ಹೃದಯದ ಒಳಗೆ ಜೀವ ಮತ್ತು ಪರಮಾತ್ಮ ಎಂಬ ಎರಡು ಹಕ್ಕಿಗಳಿವೆ.

ಈ ಭೇದವನ್ನು .ಗುರುತಿಸದೆ ಜೀವನನ್ನೇ ಪರಮಾತ್ಮನೆಂದು ಭಾವಿಸಬಾರದು. ಅತ್ಯಂತ ವಿರುದ್ಧವಾದ ಗುಣಗಳುಳ್ಳ ಇವರು ಎಂದೂ ಐಕ್ಯವನ್ನು ಹೊಂದಲು ಸಾಧ್ಯವಿಲ್ಲ.

ಗುಹೆಯೊಳಗೆ ಮುಚುಕುಂದನೂ ಇದ್ದ. ಪರಮಾತ್ಮನೂ ಇದ್ದ. ಆದರೆ ಕಾಲಯವನನಿಗೆ ಈ ಭಿನ್ನತೆಯ ಅರಿವಾಗಲಿಲ್ಲ. ಮುಚುಕುಂದನನ್ನೇ ಕೃಷ್ಣನೆಂದು ಭಾವಿಸಿದ. ದುರಂತ ಮೃತ್ಯುವಿಗೆ ತುತ್ತಾದ. ಅದರಂತೆ ನಮ್ಮ ಹೃದಯಗುಹೆ ಯೊಳಗಿರುವ ಜೀವ-ಪರಮಾತ್ಮರ ಭೇದವನ್ನು ಗುರುತಿಸದೆ 'ಅಹಂ ಬ್ರಹ್ಮಾಸ್ಮಿ' ಎಂದು ಭಾವಿಸಿದರೆ ದುರಂತಕ್ಕೀಡಾಗುತ್ತೇವೆ. ಹೀಗೆ ಸರಿಯಾದ ತತ್ವಜ್ಞಾನ ಇಲ್ಲದಿದ್ದರೆ ಜೀವನದಲ್ಲಿ ಅನರ್ಥ ಖಚಿತ ಎಂಬಂತಹ ಆಧ್ಯಾತ್ಮಿಕ ಸಂದೇಶವನ್ನು ವಾದಿರಾಜರು ತೋರಿಸಿಕೊಟ್ಟಿದ್ದಾರೆ.

## ಮುಚುಕುಂದಗೆ ಮುಕ್ತಿನೀಡಿದ ಮುಕುಂದ

ಮುಂದೆ ಮುಚುಕುಂದನು ಮುಕುಂದನನ್ನು ಕಂಡ. ಪರಮಸಂತುಷ್ಟನಾಗಿ ಬಗೆಬಗೆಯಾಗಿ ಸ್ತೋತ್ರವನ್ನು ಸಲ್ಲಿಸುತ್ತಿದ್ದಾನೆ–

ಪಾದಾಂಬುಜಂ ತೇ ನ ಭಜತ್ಯಸನ್ಮತಿಃ
ಗೃಹಾಂಧಕೂಪೇ ಪತಿತೋ ಯಥಾ ಪಶುಃ ।
ಮಮೈಷ ಕಾಲೋಽಜಿತ ನಿಷ್ಫಲೋ ಗತೋ
ರಾಜ್ಯಶ್ರಿಯೋನ್ನದ್ಧಮದಸ್ಯ ಭೂಪತೇಃ ॥

-- (೧೦-೫೪-೪೮)

"ಪಸುಗಳು ಮೇವಿನ ಆಸೆಯಿಂದ ಹುಲ್ಲು ಮುಚ್ಚಿದ ಹಾಳು ಬಾವಿಯಲ್ಲಿ ಬೀಳುವಂತೆ ಸಕಲ ಪ್ರಾಣಿಗಳು ಸಂಸಾರಕೂಪದಲ್ಲಿ ಬಿದ್ದು ನರಳುತ್ತಿರುವರು. ನಾನೂ ಹಿಂದೆ ರಾಜನಾಗಿದ್ದಾಗ ಐಶ್ವರ್ಯ ಮದಮತ್ತನಾಗಿ ಜೀವನವನ್ನು ವ್ಯರ್ಥಮಾಡಿ ಕೊಂಡೆ. ಅಸ್ಥಿರವಾದ ವೈಭವವನ್ನು ಸ್ಥಿರವೆಂದು ಭ್ರಮಿಸಿ ಅಭಿಮಾನವೆಂಬ ಪಾಶವನ್ನು ಬಿಗಿದುಕೊಂಡು ಅಶಾಂತಿಯ ಜೀವನವನ್ನು ನಡೆಸಿದೆ. ಆದರು ನನ್ನ ಮೇಲಿನ ಕರುಣೆಯಿಂದ ಅನುಗ್ರಹಿಸಲು ಬಂದಿರುವಿ! ನನಗೆ ನೀನು ಕೊಡುವ ಯಾವ ಇಷ್ಟಾರ್ಥಗಳೂ ಬೇಡ. ಕೇವಲ ನಿನ್ನ ಪಾದಸೇವೆಯ ಭಾಗ್ಯವೊಂದನ್ನು ಒದಗಿಸು" 'ನ ಕಾಮಯೇಽನ್ಯಂ ತವ ಪಾದಸೇವನಾತ್' ಎಂದು ಅತ್ಯಂತ ಭಕ್ತಿಯಿಂದ ಭಗವಂತನನ್ನು ಪ್ರಾರ್ಥಿಸಿದ. ಭಗವಂತನು ತನ್ನ ಇಚ್ಛಾಮಾತ್ರದಿಂದ ಇಲ್ಲಿ ಎರಡು ಕ್ರಿಯೆಗಳನ್ನು ನಡೆಸಿದ.

ಒಂದು –ಮುಚುಕುಂದನ ದೃಷ್ಟಿಯ ಮೂಲಕ ಕಾಲಯವನನೆಂಬ ವನವನ್ನು ಭಸ್ಮೀಕರಿಸಿದ. ಇನ್ನೊಂದು ತನ್ನ ಕರುಣಾಪೂರ್ಣ ದೃಷ್ಟಿಯಿಂದ ಮುಚುಕುಂದನನ್ನು ಕಂಡ. ಅವನ ಸಂಸಾರವೆಂಬ ವನವನ್ನು ದಹಿಸಿದ. ಹೀಗೆ ಅಭಕ್ತನ ಸಂಹಾರ ಭಕ್ತನ ಉದ್ಧಾರವೆಂಬ ಎರಡು ಕ್ರಿಯೆಗಳನ್ನು ಎರಡು ಕ್ಷಣದಲ್ಲಿ ಮಾಡಿದ.

ಶ್ರೀಕೃಷ್ಣನು ಕಾಲಯವನನನ್ನು ದಹಿಸಿ ಮುಚುಕುಂದನನ್ನು ಅನುಗ್ರಹಿಸಿ ದ್ವಾರಕೆಗೆ ಬರುವಷ್ಟರಲ್ಲಿ ಅಗಾಧವಾದ ಸೈನ್ಯವನ್ನು ಕಟ್ಟಿಕೊಂಡು ಮಾಗಧನು ದ್ವಾರಕೆಗೆ ಲಗ್ಗೆ ಇಟ್ಟಿದ್ದ. ಬಲರಾಮಕೃಷ್ಣರು ಅವರನ್ನು ಬೆನ್ನಟ್ಟಿ ಓಡಿಸಿದರು.

## ರುಕ್ಮಿಣೀ ಪ್ರೇಮಪತ್ರದ ಸಂದೇಶ

ಮುಂದೆ ಜರಾಸಂಧನೇ ಮೊದಲಾದ ದೈತ್ಯರು ಶ್ರೀಕೃಷ್ಣನಿಗೆ ತಿಳಿಯದಂತೆ ಭೀಷ್ಮಕನ ಕುವರಿಯಾದ ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಟ್ಟು ವಿವಾಹ ಮಾಡಬೇಕೆಂದು ತೀರ್ಮಾನಿಸಿದರು. ಯಾರಿಗೂ ತಿಳಿಯದಂತೆ ಒಮ್ಮಿಂದೊಮ್ಮೆಲೆ ವಿವಾಹಕಾರ್ಯಕ್ರಮ ಏರ್ಪಡಿಸಿ ಶೀಘ್ರದಲ್ಲಿ ಮುಗಿಸೋಣವೆಂದು ತೀರ್ಮಾನಿಸಿ ದರು.

ಇತ್ತ ರುಕ್ಮಿಣೀದೇವಿಯರು ನಿರಂತರ ಹರಿಯನ್ನೇ ಸ್ಮರಿಸುತ್ತಾ ಶ್ರೀಕೃಷ್ಣನೇ ತನಗೆ ಪತಿಯಾಗಬೇಕೆಂದು ಒಬ್ಬ ಬ್ರಾಹ್ಮಣನ ಮೂಲಕ ಪ್ರೇಮಪತ್ರವನ್ನು ಬರೆದು ಕಳುಹಿಸಿದಳು. ಉತ್ತಮ ಜ್ಞಾನಿಯಾದ ಬ್ರಾಹ್ಮಣನು ಭಕ್ತಿಯಿಂದ ಜೋಪಾನವಾಗಿ ಆ ಪತ್ರವನ್ನು ತಂದು ಕೃಷ್ಣನಿಗರ್ಪಿಸಿದನು.

ರುಕ್ಮಿಣಿಯು ಬರೆದ ಪ್ರೇಮಪತ್ರವು ಇಂದಿನ ಮಂದಿಯು ಬರೆಯುವ ಪ್ರೇಮಪತ್ರದಂತಲ್ಲ. ಈ ಪತ್ರವನ್ನು ಪ್ರತಿಯೊಬ್ಬರು ಓದಿ ಅದರಂತೆ ನಡೆಯಬೇಕು. ಕೃಷ್ಣನಿಗೆ ಪ್ರೇಮಪತ್ರ ಬರೆಯಲು ರುಕ್ಮಿಣಿಯು ನಾಚಲಿಲ್ಲವಂತೆ. ಕೃಷ್ಣರುಕ್ಮಿಣಿಯರ ಪ್ರೇಮ ಅನಾದಿಕಾಲದಿಂದ ನಿತ್ಯನೂತನವಾಗಿ ಹರಿದು ಬರುತ್ತಿದೆ. ಅವಳು ಭಕ್ತಿಯಿಂದ ಹೀಗೆ ಬರೆದಿದ್ದಾಳೆ–

ಶ್ರುತ್ವಾ ಗುಣಾನ್ ಭುವನಸುಂದರ ಸಂಗವಾಂಸ್ತೇ
ನಿರ್ವಿಶ್ಯ ಕರ್ಣವಿವರಂ ಹರತೋಽಂಗತಾಪಮ್ ।
ರೂಪಂ ಪರಂ ಭುವನಮಂಗಳ ಮಂಗಳಂ ತೇ
ತ್ವಯ್ಯಚ್ಯುತಾವಿಶತಿ ಚಿತ್ತಮಪತ್ರಪಂ ಮೇ ॥ — (೧೦-೫೨-೩೭)

ಓ ತ್ರಿಲೋಕಸುಂದರನೆ! ಭುವನಮೋಹನ ರೂಪನಾದ ಶ್ರೀಹರಿಯೇ! ನಿನ್ನ ಅನಂತಕಲ್ಯಾಣಗುಣಗಳನ್ನು ಕೇಳುತ್ತಾ ಆಕರ್ಷಿತಳಾಗಿ ಲಜ್ಜೆಯ ಹದ್ದನ್ನೂ ಮೀರಿ ನಿನ್ನನ್ನೇ ಬಯಸುತ್ತಿರುವೆ. ನಿನ್ನ ಗುಣಮಹಿಮೆಗಳಿಗೆ ನಾನು ಎಷ್ಟುಮಾತ್ರಕ್ಕೂ ಅರ್ಹಳಲ್ಲ. ನನ್ನ ದೇಹಾತ್ಮಗಳನ್ನು ಸಕಲ ಇಂದ್ರಿಯಕಲಾಪವನ್ನು ನಿನ್ನ ಅಡಿದಾವರೆ ಗಳಿಗೆ ಸಮರ್ಪಿಸುತ್ತಿದ್ದೇನೆ. ನೂರು ಜನ್ಮ ಕಳೆದರೂ ಅಡ್ಡಿಯಿಲ್ಲ. ನೀನೇ ನನಗೆ ಪತಿಯಾಗಬೇಕು. ದುರಾತ್ಮರ ತೆಕ್ಕೆಗೆ ಸಿಕ್ಕದಿರುವಂತೆ ನನ್ನನ್ನು ರಕ್ಷಿಸಿ ವರಿಸುವ ಜವಾಬ್ದಾರಿ ನಿನ್ನದು. ನಾನೇನಾದರೂ ಸತ್ಕರ್ಮಗಳನ್ನು ಆಚರಿಸಿದಲ್ಲಿ ಅದರ ಫಲ ವಾಗಿಯಾದರೂ ನಿನ್ನ ಅಡಿದಾವರೆಗಳಲ್ಲಿ ನನ್ನನ್ನು ಸೇರಿಸಿಕೋ. ಶಿಶುಪಾಲಾದಿಗಳಿಂದ ರಕ್ಷಿಸು ಎಂದು ಪ್ರಾರ್ಥಿಸಿದಳು.

ಇಲ್ಲಿ ಲಕ್ಷ್ಮೀಸ್ವರೂಪಳಾದ ರುಕ್ಮಿಣೀದೇವಿಯು ತನ್ನ ನಿಜವಾದ ಬಯಕೆ ಏನೆಂಬುದನ್ನು ಕೃಷ್ಣನ ಮುಂದಿಟ್ಟಳು. ಕೃಷ್ಣನಿಗೆ ಅವಳ ಬಯಕೆ ಏನೆಂಬುದು ತಿಳಿದೇ ಇದೆ. ಆದ್ದರಿಂದ ಭಕ್ತರನ್ನು ಉದ್ದೇಶವಾಗಿಟ್ಟು ಪತ್ರ ಬರೆದು ಒಂದು ಉತ್ತಮವಾದ ಸಂದೇಶವನ್ನು ನೀಡಿದ್ದಾಳೆ.

ನಾವು ಹೇರಳವಾಗಿ ಸಂಪತ್ತನ್ನು ಗಳಿಸುತ್ತೇವೆ. ನಾವು ಗಳಿಸಿದ ಸಂಪತ್ತೇ(ಲಕ್ಷ್ಮೀ) ರುಕ್ಮಿಣೀ. ಕೆಟ್ಟ ವ್ಯಸನಗಳು, ನೀಚ ಪ್ರವೃತ್ತಿಗಳೇ ಶಿಶುಪಾಲ. ರುಕ್ಮಿಣಿಯನ್ನು ಕೃಷ್ಣ ಸ್ವೀಕರಿಸಬೇಕೆ ವಿನಾ ಶಿಶುಪಾಲನನ್ನಲ್ಲ. ಅದರಂತೆ ಗಳಿಸಿದ ಸಂಪತ್ತನ್ನು ಭಗವಂತನ ಆರಾಧನೆಗಾಗಿ ಅರ್ಪಿಸಬೇಕೇ ವಿನಾ ಲೌಕಿಕ ಸುಖಭೋಗಗಳಿಗಾಗಲೀ ದುರ್ವ್ಯಸನ ಗಳಿಗಾಗಲೀ ಅಲ್ಲ.

ರುಕ್ಮಿಣಿಯ ಮುಂದೆ ಶಿಶುಪಾಲ–ಕೃಷ್ಣರೆಂಬ ಎರಡು ವರಗಳು ಪ್ರಾಪ್ತವಾದಾಗ ಕೃಷ್ಣನೇ ನನಗೆ ಬೇಕೆಂದು ಹಠಹಿಡಿದಳು. ಅದರಂತೆ ಲಕ್ಷ್ಮಿಯನ್ನು ಗಳಿಸಿದ ಬಳಿಕ

ಅದನ್ನು ವಿನಿಯೋಗಿಸಲು ದುರ್ವ್ಯಸನಗಳು, ಹರಿಸೇವೆ ಎಂಬ ಎರಡು ಮಾರ್ಗಗಳು ತೋರುತ್ತವೆ. ಈ ಸಂದರ್ಭದಲ್ಲಿ ಲಕ್ಷ್ಮಿಗೆ ಯಾವುದು ಸಮ್ಮತವಾದದ್ದೆಂದು ವಿಚಾರ ಮಾಡಿ ಆ ಕಾರ್ಯಕ್ಕೆ ವಿನಿಯೋಗಿಸಬೇಕು. ರುಕ್ಮಿಣಿಯು ತಾನು ಹಠದ ಮೂಲಕ ಹರಿಪಾದಸೇವೆಯೇ ಬೇಕೆಂದು ಪ್ರಕಟಿಸಿದಳು. ಅದನ್ನರಿತು ಅವನಿಗರ್ಪಿಸಿದಾಗಲೇ ವಿವಾಹವು ಅರ್ಥಪೂರ್ಣ ಎನಿಸುವುದು. ಅದರಂತೆ ದೊರೆತ ಸಂಪತ್ತನ್ನು ಲಕ್ಷ್ಮಿಯು ಬಯಸುವಂತೆ ಹರಿಪಾದಸೇವೆಗೆ ಸಮರ್ಪಿಸುವುದೇ ಮಂಗಳ ಎನಿಸುವುದು. ಇಂತಹ ರುಕ್ಮಿಣೀ ವಿವಾಹವನ್ನು ನಾವೆಲ್ಲರೂ ಪ್ರತಿನಿತ್ಯವೂ ಆಚರಿಸಬೇಕು. ನಮ್ಮ ಮನೆ ಮಕ್ಕಳು ಸಂಸಾರ ಇವುಗಳೇ ಶಿಶುಪಾಲ ಎನಿಸಿವೆ. ಸಂಸಾರದ ರಕ್ಷಣೆಗೆ ಮಾತ್ರ ನಮ್ಮ ಸಂಪತ್ತನ್ನು ವಿನಿಯೋಗಿಸಿದರೆ ರುಕ್ಮಿಣಿಯನ್ನು ಶಿಶುಪಾಲನಿಗೆ ನೀಡಿದಂತೆ. ಇಷ್ಟಕ್ಕೇ ನಮ್ಮ ಸಂಪತ್ತು ವಿನಿಯೋಗವಾಗದೇ ಶ್ರೀಕೃಷ್ಣನ ಪಾದಸೇವೆಗೆ ವಿನಿಯೋಗವಾಗ ಬೇಕೆಂಬ ಸಂದೇಶ ಈ ಪ್ರಸಂಗದಿಂದ ಮೂಡಿಬಂದಿದೆ.

ಮುಂದೆ ಶ್ರೀಕೃಷ್ಣನು ಪತ್ರವನ್ನು ತಂದೊಪ್ಪಿಸಿದ ಬ್ರಾಹ್ಮಣನಿಗೆ ಹಸ್ತಲಾಘವವನ್ನು ಕೊಟ್ಟು ಪ್ರೀತಿಯಿಂದ ಅನುಗ್ರಹಿಸಿದ. ಆವಾಗ ಬ್ರಾಹ್ಮಣನಿಗೆ ಧೈರ್ಯಬಂದಿತು. ಶ್ರೀಕೃಷ್ಣನು ಪತ್ರವನ್ನು ತಂದುಕೊಟ್ಟ ನನ್ನ ಕೈಯನ್ನೇ ಹಿಡಿದನೆಂದ ಬಳಿಕ ರುಕ್ಮಿಣಿಯ ಕೈಯನ್ನು ಖಂಡಿತ ಹಿಡಿಯುತ್ತಾನೆಂದು ಭಾವಿಸಿದ.

ಪತ್ರ ಓದಿದ ಕೃಷ್ಣ ತಡಮಾಡದೆ ವಿದರ್ಭನಗರಿಗೆ ಆಗಮಿಸಿದ. ಕೃಷ್ಣನು ಆಗಮಿಸಿದ್ದಾನೆಂದು ತಿಳಿದ ಕೂಡಲೇ ಜರಾಸಂಧಾದಿಗಳಿಗೆ ದಿಗಿಲಾಯಿತು. ನಾವು ಗುಟ್ಟಾಗಿ ಇಷ್ಟೆಲ್ಲ ಏರ್ಪಾಡು ಮಾಡಿದರೂ ಶ್ರೀಕೃಷ್ಣನು ಬಂದ. ಅವನಿಗೆ ಹೇಗೆ ತಿಳಿಯಿತೆಂದು ಕಂಗಾಲಾಗಿ ಬೃಹತ್ ಸೈನ್ಯವನ್ನೆಲ್ಲ ತರಿಸಿ ಕಾವಲಿಗೆ ನಿಲ್ಲಿಸಿದ್ದಾರೆ. ಅದ್ಭುತ ಮಿಲಿಟರಿ ವ್ಯವಸ್ಥೆಯನ್ನು ಹಗಲು ರಾತ್ರಿ ನಿದ್ದೆಬಿಟ್ಟು ರುಕ್ಮಿ-ಜರಾಸಂಧಾದಿ ಗಳು ನಡೆಸಿದ್ದಾರೆ. ಏನೇ ಆದರು ರುಕ್ಮಿಣಿಯನ್ನು ಬಿಟ್ಟುಕೊಡಬಾರದೆಂಬ ಹಠ ಇವರದು.

## ತ್ರೇತಾ ದ್ವಾಪರ ಯುಗದಲ್ಲಿಯ ಪೌರರು

ಕೃಷ್ಣನ ಆಗಮನದ ವಾರ್ತೆಯನ್ನು ಕೇಳಿದ ಪೌರರೆಲ್ಲರೂ ಆನಂದಭರಿತ ರಾಗಿದ್ದಾರೆ. ನಮ್ಮ ರುಕ್ಮಿಣಿಯನ್ನು ಕೃಷ್ಣನೇ ವರಿಸಬೇಕು. ಅವನೇ ಯೋಗ್ಯನಾದ ವರ. ಕೃಷ್ಣನಿಗಿಂತಲೂ ಸುಂದರನಾದ ವರನೇ ಇಲ್ಲ. ಶಿಶುಪಾಲನನ್ನು ವರಿಸಬಾರದು ಎಂದು ಕೃಷ್ಣ-ರುಕ್ಮಿಣಿಯರ ಅನ್ಯೋನ್ಯ ಸಂಬಂಧವನ್ನೇ ಬಯಸುತ್ತಿದ್ದಾರೆ. ನಮ್ಮ ಜನ್ಮಾಂತರದ ಸುಕೃತವೇನಾದರೂ ಇದ್ದಲ್ಲಿ ಅದರ ಫಲವಾಗಿ ರುಕ್ಮಿಣಿಯು ಕೃಷ್ಣನನ್ನು ವರಿಸುವಂತಾಗಲಿ ಎಂದು ಪ್ರಾರ್ಥಿಸುತ್ತಿದ್ದಾಳೆ. ಎಂತಹ ನಿಸ್ವಾರ್ಥವಾದ ಶುದ್ಧ ಭಾವನೆ.

ಇದೇ ರೀತಿಯ ಒಂದು ಪ್ರಸಂಗವನ್ನು ನಾವು ರಾಮಾಯಣದಲ್ಲಿಯೂ ಕಾಣ ಬಹುದು. ಶ್ರೀರಾಮಚಂದ್ರನ ಮೇಲೆ ಅಯೋಧ್ಯೆಯ ಜನರಿಗೆಲ್ಲ ಬಹಳ ಪ್ರೀತಿ.

ಅಯೋಧ್ಯಾ ನಾಗರಿಕರಾದ ಸ್ತ್ರೀ, ಪುರುಷ, ವೃದ್ಧ, ಶಿಶುಗಳೆಲ್ಲರೂ ಪ್ರತಿನಿತ್ಯ ದೇವಸ್ಥಾನಗಳಿಗೆ ಹೋಗಿ ಪ್ರಾರ್ಥನೆಯನ್ನು ಸಲ್ಲಿಸುತ್ತಿದ್ದರು. ನಮಗೆ ಸಂಪತ್ತು ಬರಲಿ! ಆಯುಷ್ಯ ಬೆಳೆಯಲಿ! ಎಂಬುದು ಅವರ ಪ್ರಾರ್ಥನೆಯಾಗಿರಲಿಲ್ಲ. ಶ್ರೀರಾಮ ಚಂದ್ರನೇ ನಮಗೆ ರಾಜನಾಗಿ ಬರಲಿ! ಎಂಬ ಉದಾತ್ತ ಮನೋಭಾವವಿತ್ತು.

ಅದರಂತೆ ವಿದರ್ಭ ನಗರದ ಜನರೆಲ್ಲರೂ ನಾವೇನಾದರೂ ಪುಣ್ಯ ಸಂಪಾದಿಸಿದ್ದರೆ ಅದರ ಫಲವಾಗಿ ನಮ್ಮ ರುಕ್ಮಿಣಿಯ ಪಾಣಿಗ್ರಹಣವನ್ನು ಶ್ರೀಕೃಷ್ಣನೇ ಮಾಡಲಿ! ಎಂದು ಬಯಸಿದರು. ಇಂತಹ ನಿಃಸ್ವಾರ್ಥ ತ್ಯಾಗವನ್ನು ಇಂದಿನ ನಾಗರಿಕರೆನಿಸಿದ ನಾವೂ ಅಳವಡಿಸಿಕೊಳ್ಳಬೇಕು.

ಜನರೆಲ್ಲರ ಬಯಕೆಗೆ ವಿರುದ್ಧವಾಗಿ ರುಕ್ಮಿಣಿಯ ಅಣ್ಣನಾದ ರುಗ್ಮಿಯ ಬಯಕೆ. ರುಕ್ಮಿಣಿಯನ್ನು ಕೃಷ್ಣನ ವಿರುದ್ಧ ಶಿಶುಪಾಲನಿಗೆ ವಿವಾಹ ಮಾಡಿದಲ್ಲಿ ತನಗೆ ಜರಾಸಂಧ ಶಿಶುಪಾಲ ಮುಂತಾದ ರಾಜಕೀಯ ಬೆಂಬಲ ಸಿಗುತ್ತದೆಂಬ ಸ್ವಾರ್ಥ. ಕೇವಲ ತನ್ನ ಸ್ವಾರ್ಥಕ್ಕಾಗಿ ಸಾವಿರಾರು ಪ್ರಜೆಗಳ–ತನ್ನ ತಂಗಿಯ ವಿರುದ್ಧವಾಗಿ ಕೆಟ್ಟ ಸಾಹಸಕ್ಕಿಳಿದಿದ್ದಾನೆ. ಜನರೆಲ್ಲರೂ ಅಂತಃಕರಣಪೂರ್ವಕವಾಗಿ ರುಕ್ಮಿಣಿಯ ಹಿತಚಿಂತನೆಯನ್ನೇ ಬಯಸುತ್ತಾ ಕೃಷ್ಣ–ರುಕ್ಮಿಣಿಯರ ವಿವಾಹಮಹೋತ್ಸವವನ್ನು ನೋಡಲು ನಿರೀಕ್ಷಿಸುತ್ತಿದ್ದಾರೆ.

## ರುಗ್ಮಿಣೀಕಲ್ಯಾಣ

ರುಕ್ಮಿಣಿಯು ಹಿಂದೆ ಸಂಕಲ್ಪಿಸಿದಂತೆ ಅಂಬಿಕಾ ಗೃಹದ ಬಳಿ ಸಾಗುತ್ತಿದ್ದಾಳೆ. ಕೃಷ್ಣನು ಯಾವಾಗ ನನ್ನನ್ನು ಕರೆದುಕೊಂಡು ಹೋಗುವನೋ ಎಂದು ಕಾತುರಳಾಗಿದ್ದಾಳೆ. ಸುತ್ತಲೂ ಚತುರಂಗ ಸೈನ್ಯದ ಬಿಗಿ ಬೆಂಗಾವಲಿನಿಂದ ಆವೃತಳಾಗಿದ್ದಾಳೆ. ಇವರ ಮಧ್ಯೆ ರುಕ್ಮಿಣಿಯನ್ನು ಅಪಹರಿಸುವುದೆಂದರೆ ಕಠಿಣದ ಕಾರ್ಯವೇ. ಜರಾಸಂಧ ರುಕ್ಮಿ ಎಲ್ಲರೂ ಸೈನಿಕರಿಗೆ ಎಚ್ಚರದಿಂದಿರಿ ಎಂದು ಆದೇಶಿಸುತ್ತಲೇ ಇದ್ದಾರೆ.

ಆದರೆ ತ್ರಿಲೋಕಸುಂದರಿಯಾದ ರುಕ್ಮಿಣಿಯು ಲಲಿತಗತಿಯಲ್ಲಿ ಬಳುಕುತ್ತ ಸಾಗಲು ಅವಳ ಅಗಾಧವಾದ ಸೌಂದರ್ಯದ ಸಮುದ್ರದಲ್ಲಿ ಇವರೆಲ್ಲರೂ ಮುಳುಗಿದರು. ಎವೆಯಿಕ್ಕದ ಕಣ್ಣಿನಿಂದ ನೋಡುತ್ತಿದ್ದರು. ರುಗ್ಮಿಣಿಯು ಅಂಬಿಕಾಲಯಕ್ಕೆ ಹೋಗಿ ಮರಳಿ ಬರುತ್ತಿರಲು ತ್ರಿಲೋಕಸುಂದರಿಯ ಸೌಂದರ್ಯವನ್ನು ಕಾಣುತ್ತಾ ಎಲ್ಲರೂ ಮೂರ್ಛಿತರಾಗಿದ್ದಾರೆ. ಶ್ರೀಕೃಷ್ಣನು ಇದೇ ಸಂದರ್ಭವೆಂದು ತ್ರಿಭುವನ ಸುಂದರಿಯಾದ ರುಕ್ಮಿಣಿಯನ್ನು ರಥದಲ್ಲಿ ಏರಿಸಿ ಹೊರಟ. ಆವಾಗ ಎಲ್ಲರಿಗೂ ಎಚ್ಚರವಾಯಿತು.

ರುಕ್ಮಿಣಿಯನ್ನು ನೋಡುವ ಭರದಲ್ಲಿ ಕೃಷ್ಣನು ಎಲ್ಲಿಂದ ಹೇಗೆ ಬಂದ? ಏನು ಮಾಡಿದ ಎಂದು ವಿಚಾರಮಾಡುವ ಸಂದರ್ಭವೇ ದೊರೆಯಲಿಲ್ಲ. ಅನಂತರ ಎಲ್ಲರೂ ಗದ್ದಲ ಎಬ್ಬಿಸಿದರು. ಜರಾಸಂಧ, ರುಕ್ಮಿ ಮುಂತಾದವರೆಲ್ಲರೂ ಕೃಷ್ಣನ ವಿರುದ್ಧ ಕಾದಾಡಲು ಬಂದರು. ಬಲರಾಮನ ಬೆಂಬಲ ಪಡೆದ ಯಾದವರೆಲ್ಲರೂ

ಜರಾಸಂಧಾದಿಗಳನ್ನು ಪರಾಭವಗೊಳಿಸಿದರು ಇದರಿಂದ ಬಾಸಿಂಗ ಕಟ್ಟಿಕೊಂಡು ನಿಂತ ಶಿಶುಪಾಲ ಬಹಳ ದುಃಖಿತನಾದ. ಜರಾಸಂಧನಿಗೆ ಅವನನ್ನು ಸಮಾಧಾನ ಪಡಿಸುವುದೇ ಬಹಳ ಕಷ್ಟವಾಯಿತು. ಜರಾಸಂಧನು ಕೃಷ್ಣನ ವಿರುದ್ಧ ನಾನು ಹತ್ತಾರು ಬಾರಿ ಸೋತಿದ್ದೇನೆ. ಹೀಗಿರಲು ನೀನು ಸೋತಿದ್ದೇನು ವಿಶೇಷವಲ್ಲ, ದುಃಖಿಸ ಬೇಡವೆಂದು ಸಮಾಧಾನಪಡಿಸಿದ. ಜರಾಸಂಧ ಶಿಶುಪಾಲಾದಿಗಳು ಸೈನ್ಯಸಮೇತ ತೆರಳಿದರು. ಆದರೆ ರುಕ್ಮಿಯು ಮಾತ್ರ ಕೃಷ್ಣನ ವಿರುದ್ಧ ಹೋರಾಟ ನಡೆಸಿ ರುಕ್ಮಿಣಿ ಯನ್ನು ಕರೆತಂದು ಶಿಶುಪಾಲನಿಗೇ ಮದುವೆಮಾಡಿಸದೆ ನಾನು ನಗರಪ್ರವೇಶವನ್ನೇ ಮಾಡೆನೆಂದು ಪ್ರತಿಜ್ಞೆಗೈದು ಕೃಷ್ಣನನ್ನು ಹಿಂಬಾಲಿಸಿದ. ಮುಂದೆ ಪರಾಜಿತನಾಗಿ ಅವನೂ ಅವಮಾನಿತನಾದ.

ಶ್ರೀಕೃಷ್ಣನು ರುಕ್ಮಿಣೀ ಸಹಿತನಾಗಿ ದ್ವಾರಕೆಯನ್ನು ಪ್ರವೇಶ ಮಾಡಿದನು. ರುಕ್ಮಿಣೀ ಸಹಿತನಾಗಿ ಶ್ರೀಕೃಷ್ಣನು ಆಗಮಿಸಲು ನವದಂಪತಿಗಳನ್ನು ಯಾದವರೆಲ್ಲರೂ ಆನಂದ ದಿಂದ ಸ್ವಾಗತಿಸುತ್ತಿದ್ದಾರೆ. ಅನಂತರ ವಿಧಿಪೂರ್ವಕವಾಗಿ ಸಂಭ್ರಮದಿಂದ ರುಕ್ಮಿಣೀ ಕೃಷ್ಣರ ವಿವಾಹಮಹೋತ್ಸವ ನಡೆದಿದೆ.

## ವಾದಿರಾಜರ ವಾಗ್ವಿಲಾಸ

ಈ ಸಂದರ್ಭವನ್ನು ವಾದಿರಾಜರು ಸುಂದರವಾಗಿ ರುಕ್ಮಿಣೀಶವಿಜಯದಲ್ಲಿ ವರ್ಣಿಸಿದ್ದಾರೆ.

ಯಾದವರಲ್ಲಿಯೇ ಕೆಲವರು ರುಕ್ಮಿಣಿಯ ಪಕ್ಷವನ್ನೂ ಕೆಲವರು ಕೃಷ್ಣನ ಪಕ್ಷವನ್ನೂ ವಹಿಸಿದ್ದಾರೆ. ಪರಸ್ಪರ ಸ್ನೇಹತುಂಬುವ ಹೊಸ ಮನಸ್ಸುಗಳನ್ನು ಒಗ್ಗೂಡಿಸುವ ಉದ್ದೇಶದಿಂದ ಸರಸಮಾತುಗಳಿಂದ ಕನ್ಯೆಯನ್ನು ಒಪ್ಪಿಸಿಕೊಡುತ್ತಿದ್ದಾರೆ.

### ರುಕ್ಮಿಣೀ ಪಕ್ಷದವರು

ಕೃಷ್ಣನು ರುಕ್ಮಿಣಿಯನ್ನು ವಿವಾಹವಾಗಬೇಕಿದ್ದರೆ ಅವಳಿಗೆ ಹೆಚ್ಚಿನ ಭಾರದ ಕೆಲಸವನ್ನು ಕೊಡಬಾರದು. ಆದಷ್ಟು ಅವಳು ಸುಖದಿಂದಿರುವಂತೆ ಎಚ್ಚರ ವಹಿಸ ಬೇಕು. ನೂರಾರು ಕೊಡಪಾನ ನೀರನ್ನು ಬಾವಿಯಿಂದ ಸೇದುವ ಕೆಲಸಗಳೆಲ್ಲವೂ ...ದಿದ್ದವು. ಅಂತಹ ಕೆಲಸಗಳನ್ನು ಹೇಳಬಾರದೆಂಬ ಅಭಿಪ್ರಾಯದಿಂದ ಮಾತನಾಡಿದರು. ಅಷ್ಟೇ ಅಲ್ಲದೆ ರುಕ್ಮಿಣಿಯ ಮೇಲೆ ಎಂದೂ ಸಿಟ್ಟಾಗಬಾರದು. ಹೆಣ್ಣಿನ ಕಡೆಯವರಾದ ನಾವು 'ರುಕ್ಮಿಣಿಯನ್ನು ಕಳುಹಿಸಿಕೊಡು' ಎಂದು ಹೇಳಿ ಕಳುಹಿಸಿದ ತತ್‌ಕ್ಷಣ ಕಳುಹಿಸಿಕೊಡಬೇಕು ಎಂದು ಹೇಳಿದಾಗ–

### ಕೃಷ್ಣಪಕ್ಷದವರು

ನಿಮ್ಮ ರುಕ್ಮಿಣಿಗೆ ನಾವು ಭಾರದ ಕೆಲಸವೇನೂ ಕೊಡುವುದಿಲ್ಲ. ಕೇವಲ ಮನೆಯ ಕೆಲಸ ಮಾಡಿದರೆ ಸಾಕು. ಪಾತಾಳದಿಂದ ಆರಂಭಿಸಿ ಹದಿನಾಲ್ಕು ಲೋಕಗಳಿಂದ ಕೂಡಿದ ಬ್ರಹ್ಮಾಂಡವೇ ಮನೆ ಎನಿಸಿದೆ. ಈ ಹದಿನಾಲ್ಕು ಮಹಡಿಗಳ ಮನೆಯನ್ನು

ಸರಿಯಾಗಿ ನೋಡಿಕೊಂಡರಾಯಿತು. ಬ್ರಹ್ಮರುದ್ರರೇ ಮನೆಯ ಮಕ್ಕಳು. ದಧಿ, ಘೃತ, ಇಕ್ಷು, ಕ್ಷೀರ ಮೊದಲಾದ ಸಾಗರಗಳಿಂದ ಕೂಡಿದ ಮನೆಯ ಸಂರಕ್ಷಣೆಯ ಜವಾಬ್ದಾರಿಯನ್ನು ಬಿಟ್ಟು ಮತ್ತೇನೂ ಹೇಳೆವು. ನೀವು ಕೇಳಿದಾಗ ಕಳುಹಿಸಿ ಕೊಡುತ್ತೇವೆ. ಆದರೆ ಒಂದೆರಡು ದಿನಗಳಲ್ಲಿ ಅವಳೇ ಮರಳಿ ಬರುತ್ತಾಳೆ. ಎಂದರೆ ರುಕ್ಮಿಣಿಯು ಲಕ್ಷ್ಮೀಸ್ವರೂಪಳಾದ್ದರಿಂದ ಲಕ್ಷ್ಮಿಯನ್ನು ಭಗವದ್ಭಕ್ತರ ಮನೆಗೆ ಕಳುಹಿಸಿದರೆ ಆ ಭಕ್ತರು ಪುನಃ ಹರಿಗೇ ಸಮರ್ಪಿಸುತ್ತಾರೆ. ಆದ್ದರಿಂದಲೇ ಕಳುಹಿಸಿ ಕೊಡುತ್ತೇವೆ ಎಂದುತ್ತರಿಸಿದರು.

ರುಕ್ಮಿಣೀಪಕ್ಷದವರು– ನಾವು ಹೆಚ್ಚು ವರದಕ್ಷಿಣೆ ವರೋಪಚಾರ ಇದ್ಯಾವುದನ್ನೂ ಮಾಡಲಾರೆವು. ರಥ ತುರಗಗಳನ್ನಾಗಲೀ, ಹಸ್ತಿ ಹಸ್ತಿನಿಯರನ್ನಾಗಲೀ ನಾವು ಕೊಡೆವು. ಕೇವಲ ಪದ್ಮಮುಖಿಯಾದ ಶ್ರೇಷ್ಠಳಾದ ರುಕ್ಮಿಣಿಯನ್ನು ಮಾತ್ರ ಕೊಡುವೆವು ಎಂದರು.

ಶ್ರೀಕೃಷ್ಣಪಕ್ಷದವರು– ನಮ್ಮ ಕೃಷ್ಣನು ಯಾವ ವರದಕ್ಷಿಣೆಯನ್ನೂ ಬಯಸುವವನಲ್ಲ. ನೀವು ಕೊಟ್ಟರೂ ಸ್ವೀಕರಿಸುವುದಿಲ್ಲ. ಆದರೆ ನಮ್ಮ ಕೃಷ್ಣ ನಿಮ್ಮ ಕನ್ಯೆಯ ಕಡೆಗಣ್ಣಿನ ನೋಟ ಒಂದನ್ನು ಮಾತ್ರ ಬಯಸುತ್ತಾನೆ. ಅವಳ ಪ್ರೀತಿಯನ್ನಲ್ಲದೆ ಯಾವ ವರೋಪಚಾರಗಳನ್ನೂ ಬಯಸನು ಎನ್ನುತ್ತಾರೆ.

ರುಕ್ಮಿಣೀಶವಿಜಯದಲ್ಲಿ ವಾದಿರಾಜರು ಒಂದು ಎಚ್ಚರಿಕೆಯನ್ನು ನೀಡಿದ್ದಾರೆ. ಮದುವೆಯ ಸಂದರ್ಭದಲ್ಲಿ ವರದಕ್ಷಿಣೆಯನ್ನು ಯಾರೂ ಸ್ವೀಕರಿಸಬಾರದು. ಹುಡುಗಿಯನ್ನು ಮಾತ್ರ ಬಯಸಬೇಕು ಎಂದು ಆಧುನಿಕ ಸಮಾಜದ ಯುವಕರಿಗೆ ಎಚ್ಚರಿಸಿದ್ದಾರೆ.

## ಕಲ್ಯಾಣದಿಂದ ಮೂಡಿಬಂದ ಸಂದೇಶ

ಮುಂದೆ ರುಕ್ಮಿಣೀ–ಕೃಷ್ಣರ ಮಂಗಳಮಹೋತ್ಸವ ಬಹು ವಿಜೃಂಭಣೆಯಿಂದ ನಡೆದಿದೆ. ಸ್ತ್ರೀಯರು, ಪುರುಷರು, ಮಕ್ಕಳು ಎಲ್ಲರೂ ಆ ವಿವಾಹಮಹೋತ್ಸವದಲ್ಲಿ ಭಾಗವಹಿಸಿದ್ದಾರೆ. ಜಗದೇಕಮಾನ್ಯರ ಮಂಗಳ ಮಹೋತ್ಸವದಲ್ಲಿಯೂ ಒಂದು ಅಧ್ಯಾತ್ಮ ಸಂದೇಶವಿದೆ. ರುಕ್ಮಿಣಿ ಎಂದರೆ ಅಧ್ಯಾತ್ಮವಿದ್ಯೆ. ವೇದಾಭಿಮಾನಿನಿ ಶ್ರೀಲಕ್ಷ್ಮೀ ರುಕ್ಮಿಣಿಯಷ್ಟೆ. ಸಮಗ್ರ ವೇದವಿದ್ಯೆಯು ಭಗವಂತನನ್ನು ಸ್ತೋತ್ರಮಾಡುತ್ತದೆ. ಭಗವತತ್ತ್ವ ಪ್ರತಿಪಾದಕವಾದ ವೇದವಿದ್ಯೆಯನ್ನು ಬಲಾತ್ಕಾರವಾಗಿ ಸೆಳೆದು ಅದಕ್ಕಭಿಮತವಾದ ರೀತಿಯಲ್ಲಿ ಅರ್ಥೈಸಬಾರದು. ರುಗ್ಮಿ ಜರಾಸಂಧಾದಿಗಳು ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಡುವ ಪ್ರಯತ್ನ ಮಾಡಿದ್ದಾರೆ. ಆದರೆ ಅವರ ಪ್ರಯತ್ನ ವಿಫಲವಾಯಿತು. ಅನರ್ಥಕ್ಕೂ ನಾಂದಿಯಾಯಿತು. ಅದರಂತೆ ಅನೇಕರು ವೇದಗಳನ್ನು ವಿಪರೀತ ವಿಚಾರದ ಕಡೆಗೆ ಸೆಳೆದು ಅನ್ಯಾಯ ಮಾಡಿದ್ದಾರೆ. ಆದರೆ ಇದು ವೇದಕ್ಕೆ ಸಮ್ಮತವಾದುದಲ್ಲ. ರುಕ್ಮಿಣಿಯು ಶಿಶುಪಾಲನನ್ನು ವರಿಸದೆ ಕೃಷ್ಣನೇ

ಬೇಕೆಂದು ಹಠಹಿಡಿದಳು. ಅದರಂತೆ ವೇದವಿದ್ಯೆಯು ಭಗವಂತನನ್ನು ಪ್ರತಿಪಾದಿಸು ವಂತೆ ಬೇರೆ ಯಾರನ್ನೂ ಪ್ರತಿಪಾದಿಸದು.

ರುಕ್ಮಿಣಿಯು ಕೇವಲ ಕೃಷ್ಣನನ್ನೇ ಸ್ಮರಿಸುವಂತೆ ವೇದವೂ ನಿರಂತರ ಹರಿಯ ಗುಣಮಹಿಮೆಗಳನ್ನೇ ಬಣ್ಣಿಸುವುದು.

ರುಕ್ಮಿಣಿಯ ಪ್ರೇಮಪತ್ರವನ್ನು ತೆಗೆದುಕೊಂಡು ಹೋದ ಬ್ರಾಹ್ಮಣನೇ ವಾದಿರಾಜರು ಎಂಬುದು ಸತ್ಪರಂಪರೆಯಿಂದ ಬಂದ ಒಂದು ಭಾವನೆ. ವಾದಿರಾಜರು ತಮ್ಮ ಹಿಂದಿನ ಅವತಾರದಲ್ಲಿ ರುಕ್ಮಿಣಿಯ ಓಲೆಯನ್ನು ಶ್ರೀಕೃಷ್ಣನಿಗೆ ಕೊಟ್ಟು, ಭಾಗ್ಯವಂತರೆನಿಸಿದರು. ರುಕ್ಮಿಣಿಯು ಶಿಶುಪಾಲನ ಕಡೆಗೆ ಹೋಗದೇ ಕೃಷ್ಣನ ಕಡೆಗೆ ಸಾಗುವಂತೆ ಅಂದು ಮಾಡಿದ್ದರೆ, ತಮ್ಮ ೨ನೇ ಅವತಾರದಲ್ಲಿ ವೇದವಿದ್ಯೆಯು ಭಗವಂತನನ್ನೇ ಪ್ರತಿಪಾದಿಸುತ್ತದೆ. ಇತರ ವಿಚಾರವನ್ನಲ್ಲ ಎಂದು ವಾದಿರಾಜರಾಗಿ ಯುಕ್ತಿಮಲ್ಲಿಕಾದಿ ಗ್ರಂಥಗಳಲ್ಲಿ ಸಮರ್ಥಿಸಿದ್ದಾರೆ. ಈ ಅವತಾರದಲ್ಲಿಯೂ ರುಕ್ಮಿಣೀಕೃಷ್ಣರ = ವೇದವಿದ್ಯೆಗೂ ಭಗವಂತನಿಗೂ ವಿವಾಹ ಮಾಡಿಸಿದ್ದಾರೆ.

## ಶಂಭರಾಸುರ ವಧೆ

ಹಿಂದೆ ಮನ್ಮಥನು ರುದ್ರದೇವರ ತಪಸ್ಸನ್ನು ಭಗ್ನಗೊಳಿಸಬೇಕೆಂಬ ಉದ್ದೇಶದಿಂದ ತನ್ನ ಬಾಣಪ್ರಯೋಗವನ್ನು ಮಾಡಲು ಪ್ರಯತ್ನಿಸಿದ. ಕಾಮನಿರ್ಜಿತರಾದ ರುದ್ರ ದೇವರು ತಮ್ಮ ನಡುನೆತ್ತಿಯ ಉರಿಗಣ್ಣನು ತೆರೆದರು. ದೇವತೆಗಳು ದಹಿಸಬೇಡ ವೆಂದು ಪ್ರಾರ್ಥಿಸುವಷ್ಟರಲ್ಲಿ ಮನ್ಮಥನು ತ್ರಿನೇತ್ರದ ಉರಿಜ್ವಾಲೆಗೆ ಬಲಿಯಾದ. ಅನಂಗನು ಅನ್ವರ್ಥನಾಮನೆನಿಸಿದ. ಆ ಮನ್ಮಥನೇ ಕೃಷ್ಣನ ಪುತ್ರನಾಗಿ ರುಕ್ಮಿಣಿಯಲ್ಲಿ ಜನಿಸಿದ.

ಅವನನ್ನು ಒಂದು ದಿನ ಶಂಬರಾಸುರನು ಬಂದು ಹೊತ್ತುಕೊಂಡು ಸಾಗಿ ಸಮುದ್ರಕ್ಕೆಸೆದು ಮನೆಗೆ ನಡೆದ. ಸಮುದ್ರದ ದೊಡ್ಡ ಮೀನೊಂದು ಆ ಶಿಶುವನ್ನು ಪೂರ್ತಿಯಾಗಿ ನುಂಗಿತು. ಬೆಸ್ತರು ಮೀನುಗಳನ್ನು ಹಿಡಿಯಲೋಸುಗ ಬಲೆಬೀಸಿದರು. ಶಿಶುವು ಹರಿಸಂಕಲ್ಪದಂತೆ ಬಲೆಗೆ ಸಿಕ್ಕಿಬಿತ್ತು. ಬೆಸ್ತನು ತನ್ನರಸನಾದ ಶಂಬರಾಸುರನಿಗೆ ಆ ಮಗುವನ್ನು ಅರ್ಪಿಸಿದನು. ಶಂಬರಾಸುರನು ಅದನ್ನು ಪೋಷಿಸಲು ಮಾಯಾವತಿಯ ಕೈಲಿ ನೀಡಿದ. ಮನ್ಮಥನ ಪತ್ನಿಯಾದ ರತಿದೇವಿಯೇ ಮಾಯಾವತಿ ಎನಿಸಿದ್ದಾಳೆ. ಅವಳು ಆ ಮಗುವನ್ನು ಪ್ರೀತಿ ವಿಶ್ವಾಸಗಳಿಂದ ಸಲಹುತ್ತಿದ್ದಾಳೆ.

ಮೃತ್ಯುವನ್ನು ನಾವು ಎಷ್ಟು ದೂರಕ್ಕೆ ಎಸೆದರೂ ಅದು ಇನ್ನೊಂದು ಬಾಗಿಲಿನಿಂದ ಪುನಃ ನಮ್ಮ ಹಿಂದೆಯೇ ಬರುತ್ತದೆ.

ಶಂಬರಾಸುರನನ್ನು ಸಮುದ್ರಕ್ಕೆಸೆದರೂ ಬೆಸ್ತನ ಮುಖಾಂತರ ಮೃತ್ಯುವಾದ ಮನ್ಮಥನು ಆಗಮಿಸಿದ್ದಾನೆ. ಮಾಯಾವತಿಯು ಸೌಂದರ್ಯ–ಗುಣದಿಂದ ತುಂಬಿದ

ಮಗನನ್ನು ಯಾರೆಂದು ಪರೀಕ್ಷಿಸುತ್ತಿರಲು ನಾರದರೊಂದು ದಿನ ಸಂಗತಿಯನ್ನೆಲ್ಲ ತಿಳಿಸಿದರು.

ಪ್ರದ್ಯುಮ್ನನು ಬೆಳೆದು ದೊಡ್ಡವನಾದ ಬಳಿಕ ಅವನ ಸೌಂದರ್ಯವನ್ನು ಕಂಡು ಮಾಯಾವತಿಯು ಮೋಹಿಸಲಾರಂಭಿಸಿದಳು. ಪ್ರದ್ಯುಮ್ನನು ಇದನ್ನು ಸಹಿಸದೆ ಪ್ರಶ್ನೆ ಕೇಳುತ್ತಾನೆ– "ತಾಯಿಯೇ, ಇದೇನು! ಮಾತೃತ್ವವನ್ನು ಮರೆತು ಸಾಮಾನ್ಯ ಹೆಂಗಸಿನಂತೆ ಕೆಟ್ಟತನದಿಂದ ವರ್ತಿಸುತ್ತಿದ್ದೀಯಲ್ಲ" ಎಂದು. ಪ್ರದ್ಯುಮ್ನನು ಪ್ರಶ್ನಿಸಲು ಮಾಯಾವತಿಯು ಪೂರ್ವವೃತ್ತಾಂತವನ್ನೆಲ್ಲ ತಿಳಿಸಿದಳು. ನೀನು ರುಕ್ಮಿಣಿಯ ಪುತ್ರನಾಗಿರುವಿ ಎಂದೂ ತಿಳಿಸಿದಳು. ಅಸುರ ಬಂಧನದಲ್ಲಿರುವ ತನ್ನನ್ನು ಶಂಬರನಿಂದ ಬಿಡಿಸೆಂದು ಪ್ರಾರ್ಥಿಸಿದಳು. ಎಲ್ಲವನ್ನೂ ತಿಳಿದ ಮನ್ಮಥನು ಶಂಬರನನ್ನು ಯುದ್ಧದಲ್ಲಿ ಯುಕ್ತಿಬದ್ಧವಾಗಿ ಸಂಹರಿಸಿದ.

ಮಯ ಶಂಬರ ಮುಂತಾದ ಮಾಯಾವಿಗಳಲ್ಲಿ ಶಂಬರನೂ ಬಲಿಷ್ಠನಾದವ. ಅಂತಹ ಶಂಬರನ ಮಾಯೆಯನ್ನು ತನ್ನ ದಿವ್ಯ ಶಕ್ತಿಯ ಬಲದಿಂದ ಎದುರಿಸಿ ರತಿಯಿಂದೊಡಗೂಡಿ ದ್ವಾರಕೆಗೆ ಆಗಮಿಸಿದ. ಜನರೆಲ್ಲರೂ ಆಶ್ಚರ್ಯಪಟ್ಟರು. ಕೃಷ್ಣನಂತೆ ಸುಂದರಗಾತ್ರನಾದ ನೇತ್ರಾನಂದಕರನಾದ ಇವನಾರು?! ಎಂದು ಎಲ್ಲರೂ ಆಶ್ಚರ್ಯದ ಕಣ್ಣಿಂದ ಕಂಡರು. ಆವಾಗ ರುಕ್ಮಿಣೀದೇವಿಯು ಲೋಕದ ಸ್ತ್ರೀಯರಂತೆ ನಟಿಸುತ್ತಾ "ನನ್ನ ಮಗನೊಬ್ಬ ಹುಟ್ಟಿದ ಕೂಡಲೇ ಅಪಹೃತನಾದ. ಅವನು ಒಂದು ವೇಳೆ ಬದುಕಿದ್ದರೆ ಹೀಗೆಯೇ ಇರುತ್ತಿದ್ದನೋ ಏನೋ!? ಎಂದು ಆಶ್ಚರ್ಯದಿಂದ ನೋಡಿದಳು.

ನಾರದರು ಬಂದು ನಡೆದ ಸಂಗತಿಗಳನ್ನೆಲ್ಲ ತಿಳಿಸಿ ಕೃಷ್ಣ–ರುಕ್ಮಿಣಿಯರ ಸುಕುಮಾರಪುತ್ರನೇ ಪ್ರದ್ಯುಮ್ನ ಎಂದು ತಿಳಿಯದವರಿಗೆ ತಿಳಿಸುವಂತೆ ತಿಳಿಸಿದರು. ಕೃಷ್ಣ ರುಕ್ಮಿಣಿಯರು ಮಗನನ್ನು ಕಂಡು ಸಂತೋಷಪಟ್ಟರು.

## ಕಾಮಾದಿಗಳು ಅತ್ಯಗತ್ಯ

ಈ ಕಾಮನು ನಮಗೂ ಒಲಿದು ಬರಬೇಕು.

ಕಾಮನು ಮೊದಲು ಶಿವನನ್ನು ಕೆಣಕಲು ಹೋಗಿ ಭಸ್ಮನಾಗಿಹೋದ. ಪುನಃ ರುದ್ರನ ಮಗನಾಗಿ ಹುಟ್ಟಿದ. ತಾನು ಸಂಹರಿಸಿದ ಕಾಮನೇ ದೇವತೆಗಳ ಸೇನಾನಿಯಾಗಿ ಜ್ಞಾನಮೂರ್ತಿಯಾದ ಸುಬ್ರಹ್ಮಣ್ಯನಾಗಿ ಹುಟ್ಟಿದ. ಬ್ರಹ್ಮದೇವರ ಮಗನಾಗಿ ಸನತ್ಕುಮಾರನೆಂದೂ ಪ್ರಸಿದ್ಧನಾದ. ಅವನೇ ಭಗವಂತನ ಮಗನಾಗಿ 'ಪ್ರದ್ಯುಮ್ನ' ಎಂಬ ಹೆಸರಿನಿಂದ ಅವತರಿಸಿದ. ತ್ರಿಮೂರ್ತಿಗಳಲ್ಲಿಯೂ ಮಗನಾಗಿ ಹುಟ್ಟಿದ. ವಿಕೃತನಾದ ಕಾಮನನ್ನು ಹರನು ತರಿದ ಬಳಿಕ ಕಾಮನು ಪರಿವರ್ತನೆ ಗೊಂಡ. ಕೆಟ್ಟ ಕಾಮವನ್ನು ಸುಡಬೇಕು. ಅನಂತರ ಆ ಕಾಮವೇ ಪರಿವರ್ತನೆಗೊಂಡು ಉಚ್ಚಕಾಮನೆಯಾಗಿ ನಮ್ಮ ಜೀವನದಲ್ಲಿ ಅದು ಪರಿವರ್ತನೆಗೊಳ್ಳಬೇಕು. ಅಂತಹ ಕಾಮನನ್ನು ಬಯಸಬೇಕು. ಆದರೆ ನಮ್ಮನ್ನು ಸತ್ಕಾರ್ಯದಿಂದ ಆಚೆಗೆಳೆದು ತಪ್ಪು

ಹೆಜ್ಜೆಯಿಡುವಂತಾಗಬಾರದು. ಇಂತಹ ಪ್ರಸಂಗ ಬಂದಾಗ ರುದ್ರದೇವನ ಮೂರನೇ ಕಣ್ಣು ಸೂಚಿಸುವ ಜ್ಞಾನದ ದೃಷ್ಟಿಯಿಂದ ವೀಕ್ಷಿಸಬೇಕು. ಕೆಟ್ಟ ಕಾಮನನ್ನು ಸುಟ್ಟು ಅವನು ಮತ್ತೆ ನಮ್ಮಲ್ಲಿ ಸತ್ಕಾಮನಾಗಿ ಜನಿಸುವಂತೆ ಪ್ರಯತ್ನಿಸಬೇಕು. ಕಾಮ ಕ್ರೋಧ ಲೋಭ ಎಲ್ಲವೂ ಮೋಕ್ಷಕಾಮುಕರಿಗೆ ಪ್ರತಿಬಂಧಕವೆನಿಸಿದರೂ ಅವೆಲ್ಲವೂ ನಮಗೆ ಸಹಕಾರಿಗಳೂ ಆಗಿವೆ ಎನ್ನುತ್ತಾರೆ ವಾದಿರಾಜರು.

ಕಾಮಸ್ತೇಂಘ್ರಿಯುಗಾರ್ಚನೇಽಮಲಧಿಯಾಂ ಲೋಭಃ ಸುಪುಣ್ಯಾರ್ಜನೇ
ಮಾತ್ಸರ್ಯಂ ಚರಿತಾನುಕೀರ್ತನಸುಧಾಪಾನಾನ್ಮದಃ ಶತ್ರುಷು ।
ಕ್ರೋಧೋ ಭಕ್ತಜನೇಷು ರಾಗ ಉದಯಚ್ಚೈರ್ವಿಟ್ಠಲಾನ್ಯತ್ರ ನೋ
ಯಚ್ಚೈತ್ರುರ್ನಹಿ ಶತ್ರುರುಚ್ಚನಿಲಯಸ್ಯಾನ್ಯಸ್ಯ ಶತ್ರುರ್ಭವೇತ್ ॥

— (ರು. ವಿ. ೧೦–೭೮)

ನಾವು ದೇವರ ಬಳಿ ಕಾಮಾದಿಗಳನ್ನು ಪ್ರಾರ್ಥಿಸಬೇಕು. ಆದರೆ ಬಯಕೆಗಳು ಲೌಕಿಕವಾಗಿರಬಾರದು. ವಿಟ್ಠಲ ನನಗೆ ನಿನ್ನ ಅಡಿದಾವರೆಗಳನ್ನು ಪೂಜಿಸುವ ಇಚ್ಛೆಯು ಉದಿಸಲಿ! ಉತ್ತಮ ಜ್ಞಾನಿಗಳ ಬಳಿ ಭಗವತ್ತತ್ವವನ್ನು ಅರಿತುಕೊಳ್ಳುತ್ತೇನೆ ಎಂಬ ದೃಷ್ಟಿಯಿಂದ ಜ್ಞಾನಿಗಳಲ್ಲಿ ಲೋಭವು ಉಂಟಾಗಲಿ! ಉತ್ತಮವಾದ ಪುಣ್ಯಾರ್ಜನೆಯಲ್ಲಿ ಮತ್ತೊಬ್ಬ ತೊಡಗಿರಲು ಅವನನ್ನು ಕಂಡು ಅವನಿಗಿಂತಲೂ ಮಿಗಿಲಾಗಿ ಪುಣ್ಯಸಂಗ್ರಹಿಸುತ್ತೇನೆಂಬ ಮಾತ್ಸರ್ಯ ಕೊಡು. ನಿರಂತರ ನಿನ್ನ ಪಾದಸ್ಮರಣೆ ಎಂಬ ಸುಧಾಪಾನದಿಂದ ಮದಭರಿಸು! ನಿನ್ನ ಶತ್ರುಗಳ ವಿಷಯದಲ್ಲಿ ಕ್ರೋಧವನ್ನು ನಿನ್ನ ಭಕ್ತಜನರಲ್ಲಿ ಅನುರಾಗವನ್ನು ನೀಡು. ಉತ್ತಮನ ಪಾದವನ್ನು ಆಶ್ರಯಿಸಿದವನ ಪಾದವನ್ನು ಯಾರು ಆಶ್ರಯಿಸಿದ್ದಾರೆಯೋ ಅವರಿಗೆಂದೂ ಭೀತಿ ಇಲ್ಲ. ಆದರಂತೆ ಹರಿಪಾದಾಸಕ್ತರಿಗೆ ಈ ಕಾಮಾದಿಗಳು ಉಪದ್ರವಕೊಡಲಾರವು. ಹೀಗೆ ನಮ್ಮ ಜನ್ಮದಲ್ಲಿ ಆತ್ಮೋನ್ನತಿಗೆ ಅನುಕೂಲವಾಗುವಂತೆ ಕಾಮದ ಪುನರ್ಜನ್ಮ ವಾಗಬೇಕು. ಅದಕ್ಕಾಗಿ ಪ್ರಯತ್ನ ಮಾಡಬೇಕು ಎಂಬುದೇ ಕಾಮದ ಪುನರ್ಜನ್ಮದ ಕಥೆಯ ಸಂದೇಶವಾಗಿದೆ.

## ಸ್ಯಮಂತಕೋಪಾಖ್ಯಾನ

ದ್ವಾರಕೆಯಲ್ಲಿ ಸತ್ರಾಜಿತನೆಂಬ ಯಾದವನಿದ್ದನು. ಬಹಳ ದಿನಗಳ ಕಾಲ ಸೂರ್ಯದೇವನನ್ನು ಸ್ತುತಿಸಿದನು. ಅವನ ಭಕ್ತಿ ಶ್ರದ್ಧೆಗಳಿಗೆ ಮೆಚ್ಚಿದ ಸೂರ್ಯ ದೇವನು ಪ್ರತ್ಯಕ್ಷನಾಗಿ ಸ್ಯಮಂತಕಮಣಿಯೊಂದನ್ನು ದಯಪಾಲಿಸಿದನು. ಅದ್ಭುತ ವಾದ ಮಣಿಯನ್ನು ಧರಿಸಿದ ಸತ್ರಾಜಿತನು ಭೂಲೋಕದಲ್ಲಿ ಸಂಚರಿಸುವ ಸೂರ್ಯನೊ ಎಂಬಂತೆ ತೋರುತ್ತಿದ್ದನು. ಜನರೆಲ್ಲರೂ ಸೂರ್ಯನೆಂದೇ ಭ್ರಮಿಸಿ ದರು. ಶ್ರೀಕೃಷ್ಣನ ದರ್ಶನಾರ್ಥಿಯಾಗಿ ಬಂದ ಸತ್ರಾಜಿತನ ಕಂಠದ ಸ್ಯಮಂತ ಕಮಣಿಯ ತೇಜಸ್ಸೆಂದು ಕೃಷ್ಣನು ಸಮಾಧಾನಪಡಿಸಿದ. ಸತ್ರಾಜಿತನ ಸ್ಯಮಂತಕ ಮಣಿಯು ದಿನಕ್ಕೆ ಎಂಟು ಭಾರದಷ್ಟು ಚಿನ್ನವನ್ನು ನೀಡುತ್ತಿತ್ತು. ಅವಿದ್ದಲ್ಲಿ

ದುರ್ಭಿಕ್ಷೆಯಾಗಲಿ ಅನಿಷ್ಟವಾಗಲಿ ಇರುತ್ತಿರಲಿಲ್ಲ. ಇಂತಹ ಅನರ್ಘ್ಯವಾದ ಮಣಿಯನ್ನು ಧರಿಸಿದ ಸತ್ರಾಜಿತನಿಗೆ ಶ್ರೀಕೃಷ್ಣನು ಒಂದು ದಿನ ಹೇಳಿದ –"ಸತ್ರಾಜಿತ! ತಪಸ್ಸಿನಿಂದ ಇದನ್ನು ಪಡೆದಿರುವಿ. ಆದರೆ ಇದು ಕೇವಲ ನಿನ್ನ ಸ್ವಾರ್ಥಕ್ಕೆ ಸೀಮಿತವಾಗಬಾರದು. ಇದನ್ನು ರಾಜ್ಯದ ಬೊಕ್ಕಸಕ್ಕೆ ಸೇರಿಸು! ಸಾವಿರಾರು ಪ್ರಜೆಗಳಿಗೆ ಇದರಿಂದ ಹಿತವಾಗುತ್ತದೆ. ಲೋಕಕಲ್ಯಾಣಕ್ಕೆ ಹೇತುವಾದ ವಸ್ತುವನ್ನು ನಿನ್ನ ಟ್ರೆಜರಿಯ ಒಳಗೆ ಇಡುವ ಬದಲು ರಾಜ್ಯಕ್ಕೆ ಹಿತವಾಗಲೆಂದು ಅರ್ಪಿಸು!" ಎಂದ. ಸತ್ರಾಜಿತನು ಶ್ರೀಕೃಷ್ಣನ ಮಾತನ್ನು ನಗಣ್ಯವೆಂದ. ತಾನು ಗಳಿಸಿದ ದೊಡ್ಡ ಸಂಪತ್ತೆಂಬ ಲೋಭ ಸ್ವಾರ್ಥಗಳಿಂದ ಭಗವಂತನು ಕೇಳಿದರೂ ಅರ್ಪಿಸುವಂತಹ ತ್ಯಾಗಬುದ್ಧಿಯನ್ನು ತೋರಲಿಲ್ಲ. ಶ್ರೀಕೃಷ್ಣನು ಚರ್ಚೆಮಾಡಲೂ ಹೋಗಲಿಲ್ಲ. ಸರ್ವಶಕ್ತನಾದ ಭಗವಂತನು ಬೇಕೆಂದು ಬಯಸಿದ್ದರೆ ಬಲಾತ್ಕಾರದಿಂದ ಪಡೆದುಕೊಳ್ಳಬಹುದಿತ್ತು. ಆದರೆ ಮತ್ತೊಬ್ಬರ ಸ್ವತ್ತನ್ನು ಆಕ್ರಮಿಸುವ ಹಕ್ಕನ್ನು ಪ್ರದರ್ಶಿಸಬಾರದು. ಇಲ್ಲಿ ಶ್ರೀಕೃಷ್ಣನು ಸತ್ರಾಜಿತನ ಸ್ವಾರ್ಥ ಮತ್ತು ...... ಗಳಿಸಿದ್ದನು. ಜನರ ಹಿತಕ್ಕಾಗಿ ಬಳಸಬೇಕೆಂಬ ಎರಡು ಅಂಶಗಳನ್ನೂ ತಿಳಿಸಿದ.

ಮುಂದೆ ಒಂದು ದಿನ ಸತ್ರಾಜಿತನ ತಮ್ಮನಾದ ಪ್ರಸೇನನು ಮಣಿಯನ್ನು ಧರಿಸಿ ಅರಣ್ಯಕ್ಕೆ ಬೇಟೆಗೆಂದು ಹೋದ. ಅಲ್ಲಿ ಸಿಂಹ ಬಂದು ಅವನನ್ನು ಸಂಹರಿಸಿ ರತ್ನವನ್ನು ತೆಗೆದುಕೊಂಡು ಹೊರಟಿತು. ಅದನ್ನು ಕಂಡ ಜಾಂಬವಂತನು ಸಿಂಹವನ್ನೂ ಸಂಹರಿಸಿ ಮಣಿಯನ್ನು ತೆಗೆದುಕೊಂಡು ಹೋಗಿ ತನ್ನ ಗುಹೆಯಲ್ಲಿ ತೊಟ್ಟಿಲಲ್ಲಿ ಮಲಗಿದ ಮಗುವಿಗೆ ಆಟಿಕೆ ವಸ್ತುವನ್ನಾಗಿ ಕೊಟ್ಟ.

ಇತ್ತ ಸತ್ರಾಜಿತನ ತಮ್ಮನು ಬಾರದಿರಲು ಸತ್ರಾಜಿತನು, ಕೃಷ್ಣನು ಮಣಿಗಾಗಿ ನಡೆಸಿದ ತಂತ್ರಗಾರಿಕೆ ಇದು. ಪ್ರಸೇನನನ್ನು ಕೊಂದಿದ್ದಾನೆಂದು ಅಪವಾದ ಹೊರೆಸಿದ.

ಕರ್ಣಾಕರ್ಣಿಕೆಯಾಗಿ ಅಪವಾದದ ಸುದ್ದಿ ಕೃಷ್ಣನ ಕಿವಿಗಳನ್ನು ಮುಟ್ಟಿದವು. ಕೃಷ್ಣನು ತನ್ನ ಮೇಲೆ ಬಂದ ಆರೋಪವನ್ನು ಪರಿಹರಿಸಿಕೊಳ್ಳುವುದು ತನ್ನ ಕರ್ತವ್ಯವೆಂದು ಹೊರಟ.

## ರಾಜನೀತಿ

ಇದೊಂದು ದೊಡ್ಡ ರಾಜನೀತಿಯಾಗಿದೆ. ರಾಜರಾದವರು ತಮ್ಮ ಮೇಲೆ ಅಪವಾದ ಬಂದರೆ ಅದನ್ನು ಮುಚ್ಚಿಡುವ ಕೆಲಸವನ್ನು ಮಾಡಬಾರದು. ಅಪವಾದವನ್ನು ಪರಿಹರಿಸಿಕೊಳ್ಳಬೇಕು.

ಶ್ರೀರಾಮನ ಮಡದಿಯಾದ ಸೀತೆಯ ಬಗ್ಗೆಯೂ ಅಪವಾದ ಬಂತು. ಪುರಾಣಕರೆಂಬ ದೈತ್ಯರು ಅಪಪ್ರಚಾರ ಮಾಡಿದರು. ರಾವಣನು ಅಪಹರಿಸಿದ ಸೀತೆಯನ್ನು ಶ್ರೀರಾಮನು ತನ್ನ ಪಟ್ಟದರಸಿಯನ್ನಾಗಿ ಸ್ವೀಕರಿಸುವುದು ಉಚಿತವೇ? ಎಂದು ಪ್ರಚಾರ ಮಾಡಿದರು. ಮಡಿವಾಳನೊಬ್ಬ ನೆಪವಾದ.

ದೈನಂದಿನ ವಾರ್ತೆಯನ್ನು ತಲುಪಿಸುವ ಗೂಢಚಾರರು ಶ್ರೀರಾಮನ ಬಗ್ಗೆ ಜನರಿಗಿರುವ ಸದ್ಭಾವನೆಗಳನ್ನೆಲ್ಲ ವ್ಯಕ್ತಗೊಳಿಸಿ ಅಪವಾದದ ಕಹಿ ನುಡಿಯನ್ನು ನುಡಿದರು. ಜನ ಸೇರುವ ಉದ್ಯಾನಗಳಲ್ಲಿ ಸಮಾರಂಭಗಳಲ್ಲಿ ನಾಟ್ಯಗೃಹದಲ್ಲಿ ಹತ್ತು ಜನ ಸೇರುವಲ್ಲೆಲ್ಲ ಇದೇ ಸುದ್ದಿ ರಾಮನು ಕಲುಷಿತಳಾದ ಸೀತೆಗೆ ಸ್ಥಾನವನ್ನು ಹೇಗೆ ಕೊಟ್ಟ? ಎಂಬ ಆರೋಪವನ್ನು ಮಂಡಿಸಿದರು.

ಮರುದಿವಸ ನೂರಾರು ಮಂದಿಯ ಮುಂದೆ ಸಭೆಯಲ್ಲಿಯೇ ಶ್ರೀರಾಮನು ಈ ವಿಷಯವನ್ನು ಪ್ರಸ್ತಾಪಮಾಡಿದ. 'ದೂತರು ಹೇಳಿದ ಮಾತು ಸತ್ಯವೋ?' ಎಂದ. ಜನರೆಲ್ಲ ತಲೆ ತಗ್ಗಿಸಿ ಹೌದು' ಎಂದರು.

ಶ್ರೀರಾಮನು ಜನರ ಭಾವನೆಯನ್ನು ಕಲುಷಿತಗೊಳಿಸಬಾರದೆಂದು ವಾಲ್ಮೀಕಿಗಳ ಆಶ್ರಮಕ್ಕೆ ಸೀತೆಯನ್ನು ಕಳುಹಿಸಿದ. ಶ್ರೀರಾಮನಾಗಲೀ ಶ್ರೀಕೃಷ್ಣನಾಗಲೀ ಯಾವುದೇ ರೀತಿಯ ಹಗರಣಕ್ಕೆ ರಾಜನಾದವನು ಒಳಗಾಗಬಾರದು, ಸಂಶಯಾತೀತನಾಗಿರ ಬೇಕೆಂದು ತೋರಿಸಿದ. ತನ್ನ ಮೇಲಿನ ಆರೋಪಪರಿಹಾರಕ್ಕಾಗಿ ಸೀತಾಮಾತೆಯನ್ನು ಅರಣ್ಯಕ್ಕೆ ಕಳುಹಿಸಿಕೊಟ್ಟ.

ಕೃಷ್ಣನೂ ತನ್ನ ಮೇಲಿನ ಆರೋಪವನ್ನು ಮುಚ್ಚಿಡದೆ ಸತ್ಯದ ಅನ್ವೇಷಣೆಗಾಗಿ ಕಾಡಿಗೆ ಹೊರಟ. ಅನೇಕರನ್ನು ಕರೆದುಕೊಂಡು ಹೋಗಿ ದಾರಿಯಲ್ಲಿ ಸತ್ತುಬಿದ್ದ ಪ್ರಸೇನನನ್ನು ತೋರಿಸಿದ. ಅಲ್ಲಿಯೇ ಒಂದು ಸಿಂಹದ ಹೆಜ್ಜೆ ಕಂಡಿತು. ಅದನ್ನನುಸರಿಸಿ ಮುಂದೆ ಸಾಗಲು ಸಿಂಹವೂ ಸತ್ತು ಬಿದ್ದಿತ್ತು. ಮುಂದೆ ಒಂದು ಕರಡಿಯ ಹೆಜ್ಜೆಯ ಗುರುತು ಕಂಡಿತು. ಅದನ್ನನುಸರಿಸಲು ಜಾಂಬವಂತನ ಗುಹೆ ದೊರಕಿತು.

ಕೃಷ್ಣನು ತಾನು ರಚಿಸಿದ ವಿಚಾರಣಾ ಆಯೋಗಕ್ಕೆ ಹೇಳಿದ. ನಾನು ಗುಹೆ ಒಳಗೆ ಹೋಗಿ ಪರಿಶೀಲಿಸಿ ಬರುತ್ತೇನೆ. ನೀವು ಇಲ್ಲೇ ದ್ವಾರದಲ್ಲಿ ಹನ್ನೆರಡು ದಿನಗಳ ಕಾಲ ನಿರೀಕ್ಷಿಸಿ ಮತ್ತೆ ತೆರಳಿರಿ! ಎಂದು ಒಳಗೆ ನಡೆದ. ಅವರ್ಯಾರೂ ಒಳಗೆ ಹೋಗು ವಂತಿರಲಿಲ್ಲ.

ಜಾಂಬವಂತನು ತ್ರೇತಾಯುಗದ ಮಹಾವೀರ. ಅವನನ್ನು ಕಂಡರೆ ಎಲ್ಲರಿಗೂ ಬಹಳ ಭಯ. ಕೃಷ್ಣನು ಒಳಗೆ ಹೋಗಿ ಸ್ಯಮಂತಕಮಣಿಯನ್ನು ಕಂಡ. ಜಾಂಬವಂತ ಕೃಷ್ಣನನ್ನು ಕಂಡು ಸಿಡಿದೆದ್ದು ಬಂದ. ಇಪ್ಪತ್ತೆಂಟು ದಿನಗಳ ಕಾಲ ಭಯಂಕರ ಯುದ್ಧ ನಡೆಯಿತು. ಜಾಂಬವಂತನು ನನ್ನೊಟ್ಟಿಗೆ ಇಷ್ಟು ಸಮಯ ಯುದ್ಧ ಮಾಡುವ ವೀರಾಧಿವೀರನಾರೆಂದು ಪರಾಂಬರಿಸಲು ತ್ರೇತಾಯುಗದ ಶ್ರೀರಾಮಚಂದ್ರನೇ ಈಗ ಶ್ರೀಕೃಷ್ಣನಾಗಿ ಬಂದಿದ್ದಾನೆಂದು ತಿಳಿಯಿತು.

ಜಾಂಬವಂತ ಭಾವುಕನಾದ. ಶ್ರೀರಾಮನ ಹಿರಿಮೆಗರಿಮೆಗಳನ್ನು ಹಾಡಿ ಹೊಗಳಲಾರಂಭಿಸಿದ. ಭಕ್ತಿಯಿಂದ ಸ್ಮರಿಸಿದ ಜಾಂಬವಂತನಿಗೆ ಪರಮಾನುಗ್ರಹ ವನ್ನು ಮಾಡಿದ. ಜಾಂಬವಂತನು ತನ್ನ ಮಗಳಾದ ಜಾಂಬವತಿಯನ್ನು ಸ್ಯಮಂತ ಕಮಣಿಯನ್ನು ಶ್ರೀಕೃಷ್ಣನ ಅಡಿದಾವರೆಗಳಲ್ಲಿ ಸಮರ್ಪಿಸಿದ.

ಇತ್ತ ವಿಚಾರಣಾ ಆಯೋಗದ ಸದಸ್ಯರು ಹನ್ನೆರಡು ದಿನಗಳ ಕಾಲ ನಿರೀಕ್ಷಿಸಿ ಕೃಷ್ಣನು ಬಾರದಿದ್ದನ್ನು ಕಂಡು ಅನರ್ಥ ಚಿಂತಿಸಿ ದುಃಖಿತರಾಗಿ ದ್ವಾರಕೆಗೆ ತೆರಳಿದರು. ಸತ್ರಾಜಿತನು ಕೃಷ್ಣನ ಮೇಲೆ ಅಪವಾದ ಹೊರಿಸಿ ಅನ್ಯಾಯಮಾಡಿದ ಎಂದು ಅವನನ್ನು ನಿಂದಿಸುತ್ತಾ ದುಃಖಭಾಗಿಗಳಾಗಿದ್ದಾರೆ. ಶ್ರೀಕೃಷ್ಣನಿಗಾಗಿ ವಿಶೇಷವಾಗಿ ಪೂಜೆ ಪ್ರಾರ್ಥನೆ ಎಲ್ಲವನ್ನೂ ಸಲ್ಲಿಸಿದರು.

ಕೃಷ್ಣನು ಕನ್ಯಾಮಣಿ ಸಹಿತನಾಗಿ ಸ್ಯಮಂತಕಮಣಿಯನ್ನು ಸಂಗ್ರಹಿಸಿಕೊಂಡು ಬಂದ. ಎಲ್ಲರೂ ಆನಂದಭರಿತರಾಗಿದ್ದಾರೆ. ಸತ್ರಾಜಿತನು ಪಶ್ಚಾತ್ತಾಪದಿಂದ ತಲೆ ತಗ್ಗಿಸಿದ. ಇಷ್ಟೆಲ್ಲ ದುರಂತಕ್ಕೆ ತಾನು ಕಾರಣನಾದೆ ಎಂದು ದುಃಖಿಸಲಾರಂಭಿಸಿದ. ಅದರ ಪ್ರಾಯಶ್ಚಿತ್ತರೂಪವಾಗಿ ತನ್ನ ಮಗಳಾದ ಸತ್ಯಭಾಮೆಯನ್ನು ವಿವಾಹಮಾಡಿ ಕೊಟ್ಟ. ಜತೆಗೆ ಹಿಂದೆ ಕೇಳಿದಾಗಲೂ ಸ್ಯಮಂತಕಮಣಿಯನ್ನು ಕೊಡದವ ಈಗ ತಾನಾಗಿಯೇ ಅರ್ಪಿಸಿದ. ವರದಕ್ಷಿಣೆಯಾಗಿ ಸ್ಯಮಂತಕಮಣಿಯನ್ನು ಅರ್ಪಿಸಲು ಶ್ರೀಕೃಷ್ಣ ಆದರ್ಶ ತ್ಯಾಗವನ್ನು ಮಾಡಿ ಮಣಿಯನ್ನು ಹಿಂದೆ ತಿರುಗಿಸಿದ. ವರದಕ್ಷಿಣೆ ಒಟ್ಟಿಗೆ ಕೊಟ್ಟ ಕನ್ಯಾಮಣಿ ಸಾಕು. ಸ್ಯಮಂತಕಮಣಿ ಬೇಡವೆಂದ.

ಹೀಗೆ ಕೃಷ್ಣಪರಮಾತ್ಮನ ಪ್ರತಿಯೊಂದು ಕ್ರಿಯೆಗಳಲ್ಲಿಯೂ ಅನೇಕ ಆದರ್ಶಗಳಿವೆ. ತನ್ನ ಮೇಲೆ ಆರೋಪಬಂದಾಗ ಆಯೋಗವೊಂದನ್ನು ರಚಿಸಿ ವಿಚಾರಣೆ ನಡೆಸಿದ. ಈ ಮೂಲಕ ಇಂದಿನ ರಾಜಕಾರಣಿಗಳಿಗೆಲ್ಲ ತಿಳಿಹೇಳಿದ. ರಾಜಕೀಯರಂಗದಲ್ಲಿ ಯಾರಾದರೂ ಅಪವಾದಕ್ಕೆ ತುತ್ತಾದರೆ ಅದನ್ನು ಹೇಗೆ ಪರಿಹರಿಸಿಕೊಳ್ಳಬೇಕೆಂದು ಆಧುನಿಕ ರಾಜಕಾರಣಿಗಳಿಗೆ ಮಾರ್ಗದರ್ಶನವನ್ನು ಮಾಡಿದ. ಅದ್ಭುತವಾದ ಮಣಿಯನ್ನು ಸತ್ರಾಜಿತನು ನೀಡಿದರೂ ವರದಕ್ಷಿಣೆಯನ್ನು ಹಿಂದೆ ತಿರುಗಿಸಿಕೊಟ್ಟು ಪುರುಷರು ಹೇಗೆ ವರ್ತಿಸಬೇಕೆಂಬುದನ್ನು ತಿಳಿಸಿದ. ರಾಜಕೀಯ, ಸಾಮಾಜಿಕ, ಧಾರ್ಮಿಕ ಮುಂತಾದ ಪ್ರತಿಯೊಂದು ವ್ಯವಹಾರ ದಲ್ಲಿಯೂ ಹೇಗೆ ವರ್ತಿಸಬೇಕೆಂಬುದನ್ನು ಈ ಸಂದರ್ಭದಲ್ಲಿ ತಿಳಿಸಿಕೊಟ್ಟಿದ್ದಾನೆ. ಸತ್ರಾಜಿತನು ಸತ್ಯಭಾಮೆಯನ್ನು ವಿವಾಹಮಾಡಿಕೊಟ್ಟ. ಎಲ್ಲವೂ ಸುಖಾಂತವಾಗಿ ಮಂಗಳ ವಾತಾವರಣ ಏರ್ಪಟ್ಟಿತು.

## ಸತ್ಯಭಾಮೆಯು ಸಾಮಾನ್ಯ ಸ್ತ್ರೀಯಲ್ಲ

ಶ್ರೀಕೃಷ್ಣನು ಸ್ವೀಕರಿಸಿದ ಸತ್ಯಭಾಮೆ ರುಕ್ಮಿಣಿಯರಿಬ್ಬರೂ ಸಾಕ್ಷಾತ್ ಮಹಾ ಲಕ್ಷ್ಮಿಯ ಸ್ವರೂಪರೇ. ಅವರೀರ್ವರಲ್ಲಿ ಯಾವುದೇ ರೀತಿಯ ವ್ಯತ್ಯಾಸವೂ ಇಲ್ಲ. ಅವರೀರ್ವರ ಜಗಳ ಸ್ಪರ್ಧೆ ಏನೆಲ್ಲ ಪುರಾಣಗಳಲ್ಲಿ ಕಾಣುತ್ತವೆಯೋ ಇವೆಲ್ಲವೂ ಮಾನವ ದೃಷ್ಟಿಯಿಂದ ಮಾತ್ರ ಮಾಡಿದ್ದಾರೆ. ನಟನೆಯೇ ಹೊರತು ವಾಸ್ತವವಲ್ಲ. ಇದನ್ನು ಸರಿಯಾಗಿ ಅರಿತುಕೊಳ್ಳಬೇಕು. ತಪ್ಪಾಗಿ ಗ್ರಹಿಸಿ ಅನರ್ಥಕ್ಕೆ ಭಾಗಿಗಳಾಗ ಬಾರದು.

ಧರೆಯ ಮಗನಾದ ನರಕಾಸುರನು ಧರೆಯ ಮಂದಿಗೆಲ್ಲ ನರಕಸದೃಶನಾಗಿದ್ದ. ವರಬಲದಿಂದ ಉನ್ಮತ್ತನಾಗಿದ್ದ. ಶತ್ರುಗಳಿಂದ ಆಕ್ರಮಿಸಲು ಅಸಾಧ್ಯವಾದ ಭದ್ರ ಕೋಟೆಯನ್ನು ನಿರ್ಮಿಸಿದ್ದ.

ನರಕನ ದುರ್ವರ್ತನೆಯು ಎಲ್ಲೆಮೀರಿದಾಗ ಭಗವಾನ್ ಶ್ರೀಕೃಷ್ಣನು ಸತ್ಯ ಭಾಮೆಯ ಒಟ್ಟಿಗೆ ಅವನ ಸಂಹಾರಕ್ಕಾಗಿ ತೆರಳಿದ. ಪ್ರಾಗ್ಜ್ಯೋತಿಷಪುರದಲ್ಲಿ ನರಕನು ನಿರ್ಮಿಸಿದ ದುರ್ಗಮವಾದ ದುರ್ಗಗಳನ್ನೆಲ್ಲ ದಾಟಿದ. ಕೊನೆಗೆ ಅಚ್ಛೇದ್ಯ ಅಭೇದ್ಯಗಳಾದ ಮುರನ ಪಾಶಗಳನ್ನು ಸಮೀಪಿಸಿದ. ಅವುಗಳನ್ನು ಬಾಣದಿಂದ ಛೇದಿಸಿದ. ಛೇದನದಿಂದ ಉಂಟಾದ ಶಬ್ದವು ಮುರನ ಉರವನ್ನೇ ಬಿರಿಯಿತು. ಮುರನು ಬೆದರಿ ಕಂಗಾಲಾಗಿ ಶ್ರೀಕೃಷ್ಣನ ವಿರುದ್ಧ ಹೋರಾಡಲೆಂದು ಭಿರಭಿರನೆ ಬಂದ. ಕೃಷ್ಣನ ಬಲ ತೇಜಸ್ಸುಗಳಿಂದ ಅಭಿಭೂತನಾಗಿ ಮೃತನಾದ. ಮುರನ ಉರವನ್ನು ಸೀಳಿದ ಕೃಷ್ಣ ಮುರಾರಿ ಎಂದೇ ಖ್ಯಾತನಾದ.

ಮುರನ ಪಾಶ ಯಾರಿಗೂ ಭೇದಿಸಲಾಗುತ್ತಿರಲಿಲ್ಲ. ಅದಕ್ಕಿಂತಲೂ ಭವಪಾಶವು ಅಭೇದ್ಯವಾದುದು. ಶ್ರೀಕೃಷ್ಣನು ಭವಪಾಶವನ್ನೇ ತುಂಡರಿಸುತ್ತಿರಲು ಮುರನ ಪಾಶ ಗಣನೆಗೆ ಸಿಗದು. ಮುರನ ಪಾಶದಿಂದ ಮುಂದೆ ಸಾಗಲು ಯಾರಿಗೂ ಸಾಧ್ಯ ವಾಗುತ್ತಿರಲಿಲ್ಲ. ಅದರಂತೆ ಭವಪಾಶದಿಂದಾಗಿ ನಾವೂ ಮುಂದೆ ಸಾಗುತ್ತಿಲ್ಲ. ನರಕನ ರಾಜಧಾನಿಯ ಮುರಪಾಶವನ್ನು ಕೃಷ್ಣ ಛೇದಿಸಿದಂತೆ ಘೋರ ಸಂಸಾರವೆಂಬ ನರಕದಲ್ಲಿ ಮೋಹಪಾಶಗಳನ್ನು ಶ್ರೀಕೃಷ್ಣನು ಛೇದಿಸಬೇಕು. ಪಾಗ್ಜ್ಯೋತಿಷಪುರಿಗೆ ಆಗಮಿಸಿದಂತೆ ಹೃದಯವೆಂಬ ಪಟ್ಟಣಕ್ಕೆ ಆಗಮಿಸಬೇಕು.

ಮುಂದೆ ನರಕನಿಗೂ ನರಹರಿಗೂ ಭಯಂಕರ ಕದನ ನಡೆಯಿತು. ಯುದ್ಧದಲ್ಲಿ ಬಳಲಿದ ನರಕಾಸುರ ದಾರಿಕಾಣದೆ ಬ್ರಹ್ಮದತ್ತವಾದ ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸಿದ.

ಈ ಸಂದರ್ಭದಲ್ಲಿ ಶ್ರೀಕೃಷ್ಣಪರಮಾತ್ಮ ತನ್ನ ಭಕ್ತನಾದ ಬ್ರಹ್ಮದೇವನಿಗೆ ಸ್ವಲ್ಪ ಮಹತ್ವಬರಲೆಂದು ಮೂರ್ಛಿತನಂತೆ ನಟಿಸಿದ.

ಹನುಮಂತನೂ ಸಹ ಇಂದ್ರಜಿತು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದಾಗ ಹೀಗೇ ನಟಿಸಿದ್ದ. ಕೃಷ್ಣ ಮೂರ್ಛಿತನಾದಾಗ ಕೂಡಲೇ ಸತ್ಯಭಾಮಾ ಮುಂದೆ ಬಂದಳು. ನರಕನ ಒಟ್ಟಿಗೆ ಹೋರಾಡಲು ಕದನದ ಕಣಕ್ಕಿಳಿದಳು. ಶಸ್ತ್ರಾಸ್ತ್ರಗಳಿಂದ ನರಕನ ಬಾಣಗಳನ್ನೆಲ್ಲಾ ಛಿನ್ನಛಿನ್ನಗೊಳಿಸಿದಳು. ದೊಡ್ಡ ವೀರ ಮಹಿಳೆಯಂತೆ ಹೋರಾಟ ನಡೆಸಿದಳು.

ಇಲ್ಲಿಯೂ ಒಂದು ಸಂದೇಶ ಅಡಕವಾಗಿದೆ.

ನಮ್ಮೆಲ್ಲರ ಮನೆಮನಗಳಲ್ಲಿ ಅಧರ್ಮನೆಂಬ ನರಕನ ಹಾವಳಿ ದಿನೇ ದಿನೇ ಹೆಚ್ಚುತ್ತಿದೆ. ಎಲ್ಲಾ ಪುರುಷರು ನರಕ, ಮುರನಂತಿರುವ ಅಧರ್ಮ ಅನ್ಯಾಯಗಳ ವಿರುದ್ಧ ಸೆಣಸಾಡಬೇಕು. ಪುರುಷರೇನಾದರೂ ಹೋರಾಟದಲ್ಲಿ ಆಲಸ್ಯ ತೋರಿಸಿದರೆ; ಕೃಷ್ಣ ಮೂರ್ಛಿತನಾದಾಗ ಸತ್ಯಭಾಮೆ ಸಿಡಿದೆದ್ದಂತೆ ನಮ್ಮ

ಸ್ತ್ರೀಸಮಾಜವೂ ಜಾಗ್ರತೆವಹಿಸಬೇಕು. ಅಧರ್ಮ ಅನ್ಯಾಯಗಳ ವಿರುದ್ಧ ಸ್ತ್ರೀಯರೂ ಹೋರಾಟ ನಡೆಸಬೇಕು

ನಮ್ಮ ಸನಾತನ ಹಿಂದೂ ಧರ್ಮದ ರಕ್ಷಣೆ ಸ್ತ್ರೀ ಮತ್ತು ಪುರುಷ ಇಬ್ಬರ ಕರ್ತವ್ಯವೂ ಆಗಿದೆ. ಈ ಸಂದೇಶವನ್ನು ಕೃಷ್ಣ ಮತ್ತು ಸತ್ಯಭಾಮೆಯರು ನರಕನ ಸಂಹಾರದ ಮೂಲಕ ಸೂಚಿಸಿದ್ದಾರೆ.

ಅಧರ್ಮಗಾಮಿಯಾದ ತನ್ನ ಮಗನ ಸಂಹಾರದಿಂದ ಭೂದೇವಿ ಸಂತುಷ್ಟಳಾಗಿ ಭಗವಂತನನ್ನು ಸ್ತುತಿಸುತ್ತಾಳೆ–

ನಮೋ ಭಗವತೇ ತುಭ್ಯಂ ವಾಸುದೇವಾಯ ವಿಷ್ಣವೇ ।
ಪುರುಷಾಯಾದಿಬೀಜಾಯ ಪೂರ್ಣಬೋಧಾಯ ತೇ ನಮಃ ॥

— (೧೦-೬೪-೨೧)

ಎಂದು. ಮಗನು ಸತ್ತರೂ ಚಿಂತೆಯಿಲ್ಲ. ಧರ್ಮ ನಾಶವಾಗಬಾರದೆಂಬ ಉದಾತ್ತ ಮನೋಭಾವವನ್ನು ಸ್ವಲ್ಪಮಟ್ಟಿಗಾದರೂ ನಮ್ಮ ಸ್ತ್ರೀಯರಾಗಲೀ ತಂದೆಯರಾಗಲೀ ಅರಿತುಕೊಳ್ಳಬೇಕು.

ನರಕಾಸುರನು ಸಂಹೃತನಾದ ಬಳಿಕ ಭೂದೇವಿಯು ನರಕನ ಮಗನಾದ ಭಗದತ್ತನನ್ನು ಶ್ರೀಕೃಷ್ಣನ ಪಾದಾರವಿಂದಗಳಿಗೆ ಸಮರ್ಪಿಸಿದಳು. ನರಕನು ಅಪಹರಿಸಿ ತಂದಿದ್ದ ಅದಿತಿಯ ಕರ್ಣಕುಂಡಲಗಳನ್ನು ವೈಜಯಂತೀಮಾಲೆಯನ್ನೂ ಅರ್ಪಿಸಿದಳು. ಮತ್ತು ಅನೇಕ ಪದಾರ್ಥಗಳನ್ನೆಲ್ಲ ದಾನಮಾಡಿದಳು.

ನರಕನ ಸಂಹಾರದ ಬಳಿಕ ಶ್ರೀಕೃಷ್ಣನು ಸಮಸ್ತ ರಾಜ್ಯವನ್ನು ತನ್ನದೆಂದು ಸ್ವೀಕರಿಸಬಹುದಿತ್ತು. ಆದರೆ ಎಲ್ಲವನ್ನೂ ಕಬಳಿಸುವ ದುರ್ಮತಿಯ ರಾಜಕಾರಣಿಯಾಗದೆ ನರಕನ ಮಗನಾದ ಭಗದತ್ತನಿಗೇ ಕೊಟ್ಟ. ಸಿಂಹಾಸನದಲ್ಲಿ ಭಗದತ್ತನನ್ನು ಕೂಡಿಸಿ ಪಟ್ಟಾಭಿಷೇಕವನ್ನಾಚರಿಸಿದ.

ಶ್ರೀಕೃಷ್ಣನು ಅಧರ್ಮದ ನಾಶ, ಧರ್ಮದ ಪುನರುತ್ಥಾನಕ್ಕಾಗಿ ಬಂದವನೇ ಹೊರತು ಅಧಿಕಾರ ಸಾಮ್ರಾಜ್ಯ ವಿಸ್ತರಣೆ ಮುಂತಾದ ಯಾವ ದುರುದ್ದೇಶಕ್ಕಾಗಿಯೂ ಅವತಾರ ಮಾಡಿದವನಲ್ಲ.

## ಹಬ್ಬದಾಚರಣೆ ಏಕೆ?

ನರಕನಿಂದ ಅಪಹೃತರಾದ ಸಾವಿರಾರು ರಾಜಪುತ್ರಿಯರನ್ನು ಬಂಧನದಿಂದ ಬಿಡುಗಡೆ ಮಾಡಿದ. ಅಬಲೆಯರಾದ ಸ್ತ್ರೀಯರೆಲ್ಲ ಬೇರೆ ಗತಿಗಾಣದೆ ಶ್ರೀಕೃಷ್ಣನ ಪಾದಾರವಿಂದಗಳನ್ನೇ ಆಶ್ರಯಿಸಿದಾಗ ಅವರನ್ನು ಕರುಣೆಯಿಂದ ಸ್ವೀಕರಿಸಿದ. ಅವರೆಲ್ಲರಿಗೂ ವಿಶೇಷ ಅನುಗ್ರಹವನ್ನು ಮಾಡಿ ಪಾಲಕಿಯಲ್ಲಿ ದ್ವಾರಕೆಗೆ ಕಳುಹಿಸಿ ಕೊಟ್ಟ.

ಹೀಗೆ ಭೂಸುರರ ಅನಿಷ್ಟದಂತಿರುವ ಮುರ ನರಕರ ಶಿರಗಳನ್ನುರುಳಿಸಿ ಇಷ್ಟರೂಪನಾದ ತನ್ನನ್ನೇ ಅವರಿಗೆ ನೀಡಿದ.

ನಾವೆಲ್ಲರೂ ಇಂದು ವಿಜೃಂಭಣೆಯಿಂದ ದೀಪಾವಳಿ ಹಬ್ಬವನ್ನು ಆಚರಿಸುತ್ತಿದ್ದೇವೆ. ಇದಕ್ಕೆ ಕಾರಣ ನಮ್ಮ ದೇಶದಲ್ಲಿ ಮಹಿಳೆಯರಿಗೆ ಉನ್ನತ ಸ್ಥಾನವಿದೆ. ಅವರಿಗೆ ಎಂದೂ ಅಪಮಾನವಾಗಬಾರದು. ನರಕನು ರಾಜರ ಕುವರಿಯರನ್ನೂ ಬಲಾತ್ಕಾರದಿಂದ ಅಪಹರಿಸಿ ಅವರ ಮಾನಹರಣದ ಘೋರ ಕೃತ್ಯಕ್ಕೆ ಆಲೋಚನೆ ಮಾಡಿದಾಗ ಅವನನ್ನು ಸಂಹರಿಸಿದ. ಅವರೆಲ್ಲರಿಗೂ ರಕ್ಷಣೆ ನೀಡಿದ. ಮಾನಿನಿಯರ ಮಾನಸಂರಕ್ಷಣೆ ಮಾಡಿದ. ಇದನ್ನು ಸಾಂಕೇತಿಸಲು ಹಬ್ಬದ ಆಚರಣೆ. ಈ ಮೂಲಕ ಶ್ರೀಕೃಷ್ಣನು ಮಹಿಳೆಯರ ರಕ್ಷಣೆ ಮನುಕುಲದ ಕರ್ತವ್ಯ, ಅವರೆಂದೂ ಅನ್ಯಾಯ ಅತ್ಯಾಚಾರಗಳಿಗೆ ಗುರಿಯಾಗದಂತೆ ಎಚ್ಚರ ವಹಿಸಬೇಕು ಎನ್ನುವುದನ್ನು ಸಾವಿರಾರು ಸ್ತ್ರೀಯರನ್ನು ರಕ್ಷಿಸಿ ಸೂಚಿಸಿದ. ಇದೆಲ್ಲವನ್ನು ಗಮನದಲ್ಲಿಟ್ಟುಕೊಂಡು ಹಬ್ಬವನ್ನು ಆಚರಿಸಿದಾಗ ಮತ್ತು ನಮ್ಮ ಹಬ್ಬದ ಸವಿಯೂಟ, ಪಟಾಕಿ ಸಂಭ್ರಮ, ನೂತನ ವಸ್ತ್ರಗಳ ಧಾರಣೆ–ಆನಂದದ ಉದ್ಗಾರ ಎಲ್ಲವೂ ಅರ್ಥಪೂರ್ಣವೆನಿಸುತ್ತದೆ.

## ಅಹಂಕಾರಿಗಳಾಗದಿರಿ!!

ಮುಂದೆ ಶ್ರೀಕೃಷ್ಣನು ಸತ್ಯಭಾಮೆಯಿಂದೊಡಗೂಡಿ ದೇವೇಂದ್ರನ ರಾಜಧಾನಿಗೆ ನಡೆದ. ಅಲ್ಲಿ ಅದಿತಿದೇವಿಗೆ ನರಕನನ್ನು ತರಿದು ತಂದ ಕರ್ಣಕುಂಡಲಗಳನ್ನು ಕೊಟ್ಟ. ದೇವೇಂದ್ರನು ಪರಮಾನಂದಭರಿತನಾಗಿ ಶ್ರೀಕೃಷ್ಣನನ್ನು ಆದರದಿಂದ ಬರಮಾಡಿಕೊಂಡ.

ಶ್ರೀಕೃಷ್ಣ–ಸತ್ಯಭಾಮೆಯರು ದೇವಲೋಕದ ನಂದನವನದಲ್ಲಿ ಆನಂದದಿಂದ ವಿಹರಿಸುತ್ತಿರಲು ಅಲ್ಲಿದ್ದ ಪಾರಿಜಾತದ ಪ್ರಭೆಯನ್ನು ಕಂಡಳು. ಅವಳಿಗೆ ತನ್ನ ಮನೆಯಂಗಳಕ್ಕೆ ಕೊಂಡೊಯ್ಯುವ ಬಯಕೆ ಚಿಗುರಿತು. ಕೃಷ್ಣನಲ್ಲಿ ನಿವೇದಿಸಿದಳು. ಕೃಷ್ಣನು ಪಾರಿಜಾತವನ್ನು ಕಿತ್ತುಕೊಂಡು ಗರುಡನ ಬೆನ್ನಿನಲ್ಲಿಟ್ಟು ನಡೆದ. ಆದರೆ ದೇವಲೋಕದ ಅಮೂಲ್ಯವಸ್ತುವೆನಿಸಿದ ಪಾರಿಜಾತವನ್ನು ದೇವೇಂದ್ರ ಕೊಡಲಾರೆ ಎಂದು ಪ್ರತಿಭಟಿಸಿದ. ಭಗವಂತನಿಂದಲೇ ದೇವರೊಡೆತನವನ್ನು ಹೊಂದಿದ ದೇವೇಂದ್ರ ಕೃತಘ್ನನಾಗಿ ವರ್ತಿಸಿದ. ದೇವತೆಗಳೂ ಅವನ ಜತೆಗೂಡಿದರು. ಒಂದುಪಕಾರವನ್ನು ಸ್ಮರಿಸದೆ ಕೃಷ್ಣನ ವಿರುದ್ಧ ಕದನದ ಕಣಕ್ಕಿಳಿದ. ಶ್ರೀಕೃಷ್ಣನು ಒಮ್ಮೆ ಧನುಷ್ಟೇಂಕಾರವನ್ನು ಮಾಡಿದ. ಎಲ್ಲರೂ ಹೆದರಿ ಮೂರ್ಛೆಹೋದರು. ಬಾಣಗಳಿಂದ ತುಂಬಿಹೋದರು. ಮತ್ತೆ ಶಾರ್ಙ್ಗಧನುಸ್ಸನ್ನು ಠೇಂಕರಿಸಲು ಎಚ್ಚರಗೊಂಡರು.

ಎಲ್ಲರಿಗೂ ಒಳಗಿನ ಹೊರಗಿನ ಎಚ್ಚರವಾಯಿತು. ಹೋ! ಇದು ನಮ್ಮ ಅಹಂಕಾರದ ಪ್ರಭಾವ. ಭಗವಂತನ ವಿರುದ್ಧ ಹೋರಾಟ ನಡೆಸುವುದು ತಪ್ಪು. ಹರಿಯ ಸ್ವತ್ತನ್ನು ನಮ್ಮದೆಂದು ಭ್ರಮಿಸಿದ್ದೇವೆ ಎಂದು ಎಲ್ಲರು ಶರಣಾಗತರಾದರು. ಮಕ್ಕಳಂತಿರುವ ದೇವತೆಗಳ ಆಟವನ್ನು ಕಂಡ ಮಹಾಮಾತೆ ಸತ್ಯಭಾಮೆಗೆ ನಗು

ಬಂದಿತು. ಪರಾಜಿತನಾದ ದೇವೇಂದ್ರನು ಸತ್ಯಭಾಮೆಗೆ ಹೇಳಿದ: "ದೇವಿ! ಅಮರರು ಯಕ್ಷ, ಸಿದ್ಧ, ಗಂಧರ್ವ, ಕಿನ್ನರ, ಪಿಶಾಚ, ನಿಶಾಚರರೆಲ್ಲರೂ ಒಟ್ಟಾಗಿ ಬಂದರೂ ಹರಿರೋಮವನ್ನು ಮುಟ್ಟರು. ಅವನ ವಿರುದ್ಧ ಎದೆ ಉಬ್ಬಿಸಿ ಹೆದೆ ಏರಿಸುವ ಎದೆಗಾರಿಕೆ ಯಾರಿಗಿದೆ? ಹೀಗಿರಲು ನಾವು ವಿರೋಧಮಾಡಲು ಸಾಧ್ಯವೇ? ನಿಮ್ಮಿಂದಲೇ ಬದುಕುತ್ತಿರುವ ನಾವು ಅಜ್ಞಾನದಿಂದ ನಿಮಗೆ ವಿರೋಧವನ್ನು ಕೆಲವೊಮ್ಮೆ ಮಾಡುತ್ತೇವೆ. ಯಾವ ರೀತಿಯಾಗಿ ಕರುವು ಹಸುವಿನ ಹಾಲನ್ನು ಕುಡಿಯುವಾಗ ಹಸುವಿನ ಕೆಚ್ಚಲಿಗೆ ಗುದ್ದುತ್ತದೆ, ವಿರೋಧ ಮಾಡುತ್ತದೆ ಅದರಂತೆ ಅಪ್ರಮೇಯಚರಿತ್ರನ ಸುಪುತ್ರರು–ಸಣ್ಣಮಕ್ಕಳು ಹಸುಕರುಣೆ ವ್ಯವಹಾರವನ್ನು ಜನರು ವಾತ್ಸಲ್ಯ ಎನ್ನುತ್ತಾರೆಯೇ ವಿನಾ ವಿರೋಧವೆನ್ನರು. ಅದರಂತೆ ಜಗತ್ತಿನ ತಂದೆತಾಯಿಗಳೊಟ್ಟಿಗೆ ಈ ಮಗುವು ವಿರೋಧಮಾಡುತ್ತಿದೆ. ಹಸುವಿನಂತೆ ಪ್ರೀತಿಯನ್ನೇ ನೀವು ತೋರುತ್ತಿದ್ದೀರಿ. ನಮ್ಮ ಅಪರಾಧವನ್ನು ಮನ್ನಿಸಿ ಕರುಣೆಯಿಂದ ಅನುಗ್ರಹಿಸಿರೆಂದು ಅಂಗಲಾಚಿದ–

ವತ್ಸೋ ಯಥಾ ತನುಬಲಃ ಸಕುದೇತ್ಯಮಾತ–
ಯೂರ್ಧಸ್ಯಪಾನಸಮಯೇ ಕುರುತೇ ವಿರೋಧಮ್ ।
ತದ್ವದ್ ವಯಂ ಚ ನಿಜಶೈಶವಮಪ್ರಮೇಯೇ
ನಾಥೇ ವಿರುಧ್ಯ ಪಿಶಿತಾಶನಿ ದರ್ಶಯಾಮಃ ॥ — (೧೦-೬೭-೨೨)

ತನ್ನ ಸಂಪತ್ತೆಲ್ಲವೂ ಭಗವಂತನದ್ದೆಂದು ಸಮರ್ಪಣಾಭಾವದಿಂದ ಶರಣಾಗತನಾದ.

ನರಕಾಸುರವಧೆ, ಪಾರಿಜಾತ ಆನಯನ ಈ ಎರಡು ಪ್ರಕರಣಗಳಲ್ಲಿ ಒಂದು ಸಂದೇಶವಿದೆ. ಸಕಲ ದೇವತೆಗಳ ಪದಾರ್ಥಗಳನ್ನು ಬಲಾತ್ಕಾರದಿಂದ ಅಪಹರಿಸುವ ನರಕನ ದೌರ್ಜನ್ಯವನ್ನು ಕಂಡು, ಠಕ್ಕನಿಗೆ ತಕ್ಕ ಶಿಕ್ಷೆ ವಿಧಿಸಿದ.

ಭಗವಂತನಿಂದ ಸಕಲವಿಧ ಉಪಕಾರಗಳನ್ನು ಪಡೆದರೂ ಎಲ್ಲಾ ಸ್ವತ್ತು ತನ್ನದೆಂದು ಉನ್ಮತ್ತನಾಗಿ ಸ್ವಾತಂತ್ರ್ಯ ಭ್ರಮೆಯಿಂದ ವರ್ತಿಸಿದಾಗ ಅವನಿಗೂ ಸರಿಯಾದ ಪಾಠ ಕಲಿಸಿದ. ಇಂದು ನಾವು ನರಕನಂತೆ ಇದ್ದೇವೆ. ನರಕನು ಧರೆಯ ಮಗನಾದಂತೆ ನಾವೂ ಭೂಮಾತೆಯ ಮಕ್ಕಳಾಗಿದ್ದೇವೆ. ನರಕನು ದೇವಲೋಕದ ಸ್ವತ್ತನ್ನು ಅಪಹರಿಸಿದಂತೆ ನಾವೂ ದೇವತೆಗಳ ಅಧಿಕಾರವನ್ನು ಪ್ರಶ್ನಿಸುವಷ್ಟು ಅಹಂಕಾರದಿಂದ ವರ್ತಿಸುತ್ತಿದ್ದೇವೆ. ನಮ್ಮ ದೇಹೇಂದ್ರಿಯಾಭಿಮಾನಿಗಳಾದ ದೇವತೆಗಳ ಮೇಲೆ ಅಧಿಕಾರ ಚಲಾಯಿಸಲು ಹೊರಟಿದ್ದೇವೆ.

ದೇವೇಂದ್ರನು ಪಾರಿಜಾತ ವೃಕ್ಷವನ್ನು ದೇವತೆಗಳಿಗೆ ಅರ್ಪಿಸಲು ಸಿದ್ಧನಾಗಲಿಲ್ಲ. ಅದರಂತೆ ನಾವೂ ಸಹ ನಮ್ಮ ಹೃದಯವೆಂಬ ಪಾರಿಜಾತವನ್ನು ಭಗವಂತನಿಗೆ ಅರ್ಪಿಸಲು ಸಿದ್ಧರಿಲ್ಲ. ದಿವಿಜರೊಡೆಯನು ಉನ್ಮತ್ತನಾದಾಗ ತಕ್ಕ ಪಾಠ ಕಲಿಸಿದಂತೆ ಉನ್ಮತ್ತರಾದ ನಮಗೂ ತಕ್ಕುದಾದ ಪಾಠವನ್ನು ಕಲಿಸುತ್ತಾನೆ. ಭಗವಂತನಿಂದಲೇ ಅಸ್ತಿತ್ವವನ್ನು ಹೊಂದಿ ಬದುಕುತ್ತಿರುವ ನಾವು ಎಂದೆಂದೂ ಅವನ ವಿಷಯದಲ್ಲಿ

ಕೃತಘ್ನರಾಗಿ ವರ್ತಿಸಬಾರದು. ಭಗವಂತನಿಗಾಗಿ ಸಕಲವನ್ನೂ ಸಮರ್ಪಿಸಬೇಕೆಂಬ ತ್ಯಾಗದ ಸಂದೇಶವನ್ನು ಈ ಕಥೆಯಿಂದ ಅರಿತುಕೊಳ್ಳಬೇಕು.

## ಈಶೋಽಹಂ ಎನ್ನದಿರಿ!!

ಕಾಶೀರಾಜನಿಗೆ ಗಂಡುಮಕ್ಕಳಿರಲಿಲ್ಲ 'ಸುತನು' ಎಂಬ ಮಗಳಿದ್ದಳು. ಅವಳನ್ನು ವಸುದೇವನು ವಿವಾಹವಾಗಿದ್ದನು. ಅವಳಲ್ಲಿ ಹುಟ್ಟಿದ ಮಗನೇ ಪೌಂಡ್ರಕವಾಸುದೇವ. ಮಗನು ದೊಡ್ಡವನಾದ ಬಳಿಕ ಅವನನ್ನು ಕಾಶಿರಾಜನ ಪಟ್ಟಣದಲ್ಲಿ ಕುಳ್ಳಿರಿಸಿ ವಸುದೇವನು ಮಥುರೆಗೆ ಆಗಮಿಸಿದ. ಕಂಸನ ತಂಗಿಯನ್ನು ಕೈಹಿಡಿದು ಸೆರೆಮನೆಯಲ್ಲಿ ಬಂಧಿತನಾದ.

ಇತ್ತ ಪೌಂಡ್ರಕವಾಸುದೇವ ಸುಂದರ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವ ಬದಲು ಉನ್ಮತ್ತನಾಗಿ ಬೆಳೆದ. ಮಥುರೆಯ ಅರಸನಾದ ಕಂಸನನ್ನು ಸಂಹರಿಸಿ ಕೃಷ್ಣನು ಲೋಕವಿಖ್ಯಾತನಾಗಲು ಪೌಂಡ್ರಕನ ಗರ್ವ ಪರ್ವತೋಪಮವಾಗಿ ಬೆಳೆಯಿತು. ಉದ್ವೇಗವನ್ನು ಸಹಿಸಲಾರದೆ ರಾತ್ರೋರಾತ್ರಿ ಮಥುರೆಯನ್ನು ಆಕ್ರಮಿಸಿದ. ಹಾರೆಗಳಿಂದ ಕೋಟೆಯ ಗೋಡೆಗಳನ್ನು ಕೆಡಹಲೆತ್ನಿಸಿದ. ಕೃಷ್ಣನಿಲ್ಲದ್ದನ್ನು ಗಮನಿಸಿ ಬಂದ ಇವನಿಗೆ ಜಯದ ಆಕಾಂಕ್ಷೆ ಪ್ರಬಲವಾಗಿತ್ತು. ಆದರೆ ಬಲರಾಮ ಸಾತ್ಯಕಿ ಮುಂತಾದ ಬಲಿಷ್ಠ ಯಾದವಯೋಧರಿಂದ ಪೆಟ್ಟುತಿಂದು ಓಡಿಹೋದ.

ಸ್ವಲ್ಪ ಸಮಯದ ಅನಂತರ ಪೌಂಡ್ರಕನು ಶ್ರೀಕೃಷ್ಣನಿಗೆ ಆಜ್ಞಾರೂಪವಾದ ಸಂದೇಶ ಒಂದನ್ನು ಕಳುಹಿಸಿದ. "ನೀನು ವಾಸುದೇವನಾಮವನ್ನು ತ್ಯಜಿಸಬೇಕು. ಶ್ರೀವತ್ಸಚಿಹ್ನೆ, ಕೌಸ್ತುಭಹಾರ ಗರುಡವಾಹನಗಳನ್ನು ಧರಿಸಬಾರದು" ಉಗ್ರಸೇನಾದಿಗಳು ಮಂದಮತಿಯ ಮಾತುಗಳನ್ನು ಕೇಳಿ ಗಹಗಹಿಸಿ ನಕ್ಕರು. ಶ್ರೀಕೃಷ್ಣನಾದರೂ ವಾಸುದೇವನ ಸಂದರ್ಶನಕ್ಕಾಗಿ ನಾನೇ ಬರುವೆನೆಂದು ಹೇಳಿ ಕಳುಹಿಸಿದ. ಯಾದವರೊಂದಿಗೊಡಗೂಡಿ ನಡೆದ.

ಕೃಷ್ಣನನ್ನು ಎದುರಿಸಲು ಪೌಂಡ್ರಕನು ಕೃತಕವಾದ ಸುವರ್ಣಗರುಡವನ್ನು ಏರಿ ಬಂದ. ಜಡಬುದ್ಧಿಯವ ಜಡಗರುಡವನೇರಿ ಬಂದ. ನಾಟಕದಲ್ಲಿ ಕೃಷ್ಣನ ವೇಷ ಹಾಕುವಂತೆ ಶಂಖ, ಚಕ್ರ, ಗದಾ, ಪದ್ಮಗಳನ್ನೆಲ್ಲ ಧರಿಸಿದ್ದ. ಕೃಷ್ಣನಂತೆ ಎಲ್ಲ ವೇಷವನ್ನು ಧರಿಸಿದ್ದರೂ ಶ್ರೀವತ್ಸ ಚಿಹ್ನೆಯನ್ನು ಧರಿಸುವುದು ಹೇಗೆಂದು ಸಮಸ್ಯೆ ಆಯಿತಂತೆ. ಕಪ್ಪನ್ನು ಎಷ್ಟು ಹಚ್ಚಿಕೊಂಡರೂ ಸ್ಥಿರವಾಗಿ ನಿಲ್ಲುತ್ತಿರಲಿಲ್ಲ. ಬಹಳ ಚಿಂತೆಗೊಳಗಾಗಿ ಕೊನೆಗೊಂದು ಉಪಾಯ ಹೂಡಿದ– 'ಶ್ರೀವತ್ಸಾರ್ಥೇ ದಗ್ಧ ವಕ್ಷಸ್ಥಳಂ ಚ' ತನ್ನ ವಕ್ಷಸ್ಥಳಕ್ಕೆ ಬೆಂಕಿಕೊಟ್ಟ. ನಿರಂತರ ಕಪ್ಪು ಕಲೆ ಉಳಿಯುವಂತಾಯಿತು. ಅನಂತರ ನಾನೇ ಕೃಷ್ಣನೆಂದು ಹಮ್ಮಿನಿಂದ ಕೃಷ್ಣನನ್ನೂ ಸದೆಬಡಿಯುತ್ತೇನೆಂದು ಕೃಷ್ಣನ ವಿರುದ್ಧ ಕಾದಾಡಲು ಬಂದ.

ನಾನೇ ದೇವನೆಂದು ಹಮ್ಮಿನಿಂದ ಬೀಗುತ್ತಿದ್ದ ಬಯಲಾಡಂಬರದ ಪೌಂಡ್ರಕನನ್ನು ಶ್ರೀಕೃಷ್ಣ ಧರೆಗುರುಳಿಸಿದ.

ಈ ಸಂದರ್ಭದಲ್ಲಿ ವಾದಿರಾಜರು ಒಂದು ಎಚ್ಚರಿಕೆಯನ್ನು ನೀಡಿದ್ದಾರೆ. ನಮ್ಮೆಲ್ಲರಿಗೂ ಸರ್ವದಾ 'ದಾಸೋऽಹಂ' ಎನ್ನುವ ಪ್ರಜ್ಞೆ ಇರಬೇಕೆ ವಿನಾ 'ಈಶೋऽಹಂ' ಎಂಬ ಪ್ರಜ್ಞೆಯಲ್ಲ. ನಾನೇ ದೇವರಾಗುತ್ತೇನೆ ಎಂದು ಎಂದೂ ಭಾವಿಸಕೂಡದು. ನಾನೇ ಸ್ವತಂತ್ರ ಪುರುಷೋತ್ತಮ ಎಂದು ಹಮ್ಮಿನಿಂದ ಬೀಗಿದರೆ ಪೌಂಡ್ರಕನ ಸ್ಥಿತಿಯನ್ನೇ ಮುಟ್ಟಬೇಕಾಗುತ್ತದೆ ಎಂದು.

ಮುಂದೆ ಭಾಗವತವು ಕೃಷ್ಣನ ಮೊಮ್ಮಗನಾದ ಪ್ರದ್ಯುಮ್ನನ ಪುತ್ರನಾದ ಅನಿರುದ್ಧನ ಮತ್ತು ಕೃಷ್ಣನ ಮಡದಿ ಜಾಂಬವತಿಯಲ್ಲಿ ಹುಟ್ಟಿದ ಸಾಂಬನ ಪ್ರೇಮಪ್ರಕರಣವನ್ನು ನಿರೂಪಿಸುತ್ತದೆ.

ಬಲೀಂದ್ರನ ನೂರುಮಂದಿ ಮಕ್ಕಳಲ್ಲಿ ಹಿರಿಯವನೇ ಬಾಣಾಸುರ. ಶಿವಭಕ್ತಾಗ್ರೇಸರ. ಶೋಣಿತಪುರಾಧೀಶ. ಅವನಿಗೆ ಸಾವಿರ ಬಾಹುಗಳಿದ್ದವು. ರುದ್ರದೇವನು ತಾಂಡವನೃತ್ಯ ಮಾಡುವ ಕಾಲಕ್ಕೆ ಇವನು ತನ್ನ ಸಹಸ್ರ ಬಾಹುಗಳಿಂದ ವಾದ್ಯಗಳನ್ನು ನುಡಿಸಿ, ಅವನ ಮೆಚ್ಚುಗೆಗೆ ಪಾತ್ರನಾದನು. ಸಂತುಷ್ಟನಾದ ರುದ್ರದೇವ ಬೇಕಾದ ವರ ಕೇಳಿಕೋ ಎಂದ.

ಬಾಣಾಸುರನು ರುದ್ರದೇವನ ಕರುಣೆಯನ್ನು ದುರುಪಯೋಗಪಡಿಸಿಕೊಳ್ಳುತ್ತಾ ಉನ್ಮತ್ತನಾಗಿ ವಿಚಿತ್ರವಾದ ವರವನ್ನು ಕೇಳುತ್ತಾ ಇದ್ದಾನೆ. 'ದೇವೋತ್ತಮನೇ! ನಿನ್ನಲ್ಲಿ ಒಂದು ವರ ಬೇಡುವೆನು. ನೀನು ನನಗೆ ಸಾವಿರ ಬಾಹುಗಳನ್ನು ಕರುಣಿಸಿರುವೆ. ಸಾವಿರ ಬಾಹುಗಳಿಂದ ಸರಿಯಾಗಿ ಸೆಣಸಾಡಲು ಎದುರಾಳಿಯೊಬ್ಬನ ಅನ್ವೇಷಣೆಯಲ್ಲಿದ್ದೇನೆ. ಆದರೆ ಮೂರು ಲೋಕದಲ್ಲಿಯೂ ನಿನ್ನನ್ನು ಹೊರತಾಗಿ ಮತ್ತ್ಯಾರನ್ನೂ ಕಾಣುತ್ತಿಲ್ಲ. ನನ್ನ ಕೈಗಳು ತುಡಿಸುತ್ತಿವೆ. ಸುಮ್ಮನಿರಲು ಸಾಧ್ಯವಾಗದೆ ಒಮ್ಮೆ ದಿಗ್ಗಜಗಳನ್ನೇ ಎದುರಿಸಲು ಹೊರಟೆ. ಆದರೆ ಅವುಗಳು ನನ್ನನ್ನು ಕಂಡು ಹೆದರಿ ಓಡಿಹೋದವು. ಅಜೇಯನಾದ ನನಗೆ ಸಮಾನ ಎದುರಾಳಿಗಳು ದೊರೆಯುವಂತೆ ಮಾಡು ಎಂದು ಉನ್ಮತ್ತನಾಗಿ ನುಡಿದಾಗ ರುದ್ರ ಸಿಟ್ಟುಗೊಂಡ. ನನ್ನ ಅನುಗ್ರಹದಿಂದ ಭುಜಬಲವನ್ನು ಹೊಂದಿದ ನೀನು ಅದನ್ನು ಸರಿಯಾಗಿ ಉಪಯೋಗಿಸಿಕೊಳ್ಳದೆ ಮದದಿಂದ ಮಾತನಾಡುತ್ತಿರುವೆ ಎಂದು ನಿನ್ನ ರಥಕೇತುವು ಅಕಾರಣವಾಗಿ ಮುರಿದು ಬೀಳುವುದೋ ಅಂದೇ ನಿನಗೆ ಒಬ್ಬ ವೀರಾಗ್ರಗಣ್ಯನಿಂದ ಅಪಜಯವು' ಎಂದು ಶಪಿಸಿದ.

## ಪ್ರಣಯ ಪ್ರಕರಣ ಮತ್ತು ಸಂದೇಶ

ಇಂತಹ ಬಾಣಾಸುರನಿಗೆ ಉಷೆ ಎಂಬ ಸುಂದರ ಸುಪುತ್ರಿ ಇದ್ದಳು. ಆಕೆ ಒಂದು ದಿನ ಕನಸಿನಲ್ಲಿ ಪ್ರದ್ಯುಮ್ನನ ಮಗನಾದ ಅನಿರುದ್ಧನನ್ನು ಕಂಡಳು. ಎಚ್ಚರಗೊಂಡ ಉಷೆಯು ಅನಿರುದ್ಧನೇ ತನ್ನ ಪತಿಯಾಗಬೇಕೆಂದು ಜಪಿಸತೊಡಗಿದಳು. ಅವಳ ಸಖಿಯಾದ ಚಿತ್ರಲೇಖೆಯು ಯಾರ ಬಗ್ಗೆ ಹಂಬಲಿಸುತ್ತಿರುವಿ ಎಂದು ತಿಳಿಸಿದಲ್ಲಿ ನಿನಗವನನ್ನು ದೊರೆಯನ್ನಾಗಿ ದೊರಕಿಸಿಕೊಡುವೆ ಎಂದಳು. ಚಿತ್ರಕಲೆಯಲ್ಲಿ

ಕುಶಲಳಾಗಿದ್ದರಿಂದಲೇ ಚಿತ್ರಲೇಖೆ ಎನಿಸಿದ್ದ ಸಖಿಯು ಯಕ್ಷ, ಗಂಧರ್ವ, ವಿದ್ಯಾಧರ, ರಾಜಾಧಿರಾಜರ ಚಿತ್ರಗಳನ್ನೆಲ್ಲ ಬರೆದು ತೋರಿಸಿದಳು. ಕೊನೆಗೆ ಕೃಷ್ಣನ ಮೊಮ್ಮಗ ನಾದ ಪ್ರದ್ಯುಮ್ನನ ಚಿತ್ರವನ್ನು ಬರೆದು ತೋರಿಸಲು ಅವನ ಸಾದೃಶ್ಯವನ್ನು ಕಂಡು ಆನಂದಪುಳಕಿತಳಾಗಿ ನಾಚಿಕೆಯಿಂದ ತಲೆತಗ್ಗಿಸಿದಳು. ಉಷೆಯು ಪ್ರತಿ ಅಹರ್ನಿಶಿ ಗಳಲ್ಲಿ ಅನಿರುದ್ಧನೇ ಬೇಕೆಂದು ಹಠಹಿಡಿಯಲು, ಮಾಯಾವಿದ್ಯೆಯನ್ನು ಬಲ್ಲ ಚಿತ್ರ ಲೇಖೆಯು ದ್ವಾರಕೆಯ ಅಂತಃಪುರಕ್ಕೆ ಹೋಗಿ ಮಂಚದಲ್ಲಿ ಮಲಗಿದ ಅನಿರುದ್ಧನನ್ನು ಕಂಡಳು. ಮಂಚ ಸಹಿತ ಅನಿರುದ್ಧನನ್ನು ಎತ್ತಿ ತಂದು ಉಷೆಗೊಪ್ಪಿಸಲು ಉಷೆಯು ಖುಷಿಯಿಂದ ರೋಮಾಂಚಿತಳಾದಳು.

ಅನಿರುದ್ಧ–ಉಷೆಯರ ಪ್ರಣಯದ ನಿಗೂಢ ವಾರ್ತೆಯನ್ನು ಗೂಢಚಾರರು ಬಾಣಾಸುರನ ಕಿವಿಗೆ ಮುಟ್ಟಿಸಿದರು. ತನ್ನ ಮಗಳ ತಂತ್ರಗಾರಿಕೆಯನ್ನು ಅರ್ಥಮಾಡಿ ಕೊಳ್ಳದೆ ಅನಿರುದ್ಧನನ್ನು ಅಪರಾಧಿ ಎಂದು ಭ್ರಮಿಸಿ ಸಂಹರಿಸಲು ಭಟರಿಗೆ ಆದೇಶಿಸಿದ. ಅದರಂತೆ ಭಟರು ಬರುತ್ತಿರುವುದನ್ನು ಕಂಡ ಅನಿರುದ್ಧನು ಅವರನ್ನೆಲ್ಲ ಬಡಿದು ಓಡಿಸಿದ. ಕೊನೆಗೆ ಬಾಣಾಸುರನು ಆಗಮಿಸಿ ನಾಗಪಾಶವನ್ನು ಪ್ರಯೋಗಿಸಿ ಅವನನ್ನು ಬಂಧಿಸಿದ.

ಇತ್ತ ದ್ವಾರಕೆಯಲ್ಲಿ ಅನಿರುದ್ಧ ನಾಪತ್ತೆಯಾಗಿದ್ದಾನೆ. ಮಾಸಗಳು ಉರುಳಿದರೂ ಅನಿರುದ್ಧನ ವಿಯೋಗದ ವ್ಯಸನ ಮಾಸಲಿಲ್ಲ. ಎಲ್ಲರೂ ದುಃಖದಿಂದ ತಲ್ಲಣ ಗೊಂಡಾಗ ನಾರದರು ಸಂಗತಿಗಳನ್ನೆಲ್ಲ ತಿಳಿಸಿದರು. ಸುದ್ದಿ ತಿಳಿದ ವೃಷ್ಣಿವೀರರೆಲ್ಲರು ಕೃಷ್ಣನನ್ನು ಮುಂದಿಟ್ಟುಕೊಂಡು ಶೋಣಿತಪುರಕ್ಕೆ ಆಗಮಿಸಿದರು. ಯುದ್ಧ ಆರಂಭವಾಯಿತು. ರುದ್ರದೇವನ ಗಣಗಳೆಲ್ಲವೂ ಬಾಣನ ಪಕ್ಷ ಸೇರಿ ಭಯಂಕರವಾಗಿ ಹೋರಾಡಿದವು. ಆದರೆ ಕೃಷ್ಣನನ್ನು ಶಂಕರನೂ ಎದುರಿಸಲಾಗದೆ ಮೂರ್ಛಿತನಾದ. ಪುನಃ ಎಚ್ಚೆತ್ತ ರುದ್ರದೇವ ತನ್ನ ಭಕ್ತನಿಗಾಗಿ ಕೃಷ್ಣನ ವಿರುದ್ಧ ಮಾಹೇಶ್ವರಜ್ವರವೆಂಬ ಅಸ್ತ್ರವನ್ನು ಪ್ರಯೋಗಿಸಿದ. ಕೃಷ್ಣನು ಪ್ರತಿಯಾಗಿ ವೈಷ್ಣವಜ್ವರದಿಂದ ಅದನ್ನು ಖಂಡಿಸಿದ. ಅನಂತರ ಬಾಣಾಸುರನು ಎರಗಿಬರಲು ಅವನ ನಾಲ್ಕು ತೋಳನ್ನು ಬಿಟ್ಟು ಸಾವಿರ ತೋಳುಗಳನ್ನು ಚಕ್ರದಿಂದ ಕತ್ತರಿಸಿದ. ಬಾಣಾಸುರನ ತೋಳುಗಳೆಲ್ಲ ಕೆಳಗುರುಳಿ ಬಿದ್ದವು. ಬಾಣಾಸುರನು ಅಹಂಕಾರದಿಂದಲೂ ಕೆಳಗಿಳಿದಿದ್ದ. ಎದುರಾಳಿ ಗಳೇ ಇಲ್ಲವೆನ್ನುತಿದ್ದ ಬಾಣನ ಯುದ್ಧದಾಹವೆಲ್ಲ ಮುಗಿದು ಶೋಚನೀಯ ಸ್ಥಿತಿಯಲ್ಲಿ ಸಿಲುಕಿದಾಗ ರುದ್ರನು ಬಾಣನ ಪರವಾಗಿ ಪ್ರಾರ್ಥನೆ ಸಲ್ಲಿಸಿದ–

ತಂ ತ್ವಾ ಜಗಸ್ಥಿತ್ಯುದಯಾತ್ತಹೇತುಂ
ಸಮಂ ಪ್ರಶಾಂತಂ ಸುಹೃದಾತ್ಮದೈವಮ್ ।
ಅನನ್ಯಮೇಕಂ ಜಗದಾತ್ಮಕೇತಂ
ಭವಾಪವರ್ಗಾಯ ಭಜಾಮ ದೇವಮ್ ॥

— (ಗೋರಖ್‌ಪುರ ಪ್ರತಿ ೧೦-೬೩-೪೪)

ಜಗತ್ತಿನ ಉತ್ಪತ್ತಿ ಸ್ಥಿತಿ ಸಂಹಾರಗಳನ್ನು ನಡೆಸುವ ಸರ್ವನಿಯಂತ್ರವಾದ ಜಗತ್ಸ್ವಾಮಿಯೇ ನಿನ್ನನ್ನೇ ಶರಣುಹೊಕ್ಕು ಭಜಿಸುವೆನು. ಬಾಣನು ನನ್ನ ಭಕ್ತನಾಗಿದ್ದಾನೆ. ಅವನನ್ನು ಉಳಿಸು ಎಂದು ಕೈಮುಗಿದು ಬೇಡಿದ. ಈ ಸಂದರ್ಭದಲ್ಲಿ ರುದ್ರದೇವ ಸಾರಿ ಸಾರಿ ಹೇಳುತ್ತಿದ್ದಾನೆ. ಯಾರು ಭಗವಂತನನ್ನು ಬಿಟ್ಟು ಕೇವಲ ಭೌತಿಕ ವಿಷಯದಲ್ಲಿ ಮಗ್ನರಾಗಿರುತ್ತಾರೆಯೋ ಅವರು ಅಮೃತವನ್ನು ತೊರೆದು ವಿಷಪಾನ ಮಾಡಿದಂತೆ ಎಂದು. ಇಂದು ಭೌತಿಕ ಸುಖಕ್ಕಾಗಿ ನಾವು ನಮ್ಮನ್ನು ತೊಡಗಿಸಿಕೊಂಡಿದ್ದೇವೆ. ವಿಷಪ್ರಾಶನದ ದುಃಸ್ಥಿತಿಯಲ್ಲಿ ನಾವಿದ್ದೇವೆ. ರುದ್ರದೇವನ ಮಾತಿನಿಂದ ಎಚ್ಚೆತ್ತುಕೊಳ್ಳಬೇಕು.

ಶಂಕರ ಪ್ರಾರ್ಥನೆಯನ್ನು ಕೇಳಿದ ಶ್ರೀಕೃಷ್ಣನು ಹೇಳಿದ ಬಾಣಾಸುರನನ್ನು ನಾನು ಸಂಹರಿಸುವುದಿಲ್ಲ. ಭಕ್ತ ಪ್ರಹ್ಲಾದನ ಪರಂಪರೆಯಲ್ಲಿ ಬಂದಿರುವ ಇವನು ಭಕ್ತನೇ ಆಗಿದ್ದಾನೆ. ಅಹಂಕಾರದಿಂದ ವರ್ತಿಸಿದ್ದಕ್ಕೆ ಅನುಗುಣವಾದ ಶಿಕ್ಷೆಯನ್ನಿತ್ತಿರುವೆ. ಇವನಿಂದ ಇನ್ನು ಯಾರಿಗೂ ಉಪದ್ರವವಿಲ್ಲ. ಇವನು ನನ್ನ ಭಕ್ತರಲ್ಲಿ ಒಬ್ಬನಾಗಿರಲಿ! ಎಂದು ಹೇಳಿ ಉಷಾ–ಅನಿರುದ್ಧರನ್ನು ಜತೆಗೂಡಿಸಿ ಹೊರಟ.

ನಮ್ಮೆಲ್ಲರಿಗೂ ಈ ಬಾಣಾಸುರನ ಕಥೆ ಅನ್ವಯವಾಗುತ್ತದೆ. ನಾವೆಲ್ಲರೂ ಬಾಣಾಸುರನ ಸಂತತಿಗೆ ಸೇರಿದವರು. ನಮ್ಮ ದೇಹವೇ ಶೋಣಿತಪುರ. ರಕ್ತಮಾಂಸಗಳಿಂದ ತುಂಬಿದ್ದರಿಂದ ಶೋಣಿತಪುರ ಎನಿಸಿದೆ. ಬಾಣನಿಗೆ ಸಾವಿರ ಬಾಹುಗಳಿದ್ದಂತೆ ನಮಗೂ ದುರಹಂಕಾರ ದರ್ಪ ದೊಡ್ಡಸ್ತಿಕೆಗಳೆಂಬ ಸಾವಿರಾರು ಕೈಗಳಿವೆ. ಬಾಣಾಸುರನು ನಿಷ್ಕಾರಣವಾಗಿ ಮತ್ತೊಬ್ಬರ ಬಳಿ ಯುದ್ಧಕ್ಕೆ ಸಾಗುವಂತೆ ಪರನಿಂದೆ ವಾಗ್ವಿವಾದಗಳಿಗೆ ಸಹಜವಾಗಿ ತೆರಳುತ್ತೇವೆ. ಇದ್ಯಾವುದೂ ಭಗವಂತನ ಮುಂದೆ ನಡೆಯವು. ಭಗವಂತನ ಮುಂದೆ ಬಾಣನ ಬಾಹುಗಳು ದುರ್ಬಲವಾಗಿ ಕತ್ತರಿಸಿ ಹೋದವು. ಅಹಂಕಾರವೂ ಹೋಯಿತು. ಅದರಂತೆ ಅವನ ಮುಂದೆ ಅಲ್ಪರಾದ ನಮ್ಮ ದರ್ಪ ಅಹಂಕಾರಗಳೆಲ್ಲವೂ ಅಳಿದು ಹೋಗುತ್ತವೆ. ನಮ್ಮ ಸ್ವಾತಂತ್ರ್ಯಭ್ರಮೆಯು ಲುಪ್ತವಾಗಿ ಅಸ್ವತಂತ್ರನಾದ ನಾನು ಹರಿಯ ದಾಸನಿದ್ದೇನೆ ಎಂಬ ಎಚ್ಚರ ಬರುತ್ತದೆ. ಬಾಣಾಸುರನು ಕಡೆಗೆ ನಿಗರ್ವಿಯಾಗಿ ನಿಲ್ಲಲು ಕೃಷ್ಣನು ಅವನನ್ನು ತನ್ನ ಭಕ್ತಕೋಟಿಯಲ್ಲಿ ಸೇರಿಸಿಕೊಂಡ. ಅದರಂತೆ ನಮ್ಮಲ್ಲಿಯೂ 'ದಾಸೋಽಹಂ' ಎನ್ನುವ ಪ್ರಜ್ಞೆಯು ಜಾಗ್ರತವಾಗಲು ನಾವೂ ಭಗವಂತನ ಕರುಣಾ ಕಟಾಕ್ಷಕ್ಕೆ–ಅನುಗ್ರಹಕ್ಕೆ ಭಾಗಿಗಳಾಗುತ್ತೇವೆ ಎಂಬ ಉತ್ತಮ ಸಂದೇಶವನ್ನು ಈ ಕಥೆಯಿಂದ ಅರಿತುಕೊಳ್ಳಬಹುದು.

## ಸಾಂಬ ಪ್ರಣಯ ಪ್ರಕರಣ ಮತ್ತು ಸಂದೇಶ

ಅನಿರುದ್ಧನು ಉಷೆಯ ಅಪಹರಣಕ್ಕೆ ಭಾಗಿಯಾಗಿದ್ದರೆ ಜಾಂಬವತಿಯ ಮಗನಾದ ಸಾಂಬನು ತಾನಾಗಿಯೆ ಲಕ್ಷಣೆಯ ಅಪಹರಣವನ್ನು ಮಾಡಿದನು.

ದುರ್ಯೋಧನನಿಗೆ ಲಕ್ಷಣೆ ಎಂಬ ಲಕ್ಷಣಭರಿತಳಾದ ಪುತ್ರಿ ಇದ್ದಳು. ದುರ್ಯೋಧನನು ಅವಳಿಗೋಸ್ಕರ ಸ್ವಯಂವರವನ್ನು ಏರ್ಪಡಿಸಿದ. ಸಾಂಬನು ಅಲ್ಲಿಗೆ ಹೋಗಿದ್ದ. ಸರ್ವಾಂಗಸುಂದರಿಯಾದ ಲಕ್ಷಣೆಯನ್ನು ಕಂಡೊಡನೆಯೇ ಎಲ್ಲರೂ ನೋಡುತ್ತಿರುವಂತೆ ಅವಳನ್ನು ಎತ್ತಿಕೊಂಡು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ದ್ವಾರಕೆಗೆ ಅಭಿಮುಖವಾಗಿ ಹೊರಟ. ಆದರೆ ದುರ್ಯೋಧನ ದುಶ್ಶಾಸನ ಕರ್ಣ ಮುಂತಾದ ವೀರಾಧಿವೀರರೆಲ್ಲರೂ ಬೆನ್ನಟ್ಟಿ ಬರಲು ಏಕಾಂಗಿಯಾಗಿ ಹೋರಾಡಲು ಅಸಮರ್ಥನೆಂದರಿತಿದ್ದ ಕರ್ಣಾದಿಗಳು ಅಚ್ಚರಿಗೊಂಡರು. ಕೊನೆಗೆ ಬಹುಪ್ರಯಾಸ ಪಟ್ಟು ಅವನನ್ನು ಸರೆಹಿಡಿದರು.

ಸಾಂಬನು ದುರ್ಯೋಧನನ ಬಂಧನದಲ್ಲಿದ್ದಾನೆಂಬ ವಾರ್ತೆ ಉಗ್ರಸೇನನಿಗೆ ತಿಳಿಯಿತು. ಯಾದವರೆಲ್ಲರೂ ಯುದ್ಧಕ್ಕೆ ಸಾಗಬೇಕೆಂದು ಆಲೋಚಿಸುತ್ತಿರಲು ಬಲರಾಮನು ಪರಸ್ಪರ ಕಲಹ ಬೇಡವೆಂದು ತನ್ನ ಶಿಷ್ಯರಾದ ದುರ್ಯೋಧನನಿಗೆ ತಿಳಿಹೇಳುವೆನೆಂದು ತಾನೇ ಮಿತಪರಿವಾರದೊಂದಿಗೆ ಹಸ್ತಿನಾವತಿಗೆ ತೆರಳಿದ. ಅವನಿಗೆ ಒಳ್ಳೆಯ ಸ್ವಾಗತ ಉಪಚಾರಗಳನ್ನು ಮಾಡಿದರು. ಬಲರಾಮನು ತನ್ನ ಮಾತನ್ನು ಹೇಳಿದ "ನಮ್ಮ ಒಬ್ಬ ಹುಡುಗನನ್ನು ನೀವೆಲ್ಲರೂ ಸೇರಿ ಬಂಧಿಸಿರುವುದು ಸರಿಯಲ್ಲ. ಉಗ್ರಸೇನನ ಆಜ್ಞೆಯಾಗಿದೆ ಅವನನ್ನು ಬಿಟ್ಟುಕೊಡಿರಿ! ಇಲ್ಲದಿದ್ದರೆ ನಮ್ಮ ಕೋಪಕ್ಕೆ ಗುರಿಯಾಗುವಿರಿ!" ಎಂದು ಸ್ವಲ್ಪ ಅಧಿಕಾರವಾಣಿಯಿಂದ ಹೇಳಿದ. ಇವನ ಮಾತನ್ನು ಕೇಳಿದೊಡನೆಯೇ ಕೌರವರ ದುರಭಿಮಾನ ಉಕ್ಕೇರಿತು. ಎಲಾ ಯಾದವರ ಅಹಂಕಾರವೇ! ನಮ್ಮ ಕಾರುಣ್ಯದಿಂದ ರಾಜ್ಯವನ್ನು ಅನುಭವಿಸುತ್ತಿರುವ ಉಗ್ರಸೇನ ನಿಗೆ ಎಂತಹ ಸೊಕ್ಕು. ಛತ್ರ, ಚಾಮರ, ವ್ಯಜನಾದಿ ಚಿಹ್ನೆಗಳಿಂದ ಮೆರೆಯುತ್ತಿರುವ ನಮಗೇ ಆದೇಶಿಸುವಷ್ಟು ಗರ್ವ ಬಂದೀತೇ? ಕಾಲಿನ ಮೆಟ್ಟು ತಲೆಯ ಮೇಲೆ ಕೂಡಲು ಆರಂಭಿಸಿದೆ. ಏನು ದುರಹಂಕಾರ? ಎಂದು ಬಲರಾಮನ ಗುರುತ್ವವನ್ನು ಮರೆತು ಅತ್ಯಂತ ನೀಚಮಟ್ಟದಲ್ಲಿ ವರ್ತಿಸಿದರು.

ಬಲರಾಮನೆಂದರೆ ಸಾಮಾನ್ಯನಲ್ಲ. ಸಾಕ್ಷಾತ್ ಶೇಷಮಹಾಶಯ. ಅವನಲ್ಲಿ ಸಂಕರ್ಷಣರೂಪ ನೆಲೆಸಿದ್ದಾನೆ. ಶುಕ್ಲಕೇಶಾವೇಶವಿದೆ. ಇದ್ಯಾವುದನ್ನೂ ಅರಿಯದೆ ಅಜ್ಞಾನಿಗಳಾಗಿ ಮಾತನಾಡಿದಾಗ ಬಲರಾಮ ತನ್ನ ಉಗ್ರ ಪ್ರತಾಪವನ್ನು ಇವರಿಗೆ ತೋರಿಸಲೇ ಬೇಕೆಂದು ತನ್ನ ನೇಗಿಲನ್ನು ಹಿಡಿದು ಬಂದ. ತನ್ನ ಹಲಾಯುಧದಿಂದ ಹಸ್ತಿನಾವತಿಯ ರಾಜಧಾನಿಯನ್ನೇ ದಕ್ಷಿಣ ಪಾರ್ಶ್ವಕ್ಕೆ ಸೆಳೆದುಬಿಟ್ಟ. ಪಟ್ಟಣವೆಲ್ಲವೂ ಗಂಗಾಪ್ರವಾಹದಲ್ಲಿ ಬೀಳುವಂತಾಯಿತು. ಸಮಸ್ತ ಕೌರವರೂ ಕಂಗಾಲಾದರು. ಭಾರೀ ಬಡಾಯಿಕೊಚ್ಚಿ ಹೋದ ದುರ್ಯೋಧನ–ದುಶ್ಶಾಸನ ಪ್ರಭೃತಿಗಳು ವಿನಮ್ರರಾಗಿ ಪ್ರಾರ್ಥಿಸುತ್ತಾ ಬಂದರು. ಸಾಂಬ ಲಕ್ಷಣೆಯರೊಟ್ಟಿಗೆ ಬಳುವಳಿಯಾಗಿ ಆನೆ ಕುದುರೆ ರಥ ದಾಸಿಯರು ಎಲ್ಲವನ್ನೂ ತಂದೊಪ್ಪಿಸಿದರು. ಅಪರಾಧವಾಯಿತು; ಮನ್ನಿಸ ಬೇಕೆಂದು ಶಿರಬಾಗಿದರು.

ಅನಿರುದ್ಧನ ಪ್ರಕರಣದಲ್ಲಿ ಬಾಣಾಸುರನು ಭಗವಂತನನ್ನು ಮರೆತು ಉನ್ಮತ್ತನಾಗಿ ವರ್ತಿಸಿದರೆ, ಸಾಂಬನ ಪ್ರಕರಣದಲ್ಲಿ ಭಗವಂತನ ಭಕ್ತನಾದ ಬಲರಾಮನನ್ನು ಗುರುತಿಸದೆ ಕೌರವರು ಉನ್ಮತ್ತರಾಗಿ ನುಡಿದರು. ಅಹಂಕಾರದಿಂದ ಉನ್ಮತ್ತನಾದ ಬಾಣನು ಸ್ವಯಂ ಘಾಸಿಯನ್ನನುಭವಿಸಿದರೆ ಕೌರವರೆಲ್ಲರೂ ವಿರೋಧಿಸಿ ಉನ್ಮತ್ತ ರಾಗಿ ವರ್ತಿಸಿ, ತಮ್ಮ ಹಸ್ತಿನಾವತಿಗೇ ಆಪತ್ತನ್ನು ತಂದುಕೊಂಡರು. ಇವರೆರಡು ಕಥೆಗಳಿಂದ ನಾವೆಲ್ಲರೂ ಅರಿತುಕೊಳ್ಳಬೇಕಾದದ್ದಿಷ್ಟೇ –'ಭಗವಂತನನ್ನು ಅವನ ಭಕ್ತರನ್ನು ಮರೆತು ಅವರಿಗೆ ಅವಮಾನಿಸಿ ಸ್ವಚ್ಛಂದವಾಗಿ ವರ್ತಿಸಬಾರದು' ಎಂದು.

ಶೇಷಾವತಾರಿಯಾದ ಬಲರಾಮನು ಲಕ್ಷ್ಮಣನಾಗಿದ್ದಾಗಲೂ ತನ್ನ ಶಕ್ತಿಯನ್ನು ಹೀಗೆಯೇ ತೋರಿಸಿದ್ದಾನೆ.

ಲಂಕಾಧೀಶನಾದ ರಾವಣನಿಗೂ ಲಕ್ಷ್ಮಣನಿಗೂ ಅತಿಭಯಂಕರವಾದ ಕದನ ವೇರ್ಪಟ್ಟಿತು. ಪ್ರಚಂಡ ಶಕ್ತಿಯ ರಾವಣನು ಶಕ್ತ್ಯಾಯುಧವನ್ನು ಲಕ್ಷ್ಮಣನ ಮೇಲೆ ಪ್ರಯೋಗಿಸಿದ. ಲಕ್ಷ್ಮಣನು ಮೂರ್ಛಿತನಾಗಿ ಕೆಳಗೆ ಬಿದ್ದ. ಲಕ್ಷ್ಮಣನು ಕೆಳಗೆ ಬಿದ್ದದ್ದನ್ನು ಕಂಡ ರಾವಣನು ಹರ್ಷದಿಂದ ಸಿಂಹನಾದಗೈದ. ರಾಮನ ತಮ್ಮನನ್ನೇ ಕೆಳಗೆ ಬೀಳಿಸಿದ್ದೇನೆ. ನನ್ನ ಸಾಮರ್ಥ್ಯವೆಷ್ಟು ಎಂದು ಹಮ್ಮಿನಿಂದ ಬೀಗಿದ. ಮತ್ತೂ ಆಲೋಚಿಸಿದ.

ಲಕ್ಷ್ಮಣನನ್ನು ಇಲ್ಲಿಗೇ ಬಿಡಬಾರದು. ನನ್ನ ಅಂತಃಪುರಕ್ಕೆ ಎತ್ತಿಕೊಂಡು ಹೋಗಬೇಕು. ಆವಾಗ ರಾಮನ ಅಹಂಕಾರ ಪೂರ್ಣ ಕುಸಿಯುತ್ತದೆ ಎಂದು ಆಲೋಚಿಸಿದ. ರಥಕ್ಕೆ ಏರಿಸಲೋಸುಗ ಲಕ್ಷ್ಮಣನ ಕಟಿಗೆ ಕೈಕೊಟ್ಟು ಎತ್ತಿದ. ಲಕ್ಷ್ಮಣನಿಗೆ ಸ್ವಲ್ಪ ಎಚ್ಚರವಾಯಿತು. ತಾನು ಮೂಲತಃ ಯಾರು ಎಂಬುದೂ ಎಚ್ಚರವಾಯಿತು. ತಾನು ಸಾಮಾನ್ಯ ಮಾನವನಾಗಿರದೆ ಸಂಕರ್ಷಣನನ್ನು ಹೃದಯದಲ್ಲಿ ಧರಿಸಿದ ಶೇಷನೆಂದು ತನ್ನ ನಿಜರೂಪದ ಅಪರೋಕ್ಷಜ್ಞಾನವನ್ನು ಪಡೆದ. ರಾವಣನ ಸಂಚಿಕೆಯನ್ನೂ ಅರ್ಥಮಾಡಿಕೊಂಡ. ಅಲ್ಲಿಯೇ ಘಟ್ಟಿಯಾಗಿ ಮಲಗಿದ. ರಾವಣನು ಸರ್ವವಿಧದಿಂದಲೂ ಪ್ರಯತ್ನಿಸಿದ. ಶತಪ್ರಯತ್ನ ಮಾಡಿದರೂ ಲಕ್ಷ್ಮಣನ ಯಾವುದೇ ಒಂದು ಅವಯವಗಳನ್ನು ಹಂದಾಡಿಸಲು ಸಮರ್ಥನಾಗಲಿಲ್ಲ. ತಾನೇ ಸೋತು ಕುಳಿತ. ಅದರಂತೆ ಬಲರಾಮನೂ ತನ್ನ ನಿಜರೂಪಸ್ಮರಣೆಯಿಂದ ಹಸ್ತಿನಾವತಿಯನ್ನೇ ಹಂದಾಡಿಸಿದ. ಇದು ಕೇವಲ ಶೇಷನ ಶಕ್ತಿಯಲ್ಲ. ಅವನೊಳಗಿರುವ ಭಗವಂತನ ಶಕ್ತಿ ಎಂದರಿಯಬೇಕು. ಇದನ್ನು ಮರೆತಲ್ಲಿ ಏನು ಅನರ್ಥ ಎಂಬುದಕ್ಕೆ ಇವರೀರ್ವರ ಕಥೆಗಳೇ ಸಾಕ್ಷಿ.

ಈ ಕಥೆಗಳಿಂದ ಮತ್ತೊಂದು ಸಂದೇಶವನ್ನು ಅರಿಯಬಹುದು.

ಅನಿರುದ್ಧ ಸಾಂಬರು–ಉಷೆ ಲಕ್ಷಣೆಯರ ವ್ಯಾಮೋಹಕ್ಕೆ ಒಳಗಾಗಿ ದೈತ್ಯಶಕ್ತಿಗಳ ಬಂಧನಕ್ಕೆ ಒಳಗಾದರು. ಅವರೀರ್ವರನ್ನು ಕೃಷ್ಣ–ಬಲರಾಮರು ಬಿಡಿಸಿದರು. ನಮ್ಮ ಜೀವನದಲ್ಲಿಯೂ ನಾವೆಲ್ಲರೂ ಬಗೆಬಗೆಯ ಭೋಗಸಾಮಗ್ರಿಗಳಿಗೆ ಹೆಣ್ಣು, ಹೊನ್ನು, ಮಣ್ಣು ಮುಂತಾದವುಗಳಿಗೆ ಆಕರ್ಷಿತರಾಗಿದ್ದೇವೆ. ಸಾಂಬ ಅನಿರುದ್ಧರಂತೆ

ದುರ್ವಿಷಯಗಳೆಂಬ ದುರಾತ್ಮರ ತೋಳ್ಬಂದಿಗೆ ಸಿಲುಕಿಕೊಂಡಿದ್ದೇವೆ ಮತ್ತೊಬ್ಬರ ಬೆಂಬಲವಿಲ್ಲದೆ ಬಿಡುಗಡೆಯನ್ನೇ ಪಡೆಯಲಾಗದಷ್ಟು ಬಂಧನದಲ್ಲಿ ಸಿಲುಕಿ ಕೊಂಡಿದ್ದೇವೆ. ಬಾಣಾಸುರನಿಂದ ಅನಿರುದ್ಧನನ್ನು ಬಿಡಿಸಲು ಶೋಣಿತಪುರಕ್ಕೆ ಶ್ರೀಕೃಷ್ಣನೇ ಬರಬೇಕಾಯಿತು. ಅದರಂತೆ ಹೃದಯವೆಂಬ ನಗರಿಯಲ್ಲಿ ಮೋಹಗಳ ಬಂಧನಕ್ಕೆ ಸಿಲುಕಿದ ಜೀವಾತ್ಮನ ಬಿಡುಗಡೆಗೆ ಶ್ರೀಕೃಷ್ಣನೇ ಆಗಮಿಸಬೇಕು. ನಾಂಬನ ಬಿಡುಗಡೆಗೆ ಶೇಷರೂಪಿ ಬಲರಾಮ ಬಂದಂತೆ ಮನೋನಿಯಾಮಕನಾದ ಶೇಷನ ವಿಶೇಷ ಅನುಗ್ರಹವೂ ಬೇಕು'' ಎಂಬ ಸಂದೇಶಗಳನ್ನು ಇಲ್ಲಿ ಕಾಣಬಹುದು

## ಧರ್ಮದಿಂದ ಬದುಕಬೇಕು

ದ್ವಾರಕಾಧೀಶನಾದ ಶ್ರೀಕೃಷ್ಣಪರಮಾತ್ಮನು ತನ್ನ ಅವತಾರಕಾರ್ಯಗಳನ್ನೆಲ್ಲ ನಿರ್ವಹಿಸುತ್ತಾ ದ್ವಾರಕೆಯಲ್ಲಿ ಎಂದಿನಂತೆ ಮುಂಜಾವದಲ್ಲಿ ಎದ್ದು ಸ್ನಾನ ಸಂಧ್ಯಾವಂದನೆಗಳನ್ನು ಆಚರಿಸಿದ ಎನ್ನುತ್ತದೆ ಭಾಗವತ–

ಬ್ರಾಹ್ಮೇ ಮುಹೂರ್ತೇ ಉತ್ಥಾಯ ವಾರ್ಯುಪಸ್ಪೃಶ್ಯ ಮಾಧವಃ ।
ದಧ್ಯೌ ಪ್ರಸನ್ನಕರಣಃ ಸ್ವಾತ್ಮಾನಂ ತಮಸಃ ಪರಮ್ ॥ — (೧೦-೭೦-೪)

ಸರ್ವ ವಿಧಿನಿಷೇಧಗಳಿಂದ ದೂರನಾಗಿದ್ದರೂ, 'ಮಾನವರಾದ ನಾವು ಹೇಗೆ ಬದುಕಬೇಕು, ನಮ್ಮ ನಡತೆ ನಮ್ಮ ಆಚರಣೆ ಹೇಗೆ ನಿರ್ಮಲವಾಗಿರಬೇಕು' ಎಂಬ ಆದರ್ಶವನ್ನು ಭಗವಂತ ತೋರಿಸಿಕೊಡುತ್ತಿದ್ದಾನೆ.

ಶ್ರೀಕೃಷ್ಣನು ಸೂರ್ಯೋದಯಕ್ಕಿಂತ ಮೊದಲು ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು ಸ್ನಾನ ಧ್ಯಾನಗಳನ್ನು ನಡೆಸಿದ್ದಾನೆ.

ಇಂದು ಅನೇಕರು ಬ್ರಾಹ್ಮಣ್ಯ ರಕ್ಷಣೆಗೆ ಬೇಕಾದ ಸ್ನಾನ, ಸಂಧ್ಯಾವಂದನೆ ಮುಂತಾದ ನಿತ್ಯಕರ್ಮಗಳನ್ನು ಉಲ್ಲಂಘಿಸಿ ವರ್ತಿಸುತ್ತಿದ್ದಾರೆ. ಇದಕ್ಕೆ ಅವರೆಲ್ಲರ ಉತ್ತರ 'ನಮಗೆ ನೂರಾರು ವ್ಯವಹಾರಗಳಿವೆ, ಆಫೀಸಿಗೆ ಸಾಗುವ ಗಡಿಬಿಡಿಯಲ್ಲಿ ಸಂಧ್ಯಾದಿ ಕ್ರಿಯಗಳಿಗೆ ಅವಕಾಶವಿಲ್ಲ!' ಎನ್ನುತ್ತಾರೆ.

ಆದರೆ ಸಂಧ್ಯಾವಂದನೆಯ ಸಮಯ ಸೂರ್ಯೋದಯಕ್ಕಿಂತ ಮೊದಲು ಬ್ರಾಹ್ಮೀ ಮುಹೂರ್ತದಲ್ಲಿ ಯಾವ ಆಫೀಸು ತೆರೆದಿರುವುದಿಲ್ಲ. ಯಾವ ಇತರ ಲೌಕಿಕ ವ್ಯವಹಾರಗಳಿಗೂ ಆಸ್ಪದವಿಲ್ಲ. ಶಾಸ್ತ್ರಕಾರರು ಅಂತಹ ಏಕಾಂತ ಸಮಯವನ್ನು ನಿಗದಿಪಡಿಸಿದ್ದಾರೆ. ಇದನ್ನು ಶ್ರೀಕೃಷ್ಣನೂ ತಿಳಿಸಿದ್ದಾನೆ. ಮನಸ್ಸಿದ್ದವರಿಗೆ ಮಾಡಲು ಸಾಧ್ಯ.

ಇಲ್ಲಿ ಭಗವಂತನ ಧ್ಯಾನಮಾಡಿದ ಎಂದಿದ್ದಾರೆ. ಅವನು ಯಾರನ್ನು ಧ್ಯಾನಮಾಡ ಬೇಕು. ಅವನಿಗಿಂತ ಉತ್ತಮರೇ ಇಲ್ಲದಿರಲು ಅವನ ಧ್ಯಾನದ ಹೊರತಾಗಿ ಮತ್ತೇನು ಮಾಡಿಯಾನು? ಇವೆಲ್ಲವೂ ನಮ್ಮ ಶಿಕ್ಷಣಕ್ಕಾಗಿ. ಧಾರ್ಮಿಕ ಆಚರಣೆಯನ್ನು

ಬಿಡಬಾರದೆಂದು ಸರ್ವೋತ್ತಮನಾದ ಭಗವಂತನೂ ಆಚರಿಸಿ ತೋರಿಸಿದ್ದಾನೆ. ಆದರೂ ನಾವು ಮಾಡಲು ತಯಾರಿಲ್ಲ.

ಶ್ರೀರಾಮಚಂದ್ರನೂ ನಿತ್ಯವೂ ಸಂಧ್ಯಾದಿ ಕ್ರಿಯೆಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಿದ್ದ. ತಮ್ಮ ಆಶ್ರಮಕ್ಕೆ ಕರೆದು ತಂದ ವಿಶ್ವಾಮಿತ್ರರು ಶ್ರೀರಾಮನನ್ನು ಅದೇ ಕಾರಣದಿಂದ ಎಬ್ಬಿಸುತ್ತಾರೆ–

ಕೌಸಲ್ಯಾ ಸುಪ್ರಜಾರಾಮ ಪೂರ್ವಾಸಂಧ್ಯಾ ಪ್ರವರ್ತತೇ ।
ಉತ್ತಿಷ್ಠ ನರ ಶಾರ್ದೂಲ ಕರ್ತವ್ಯಂ ದೈವಮಾಹ್ನಿಕಮ್ ॥ -- (ರಾಮಾಯಣ)

'ಕೌಸಲ್ಯೆಯ ಮುದ್ದುಮಗನಾದ ಶ್ರೀರಾಮನೇ! ಎದ್ದೇಳು! ಸಂಧ್ಯಾಕಾಲ ಸಮೀಪಿಸಿದೆ. ಅವುಗಳನ್ನು ಅನುಷ್ಠಾನಮಾಡು' ಎನ್ನುತ್ತಾರೆ. ಅದರಂತೆ ಶ್ರೀರಾಮನು ಆಚರಿಸಿ ತೋರಿಸಿದ.

ಎಲ್ಲರೂ ತಮ್ಮ ದೈನಂದಿನ ಬದುಕಿನಲ್ಲಿ ನಿತ್ಯಕರ್ಮಾನುಷ್ಠಾನ, ಭಗವಂತನ ಪೂಜೆ, ಪ್ರಾರ್ಥನೆ ಇವುಗಳನ್ನು ತಪ್ಪದೇ ನಡೆಸಬೇಕು. ಅದರಿಂದ ನಮ್ಮ ಜೀವನದ ಎಲ್ಲ ವ್ಯವಹಾರಗಳಿಗೂ ಬೇಕಾದ ಚೈತನ್ಯ ಶಕ್ತಿ ತುಂಬಿ ಬರುತ್ತದೆ. ಇದೆಲ್ಲವನ್ನೂ ಭಗವಂತನೇ ಆಚರಿಸಿ ತೋರಿಸಿದ್ದಾನೆ. ಅವನ ಮಾತಿನಂತೆಯೂ ನಡೆಯದಷ್ಟು ಮಂದಮತಿಗಳು ನಾವಾಗಬಾರದಲ್ಲವೇ?

## ಮಾಗಧವಧೋಪಾಖ್ಯಾನ

ಒಂದು ದಿನ ಶ್ರೀಕೃಷ್ಣನು ಸಭಾಭವನದಲ್ಲಿ ಕುಳಿತಿರಲು ಅಲ್ಲಿಗೆ ದೂತನೊಬ್ಬನು ಆಗಮಿಸಿದನು. ಎಲ್ಲರೂ ಯಾರೆಂದು ವಿಚಾರಿಸಲು ಶ್ರೀಕೃಷ್ಣನಿಗೆ ನಮಿಸಿ ನುಡಿದನು. "ಸ್ವಾಮಿ! ನಾನು ಜರಾಸಂಧನಿಂದ ಬಂಧಿತನಾಗಿರುವ ಹತ್ತಾರು ಸಾವಿರಾರು ರಾಜರುಗಳ ಪ್ರತಿನಿಧಿಯಾಗಿ ಬಂದಿರುವೆ. ಯಾರು ತನಗೆ ಮಣಿಯುವುದಿಲ್ಲವೋ ಹೊಗಳುವುದಿಲ್ಲವೋ ಅವರನ್ನೆಲ್ಲ ಒಂದು ಭಯಂಕರವಾದ ಕಾರಾಗೃಹದಲ್ಲಿ ಬಂಧಿಸಿಟ್ಟಿದ್ದಾನೆ."

ಹಿಟ್ಲರ್ ಮಹಾಶಯ ಯಹೂದಿಗಳನ್ನೆಲ್ಲಾ ಒಂದೇ ಕಡೆ ಸೇರಿಸಿ ಬಂದಿಗಳನ್ನಾಗಿ ಮಾಡಿ ಚಿತ್ರಹಿಂಸೆ ಕೊಡುತ್ತಿದ್ದ. ಅದರಂತೆ ಜರಾಸಂಧನೂ ದೊಡ್ಡದೊಂದು ಗುಹಾಪ್ರದೇಶದಲ್ಲಿ ರಾಜರನ್ನೆಲ್ಲ ವಿನಾಕಾರಣ ಬಂಧಿಸಿಟ್ಟಿದ್ದಾನೆ. ಜರಾಸಂಧನ ಉದ್ದೇಶ ಕೇವಲ ಬಂಧನಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಮುಂದೆ ರುದ್ರದೇವರ ಪ್ರೀತ್ಯರ್ಥವಾಗಿ ದೊಡ್ಡ ಯಾಗವನ್ನು ಕೈಗೊಂಡು ಅದರಲ್ಲಿ ಇವರನ್ನೆಲ್ಲ ಬಲಿಕೊಡುವ ಭೀಕರ ಅಮಾನವೀಯ ಕಾರ್ಯಕ್ರಮವನ್ನು ಕೈಗೊಂಡಿದ್ದಾನೆ. ನಿರಂತರ ಶೋಕಸಾಗರದಲ್ಲಿ ಮುಳುಗಿರುವ ರಾಜರನ್ನೆಲ್ಲ ಬಂಧಮುಕ್ತರನ್ನಾಗಿಸಲು ನೀನೊಬ್ಬನೇ ಸಮರ್ಥನಿದ್ದೀಯೆ. ದಯಮಾಡಿ ಅವರನ್ನು ಪಾರುಮಾಡುವ ಕೃಪೆ ತೋರಬೇಕೆಂದು ವಿನಂತಿಸಿಕೊಳ್ಳಲು ಅವನ ಪ್ರಾರ್ಥನೆಯನ್ನು ಸ್ವೀಕಾರಮಾಡಿದ.

ಅದಕ್ಕೆ ಸರಿಯಾಗಿ ನಾರದರ ಮೂಲಕ ರಾಜಸೂಯಾಧ್ವರವನ್ನಾಚರಿಸಬೇಕೆಂಬ ಅಭಿಪ್ರಾಯದಿಂದ ಧರ್ಮರಾಜನು ಶ್ರೀಕೃಷ್ಣನನ್ನು ಆಹ್ವಾನಿಸುತ್ತಿದ್ದಾನೆ. ಶ್ರೀಕೃಷ್ಣನು ಧರ್ಮರಾಜನ ಪ್ರಾರ್ಥನೆಯಂತೆ ತನ್ನ ಭಕ್ತರಾದ ಪಾಂಡವರಿಗೆ ಹಿತಮಾಡುವ ದೃಷ್ಟಿಯಿಂದ ಇಂದ್ರಪ್ರಸ್ಥಕ್ಕೆ ತೆರಳಿದ.

ಭಗವಂತನ ಈ ಸಡಗರವು ಭಕ್ತರಿಗಾಗಿಯೇ ವಿನಾ ತನ್ನ ಸ್ವಾರ್ಥಕ್ಕಾಗಿಯಲ್ಲ. ಭಕ್ತರನ್ನು ಅನುಗ್ರಹ ಮಾಡಿದ್ದರಿಂದ ಅವನಿಗಾಗಬೇಕಾದ್ದು ಏನೂ ಇಲ್ಲ. ಪೂರ್ಣ ಕಾಮನಾದ ಹರಿಗೆ ಅಲ್ಪಮ ಗಳ ಪೂಜೆ ಪ್ರಾರ್ಥನೆಗಳಿಂದಲಾದರೂ ಆಗಬೇಕಾದದ್ದೇನು? ದುಷ್ಟರ ನಿಗ್ರಹವೂ ತನ್ನ ಸ್ವಾರ್ಥಕ್ಕಾಗಿಯಲ್ಲ. ಧರ್ಮರಾಜ ಹೇಳುತ್ತಾನೆ–

ಜನರೆಲ್ಲರೂ ಅವರವರು ಸಲ್ಲಿಸಿದ ಸೇವೆಗಳಿಗನುಗುಣವಾಗಿ ಒಳ್ಳೆಯದನ್ನು ಪಡೆದುಕೊಳ್ಳುತ್ತಾನೆ. ಎಲ್ಲರ ಯೋಗ್ಯತೆಯನ್ನರಿತು ಅವರ ಕರ್ಮಗಳಿಗನುಸಾರವಾಗಿ ಫಲನೀಡುವ ಮಹಾಪುರುಷ ನೀನು. ನಿನ್ನ ಆರಾಧನೆಯನ್ನು ರಾಜಸೂಯಾಧ್ವರದ ಮೂಲಕ ನಡೆಸಬೇಕೆಂದಿರುವೆ. ಅದಕ್ಕೆ ನಿನ್ನ ಅನುಗ್ರಹ ಮಾರ್ಗದರ್ಶನಗಳು ಅಗತ್ಯ ಬೇಕು ಎಂದು ಪ್ರಾರ್ಥಿಸಲು ಶ್ರೀಕೃಷ್ಣ ಹೇಳಿದ–

ಧರ್ಮರಾಜ! ನಿನ್ನ ಕಾರ್ಯದಲ್ಲಿ ಸ್ವಾರ್ಥವಿಲ್ಲ; ಲೋಕಕಲ್ಯಾಣವಡಗಿದೆ. ಆದರೆ ಜರಾಸಂಧನ ವಧೆಯಾಗದೆ ರಾಜಸೂಯಾಧ್ವರ ಪರಿಪೂರ್ಣವೆನಿಸದು ಎಂದಾಗ ಧರ್ಮರಾಜ ಹೆದರಿದ.

ಜರಾಸಂಧನನ್ನು ಎದುರಿಸುವ ಮಲ್ಲರೇ ಇರಲಿಲ್ಲ. ಬಲರಾಮನೂ ಅವನ ಬಳಿ ಕಾದಾಟಕ್ಕೆ ಹೋಗಲಿಲ್ಲ. ಶ್ರೀಕೃಷ್ಣನೂ ಬಾರದಿರಲೆಂದು ದ್ವಾರಕೆಯನ್ನೇ ನಿರ್ಮಾಣ ಮಾಡಿದ್ದ. ರಾಜಧಾನಿಯನ್ನೇ ಬದಲಾಯಿಸಲು ಕಾರಣನಾದ ಜರಾಸಂಧನನ್ನು ವಧಿಸಲು ಯಾರಿಗೂ ಸಾಧ್ಯವಾಗದು ಎಂಬುದು ಅಂದಿನ ಎಲ್ಲರ ಮನೋಭಾವವಾಗಿತ್ತು.

ಎಲ್ಲರಂತೆ ಧರ್ಮರಾಜನೂ ಹೆದರಿ ಹಿಂದೆ ಸರಿಯಲು ಭೀಮಸೇನನು ಎದ್ದು ನಿಲ್ಲುತ್ತಾನೆ. ಸುಂದರವಾಗಿ ಉದ್ಗರಿಸುತ್ತಾನೆ–

ಪದಂ ಚತುರ್ಮುಖಸ್ಯ ವಾ ಸುಸಾಧ್ಯಮೇವ ಯತ್ನತಃ ।
ನಿಜಾನುಭಾವವರ್ಜಿತಾ ಹರೇರನುಗ್ರಹೋಜ್ಝಿತಾಃ ।
ಮಹಾಪ್ರಯತ್ನ ವರ್ಜಿತಾ ಜನಾ ನ ಜಗ್ಮುರುನ್ನತಿಮ್ ॥
ಸ್ಥಿರೋಽನುಭಾವ ಏವ ಮೇ ಮಹಾನನುಗ್ರಹೋ ಹರೇಃ ।
ಪ್ರಯತ್ನಮೇಕಮಗ್ರತೋ ನಿಧಾಯ ಭೂತಿಮಾಪ್ನುಮಃ ॥
— (ಮ. ತಾ. ನಿ. –೨೧–೯೬–೯೯)

ಪ್ರಯತ್ನದಿಂದ ಚತುರ್ಮುಖಬ್ರಹ್ಮನ ಪದವಿಯನ್ನು ಏರಬಹುದು. ತಮ್ಮಲ್ಲಿ ಸ್ವಾಭಾವಿಕ ಬಲವಿಲ್ಲದ, ಹರಿಯ ಅನುಗ್ರಹವೂ ಇಲ್ಲದ, ಮಹಾಪ್ರಯತ್ನವನ್ನು ಮಾಡದ ಜನರು ಎಂದೆಂದೂ ಉನ್ನತಿಯನ್ನು ಹೊಂದರು. ಆದರೆ ನನ್ನಲ್ಲಿ ಸ್ಥಿರವಾದ

ಬಲವಿದೆ. ಹರಿಯ ಪರಮಾನುಗ್ರಹವಿದೆ. ಪ್ರಯತ್ನ ಒಂದನ್ನು ಮುಂದಿಟ್ಟುಕೊಂಡು ಸಂಪತ್ತನ್ನು ಗಳಿಸೋಣ!! ಎನ್ನುತ್ತಾನೆ.

ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮುಖ್ಯ ಸಂದೇಶವಿದು. ಭಗವಂತನ ಅನುಗ್ರಹ ನಮ್ಮ ಪ್ರಯತ್ನ ಎರಡು ಇದ್ದರೆ ಜೀವನದಲ್ಲಿ ಅಪಯಶಸ್ಸೆನ್ನುವುದೇ ಇಲ್ಲ. ಇದನ್ನು ಬಿಟ್ಟು ಎಲ್ಲವನ್ನೂ ನಾನೇ ಮಾಡುತ್ತೇನೆ; ನನ್ನಿಂದಲೇ ಎಲ್ಲವೂ ನಡೆಯುತ್ತದೆ ಎಂದು ಅಹಂಕಾರದಿಂದ ವರ್ತಿಸುವವರಿಗೂ ಯಶಸ್ಸಿಲ್ಲ. ಇನ್ನು, ಎಲ್ಲವೂ ದೇವರೇ ನಡೆಸುತ್ತಾನೆ ಎಂದು ದೇವರ ತಲೆಗೆ ಎಲ್ಲವನ್ನು ಹೊರಿಸಿ ನಿಷ್ಕ್ರಿಯನಾಗುವವನಿಗೂ ಯಶಸ್ಸಿಲ್ಲ. ಅಹಂಕಾರದಿಂದ ಹರಿ ವಿಸ್ಮರಣೆ ಕರ್ತೃತ್ವವೇ ಇಲ್ಲವೆಂದು ನಿಷ್ಕ್ರಿಯತೆ ಇವೆರಡೂ ಜೀವನದ ಅನರ್ಥಕ್ಕೆ ಕಾರಣಗಳಾಗುತ್ತವೆ. ಆದ್ದರಿಂದ ಶ್ರೀಮದಾಚಾರ್ಯರು ದೈವಾನುಗ್ರಹ, ಮಾವನ ಪ್ರಯತ್ನ = ದೈವ ಪೌರುಷಗಳ ಸಮನ್ವಯವೇ ಜೀವನದ ಯಶಸ್ಸಿನ ಗುಟ್ಟು ಎಂಬುದನ್ನು ಶ್ರೀಮದಾಚಾರ್ಯರು ತೋರಿಸಿದ್ದಾರೆ.

ಭೀಮಸೇನ ಏನು ಹೇಳಿದರೂ ಧರ್ಮರಾಜನಿಗೆ ಧೈರ್ಯ ಬರಲಿಲ್ಲ. ಕೃಷ್ಣ ಹೇಳಿದರೂ ಮೊದಲು ಧರ್ಮರಾಜನಿಗೆ ಧೈರ್ಯ ಬರಲಿಲ್ಲ. ಸಂಶಯದಿಂದಲೇ ನೋಡಿದ. ಅನಂತರ ಶ್ರೀಕೃಷ್ಣ ಭರವಸೆ ನೀಡಿದ ಬಳಿಕ ಕಷ್ಟದಿಂದ ಒಪ್ಪಿದ. ಕೃಷ್ಣ ಭೀಮಾರ್ಜುನರು ಜರಾಸಂಧನನ್ನು ವಧಿಸಲು ಮಗದ ದೇಶಕ್ಕೆ ಸಾಗಿದರು.

ಮಗಧ ದೇಶಕ್ಕೆ ಹೋಗಿ ಜರಾಸಂಧನಿಗೆ ಅತಿಪ್ರಿಯವಾದ ಶಿವಲಿಂಗದ ಬೆಟ್ಟವನ್ನು ಮುಷ್ಟಿಗಳಿಂದಲೇ ಕುಟ್ಟಿ ಪುಡಿಮಾಡಿದರು ಇದರಿಂದ ಜರಾಸಂಧನ ತಲೆಯನ್ನೇ ಉರುಳಿಸಿದಂತಾಯಿತು. ಮುಂದೆ ಸಾಗುತ್ತಾ ಅದ್ವಾರದಿಂದ ನಗರವನ್ನು ಪ್ರವೇಶಮಾಡಿ ಭಾರೀ ಶಬ್ದದ ಭೇರಿಗಳನ್ನು ಭೇದಿಸಿದರು. ಜರಾಸಂಧ! ಎಂದು ಕೂಗುತ್ತಾ ಸಾಗಿದರು. ಬ್ರಾಹ್ಮಣರ ವೇಷದಿಂದ ಅವನ ಅಂತಃಪುರವನ್ನು ಪ್ರವೇಶಿಸಿದರು. ಜರಾಸಂಧನು ಯಾರು ನೀವು? ಏಕೆ ಬಂದಿರಿ? ಎನ್ನಲು ಶ್ರೀಕೃಷ್ಣನು ನೇರವಾಗಿ ಮಾತನಾಡಿದ. ನಾನು ನಿನ್ನ ಶತ್ರು ಶ್ರೀಕೃಷ್ಣ; ಇವರೀರ್ವರು ಭೀಮಾರ್ಜುನರು. ನೀನು ನಿರಪರಾಧಿಗಳಾದ ೨೨,೮೦೦ ರಾಜರನ್ನೆಲ್ಲ ಬಂಧಿಸಿರುವಿ ಅವರನ್ನೆಲ್ಲ ಅವೈದಿಕವಾದ ನರಮೇಧಕ್ಕೆ ವಿನಿಯೋಗಿಸುವ ಅಮಾನುಷ ಪ್ರಕ್ರಿಯೆಯಲ್ಲಿ ತೊಡಗಿರುವಿ. ಇದಕ್ಕೆ ಖಂಡಿತಾ ಅವಕಾಶಕೊಡೆವು. ಒಂದೋ ಅವರನ್ನು ಬಿಟ್ಟುಬಿಡು. ಅಥವಾ ಯುದ್ಧಕ್ಕೆ ಬಾ ಎಂದ.

ದುರಾತ್ಮನಾದ ಜರಾಸಂಧ ಯುದ್ಧಕ್ಕೆ ಸಿದ್ಧನಾಗಲು ಶ್ರೀಕೃಷ್ಣನು ಹೇಳಿದ– "ನಮ್ಮಲ್ಲಿ ಯಾರಾದರೊಬ್ಬರನ್ನು ಆರಿಸಿಕೊಳ್ಳಬಹುದು' ಎಂದು. ಜರಾಸಂಧನಿಗೆ ಕೃಷ್ಣನ ಬಳಿ ಯುದ್ಧಮಾಡಲು ಭಯವಿದೆ. ಹಿಂದೆ ಹತ್ತಾರು ಬಾರಿ ಪೆಟ್ಟು ತಿಂದ ಪ್ರಾಣಭೀತಿಯಿಂದ ನೀನು ಗೋವಳ ಎಂದು ಗೇಲಿಮಾಡಿ ಜಾರಿಕೊಂಡ. ಇನ್ನು ಅರ್ಜುನನನ್ನು ಕರೆಯಬಹುದಿತ್ತು. ಆದರೆ ದ್ವಂದ್ವಯುದ್ಧದಲ್ಲಿ ನಿಷ್ಣಾತನಾದ ಭೀಮನಿರಲು ಧನುರ್ಧಾರಿಯಾದ ಅರ್ಜುನನನ್ನು ಕರೆದನೆಂಬ ಲೋಕ ಅಪವಾದಕ್ಕೆ

ತುತ್ತಾಗುತ್ತೇನೆಂದು ಬಾಲಕನೊಡನೆ ಯುದ್ಧಮಾಡಲಾರೆ ಎಂದ. ಅರ್ಜುನನಿಗೂ ಯುದ್ಧಕ್ಕೆ ಬಾ ಎನ್ನಲು ಭೀತಿ ಇತ್ತು. ಭೀಮನೊಟ್ಟಿಗೆ ಯುದ್ದ ಮಾಡುತ್ತೇನೆ ಎನ್ನುತ್ತಾನೆ. ಭೀಮನೊಟ್ಟಿಗೆ ಸೋತರೂ ಕೀರ್ತಿ, ಗೆದ್ದರೂ ಕೀರ್ತಿ ಎಂದು ಭಾವಿಸಿ ಅವನಿಗೆ ಗದೆಯನ್ನು ಕೊಟ್ಟ. ತನ್ನ ಕೀರ್ತಿ ಪ್ರತಿಷ್ಠೆಗಳಿಗೆ ಧಕ್ಕೆ ಬರಬಾರದೆಂದು ಭೀಮಸೇನನನ್ನು ಯುದ್ಧಕ್ಕೆ ಕರೆದ. ಹದಿನಾಲ್ಕು ದಿನಗಳ ತನಕ ಭೀಮ–ಜರಾಸಂಧರಿಗೆ ಘೋರವಾದ ಯುದ್ಧ ಏರ್ಪಟ್ಟಿತು. ಕಾರ್ತೀಕ ಅಮಾವಾಸ್ಯೆಯ ದಿನ ಭೀಮನು ಜರಾಸಂಧನನ್ನು ಶ್ರೀಕೃಷ್ಣನು ಪ್ರೀತನಾಗಲಿ ಜಗತ್ತಿಗೆ ಹಿತವಾಗಲಿ ಎಂಬ ದೃಷ್ಟಿಯಿಂದ ಸಂಹರಿಸಲು ನಿಶ್ಚೈಸಿದ ಜರಾಸಂಧನ ಬೆನ್ನಿನ ಮೇಲೆ ಮೊಳಕಾಲೂರಿ ಸೊಂಟವನ್ನು ಮುರಿದ. ಬ್ರಹ್ಮಾಂಡವೇ ಸೀಳಿದಂತಹ ಶಬ್ದ ಕೇಳಿಸಿತು. ಅನಂತರ ಮೊದಲಿನಂತೆ ಎರಡಾಗಿ ಸೀಳಿದ. ಜಗತ್ತನ್ನೇ ತನ್ನ ಅಂಕೆಯಲ್ಲಿಟ್ಟುಕೊಂಡು ಉನ್ಮತ್ತನಾಗಿ ವ್ಯವಹರಿಸುತ್ತಿದ್ದ ಜರಾಸಂಧನ ಸಂಹಾರದಿಂದ ದೇವತೆಗಳೂ ಪರಮಾನಂದಭರಿತರಾದರು. ಭೀಮಸೇನನು ಶ್ರೀಕೃಷ್ಣನ ಪೂಜಾರೂಪವಾಗಿ ಜರಾಸಂಧನನ್ನು ಸಂಹರಿಸಿ ಜಗತ್ತಿನ ದೊಡ್ಡ ಪಿಡುಗನ್ನು ತೊಲಗಿಸಿದ.

ಜರಾಸಂಧನ ಸಂಹಾರದ ಬಳಿಕ ಮಗಧ ದೇಶವನ್ನು ಅದರ ಅಧಿಪತ್ಯವನ್ನು ಶ್ರೀಕೃಷ್ಣನು ಸ್ವೀಕರಿಸಲಿಲ್ಲ. ಜರಾಸಂಧನ ಮಗನಾದ ಸಹದೇವನಿಗೆ ಅಧಿಕಾರ ಸೂತ್ರವನ್ನು ವಹಿಸಿದ. ಔದಾರ್ಯ ತ್ಯಾಗಗಳಿಂದ ಶ್ರೀಕೃಷ್ಣ ಮೆರೆದಿದ್ದಾನೆ. ಮುಂದೆ ಬಂಧಿತರಾಗಿ ಬಹಳ ನೊಂದ ರಾಜರನ್ನೆಲ್ಲ ಬಂಧಮುಕ್ತರನ್ನಾಗಿಸಿದ. ಅವರೆಲ್ಲರೂ ನಿರ್ವಿಣ್ಣರಾಗಿದ್ದಾರೆ. ಉಡಲು ವಸ್ತ್ರವಿಲ್ಲದೆ, ಉಣ್ಣಲು ಅನ್ನವಿಲ್ಲದೆ ಕಂಗೆಟ್ಟ ಅವರಿಗೆ ಶ್ರೀಕೃಷ್ಣನ ದರ್ಶನ ಉಪವಾಸವ್ರತದ ಮರುದಿನ ಪಾರಣೆಯ ಆನಂದವನ್ನುಂಟು ಮಾಡಿತು. ನೀಲಮೇಘಶ್ಯಾಮನಾದ ಅರವಿಂದದಲಾಯತಾಕ್ಷನಾದ ಮಕರಕುಂಡಲ ಧಾರಿಯಾದ ಚತುರ್ಬಾಹುವಾದ ಸೌಂದರ್ಯ ಸಾಗರನಾದ ಶ್ರೀಕೃಷ್ಣನನ್ನು ಕಣ್ಣಿಳಿಂದ ಕುಡಿದರು. ನಾಲಿಗೆಯಿಂದ ಚಪ್ಪರಿಸಿದರು. ಮೂಗಿನಿಂದ ಆಘ್ರಾಣಿಸಿದರು. ಮನಸಾರೆ ಮೆಚ್ಚಿಕೊಂಡರು. ತಮ್ಮ ಶಿರಗಳನ್ನು ಹರಿಪಾದಗಳಲ್ಲಿಟ್ಟು ನಮಿಸಿದರು. ಪರಿಪರಿಯಾಗಿ ಪ್ರಾರ್ಥನೆಯನ್ನು ಸಲ್ಲಿಸಿದರು.

ಶ್ರೀಕೃಷ್ಣನೇ ನಾವೆಲ್ಲರೂ ರಾಜರಾಗಿದ್ದಾಗ ಐಶ್ವರ್ಯದ ಮದದಿಂದ ನಿನ್ನನ್ನೇ ಮರೆತಿದ್ದೆವು. ನಮ್ಮನ್ನೇ ಮೇಲೆ ಕೂರಿಸಿಕೊಂಡಿದ್ದೆವು. ನಮ್ಮ ಅಂದಿನ ಅಹಂಕಾರವೇ ಇಂದಿನ ಈ ಸ್ಥಿತಿಗೆ ಕಾರಣವಾಗಿದೆ. ನಾವು ನಿನ್ನ ಬಳಿ ನಶ್ವರವಾದ ಐಹಿಕ ಐಶ್ವರ್ಯವನ್ನು ಬಯಸೆವು. ನಮ್ಮದೊಂದೇ ಪ್ರಾರ್ಥನೆ– ನಮಗೆ ಎಂದೆಂದೂ ನಿನ್ನ ಚರಣದ್ವಂದ್ವಗಳ ವಿಸ್ಮೃತಿ ಉಂಟಾಗದಿರುವಂತೆ ಅನುಗ್ರಹಿಸು ಎಂದು ಪ್ರಾರ್ಥಿಸುತ್ತಾರೆ.

ತನ್ನಃ ಸಮಾದಿಶೋಪಾಯಂ ಯೇನ ತೇ ಚರಣಾಬ್ಜಯೋಃ ।
ಸ್ಮೃತಿರ್ಯಥಾ ನ ವಿರಮೇತ್ ಅಪಿ ಸಂಸಾರತಾಮಿಹ ॥
ಕೃಷ್ಣಾಯ ವಾಸುದೇವಾಯ ಹರಯೇ ಪರಮಾತ್ಮನೇ ।
ಪ್ರಣತಕ್ಲೇಶನಾಶಾಯ ಗೋವಿಂದಾಯ ನಮೋ ನಮಃ ॥

— (೧೦-೭೧-೧೫, ೧೬)

ಶ್ರೀಕೃಷ್ಣನು ಸಂಹರಿಸಿದ ಪಾತಕಿಗಳಲ್ಲಿ ನರಮೇಧವನ್ನು ಮಾಡಿದ ಅಸುರರು ಮೂವರು. ಕಂಸ, ನರಕಾಸುರ, ಜರಾಸಂಧ. ಕಂಸನು ಪೂತನೆಯ ಮೂಲಕ ನಿಷ್ಕಾರಣವಾಗಿ ಬರ್ಬರ ಶಿಶುಹತ್ಯೆ ನಡೆಸಿದರು; ನರಕಾಸುರನು ಸಾವಿರಾರು ಅಬಲೆಯರನ್ನು ಬಂಧನದಲ್ಲಿರಿಸಿ ಹಿಂಸಿಸಿದ. ಜರಾಸಂಧ ರಾಜರುಗಳನ್ನೇ ಬಲಿಕೊಡುವ ನೀಚ ಕೃತ್ಯಕ್ಕೆ ಇಳಿದಿದ್ದ. ಕಂಸನು ಅಧಿಕಾರದ ಲೋಭದಿಂದ ದುಷ್ಕೃತ್ಯಗಳನ್ನು ನಡೆಸಿದರೆ ನರಕಾಸುರನ ಕಾಮದಿಂದ ಅಬಲೆಯರನ್ನು ಬಂಧಿಸಿದ. ಜರಾಸಂಧನು ಕ್ರೋಧದಿಂದ ರಾಜರನ್ನು ಬಂಧಿಸಿದ. ಹೀಗೆ ಈ ಮೂವರು ಕಾಮ, ಕ್ರೋಧ, ಲೋಭಗಳ ಸಾಕಾರಮೂರ್ತಿಗಳಾಗಿದ್ದರು. ಇವರನ್ನು ಸಂಹರಿಸುವ ಮೂಲಕ ಜಗತ್ತಿನ ದೊಡ್ಡ ಪಿಡುಗನ್ನು ತೊಲಗಿಸಿದ. ಈ ಮೂರು ಮಂದಿಯು ಕಾಮ ಕ್ರೊಧ ಲೋಭಕೂಪದಿಂದ ನಮ್ಮೊಳಗೂ ತುಂಬಿಕೊಂಡಿದ್ದಾರೆ. ಭೀಮನ ಮತ್ತೊಂದು ಅವತಾರವಾದ ಮುಖ್ಯಪ್ರಾಣ ಮತ್ತು ಶ್ರೀಕೃಷ್ಣರ ಅನುಗ್ರಹದಿಂದ ಇವರನ್ನು ಸಂಹರಿಸಬೇಕು. ಆಗಾಗ ಮಾತ್ರ ಮೋಕ್ಷದ ದಾರಿ ಸುಗಮವಾದೀತೆಂಬ ತತ್ವವನ್ನು ಇಲ್ಲಿ ಅನುಸಂಧಾನ ಮಾಡಿಕೊಳ್ಳಬಹುದು.

ಕೃಷ್ಣ ಭೀಮಾರ್ಜುನರು ವಿಜಯಶಾಲಿಗಳಾಗಿ ಇಂದ್ರಪ್ರಸ್ಥಕ್ಕೆ ತೆರಳಿದರು. ರಾಜಸೂಯಾಧ್ವರದ ಪ್ರಮುಖ ಬಾಧಕವೊಂದನ್ನು ಪರಿಹರಿಸಿದ ಬಳಿಕ ಯಾಗಕ್ಕೆಲ್ಲರೂ ಅಣಿಯಾದರು. ರಾಜಸೂಯಾಧ್ವರದ ಒಂದೊಂದು ಜವಾಬ್ದಾರಿಯನ್ನು ಒಬ್ಬೊಬ್ಬರು ವಹಿಸಿಕೊಂಡರು. ಸ್ವಾಗತ. ಅತಿಥಿಸತ್ಕಾರ, ಊಟ, ದಾನ ಮುಂತಾದ ಕೆಲಸಗಳನ್ನು ಹಂಚಿಕೊಂಡರು. ಹೊಟ್ಟೆಕಿಚ್ಚಿಗೆ ಜನ್ಮನೀಡಿದ ದುರ್ಯೋಧನನಿಗೆ ಕಪ್ಪಕಾಣಿಕೆಗಳನ್ನು ಸ್ವೀಕರಿಸುವ ಜವಾಬ್ದಾರಿ ಬಂತು.

ನಾಲ್ಕು ಮಂದಿ ಸಹೋದರರು ಹೇರಳವಾಗಿ ಹೊತ್ತು ತಂದ ಮುತ್ತುರತ್ನಗಳು ನೂರಾರು ಯೋಜನ ಎತ್ತರ ರಾಶಿ ಬಿತ್ತು. ಅವುಗಳನ್ನು ಸ್ವೀಕರಿಸಿ ದುರ್ಯೋಧನ ಮಾನಸಿಕವಾಗಿ ದೈಹಿಕವಾಗಿಯೂ ಕುಸಿದು ಬಿದ್ದ. ಪಾಂಡವರ ವೈಭವವನ್ನೆಲ್ಲ ಕಂಡು ಸಂಕಟಪಡುತ್ತಿದ್ದಾನೆ. ಎಲ್ಲರಿಗೂ ಒಂದೊಂದು ಜವಾಬ್ದಾರಿಯನ್ನು ವಹಿಸಿದ ಶ್ರೀಕೃಷ್ಣನು ತಾನು ಮಾತ್ರ ರಾಜಸೂಯಾಧ್ವರಕ್ಕೆ ಆಗಮಿಸಿದ ಸುಜನರ ಪಾದರಜಸ್ಸನ್ನು ತೊಳೆಯಲು ತನ್ನನ್ನು ತೊಡಗಿಸಿಕೊಂಡ.

**ಸತಾಂ ಶುಶ್ರೂಷಣೇ ಜಿಷ್ಣುಃ ಕೃಷ್ಣಃ ಪಾದಾವನೇ ಜನೇ ॥**

— (೧೦-೮೩-೫)

ಬಂದವರ ಕಾಲ್ಗಳನ್ನೆಲ್ಲ ತೊಳೆದ. ಎಲ್ಲರ ಸೇವಕ ನಾನೆಂದ. ಹರಿಯ ಕರುಣೆ ಔದಾರ್ಯ ಎಲ್ಲವೂ ತಿಳಿದು ತೀರದ ತೀರವಿಲ್ಲದ ಕಡಲಿನಂತೆ ಅಪಾರ ಅಗಾಧ.

## ಅಹಂ ಸ ಏವ ಗೋಪಾಲಃ

ಶ್ರೀಕೃಷ್ಣನ ಘನ ವ್ಯಕ್ತಿತ್ವವನ್ನು ಮಹಾನುಭಾವರೆಲ್ಲರೂ ಸುಂದರವಾಗಿ ಚಿತ್ರಿಸಿದ್ದಾರೆ–

ದಾಸರಾಯರು ಹೇಳುತ್ತಾರೆ: 'ಶ್ರೀಕೃಷ್ಣ ಕೇವಲ ಪಾದಪೂಜೆಯನ್ನಷ್ಟೇ ಮಾಡಿದ್ದಲ್ಲ. ಊಟವಾದ ಬಳಿಕ ಎಲ್ಲರ ಎಂಜಲು ಎಲೆಯನ್ನೂ ಬಳಿದ! ಎನ್ನುತ್ತಾರೆ.

ರಾಮಾವತಾರದಲ್ಲಿ ರಾಮನಿಗೆ ಸೇವೆ ಸ್ವೀಕರಿಸಿ ಬೋರಾಗಿ ಸೇವೆಮಾಡುವ ಅವತಾರ ಪಡೆಯೋಣ ಎಂದು ಶ್ರೀಕೃಷ್ಣನಾಗಿ ಅವತರಿಸಿದನೋ ಏನೋ!!

ಕೃಷ್ಣನಾಗಿ ಅವತರಿಸಿ ಅವನು ಮಾಡಿದ ಸೇವೆ ಒಂದೇ? ಎರಡೇ?!

ಗೋವುಗಳ ಸೇವೆ ಮಾಡಿದ. ಅರ್ಜುನನಿಗೆ ಸಾರಥಿಯಾಗಿ ಕುದುರೆಗಳನ್ನು ತೊಳೆದ. ಮೇವನ್ನು ನೀಡಿದ. ಬ್ರಾಹ್ಮಣರ ಕಾಲ್ಗಳ ತೊಳೆದ. ಎಂಜಲನ್ನು ಬಳಿದ. ಹೀಗೆ ಹರಿಯ ಸೇವೆ ಅಪಾರ. ಅನುಪಮ.

ಜಗದ್ವಂದ್ಯನಾದ ಶ್ರೀಹರಿ ಪಾದತೊಳೆಯಲು ಉತ್ಸಾಹದಿಂದ ಮುಂದೆಬಂದ.

ನಮ್ಮಲ್ಲಿ ಸ್ವಲ್ಪ ಶ್ರೀಮಂತಿಕೆ ಇದ್ದರೂ ಸಾಕು. ಸೇವಿಸುವುದಿರಲಿ ಅಹಂಕಾರದಿಂದ ಅವಮಾನ ಮಾಡುತ್ತೇವೆ. ಶ್ರೀಹರಿ ಎಲ್ಲಿ!! ನಾವೆಲ್ಲಿ!!

ಕಂಸನನ್ನು ಕೊಂದಾಗಲೂ ಮಥುರಾನಾಯಕನಾಗಿ ಮೆರೆಯಬಹುದಿತ್ತು. ಉಗ್ರಸೇನನೂ ಒತ್ತಾಯಿಸಿದ್ದ. ಆದರೆ ನಿಃಸ್ವಾರ್ಥಿಯಾಗಿ ಉಗ್ರಸೇನನನ್ನೇ ಪಟ್ಟದಲ್ಲಿ ಕುಳ್ಳಿರಿಸಿದ.

ಜರಾಸಂಧನನ್ನು ಕೊಂದಾಗಲೂ ತಾನು ಮಗಧಾಧಿಪನಾಗಿ ಮೆರೆಯಬಹುದಿತ್ತು. ಅಲ್ಲಿಯ ಬಿಡಿಗಾಸನ್ನೂ ಬಯಸಲಿಲ್ಲ.

ಉಡಲು ವಸ್ತ್ರವಿಲ್ಲದ ಕುಚೇಲ ಬಳಿ ಬಂದಾಗಲೂ ತನ್ನ ಐಶ್ವರ್ಯವನ್ನು ತೋರಿಸಿಕೊಳ್ಳದೆ ಮೊದಲನೆಯ ಪ್ರೀತಿಯನ್ನೇ ತೋರಿಸಿದ.

ಇಂಥಹ ಎಲ್ಲಾ ಪ್ರಸಂಗಗಳಲ್ಲಿಯೂ ಶ್ರೀಕೃಷ್ಣನ ಉತ್ತರ ಒಂದೇ ತೆರನಾಗಿತ್ತು. 'ಅಹಂ ಸ ಏವ ಗೋಪಾಲಃ' ಎಂದ. ಜನರ ಮಧ್ಯೆ ನಾನು ಗೋಪಾಲಕನಾಗಿಯೇ ಇರುತ್ತೇನೆ ಎಂದ.

ಕಾಲಿನ ಬುಡಕ್ಕೇ ರಾಜ್ಯ, ಸಂಪತ್ತು, ವೈಭವಗಳೆಲ್ಲವೂ ಬಂದರೂ ಯಾವುದನ್ನೂ ಬಯಸಲಿಲ್ಲ.

ಶ್ರೀಕೃಷ್ಣನು ಧರ್ಮದ ರಕ್ಷಣೆಗಾಗಿ ಕಂಸ, ಜರಾಸಂಧ, ನರಕ, ಬಾಣ –ಇವರನ್ನೆಲ್ಲಾ ಕೊಂದನೇ ಹೊರತು ಸ್ವಾರ್ಥಕ್ಕಾಗಿಯೋ ದ್ವೇಷದಿಂದಾಗಿಯೋ ಅಲ್ಲ.

ಸಮುದ್ರದ ಮಧ್ಯದಲ್ಲಿ ದ್ವಾರಕಾನಗರವನ್ನೇ ನಿರ್ಮಿಸುವ ಸಾಮರ್ಥ್ಯವುಳ್ಳ ಶ್ರೀಹರಿಗೆ ಅಲ್ಪವಾದ ರಾಜ್ಯಭೋಗ ಏಕೆ ಹೇಳಿ!!

ಮುಂದಿನ ರಾಜರಿಗೆಲ್ಲರಿಗೂ ಸೇವಾಕ್ರಮವನ್ನು ತಿಳಿಸಿಕೊಟ್ಟವ ಶ್ರೀಕೃಷ್ಣ.

ಇಂದಿನ ರಾಜರೂ ಶ್ರೀಕೃಷ್ಣನ ನೀತಿಯನ್ನೇ ಅನುಸರಿಸಬೇಕು. ಭಾರತ ದೇಶದ ಉನ್ನತಿಗೆ ಅಧಿಕಾರ ಸ್ಥಾನಗಳೇ ಹೊರತು, ಸ್ವಾರ್ಥಸಾಧನೆಗಾಗಿಯಲ್ಲ ಎಂಬ ಎಚ್ಚರ

ಬೇಕು. ಈ ಮನೋಭಾವವನ್ನು ಬೆಳೆಸಿಕೊಂಡಾಗಲೇ ತಮಗಾಗಲೀ ದೇಶಕ್ಕಾಗಲೀ ಒತವಾಗುತ್ತದೆ.

ಶ್ರೀಕೃಷ್ಣನ ಈ ನಿಃಸ್ವಾರ್ಥತೆಯನ್ನರಿತೇ ಭೀಷ್ಮರು ಅಗ್ರಪೂಜೆ ಶ್ರೀಕೃಷ್ಣನಿಗೇ ಆಗಬೇಕೆಂದರು. ತ್ಯಾಗಿಯಾಗಿ ಸೇವೆಸಲ್ಲಿಸಿದವನಿಗೇ ಉತ್ತಮ ಸ್ಥಾನ ಎಂಬುದು ಭೀಷ್ಮರ ಅಭಿಪ್ರಾಯವಾಗಿತ್ತು. ಇಂದೂ ಇದನ್ನೇ ಬೆಳೆಸಬೇಕು.

ಸಮಾಜದಲ್ಲಿ ಶ್ರೀಮಂತಿಕೆ ಅಧಿಕಾರಗಳಿಗೆ ಮನ್ನಣೆ ನೀಡಿ ಮಣೆ ಹಾಕಬಾರದು. ಯಾರು ಉತ್ತಮ ಸೇವೆ ಸಲ್ಲಿಸಿದ್ದಾರೋ ಅವರಿಗೇ ಸಮ್ಮಾನಿಸಬೇಕು ಎಂಬ ತೀರ್ಮಾನಕ್ಕೆ ಬಂದಾಗ ಅಧಿಕಾರ ಐಶ್ವರ್ಯಗಳಿಂದಲೇ ಸ್ಥಾನವೆಂದರಿತ ದುರಾತ್ಮರೆಲ್ಲ ಒಂದಾದರು. ಶಿಶುಪಾಲನ ಮುಖಂಡನಾಗಿ ಬಿರುನುಡಿಗಳಿಂದ ಶ್ರೀಕೃಷ್ಣನನ್ನು ಜರೆದ. ಅಗ್ರಪೂಜೆಗೆ ಪ್ರತಿಭಟಿಸಿದ. ಪರಸ್ಪರ ಸಂಗ್ರಾಮವೇ ಏರ್ಪಡುವ ಸಂದರ್ಭ ಒದಗಿಬಂದಾಗ ಶ್ರೀಕೃಷ್ಣನು ಹತ್ಯಾಕಾಂಡವು ಏರ್ಪಡುವುದು ಬೇಡವೆಂದು ಆಲೋಚಿಸಿ ಶಿಶುಪಾಲನ ಶಿರವನ್ನು ತರಿದ. ಸಂಕೀರ್ಣ ವ್ಯಕ್ತಿತ್ವವನ್ನು ಹೊಂದಿದ ಶಿಶುಪಾಲನನ್ನು ಸಂಹರಿಸಿ ಅವನ ಅಂತರಂಗದ ಭಕ್ತಿಯನ್ನು ಗುರುತಿಸಿ ಅನುಗ್ರಹಿಸಿದ. ಹೀಗೆ ರಾಜಸೂಯಾಧ್ವರವು ಸರ್ವಸಮೃದ್ಧಿಗಳಿಂದ ಅದ್ದೂರಿಯಾಗಿ ನಡೆಯಿತು. ವೇದಾಂತ ಶಾಸ್ತ್ರಗಳ ಚರ್ಚೆ ಬಂದವರಿಗೆಲ್ಲ ದಾನ, ವಿತರಣೆ ಸಂತರ್ಪಣೆ ಎಲ್ಲವನ್ನೂ ಅಚ್ಚುಕಟ್ಟಾಗಿ ಶ್ರೀಕೃಷ್ಣನ ನೇತೃತ್ವದಲ್ಲಿ ಪಾಂಡವರು ನಡೆಸಿದ್ದಾರೆ.

ಮುಂದೆ ಶ್ರೀಕೃಷ್ಣಪರಮಾತ್ಮನು ಸಾಲ್ವ ದಂತವಕ್ತ್ರಾದಿಗಳನ್ನು ವಧಿಸಿದ. ಬಲರಾಮನು ತೀರ್ಥಯಾತ್ರೆಗಾಗಿ ಹೊರಟು ಇಲ್ವಲನನ್ನು ಸಂಹರಿಸಿದ. ಶ್ರೀಕೃಷ್ಣನು ಲೋಕಶಿಕ್ಷಣ ಕಾರ್ಯಗಳನ್ನು ಮುಂದುವರೆಸಿದ.

## ಕುಚೇಲೋಪಾಖ್ಯಾನ

ಸುದಾಮನ ಕಥೆಯನ್ನು ಭಾಗವತದಲ್ಲಿ ರೋಚಕವಾಗಿ ಚಿತ್ರಿಸಿದ್ದಾರೆ. ಭಗವಂತನಲ್ಲಿ ನಿರ್ವ್ಯಾಜಭಕ್ತಿಯನ್ನು ಉತ್ತಮ ಭಾವನೆಯನ್ನು ತುಂಬುದ ಹೃದಯ ಸ್ಪರ್ಶಿಯಾದ ಉಪಾಖ್ಯಾನ.

ಶ್ರೀಕೃಷ್ಣನಿಗೆ ಸುದಾಮನೆಂಬ ಬಾಲ್ಯಮಿತ್ರನೊಬ್ಬನಿದ್ದನು. ಗೃಹಸ್ಥನಾಗಿದ್ದರೂ ವಿರಕ್ತನಾಗಿದ್ದ. ದರಿದ್ರನಾಗಿದ್ದರೂ ಶಾಂತಾತ್ಮನಾಗಿದ್ದ. ಸಿಕ್ಕಷ್ಟರಿಂದಲೇ ಸಿರಾಳವಾಗಿ ಉಸಿರಾಡುತ್ತಿದ್ದ. ತೃಪ್ತಿ ಅವನಳವಡಿಸಿಕೊಂಡ ದೊಡ್ಡ ಗುಣ. ಹಣಕ್ಕಾಗಿ ತನ್ನ ಜೀವನವನ್ನು ಮಾರಿಕೊಂಡವನಲ್ಲ. ಭಗವಂತನ ಗುಣಚಿಂತನೆ ಇಲ್ಲದೆ ಬದುಕಿದ ವನೂ ಅಲ್ಲ. ವಿರಕ್ತ ಭಕ್ತನಾಗಿ ಜೀವನ ಸಾಗಿಸುತ್ತಿದ್ದ.

ಕುಚೇಲನಿಗೆ ದೈವದಿಂದ ಅವನನ್ನು ಅನುಸರಿಸುವ ಶೀಲವತಿಯಾದ ಪತ್ನಿ ದೊರೆತಿದ್ದಳು. ಉಡಲು ಸರಿಯಾದ ಬಟ್ಟೆಯಿಲ್ಲ. ಉಣ್ಣಲು ಹೊತ್ತಿಗೆ ಆಹಾರವಿಲ್ಲ. ಹಾಗಿದ್ದರೂ ಅತಿಯಾದ ಬಯಕೆಯಿಲ್ಲ. ಸುದಾಮನ ದಾರಿದ್ರ್ಯಕ್ಕಾಗಿ ದುಃಖಿಸಲಿಲ್ಲ.

ತಿರಸ್ಕರಿಸಲಿಲ್ಲ ಹಸಿವಿನಿಂದ ಬಳಲಿದರೂ ವ್ಯಕ್ತಗೊಳಿಸದೆ ಮನೆಯ ವ್ಯವಹಾರಗಳನ್ನು ನಿರ್ವಹಿಸುತ್ತಿದ್ದಳು.

ಹೀಗಿದ್ದರೂ ನಿತ್ಯ ದಾರಿದ್ರ್ಯದಿಂದ ಬೇಸತ್ತು ಕುಟುಂಬದ ರಕ್ಷಣೆಯ ಜವಾಬ್ದಾರಿಯಿಂದ ಸುದಾಮನ ಬಳಿ ಒಂದು ಮಾತನ್ನು ಹೇಳಿದಳು. 'ನಾಥ! ಯದುನಾಥನು ನಿನ್ನ ಬಾಲ್ಯಸ್ನೇಹಿತನಷ್ಟೇ! ಗುರುಕುಲದಲ್ಲಿದ್ದಾಗ ಆಟ ಊಟ ಪಾಠಗಳಲ್ಲಿ ಜೊತೆಗಾರರೆಂದು ನೀವೆ ಹೇಳುತ್ತಿರುವಿರಿ! ಅವನು ಅತ್ಯಂತ ದಯಾಳುವು, ಬ್ರಾಹ್ಮಣರಲ್ಲಿ ಪ್ರೀತಿಯುಳ್ಳವನು, ಭಕ್ತವತ್ಸಲನು ಆಗಿದ್ದಾನೆಂದು ಹೇಳಿದ್ದೀರಿ. ನಾನೂ ಕೇಳಿದ್ದೇನೆ. ಸಾಧುಗಳಿಗೆ ಆಧಾರಸ್ತಂಭದಂತಿರುವ ಸ್ನೇಹಿತನಾದ ಕೃಷ್ಣನ ಬಳಿ ಸಾಗಿರಿ ಅವನು ನಿಮ್ಮ ಸಂತಪ್ತ ಕುಟುಂಬದ ಸಾಂತ್ವನಕ್ಕಾಗಿ ಹೇರಳವಾಗಿ ಸಂಪತ್ತನ್ನು ದಯಪಾಲಿಸುತ್ತಾನೆ. 'ದಾಸ್ಯತಿ ದ್ರವಿಣಂ ಭೂರಿ ಸೀದತೇ ತೇ ಕುಟುಂಬಿನೇ' ಎಂದು ಸುದಾಮನ ಸತಿಯು ಸುದಾಮನಿಗೆ ಹೇಳುತ್ತಾಳೆ.

ಪ್ರಿಯ! ಕೃಷ್ಣನು ನಮ್ಮಿಂದ ಬಹಳ ದೂರದಲ್ಲೇನು ಇಲ್ಲ. ನಮ್ಮ ಸಮೀಪದ ದ್ವಾರಕೆಯಲ್ಲಿಯೇ ಇದ್ದಾನೆ.

ಆಸ್ತೇಽಧುನಾ ದ್ವಾರವತ್ಯಾಂ ಭೋಜವೃಷ್ಣ್ಯಂಧಕೇಶ್ವರಃ ।
ಸ್ಮರತಃ ಪಾದಯುಗಳಮಾತ್ಮಾನಮಪಿ ಯಚ್ಛತಿ ॥ — (೧೦-೮೦-೨೭)

ವೃಷ್ಣಿ, ಭೋಜ, ಅಂಧಕರಿಗೆಲ್ಲ ಅರಸನೆನಿಸಿದ ಶ್ರೀಕೃಷ್ಣನು ನಮ್ಮ ನಿಕಟವರ್ತಿಯಾಗಿರುವ ಅವನ ಪಾದಕಮಲವನ್ನು ಭಜಿಸುವ ಯಾವ ಭಕ್ತರೇ ಇರಲಿ ಅವರಿಗೆ ತನ್ನನ್ನೇ ಕೊಡುತ್ತಾನೆ. ಹೀಗಿರಲು ಧನಕನಕಗಳನ್ನು ಕೊಡದಿರುವನೇ? ಒಮ್ಮೆ ಕೇಳಿ ಬನ್ನಿರಿ! ಎಂದು ಅಂಗಲಾಚಿದಳು.

ಸುದಾಮನ ತ್ಯಾಗ ಎಂಥದ್ದು. ತನ್ನ ಸ್ನೇಹಿತನಾದ ಕೃಷ್ಣನ ಬಳಿ ಕಾಮನೆಗಾಗಿ ತೆರಳಬೇಕು ಎಂದು ಎಂದೂ ಆಲೋಚಿಸಿದವನಲ್ಲ. ಪತ್ನಿಯು ಹತ್ತಾರು ಬಾರಿ ಹೇಳಿದಾಗಲೂ ಕೇಳುವ ಮನಸಾಗಲಿಲ್ಲ. ಕೊನೆಗೆ ಬಹಳ ಒತ್ತಾಯ ಮಾಡಿದಾಗ ಭಗವಂತನ ದರ್ಶನ ಈ ನೆಪದಲ್ಲಾದರೂ ದೊರೆಯಿತಲ್ಲ ಎಂದು ಭಾವಿಸಿ ಹೊರಡಲು ಅನುವಾದನು. ಜಗತ್ತಿನ ಕಣ್ಮಣಿಯಾದ ಭಗವಂತನ ದರ್ಶನಲಾಭ ನನಗೆ ದೊರೆಯುತ್ತಿದೆಯಲ್ಲ. ನಾನೇ ಭಾಗ್ಯವಂತ ಎಂದು ಭಾವಿಸಿದ–

ಅಯಂ ಹಿ ಪರಮೋ ಲಾಭಃ ಉತ್ತಮಶ್ಲೋಕದರ್ಶನಮ್ ।
ಇತಿ ಸಂಚಿಂತ್ಯ ಮನಸಾ ಗಮನಾಯ ಮನೋ ದಧೇ ॥ — (೧೦-೮೦-೨೯)

ಹೊರಡುವ ಮುನ್ನ ಕೃಷ್ಣನಿಗೆ ಏನಾದರೂ ನೀಡಬೇಕೆಂದು ತನ್ನ ಪತ್ನಿಯಲ್ಲಿ ಕೇಳುತ್ತಾನೆ. ಮನೆಯಲ್ಲಿ ಏನಾದರೂ ಪದಾರ್ಥವಿದ್ದರೆ ಕೊಡು ಕೃಷ್ಣನಿಗರ್ಪಿಸುತ್ತೇನೆ ಎನ್ನುತ್ತಾನೆ. ನಿತ್ಯವೂ ದಾರಿದ್ರ್ಯವಿರಲು ಮನೆಯಲ್ಲಿ ಏನು ಇರಬೇಕು?

ಶ್ರೀರಾಘವೇಂದ್ರ ಸ್ವಾಮಿಗಳು ವೇಂಕಟನಾಥರಾಗಿದ್ದಾಗ ಅನುಭವಿಸಿದ ದಾರಿದ್ರ್ಯವೂ ಘನಘೋರವಾದದ್ದು. ನಮಗೆಲ್ಲ ಹದಿನೈದು ದಿನಗಳಿಗೊಮ್ಮೆ ಏಕಾದಶೀ ವ್ರತವಾದರೆ ಅವರಿಗೆ ಪ್ರತಿನಿತ್ಯವೂ ಏಕಾದಶೀ.

ಬೇಡಿದರೂ ಆಹಾರ ದೊರೆಯುತ್ತಿರಲಿಲ್ಲ. ಒಂದು ವೇಳೆ ದೊರೆತರೂ ತಿನ್ನಲು ಪಾತ್ರೆಯಿರಲಿಲ್ಲ. ನೀರು ಕುಡಿಯಲು ಲೋಟವೊಂದಿತ್ತು. ಅದಕ್ಕೆ ತಳವೇ ಇರಲಿಲ್ಲ. ಒಂದು ದಿನ ಅದನ್ನು ಕಳ್ಳಕಾಕರು ಕದ್ದೊಯ್ದರು. ಮತ್ತೂ ದಾರಿದ್ರ್ಯವನ್ನು ಪಡೆಯುವಂತೆಯೇ ಇಲ್ಲ. ದಾರಿದ್ರ್ಯದ ಕೊನೆಯ ಘಟ್ಟ ಮುಟ್ಟಿದ್ದರು.

ಸುದಾಮನಿಗೂ ಅದೇ ಸ್ಥಿತಿ. ಏನಿದೆ ಎಂದು ಕೇಳಿದಾಗ ಸತಿಯು ನಾಲ್ಕು ಮುಷ್ಟಿ ಅವಲಕ್ಕಿಯನ್ನು ಹರಿದ ಬಟ್ಟೆಯಲ್ಲಿ ಕಟ್ಟಿಕೊಟ್ಟಳು. ಸುದಾಮ ಹೊರಟ.

ದ್ವಾರಕೆಯನ್ನು ಸಮೀಪಿಸಿದ ಸುದಾಮನಿಗೆ ನೂರಾರು ಗೊಂದಲ. ಕೃಷ್ಣನು ದೊಡ್ಡ ಸಾಮ್ರಾಟ್ ಆಗಿ ಬೆಳೆದಿರುವ. ಅವನ ದರ್ಶನದ ಭಾಗ್ಯ ಈ ಅಲ್ಪನಿಗೆ ದೊರಕೀತೇ? ಹದಿನಾರು ಸಾವಿರ ಮನೆಗಳಲ್ಲಿ ಕೃಷ್ಣನನ್ನು ಹುಡುಕುವುದು ಹೇಗೆ ಎಂದು ಚಿಂತಿಸುತ್ತಾ ಸಾಗಿದ. ದೊಡ್ಡ ಸೌಧವೊಂದನ್ನು ಕಂಡು ರುಕ್ಮಿಣಿಯ ಧಾಮ ಇದೇ ಇರಬೇಕೆಂದು ಭಾವಿಸಿ ಸುತ್ತಲೂ ನೋಡುತ್ತಿರುವಾಗ ರುಕ್ಮಿಣಿಯ ಪರ್ಯಂಕದಲ್ಲಿ ಪವಡಿಸಿದ್ದ ಶ್ರೀಕೃಷ್ಣನು ದೂರದಲ್ಲಿ ಸುಧಾಮನನ್ನು ಕಂಡ. ಕೂಡಲೆ ಎದ್ದು ಓಡೋಡಿ ಬಂದು ಸುಧಾಮನನ್ನು ತಬ್ಬಿಕೊಂಡ. ಅಪ್ರಾಕೃತ ವಿಗ್ರಹನು ಸುದಾಮನ ಆಗಮನದಿಂದ ಸಂತುಷ್ಟನಾಗಿ ಆನಂದದ ಕಣ್ಣೀರನ್ನು ಸುರಿಸಿದ. ಆದರದಿಂದ ಆಸನವನ್ನಿತ್ತು ಬ್ರಾಹ್ಮಣನ ಅಡಿದಾವರೆಗಳನ್ನು ತೊಳೆದ. ಲಕ್ಷ್ಮಿಯು ಚಾಮರ ಬೀಸಿದಳು. ಗಂಧವನ್ನು ಮೈಗೆಲ್ಲ ಪೂಸಿದ. ಬೇಕಾದಷ್ಟು ಮಧುರ ಫಲಗಳನ್ನಿತ್ತನು.

ಅಂತಃಪುರದ ಜನರೆಲ್ಲರೂ ದಿಗ್‌ಭ್ರಾಂತರಾಗಿ ವೀಕ್ಷಿಸುತ್ತಿದ್ದಾರೆ. ಇದೇನು ರಾಜಾಧಿರಾಜನಾದ ಶ್ರೀಕೃಷ್ಣನು ಉಡುಪಿಗೆ ಗತಿಯಿಲ್ಲದ ಬಡಬ್ರಾಹ್ಮಣನನ್ನು ಸತ್ಕರಿಸುತ್ತಿದ್ದಾನೆ. ಅವನ ಪುಣ್ಯವೆಂಥಹದ್ದು? ಲೋಕವೆಲ್ಲವೂ ಅವನನ್ನು ದರಿದ್ರನೆಂದು ತುಚ್ಛ ಭಾವದಿಂದ ನೋಡಿದರೆ ಲೋಕಾತೀತನಾದ ತ್ರಿಲೋಕೇಶ ಸಿಂಹಾಸನದಲ್ಲಿ ಕುಳ್ಳಿರಿಸಿ ಉಪಚರಿಸುತ್ತಿದ್ದಾನೆ ಎಂದು ವಿಸ್ಮಿತರಾಗಿ ನೋಡುತ್ತಿದ್ದಾರೆ.

ಇದೇ ಶ್ರೀಕೃಷ್ಣನ ದೊಡ್ಡಸ್ತಿಕೆ. ಇಂತಹ ಮೈತ್ರಿಯನ್ನು ಎಲ್ಲಿಯೂ ಕಾಣಲಾರೆವು.

ಶ್ರೀಕೃಷ್ಣನ ಅಂತಃಪುರಕ್ಕೆ ಮುಕ್ತದ್ವಾರ. ಯಾರೂ ಬರಬಹುದು. ಶ್ರೀಮಂತ ದರಿದ್ರನೆಂಬ ಭೇದವಿರಲಿಲ್ಲ. ದರಿದ್ರನೆಂದು ತಡೆವವರೂ ಇರಲಿಲ್ಲ. ದುಃಖಿತರಿಗೆ ಆಶ್ರಯ ಎನಿಸುವವನೇ ನಿಜವಾದ ರಾಜ. ಶ್ರೀರಾಮಚಂದ್ರನದ್ದೂ ಇದೇ ವ್ಯಕ್ತಿತ್ವ. ಒಂದು ನಾಯಿಯೂ ಬಂದು ನ್ಯಾಯಕೇಳಿತೆಂದ ಬಳಿಕ ರಾಮನ ಉದಾತ್ತ ಮನೋಭಾವಕ್ಕೆ ಬೇರೆ ನಿದರ್ಶನ ಬೇಕೇ?

ರಾಜತ್ವದಲ್ಲಿ ಘನ ವ್ಯಕ್ತಿತ್ವವನ್ನು ಸಂಪಾದಿಸಿಕೊಂಡಿರುವಂತೆ ಮಿತ್ರತ್ವದಲ್ಲಿಯೂ ಇವನಿಗೆ ಸಮಾನರಿರಲಿಲ್ಲ.

ದ್ರುಪದ ಮತ್ತು ದ್ರೋಣಾಚಾರ್ಯರೂ ಬಾಲ್ಯಸ್ನೇಹಿತರಾಗಿದ್ದರು. ದ್ರುಪದ ರಾಜಕುವರ. ದ್ರೋಣ ಬಡಬ್ರಾಹ್ಮಣ. ಸಂಸಾರಿಯಾದ ದ್ರೋಣಾಚಾರ್ಯರಿಗೆ ಅಶ್ವತ್ಥಾಮನೆಂಬ ಸುಪುತ್ರ ಜನಿಸಿದ. ಮಗುವಿಗೆ ಹಾಲು ಬೇಕೆಂದು ದ್ರೋಣರು ದ್ರುಪದನ ಬಳಿ ಹಸು ಬೇಡಲು ಹೋದರು. ದ್ರುಪದನಿಗೆ ತಮ್ಮ ಬಾಲ್ಯದ ಸ್ನೇಹವನ್ನು ಪರಿಚಯಿಸಲು ನೀನೆಂತಹ ಮಿತ್ರ. ರಾಜರಿಗೂ ಬಡಪಾಯಿಗೂ ಮೈತ್ರೀಭಾವ ಹೊಂದುವುದೇ ಇಲ್ಲ. ಬಂದದ್ದಕ್ಕೆ ಇದೊಂದು ದಿನ ಊಟಮಾಡಿ ತೆರಳು. ಇನ್ನೆಂದೂ ನನ್ನ ಮಿತ್ರ ಎಂದು ಮಾತ್ರ ಹೇಳಬೇಡ ಎಂದು ಅಹಂಕಾರದಿಂದ ನುಡಿದ. ಆ ದ್ರುಪದನ ವರ್ತನೆಯೆಲ್ಲಿ? ನಮ್ಮ ಶ್ರೀಕೃಷ್ಣನ ವರ್ತನೆ ಎಲ್ಲಿ?!

ಶ್ರೀಕೃಷ್ಣ ಶ್ರೀರಾಮರ ಪ್ರತಿಯೊಂದು ವರ್ತನೆಯೂ ನಮಗೆ ಉತ್ತಮ ನೀತಿಯನ್ನು ಸ್ಫೂರ್ತಿಯನ್ನು ನೀಡುತ್ತದೆ.

ಮುಂದೆ ಸುದಾಮನ ಬಳಿ ಶ್ರೀಕೃಷ್ಣನು ತನ್ನ ಬಾಲ್ಯಜೀವನವನ್ನೆಲ್ಲ ಮೆಲಕು ಹಾಕುತ್ತಾನೆ. ಶ್ರೀಕೃಷ್ಣನು ಒಂದು ಬಾಲ್ಯದ ಘಟನೆಯನ್ನು ಹೇಳುತ್ತಾನೆ. 'ಸಾಂದೀಪಿನಿ ಮುನಿಗಳ ಪತ್ನಿ ಒಂದು ದಿನ ಕಾಡಿನಿಂದ ಕಟ್ಟಿಗೆಯನ್ನು ತರಲು ಹೇಳಿದಾಗ ಅಕಾಲವನ್ನೂ ಗಮನಿಸದೆ ನಾವೀರ್ವರು ಕಟ್ಟಿಗೆ ತರಲು ಹೋದೆವು. ಕಟ್ಟಿಗೆ ಸಂಗ್ರಹಿಸಿ ಬರುವಷ್ಟರಲ್ಲಿ ಭಾರೀ ಬಿರುಗಾಳಿ ಮಳೆಗೆ ಸಿಲುಕಿದೆವು. ಸುತ್ತಲೂ ಅಂಧಕಾರ. ದಾರಿ ಕಾಣದೆ ರಾತ್ರಿಯೆಲ್ಲ ಕಾಡಿನಲ್ಲಿ ಅಲೆದು ಬೆಳಿಗ್ಗೆ ಆಗುತ್ತಿರಲು ನಮ್ಮ ಗುರುಗಳು ನಮ್ಮನನುಸರಿಸಿ ಬಂದರು. ನಮ್ಮ ಕಷ್ಟ ಕಂಡು ಕಣ್ಣೀರು ಸುರಿಸಿದರು. ವಿದ್ಯೆಯನ್ನು ನನ್ನಿಂದ ಗಳಿಸಿಕೊಂಡು ಉತ್ತಮ ಗುರುಸೇವೆಯನ್ನು ಮಾಡಿದ್ದೀರಿ. ನೀವು ಕಲಿತ ವಿದ್ಯೆಯು ನಿಮಗೆ ಫಲಿಸುತ್ತದೆ. ವಿದ್ಯೆ ನಿಮಗೆ ಒಲಿದಿದೆ ಎಂದು ಗುರುಗಳು ಪೂರ್ಣಾನುಗ್ರಹವನ್ನು ಮಾಡಿದರು' ಎಂದು ಕುಚೇಲನಿಗೆ ಹೇಳಿದನು.

ಇಲ್ಲಿ ನಾವೆಲ್ಲರೂ ತಿಳಿಯಬೇಕಾದ ಒಂದಂಶವಿದೆ. ಶ್ರೀಕೃಷ್ಣನು ಶ್ರೀಮಂತ ರಾಜಕುಮಾರ. ಆದರೆ ವಿದ್ಯಾಭ್ಯಾಸದ ಕಾಲದಲ್ಲಿ ಎಲ್ಲರಂತೆ ಕಟ್ಟಿ ತುಂಡನ್ನು ಕಾಡಿನಿಂದ ಹೊತ್ತು ತಂದಿದ್ದಾನೆ. ಗುರುಕುಲದಲ್ಲಿ ಶ್ರೀಮಂತ ಬಡವನೆಂಬ ತಾರತಮ್ಯವಿಲ್ಲ. ಎಲ್ಲರೂ ಗುರುಸೇವೆಯನ್ನು ಕಡ್ಡಾಯವಾಗಿ ಮಾಡಲೇ ಬೇಕು. ಇಂದು ಶ್ರೀಮಂತ ವಿದ್ಯಾರ್ಥಿಗಳ ಠೀವಿ ಬಡವರನ್ನು ಗಾಬರಿಗೊಳಿಸುತ್ತದೆ. ಅಸಮತೆಯು ತಲೆದೋರುತ್ತಿದೆ. ಆದರೆ ಹಿಂದೆ ಹೀಗೆ ಇರಲಿಲ್ಲ. ಗುರುಕುಲದ ವಾಸವನ್ನು ಹೇಗೆ ಮಾಡಬೇಕೆಂದು ಕೃಷ್ಣನೂ ತಿಳಿಸಿಕೊಟ್ಟಿದ್ದಾನೆ.

ಅನಂತರ ಶ್ರೀಕೃಷ್ಣನು ಸುದಾಮನ ಬಳಿ ಸುದಾಮ! ನನಗಾಗಿ ಏನು ತಂದಿರುವಿ ಎಂದು ಪ್ರಶ್ನಿಸಲು ಅಗಣಿತ ಐಶ್ವರ್ಯಶಾಲಿಗೆ ಹಿಡಿ ಅವಲಕ್ಕಿಯ ಆವಶ್ಯಕತೆ

ಇದೆಯೋ ಎಂದು ಸುಮ್ಮನೆ ಕುಳಿತ. ಶ್ರೀಕೃಷ್ಣನು ಸುದಾಮನ ಭಾವವೆಲ್ಲವನ್ನೂ ಅರಿತು ಹೇಳುತ್ತಿದ್ದಾನೆ.

ಕಿಮುಪಾಯನಮಾನೀತಂ ಬ್ರಹ್ಮನ್ ಮೇ ಭವತಾ ಗೃಹಾತ್
ಅಣ್ವಪ್ಯುಪಾಹೃತಂ ಭಕ್ತೈಃ ಪ್ರೇಮ್ಣಾ ಭೂರ್ಯೇವ ಮೇ ಭವೇತ್
ಭೂರ್ಯಪ್ಯಭಕ್ತೋಪಹೃತಂ ನ ಮೇ ತೋಷಾಯ ಕಲ್ಪತೇ ।
ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ॥
ತದಹಂ ಭಕ್ತ್ಯುಪಹೃತಂ ಅಶ್ನಾಮಿ ಪ್ರಯತಾತ್ಮನಃ ॥ -- (೧೦-೮೧-೨-೩)

ಮನೆಯಿಂದ ನನಗೆ ನೀಡಬೇಕೆಂಬ ಪ್ರೀತಿಯಿಂದ ನೀನು ಏನು ತಂದಿದ್ದಿ, ಅದನ್ನು ನೀಡು. ನನ್ನ ಭಕ್ತರು ಅಲ್ಪವಾದ ಯಾವುದೇ ವಸ್ತುವನ್ನು ಸಮರ್ಪಿಸಲಿ, ಅದರಲ್ಲಿಯ ಭಾವನೆ ಮಹತ್ವದ್ದಾದ್ದರಿಂದ ಅದು ನನಗೆ ಅಧಿಕವೇ ಎನಿಸುತ್ತದೆ. ಅಭಕ್ತನಾದವ ಬಹಳಷ್ಟು ವಸ್ತುಗಳನ್ನು ತಂದು ಅರ್ಪಿಸಲಿ. ಭಾವನಾರಹಿತವಾದ್ದರಿಂದ ಅದ್ಯಾವುದೂ ನನಗೆ ಪ್ರಿಯವೆನಿಸದು. ನೀರಾಗಲಿ, ಪತ್ರ–ಪುಷ್ಪಗಳಾಗಲೀ ಭಕ್ತಿಯಿಂದ ನೀಡಿದ್ದೇ ಆದಲ್ಲಿ ಸ್ವೀಕರಿಸುತ್ತೇನೆ ಎನ್ನುತ್ತಾನೆ.

ಶ್ರೀಕೃಷ್ಣನಿಗೆ ಅವಲಕ್ಕಿಯ ಕಡೆ ದೃಷ್ಟಿಯೇ ಇಲ್ಲ, ಅದರ ಹಿಂದಿರುವ ಭಾವನೆಗೆ ಬೆಲೆ ಕೊಡುತ್ತಿದ್ದಾನೆ. ಕಾಗದದ ರಾಶಿಗೆ ಬೆಲೆಯಿಲ್ಲ. ರಾಜಮುದ್ರೆ ಇರುವ ಕಾಗದಕ್ಕೆ ಬೆಲೆ ಇದೆ. ಅದರಂತೆ ಭಕ್ತಿಯ ಮುದ್ರೆಯಿಂದ ಸಮರ್ಪಿಸುವ ವಸ್ತುವಿಗೆ ಬೆಲೆಯಿದೆ. ಕಾಗದದ ರಾಶಿ ಇದ್ದರೂ ರಾಜಮುದ್ರೆ ಇರುವ ಒಂದು ನೋಟಿಗೆ ಸಮಾನವೆನಿಸದು. ಅದರಂತೆ ಭಾವನೆ ಭರಿತವಾದ ಅಲ್ಪವಾದ ವಸ್ತುವೂ ಭಗವಂತನಿಗೆ ಪ್ರಿಯವೆನಿಸುತ್ತದೆ. ತಾಯಿಯು ಗೀಚಿದ ನಾಲ್ಕಕ್ಷರದ ಪತ್ರವನ್ನೂ ಜೋಪಾನಮಾಡಿ ನೋಡುತ್ತೇವೆ. ಕಾರಣ ಅದರ ಹಿಂದಿರುವ ಭಾವನೆ. ಅದರ ಮುಂದೆ ಮುದ್ರಣಗೊಂಡ ಸಾವಿರ ಹಾಳೆಗಳನ್ನೂ ಕಡೆಗಣಿಸುತ್ತೇವೆ. ಶ್ರೀಕೃಷ್ಣನು ಭಕ್ತನ ಭಾವನೆಯನ್ನು ಗುರುತಿಸಿದ. ಕೊಡಲು ಸಂಕೋಚಪಡುತ್ತಿರುವ ಸುದಾಮನ ಗಂಟನ್ನು ತಾನಾಗಿಯೇ ಪ್ರೀತಿಯಿಂದ ಸೆಳೆದುಕೊಂಡ. ಗಂಟುಬಿಚ್ಚಿ ಒಣ ಅವಲಕ್ಕಿಯನ್ನು ಬಾಯಲ್ಲಿಟ್ಟು ಚಪ್ಪರಿಸಿದ. ಆಹಾ! ಏನು ರುಚಿ ಎಂದು ಮತ್ತೊಂದು ಮುಷ್ಟಿಯನ್ನು ತಿನ್ನುವಷ್ಟರಲ್ಲಿ ಲಕ್ಷ್ಮಿಯು ಗಂಟನ್ನು ಕಸಿದುಕೊಂಡಳು. ಸುದಾಮನಿಗೆ ಸರ್ವ ಸಂಪತ್ತುಗಳನ್ನು ಕರುಣಿಸಲು ಒಂದು ಮುಷ್ಟಿ ಅವಲಕ್ಕಿ ಸ್ವೀಕಾರವೇ ಸಾಕೆಂದಳು. ಷಡ್ರಸಾನ್ನವನ್ನು ಬೇಕಾದಂತೆ ಸ್ವೀಕರಿಸಬಲ್ಲ ಶ್ರೀಕೃಷ್ಣ ಒಣ ಅವಲಕ್ಕಿಯನ್ನು ಪ್ರಶಂಸೆ ಮಾಡುತ್ತಾನೆ. ಈ ಅವಲಕ್ಕಿಯು ನನ್ನನ್ನು ಪರಮ ತೃಪ್ತನನ್ನಾಗಿ ಮಾಡಿದೆ' ಎಂದು ಮತ್ತು ಮತ್ತೂ ಹೊಗಳಿದ.

ಬೇಕಾದಂತೆ ರಾಜೋಪಚಾರಗಳನ್ನೆಲ್ಲ ಸ್ವೀಕರಿಸಿದ ಸುದಾಮ ಅಲ್ಲಿಂದ ಹೊರಟ ಅವನಿಗೇನೂ ಕೊಡಲಿಲ್ಲ. ಕುಚೇಲನೂ ಕೇಳಲಿಲ್ಲ. ಕೃಷ್ಣ ಏನೂ ಕೊಡಲಿಲ್ಲವೆಂದು ಸ್ವಲ್ಪವೂ ವಿಚಲಿತನಾಗಲಿಲ್ಲ.

ಇಲ್ಲಿ ಹರಿಕಥಾದಾಸರು ಸ್ವಲ್ಪ ವಿಪರೀತವಾಗಿ ಬಣ್ಣಿಸುತ್ತಾರೆ ಕೃಷ್ಣ! ನಾನು ಹೋಗಿಬರುತ್ತೇನೆ! ಕೃಷ್ಣ! ನಾನು ಹೋಗಿಬರುತ್ತೇನೆ ಎಂದು ನಾಲ್ಕಾರು ಬಾರಿ ಕೃಷ್ಣನೇನಾದರೂ ಕೊಡುತ್ತಾನೆಯೋ ಎಂಬ ಹಂಬಲದಿಂದ ಹೇಳಿದ. ಆದರೂ ಕೃಷ್ಣ ನೀಡಲಿಲ್ಲ ಎಂದು ವಿನೋದ ಮಾಡುತ್ತಾರೆ. ಆದರೆ ಅಂಥದ್ದೇನು ನಾಟಕ ಮಾಡಲಿಲ್ಲ. ಹೊರಟೇ ಬಿಟ್ಟ. ಕೃಷ್ಣನು ಸಂತೋಷದಿಂದ ಕಳುಹಿಸಿಕೊಟ್ಟ.

ದಾರಿಯುದ್ದಕ್ಕೂ ಕೃಷ್ಣನು ತೋರಿದ ಪ್ರೀತಿ ಉಪಚಾರ, ವೈಭವ, ಆತ್ಮೀಯತೆ ಎಲ್ಲವನ್ನೂ ಮೆಲುಕುಹಾಕುತ್ತಾ ಸಾಗಿದ. ಮನಸ್ಸಿನಲ್ಲಿ ನನಗೇನೂ ನೀಡಲಿಲ್ಲವೆಂಬ ಅಸಮಾಧಾನವೇ ಅವನಲ್ಲಿ ಮೂಡಲಿಲ್ಲ. ಕೃಷ್ಣನು ನಡೆಸಿದ ಸತ್ವಪರೀಕ್ಷೆಯಲ್ಲಿ ಸುದಾಮ ತೇರ್ಗಡೆ ಹೊಂದಿದ್ದಾನೆ. ಸುದಾಮ ಸ್ವಚ್ಛಮನದಲ್ಲಿ ಬಂದ ಭಾವನೆಯನ್ನು ವ್ಯಾಸರು ಸುಂದರವಾಗಿ ಚಿತ್ರಿಸಿದ್ದಾರೆ–

ಕ್ವಾಹಂ ದರಿದ್ರಃ ಪಾಪೀಯಾನ್ ಕ್ವ ಕೃಷ್ಣಃ ಶ್ರೀನಿಕೇತನಃ ।
ಬ್ರಹ್ಮಬಂಧುರಿತಿ ಸ್ಮಾಹಂ ಬಾಹುಭ್ಯಾಂ ಪರಿರಂಭಿತಃ ॥ — (೧೦–೮೧–೧೪)

ದರಿದ್ರನಾದ ಪಾಪಿಷ್ಠನಾದ ನಾನೆಲ್ಲಿ? ಶ್ರೀನಿಕೇತನನಾದ ಶ್ರೀಕೃಷ್ಣನೆಲ್ಲಿ? ಆದರು ಅವನ ಭಕ್ತನೆಂಬ ಕಾರಣದಿಂದ ನನ್ನನ್ನು ಆಲಿಂಗಿಸಿದನಲ್ಲ? ನಾನೇ ಧನ್ಯಾತ್ಮ!!

ಅಧನೋಽಯಂ ಧನಂ ಪ್ರಾಪ್ಯ ಮಾದ್ಯನ್ನುಚ್ಚೈರ್ನ ಮಾಂ ಸ್ಮರೇತ್ ।
ಇತಿ ಕಾರುಣಿಕೋ ನೂನಂ ಧನಂ ಮೇ ಭೂರಿ ನಾದದಾತ್ ॥
— (೧೦–೮೧–೧೮)

ಇಷ್ಟರ ವರೆಗೆ ದರಿದ್ರ ಜೀವನ ನಡೆಸಿದ ನಾನು ಸಂಪತ್ತನ್ನು ಹೊಂದಿ ಎಲ್ಲಿ ಅಹಂಕಾರಕ್ಕೆ ತುತ್ತಾಗುವೆನೋ ಎಂಬ ಕರುಣೆಯಿಂದ, ಅವನ ಸ್ಮರಣೆಗೆ ಪ್ರತಿಬಂಧಕವಾದ ಅಹಂಕಾರಕ್ಕೆ ಆಸ್ಪದ ನೀಡಬಾರದೆಂದು ಹಾಗೆಯೇ ಕಳುಹಿಸಿಕೊಟ್ಟಿದ್ದಾನೆ ಎಂದು ಭಾವಿಸುತ್ತಾ ಮತ್ತೂ ಮತ್ತೂ ಧನ್ಯವಾದವನ್ನು ಅರ್ಪಿಸುತ್ತಿದ್ದಾನೆ.

ಇಂಥಹ ಸದ್ಭಾವನೆ ಯಾರಿಗೂ ಬರಲು ಸಾಧ್ಯವೇ ಇಲ್ಲ. ಎಲ್ಲರೂ ಶಪಿಸಿಕೊಂಡು ಹೋಗುವಂತಹ ಸಂದರ್ಭ. ಆದರೆ ಕುಚೇಲನು ಮನಸಾರೆ ಅಭಿನಂದಿಸಿಕೊಂಡು ಮನೆಯತ್ತ ತೆರಳಿದ. ತನ್ನ ನಿವಾಸ ಸ್ಥಳಕ್ಕೆ ಬಂದವನು ಚಕಿತನಾಗಿದ್ದಾನೆ. ಭಾರೀ ವೈಭವದ ಸುಂದರ ಸ್ತ್ರೀಪುರುಷರಿಂದ ಯುಕ್ತವಾದ ಅರಮನೆಯನ್ನು ಕಂಡು 'ಕಿಮಿದಂ ಕಸ್ಯ ವಾ ಸ್ಥಾನಂ ಕಥಂ ತದಿದಮಿತ್ಯಭೂತ್' ಏನಿದು? ಯಾರ ಜಾಗ? ಇದೆಲ್ಲವೂ ಹೇಗಾಯಿತು? ನನ್ನ ಮನೆಗೆಂದು ಬಂದರೆ ಇಲ್ಲಿ ದ್ವಾರಕೆಯ ಸೌಧವೇ ಕಾಣಿಸುತ್ತಿದೆಯಲ್ಲ!? ನಾನು ದ್ವಾರಕೆಗೆ ತಿರುಗಿ ಬಂದೇನೇ!? ಎಂದು ಆಲೋಚಿಸುವಾಗ ಮೆರವಣಿಗೆಯ ಮೂಲಕ ಸುದಾಮನನ್ನು ಎಲ್ಲರೂ ಸ್ವಾಗತಿಸುತ್ತಿದ್ದಾರೆ. ತನ್ನ ಪತ್ನಿಯೂ ಸರ್ವಾಭರಣಭೂಷಿತೆಯಾಗಿ ವೈಭವದಿಂದ ಕೂಡಿದ ಜರತಾರೀ ಸೀರೆ, ಉತ್ಕೃಷ್ಟ ಆಭರಣಗಳನ್ನೆಲ್ಲ ಉಟ್ಟುಕೊಂಡು ತೊಟ್ಟು ಕೊಂಡು ಸಖಿಯರ ಕೂಡಿ ಬಂದಿದ್ದಾಳೆ. ಆವಾಗ ತನ್ನ ಊರಿಗೇ ಬಂದಿದ್ದೇನೆ ಎಂದು ಕುಚೇಲ ಭಾವಿಸಿದ. ಮತ್ತು

ಕೃಷ್ಣನ ಕರುಣೆಯನ್ನೇ ಸ್ಮರಿಸಿಕೊಂಡ. ಏನು ಕೃಷ್ಣನ ಮಹಿಮೆ? ಏನು ಅನುಗ್ರಹ ಎಂದು ಮತ್ತಷ್ಟು ಭಕ್ತ್ಯುದ್ರೇಕದಿಂದ ಸ್ತುತಿಸತೊಡಗಿದ.

ಎಷ್ಟೆ ಸಂಪತ್ತು ಲಭಿಸಿದರೂ ನಾನು ಎಂದೂ ಉನ್ಮತ್ತನಾಗಿ ವರ್ತಿಸಬಾರದೆಂದು ನಿಶ್ಚೈಸಿಕೊಂಡ. ಸಾಕಷ್ಟು ವಿಷಯಪದಾರ್ಥಗಳಿದ್ದರೂ ಎಷ್ಟು ಬೇಕೋ ಅಷ್ಟನ್ನು ಮಾತ್ರ ಸ್ವೀಕರಿಸಿದ. ಶ್ರೀಮಂತಿಕೆಯಲ್ಲಿಯೂ ತ್ಯಾಗದ ಜೀವನವನ್ನು ನಡೆಸಿದ ಭಗವಂತನ ಸಂಪತ್ತಿಗೆ ನಾನೊಬ್ಬ ಕೇವಲ ಟ್ರಸ್ಟಿ. ಭಗವಂತನೇ ಯಜಮಾನ ಎಂದು ಭಾವಿಸಿ ತ್ಯಾಗದ ಒಟ್ಟಿಗೆ ಭೋಗದಲ್ಲಿದ್ದ. ಉತ್ತಮ ಜೀವನವನ್ನು ನಡೆಸಿದ.

## ಗೃಹೇಷು ಅತಿಥಿವದ್ ವಸೇತ್

ಮನೆಯಲ್ಲಿ ಗೃಹಸ್ಥರಾದ ನಾವು ಅತಿಥಿಯಂತೆ ಇರಬೇಕು. ಎಂದರೆ ಅತಿಥಿಯು ಉಪಚಾರವನ್ನು ಮಾತ್ರ ಸ್ವೀಕರಿಸಿಕೊಂಡು ಇರುವಂತೆ ಯಾವುದೇ ಕೆಲಸಮಾಡದೆ ಭೋಗಜೀವನವನ್ನು ಮಾತ್ರ ನಡೆಸಬೇಕು ಎಂದು ಅರ್ಥವಲ್ಲ. ಮನೆಗೆ ಅತಿಥಿಯು ಬಂದಾಗ ಅವನ ಉಪಚಾರಕ್ಕೆಂದು ಬೆಳ್ಳಿಯ ಪಾತ್ರೆ, ತಂಬಿಗೆ, ಲೋಟೆ ಎಲ್ಲವನ್ನೂ ನೀಡುತ್ತಾರೆ. ಎಲ್ಲವನ್ನೂ ಅಭಿಮಾನರಹಿತನಾಗಿ ಸ್ವೀಕರಿಸುತ್ತಾನೆ. 'ಇದೆಲ್ಲವೂ ನನ್ನದಲ್ಲ. ನಾಳೆ ಇಲ್ಲಿಂದ ತೆರಳುವಾಗ ಎಲ್ಲವನ್ನೂ ತೊರೆದೇ ಸಾಗುತ್ತೇನೆ. ಯಾವ ಸ್ವತ್ತಿನ ಮೇಲೆಯೂ ನನಗೆ ಅಧಿಕಾರವಿಲ್ಲ!' ಎಂದೇ ಭಾವಿಸುತ್ತಾನೆ. ಅದರಂತೆ ನಮ್ಮ ಎಲ್ಲ ಸ್ವತ್ತುಗಳಿಗೂ ಭಗವಂತನೇ ಯಜಮಾನನಾಗಿರುವ. ಇದ್ಯಾವುದೂ ನನ್ನದಲ್ಲ ಎಂಬ ಭಾವನೆ ಜಾಗೃತವಾಗಿರಬೇಕು. ಕುಚೇಲನು ಇದೇ ಭಾವನೆಯನ್ನು ಪೂರ್ಣವಾಗಿ ಕಾರ್ಯಗತಗೊಳಿಸಿಕೊಂಡು ನಿರ್ಲಿಪ್ತನಾಗಿ ಬದುಕಿದ. ಉತ್ತಮ ಗೃಹಸ್ಥ ಜೀವನವನ್ನು ನಡೆಸಿ ಭಗವಂತನ ಅನುಗ್ರಹಕ್ಕೆ ಪಾತ್ರನಾದ.

ಶ್ರೀಕೃಷ್ಣನ ಅಪಾರವಾದ ಕರುಣೆ, ಕುಚೇಲನ ನಿಷ್ಕಾಮಭಕ್ತಿ ಇವೆರಡೂ ಬಹಳ ಸುಂದರವಾಗಿ ಚಿತ್ರಿತವಾಗಿವೆ.

ಶ್ರೀಕೃಷ್ಣನು ಭಕ್ತರ ಮೇಲಿನ ಕಾರುಣ್ಯದಿಂದ ತನ್ನ ಬಾಲ್ಯಮಿತ್ರನಾದ ಕುಚೇಲನಿಗೆ ವಿಶೇಷವಾಗಿ ಅನುಗ್ರಹಿಸಿದ. ಅಪಾರ ಸಂಪತ್ತಿನಿಂದ ಮೆರೆಸಿದ. ಇದು ದೇವತ್ವದ ದೃಷ್ಟಿ.

ಸಾಮಾನ್ಯ ಒಬ್ಬ ಕಡು ಬಡವನಾದ ತನ್ನ ಭಕ್ತನನ್ನು ಅವನ ಆತ್ಮಗೌರವಕ್ಕೆ ಚ್ಯುತಿ ಬಾರದಂತೆ ನೋಡಿದ ಎನ್ನುವುದು ಮಾನವೀಯ ದೃಷ್ಟಿ.

ಎಷ್ಟೇ ಶ್ರೀಮಂತನಾಗಿರಲಿ ಒಬ್ಬ ಸಾಮಾನ್ಯ ವ್ಯಕ್ತಿಯು ತನ್ನ ಬಳಿ ಬಂದರೆ ಅವರನ್ನು ಗೌರವದಿಂದ ಕಾಣಬೇಕು. ಮಾನವೀಯತೆಯನ್ನು ಮೀರಿ ಅಧಿಕಾರ ಮದದಿಂದ ವರ್ತಿಸಬಾರದು ಎಂದು ಮಾನವರಿಗೆ ಬೋಧಿಸಿದ. ಜಗತ್ಸ್ವಾಮಿಯಾದ ತಾನು ಭಕ್ತರನ್ನು ಯಾವ ರೀತಿಯಲ್ಲಿ ಅನುಗ್ರಹಿಸುತ್ತೇನೆ ಎಂದು ಅವನ ಕಾರುಣ್ಯವನ್ನು ತೋರಿ ದೇವತ್ವವನ್ನು ಬೋಧಿಸಿದ.

## ಕರುಣಾಸಾಗರ ಶ್ರೀಕೃಷ್ಣ

ಶ್ರೀಕೃಷ್ಣನು ತನ್ನ ಬಳಿ ಬಂದವರಿಗೆ ಮಾತ್ರ ಅನುಗ್ರಹಿಸುವುದಲ್ಲ. ಭಕ್ತರು ಎಲ್ಲಿಯೇ ಇರಲಿ. ಸ್ವತಃ ತಾನೇ ಅಲ್ಲಿಗೆ ಹೋಗಿ ಅನುಗ್ರಹಿಸುತ್ತಾನೆ. ಇದಕ್ಕೆ ಎರಡು ನಿದರ್ಶನವಿದೆ.

ಮಿಥಿಲೆಯಲ್ಲಿ ಶ್ರುತದೇವ ಮತ್ತು ಬಹುಳಾಶ್ವರೆಂಬ ಇಬ್ಬರು ಭಕ್ತರಿದ್ದರು.

ಶ್ರುತದೇವನು ಉತ್ತಮ ವಿದ್ವಾಂಸನಾಗಿದ್ದ. ವೇದವಿಹಿತ ಕರ್ಮಗಳನ್ನು ನಿಷ್ಠೆಯಿಂದ ಅನುಷ್ಠಾನಮಾಡುತ್ತಾ ಹರಿಚಿಂತನೆಯಲ್ಲಿ ಕಾಲಯಾಪನ ಮಾಡುತ್ತಿದ್ದ. ಗೃಹಸ್ಥ ಧರ್ಮವನ್ನು ಸಿಕ್ಕಷ್ಟರಲ್ಲಿಯೇ ತೃಪ್ತನಾಗಿ ಪರಿಪಾಲಿಸುತ್ತಿದ್ದ.

ಇನ್ನೊಬ್ಬ ಆ ದೇಶದ ಪಾಲಕನಾಗಿ ಬಹುಳಾಶ್ವನೆಂಬ ರಾಜನಿದ್ದ. ರಾಜನಾಗಿದ್ದರೂ ರಾಜತ್ವದ ಹಮ್ಮನ್ನು ತೊರೆದು ನಿರಹಂಕಾರದಿಂದ ವರ್ತಿಸುತ್ತಿದ್ದ. ಉತ್ತಮ ರೀತಿಯಲ್ಲಿ ರಾಜ್ಯಪರಿಪಾಲನೆ ಮಾಡುತ್ತಿದ್ದ. ಶ್ರೀಕೃಷ್ಣನು ಇಬ್ಬರು ಭಕ್ತರನ್ನು ಅನುಗ್ರಹಿಸುವ ಉದ್ದೇಶದಿಂದ ವ್ಯಾಸ ನಾರದಾದಿ ಋಷಿಗಳೊಟ್ಟಿಗೆ ಮಿಥಿಲೆಗೆ ಆಗಮಿಸಿದ. (ನೇಪಾಳದ ಗಡಿ, ಬಿಹಾರದ ಉತ್ತರ ಭಾಗವೇ ಮಿಥಿಲೆ. ದ್ವಾರಕೆ ಸೌರಾಷ್ಟ್ರ. ಪಶ್ಚಿಮ ಸಮುದ್ರದ ತೀರದಿಂದ ಅಷ್ಟು ದೂರ ಭಕ್ತರಿಗಾಗಿ ಸಾಗಿದ.)

ಭಕ್ತರು ಕರೆಯದಿದ್ದರೂ ತಾನಾಗಿಯೇ ಭಕ್ತರ ಬಳಿ ಸಾಗಿದ. ಮಿಥಿಲೆಗೆ ಬಂದೊಡನೆ ಜನರೆಲ್ಲರೂ ಮುಕುರಿದರು. ಪುಷ್ಪದ ಪರಿಮಳವು ಸುತ್ತಲೂ ಪಸರಿಸುವಂತೆ ಕೃಷ್ಣ ಬಂದಿದ್ದಾನೆಂಬ ವಾರ್ತೆ ಎಲ್ಲೆಡೆಯೂ ಹಬ್ಬಿತು. ಬಹುಳಾಶ್ವನು ಕೃಷ್ಣನನ್ನು ಕಂಡು ಭಕ್ತಿಯಿಂದ ಅವನ ಪಾದಗಳಿಗೆ ಮುಗಿಬಿದ್ದನು. ಆತಿಥ್ಯಕ್ಕೆಂದು ಆಹ್ವಾನಿಸಿದರು.

ಬಹುಳಾಶ್ವನು ತಾತ್ವಿಕವಾದ ಪ್ರಾರ್ಥನೆಯನ್ನು ಸಲ್ಲಿಸುತ್ತಿದ್ದಾನೆ. ನಿಗಮಕ್ಕೂ ಸಿಲುಕದ ದೇವದೇವೋತ್ತಮನಾದ ನೀನು ಪ್ರಾಕೃತ ಇಂದ್ರಿಯಗಳಿಗೆ ಗೋಚರಿಸುವವನಲ್ಲ. ಅಪ್ರಾಕೃತ ಚೈತನ್ಯಸ್ವರೂಪಿಯು ಪ್ರಾಕೃತೇಂದ್ರಿಯಗಳಿಗೆ ಗೋಚರಿಸುವುದಾದರೂ ಹೇಗೆ? ಏನು ಮಾಡಿದರೂ ಇಂದ್ರಿಯಗಳಿಂದ ಅವನನ್ನು ಅರಿತುಕೊಳ್ಳಲಾಗದು. ಆದರೂ ಭಕ್ತರಿಗೆ ಮಾತುಕೊಟ್ಟಿದ್ದಾನೆ–

ಪ್ರಿಯೋ ಹಿ ಜ್ಞಾನಿನೋಽತ್ಯರ್ಥಂ ಅಹಂ ಸ ಚ ಮಮ ಪ್ರಿಯಃ ।
ಉದಾರಾಃ ಸರ್ವ ಏವೈತೇ ಜ್ಞಾನೀತ್ವಾತ್ಮೈವ ಮೇ ಮತವ್ ॥ – (ಗೀತಾ –೭)

"ನಾನು ಜ್ಞಾನಿಗಳ ಒಲುಮೆಗೆ ಪಾತ್ರನಾದವ. ನನ್ನ ಒಲುಮೆಗೆ ಜ್ಞಾನಿಗಳು ಪಾತ್ರರು. ಎಲ್ಲ ವಿಧದ ಭಕ್ತರು ನನ್ನವರೇ ಆಗಿದ್ದರೂ ಜ್ಞಾನಿಯನ್ನು ನನ್ನನ್ನು ಪ್ರೀತಿಸುವಷ್ಟೇ ಪ್ರೀತಿಸುತ್ತೇನೆ" ಎನ್ನುತ್ತಾನೆ. ಅಚಿಂತ್ಯಶಕ್ತಿಯ ಕರುನಾಮೂರ್ತಿಯು ಭಕ್ತರಿಗಾಗಿ ತನ್ನನ್ನು ತೋರಿಸಿಕೊಳ್ಳುತ್ತಾನೆ. ನಿನ್ನ ದರ್ಶನಭಾಗ್ಯ ದೊರೆತದ್ದೇ ಅದ್ಭುತ ಕಾರುಣ್ಯ. ಇಷ್ಟು ದರ್ಶನ ಅನುಗ್ರಹವನ್ನು ನನಗೆ ದಯಪಾಲಿಸಿದ ನೀನು ನನ್ನ

ಅಲ್ಪವಾದ ಆದರವನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸಲು ಅದರಂತೆ ಸ್ವೀಕರಿಸಿ ಅನುಗ್ರಹಿಸಿದ.

ಅನಂತರ ಶ್ರುತದೇವನ ಮನೆಗೂ ತೆರಳಿದ. ನಿರಾಡಂಬರದ ಪ್ರಾಮಾಣಿಕ ಜೀವನವನ್ನು ಶ್ರುತದೇವ ನಡೆಸುತ್ತಿದ್ದ. ನಗರದಲ್ಲಿ ಒಂದು ಸಣ್ಣ ಮನೆ ಮಾಡಿಕೊಂಡು ಇದ್ದ. ಕೃಷ್ಣನು ತನ್ನ ಮನೆಗೆ ಬಂದೊಡನೆಯೇ ಆನಂದದಿಂದ ಕುಣಿದಾಡಿದ ಭಕ್ತಿಯಿಂದ ಸಕಲ ವಿಧವಾದ ಉಪಚಾರಗಳನ್ನು ತನ್ನ ಯೋಗ್ಯತೆಗನುಗುಣವಾಗಿ ಸಲ್ಲಿಸಿ ಪ್ರಾರ್ಥಿಸುತ್ತಿದ್ದಾನೆ.

ದೇವದೇವ! ಕರುಣಾನಿಧಿಯಾದ ನೀನು ನನ್ನ ಮೇಲೆ ಕೃಪೆಮಾಡಿ ಇಲ್ಲಿಗೆ ಬಂದಿರುವೆ. ನಾನು ದ್ವಾರಕೆಗೆ ನಿನ್ನ ದರ್ಶನಕ್ಕೆ ಬರಲಿಲ್ಲ. ಬಹುಳಾಶ್ವನ ಮನೆಗೂ ಬರಲಿಲ್ಲ. ಏಕೆಂದರೆ ನೀನು ನನ್ನಿಂದ ದೂರವಿದ್ದಿ ಎಂದು ನಾನೆಂದೂ ಭಾವಿಸಿಲ್ಲ.

ನೃಣಾಂ ಸಂವಸತಾಂ ನಿತ್ಯಂ ಹೃದಿಸ್ಥೋ ಯೋಽಮಲಾತ್ಮನಾಮ್ ॥
ಹೃದಿಸ್ಥೋಪ್ಯಥ ದೂರಸ್ಥಃ ಕರ್ಮವಿಕ್ಷಿಪ್ತ ಚೇತಸಾಮ್ ।
ಆತ್ಮಶಕ್ತಿಭಿರಗ್ರಾಹ್ಯೋ ಹ್ಯರ್ಥಾಕಾರೋಗುಣಾತ್ಮಕಃ ॥ — (೧೦-೮೧-೩೫-೩೬)

"ನಿರ್ಮಲೊಂತಃಕರಣವುಳ್ಳವರಿಗೆ ನೀನು ನಿತ್ಯವು ಹೃದಯಗುಹಾವಾಸಿ ಯಾಗಿರುವೆ. ವಿಕೃತ ಮನಸ್ಸಿನವರ ಹೃದಯದಲ್ಲಿದ್ದರೂ ಅವರಿಂದ ದೂರವಾಗಿಯೇ ಇರುವಿ" ಇಂದು ಕರುಣೆಯಿಂದ ನನ್ನ ಬಳಿ ಬಂದಿರುವಿ.

ಇಷ್ಟೇ ಅಲ್ಲದೆ, ನಮ್ಮ ಕಣ್ಮುಂದೆ ಕಾಣುವ ಸಕಲ ವಸ್ತುಗಳ ಆಕಾರದಲ್ಲಿ ನೀನಿರುವೆ. ಪುಸ್ತಕ, ಮರ, ಗೋಡೆ ಎಲ್ಲೆಡೆಯೂ ಆಯಾ ಆಕಾರಗಳಾಕೃತಿಯಲ್ಲಿ ಭಗವಂತನಿದ್ದಾನೆ. ಬಿಂಬರೂಪಿಯಾಗಿ ಎಲ್ಲವನ್ನೂ ವ್ಯಾಪಿಸಿದ್ದಾನೆ. ಅದೇ ಆಕಾರದಲ್ಲಿದ್ದಾನೆಂದ ಮಾತ್ರಕ್ಕೆ ಭೌತಿಕ ರೂಪವಿದೆ ಎಂದು ಭಾವಿಸಬಾರದು. ಅಪ್ರಾಕೃತ ರೂಪದಿಂದಿರುವ, ಅಪ್ರಾಕೃತರೂಪಿಯು ಸಕಲ ವಸ್ತುಗಳಲ್ಲಿರುವುದ ರಿಂದಲೇ ಪ್ರಾಕೃತವಾದ ವಸ್ತುಗಳನ್ನು ಗುರುತಿಸುತ್ತೇವೆ. ಅವನ ಅಸ್ತಿತ್ವವಿಲ್ಲದಿದ್ದರೆ ಏನನ್ನೂ ಕಾಣಲು ಸಾಧ್ಯವಿಲ್ಲ. ಏನೂ ಇರಲು ಸಾಧ್ಯವಿಲ್ಲ ಎಂದು ದೇವನೊಲಿ ಯುವ ಉತ್ತಮ ಪ್ರಾರ್ಥನೆಯನ್ನು ಸಲ್ಲಿಸಿದ. ಸಂತುಷ್ಟನಾದ ಶ್ರೀಹರಿ ಅವನನ್ನೂ ಅನುಗ್ರಹಿಸಿದ.

ಭಗವಂತನು ರಾಜರೆಂದಾಗಲಿ ಪಂಡಿತನೆಂದಾಗಲಿ ಯಾವುದನ್ನೂ ಗುರುತಿಸದೆ ಅವರ ಹೃದಯದಲ್ಲಿಯ ಪ್ರಾಮಾಣಿಕ ಭಕ್ತಿಯನ್ನು ಕಂಡು ಓಡೋಡಿ ಬರುತ್ತಾನೆನ್ನುವುದಕ್ಕೆ ಇವರೀರ್ವರ ಕಥೆಯೇ ಸಾಕ್ಷಿಯಾಗಿದೆ. ಭಗವಂತನು ಸರ್ವೋತ್ತಮನೇಕೆ ಎಂದರೆ ಇಂತಹ ಸದ್ಗುಣಗಳ ಗಣಿಯಾಗಿರುವುದರಿಂದಲೇ. ಅವನು ಶ್ರೀಮಂತಿಕೆ, ಪ್ರಭುತ್ವ, ಆಧಿಪತ್ಯ ಎಲ್ಲವನ್ನೂ ಹೊಂದಿದ್ದರೂ ಎಂತಹ ಭಕ್ತರಲ್ಲಿಯೂ ಸೌಜನ್ಯ ಆತ್ಮೀಯತೆ ಪ್ರೀತಿಗಳನ್ನು ತೋರಿಸುತ್ತಾನೆ ಎಂಬ ಕಾರಣದಿಂದಲೇ ಎತ್ತರದ ದೇವನಾಗಿದ್ದಾನೆ.

## ಸರ್ವೋತ್ತಮನಾರು?

ಒಮ್ಮೆ ಸರಸ್ವತೀ ನದಿಯ ತೀರದಲ್ಲಿ ಸತ್ರಯಾಗವನ್ನು ನಡೆಸುತ್ತಿದ್ದ ಋಷಿಗಳ ಗೋಷ್ಠಿಯಲ್ಲಿ ತ್ರಿಮೂರ್ತಿಗಳಲ್ಲಿ ಶ್ರೇಷ್ಠರಾದವರು ಯಾರೆಂಬ ವಿಷಯದಲ್ಲಿ ಚರ್ಚೆ ಏರ್ಪಟ್ಟಿತು. ಭೃಗುಮಹರ್ಷಿಗಳಿಗೆ ತೀರ್ಮಾನಿಸಲು ಹೇಳಿದರು.

ಭೃಗುಮಹರ್ಷಿಗಳು ಬ್ರಹ್ಮನ ಸಭೆಗೆ ಬಂದರು. ಬ್ರಹ್ಮದೇವರ ಬಳಿ ಬಂದ ಋಷಿ ಬ್ರಹ್ಮನನ್ನು ವಂದಿಸದೆ ಠೀವಿಯಿಂದ ನಿಂತದ್ದನ್ನು ಕಂಡು ಬ್ರಹ್ಮದೇವ ಅವನ ಕಡೆ ದೃಷ್ಟಿಯನ್ನೇ ಹಾಯಿಸಲಿಲ್ಲ. ಸಿಟ್ಟುಗೊಂಡವನಾದರೂ ತೋರ್ಪಡಿಸಲಿಲ್ಲ. ತನ್ನ ಮಗನಾದ ಭೃಗುವಿನ ಉನ್ಮತ್ತತೆಯನ್ನು ಕಂಡು ಸಿಟ್ಟುಬಂದರೂ ವ್ಯಕ್ತಮಾಡಲಿಲ್ಲ. ಪ್ರೀತಿಯನ್ನೂ ತೋರಲಿಲ್ಲ.

ಭೃಗುವು ಅಲ್ಲಿಂದ ಹೊರಟು ರುದ್ರನ ಸಭೆಗೆ ಬಂದ. ತನ್ನ ಸಹೋದರನೆಂಬ ಭಾವದಿಂದ ರುದ್ರದೇವ ಭೃಗುವನ್ನು ಆಲಿಂಗಿಸಲು ಬಂದ. ಭೃಗುವು ಅದನ್ನು ಬಯಸದೆ ಅಶುಭಾಚಾರನೆಂದು ನಿಂದಿಸಿದ. ರುದ್ರ ಸಿಟ್ಟುಗೊಂಡು ತ್ರಿಶೂಲಾಧಾರಿ ಯಾಗಿ ಕೊಲ್ಲುವೆನೆಂದು ಬಂದ.

ಅನಂತರ ಕೊನೆಯದಾಗಿ ವೈಕುಂಠಕ್ಕೆ ತೆರಳಿದ. ವಿಷ್ಣುವು ಶೇಷಶಾಯಿಯಾಗಿ ನಿದ್ರೆ ಹೋದವನಂತೆ ನಟಿಸುತ್ತಿರಲು ಅವನ ವಕ್ಷಸ್ಥಳಕ್ಕೆ ಹೋಗಿ ಒದ್ದ. ಭೃಗುವು ಔದ್ಧತ್ಯದ ಪರಮಾವಧಿಯನ್ನು ಮುಟ್ಟಿದ್ದು. ಭಗವಂತನು ಭೃಗುವಿನ ಅಂತರ್ಯವನ್ನರಿತು ಕೂಡಲೇ ಸುಖಾಸನದಿಂದ ಎದ್ದು ಭೃಗುವನ್ನು ಬಗೆಬಗೆಯಾಗಿ ಸತ್ಕರಿಸಿದ. ಇದನ್ನು ಕಂಡ ಭೃಗು ನಾಚಿದ, ತಲೆತಗ್ಗಿಸಿದ. ಭಗವಂತನ ಭಕ್ತವಾತ್ಸಲ್ಯ ಗುಣವನ್ನು ಕಂಡು ಆನಂದಾಶ್ರುವನ್ನು ಸುರಿಸಿದ. ಎಂತಹ ಅಪರಾಧ ಮಾಡಿದೆ ಎಂದು ಪರಿತಪಿಸಿದ. ಸರ್ವೋತ್ತಮತ್ವವನ್ನು ಎಲ್ಲೆಡೆ ಸಾರಿದ. ಸರಸ್ವತೀ ನದಿಯ ತೀರಕ್ಕೆ ಮರಳಿ ಬಂದು ಸಕಲ ಋಷಿಗಳ ಸಮ್ಮುಖದಲ್ಲಿ ಹರಿಸರ್ವೋತ್ತಮತ್ವವನ್ನು ಪ್ರತಿಪಾದಿಸಿದ. ಋಷಿ ಗಳೆಲ್ಲರೂ ಹರಕರುಣೆಯನ್ನು ಸ್ಮರಿಸುತ್ತಾ ಸರ್ವೋತ್ತಮನೆಂದು ದೃಢಪಡಿಸಿ ಕೊಂಡರು.

ಈ ಕಥೆಯಿಂದ ಒಂದಂಶವನ್ನು ಅರಿತುಕೊಳ್ಳಬೇಕು. ನಮಗೆ ಶ್ರೇಷ್ಠತನ ಬರುವುದು ನಮ್ಮ ಅಧಿಕಾರಕ್ಕಲ್ಲ. ನಮ್ಮ ಶ್ರೀಮಂತಿಕೆಗಲ್ಲ. ನಮ್ಮ ಠೀವಿಗಲ್ಲ. ನಮ್ಮ ವಿನಯ ಸೌಜನ್ಯಗಳೇ ನಮಗೆ ಸುಂದರ ವ್ಯಕ್ತಿತ್ವವನ್ನು ನಿರೂಪಿಸುತ್ತವೆ. ಸಜ್ಜನರ ತಪ್ಪನ್ನೂ ಗಮನಿಸದೆ ಸೌಜನ್ಯದಿಂದ ವರ್ತಿಸಿದಾಗಲೇ ಶ್ರೇಷ್ಠತೆಯನ್ನು ಪಡೆಯಲು ಸಾಧ್ಯ. ಶ್ರೀಕೃಷ್ಣನು ರಾಜಸೂಯಾಧ್ವರದಲ್ಲಿ ಜ್ಞಾನಿಗಳ ಚರಣಧೂಳನ್ನು ತೊಳೆದರೆ ಭೃಗುವು ಎದೆಗೆ ಒದ್ದಾಗಲು ಎದ್ದು ಬಂದು ಉಪಚರಿಸುವ ಔದಾರ್ಯವನ್ನು ತೋರಿದ. ಸೌಜನ್ಯದಿಂದ ವರ್ತಿಸಿದ ಭಗವಂತನಿಗೇ ಸರ್ವೋತ್ತಮತ್ವದ ಮಣೆಯನ್ನು ಹಾಕಿದರು. ಬ್ರಹ್ಮ ಉದಾಸೀನನಾದರೆ, ರುದ್ರ ಹೊಡೆಯಲು ಹೋದ. ಹರಿಯು ಅಪರಾಧವನ್ನು ಗಮನಿಸದೆ ಉಪಚರಿಸಿದ. ಈ ಮೂಲಕ ನಮ್ಮ ಶ್ರೇಷ್ಠತೆಗೆ ಯಾವುದು ದಾರಿ ಎನ್ನುವುದನ್ನು ಸೂಚಿಸಿದ. ಭಗವಂತನು ಭಕ್ತರ ಉದ್ಧಾರಕ್ಕಾಗಿ

ಇಂತಹ ಸಂದೇಶಗಳನ್ನು ನೀಡಿದ್ದಾನೆ. ಇವುಗಳನ್ನೆಲ್ಲ ಅರಿತು ನಡೆಯುವುದರಲ್ಲಿಯೇ ನಮ್ಮ ಜೀವನದ ಸಾರ್ಥಕತೆ ಅಡಗಿದೆ.

## ಶ್ರುತಿಗೀತೆಯ ಸಂದೇಶಗಳು

ಮುಂದೆ ಶುಕಾಚಾರ್ಯರ ಬಳಿ ಪರೀಕ್ಷಿತನು ಭಗವತ್ತತ್ವದ ಬಗ್ಗೆ ಅನೇಕ ಪ್ರಶ್ನೆಗಳನ್ನು ಕೇಳುತ್ತಾನೆ: 'ಅಜ್ಞೇಯನಾದ ನಿರ್ಗುಣನಾದ ಭಗವಂತನನ್ನು ಶ್ರುತಿಗಳು ಹೇಗೆ ತಿಳಿಸಿಕೊಡುತ್ತವೆ?' ಎಂದು. ಶುಕಮುನಿಗಳು ಉತ್ತರಿಸುತ್ತಾ –ಈ ಪ್ರಶ್ನೆಗಳು ಪರಂಪರೆಯಿಂದ ಹರಿದುಬಂದಿದೆ. ಹಿಂದೆ ಸನಂದನರು ಈ ಪ್ರಶ್ನೆಗಳಿಗೆ ಉತ್ತರ ರೂಪವಾಗಿ ಶ್ರುತಿಗೀತೆಯನ್ನು ಹೇಳಿದ್ದಾರೆ ಎಂದರು.

ಭಗವಂತನು ನಿರ್ಗುಣನೆಂದರೆ ಸತ್ವಾದಿ ಗುಣಗಳಿಲ್ಲದವನೆಂದರ್ಥ. ಅಜ್ಞೇಯ ನೆಂದರೆ ಪರಿಪೂರ್ಣವಾಗಿ ತಿಳಿಯಲಾರದವನೆಂದರ್ಥ. ಹೀಗೆ ಎಲ್ಲವನ್ನೂ ವಿಚಾರ ಮಾಡಿ ಸರಿಯಾಗಿ ಅರ್ಥೈಸಿಕೊಳ್ಳಬೇಕು. ಭಗವಂತನ ಬಗ್ಗೆ ತಪ್ಪು ತಿಳಿಯುವುದು ಅಥವಾ ಭಗವಂತನೇ ನಾನೆಂದು ಅಸದುಪಾಸನೆ ಮಾಡುವುದನ್ನು ಭಾಗವತವು ಖಂಡಿಸುತ್ತದೆ.

**ನ ಚ ರಮಂತ್ಯಹೋ ಽಸದುಪಾಸನಯಾತ್ಮಹನೋ ಯದನುಶಯಾ ಭ್ರಮಂತ್ಯ-ಭವಾಃ ಕುಶರೀರಭೃತಃ । ನಿಭೃತಮರುನ್ಮನೋಕ್ಷದೃಢಯೋಗಯುಜೋ ಹೃದಯಂ ಮುನಯ ಉಪಾಸತೇ ತದರಯೋಽಪಿ ಯಯುಃ ಸ್ಮರಣಾತ್ ॥** – ೧೦-೮೭-೨೮

ನಾನೇ ಬ್ರಹ್ಮನೆಂದು ಉಪಾಸನೆ ಮಾಡಿದರೆ ಭಗವಂತನಿಗೇ ಅಪಚಾರವೆಸಗಿ ದಂತೆ. ದೇವರನ್ನು ಕೊಲೆ ಮಾಡಿದಂತೆ. ಅವಿಕಾರಿಯಾದ ಭಗವಂತನನ್ನು ಕೊಲೆ ಮಾಡುವುದು ಎಂದರೆ ಭಗವಂತನನ್ನು ವಿಪರೀತವಾಗಿ ತಿಳಿದುಕೊಳ್ಳುವುದು. ಉದಾ: ಒಬ್ಬ ಅಪಸ್ವರದಿಂದ ಸಂಗೀತವನ್ನು ಹೇಳುತ್ತಿದ್ದರೆ ಅವನನ್ನು ಕುರಿತು ಇವನು ಸಂಗೀತ ಸರಸ್ವತಿಯ ಕೊಲೆ ಮಾಡುತ್ತಿದ್ದಾನೆ ಎನ್ನುತ್ತೇವೆ. ಇಲ್ಲಿ ಅಪಸ್ವರ ಹಾಡುವುದೇ ಕೊಲೆ. ಅದರಂತೆ ಭಗವಂತನ ಬಗ್ಗೆ ತಪ್ಪಾಗಿ ಮಾತನಾಡುವುದೇ ಭಗವಂತನ ಹತ್ಯೆ ಎನಿಸುವುದು. ಇಂತಹವರು ಸುಖಲೇಶವೂ ಇಲ್ಲದ ಕುತ್ಸಿತವಾದ ಲೋಕಗಳಲ್ಲಿ ದುಃಖದಿಂದ ತೊಳಲಾಡುವರು. ಕುತ್ಸಿತವಾದ ಶರೀರಗಳನ್ನು ಹೊಂದುವರು. ಇವರಷ್ಟೇ ಅಲ್ಲ. ಯಾರು ಭಗವಂತನ ಬಗ್ಗೆ ಸರಿಯಾಗಿ ಅರಿತುಕೊಂಡು ಚೆನ್ನಾಗಿ ಉಪಾಸನೆ ಮಾಡುತ್ತಾರೆಯೋ ಅವರನ್ನು ದ್ವೇಷಿಸಿದರೂ ಅಧಃಪತನಕ್ಕೆ ತುತ್ತಾಗುವರು.

ಮತ್ತು ಭಗವಂತನನ್ನು ಉಪಾಸನೆ ಮಾಡುವವರು ವ್ಯಾಪಾರಕ್ಕಾಗಿ ಫಲದ ಕಾಮನೆಗಾಗಿ ಭಗವಂತನನ್ನು ಉಪಯೋಗಿಸಿಕೊಳ್ಳಬಾರದು. ಪರಿಶುದ್ಧವಾದ ಪ್ರೇಮ ದಿಂದ ಸಹಜವಾಗಿ ಭಗವಂತನನ್ನು ಪ್ರೀತಿಸಬೇಕು. ಭಗವಂತನು ಸಕಲರಿಗೂ ನಿಯಾಮಕನಾಗಿದ್ದಾನೆ. ದೇವತೆಗಳೆಲ್ಲರನ್ನು ಹಗ್ಗದಿಂದ ಹಸುಗಳನ್ನು ಕಟ್ಟಿ ಸೆಳೆದುಕೊಂಡು ಹೋಗುವಂತೆ ತನ್ನ ಆದೇಶರೂಪವಾದ ಹಗ್ಗದಿಂದ ಬಂಧಿಸಿದ್ದಾನೆ.

'ಭೀಷಾಸ್ಮಾದ್ವಾತಃ ಪವತೇ ಭೀಷೋದೇತಿ ಸೂರ್ಯಃ' ಎಂಬ ಉಪನಿಷತ್ತೂ ಇದನ್ನೇ ಸಾರಿದೆ. ಸಕಲರನ್ನು ಸ್ವತಂತ್ರನಾಗಿದ್ದುಕೊಂಡು ನಿಯಮಿಸುತ್ತಿದ್ದಾನೆ.

ಹಿಂದಿನ ಕಾಲದಲ್ಲಿ ಬಹಳ ದೊಡ್ಡ ಹಡಗುಗಳಲ್ಲಿ ಬೇಕಾದ ಸಾಮಾನುಗಳನ್ನು ತುಂಬಿಕೊಂಡು ವ್ಯಾಪಾರಸ್ಥರು ಪ್ರಯಾಣ ಮಾಡುತ್ತಿದ್ದರು. ಹಡಗುಗಳು ಸರಿಯಾಗಿ ಸಾಗಬೇಕಾದರೆ ಒಬ್ಬ ನೌಕಾಚಾಲಕ ಬೇಕು ಇಲ್ಲದಿದ್ದರೆ ಸುಂಟರಗಾಳಿ ಮುಂತಾದ ಉಪದ್ರವಗಳು ಬಂದರೆ ಹಡಗು ಅಲ್ಲೋಲಕಲ್ಲೋಲವಾಗುತ್ತದೆ. ಗಳಿಸಿದ ಸಂಪತ್ತೆಲ್ಲವೂ ನೀರು ಪಾಲು. ನಾವು ಸಹ ನೀರು ಪಾಲಾಗುತ್ತೇವೆ. ಚಾಲಕನಿದ್ದರೆ ಸರಿಯಾದ ಗುರಿಯನ್ನು ಮುಟ್ಟುತ್ತದೆ.

ನಮ್ಮ ಜೀವನದ ಸ್ಥಿತಿಯೂ ಚಾಲಕನಿಲ್ಲದ ನೌಕೆಯಲ್ಲಿ ಕುಳಿತಂತಾಗಿದೆ. ಜೀವನವೆಂಬ ನೌಕೆಯಲ್ಲಿ ಮಡದಿ, ಮಕ್ಕಳು, ಮನೆ, ಧನ ಮುಂತಾದ ಬಗೆಬಗೆಯ ಮೋಹದ ವಸ್ತುಗಳನ್ನು ತುಂಬಿಕೊಂಡಿದ್ದೇವೆ. ಜೀವನಯಾತ್ರೆ ಸಾಗುತ್ತಾ ಇದೆ. ಸಂಸಾರಸಾಗರದಲ್ಲಿ ಕಾಮಾದಿಗಳೆಂಬ ಅಬ್ಬರದ ಅಲೆಗಳು ಅಪ್ಪಳಿಸುವ ಸಾಧ್ಯತೆ ಗಳಿವೆ. ಈ ಸಂದರ್ಭದಲ್ಲಿ ನಮಗೆ ಸರಿಯಾದ ಮಾಗದರ್ಶನವನ್ನು ನೀಡುವ ಗುರುಗಳು ಬೇಕು. ಸಂಸಾರದ ಜೀವನನೌಕೆಗೆ ಅನುಭವಿಗಳಾದ ಜ್ಞಾನಿ ಗುರುಗಳ ಆಸರೆ ಬೇಕು. ಹೀಗಿದ್ದಲ್ಲಿ ಮಾತ್ರ ಮೋಕ್ಷದ ಗುರಿಯನ್ನು ಮುಟ್ಟಲು ಸಾಧ್ಯ!

ಮುಂದೆ ಇನ್ನೊಂದು ಮಾತನ್ನು ಹೇಳುತ್ತಾರೆ. ಭಗವಂತನೂ ನಿತ್ಯವೂ ಮಿತ್ರನಂತೆ ನಮ್ಮೊಟ್ಟಿಗೇ ಇದ್ದಾನೆ. ಆದರೆ ನಮಗೆ ಈ ಎಚ್ಚರ ಇಲ್ಲವಾಗಿದೆ. ಒಬ್ಬನ ಬೆಲೆ ಬಾಳುವ ಕಂಠದ ಮಣಿ ಕುತ್ತಿಗೆಯಲ್ಲಿಯೇ ನೇತುಬಿಟ್ಟಿದೆ. ಮಣಿಯನ್ನು ಎಲ್ಲೋ ಮರೆತನೆಂದು ಬೊಬ್ಬಿಡುತ್ತಾನೆ. ಬೆಳಗ್ಗೆಯಿಂದ ತಾನು ಭೇಟಿಕೊಟ್ಟ ಸ್ಥಳಗಳಿಗೆಲ್ಲ ಸುತ್ತಾಡಿ ಬರುತ್ತಾನೆ. ಎಲ್ಲಿಯೂ ಸಿಗದೆ ವಿಲಪಿಸುತ್ತಾನೆ. ನಮ್ಮ ಸ್ಥಿತಿಯೂ ವಿಸ್ಮೃತ ಕಂಠಮಣಿಯವನಂತೆಯೇ ಆಗಿದೆ. ನಮ್ಮ ಹೃದಯಲ್ಲಿಯೇ ಅಡಗಿದ ಭಗವಂತನಿ ಗಾಗಿ ಎಲ್ಲೆಲ್ಲೋ ಅರಸುತ್ತಿದ್ದೇವೆ.

ಮುಂದೆ ನಮ್ಮ ಮನಸ್ಸಿನ ನೈರ್ಮಲ್ಯಕ್ಕೇನು ಮಾಡಬೇಕು? ಎನ್ನುವುದಕ್ಕೆ ಒಂದು ದೃಷ್ಟಾಂತವನ್ನು ನೀಡುತ್ತಾರೆ.

ಒಂದು ಅಕ್ಕಿಯ ಕಾಳಿಗೆ ತುಷೆಯ ಆಶ್ರಯವಿದ್ದಲ್ಲಿ ಅದು ಎಂದೂ ಮಲಿನ ವಾಗದು. ಮೇಲಿನ ತೊಗಟೆಯ ಬೆಂಬಲದಿಂದ ಯಾವ ರಸ, ಕಡ್ಡಿ ಧೂಳುಗಳ ಸಂಪರ್ಕವಾದರೂ ಒಳಗೆ ಸ್ವಚ್ಛವಾಗಿಯೇ ಇರುವುದು. ಅದರಂತೆ ನಿರ್ಮಲಾತ್ಮರಾದ ನಮಗೂ ಬಾಹ್ಯವಾಗಿ ಒಂದರ ಆಸರೆ ಬೇಕು. ವೇದಗಳೆಂಬ ಆಶ್ರಯದಲ್ಲಿ ಆತ್ಮನಿದ್ದರೆ ಯಾವ ಪಾಪಗಳಾಗಲಿ ಕಾಮಾದಿಕಶ್ಮಲಗಳಾಗಲಿ ಸ್ವಲ್ಪವೂ ಲೇಪ ವಾಗವು. ಆದ್ದರಿಂದ ವೇದಗಳೆಂಬ ಕಲ್ಪವೃಕ್ಷಗಳಲ್ಲಿ ನಮ್ಮ ಜೀವನವನ್ನು ನಡೆಸಬೇಕು ಎಂದು ಭಾಗವತವು ಸಾರಿದೆ.

ಹೀಗೆ ಭಗವತ್ತತ್ತ್ವವನ್ನು, ಅದಕ್ಕೆ ಪೋಷಕವಾದ ಪರಿಕರಗಳನ್ನು ಶ್ರುತಿಗೀತೆಯು ಅನೇಕ ದೃಷ್ಟಾಂತಗಳಿಂದ ನಮಗೆ ತಿಳಿಸಿಕೊಟ್ಟಿದೆ ಎಂಬಲ್ಲಿಗೆ ದಶಮಸ್ಕಂಧವು ಲಕ್ಷ್ಮೀಹಯಗ್ರೀವನಿಗೆ ಸಮರ್ಪಿತವಾಗಿದೆ.

ಮಧ್ವೇಶಾರ್ಪಣಮಸ್ತು

# ಅಥ ಏಕಾದಶ ಸ್ಕಂಧಃ

ಭಗವಂತನ ಚರಣಕಮಲವನ್ನು ನಿರಂತರ ಉಪಾಸನೆ ಮಾಡುತ್ತಿದ್ದರೆ ನಮಗೆ ಯಾವ ರೀತಿಯಾದ ಭಯಗಳೂ ಬರಲು ಸಾಧ್ಯವಿಲ್ಲ. ಆದರೆ ನಮ್ಮನ್ನು ಭಗವಂತನು 'ಕ' ರಕ್ಷಿಸಿಯೇ ತೀರುತ್ತಾನೆ ಎಂಬ ಅಚಲವಿಶ್ವಾಸ ಬೇಕು. ಈ ವಿಶ್ವಾಸವೇ ಶುದ್ಧವಾದ ಭಾಗವತ ಧರ್ಮವೆನಿಸಿದೆ. ಇದನ್ನು ನಮ್ಮ ಜೀವನದಲ್ಲಿ ಅಳವಡಿಸಿಕೊಂಡರೆ ಆಪತ್ತಿನ ಭೀತಿಯೇ ಭಯದಿಂದ ಓಡುವುದು.

ಒಂದು ವಿಸ್ತಾರವಾದ ವಿಶಾಲ ಮೈದಾನವಿದೆ. ಎಲ್ಲೆಡೆಯೂ ಹೊಯ್ಗೆಯ ರಾಶಿ. ಆ ಮೈದಾನದಲ್ಲಿ ಕಣ್ಣಿಗೊಂದು ಬಟ್ಟೆಯನ್ನು ಕಟ್ಟಿಕೊಂಡು ಎಷ್ಟು ವೇಗವಾಗಿ ಓಡಿದರೂ ನಮಗೆ ಭಯವಿಲ್ಲ. ಮೈಗೆ ಪೆಟ್ಟು ತಗಲುವ ಸಂದರ್ಭವೇ ಇಲ್ಲ. ವಿಶಾಲವಾದ ಉಸುಕಿನ ಮೈದಾನದಲ್ಲಿ ಆಪತ್ತಿನ ಭಯವಿಲ್ಲದಿರುವಂತೆ ಗುಣಸಾಗರನಾದ ಭಗವಂತನ ಆಶ್ರಯದಲ್ಲಿಯೂ ಆಪತ್ತಿಲ್ಲ. ಅವನು ತಿಳಿಸಿಕೊಟ್ಟ ಭಾಗವತಧರ್ಮಗಳನ್ನು ಅನುಸರಿಸಿದರೆ ಯಾವ ರೀತಿಯ ಆಪತ್ತಿಗೂ ಸಿಲುಕನು. ಭಾಗವತಧರ್ಮಗಳನ್ನು ಬಿಟ್ಟಲ್ಲಿ ಭವ ಕಟ್ಟಲ್ಲಿ ಸಿಲುಕಿ ಪೆಟ್ಟು ತಿನ್ನುವ. ಆದ್ದರಿಂದ ನಮ್ಮ ಮನಸ್ಸು, ದೇಹ, ಮಾತು, ಇಂದ್ರಿಯಗಳು ಬುದ್ಧಿ ಎಲ್ಲದರಿಂದಲೂ ನಡೆಯುವ ಕ್ರಿಯೆಗಳನ್ನು ಭಗವಂತನ ಅಡಿದಾವರೆಗಳಲ್ಲಿಯೇ ಸಮರ್ಪಿಸಬೇಕು. ಪರಿಶುದ್ಧವಾದ ಭಗವದರ್ಪಣಮನೋಭಾವವೇ ನಿರ್ಭೀತಿಗೆ, ಆತ್ಮೋನ್ನತಿಗೆ ಹೇತುವಾಗುತ್ತದೆ! ಎಂದು ಪ್ರಿಯವ್ರತ ಮಹಾರಾಜನ ವಂಶದಲ್ಲಿ ಬಂದ ಕವಿ ಎನ್ನುವ ಜ್ಞಾನಿ ನುಡಿಯುತ್ತಾನೆ–

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾऽऽತ್ಮನಾ ವಾऽನುಸೃತಃ ಸ್ವಭಾವಮ್ ।
ಕರೋತಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯೇತ್ ತತ್ ॥ — ೧೧–೨–೩೬

ಭಗವಂತನು ವಿಶ್ವಾತ್ಮನೆನಿಸಿದ್ದಾನೆ. ಆಕಾಶ, ವಾಯು, ಅಗ್ನಿ, ನೀರು, ಪೃಥಿವೀ, ಜ್ಯೋತಿ ಎಲ್ಲೆಡೆಯೂ ಇವನು ನೆಲಸಿದ್ದಾನೆ. ಈ ಎಲ್ಲ ಅಧಿಷ್ಠಾನಗಳಲ್ಲಿಯೂ ಇವನನ್ನು ಚಿಂತಿಸಬೇಕು. ಆತ್ಮನಿಲ್ಲದ ಶರೀರ ನಿಷ್ಕ್ರಿಯವಾದಂತೆ ದೇವನಿಲ್ಲದ ಜಗತ್ತೂ ಸ್ತಬ್ಧ. ಭಗವಂತನು ಜಗತ್ತಿನ ಎಲ್ಲ ಕಾರ್ಯಗಳನ್ನೂ ನಡೆಸುತ್ತಿದ್ದಾನೆ. ಆದ್ದರಿಂದ ಕೇವಲ ದೇವಮಂದಿರ ಮೂರ್ತಿಯಲ್ಲಿ ಭಗವಂತನಿದ್ದಾನೆಂದು ತಿಳಿಯದೆ ಎಲ್ಲೆಡೆಯೂ ಭಗವಂತನಿದ್ದಾನೆಂಬ ವಿಶಾಲದೃಷ್ಟಿಯನ್ನು ಬೆಳೆಸಿಕೊಂಡು ಭಗವಂತನನ್ನು ಕಾಣಬೇಕು –ಎಂದು ಕವಿಯು ಹೇಳಿದರೆ ಹರಿ ಎಂಬ ಭಕ್ತನು ಹೇಳುತ್ತಾನೆ–

ಭಕ್ತರಲ್ಲಿ ಮೂರು ವೈವಿಧ್ಯವಿದೆ. ಯಾರು ಪರಮಾತ್ಮನನ್ನು ಸಕಲ ಪ್ರಾಣಿಗಳಲ್ಲಿ, ಮಾನವರಲ್ಲಿಯೂ ಕಂಡು ಪರಮಾತ್ಮನು ವ್ಯಾಪ್ತನಿದ್ದಾನೆಂದು ತಿಳಿಯುವನೋ ಅವನು 'ಭಾಗವತೋತ್ತಮ'ನೆನಿಸುತ್ತಾನೆ.

ಯಾರು ಈಶ್ವರನಲ್ಲಿ ಅವನ ಅಧೀನರಲ್ಲಿ ಪ್ರೀತಿ ಮೈತ್ರಿಗಳನ್ನು, ಅಲ್ಪರಲ್ಲಿ ದಯೆ, ದ್ವೇಷಿಗಳಲ್ಲಿ ಉಪೇಕ್ಷೆಯನ್ನು ಮಾಡುತ್ತಾನೋ ಅವನು 'ಮಧ್ಯಮಭಕ್ತ'ನೆನಿಸುತ್ತಾನೆ.

ಪರಮಾತ್ಮನ ಭಕ್ತರಲ್ಲಾಗಲಿ ಬೇರೆ ಕಡೆಯಲ್ಲಾಗಲಿ ಭಗವಂತನನ್ನು ಕಾಣದೆ ಕೇವಲ ಪ್ರತಿಮೆಯಲ್ಲಿ ಮಾತ್ರ ಭಗವಂತನನ್ನು ಕಂಡು ಅನಂತರ ದೇವರನ್ನೇ ಮರೆಯುವವ ಕೆಳ ಮಟ್ಟದ ಭಕ್ತರ ಗುಂಪಿನಲ್ಲಿ ಸೇರುತ್ತಾನೆ ಎನ್ನುತ್ತಾನೆ.

**ಅರ್ಚಾಯಾಮೇವ ಹರಯೇ ಪೂಜಾಂ ಯಃ ಶ್ರದ್ಧಯೇಹತೇ ।**
**ನ ತದ್ಭಕ್ತೇಷು ಚಾನ್ಯೇಷು ಸ ಭಕ್ತಃ ಪ್ರಾಕೃತಃ ಸ್ಮೃತಃ ॥** — ೧೧-೨-೪೭

ಪರಮಾತ್ಮನನ್ನು ಕೇವಲ ಪ್ರತಿಮೆಯಲ್ಲಿ ಕಟ್ಟಿ ಹಾಕಿ ಮಂಗಳಾರತಿ ಪೂಜೆಗಳನ್ನು ಸಲ್ಲಿಸುವವ ಶ್ರೇಷ್ಠ ಭಕ್ತನೆನಿಸಲಾರ. ನಮ್ಮ ಹೃದಯಮಂದಿರದಲ್ಲಿಯೂ ಭಗವಂತನ ಆರಾಧನೆ ನಡೆಯಬೇಕು. ಜನರಲ್ಲಿಯೂ ಭಗವಂತನನ್ನು ಕಂಡು ಶ್ರೀಹರಿಯು ಪ್ರೀತನಾಗಲೆಂದು ಅವರಿಗೆ ಉಪಕರಿಸಬೇಕು.

## ಭಕ್ತಿಯನ್ನು ಬ್ಯಾಂಕಿನಲ್ಲಿಡಿ!!

ಪ್ರಬುದ್ಧರು ಪ್ರಬುದ್ಧವಾದ ಮೂವತ್ತು ಸಂದೇಶಗಳನ್ನು ನೀಡಿದ್ದಾರೆ. ಹನ್ನೊಂದನೇ ಸ್ಕಂಧದಲ್ಲಿ ಇವುಗಳ ಉಲ್ಲೇಖವಿದೆ. ಭಕ್ತರಾದವರು ಹೇಗೆ ನಡೆದುಕೊಳ್ಳಬೇಕು, ತಮ್ಮ ಜೀವನದಲ್ಲಿ ಏನೆಲ್ಲಾ ಅಳವಡಿಸಿಕೊಳ್ಳಬೇಕು ಎಂಬುದಕ್ಕೆ ಪ್ರಬುದ್ಧರ ಮೂವತ್ತಂಶದ ಕಾರ್ಯಕ್ರಮವನ್ನು ಮನಗಾಣಬೇಕು–

**ಸರ್ವತೋ ಮನಸೋಽಸಂಗಂ ಆದೌ ಸಂಗಂ ಚ ಸಾಧುಷು ।**
**ದಯಾಂ ಮೈತ್ರೀಂ ಪ್ರಶ್ರಯಂ ಚ ಭೂತೇಷ್ವದ್ಧಾ ಯಥೋಚಿತಮ್ ॥**
— (೧೧-೩-೨೪)

ಮುಂತಾಗಿ ಬಣ್ಣಿಸುತ್ತಾ, ಮೊದಲು 'ಸರ್ವತೋ ಮನಸೋಽಸಂಗಂ' ಎಂದು ಹೇಳಿದ್ದಾರೆ.

"ನಾವು ವಿಷಯಪದಾರ್ಥಗಳನ್ನು ಬಾಹ್ಯವಾಗಿ ಪರಿತ್ಯಜಿಸಬೇಕು" ಎಂದು ಭಾಗವತವು ಹೇಳುವುದಿಲ್ಲ. ಎಲ್ಲಾ ವಿಷಯಪದಾರ್ಥಗಳು ನಮ್ಮ ಮನೆಯಲ್ಲಿಯೇ ಇರಬಹುದು. ಮನೆಯಿಂದ ಪರಿತ್ಯಜಿಸುವುದೇನು ಬೇಡ. ಮನಸ್ಸಿನಿಂದ ಪರಿತ್ಯಜಿಸಿರಿ. ಮನಸ್ಸಿನ ಮೇಲೆ ನಿಯಂತ್ರಣ ಇರಬೇಕು. ಮನಸ್ಸು ಬಯಕೆಗೆ ತುತ್ತಾಗದಿರುವುದೇ ನಿಜವಾದ ವೈರಾಗ್ಯ. ನಮ್ಮಲ್ಲಿರುವ ಪ್ರೀತಿ ಎಂಬ ಗುಣವನ್ನು ವಿಷಯಪದಾರ್ಥಗಳ ಕಡೆ ಹರಿಸದೆ, ಹರಿಯ ಕಡೆ ಹರಿಸಬೇಕು. ಹರಿಯಲ್ಲಿ ಪ್ರೀತಿ ಹೆಚ್ಚಾಗಬೇಕಿದ್ದರೆ ಭೌತಿಕಪದಾರ್ಥಗಳಲ್ಲಿ ಕಡಿಮೆಯಾಗಬೇಕು.

ನಾವೆಲ್ಲರೂ ಪ್ರೀತಿ ಎಂಬ ಅಮೂಲ್ಯವಾದ ಸಂಪತ್ತನ್ನು ಕಳೆದುಕೊಳ್ಳುತ್ತಿದ್ದೇವೆ. ಹೇಗೆ ಎಂದು ನೋಡಿ!

ನಿಮ್ಮ ಬಳಿ ಹತ್ತು ಸಾವಿರ ಹಣವಿದೆ ಎಂದು ಇಟ್ಟುಕೊಳ್ಳೋಣ. ಆ ಹಣವನ್ನು ಕೇಳಿದವರಿಗೆಲ್ಲ ಸಾಲರೂಪದಲ್ಲಿ ಕೊಡುವ ಔದಾರ್ಯ ನಿಮ್ಮಲ್ಲಿದೆ. ಒಬ್ಬರಿಗೆ ನೂರು ರೂ.ಗಳನ್ನು ಕೊಡುತ್ತೀರಿ. ಮತ್ತೊಬ್ಬರಿಗೆ ಐದುನೂರು; ಮತ್ತೊಬ್ಬರಿಗೆ ಸಾವಿರ –ಹೀಗೆ ಅಲ್ಲಲ್ಲಿ ಸ್ವಲ್ಪ ಸ್ವಲ್ಪ ಹಂಚಿದಿರಿ. ಕಾಲಾಂತರದಲ್ಲಿ ಆ ಹಣ ನಿಮಗೆ ಬೇಕಾಯಿತು. ಕೂಡಲೇ ಸಿಗುವುದಿಲ್ಲ. ಬಡ್ಡಿಯು ದೊರೆಯುತ್ತದೆ ಎಂದೂ ಹೇಳಲಾಗದು. ಅಸಲೂ ನಷ್ಟವಾಗುವ ಪ್ರಸಂಗವಿದೆ.

ಇದರ ಬದಲು ಬ್ಯಾಂಕಿನಲ್ಲಿ ಠೇವಣಿ (Deposit) ಇಟ್ಟರೆ, ಅದಕ್ಕೆ ಸರಿಯಾದ ಬಡ್ಡಿ ಬರುತ್ತದೆ. ಬೇಕಾದಾಗ ಪಡೆದುಕೊಳ್ಳುತ್ತೇವೆ. ಅಥವಾ ಆ ದುಡ್ಡನ್ನು ಆಸ್ತಿಗಾಗಲೀ, ದೊಡ್ಡ ಉದ್ಯಮಕ್ಕಾಗಲೀ ತೊಡಗಿಸಿದಲ್ಲಿ ಅದರ ದುಪ್ಪಟ್ಟು ದುಡ್ಡು ಬರುತ್ತವೆ. ಇದರ ಬದಲು ವಿಕೇಂದ್ರೀಕೃತಗೊಳಿಸಿದರೆ ನಷ್ಟವಾಗಿ ಕಷ್ಟವಾಗಬಹುದು.

ಹಾಗೆಯೇ ನಮ್ಮ ಬಳಿಯೂ ಪ್ರೇಮ ಎಂಬ ದೊಡ್ಡ ಸಂಪತ್ತಿದೆ. ಇದನ್ನು ಮಡದಿಯಲ್ಲಿ ಸ್ವಲ್ಪ, ಮಕ್ಕಳಲ್ಲಿ ಸ್ವಲ್ಪ, ಸ್ನೇಹಿತರಲ್ಲಿ ಸ್ವಲ್ಪ, ಆಸ್ತಿಗೆ, ಮನೆಗೆ –ಹೀಗೆ ಹಂಚುತ್ತಾ ಹೋದಲ್ಲಿ ಇರುವ ಪ್ರೀತಿಯನ್ನೆಲ್ಲಾ ಕಳೆದುಕೊಳ್ಳುತ್ತೇವೆ. ಕೆಲವೊಮ್ಮೆ ಕಷ್ಟವನ್ನೂ ಅನುಭವಿಸುತ್ತೇವೆ. ಪ್ರೇಮದ ಪುತ್ರ ತಿರುಗಿನಿಂತಲ್ಲಿ ಹೃದಯ ದರಿಯುತ್ತದೆ. ಆದ್ದರಿಂದ ಹಣವನ್ನು ಒಂದೇ ಕಡೆ ವಿನಿಯೋಗಿಸುವಂತೆ, ಬೇರೆ ಕಡೆ ಹರಿಸಿದ ಪ್ರೀತಿಯನ್ನೆಲ್ಲಾ ಹಿಂತೆಗೆದುಕೊಂಡು (with draw) ಭಗವಂತನೆಂಬ ಬ್ಯಾಂಕಿನಲ್ಲಿಡಬೇಕು. ಇದರಿಂದ ಮೋಕ್ಷವೆಂಬ ಮಹಾಫಲವೇ ನಮ್ಮದಾಗುತ್ತದೆ. ಒಂದೇ ಕಡೆ ಈ ಭಕ್ತಿ ಜಾಗೃತವಾಗಬೇಕಿದ್ದರೆ ಭಕ್ತಿಗೆ ಪೋಷಕವಾಗಿ ವೈರಾಗ್ಯ ಬೇಕು. ಎಲ್ಲೆಡೆ ವೈರಾಗ್ಯವನ್ನು ತಾಳಿದಾಗ ಹರಿಯಲ್ಲಿಯೇ ಭಕ್ತಿ ಜಾಗೃತವಾಗುತ್ತದೆ.

ಶ್ರೀಮದಾಚಾರ್ಯರೂ ಸಹ 'ಶಾಸ್ತ್ರೇಷು ಇಯಾನೇವ' ಎಂದು ಈ ಎರಡನ್ನೇ ತಿಳಿಸಿದ್ದಾರೆ. ಭಗವಂತನನ್ನು ಬಿಟ್ಟು ಇತರ ಪದಾರ್ಥಗಳಲ್ಲಿ ವೈರಾಗ್ಯ. 'ದೃಢಾರತಿ ಬ್ರಾಹ್ಮಣಿ' ಭಗವಂತನಲ್ಲಿ ದೃಢವಾದ ಭಕ್ತಿ.

ಹೀಗೆ ಭಕ್ತಿ–ವಿರಕ್ತಿಗಳಿಂದಲೇ ಮುಕ್ತಿ ಎಂಬುದು ಆಚಾರ್ಯರ ಸಿಹಿನುಡಿ.

ಮುಂದೆ ಬ್ರಹ್ಮಾದಿ ದೇವತೆಗಳೆಲ್ಲರೂ ಭಗವಂತನ ಬಳಿ ಪ್ರಾರ್ಥಿಸಿದರು. ದೇವೋತ್ತಮ! ಭೂಭಾರಹರಣಕಾರ್ಯವು ನಡೆದು ಲೋಕವೆಲ್ಲವೂ ಧರ್ಮಮಾರ್ಗ ದಲ್ಲಿ ನಡೆಯುತ್ತಿದೆ. ನಿನ್ನ ಕಾರ್ಯಕ್ಕೆ ಸಹಕಾರಿಗಳಾಗಿ ಬಂದ ದೇವತೆಗಳೂ ಮರಳಿ ಬಂದಾಯಿತು. ನೀನು ಮರಳಿ ವೈಕುಂಠಲೋಕಕ್ಕೆ ಮರಳಿ ಬಾ ಎಂದರು.

ಮುಂದೆ ದ್ವಾರಕೆಯಲ್ಲಿ ಅನೇಕ ಅಪಶಕುನಗಳಾದವು. ಯಾದವರೆಲ್ಲರೂ ಪ್ರಭಾಸಕ್ಕೆ ತೆರಳಲು ಸಿದ್ಧರಾದರು. ಆಗ ಏಕಾಂತದಲ್ಲಿ ಉದ್ಧವನು ಶ್ರೀಕೃಷ್ಣನ ಬಳಿ ತತ್ತ್ವೋಪದೇಶ ಮಾಡೆಂದು ಪ್ರಾರ್ಥಿಸಿದನು.

ಉದ್ಧವನಿಗೆ ಶ್ರೀಕೃಷ್ಣಪರಮಾತ್ಮನು ಉಪದೇಶಿಸುತ್ತಿದ್ದಾನೆ. ಒಂದು, ಎರಡು, ಮೂರು, ನಾಲ್ಕು ಪಾದಗಳುಳ್ಳ ಅನೇಕ ಜೀವರಾಶಿಗಳನ್ನು ಸೃಷ್ಟಿ ಮಾಡಿದ್ದೇನೆ. ಈ ನನ್ನ ಸೃಷ್ಟಿಯಲ್ಲಿ ನನಗಿಷ್ಟವಾದವರು ಮನುಷ್ಯರು– 'ತಾಸಾಂ ಮೇ ಪೌರುಷೋ ಪ್ರಿಯಾ'. ಏಕೆಂದರೆ ಜೀವನದಲ್ಲಿ ಏನಾದರೂ ಸಾಧನೆಯನ್ನು ಮಾಡಲು ಸಾಧ್ಯವಿದೆ ಎಂದಾದರೆ ಅದು ಜ್ಞಾನವುಳ್ಳ ಮನುಷ್ಯರಿಗೆ ಮಾತ್ರ. ಮಾನವಜನ್ಮದಲ್ಲಿ ಸಿಕ್ಕಿದ ಅವಕಾಶಗಳನ್ನೆಲ್ಲ ಬಳಸಿಕೊಂಡು ಉತ್ತಮ ತತ್ತ್ವಜ್ಞಾನವನ್ನು ಪಡೆಯಲು ಪ್ರಯತ್ನಿಸ ಬೇಕು. ಈ ವಿಷಯದಲ್ಲಿ ಯದು–ಅವಧೂತರೊಳಗೆ ನಡೆದ ಸಂವಾದವನ್ನು ಉದಾಹರಿಸುವರು.

ಯಾವುದೇ ರೀತಿಯ ಪ್ರಲೋಭನೆಗಳಿಗೆ ತುತ್ತಾಗದೆ ಆನಂದದಿಂದ ಅರಳಿದ ಮುಖವುಳ್ಳ ಅವಧೂತರನ್ನು ಯದುರಾಜನು ಪ್ರಶ್ನಿಸುತ್ತಾನೆ: 'ಅವಧೂತರೇ! ನಿಮ್ಮ ನಿರಂತರ ಸಂತೋಷಕ್ಕೇನು ಕಾರಣ? ಬಾಲಕರಂತೆ ನಿಶ್ಚಿಂತೆಯಿಂದ ಸಂಚರಿಸುತ್ತಿರು ವಿರಲ್ಲ?

**ಜನೇಷು ದಹ್ಯಮಾನೇಷು ಕಾಮಲೋಭದವಾಗ್ನಿನಾ ।**
**ನ ತಪ್ಯಸೇಽಗ್ನಿನಾ ಮುಕ್ತೋ ಗಂಗಾಂಭಃಸ್ಥ ಇವ ದ್ವಿಪಃ ॥** — ೧೧–೭–೨೯

"ಕಾಮಕ್ರೋಧಲೋಭ ಎಂಬ ಕಾಡ್ಗಿಚ್ಚಿಗೆ ಸಿಲುಕಿ ಜಗದ ಜನರೆಲ್ಲರೂ ಕಷ್ಟ ಪಡುತ್ತಿರುವಾಗ, ನೀನು ಮಾತ್ರ ಗಂಗೆಯ ಸ್ವಚ್ಛ ಜಲದಲ್ಲಿ ಸ್ವಚ್ಛಂದವಾಗಿ ವಿಹರಿ ಸುವ ಆನೆಯಂತೆ ಸಂತೋಷದಿಂದ ವಿಹರಿಸುತ್ತಿರುವಿಯಲ್ಲ!! ಈ ಸಂತೋಷಕ್ಕೇನು ಕಾರಣ? ನಿನ್ನ ಆನಂದ ನಮಗೂ ಬೇಕಾದಲ್ಲಿ ನಾವೇನು ಮಾಡಬೇಕೆಂಬ ತತ್ತ್ವರಹಸ್ಯವನ್ನು ಅರುಹು!'' ಎಂದು ಪ್ರಾರ್ಥಿಸಲು, ಅವಧೂತನು ಉತ್ತರಿಸುತ್ತಾನೆ–

**ಸಂತಿ ಮೇ ಬಹವೋ ಗುರವೋ ರಾಜನ್! ಬಹವೋ ಬುದ್ಧ್ಯುಪಾಶ್ರಿತಃ ।**

ನನಗೆ ಹಲವರು ಗುರುಗಳಿದ್ದಾರೆ. ಈ ಭೂಮಿ, ಆಕಾಶ, ನೀರು, ಬೆಂಕಿ, ಚಂದ್ರ, ಸೂರ್ಯ, ಸಮುದ್ರ, ಹಾವು, ಮೀನು, ಮಗು ಮುಂತಾದ ಇಪ್ಪತ್ತನಾಲ್ಕು ಗುರುಗಳಿದ್ದಾರೆ. ಒಬ್ಬೊಬ್ಬರಿಂದ ಒಂದೊಂದು ಪಾಠವನ್ನು ಕಲಿತೆ.

ಉಪನಿಷತ್ತಿನಲ್ಲಿಯೂ ಪ್ರಕೃತಿಯಿಂದ ಪಾಠ ಕಲಿತ ಬಗ್ಗೆ ಉಲ್ಲೇಖಗಳಿವೆ. ಕೆಲವು ಋಷಿಕುಮಾರರು ಗೋವುಗಳನ್ನು ಮೇಯಿಸುತ್ತಿದ್ದಾಗ ಎತ್ತು ಅವರಿಗೆ ಉಪದೇಶ ನೀಡಿದೆ. ಋಷಭರೂಪದಿಂದ ವಾಯುದೇವರು ಉಪದೇಶ ನೀಡಿದ್ದಾರೆ. ಮರಗಿಡ ಗಳಿಂದಲೂ ತತ್ತ್ವಜ್ಞಾನದ ಸ್ಫೂರ್ತಿಯನ್ನು ಋಷಿಕುಮಾರರು ಪಡೆಯುತ್ತಿದ್ದರು.

ಯದುವಿಗೆ ಅವಧೂತರು ಪಾಠ ಕಲಿತ ಬಗೆಯನ್ನು ವಿವರಿಸುತ್ತಿದ್ದಾರೆ–

**೧. ಭೂಮಿ: ಭೂತೈರಾಕ್ರಮ್ಯಮಾಣೋಽಪಿ ಧೀರೋ ದೇವವಶಾನುಗೈಃ ।**
**ತದ್ ವಿದ್ವಾಂ ನ ಚಲೇನ್ಮಾರ್ಗಾತ್ ಅನುಶಿಕ್ಷನ್ ಕ್ಷಿತೇರ್ವ್ರತಮ್ ॥**
— (೧೧–೭–೩೭)

"ಎಲ್ಲಾ ಪ್ರಾಣಿಗಳಿಂದ ಎಷ್ಟೇ ಘಾಸಿಗೊಳಗಾದರೂ ಸಹಿಸಿಕೊಳ್ಳುವ ಕ್ಷಮಾ ಗುಣವನ್ನು ಭೂಮಿಯಿಂದ ಕಲಿತೆ" ಎಂದ.

ಸಮುದ್ರ ವಸನೇ ದೇವಿ! ಪರ್ವತಸ್ತನ ಮಂಡಿತೇ ।
ವಿಷ್ಣುಪತ್ನಿ ನಮಸ್ತುಭ್ಯಂ ಪಾದಸ್ಪರ್ಶಂ ಕ್ಷಮಸ್ವ ಮೇ ॥

ಎಂದು ನಾವೆಲ್ಲರೂ ಭೂದೇವಿಯನ್ನು ಪ್ರತಿನಿತ್ಯವೂ ಪ್ರಾರ್ಥಿಸಬೇಕು.

ತಾಯಿಯು ತನ್ನ ಎದೆಹಾಲಿನಿಂದ ಮಕ್ಕಳನ್ನು ಬೆಳೆಸುವಂತೆ ಭೂತಾಯಿಯು ಪರ್ವತಗಳೆಂಬ ತನ್ನ ಸ್ತನಗಳಿಂದ ಜೀವನದಿಗಳೆಂಬ ಹಾಲನ್ನು ಹರಿಸಿ ಸಸ್ಯಗಳನ್ನು ಬೆಳೆಸಿ ಆ ಮೂಲಕ ನಮ್ಮೆಲ್ಲರನ್ನೂ ಬೆಳೆಸುತ್ತಿದ್ದಾಳೆ. ನಮ್ಮ ತಾಯಿಯಾದ ಭೂಮಿಗೆ ನಾವು ಕಶ್ಮಲ ಚೆಲ್ಲುತ್ತೇವೆ. ಆದರೂ ತನ್ನ ಸಹನೆಯನ್ನು ಕಳೆದುಕೊಂಡಿಲ್ಲ.

ಅವಳಂತೆಯೇ ನಾವೂ ಸಹ ಯಾರಿಂದಲೇ ತೊಂದರೆ ಬಂದರೂ ಅದೆಲ್ಲವನ್ನೂ ಕ್ಷಮಿಸಬೇಕು. ಧ್ರುವಕುಮಾರನನ್ನು ಮಲತಾಯಿ ಅವಮಾನಿಸಿದಾಗ ನಿಜತಾಯಿ ಹೇಳುತ್ತಾಳೆ: 'ಮಾಽಮಂಗಲಂ ತಾತ ಪರೇಷ್ವಮಂಸ್ಥಾಃ' –ಮತ್ತೊಬ್ಬರಿಗೆ ಕೆಟ್ಟದ್ದನ್ನು ಬಯಸಬೇಡ. ಎಂಥಹ ಔದಾರ್ಯ!!

ರಾಮಾಯಣದಲ್ಲಿ ರಾವಣನ ಸಂಹಾರವಾದ ಬಳಿಕ ಹನುಮಂತ ಸೀತೆಯ ಬಳಿ ಸಾಗುತ್ತಾನೆ. "ಸೀತೆ! ರಾವಣನನ್ನು ಸಂಹರಿಸಿ ಆಯಿತು. ಇನ್ನು ನಿನಗೆ ಉಪದ್ರವ ಕೊಟ್ಟ ರಾಕ್ಷಸಿಯರನ್ನೆಲ್ಲಾ ಛಿನ್ನಭಿನ್ನಗೊಳಿಸುವೆ" ಎಂದ. ಆದರೆ ಸೀತೆ ಆ ಸಂದರ್ಭದಲ್ಲಿ ಆಡಿದ ಮಾತೇನು?! ಹನುಮಂತ! 'ನ ಕಶ್ಚಿನ್ನಾಪರಾಧ್ಯತೇ!' –ಯಾರು ಅಪರಾಧ ಮಾಡುವುದಿಲ್ಲ?!.

"ನಮ್ಮ ತಪ್ಪನ್ನು ಕ್ಷಮಿಸುವ ನಾವು ಮತ್ತೊಬ್ಬರ ತಪ್ಪನ್ನು ಏಕೆ ಕ್ಷಮಿಸುವುದಿಲ್ಲ? ರಾವಣನ ಆದೇಶ ಪರಿಪಾಲಿಸಿದ ಇವರನ್ನು ಹಿಂಸಿಸಬೇಡ" ಎಂದು ತಡೆದಳು.

ಹನುಮಂತನು ಕಾಲಿಗೆ ಎರಗುತ್ತಾನೆ. "ರಾಮನ ಪತ್ನಿಯಾದ ನಿನ್ನಿಂದ ಮಾತ್ರ ಇಂಥಹ ಔದಾರ್ಯದ ಮಾತು ಬರಲು ಸಾಧ್ಯ" ಎನ್ನುತ್ತಾನೆ.

ಅದರಂತೆ ಅವಧೂತನೂ ಸಹ, "ಕ್ಷಮಿಸುವ ಸದ್ಗುಣ ಭೂಮಿಯಿಂದ ಕಲಿತೆ" ಎನ್ನುತ್ತಾನೆ. ಭೂಮಿಯಲ್ಲಿ ಎಲ್ಲಾ ಸಸ್ಯಗಳು ಸಮೃದ್ಧವಾಗಿ ಬೆಳೆಯುತ್ತವೆ. ಯಾವುದೂ ಭೂಮಿಗಾಗಿ ಅಲ್ಲ. ಅದರ ಪ್ರಯೋಜನ ನಮಗಾಗಿ. ಅದರಂತೆ, ನಮ್ಮೆಲ್ಲ ಸಂಪತ್ತು ಜನಾರ್ದನನ ಸೇವೆಗಾಗಿ ಎಂದು ಪರೋಪಕಾರದಿಂದ ಬದುಕಬೇಕು. ಕ್ಷಮೆ, ಔದಾರ್ಯಗಳನ್ನು ಭೂಮಿಯಿಂದ ಕಲಿತೆ ಎಂದ ಇದನ್ನು ನಾವೂ ಅರ್ಥಮಾಡಿಕೊಳ್ಳಬೇಕಲ್ಲವೇ?

**೨. ವಾಯು:** ಉದ್ಧವನು ಹೇಳುತ್ತಾನೆ– "ನನ್ನ ಎರಡನೆಯ ಗುರು ವಾಯು. ಇದರಲ್ಲಿ ಪ್ರಾಣವಾಯು, ಬಾಹ್ಯವಾಯುಗಳೆಂದು ಎರಡು ವಿಧ. ಬಾಹ್ಯವಾಯುವು ಯಾವುದರ ಮೇಲೆ ಬೀಸಿದರೂ ಆ ವಸ್ತುವಿನ ದೋಷವನ್ನು, ದುರ್ವಾಸನೆಯನ್ನು ಸ್ವೀಕರಿಸುವುದಿಲ್ಲ. ಸಂಪರ್ಕವಿದ್ದರೂ ಇಲ್ಲದಂತೆ ಸಂಚರಿಸುತ್ತಿದೆ ಇದರಿಂದ

ಯಾವುದರೊಟ್ಟಿಗೂ ಅತಿಯಾದ ಸಂಗವನ್ನು ಬೆಳೆಸಿಕೊಳ್ಳದೆ ನಿರ್ಲಿಪ್ತನಾಗಿರಬೇಕೆಂಬುದನ್ನು ಕಲಿತೆ.

ಪ್ರಾಣವಾಯುವು ನನಗೆ ತಿಳಿಸಿದ ಪಾಠವಾದರೂ ಹೀಗಿದೆ: ನಮ್ಮ ಕಿವಿ, ನಾಲಗೆ, ಕಣ್ಣು ಮುಂತಾದ ಇಂದ್ರಿಯಗಳೆಲ್ಲವೂ ಯಾವುದೇ ವಸ್ತುಗಳನ್ನೂ ಸ್ವೀಕರಿಸಲು ಮುಂದಾಗುತ್ತವೆ. ಆದರೆ ಪ್ರಾಣವಾಯು ಯಾವುದನ್ನೂ ಬಯಸುವುದಿಲ್ಲ. ಮಾತು ಮನಸ್ಸುಗಳು ಮಲಿನವಾಗಬಾರದು. ಜ್ಞಾನವು ನಶಿಸಬಾರದು. ಎಷ್ಟು ಬೇಕೋ ಅಷ್ಟನ್ನು ಮಾತ್ರ ಸ್ವೀಕರಿಸುವುದನ್ನು ವಾಯುವಿನಿಂದ ಕಲಿಯಬೇಕು. ಇತರ ಇಂದ್ರಿಯಗಳಿಗಿರುವ ತೃಷ್ಣತೆ ಇದಕ್ಕಿಲ್ಲ. ಆಹಾರದ ವಿಷಯದಲ್ಲಿ ಸಂಯಮವಿರಬೇಕು. ಅತಿಯಾದ ಆಹಾರವು ಮನದ ಮೇಲೆ ಪರಿಣಾಮ ಬೀರುತ್ತದೆ. ಹೊಟ್ಟೆ ತುಂಬುವಂತಹ ಆಹಾರವನ್ನು ಸ್ವೀಕರಿಸುವುದಕ್ಕಿಂತ ಮನಸ್ಸು ತುಂಬುವಂತಹ ಆಹಾರಗಳನ್ನು ಸ್ವೀಕರಿಸಬೇಕು. ವಿನೋದಕ್ಕಾಗಿ ಒಂದು ಕಥೆಯಿದೆ–

ಭೀಷ್ಮಾಚಾರ್ಯರು ಶಾಂತಿಪರ್ವದಲ್ಲಿ ಧರ್ಮರಾಜನಿಗೆ ವಿಸ್ತಾರವಾಗಿ ಉಪದೇಶ ಮಾಡಿದರು. ಇಷ್ಟೆಲ್ಲ ಉಪದೇಶ ಮಾಡುತ್ತಿದ್ದ ಭೀಷ್ಮಾಚಾರ್ಯರನ್ನು ಕಂಡು ದ್ರೌಪದಿಯು ನಗಲಾರಂಭಿಸಿದಳಂತೆ. ಭೀಷ್ಮಾಚಾರ್ಯರು ನಗುವಿಗೇನು ಕಾರಣ? ಎಂದು ಕೇಳಿದರಂತೆ. ದ್ರೌಪದಿ ಉತ್ತರಿಸಿದಳು: 'ನೀವು ಉತ್ತಮವಾದ ಉಪದೇಶವನ್ನು ಮಾಡುತ್ತಿರುವಿರಿ! ಆದರೆ ಹಿಂದೆ ದುರ್ಯೋಧನ ದುಶ್ಶಾಸನಾದಿಗಳು ಸಭೆಯಲ್ಲಿ ನನ್ನ ಮಾನಹರಣ ಮಾಡುವಾಗ ಈ ಧರ್ಮಬುದ್ಧಿ ಎಲ್ಲಿಗೆ ಹೋಗಿತ್ತು? ಪ್ರತಿಭಟಿಸಬಾರದಿತ್ತೆ?' ಎಂದಾಗ ಭೀಷ್ಮರು ಉತ್ತರಿಸಿದರು– 'ದ್ರೌಪದಿ! ಅಂದು ನಾನು ಕೌರವರ ಹಂಗಿನಲ್ಲಿದ್ದೆ. ದುಷ್ಟರ ಕೆಟ್ಟ ಆಹಾರವನ್ನು ಸ್ವೀಕರಿಸಿ ಮನಸ್ಸು ಮಲಿನವಾಗಿತ್ತು. ಧರ್ಮಪ್ರಜ್ಞೆಯೇ ಇರಲಿಲ್ಲ. ಆದ್ದರಿಂದ ಸುಮ್ಮನೆ ಕುಳಿತೆ.' 'ಹಾಗಾದರೆ ಈಗ ಹೇಗೆ ಉಪದೇಶ ಮಾಡಿದಿರಿ?' ಎನ್ನಲು ಭೀಷ್ಮರು– 'ಈ ಯುದ್ಧದಲ್ಲಿ ಹತ್ತು ದಿನಗಳ ಕಾಲ ಯುದ್ಧ ಮಾಡುವಾಗ ಅರ್ಜುನನ ಬಾಣಗಳು ನನ್ನ ಶರೀರಕ್ಕೆ ತಾಗಿ ಶರೀರದ ರಕ್ತವೆಲ್ಲ ಹರಿದುಹೋಯಿತು. ದುರ್ಯೋಧನನ ಆಹಾರದ ರಕ್ತವೆಲ್ಲವೂ ನೆಲದಲ್ಲಿ ಚೆಲ್ಲಿಹೋಗಿ ಈಗ ಪರಿಶುದ್ಧನಾಗಿದ್ದೇನೆ. ಧರ್ಮಪ್ರಜ್ಞೆ ಜಾಗೃತವಾಗಿದೆ.' ಎಂದು ಉತ್ತರಿಸಿದರಂತೆ.

ಆದರಂತೆ ಇಂದ್ರಿಯಗಳೆಲ್ಲವೂ ಅನ್ನಾದಿ ವಸ್ತಗಳಿಗೆ ವಶವಾದರೆ ಪ್ರಾಣವಾಯು ನಿರ್ಲಿಪ್ತನಾಗಿರುತ್ತಾನೆ. ದಾರಿ ಮೀರಿ ನಡೆದರೆ ಭೀಷ್ಮಾಚಾರ್ಯರಂತೆ ಅಧರ್ಮಬುದ್ಧಿ ಬಂದೀತು. ವಾಯುವಿನಂತೆ ನಿರ್ಲಿಪ್ತತೆಯನ್ನು ಅಳವಡಿಸಿಕೊಂಡಲ್ಲಿ ಮಾನಸಿಕ ಸ್ವಚ್ಛತೆ ಉಂಟಾಗುತ್ತದೆ. ಈ ಪಾಠವನ್ನು ಪ್ರಾಣವಾಯು ಮತ್ತು ಬಾಹ್ಯವಾಯುಗಳಿಂದ ಕಲಿತೆ. ಜೀವನಕ್ಕೆಷ್ಟು ಬೇಕೋ ಅಷ್ಟರಿಂದ ಸಂತೃಪ್ತ ಜೀವನವನ್ನು ನಡೆಸಬೇಕು.

**'ಯಾವತ್ಪ್ರಾಣನಿರೋಧಃಸ್ಯಾತ್ ತಾವದಿಚ್ಛೇಚ್ಚ ಭೋಜನನವಮ್'**

**೩. ಆಕಾಶ:** ನನಗೆ ಮೂರನೇ ಗುರು ಆಕಾಶ. ಆಕಾಶವು ಎಲ್ಲೆಡೆ ವ್ಯಾಪಿಸಿದೆ. ನೀಲವರ್ಣದ ಅನಂತವಾದ ಆಕಾಶಕ್ಕೆ ಯಾವುದೇ ರೀತಿಯ ವಿಕಾರವೂ ಇಲ್ಲ. ಮಳೆ

ಗಾಳಿ ಮೋಡ ಏನೇ ಬರಲಿ ಯಾವ ವಿಕಾರಕ್ಕೂ ತುತ್ತಾಗುವುದಿಲ್ಲ. ಇದನ್ನು ಕಂಡ ಕೂಡಲೇ ಭಗವಂತನ ಸ್ಮರಣೆ ಬರುತ್ತದೆ. ಆಕಾಶದಂತೆ ಭಗವಂತನೂ ಎಲ್ಲೆಡೆಯೂ ವ್ಯಾಪ್ತನಾಗಿದ್ದಾನೆ. ಅವನಿಗೂ ಯಾವುದೇ ಲೇಪವಿರುವುದಿಲ್ಲ. ಎಲ್ಲೇ ವ್ಯಾಪ್ತನಾಗಿದ್ದರೂ ದುರ್ಗಂಧಾದಿಗಳ ಲೇಪವಿರುವುದಿಲ್ಲ ದೇವನು ಪರಿಶುದ್ಧನೆನ್ನಲು ಆಕಾಶವೇ ದೃಷ್ಟಾಂತ. ಜಡವಾದ ಆಕಾಶವೇ ನಿರ್ಲಿಪ್ತವಾಗಿರಲೂ ಚೇತನವರ್ಗಕ್ಕೆ ನಿಯಾಮಕನಾದ ಭಗವಂತನಿಗೆಲ್ಲಿಯ ಲೇಪ? ಆಕಾಶದಲ್ಲಿ ಮೋಡಗಳು ಬೀಡುಬಿಟ್ಟು ಗುಡುಗುಮಿಂಚುಗಳಿಂದ ಮಂದಿಯನ್ನೆಲ್ಲ ನಡುಗಿಸುತ್ತವೆ. ಆದರೆ ಇದ್ಯಾವುದೂ ಆಕಾಶಕ್ಕೆ ತಗಲುವುದಿಲ್ಲ. ಇದರಂತೆ ಭಗವಂತನಲ್ಲಿ ಸೃಷ್ಟಿ, ಸ್ಥಿತಿ, ಸಂಹಾರ ಮುಂತಾದ ಏನೆಲ್ಲ ಆರ್ಭಟಗಳಿದ್ದರೂ ಅವುಗಳಿಂದ ನಿರ್ಲಿಪ್ತನಾಗಿರುತ್ತಾನೆ. ಇದರಿಂದ ನಾನು ನಿರ್ಲಿಪ್ತನಾದೆ.

**೪. ನೀರು:** ನಾಲ್ಕನೆಯ ಗುರುವನ್ನಾಗಿ ನೀರನ್ನು ಸ್ವೀಕರಿಸಿರುವೆ. ನಮ್ಮ ಮನಸ್ಸು ನೀರಿನಂತೆ ಸ್ವಚ್ಛವಾಗಿರಬೇಕು. ಸ್ನಿಗ್ಧ, ಮಧುರವಾಗಿದು ದರ್ಶನ–ಸ್ಪರ್ಶನಾದಿಗಳಿಂದ ಪಾನಮಾಡುವವರನ್ನು ಪವಿತ್ರಗೊಳಿಸುವಂತೆ ಸಾಧಕನಾದವನೂ ಸ್ವಚ್ಛ ಹೃದಯಿಯೂ ಸ್ನೇಹಪರನೂ ಮಧುರಭಾಷಿಯೂ ಆಗಿದ್ದು ತನ್ನ ಸಂಪರ್ಕದಿಂದ ಮತ್ತೊಬ್ಬರಿಗೂ ಈ ಗುಣಗಳನ್ನು ಹುಟ್ಟಿಸುವಂತಾಗಬೇಕು.

ಸ್ವಚ್ಛಃ ಪ್ರಕೃತಿತಃ ಸ್ನಿಗ್ಧೋ ಮಧುರಸ್ತೀರ್ಥಭೂರ್ನೃಣಾಮ್ ।
ಮುನಿಃ ಪುನಾತ್ಯಘಾನ್ಮಿತ್ರಮೀಕ್ಷಣಸ್ಪರ್ಶಕೀರ್ತನೈಃ ॥ — ೧೧–೭–೪೪

ಎನ್ನುತ್ತಾನೆ.

'ಸಜ್ಜನನ ಮನಸ್ಸು ಸ್ವಚ್ಛ ನೀರಿನಂತೆಯೇ ಇರುತ್ತದೆ!' ಈ ಮಾತನ್ನು ವಾಲ್ಮೀಕಿಗಳು ತಮಸಾನದಿಯ ತೀರಕ್ಕೆ ಅನುಷ್ಠಾನಕ್ಕೆಂದು ಸಾಗಿದಾಗ ಹೇಳುತ್ತಾರೆ. ತಮಸೆಯ ನೀರು ಸಜ್ಜನನ ಮನದಂತಿದೆ– 'ಸನ್ಮನುಷ್ಯ ಮನೋ ಯಥಾ' ಎಂದು.

ನಿರ್ಮಲವಾದ ನೀರಿನಲ್ಲಿ ಸೂರ್ಯನ ಪ್ರತಿಬಿಂಬ ಮೂಡುತ್ತದೆ. ತೆರೆಗಳಿಂದ ಅಲ್ಲೋಲಕಲ್ಲೋಲವಾದ ನೀರಿನಲ್ಲಿ ಪ್ರತಿಬಿಂಬ ಮೂಡದು. ಅದರಂತೆ ರಾಗ ದ್ವೇಷಾದಿಗಳಿಂದ ದೂಷಿತವಾದ ಹೃದಯದಲ್ಲಿ ಬಿಂಬನಾದ ಭಗವಂತನು ಮೂಡನು. ಆದ್ದರಿಂದ ಭಗವಂತನು ಮೂಡಿಬರಬೇಕಿದ್ದರೆ ಮನಸ್ಸನ್ನು ಸ್ವಚ್ಛವಾಗಿಟ್ಟುಕೊಳ್ಳತಕ್ಕದ್ದು.

**೫. ಅಗ್ನಿ:** ಜ್ಞಾನಿಗಳು ಅಗ್ನಿಯಂತೆ. ಅಗ್ನಿಯು ಯಾವಾಗ ಹೇಗಿರುತ್ತದೆ ಎಂದು ಹೇಳಲಾಗದು.

ಕ್ವಚಿಚ್ಛನ್ನಃ ಕ್ವಚಿತ್ ಸ್ಪಷ್ಟ ಉಪಾಸ್ಯಃ ಶ್ರೇಯ ಇಚ್ಛತಾಮ್ ।
ಭುಂಕ್ತೇ ಸರ್ವತ್ರ ದಾತೃಣಾಂ ದಹನ್ ಪ್ರಾಗುತ್ತರಾಶುಭಮ್ ॥ — ೧೧–೭–೪೬

ಕೆಲವೊಮ್ಮೆ ಬೂದಿಯಿಂದ ಮುಚ್ಚಿರುತ್ತದೆ. ಕೆಲವೊಮ್ಮೆ ಪ್ರಕಾಶದ ಕಿಚ್ಚುಗಳಿಂದ ಕೂಡಿರುತ್ತದೆ. ಶ್ರೇಯಸ್ಸನ್ನು ಬಯಸುವವರಿಗೆ ಉಪಾಸನಾಯೋಗ್ಯವಾಗಿದೆ. ತನ್ನಲ್ಲಿ

ಹೋಮಿಸುವವರ ಪೂರ್ವೋತ್ತರ ಪಾಪಗಳನ್ನು ಪರಿಹರಿಸುತ್ತದೆ. ಅದರಂತೆ ಜ್ಞಾನಿಯೂ ಕೆಲವೊಮ್ಮೆ ಮರೆಯಾಗುತ್ತಾನೆ, ಕೆಲವೊಮ್ಮೆ ವ್ಯಕ್ತನಾಗುತ್ತಾನೆ. ಅವನಿಗೆ ದಾನ ಮಾಡಿದವರ ಪಾಪಗಳನ್ನೆಲ್ಲ ಪರಿಹರಿಸುತ್ತಾನೆ.

ಕಾಠಕ ಉಪನಿಷತ್ತು ಜ್ಞಾನಿಯಾದ ಅತಿಥಿಯನ್ನು ಅಗ್ನಿ ಎಂದಿದೆ– 'ವೈಶ್ವಾನರಃ ಪ್ರದಿಶತಿ ಅತಿಥಿರ್ಬ್ರಾಹ್ಮಣೋ ಗೃಹಾನ್' ಎಂದು. ಇದಕ್ಕೆ ಸಂವಾದಿಯಾಗಿ ರಹೂ ಗಣನ್ನು ಎಚ್ಚರಿಸಿದ ಜಡಭರತನನ್ನಾಗಲಿ, ಜಾನುಶ್ರುತಿಗೆ ಉಪದೇಶಿಸಿದ ರೈಕ್ವನನ್ನಾಗಲಿ ಕಾಣಬಹುದು.

ಒಬ್ಬನಿಗೆ ಬೀಡಿ ಸೇದುವ ಚಟ. ಬೆಂಕಿಗಾಗಿ ರಾತ್ರಿ ಹೊತ್ತಿನಲ್ಲಿ ಪಕ್ಕದ ಮನೆಗೆ ಲಾಟೀನು ಹಿಡಿದು ಸಾಗಿದ. ಅದರಂತೆ ನಮ್ಮಲ್ಲಿಯೂ ಸುಖವಿದೆ. ಅದನ್ನರಸುತ್ತಾ ಬೇರೆಡೆ ಸಾಗುತ್ತಿದ್ದೇವೆ. ಗಾಳಿ ಬಂದಾಗ ಬೂದಿ ಹಾರುವಂತೆ ಜ್ಞಾನಿ ಬಂದಾಗ ಅಜ್ಞಾನವೆಂಬ ಬೂದಿ ಹಾರುತ್ತದೆ. ಇಲ್ಲಿ ಬೀಸುವ ಗಾಳಿ ಎಂದರೆ ವಾಯುದೇವನ ಅವತಾರಭೂತರಾದ ಶ್ರೀಮದಾಚಾರ್ಯರು. ಇವರ ಆಗಮನದಿಂದ ಅಜ್ಞಾನದ ಬೂದಿ ಹಾರುತ್ತದೆ. ನಮ್ಮದೇ ಆದ ಜ್ಞಾನ, ಆನಂದ, ಶಕ್ತಿ ಎಲ್ಲವೂ ಪ್ರಕಟ ವಾಗುತ್ತದೆ.

ಅಥವಾ, ಭಗವಂತನು ಬೆಂಕಿಯಂತಿರುವವ. 'ಅರಣ್ಯೋರ್ನಿಹಿತೋ ಜಾತ ವೇದಃ'. ಅರಣಿ ಎಂದರೆ ಗುರುಶಿಷ್ಯರು. ಇವರಲ್ಲಿ ಪರಸ್ಪರ ತತ್ತ್ವಮಂಥನವಾದಾಗ ಭಗವಂತ ಪ್ರಕಟವಾಗುತ್ತಾನೆ. ಹಸಿ ಕಟ್ಟಿಗೆಯಲ್ಲಿ ಅಗ್ನಿಯ ಪ್ರಭಾವ ಕಡಮೆ. ಒಣಗಿದ ಕಟ್ಟಿಗೆಯಲ್ಲಿ ಅಧಿಕ. ಅದರಂತೆ ನಾವು ಹಸಿ ಕಟ್ಟಿಗೆಯಂತಿದ್ದೇವೆ. ಜ್ಞಾನಿಗಳು ಒಣಗಿದ ಕಟ್ಟಿಗೆಯಂತಿದ್ದಾರೆ. ನೀರಿನಲ್ಲಿ ಅದ್ದಿದ ಬತ್ತಿಯನ್ನು ಬೆಂಕಿಗಿಟ್ಟರೆ ಅದು ಚಟಚಟವೆಂದು ಸಿಡಿಯುವಂತೆ ನಮ್ಮ ಅಂತಃಕರಣವನ್ನು ವಿಷಯಗಳಲ್ಲಿ ಅದ್ದಿದ್ದೇವೆ. ಇದು ಸರಿಯಾದ ಜ್ಞಾನದ ಬೆಳಕು ನೀಡದು. ವಿಷಯಪದಾರ್ಥಗಳಿಂದ ದೂರವಾದ ಅಂತಃಕರಣವೆಂಬ ಒಣಗಿದ ಬತ್ತಿಯನ್ನು ಜ್ಞಾನವೆಂಬ ತುಪ್ಪದಲ್ಲಿ ಅದ್ದಬೇಕು. ಆಗ ಪ್ರಕಾಶಮಾನವಾದ ಭಗವಂತನು ಪ್ರಕಟನಾಗುತ್ತಾನೆ. ನಾವು ದಿನವೂ ಅಗ್ನಿಯನ್ನು ನೋಡುತ್ತೇವೆ. ಏನೂ ಅನ್ನಿಸುವುದಿಲ್ಲ. ಆದರೆ ಅವಧೂತಯೋಗಿಯು ಇಂತಹ ತಾತ್ತ್ವಿಕವಾದ, ಅಮೂಲ್ಯವಾದ ಸಂದೇಶವನ್ನು ತಿಳಿಸಿದ್ದಾರೆ.

**೬. ಚಂದ್ರ:** ಚಂದ್ರನಿಗೆ ವೃದ್ಧಿಕ್ಷಯಗಳಿಲ್ಲದಿದ್ದರೂ ಅವನ ಕಲೆಗಳಿಗೆ ಇವೆ. ಜಡವಾದ ಚಂದ್ರಮಂಡಲಕ್ಕೆ ವೃದ್ಧಿಕ್ಷಯಗಳಿಲ್ಲ. ಅದರಂತೆ ಜೀವರ ದೇಹಕ್ಕೆ ಉತ್ಪತ್ತಿನಾಶಗಳಿದ್ದರೂ ಜೀವರ ಸ್ವರೂಪಕ್ಕಿರುವುದಿಲ್ಲ. ಚಂದ್ರಮಂಡಲವನ್ನು ಕಂಡು ಜೀವರಿಗೂ ಆತ್ಮನಿಗೂ ಭೇದವನ್ನು ತಿಳಿಯಬೇಕು.

**೭. ಸೂರ್ಯ:** ಸೂರ್ಯನು ಕೆರೆ, ಬಾವಿ, ಸಮುದ್ರಗಳ ನೀರನ್ನು ತನ್ನ ಕಿರಣಗಳ ಮೂಲಕ ಸ್ವೀಕರಿಸುತ್ತಾನೆ. ಆದರೆ ಸ್ವೀಕರಿಸಿದ ನೀರನ್ನು ತನ್ನ ಸ್ವಾರ್ಥಕ್ಕಾಗಿ ವಿನಿಯೋಗಿಸಲಾರ. ಅದರಂತೆ ಜ್ಞಾನಿಗಳು ಇತರರಿಂದ ಸಂಪತ್ತನ್ನು ಸ್ವೀಕರಿಸಿದರೂ

ಯಾವುದೇ ವಿಧದ ಸ್ವಾರ್ಥಕ್ಕೆ ವಿನಿಯೋಗಿಸಲಾರ. ಯಂತ್ರಕ್ಕೆ ಯಾವ ಎಣ್ಣೆಯನ್ನು ಬೇಕಾದರೂ ಹಾಕಬಹುದು. ಅದರಿಂದ ಯಾವ ವಿಕಾರವೂ ಅದಕ್ಕಿಲ್ಲ. ಎಣ್ಣೆಯನ್ನು ಹಾಕುವುದು ಚಾಲನೆಗೆ ಮಾತ್ರ. ಧರ್ಮದ ಉಸಿರಾಟಕ್ಕಾಗಿ ಪದಾರ್ಥಗಳನ್ನು ಸ್ವೀಕರಿಸಬೇಕು. ಇಂತಹ ನಿರ್ಲಿಪ್ತತೆಯನ್ನು ಸೂರ್ಯನಿಂದ ಕಲಿಯಬೇಕು.

**೮. ಕಪೋತ:** ಪಾರಿವಾಳಗಳ ಒಂದು ಜೋಡಿಯು ಅನ್ಯೋನ್ಯ ದಾಂಪತ್ಯ ಜೀವನವನ್ನು ನಡೆಸುತ್ತಿದ್ದವು. ಹೀಗೆ ಒಂದು ದಿನ ಕಪೋತವು ಆಹಾರಕ್ಕೆಂದು ಹೊರಗೆ ಹೋದಾಗ ಬೇಡನೊಬ್ಬ ಬಂದ. ಗೂಡಿನಲ್ಲಿದ್ದ ಪಾರಿವಾಳದ ಮರಿಗಳನ್ನು ಕಪೋತಿಯನ್ನೂ ಬಲೆ ಬೀಸಿ ಬಂಧಿಸಿದ. ಆಹಾರವನ್ನು ಹೊತ್ತು ತಂದ ಪಾರಿವಾಳವು ಬೇಡನ ಬಲೆಯಲ್ಲಿದ್ದ ತನ್ನ ಪರಿವಾರದವರನ್ನು ಕಂಡು ಮೋಹದ ಬಲೆಗೆ ತುತ್ತಾಯಿತು. ಅವುಗಳಿಲ್ಲದ ಜೀವನವನ್ನು ಊಹಿಸಿ ತನ್ನ ಪ್ರಾಣವನ್ನು ಬಿಟ್ಟಿತು. ನಾವೂ ಸಹ ಕಲಿಯು ಬೀಸಿದ ಬಂಧುಮೋಹದ ಬಲೆಗೆ ಸಿಕ್ಕಿಬಿದ್ದಿದ್ದೇವೆ. ಆದರೆ ಇದರಿಂದ ಬಿಡುಗಡೆಯನ್ನೇ ಪಡೆಯಲಾಗದಾಗಿದೆ. ಉನ್ನತ ಉದ್ಯಮಕ್ಕಾಗಿ ಬಂದ ಚಿತ್ರಮಂದಿರಕ್ಕೆ ಹೋಗಿ ಬಂದಂತಾಗುತ್ತದೆ.

ಒಬ್ಬ ರಾಜನು ನಿರಪರಾಧಿಯಾದ ಬ್ರಾಹ್ಮಣನನ್ನು ಗಡೀಪಾರು ಮಾಡಿದ. ಕೆಲಸ ಬಿಟ್ಟು ನಡೆ ಎಂದ. ಬ್ರಾಹ್ಮಣನು ನಿನ್ನ ರಾಜ್ಯದ ಗಡಿ ಯಾವುದೆಂದು ರಾಜನ ಬಳಿ ಪ್ರತಿ ಪ್ರಶ್ನೆ ಹಾಕಿದಾಗ ರಾಜನು ನಿರುತ್ತರನಾದ. ಏಕೆಂದರೆ ಆ ರಾಜನು ಸಮಗ್ರ ದೇಶವೇ ತನ್ನದೆಂದು ಭಾವಿಸಿದ್ದ.

ಒಂದೋ ಎಲ್ಲವೂ ತನ್ನದು. ಅಥವಾ ಯಾವುದೂ ತನ್ನದಲ್ಲ. ಮೊದಲನೆಯದ್ದಲ್ಲ ವಾದಲ್ಲಿ ಎರಡನೆಯದಕ್ಕೆ ಮಣಿಯಬೇಕು. ವ್ಯಾಮೋಹ ಬಿಟ್ಟು ಕರ್ತವ್ಯನಿರತರಾಗ ಬೇಕು. ಈ ಗುಣವನ್ನು ಗ್ರಹಿಸುವ ಸಾಮರ್ಥ್ಯ ಪಡೆಯಬೇಕು.

**೯. ಅಜಗರ:** ಹೆಬ್ಬಾವು ತನ್ನ ಆಹಾರಕ್ಕಾಗಿ ಪರಿಶ್ರಮವನ್ನು ಪಡುವುದಿಲ್ಲ. ಸಿಕ್ಕಿದ್ದನ್ನು ಸ್ವೀಕರಿಸುತ್ತದೆ. ಇಲ್ಲವಾದರೆ ಬಹಳ ದಿನಗಳ ಕಾಲ ಉಪವಾಸವೇ ಇರುತ್ತದೆ. ಅದರಂತೆ ಜ್ಞಾನಿಗಳಾದವರು ಸುಖಕ್ಕಾಗಿ ಪ್ರಯತ್ನಪಡುವುದಿಲ್ಲ. ಜೀವನ ದಲ್ಲಿ ದುಃಖವು ಸಹಜವಾಗಿ ಬರುವಂತೆ ಸುಖವೂ ಸಹಜವಾಗಿ ಬರುತ್ತದೆ. ಅತ್ಯಂತ ವಿರಕ್ತರು ಶಿಲೋಂಛವೃತ್ತಿಯನ್ನೂ ಮಾಡದೆ ಬದುಕುತ್ತಾರೆ. ಆ ವೃತ್ತಿಗೂ ಪ್ರವೃತ್ತಿಯ ಅಗತ್ಯವಿದೆ ಎಂದು ಏನನ್ನೂ ಬಯಸದೆ ಹರಿಯೇ ರಕ್ಷಕ ಎಂಬ ವಿಶ್ವಾಸದಿಂದ ಸಂತೋಷದಿಂದ ಬದುಕುತ್ತಾರೆ. ಹೀಗೆ ತನ್ನಷ್ಟಕ್ಕೆ ಆಹಾರಗಳು ಬಂದಲ್ಲಿ ಸ್ವೀಕರಿಸುವುದು. ಇಲ್ಲವಾದಲ್ಲಿ ಇಲ್ಲ ಎಂಬ ತತ್ವವನ್ನು ಅಜಗರನಿಂದ ಕಲಿತೆ.

**೧೦. ಸಮುದ್ರ:** ಸಮುದ್ರವು ಮಳೆಗಾಲದಲ್ಲಿ ನೀರು ಬಹಳ ಬಂದಿತೆಂದು ಉಬ್ಬುವುದಿಲ್ಲ. ಮಳೆ ಬರಲೇ ಇಲ್ಲವೆಂದು ಕುಗ್ಗುವುದೂ ಇಲ್ಲ. ಪ್ರಸನ್ನತೆ ಗಾಂಭೀರ್ಯಗಳಿಂದ ಶೋಭಿಸುತ್ತದೆ. ಅದರಂತೆ ಸ್ಥಿತಪ್ರಜ್ಞರು ಎಂದೂ ವಿಕಾರಕ್ಕೆ

ಒಳಗಾಗದೆ ಇರುತ್ತಾರೆ. ಧರ್ಮದ ಹರವಿನ ಅರಿವು ಅಸಾಧ್ಯವಾದಂತೆ ಭಗವಂತನ ವ್ಯಕ್ತಿತ್ವವನ್ನು ಅನ್ವಾದೃಶವಾಗಿ ಮಾಡಿಸಿದ್ದಾರೆ ವಿಷಯವ್ಯಾಮೋಹ ತೊರೆದು, ಮೇರೆ ಮೀರಿ ವರ್ತಿಸಬಾರದೆಂಬ ತತ್ತ್ವವನ್ನು ಸಮುದ್ರದಿಂದ ಕಲಿತೆ.

**೧೧. ಪತಂಗ:** ಪತಂಗಗಳು ಎಣ್ಣೆಯ ದೀಪವು ಉರಿಯುವುದನ್ನು ಕಂಡು ಯಾವುದೋ ಒಂದು ಹಣ್ಣೆಂದು ಭ್ರಮಿಸಿ ಮೃತ್ಯುವಿಗೆ ತುತ್ತಾಗುತ್ತವೆ. ಅದರಂತೆ ಪ್ರಪಂಚದ ಬಣ್ಣದ ರೂಪಗಳಿಗೆ ಒಳಗಾಗಿ ನಿಷಿದ್ಧಕಾರ್ಯಗಳ ಕಡೆಗೆ ಕಣ್ಣು ಕೊಂಡೊಯ್ಯುತ್ತದೆ. ಆದ್ದರಿಂದ ಆತ್ಮನ ಒಳಿತನ್ನು ಬಯಸುವವನಾದರೆ ಸುಂದರ ವಾದ ವಿಷಯಭೋಗವಸ್ತುಗಳಿಂದ ನಿವೃತ್ತನಾಗಬೇಕು. ಅನರ್ಥದ ಹಾದಿಯನ್ನು ತಪ್ಪಿಸಿಕೊಳ್ಳಬೇಕು ಎಂಬುದನ್ನು ಪತಂಗರೂಪದಿಂದ ಕಲಿತೆ.

**೧೨. ಜೇನುಹುಳು:** ಸಂಪತ್ತನ್ನು ಕೂಡಿಟ್ಟರೆ ಜೇನುಹುಳುವಿನ ಗೂಡಿನಂತೆ ಎಲ್ಲವೂ ನಾಶವಾಗುತ್ತದೆ. ಕೂಡಿಟ್ಟ ಸಂಪತ್ತನ್ನು ಮತ್ತೊಬ್ಬರು ಉಪಭೋಗಿಸುತ್ತಾರೆ. ವಿತರಣೆಯಿಂದ ನಮ್ಮದಾಗುತ್ತದೆ. ದುಡ್ಡಿದ್ದೂ ದಾನ ಮಾಡದವನನ್ನು ದರಿದ್ರ ನಾಗಿಯೂ ತಪಸ್ವಿಯಾಗದವನನ್ನು ಕಲ್ಲುಕಟ್ಟಿ ಸಮುದ್ರಕ್ಕೆ ಹಾಕಬೇಕೆನ್ನುತ್ತದೆ ಮಹಾಭಾರತ– 'ಧನವಂತಮದಾತಾರಂ ದರಿದ್ರಂ ಚಾತಪಸ್ವಿನಮ್ ।' ಎಂದು.

ಒಮ್ಮೆ ಬ್ರಹ್ಮದೇವರ ಬಳಿ ದಾನವರು, ದೇವತೆಗಳು, ಮಾನವರು ಎಲ್ಲರು ಬಂದಾಗ ಬ್ರಹ್ಮದೇವರು ಮೂವರಿಗೂ ದ.ದ.ದ. ಎಂದು ನುಡಿದರು. ಮೊದಲು ದೈತ್ಯರಿಗೆ ದ = ಕ್ರೌರ್ಯವನ್ನು ಬಿಟ್ಟು 'ದಯೆ'ಯನ್ನು ಅಳವಡಿಸಿಕೊಳ್ಳಿ ಎಂದರು. ಮಾನವರಿಗೆ ಕ್ರೌರ್ಯವಿಲ್ಲದಿದ್ದರೂ ಲೋಭವಿರುವುದನ್ನು ಕಂಡು 'ದ = ದಾನ ಮಾಡಿರಿ' ಎಂದರು. ದೇವತೆಗಳಿಗೆ ಔದಾರ್ಯವಿದೆ ದಮವಿಲ್ಲವೆಂದು ದ = ದಮವಂತರಾಗಿರಿ (ಇಂದ್ರಿಯನಿಗ್ರಹಿಗಳಾಗಿರಿ), ದಾರಿತಪ್ಪಬೇಡಿರಿ ಎಂದರು. ನಾವು ದಾನ ಮಾಡಿದಾಗ ಮಾನವರಾಗುತ್ತೇವೆ. ಇಲ್ಲವಾದಲ್ಲಿ ದಾನವರಾಗುತ್ತೇವೆ. ದಯೆ, ದಮ, ದಾನಗಳ ಬುದ್ಧಿಯನ್ನು ಅಳವಡಿಸಿಕೊಳ್ಳಿರಿ ಎಂದರೆ ಮದ, ಕ್ರೌರ್ಯ, ಕೃಪಣತೆಗಳನ್ನು ಅಳವಡಿಸಿಕೊಂಡಿದ್ದೇವೆ. ಇವುಗಳನ್ನು ಬಿಡಬೇಕು. ಹೀಗೆ ಜೇನು ಹುಳುವಿನಿಂದ ಅತಿ ಸಂಗ್ರಹ ಅನರ್ಥಕ್ಕೆ ದಾರಿ ಎಂದು ತಿಳಿದೆ ಎನ್ನುತ್ತಾನೆ ಅವಧೂತ.

**೧೩. ಆನೆ:** ಗಂಡಾನೆಯು ಹೆಣ್ಣಾನೆಯ ಸ್ಪರ್ಶಸುಖಕ್ಕಾಗಿ ಹಂಬಲಿಸಿ ಹೋಗಿ ಖೆಡ್ಡಾದಲ್ಲಿ ಬಿದ್ದು ಹಿಂಸೆಯನ್ನನುಭವಿಸುತ್ತದೆ. ಅದರಂತೆ ಸ್ತ್ರೀಯರ ಬಗ್ಗೆ ಆದಷ್ಟು ಎಚ್ಚರದಿಂದ ಇರಬೇಕು. ಚಾಪಲ್ಯದಿಂದ ವರ್ತಿಸಿದರೆ ಅನರ್ಥಕ್ಕೆ ಗುರಿಯಾಗುತ್ತೇವೆ.

**೧೪. ಬೇಡ:** ಕಾಡಿನಲ್ಲಿ ಜೇನುಹುಳುಗಳು ಸಂಗ್ರಹಿಸಿಟ್ಟ ಮಧುವನ್ನು ಅಲ್ಲಿಯ ಬೇಡ ಸುಲಭವಾಗಿ ಸಂಗ್ರಹಿಸುತ್ತಾನೆ. ತಾನು ತಿನ್ನದೆ ಮತ್ತೊಬ್ಬರಿಗೂ ಕೊಡದೆ ಇರುವ ಧನ ಮತ್ತೊಬ್ಬರಿಗೆ ದೊರಕುವಂತೆ ಗೃಹಸ್ಥರು ಸಂಪಾದಿಸಿಟ್ಟದ್ದು ಸಂನ್ಯಾಸಿಗೆ

ದೊರಕುತ್ತದೆ. ಶ್ರಮವಿಲ್ಲದೆ ಸುಖಪಡುವ ಬೇಡನನ್ನು ಕಂಡು ದ್ರವ್ಯವು ಅನಾಯಾಸವಾಗಿ ಲಭಿಸುವುದೆಂದು ಭಾವಿಸಿದೆನು.

**೧೫. ಜಿಂಕೆ:** ಜಿಂಕೆಯು ಬೇಟೆಗಾರರು ಊದುವ ಪುಂಗಿಗೆ ವಶವಾಗಿ ಸಿಕ್ಕಿಬೀಳುತ್ತದೆ. ಅದರಂತೆ ಯೋಗಿಯಾಗಬಯಸಿದವ ಗ್ರಾಮ್ಯಗೀತೆಗಳಿಗೆ ಕಿವಿ ಕೊಟ್ಟರೆ ಕೆಟ್ಟು ಹೋಗುತ್ತಾನೆ. 'ಗ್ರಾಮ್ಯಗೀತಂ ನ ಶೃಣುಯಾತ್ ಯತಿರ್ವನಚರಃ ಕ್ವಚಿತ್' ಎಂದು ಎಚ್ಚರಿಸುತ್ತಾನೆ. ಇಂದ್ರಿಯಗಳನ್ನು ನಮ್ಮ ಹದ್ದುಬಸ್ತಿನಲ್ಲಿ ಇಟ್ಟು ಕೊಳ್ಳದಿದ್ದರೆ ಅನರ್ಥಕ್ಕೆ ತುತ್ತಾಗುತ್ತೇವೆಂದು ಇದರಿಂದ ಅರಿಯಬಹುದು.

**೧೬. ಮೀನು:** ಮೀನುಗಳು ಜಿಹ್ವಾಚಾಪಲ್ಯದಿಂದ ಗಾಳಕ್ಕೆ ಬಾಯಿಹಾಕಿ ಮೃತ್ಯುವಿಗೆ ತುತ್ತಾಗುತ್ತವೆ. ಯೋಗಿಯಾದವನು ರಸನೇಂದ್ರಿಯವನ್ನು ಗೆಲ್ಲಬೇಕು. ಇಲ್ಲವಾದಲ್ಲಿ ಸಿದ್ಧಿಯನ್ನು ಪಡೆಯಲಾರ. ಎಲ್ಲ ಇಂದ್ರಿಯಗಳನ್ನು ಉಪವಾಸ ಕೆಡಹುವುದರಿಂದ ಉಪಶಮನಗೊಳಿಸಬಹುದು. ಆದರೆ ಜಿಹ್ವೆಯನ್ನು ಮಾತ್ರ ಉಪಶಮನಗೊಳಿಸಲಾಗದು. ಉಪವಾಸದಿಂದ ಮತ್ತಷ್ಟು ತಿನ್ನುವ ಚಪಲ ವೃದ್ಧಿ ಯಾಗುತ್ತದೆ ಎನ್ನುತ್ತದೆ ಭಾಗವತ–

**ಇಂದ್ರಿಯಾಣಿ ಜಯಂತ್ಯಾಶು ನಿರಾಹಾರಾಃ ಮನೀಷಿಣಃ ।**
**ವರ್ಜಯಿತ್ವಾ ತು ರಸನಮಸೌ ರಸ್ಯೇ ಹಿ ವರ್ಧತೇ ॥** — ೧೧-೮-೧೬

**೧೭. ಪಿಂಗಳಾ:** ಒಬ್ಬ ಪಿಂಗಳೆ ಎನ್ನುವ ವೇಶ್ಯೆಯನ್ನು ಕಂಡೆನು. ಆಕೆಯು ಪ್ರತಿ ನಿತ್ಯವೂ ಸುಂದರವಾಗಿ ಅಲಂಕರಿಸಿಕೊಂಡು ವಿಟಪುರುಷನಿಗಾಗಿ ನಿರೀಕ್ಷಿಸುತ್ತಿದ್ದಳು. ಹೆಚ್ಚಿನ ದ್ರವ್ಯದ ಆಸೆಯಿಂದ ಅಲ್ಪ ಧನಿಗಳಾದ ವಿಟಪುರುಷರನ್ನು ಪರಿತ್ಯಜಿಸಿದಳು. ಧನಿಕರಿಗಾಗಿ ಕಾದಳು. ಪ್ರತಿನಿತ್ಯವೂ ಹೀಗೆಯೇ ನಿರೀಕ್ಷಿಸುತ್ತಾ ಯಾರೂ ಬಾರದೇ ಇದ್ದಾಗ ಬೇಸತ್ತು ಒಳಗೆ ತೆರಳಿ ನಿದ್ರಿಸುವಳು. ಕೊನೆಗೊಮ್ಮೆ ಅವಳಿಗೆ ಜ್ಞಾನ ಬಂತು. ಛೆ! ನಾನೆಷ್ಟು ತಪ್ಪಿ ನಡೆದೆ. ದ್ರವ್ಯವನ್ನು ಮಾತ್ರವಲ್ಲದೆ ನನ್ನ ಸಕಲ ಅಭೀಷ್ಟಗಳನ್ನು ನೆರವೇರಿಸುವ ರಮಣನನ್ನು ನನ್ನ ಹೃದಯದಲ್ಲಿಯೇ ಹೊತ್ತಿರುವೆ. ಈ ಎಚ್ಚರವಿಲ್ಲದೆ ಕ್ಷಣಿಕ ಸುಖಗಳಿಗೆ ಬಲಿಯಾದೆನಲ್ಲ. ಇನ್ನೆಂದೂ ದುರಾಶೆಗೆ ಬುದ್ಧಿ ಕೊಡೆನು. ನನ್ನ ಅಂತರ್ಯಾಮಿಯಾದ ಭಗವಂತನೊಟ್ಟಿಗೇ ವಿಹರಿಸುವೆನು ಎಂದು ನಿಶ್ಚಯಿಸಿ ನಿಶ್ಚಿಂತಳಾದಳು.

**ಆಶಾ ಹಿ ಪರಮಂ ದುಃಖಂ ನೈರಾಶ್ಯಂ ಪರಮಂ ಸುಖಮ್ ।**
**ಯಥಾ ಸಂಛಿದ್ಯ ಕಾಂತಾಶಾಂ ಸುಖಂ ಸುಷ್ವಾಪ ಪಿಂಗಲಾ ॥** — ೧೧-೮-೪೩

ಆಶೆಯೇ ದುಃಖಕ್ಕೆ ಕಾರಣ. ನಿರಾಶೆಯು ಪರಮ ಸುಖಕರ. ಕಾಂತನ ಆಸೆಯನ್ನು ತೊರೆದ ಬಳಿಕವೇ ಪಿಂಗಳೆಯು ಸುಖನಿದ್ರೆಯನ್ನು ಮಾಡಿದಳು. ಇವಳನ್ನು ಕಂಡು ನಿರಾಶೆಯನ್ನು ಅಳವಡಿಸಿಕೊಂಡೆನು ಎನ್ನುತ್ತಾನೆ ಅವಧೂತ.

**೧೮. ಕುರರಪಕ್ಷಿ:** ಒಂದು ಪಕ್ಷಿಯು ಮಾಂಸದ ತುಂಡನ್ನು ಕಚ್ಚಿಕೊಂಡಿತು. ಅದಕ್ಕೆ ಇತರ ಪಕ್ಷಿಗಳು ಬಂದು ಕಸಿದುಕೊಳ್ಳುವ ಭಯ ಆರಂಭವಾಯಿತು.

ಒಂದೆಡೆ ಕುಳಿತು ನಿಶ್ಚಿಂತೆಯಿಂದ ತಿನ್ನಲೂ ಆಗಲಿಲ್ಲ. ಭಯದಿಂದ ಹಾಗೆಯೇ ಕುಳಿತಾಗ ಗಿಡುಗವೊಂದು ಆ ಮಾಂಸದ ತುಂಡನ್ನು ಕಿತ್ತುಕೊಂಡು ಹಾರಿತು ಅನಂತರ ಈ ಕುರರ ಪಕ್ಷಿಯು ಭಯದಿಂದ ಮುಕ್ತವಾಯಿತು. ವಸ್ತುವಿನಲ್ಲಿ ನಮ್ಮದೆಂಬ ಅಭಿಮಾನ ಹುಟ್ಟಿದರೆ ಅದರೊಟ್ಟಿಗೆ ಭಯವೂ ಹುಟ್ಟುತ್ತದೆ. ಅದನ್ನು ಬಿಟ್ಟರೆ ಭಯವೂ ಹುಟ್ಟದು ಎಂಬುದನ್ನು ಒಂದು ಪಕ್ಷಿಯಿಂದ ಕಲಿತೆ.

**೧೯. ಮಗು:** ಒಂದು ಸಣ್ಣಮಗುವಿಗೆ ಮಾನಾವಮಾನಗಳ ವಿಷಯದಲ್ಲಿ ಚಿಂತೆ ಯಿಲ್ಲ; ಮನೆ, ಮಡದಿ ಎಂಬ ಸಂಸಾರದ ಚಿಂತೆಯಿಲ್ಲ. ಯಾವುದೇ ಉಡುಪು ವ್ಯೆಯಾರಗಳ ಬಯಕೆಯೂ ಇಲ್ಲದೆ ಸಂತೋಷದಿಂದ ಎಲ್ಲ ಕಡೆ ಸಂಚರಿಸುವಂತೆ ಯೋಗಿಯಾದವನು ನಿಶ್ಚಿಂತನಾಗಿರಬೇಕು. ಇದನ್ನು ಮಗುವಿನಿಂದ ಕಂಡುಕೊಂಡೆ.

**೨೦. ಕುಮಾರಿ:** ಒಂದೂರಿನಲ್ಲಿ ಒಬ್ಬ ಕುಮಾರಿ ಇದ್ದಳು. ಅವಳಿಗೆ ವಿವಾಹ ಕಾಲವು ಪ್ರಾಪ್ತವಾದಾಗ ಅವಳನ್ನು ನೋಡಿ ವರಿಸಲು ಬಂದವರಿಗೆ ಆತಿಥ್ಯವನ್ನು ಮಾಡುವ ಪ್ರಸಂಗ ಬಂತು. ಭತ್ತ ಕುಟ್ಟಲು ತೊಡಗಿದಾಗ ಅವಳ ಕೈಗಳಲ್ಲಿಯ ಬಳೆಗಳು ಸದ್ದು ಮಾಡುತ್ತಿದ್ದವು. ಇದರಿಂದ ಬಂದವರು ಬಡತನವನ್ನು ತಿಳಿದಾರೆಂದು ಚತುರೆಯಾದ ಆಕೆಯು ಬಳೆಗಳೆಲ್ಲವನ್ನೂ ತೆಗೆದು ಒಂದನ್ನು ಮಾತ್ರ ಉಳಿಸಿಕೊಂಡಳು. ಸದ್ದಿಲ್ಲದೆ ಕೆಲಸ ಮಾಡಿದಳು. ಏಕಾಂಗಿತನದಿಂದ ಜಗಳಕ್ಕೆ ಗಲಾಟೆಗಳಿಗೆ ಅವಕಾಶವಿಲ್ಲ ಎಂಬುದನ್ನು ಆಕೆಯ ಪ್ರವೃತ್ತಿಯಿಂದ ಕಂಡುಕೊಂಡಳು.

**೨೧. ಬಾಣಗಾರ:** ಒಬ್ಬ ಬಾಣಗಾರನು ಹರಿತವಾದ ಬಾಣವೊಂದನ್ನು ನಿರ್ಮಿಸುವಾಗ ತನ್ನ ಪಕ್ಕದಲ್ಲಿಯೇ ಚಕ್ರವರ್ತಿಯು ಹೋದರು ಅದನ್ನು ಅರಿಯಲಿಲ್ಲ. ತನ್ನ ಕಾರ್ಯದಲ್ಲಿಯೇ ತಾನು ಮಗ್ನನಾಗಿದ್ದಾನೆ. ಅದರಂತೆ ಒಂದೇ ವಿಷಯದಲ್ಲಿ ಮನಸ್ಸನ್ನು ನೆಲೆಗೊಳಿಸಬೇಕು ಎಂಬ ತತ್ತ್ವವನ್ನು ಅವನಿಂದ ಕಲಿತೆ.

**೨೨. ಸರ್ಪ:** ಸರ್ಪವು ಯಾವುದೇ ರೀತಿಯ ಮನೆಯನ್ನು ಕಟ್ಟದೆ ಇಲಿಯು ನಿರ್ಮಿಸಿದ ಮನೆಯಲ್ಲಿ ಸುಖವಾಗಿ ಮಲಗುತ್ತದೆ. ಅಲ್ಪಾಯುಷ್ಯವುಳ್ಳ ಮನುಷ್ಯನೂ ಮನೆಯನ್ನು ಕಟ್ಟುವುದು ವ್ಯರ್ಥ. ಅಸ್ಥಿರವಾದ ಫಲಕ್ಕಾಗಿ ಸಮಯ ಚೆಲ್ಲ ಬೇಕಾಗುತ್ತದೆ. 'ಗೃಹಾರಂಭೋ ಹಿ ದುಃಖಾಯ ವಿಫಲಶ್ಚಾಧ್ರುವಾತ್ಮನಃ ।' ಸರ್ಪ ದಂತೆ ಏಕಾಂಗಿಯಾಗಿ ಯಾವುದಾದರೂ ಒಂದು ತಾಣದಲ್ಲಿದ್ದು ಭಗವಚ್ಚಿಂತನೆ ನಡೆಸಬೇಕು. ಇದನ್ನು ಸರ್ಪದಿಂದ ತಿಳಿದುಕೊಂಡೆ.

**೨೩. ಜೇಡರ ಹುಳು:** ಜೇಡರ ಹುಳುವು ತನ್ನ ನಾಭಿಯಿಂದ ನೂಲನ್ನು ತೆಗೆದು ಬಲೆಯಾಕಾರದ ಗೂಡನ್ನು ನಿರ್ಮಿಸುತ್ತದೆ. ಅನಂತರ ಅದನ್ನು ತನ್ನ ಉದರದಲ್ಲಿಯೇ ಧರಿಸುತ್ತದೆ. ಅದರಂತೆ ಭಗವಂತನು ಉದರದಲ್ಲಿರುವ ಸೂಕ್ಷ್ಮವಾದ ಜಗತ್ತನ್ನು ಸೃಷ್ಟಿಸಿ ಮತ್ತೆ ತನ್ನ ಉದರದಲ್ಲಿ ಹಾಕಿಕೊಳ್ಳುತ್ತಾನೆ.

**೨೪. ಕಣಜದ ಹುಳು:** ಈ ಕೀಟವು ಒಂದು ಕೃಮಿಯನ್ನು ತಂದು ಅದರ ತಲೆಗೆ ಕುಕ್ಕುತ್ತಿರುತ್ತದೆ. ನಿರಂತರವೂ ಕಣಜದ ಭೀತಿಯಿಂದ ಅದನ್ನೇ ಧ್ಯಾನ ಮಾಡುತ್ತಿರುವ ಕೀಟವು ಕಾಲಾಂತರದಲ್ಲಿ ಕೀಟದಂತೆಯೇ ಆಕೃತಿಯನ್ನು ಹೊಂದುತ್ತದೆ. ಅದರಂತೆ ನಿರಂತರ ಭಗವಂತನ ಗುಣರೂಪಗಳನ್ನು ಚಿಂತಿಸುವವ ಭಗವಂತನ ಸಾರೂಪ್ಯವಾದ ಮೋಕ್ಷವನ್ನು ಹೊಂದುತ್ತಾನೆ.

ಈ ರೀತಿಯಾಗಿ ವಿಸ್ತಾರವಾಗಿ ಅನೇಕ ಗುರುಗಳಿಂದ ಪಾಠ ಕಲಿತ ಕ್ರಮವನ್ನು ಅವಧೂತರು ತಿಳಿಸಿದ್ದಾರೆ. ನಾವು ಬದುಕುತ್ತಿರುವ ಪ್ರಕೃತಿಯಿಂದಲೇ ದೊಡ್ಡ ಪಾಠವನ್ನು ಕಲಿಯಬಹುದಾಗಿದೆ. ತತ್ವದ ಚಿಂತನೆಯಲ್ಲಿ ತಮ್ಮನ್ನು ತೊಡಗಿಸಿ ಕೊಂಡವರಿಗೆ ಜಗತ್ತು ಇಷ್ಟೆಲ್ಲ ಭಾವನೆಗಳಿಂದ ಗೋಚರಿಸಿ ಅಧ್ಯಾತ್ಮದ ದಾರಿಗೆ ಪೂರಕವಾಗುತ್ತದೆ ಹೀಗೆ ಯದು ಮಹಾರಾಜನಿಗೆ ಜ್ಞಾನೋಪದೇಶ ನೀಡಿ ಅವಧೂತರು ತೆರಳುತ್ತಾರೆ.

## ಕರ್ಮ ಮತ್ತು ಕರ್ಮಿಗಳ ವಿಶ್ಲೇಷಣೆ

ಪ್ರವೃತ್ತಕರ್ಮ ಮತ್ತು ನಿವೃತ್ತಕರ್ಮಗಳ ಬಗ್ಗೆ ಗೀತೆ, ಉಪನಿಷತ್ತು, ಭಾಗವತಗಳಲ್ಲಿ ವಿಸ್ತಾರವಾದ ಚಿಂತನೆಯಿದೆ.

ಪ್ರವೃತ್ತಕರ್ಮಗಳೆಂದರೆ– ಫಲಾಪೇಕ್ಷೆಯಿಂದ ಮಾಡುವ ಕ್ಷುದ್ರಕರ್ಮಗಳು.

ನಿವೃತ್ತಕರ್ಮಗಳೆಂದರೆ– ಫಲಾಪೇಕ್ಷೆಯಿಲ್ಲದೆ ಮಾಡುವ ಸಾತ್ವಿಕಕರ್ಮಗಳು.

ಇವುಗಳಿಗೆ ಸುಂದರ ದೃಷ್ಟಾಂತವು ಭಾಗವತದಲ್ಲಿದೆ.

**ಅದಂತಿ ಚೈಕಂ ಫಲಮಸ್ಯ ಗೃಧ್ರಾ**
**ಗ್ರಾಮೇಚರಾ ಏಕಮರಣ್ಯವಾಸಾಃ ।**
**ಹಂಸಾ ಯ ಏಕಂ ಬಹುರೂಪಮಿಷ್ಟಂ**
**ಮಾಯಾಮಯಂ ವೇದ ಸ ವೇದ ವೇದಮ್ ॥** — [೧೧-೧೨-೨೩]

ಹಂಸ ಮತ್ತು ಗಿಡುಗಗಳೆಂಬ ಎರಡು ಪಕ್ಷಿಗಳ ಪರಿಚಯ ನಮಗಿದೆ. ಗಿಡುಗ ಗಳು ಆಕಾಶದಲ್ಲಿ ಹಾರಾಡುತ್ತಿರುತ್ತವೆ. ಅವುಗಳ ಪರಿಭ್ರಮಣೆ ಆಹಾರಕ್ಕಾಗಿ. ಎಲ್ಲಿ ಕೊಳೆತ ದುರ್ವಾಸನೆ ಬರುವ ಪದಾರ್ಥಗಳಿವೆಯೋ ಅಲ್ಲಿಗೆ ಸಾಗುತ್ತವೆ. ಸತ್ತ ಪ್ರಾಣಿಗಳ ಮಾಂಸವನ್ನು ಕಿತ್ತು ತಿನ್ನಲು ಗಿಡುಗಳ ಪಡೆಯೇ ಒಟ್ಟುಗೂಡುತ್ತದೆ.

ಕಾಡಿನಲ್ಲಿ ಸಂಚರಿಸುತ್ತಾ ಕೆಟ್ಟ ಪದಾರ್ಥಗಳನ್ನು ಬಯಸುವ ಗಿಡುಗಗಳಂತೆ ಕೆಟ್ಟ ಕಾಮನೆಗಳಲ್ಲಿಯೇ ಆಸಕ್ತಿಯನ್ನು ವಹಿಸುವುದು ಪ್ರವೃತ್ತಕರ್ಮ ಎನಿಸುತ್ತದೆ. ಅಜ್ಞಾನಿಗಳು ಕೆಟ್ಟ ಕರ್ಮಗಳಲ್ಲಿಯೇ ಆಸಕ್ತಿ ತಾಳುತ್ತಾರೆ.

ಅದರಂತೆ ಹಂಸಗಳಿವೆ. ಇವುಗಳು ಸ್ವಚ್ಛವಾದ ಸರೋವರವನ್ನು ಬಯಸುತ್ತವೆ. ಕಮಲಗಳು ತುಂಬಿದ ನಿರ್ಮಲ ಜಲದಲ್ಲಿ ವಿಹರಿಸುತ್ತವೆ. ನಿರ್ಮಲ ಸರೋವರವನ್ನು

ಬಯಸುವ ಹಂಸಗಳಂತೆ ನಿರ್ದೋಷನಾದ ಭಗವಂತನಿಗೆ ಸಂಬಂಧಿಸಿದ ಕರ್ಮಗಳಲ್ಲಿಯೇ ಆಸಕ್ತಿಯನ್ನು ಹೊಂದುವುದಕ್ಕೆ ನಿವೃತ್ತಕರ್ಮ ಎನ್ನುತ್ತಾರೆ. ಈ ನಿವೃತ್ತ ಕರ್ಮದಲ್ಲಿ ಭಕ್ತಿ ಮತ್ತು ತ್ಯಾಗ ಎರಡು ಅಂಶಗಳಿವೆ.

ನಾವು ಏನು ಕಾರ್ಯ ಮಾಡಿದರೂ ಭಗವಂತನ ಸೇವಾರೂಪವಾಗಿ ಮಾಡಬೇಕು. 'ವಿಷ್ಣು ಪ್ರೇರಣಯಾ ವಿಷ್ಣು ಪ್ರೀತ್ಯರ್ಥಂ' ಎಂದು ಸಂಕಲ್ಪಿಸಬೇಕು

ಕೃಷ್ಣನ ಮಾತೂ ಇದೆ

'ಎಲ್ಲರಿಗೂ ಎಲ್ಲಿ ಕತ್ತಲೆಯೋ ಬಾನಿಗೆ ಅಲ್ಲಿ ಹಗಲು'

'ಎಲ್ಲರಿಗೂ ಯಾವುದು ಹಗಲೋ ಬಾನಿಗೆ ಅದು ರಾತ್ರಿ' –ಏನು ಇದರ ಅರ್ಥ?

ನಮಗೆಲ್ಲರಿಗೂ ಭಗವಂತನ ಕಡೆ ನಿರ್ಲಕ್ಷ್ಯ. ಅವನ ಬಗ್ಗೆ ಸರಿಯಾದ ಜ್ಞಾನವಿಲ್ಲ. ಅಜ್ಞಾನವೆಂಬ ಕತ್ತಲು ತುಂಬಿದೆ. ಆದರೆ ಜ್ಞಾನಿಗಳು ಭಗವಂತನ ಬಗ್ಗೆ ಸರಿಯಾಗಿ ತಿಳಿದಿದ್ದಾರೆ. ಭಗವಂತನ ಜ್ಞಾನವೆಂಬ ಮುಂಜಾವದ ಬೆಳಕಿನ ಮಂಗಳಸ್ನಾನದಲ್ಲಿ ಮೈಮರೆತಿದ್ದಾರೆ.

ನಾವೆಲ್ಲರೂ ಭೌತಿಕ ಜಗತ್ತಿನಲ್ಲಿ ಮುಳುಗಿದ್ದೇವೆ. ಜ್ಞಾನಿಗೆ ಭೌತಿಕ ಜಗತ್ತು ಕತ್ತಲಿನಂತಿದೆ. ಅವನ ದೃಷ್ಟಿಯೇ ಈ ಕಡೆ ಚಲಿಸದು.

ನಾವೆಲ್ಲರೂ ವಿಷಯಪದಾರ್ಥಗಳನ್ನು ಆಸಕ್ತಿಯಿಂದ ಅನುಭವಿಸಿದರೆ ಜ್ಞಾನಿಯಾದವ ನಿರಾಮಯನಾಗಿ ಅಗತ್ಯವೆಂದು ಸ್ವೀಕರಿಸುತ್ತಾನೆ.

ಯಂತ್ರಕ್ಕೆ ಎಣ್ಣೆಯನ್ನು ಹಾಕುತ್ತೇವೆ. ಯಂತ್ರ ಚಲಿಸಲಿಕ್ಕಾಗಿ ಎಣ್ಣೆ. ಎಣ್ಣೆ ಬಿದ್ದ ಕೂಡಲೇ ಯಂತ್ರ ಕಾರ್ಯನಿರತವಾಗುತ್ತದೆ. ಜ್ಞಾನಿಗಳು ಈ ಯಂತ್ರದಂತೆ ಇದ್ದಾರೆ.

ಜ್ಞಾನಿಗಳ ದೃಷ್ಟಿಯೂ ಹೀಗೆಯೇ. ಈ ದೇಹ ಭಗವದ್ಭಕ್ತಿಯ ಯಂತ್ರ.

ಮಿತವಾದ ಆಹಾರಸೇವನೆಯಿಂದ ಹರಿಪರವಾದ ಕರ್ತವ್ಯಗಳು ಸಾಗುತ್ತವೆ. ಭಗವಂತನ ಸೇವೆಗೆ ಅನುಕೂಲವಾಗಲೆಂದು ಆಹಾರ ಸೇವಿಸುತ್ತಾರೆ. ಆದ್ದರಿಂದ ಜ್ಞಾನಿಗಳು ಭೌತಿಕ ಪದಾರ್ಥಗಳನ್ನು ಸ್ವೀಕರಿಸಿದರೂ ಅನರ್ಥಕ್ಕೆ ಗುರಿಯಾಗಲಾರರು.

ಮದ್ಯಪಾನದಿಂದ ಉನ್ಮತ್ತನಾದ ವ್ಯಕ್ತಿ ಲೋಕವನ್ನೇ ಮರೆತಂತೆ.

ಭಗವದ್ಭಕ್ತಿಯ ಅಮಲಿನಲ್ಲಿ ತೇಲಾಡುವ ಜ್ಞಾನಿಗೆ ಈ ಲೋಕದ ಪರಿವೇ ಇರದು.

ಇಂತಹ ನಿವೃತ್ತಿಕರ್ಮವನ್ನರಿತು ನಡೆಯುವುದರಲ್ಲಿಯೇ ಜೀವನದ ಸಾರ್ಥಕ್ಯ ಅಡಗಿದೆ.

ಮುಂದೆ ಭಗವಂತನು ಉದ್ಧವರಿಗೆ ಮೋಕ್ಷಕ್ಕೆ ಸಾಧನಗಳಾದ ಅನೇಕ ಪ್ರಕಾರಗಳನ್ನು ವರ್ಣಾಶ್ರಮಧರ್ಮಗಳನ್ನೆಲ್ಲ ವಿಸ್ತಾರವಾಗಿ ಉಪದೇಶಿಸುತ್ತಾನೆ.

ಸ್ವಾರ್ಥಕ್ಕೊಂದು ಉಪಾಯ

ಹಿಂದಿನ ಮಹನೀಯರೆಲ್ಲರೂ ಭೌತಿಕಸಂಪತ್ತು ನಶ್ವರ ಎಂದೆನಿಸಿದಾಗ ದಾರಿದ್ರ್ಯವೆಂಬ ಸಂಪತ್ತಿಗೇ ಶರಣಾಗಿ, ಸರ್ವಸ್ವವನ್ನೂ ತ್ಯಾಗಮಾಡಿ ಬೀದಿಗೆ ಬಂದರು.

ಇಂದು ನಾವು ಅಂತಹ ತ್ಯಾಗಕ್ಕೆ ಸಿದ್ಧರಿಲ್ಲ. ಪರಮಪದವಿಯ ಆಕಾಂಕ್ಷೆಯಿಂದಲೂ ನಿವೃತ್ತರಾಗಿಲ್ಲ. ಹಣವೂ ಬೇಕು. ಪರಲೋಕವೂ ಬೇಕು. ಇದ್ದದ್ದೆಲ್ಲವೂ ಬೇಕು. ಹೀಗಿದ್ದಲ್ಲಿ ನಾವೇನು ಮಾಡಬೇಕು? ಚಿಂತೆ ಬೇಡ.

ಇದಕ್ಕೂ ಒಂದು ಉಪಾಯವಿದೆ.

ಹುಡಿಗಾಸನ್ನೂ ಬಿಡದೆ ಎಲ್ಲವನ್ನೂ ನಮ್ಮೊಟ್ಟಿಗೆ ತೆಗೆದುಕೊಂಡು ಹೋಗಬಹುದು. ಹೇಗೆ?

ನಮ್ಮಲ್ಲಿ ಅನೇಕಮಂದಿ ವಿದೇಶಕ್ಕೆ ಹೋಗುವವರಿದ್ದಾರೆ ಪೋಗುವಾಗ ತಮ್ಮಲ್ಲಿರುವ ಹಣವನ್ನು ಹಾಗೆಯೇ ತೆಗೆದುಕೊಂಡು ಹೋಗಲು ಸಾಧ್ಯವಿಲ್ಲ. ತೆಗೆದುಕೊಂಡು ಹೋದರೂ ಅದಕ್ಕಲ್ಲಿ ಬೆಲೆಯಿಲ್ಲ. ಚಲಾವಣೆಯಿಲ್ಲ. ಅದಕ್ಕೆ ನಾವೇನು ಮಾಡುತ್ತೇವೆ?

ನಮ್ಮಲ್ಲಿರುವ ರುಪಾಯಿಯನ್ನು ಡಾಲರ್ (Dollar) ರೂಪದಲ್ಲಿ ಪರಿವರ್ತಿಸಿಕೊಳ್ಳುತ್ತೇವೆ. ಅನಂತರ ಬೇಕಾದ ಸಾಮಾನುಗಳನ್ನು ಅಲ್ಲಿ ಪಡೆದುಕೊಳ್ಳುತ್ತೇವೆ.

ಅದರಂತೆ ನಾವೂ ಸಹ ಪರದೇಶಕ್ಕಲ್ಲ, ಪರಲೋಕಕ್ಕೇ ಸಾಗಬೇಕಿದೆ. ಅಲ್ಲಿಗೂ ನಮ್ಮ ಸಂಪತ್ತನ್ನು ಹೊತ್ತೊಯ್ಯಬೇಕೆಂಬ ಆಸೆ ನಮಗಿದೆ. ಆದರೆ ಅಮೆರಿಕದಲ್ಲಿ ನಮ್ಮ ಹಣಕ್ಕೆ ಚಲಾವಣೆ ಇಲ್ಲದಂತೆ ಇಂದ್ರಲೋಕದಲ್ಲಿಯೂ ನಮ್ಮ ಹಣವನ್ನು ಕೇಳುವವರೇ ಇಲ್ಲ.

ಪರದೇಶಗಾಮಿಗಳು ಹಣವನ್ನು ಡಾಲರ್ ರೂಪದಲ್ಲಿ ಪರಿವರ್ತಿಸಿಕೊಂಡಂತೆ ನಾವೂ ಸಹ ನಮ್ಮ ಹಣವನ್ನು ಸತ್ಕಾರ್ಯಗಳಲ್ಲಿ ವಿನಿಯೋಗಿಸಿ ಪುಣ್ಯರೂಪದಲ್ಲಿ ಪರಿವರ್ತಿಸಿಕೊಳ್ಳಬೇಕು.

ದೀನ-ದುಃಖಿತರು, ಹರಿಕಾರ್ಯಗಳು ಇವುಗಳಿಗೆ ನಮ್ಮ ಹಣವನ್ನು ತೊಡಗಿಸಿದಾಗ ಪುಣ್ಯರೂಪದಲ್ಲಿ ನಮ್ಮ ಬಳಿಯೇ ನಮ್ಮ ಸಂಪತ್ತಿರುತ್ತದೆ. ಆದ್ದರಿಂದ ಲೋಭಿಗಳಾಗಿ ಇಲ್ಲಿಯೂ ಅಲ್ಲಿಯೂ ಸುಖದಿಂದ ವಂಚಿತರಾಗುವ ಬದಲು, ದಾನಮಾಡಿ ಇಲ್ಲಿಯೂ ಅಲ್ಲಿಯೂ ಸಮೃದ್ಧಿಯನ್ನು ಹೊಂದಿರಿ!! ಶಾಸ್ತ್ರಕಾರರು ಉಪದೇಶಿಸಿದ ಉಪಾಯವನ್ನು ಎಲ್ಲರೂ ಉಪಯೋಗಿಸಿಕೊಳ್ಳಿರಿ.

ಹಣವನ್ನು ಪೂರ್ಣವಾಗಿ ತ್ಯಜಿಸಬೇಕಾಗಿಯೂ ಇಲ್ಲ. ಪೂರ್ತಿ ಕೂಡಿಸಬೇಕಾಗಿಯೂ ಇಲ್ಲ. ಅದಕ್ಕೆ ಮಧ್ಯದ ಮಾರ್ಗವನ್ನು ಭಾಗವತ ತಿಳಿಸಿದೆ. ನಮ್ಮ ಜೀವನಕ್ಕೆ ಎಷ್ಟು ಬೇಕೋ ಅಷ್ಟನ್ನು ಇಟ್ಟುಕೊಂಡು ಉಳಿದದ್ದನ್ನು ದಾನಮಾಡಿರಿ.

**'ಯಾವದ್ ಭ್ರಿಯೇತ ಜಠರಂ ತಾವತ್ಸ್ವತ್ವಂ ಹಿ ದೇಹಿನಾಮ್'**

ಹೆಚ್ಚನ್ನು ಬಯಸಿದರೆ 'ಸಸ್ತೇನ!' –ಅವನು ಕಳ್ಳ! ಅವನಿಗೆ ಶಿಕ್ಷೆಯಾಗಬೇಕು ಎನ್ನುತ್ತದೆ ಭಾಗವತ. ಈ ಎಚ್ಚರ ನಮಗೆ ಬೇಕು.

ಯಮ, ನಿಯಮ, ಶಮ, ದಮ, ತಿತಿಕ್ಷಾ, ಧೃತಿ, ದಾನ, ತಪಸ್ಸು, ಶೌಚ, ಸತ್ಯ, ಆರ್ಜವ ಮುಂತಾದ ಅನೇಕ ವಿಷಯಗಳ ಬಗ್ಗೆ ಉದ್ಧವನು ಪ್ರಶ್ನಿಸಲು ಕರುಣಾ ಮಯಿಯಾದ ಭಗವಂತ ಅವನ ಎಲ್ಲ ಪ್ರಶ್ನೆಗಳಿಗೂ ಉತ್ತರಿಸುತ್ತಿದ್ದಾನೆ. ಅಹಿಂಸೆ, ಸತ್ಯ, ಅಸ್ತೇಯ, ಹ್ರೀ, ಅಸಂಚಯ, ಆಸ್ತಿಕ್ಯ, ಬ್ರಹ್ಮಚರ್ಯ ಮುಂತಾಗಿ ಅತಿ ೨೩ ಯಮಗಳು, ೧೨ ನಿಯಮಗಳು, ಅವುಗಳ ಮಹತ್ವ ಎಲ್ಲವನ್ನೂ ಬಣ್ಣಿಸುತ್ತಾ, 'ದಂಡನ್ಯಾಸಃ ಪರಂ ದಾನಮ್' –ಇನ್ನೊಬ್ಬರಿಗೆ ತೊಂದರೆ ಕೊಡದಿರುವುದೇ ದಾನ– ಎನಿಸಿದೆ.

ನಾವು ಹಣ ಕೊಡಬಹುದು, ಪದಾರ್ಥಗಳನ್ನು ನೀಡಬಹುದು. ಆದರೆ ಎಲ್ಲದಕ್ಕಿಂತಲೂ ಮಿಗಿಲಾದ ದಾನ ಇನ್ನೊಬ್ಬರಿಗೆ ತೊಂದರೆ ಕೊಡದಿರುವುದೇ ಆಗಿದೆ. ನಮ್ಮಿಂದ ಮತ್ತೊಬ್ಬರಿಗೆ ಅಪಕಾರವಾಗದಿರುವಂತೆ ಬದುಕುವುದೇ ದಾನ.

ಒಂದು ಹುಲಿಯಿತ್ತು. ಹುಲಿಯ ಗಂಟಲಲ್ಲಿ ಮುಳ್ಳು ಚುಚ್ಚಿತ್ತು. ಅದರಿಂದ ಬಹಳ ಕಷ್ಟಗೊಂಡು ಕೊಕ್ಕರೆಯ ಬಳಿ ಬಂದಿತು. ಕೊಕ್ಕರೆಯನ್ನು ಕುರಿತು– 'ನನ್ನ ಗಂಟಲಿನ ಉಪದ್ರವವನ್ನು ನೀನು ತಪ್ಪಿಸಿದರೆ ನಿನಗೆ ವಿಶಿಷ್ಟವಾದ ಕೊಡುಗೆ ಕೊಡುತ್ತೇನೆ' ಎಂದಿತು. ಕೊಕ್ಕರೆಯು ತನಗೆ ದೊಡ್ಡ ಇನಾಮು ಸಿಗುತ್ತದೆಂದು ತನ್ನ ಉದ್ದವಾದ ಕೊಕ್ಕನ್ನು ಅದರ ಗಂಟಲಿನಲ್ಲಿ ತೂರಿಸಿ ಕಂಟಕವನ್ನು ಪರಿಹರಿಸಿತು. ಹುಲಿಯು ಸಂತುಷ್ಟವಾಯಿತು. ಕೊಕ್ಕರೆಯು– 'ಏನಾದರೂ ಬಹುಮಾನ ಕೊಡುತ್ತೇನೆಂದೆಯಲ್ಲ ಕೊಡು!' ಎಂದಿತು. ಅದಕ್ಕೆ ಹುಲಿಯು– 'ನೀನು ನಿನ್ನ ಕೊಕ್ಕನ್ನು ನನ್ನ ಬಾಯಲ್ಲಿ ಹಾಕಿದಾಗ ಅದನ್ನು ನಾನು ಅಗಿದುಬಿಟ್ಟಿದ್ದರೆ ನಿನ್ನ ಪ್ರಾಣವೇ ಹೋಗುತ್ತಿತ್ತು. ನಾನು ಹಾಗೆ ಮಾಡದಿರುವುದೇ ನಿನಗೆ ನೀಡಿದ ದೊಡ್ಡ ಇನಾಮು. ಇದೇ ದೊಡ್ಡ ಉಪಕಾರ, ನಡೆ' ಎಂದಿತು.

ಅದರಂತೆ ನಾವು ಉಪಕರಿಸುವುದಿರಲಿ. ಮತ್ತೊಬ್ಬರಿಗೆ ಉಪದ್ರವವನ್ನು ನೀಡದಿದ್ದರೆ ಸಾಕು. ಇದೇ ದೊಡ್ಡ ದಾನವೆನಿಸುತ್ತದೆ.

ಆರ್ಜವ ಎನ್ನುವ ಗುಣಕ್ಕೂ ಬಹಳ ಮಹತ್ವವಿದೆ. ಮಾತು, ಮನಸ್ಸು, ಕೃತಿಗಳಲ್ಲಿ ಏಕರೂಪತೆಯನ್ನು ಸಾಧಿಸುವುದೇ ಆರ್ಜವ ಎನಿಸಿದೆ. ನಮ್ಮಲ್ಲಿ ಇದನ್ನು ಅನ್ವೇಷಣೆ ಮಾಡಬೇಡಿ. ಆದರೆ ಉಪನಿಷತ್ತಿನಲ್ಲಿ ಸತ್ಯಕಾಮನ ಉಲ್ಲೇಖವಿದೆ.

ಸತ್ಯಕಾಮನು ಗುರುಗಳ ಸನಿಹಕ್ಕೆ ಬಂದ. ಗುರುಗಳು ನೀನು ಯಾರು ಎಂದು ಪ್ರಶ್ನಿಸಿದರು. ನಿನ್ನ ಜಾತಿ, ನಿನ್ನ ಗೋತ್ರ ಯಾವುದೆಂದು ಪ್ರಶ್ನಿಸಿದರು. ಅದಕ್ಕೆ ಸತ್ಯಕಾಮನು ಸತ್ಯ ನುಡಿದ– "ನನ್ನ ಗೋತ್ರ ಯಾವುದೆಂದು ಗೊತ್ತಿಲ್ಲ. ನನ್ನ ತಾಯಿಯನ್ನು ಮಾತ್ರ ತಿಳಿದಿದ್ದೇನೆ." ಎಂದು ನೇರವಾಗಿ ಉತ್ತರಿಸಿದ. ಇವನ ನೇರ ಉತ್ತರದಿಂದ ಸಂತುಷ್ಟರಾದ ಗುರುಗಳು ಇವನನ್ನು ಬ್ರಾಹ್ಮಣನೆಂದೇ ನಿಶ್ಚಯಿಸಿದರು.

ಸತ್ಯವಾದಿಯಾಗಿ ನೇರವಾಗಿ ವರ್ತಿಸುವವನೇ ಬ್ರಾಹ್ಮಣ. ಇವುಗಳಿಲ್ಲದಿದ್ದವರು ಅಬ್ರಾಹ್ಮಣರು ಎಂದು ಪ್ರತ್ಯೇಕವಾಗಿ ಬಣ್ಣಿಸಬೇಕಿಲ್ಲ!

## ಧರ್ಮ ಉಳಿಯಲು ದೇವಾಲಯ ಬೇಕು

ಭಗವಂತನ ಗುಣ-ರೂಪಗಳ ಬಗ್ಗೆ ಹನ್ನೊಂದನೇ ಸ್ಕಂಧದ ಕೊನೆಯಲ್ಲಿ ವಿಷದವಾಗಿ ವಿಚಾರಮಾಡಿದ್ದಾರೆ.

ಭಾಗವತದಲ್ಲಿ ಭಗವಂತನು ನಿರ್ಗುಣ-ನಿರಾಕಾರ ಎಂದೆಲ್ಲಾ ಹೇಳುವ ಅನೇಕ ವಾಕ್ಯಗಳನ್ನು ಕಾಣುತ್ತೇವೆ. ಭಗವಂತನಿಗೆ ರೂಪವೇ ಇಲ್ಲವೆಂದಾಗಲೀ ಗುಣಗಳೇ ಇಲ್ಲವೆಂದಾಗಲೀ –ಇವುಗಳಿಗೆ ಅರ್ಥವಿಲ್ಲ. ಪ್ರಾಕೃತಿಕ ಗುಣರೂಪಗಳಿಲ್ಲವೆಂದಿಷ್ಟೇ ಅರ್ಥ.

ಭಗವಂತನು ಪ್ರತಿಯೊಂದು ವಸ್ತುಗಳಲ್ಲಿಯೂ ವ್ಯಾಪ್ತನಾಗಿ ಇದ್ದಾನೆ. ಪಾತ್ರೆಗೆ ನೀರನ್ನು ಹಾಕಿದಾಗ ಆ ನೀರು ಪಾತ್ರೆಯ ಆಕೃತಿಯನ್ನು ತಾಳುತ್ತದೆ. ಕೊಡಕ್ಕೆ ಹಾಕಿದಾಗ ಕೊಡದ ಆಕೃತಿಯನ್ನೇ ತಾಳುತ್ತದೆ. ಆಯಾ ಪದಾರ್ಥಗಳಲ್ಲಿ ಅದೇ ಆಕಾರವನ್ನು ಹೊಂದುವಂತೆ ಏಕನಾದ ಭಗವಂತ ಅನೇಕ ವಸ್ತುಗಳಲ್ಲಿ ಆ ವಸ್ತುಗಳಂತೆಯೇ ಇದ್ದಾನೆ.

ಸರ್ವತ್ರ ವ್ಯಾಪ್ತನಾದ ಭಗವಂತ ಸಾಕಾರನೇ ಆಗಿದ್ದಲ್ಲಿ ಕಣ್ಣಿಗೇಕೆ ಕಾಣಿಸನು?

ಸಾಮಾನ್ಯ ಜನರಿಗೆ ಭಗವಂತನು ಹಾಗೆಯೇ ಕಾಣಿಸಲಾರ. ಪ್ರತಿಮೆಯ ಮೂಲಕ ಕಾಣಿಸುತ್ತಾನೆ. ಕರ್ಮಯೋಗಿಗಳಿಗೆ ಅಗ್ನಿಯಲ್ಲಿ, ಯೋಗಿಗಳಿಗೆ ಹೃದಯದಲ್ಲಿ, ಅಪರೋಕ್ಷಜ್ಞಾನಿಗಳಿಗೆ ಎಲ್ಲೆಡೆಯೂ ಕಾಣಿಸುತ್ತಾನೆ–

**ಅಗ್ನೌ ಕ್ರಿಯಾವತಾಂ ವಿಷ್ಣುಃ ಯೋಗಿನಾಂ ಹೃದಯೇ ಹರಿಃ ।**
**ಪ್ರತಿಮಾಸ್ವ ಪ್ರಬುದ್ಧಾನಾಂ ಸರ್ವತ್ರ ವಿದಿತಾತ್ಮನಾಮ್ ॥**

ನಮ್ಮ ಕಣ್ಣಿಗೆ ಕಾಣಿಸನು ಎಂದಮಾತ್ರಕ್ಕೆ ಭಗವಂತನೇ ಇಲ್ಲವೆಂದರ್ಥವಲ್ಲ.

ಇಂದು ನಾವು ರೇಡಿಯೋ ಮೂಲಕ ಕೇಳುವ ಸಂಗೀತವಾಗಲೀ, ದೂರದರ್ಶನ ಮೂಲಕ ನೋಡುವ ಚಿತ್ರಗಳಾಗಲೀ ಸಮಗ್ರ ಜಗತ್ತಿನಲ್ಲಿ ವ್ಯಾಪಿಸಿವೆ. ಎಲ್ಲೆಡೆಯೂ ಧ್ವನಿ-ಚಿತ್ರಗಳಿವೆಯೋ? ಇವೆ. ಹಾಗೇ ಕೇಳಲು ಆಗುತ್ತದೆಯೋ? ಇಲ್ಲ. ನಮಗೆ ಧ್ವನಿ ಕೇಳಿಸಲು ರೇಡಿಯೋ ಎಂಬ ಮಾಧ್ಯಮ ಬೇಕು. ದೂರದರ್ಶನವೆಂಬ ಮಾಧ್ಯಮ ಚಿತ್ರನೋಡಲು ಬೇಕು.

ಅದರಂತೆ ಭಗವಂತನೂ ಎಲ್ಲೆಡೆಯೂ ವ್ಯಾಪ್ತನಾಗಿದ್ದಾನೆ. ಹೀಗಿದ್ದರೂ ನಮಗೂ ಅವನಿಗೂ ಸಂಪರ್ಕವಾಗಬೇಕಿದ್ದರೆ ರೇಡಿಯೋದಂತೆ ಒಂದು ಮಾಧ್ಯಮ ಬೇಕು. ಆ ಮಾಧ್ಯಮವೇ ಹರಿಮಂದಿರದ ಮೂರ್ತಿ.

ಕೆಲವರು ಹೀಗೆ ವಿತಂಡ ಮಾಡುವುದುಂಟು.

ಭಗವಂತನು ವ್ಯಾಪ್ತನಾದ ಬಳಿಕ ದೇವಸ್ಥಾನವೇ ಏಕೆ ಬೇಕು? ಎಂದು.

ಅವರ ಬಳಿ ನಾವೂ ಪ್ರಶ್ನಿಸುತ್ತೇವೆ.

ಎಲ್ಲೆಡೆಯೂ ಧ್ವನಿಪ್ರಸಾರವಾಗುತ್ತಿರಲು ರೇಡಿಯೋ ಏಕೆ ಬೇಕು? ಇದಕ್ಕೆ ಉತ್ತರಿಸಿರಿ.

ಇನ್ನೂ ಕೆಲವರು ಪ್ರಾಚೀನ ಯುಗದಲ್ಲಿ ದೇವಾಲಯ ಇರಲಿಲ್ಲ ಎನ್ನುತ್ತಾರೆ ಅದೂ ಸರಿಯಲ್ಲ. ಅನೇಕ ಕಡೆ ಇತ್ತು ಎನ್ನಲು ಉಲ್ಲೇಖವಿದೆ. ಭಾಗವತದಲ್ಲಿಯೂ ಇದೆ.

ವಿತಂಡವಾದಿಗಳಿಗೆ ನಮ್ಮ ಈ ದೃಷ್ಟಾಂತ ಕೊಡಬಹುದು.

ಒಬ್ಬನು 'ನೀರು ತಾ' ಎಂದು ಹೇಳುತ್ತಾನೆ.

ಅದರಂತೆ ಲೋಟೆಯಲ್ಲಿ ನೀರನ್ನು ತರುತ್ತಾನೆ.

ಲೋಟೆ ತಂದವನ ಬಳಿ; ನಾನು ನೀರನ್ನು ಮಾತ್ರ ತರಲು ಹೇಳಿದ್ದಲ್ಲವೇ?! ಲೋಟೆಯನ್ನು ಏಕೆ ತಂದೆ? ಎಂದು ಯಾರಾದರೂ ಹೇಳುತ್ತಾರೆಯೇ?

ಲೋಟೆ ಇಲ್ಲದೆ ನೀರು ಮಾತ್ರ ತರಲು ಸಾಧ್ಯವೋ!? ನೀರನ್ನು ತರಲು ಯಾವುದಾದರೂ ಒಂದು ವಸ್ತುವಿನ ಅಗತ್ಯವಿದೆ.

ಅದರಂತೆ ನಮಗೂ ಭಕ್ತಿಮಾತ್ರ ಸಾಕು. ದೇವಸ್ಥಾನಗಳು ಬೇಡ ಎನ್ನುವವರು ಪಾತ್ರೆ ಬೇಡ; ನೀರು ಮಾತ್ರ ಬೇಕೆಂಬವರಂತೆ ಮೂಢರಾಗುತ್ತಾರೆ.

ನಮ್ಮ ಸಮಾಜದಲ್ಲಿಯೂ ಇಷ್ಟೆಲ್ಲಾ ಭಕ್ತಿಯು ಜಾಗೃತವಾಗಿದ್ದರೆ ಅದಕ್ಕೆ ನಮ್ಮ ದೇವಾಲಯಗಳೇ ಕಾರಣ ಎನ್ನುವುದನ್ನು ಯಾರೂ ಮರೆಯಬಾರದು.

ಹೀಗೆ ಪ್ರತಿಯೊಂದು ಉತ್ತಮವಾದ ಗುಣಗಳನ್ನೂ ನಮ್ಮ ಜೀವನದಲ್ಲಿ ಅಳವಡಿಸಿಕೊಂಡಲ್ಲಿ ಅಧ್ಯಾತ್ಮಮಾರ್ಗವು ಸುಗಮವಾಗುವುದು. ಇಂತಹ ಅನರ್ಘ್ಯವಾದ ಅನೇಕ ಉಪದೇಶಗಳನ್ನು ಕೇಳಿದ ಉದ್ಧವನು ಪರಮಸಂತುಷ್ಟನಾಗಿ ದೇವದೇವೋತ್ತಮನಾದ ಭಗವಂತನ ಪಾದಾರವಿಂದಗಳನ್ನು ಅಪ್ಪಿಕೊಂಡು ಆನಂದ ಬಾಷ್ಪಗಳನ್ನು ಸುರಿಸುತ್ತಾ ಹೇಳುತ್ತಾನೆ–

**ವಿದ್ರಾವಿತೋ ಮೋಹಮಯೋಽಂಧಕಾರೋ**
**ಯ ಆಶ್ರಿತೋ ಮೇ ತವ ಸನ್ನಿಧಾನಾತ್ ।**
**ವಿಭಾವಸೋಃ ಕಿಂ ನು ಸಮೀಪಗಸ್ಯ**
**ಶೀತಂ ತಮೋಽಭಿಪ್ರಭವತ್ಯಜಾದ್ಯ ॥** — ೧೧–೨೯–೩೭

'ದಯಾನಿಧಿಯಾದ ಶ್ರೀಕೃಷ್ಣನೇ! ನಿನ್ನ ಅಮೃತೋಪಮವಾದ ಬೋಧನೆಯಿಂದ ನನ್ನ ಮನದಲ್ಲಿ ಮನೆ ಮಾಡಿಕೊಂಡಿದ್ದ ಅಭಿಮಾನಾದಿ ಕಷ್ಮಲಗಳು ತೊಳೆದು ಹೋದವು. ಸೂರ್ಯನ ಕಿರಣಗಳು ತಲೆ ಎತ್ತಿದಾಗ ಹಿಮಕಿರಣಗಳು

ತಲೆದೋರಿಯಾವೆ?' ಮುಂತಾಗಿ ಪ್ರಾರ್ಥನೆ ಸಲ್ಲಿಸಲು ಶ್ರೀಕೃಷ್ಣಪರಮಾತ್ಮನು ಅವನ ಮುಂದಿನ ಗತಿಯನ್ನು ಮಾಡಬೇಕಾದ ಕರ್ತವ್ಯಗಳನ್ನು ತಿಳಿಸಿದನು.

## ಶ್ರೀಕೃಷ್ಣನ ಮಹಾಪ್ರಸ್ಥಾನ

ಋಷಿಶಾಪದಿಂದ ಯಾದವರೆಲ್ಲ ಸಾಯುವ ಘಟ್ಟಕ್ಕೆ ಬಂದಿದ್ದಾರೆ. ಅವರೆಲ್ಲ ಸ್ವಚ್ಛಂದವಾಗಿ ಭೋಗಪರಾಯಣರಾಗಿ ತಪ್ಪು ದಾರಿಯಲ್ಲಿ ನಡೆದಾಗ ಭಗವಂತ ಒಂದು ಆದೇಶ ಕೊಟ್ಟ. ಯಾರೂ ಮದ್ಯಪಾನ ಮಾಡಬಾರದು. ದ್ವಾರಕಾನಗರದಲ್ಲಿ ಮದ್ಯಪಾನ ನಿರ್ಬಂಧ ಆದರೆ ಅದನ್ನು ಮೀರಿ ಪ್ರಭಾತಕ್ಷೇತ್ರದಲ್ಲಿ ಮದ್ಯಪಾನ ಮಾಡಿ ಉನ್ಮತ್ತರಾಗಿ ಪರಸ್ಪರ ಕಚ್ಚಾಟ ಮಾಡಿಕೊಂಡು ಇಡೀ ಯಾದವಕುಲ ನಾಶವಾಯಿತು. ಆದರೂ ಶ್ರೀಕೃಷ್ಣ ಪರಮಾತ್ಮ ನಿರ್ವಿಕಾರನಾಗಿದ್ದ. ಅವನ ಎಲ್ಲ ಸಂಕಲ್ಪ ಯಾವ ಯಾವ ದ್ವಾರಕಾನಗರಕ್ಕೇ ಉಚ್ಛ್ರಾಯ. ಅದನ್ನು ಭಗವಂತ ಮಾಡಿದ. ತಮ್ಮ ದೋಷದಿಂದ ಭಗವಂತನ ಆದೇಶವನ್ನು ಮೀರಿ ಮದ್ಯಪಾನವನ್ನು ಮಾಡಿ ಮತ್ತರಾಗಿ ಸಿಟ್ಟು, ಆಕ್ರೋಶಕ್ಕೊಳಗಾಗಿ ಕ್ಷಣಿಕ ಉದ್ವೇಗದಿಂದ ಎಲ್ಲರೂ ಪರಸ್ಪರ ಯುದ್ಧಮಾಡಿ ಮೃತರಾಗಿದ್ದಾರೆ. ಆಗ ಶ್ರೀಕೃಷ್ಣ ನಿರ್ವಿಕಾರನಾಗಿ ಎಲ್ಲ ವಸ್ತ್ರಧಾರಿ ಯಾಗಿ, ದಿವ್ಯಾಭರಣಸಮೇತನಾಗಿ ಒಂದು ಮರದ ಬುಡದಲ್ಲಿ ವಿಶ್ರಾಂತಿ ಪಡೆ ಯುತ್ತಿದ್ದಾನೆ. ಇಷ್ಟೆಲ್ಲ ಗೊಂದಲ ಆಗಿದ್ದರೂ ನಿರ್ವಿಕಾರನಾಗಿ ಶಾಂತಚಿತ್ತನಾದ. ಇದೇ ಭಗವಂತನ ಮಹಿಮೆ.

ಆಗ ಒಬ್ಬ ಬೇಡ ಗೊತ್ತಾಗದೇ ಕೃಷ್ಣನ ಪಾದಕ್ಕೆ ಬಾಣಪ್ರಯೋಗ ಮಾಡಿದ. ಆಮೇಲೆ ಸಮೀಪಕ್ಕೆ ಬಂದು ನೋಡಿದ. ಸಾಕ್ಷಾತ್ ಶ್ರೀಕೃಷ್ಣ ಗದಾಪದ್ಮಚಕ್ರಶಂಖಧಾರಿಯಾಗಿದ್ದಾನೆ. ಪಶ್ಚಾತ್ತಾಪದಿಂದ ಶರಣಾಗತನಾಗಿ ತಾನು ಗೊತ್ತಿಲ್ಲದೆ ಬಾಣ ಪ್ರಯೋಗ ಮಾಡಿದೆ ಎಂದು ಹೇಳಿದಾಗ ಎಲ್ಲ ನನ್ನ ಸಂಕಲ್ಪ ಇದನ್ನೆಲ್ಲ ನಾನೇ ಏರ್ಪಡಿಸಿದ್ದು. ಚಿಂತೆ ಪಡುವುದು ಬೇಡ ಎಂಬುದಾಗಿ ಹೇಳಿದ. ಕೃಷ್ಣನ ರಥ ಮೇಲಕ್ಕೆ ಹೋಗುತ್ತಾ ಇದೆ. ಬ್ರಹ್ಮಾದಿ ದೇವತೆಗಳು ಆಗಮಿಸಿದ್ದಾರೆ. ಅದೊಂದು ಅದ್ಭುತ ದೃಶ್ಯ. ಬ್ರಹ್ಮಾದಿ ಎಲ್ಲ ದೇವತೆಗಳು ಬಗೆಬಗೆಯ ಸ್ತೋತ್ರಮಾಡುವಾಗ ಶ್ರೀಕೃಷ್ಣನು ತನ್ನ ಮೂಲರೂಪದಲ್ಲಿ ಐಕ್ಯ ಹೊಂದಿದ್ದಾನೆ. ಭಗವಂತನು ವೈಕುಂಠಲೋಕಕ್ಕೆ ತೆರಳಿದ್ದಾನೆ. ಭಗವಂತನದ್ದು ಅವತಾರದಲ್ಲಿಯೂ ಇದೊಂದು ಅದ್ಭುತ. ಆ ಪರಂಧಾಮದಲ್ಲಿ ಮುಕ್ತರು. ಬ್ರಹ್ಮಾದಿ ದೇವತೆಗಳು ಸ್ತೋತ್ರ ಮಾಡಿದಾಗ, ಪಾಂಡವರು ನಾಶವಾದಾಗಲೂ ಯಾವುದೇ ರೀತಿಯ ಉದ್ವೇಗಕ್ಕೆ ಒಳಗಾಗದೆ ತನ್ನ ಅವತಾರ ಕಾರ್ಯ ಮುಗಿಯಿತು ಎಂಬಂತೆ ಒಂದು ರೂಪದಿಂದ ಸಜ್ಜನರನ್ನು ಅನುಗ್ರಹಿಸಿ, ಕೃಷ್ಣನ ಸ್ಮರಣೆ ಮಾಡುವವರಿಗೆ ಅನುಗ್ರಹ ಮಾಡುವುದಕ್ಕೋಸ್ಕರ ಇಂದಿಗೂ ಭೂತಲದಲ್ಲಿ ಒಂದು ರೂಪದಿಂದ ನಿಂತಿದ್ದಾನೆ. ಉಡುಪಿಯಲ್ಲೂ ಒಂದು ರೂಪದಿಂದ ಇರುವ ಹಾಗೆ ಆಚಾರ್ಯರು ಅನುಗ್ರಹಿಸಿ ದ್ದಾರೆ. ಇಲ್ಲಿದ್ದುಕೊಂಡು ಅನುಗ್ರಹಿಸುತ್ತಾ ಇಂತಹ ಅದ್ಭುತ ಉಪದೇಶವನ್ನು

ಉದ್ಧವನಿಗೆ ಮಾಡಿದ್ದಾನೆ. ಏಕಾದಶ ಸ್ಕಂಧದಲ್ಲಿ ಕೃಷ್ಣನ ಉಪದೇಶವು ಕಪಿಲನ ಉಪದೇಶದಂತೆ ನಾವು ಯಾವ ಯಾವ ಹಂತದಲ್ಲಿ ಆಧ್ಯಾತ್ಮಿಕ ಉನ್ನತಿಯನ್ನು ಹೇಳಿ ಪಡೆಯಬೇಕು. ಎಂಬುದನ್ನು ತಿಳಿಸಿದ್ದಾನೆ. ಪೂಜೆ, ಸಂಧ್ಯಾವಂದನೆ, ಧರ್ಮಾಚರಣೆ, ಧ್ಯಾನ, ನಡತೆ, ಚಾರಿತ್ರ್ಯ, ಅಧ್ಯಯನ, ಸಾಕ್ಷಾತ್ಕಾರ ಇವೆಲ್ಲವನ್ನೂ ವಿಶದವಾಗಿ ಉಪದೇಶಿಸಿದ್ದಾನೆ. ಕೃಷ್ಣ ಅರ್ಜುನನಿಗೆ ಭಗವದ್ಗೀತೆ ಉಪದೇಶಿಸಿದ ಕೊನೆ ಗಳಿಗೆಯಲ್ಲಿ ಉದ್ಧವನಿಗೆ ಇಂತಹ ದಿವ್ಯಸಂದೇಶವನ್ನು ನೀಡಿ ಕೇವಲ ಪ್ರದರ್ಶನ ಮಾತ್ರದಿಂದ ದೇಹವನ್ನು ತ್ಯಜಿಸಿದ್ದಾನೆ. ಆದರೂ ಭಗವಂತ ದೇಹವನ್ನು ತ್ಯಜಿಸಲಿಲ್ಲ. ಅವನದ್ದು ಅಪ್ರಾಕೃತ ಆನಂದಮಯವಾದ ದೇಹ. ಕೇವಲ ಜನರಿಗೆ ತೋರಿಸು ವುದಕ್ಕೋಸ್ಕರ (ಭೌತಿಕ) ದೇಹ ಧರಿಸಿದ್ದಾನೆ. ಅದನ್ನು ತ್ಯಜಿಸಿ ಶ್ರೀಕೃಷ್ಣ ಪರಮಾತ್ಮ ಪರಂಧಾಮಗೈದಿದ್ದಾನೆ ಎಂಬಲ್ಲಿಗೆ ಏಕಾದಶ ಸ್ಕಂಧವು ಲಕ್ಷ್ಮೀಹಯಗ್ರೀವನಿಗೆ ಸಮರ್ಪಿತವಾಯಿತು.

ಮಧ್ವೇಶಾರ್ಪಣಮಸ್ತು

# ಅಥ ದ್ವಾದಶ ಸ್ಕಂಧಃ

ಶ್ರೀಕೃಷ್ಣನು ಪರಂಧಾಮಗೈದಾಗ ಬ್ರಹ್ಮಾದಿದೇವತೆಗಳೆಲ್ಲ ವಿಶೇಷವಾಗಿ ಪ್ರಾರ್ಥನೆ ಸಲ್ಲಿಸಿದ್ದಾರೆ. ಕೆಲವರು ಶ್ರೀಕೃಷ್ಣ ಈ ದೇಹವನ್ನು ಬಿಟ್ಟುಹೋಗಿದ್ದಾನೆ ಎಂಬುದಾಗಿ ತಿಳಿದುಕೊಳ್ಳುತ್ತಾರೆ. ಆದರೆ ಶ್ರೀಕೃಷ್ಣನಿಗೆ ಭೌತಿಕ ದೇಹವೇ ಇಲ್ಲ ತನ್ನ ಅಚಿಂತ್ಯ, ಅದ್ಭುತ ಶಕ್ತಿಯಿಂದ ನಮ್ಮೆದುರಿಗೆ ಕಾಣಿಸಿಕೊಳ್ಳುತ್ತಾನೆ. ಅವನು ಜ್ಞಾನಸ್ವರೂಪ, ಆತ್ಮಸ್ವರೂಪಿ, ಚೈತನ್ಯ ಸ್ವರೂಪಿ. ಅವನು ನಮ್ಮ ಈ (ಜಡವಾದ) ಪಂಚೇಂದ್ರಿಯ ಗಳಿಗೆ ಕಾಣುವುದಿಲ್ಲ. ನಾವು ಈ ಪಂಚೇಂದ್ರಿಯಗಳಿಂದ ಕಾಣುವುದು ಕೇವಲ ಭೌತಿಕ ವಸ್ತುಗಳನ್ನು ಜಡಪದಾರ್ಥಗಳನ್ನು ಜಡವಾದ ಭೌತಿಕ ಶರೀರವೇ ಅವನಿಗಿಲ್ಲ. ಅವನದು ಚೈತನ್ಯ ಸ್ವರೂಪಿ ಆ ಸ್ವರೂಪವನ್ನು ತನ್ನ ಅಚಿಂತ್ಯ ಅದ್ಬುತ ಶಕ್ತಿಯಿಂದ ನಮಗೆ ತೋರುವಂತೆ ಮಾಡುತ್ತಾನೆ. ಭಗವಂತನಿಗೆ ಭೌತಿಕ ದೇಹದ ಸಂಪರ್ಕವೇ ಇಲ್ಲ. ಅವತಾರದಲ್ಲಿಯೂ ಭಗವಂತನದ್ದು ಅಪ್ರಾಕೃತ ಆನಂದಮಯವಾದ ರೂಪವೇ ಹೊರತು ಈ ಭೌತಿಕ ದೇಹವು ಅಲ್ಲ ಎಂಬುದಾಗಿ ಆಚಾರ್ಯರು ತಮ್ಮ ಸಿದ್ಧಾಂತದಲ್ಲಿ ಪ್ರತಿಪಾದಿಸಿದ್ದಾರೆ. ಭಗವಂತನು ಅಶರೀರ ಆದರೂ ಶರೀರಿ. ಅವನಿಗೆ ಭೌತಿಕದೇಹವು ಇಲ್ಲವಾದ್ದರಿಂದ ಅಶರೀರಿ; ಪ್ರಾಕೃತವಾದ ದೇಹ ಇದೆಯಾದ್ದರಿಂದ ಅವನು ಶರೀರಿ. ಹಾಗೆಯೇ ನಿರಾಕಾರ, ಸಾಕಾರ, ನಿರ್ಗುಣ, ಸಗುಣ. ಇವೆಲ್ಲವೂ ಅವನಲ್ಲಿಯೇ ಅನ್ವಯವಾಗುತ್ತದೆ.

ಅವನಲ್ಲಿ ಅನಂತಗುಣಗಳಿವೆ. ಹಾಗಾಗಿ ಅವನು ಸಗುಣ. ಅವನಲ್ಲಿ ಸತ್ವ ರಜಸ್ಸು, ತಮಸ್ಸೆಂಬ ಪ್ರಾಕೃತ ಗುಣಗಳು ಇಲ್ಲದಿರುವುದರಿಂದ ಅವನು ನಿರ್ಗುಣ. ಜ್ಞಾನಾ ನಂದಾದಿಗಳೇ ದೇಹಗಳಾಗಿರುವುದರಿಂದ ಅವನಿಗೆ ಶರೀರ ಇದೆ. ಆದುದರಿಂದ ಅವನು ಸಾಕಾರ. ಅವನಲ್ಲಿ ನಾಶವಾಗತಕ್ಕ ಭೌತಿಕ ದೇಹವು ಇಲ್ಲದಿರುವುದರಿಂದ ಅವನಿಗೆ ಶರೀರ ಇಲ್ಲ. ಆದುದರಿಂದ ಅವನು ನಿರಾಕಾರ. ಈ ಚೈತನ್ಯಮಯವಾದ ಶರೀರವನ್ನು ತೋರಿಸಿ ತನ್ನ ಶ್ರೀಕೃಷ್ಣಾವತಾರವನ್ನು ಮುಕ್ತಾಯಗೊಳಿಸಿದ.

ಅನಂತರ ಪರೀಕ್ಷಿತರಾಜನು ತನ್ನ ಆಡಳಿತದ ಕೊನೆಯ ತನಕ ಶ್ರೀಕೃಷ್ಣನ ಅನುಗ್ರಹದಿಂದ ಕಲಿಯನ್ನು ಎದುರಿಸಿದ. ಬಳಿಕ ಕಲಿಯ ಅಧಿಕಾರ ಅವನ ಆಕ್ರಮಣ ಈ ದೇಶದಲ್ಲಿ ಹೆಚ್ಚಾಗಿ ಬೆಳೆಯಿತು. ಅನಂತರ ಚಾಣಕ್ಯ ಬಂದು ನಂದರನ್ನು ನಿಗ್ರಹಿಸಿ ಚಂದ್ರಗುಪ್ತನನ್ನು ಅಧಿಕಾರಕ್ಕೆ ಕೂಡಿಸುವುದು, ಅಶೋಕನ ಕಳಿಂಗಯುದ್ಧ ಹೀಗೆ ಇಂತಹ ಘಟನೆಗಳನ್ನೆಲ್ಲ ವೇದವ್ಯಾಸರು ತಮ್ಮ ಭಾಗವತದಲ್ಲಿ ಉಲ್ಲೇಖಿಸಿದ್ದಾರೆ. ನಂದರಾಜರು ಅಧಿಕಾರ ದುರುಪಯೋಗ ಮಾಡಿದಾಗ ಒಬ್ಬ ಬ್ರಾಹ್ಮಣ (ಅವನ ಹೆಸರು ಉಕ್ತವಾಗಿಲ್ಲ) ಅವರನ್ನು ಉಚ್ಚಾಟಿಸಿದ. ಆಮೇಲೆ ಚಂದ್ರಗುಪ್ತನು ರಾಜನಾಗಿ ಮೆರೆಯುತ್ತಾನೆ. ಅಶೋಕ ಮೊದಲಾದ ರಾಜರು ಬಂದು ಆಡಳಿತ ನಡೆಸಿದ್ದಾರೆ. ಅದರ ಉಲ್ಲೇಖ ಭಾಗವತದಲ್ಲಿ ಬಂದಿದೆ.

ಕಲಿಯುಗದ ಕೊನೆಯ ಘಟ್ಟದಲ್ಲಿ ನಿರ್ಮಾಣಗೊಳ್ಳುವ ಇಂದಿನ ಪಾಕಿಸ್ತಾನದ ಉಲ್ಲೇಖವೂ ಅದರಲ್ಲಿ ಬಂದಿದೆ. ಕಾಶ್ಮೀರವು ಮ್ಲೇಚ್ಛರಿಂದ ಆಕ್ರಮಣಗೊಂಡು ಈಗಿನ ಪರಿಸ್ಥಿತಿ ನಿರ್ಮಾಣ ಅಗುತ್ತದೆಂಬುದು ಸಹ ಭಾಗವತದಲ್ಲಿ ಉಲ್ಲಿಖಿತ ವಾಗಿದೆ. ಇವೆಲ್ಲ ಅನರ್ಥ ಕೋಲಾಹಲ ಈ ದೇಶದಲ್ಲಿ ನಡೆಯಲಿದೆ ಎಂಬುದಾಗಿ ಭಾಗವತದ ೧೨ನೆಯ ಸ್ಕಂಧದಲ್ಲಿ ಸಂಕ್ಷೇಪವಾಗಿ ಸೂಚನೆ ಮಾಡಲಾಗಿದೆ.

## ಕಲಿಯುಗದ ಧರ್ಮಗಳು

ಕಲಿಯುಗದಲ್ಲಿ ಆಚರಣೆಗಳೆಲ್ಲವೂ ನಶಿಸಿಹೋಗಿ ವಿಕೃತ ಆಚರಣೆಗಳೇ ಹೆಚ್ಚುತ್ತವೆ ಎಂದು ದ್ವಾದಶಸ್ಕಂಧದಲ್ಲಿ ವಿಸ್ತಾರವಾಗಿ ನಿರೂಪಿಸಿದ್ದಾರೆ.

ಸತ್ಯ, ಧರ್ಮ, ಶೌಚ, ಕ್ಷಮಾ, ದಯಾ ಎಲ್ಲವೂ ಕಲಿಕಾಲದ ಬಲದಿಂದ ನಶಿಸಿಹೋಗುತ್ತವೆ.

ಕಲಿಯುದಲ್ಲಿ 'ಹಣವಿದ್ದವನಿಗೆ ಎಲ್ಲರೂ ಮಣೆ ಹಾಕುತ್ತಾರೆ'.

ಕುಲ, ಆಚಾರ, ಗುಣ ಎಲ್ಲದಕ್ಕೂ ಹಣವೇ ಮೂಲವಾಗುತ್ತದೆ.

**'ವಿತ್ತಮೇವ ಕಲೌ ನೄಣಾಂ ಜನ್ಮಾಚಾರಗುಣೋದಯಃ'**

ಧರ್ಮಾಽಧರ್ಮ ತೀರ್ಮಾನಗಳಿಗೆ ಕಾನೂನು ಮುಖ್ಯವಾಗುವುದಿಲ್ಲ; ಬಲವೇ ಕಾರಣವಾಗುತ್ತದೆ (Might is right). ಗೂಂಡಾಜನರ ಗುಂಪಿದ್ದರೆ ಸಾಕು– ಏನು ಅನ್ಯಾಯವನ್ನೂ ಮಾಡಬಹುದು.

**'ಧರ್ಮನ್ಯಾಯವ್ಯವಸ್ಥಾಯಾಂ ಕಾರಣಂ ಬಲಮೇವ ಹಿ'**

ಕುಲ, ಗೋತ್ರ, ವಿದ್ವತ್ ಇದ್ಯಾವುದೂ ವಿವಾಹಕ್ಕೆ ಹೇತುವಾಗುವುದಿಲ್ಲ. ಮನಸ್ಸಾದರೆ ಸಾಕು ಮದುವೆಯಾಗುತ್ತದೆ. ಇತರ ಯಾವ ವಿಷಯಗಳನ್ನೂ ಗಮನಿಸುವುದಿಲ್ಲ. **'ದಾಂಪತ್ಯೇಽಭಿರುಚಿರ್ಹೇತುಃ'.**

ಮದುವೆಯಾಗಲು ಯಾವ ಸಂಸ್ಕಾರಗಳನ್ನೂ ಬಯಸುವುದಿಲ್ಲ. (ರಿಜಿಸ್ಟರ್ ಆಫೀಸಿಗೆ ಹೋಗಿ ಸ್ವೀಕರಿಸಿದರೆ ಮುಗಿಯಿತು. ಯಾವುದಕ್ಕೂ ಬೆಲೆಕೊಡುವುದಿಲ್ಲ.
**'ಸ್ವೀಕಾರ ಏವಚೋದ್ವಾಹೇ'**

ತಮ್ಮ ತಮ್ಮ ರೂಪಗಳನ್ನು ನೋಡಿಕೊಳ್ಳುವುದರಲ್ಲಿಯೇ ಆಸಕ್ತಿ. ತಾನು ಚೆಂದಕಾಣಬೇಕೆಂದು ಕನ್ನಡಿ ಮುಂದೆ ದಿನಗಳನ್ನೇ ಕಳೆಯಲೂ ಸಿದ್ಧ. ಇದರಲ್ಲಿಯೇ ವಿಶೇಷವಾದ ಆಸಕ್ತಿಯಿಂದ ಸಮಯವನ್ನು ಚೆಲ್ಲುತ್ತಾರೆ. ಎಲ್ಲವೂ ಪ್ರದರ್ಶನಕ್ಕಾಗಿ.
**'ಸ್ತ್ರೀತ್ವೇ ಪುಂಸ್ತ್ವೇ ಚ ಹಿ ಕತಿಃ'**

ದಂಡ, ಕಮಂಡಲ, ಕಾವಿಗಳನ್ನು ಧರಿಸಿದವನೇ ಸಂನ್ಯಾಸಿ. ಅವನಿಗೆ ಉಳಿದ ಆಚಾರವಿಚಾರ, ನೀತಿನಿಯಮ ಏನೂ ಬೇಕಿಲ್ಲ. ಚಿಹ್ನೆ ಮಾತ್ರ ಸಾಕು. (ಇಂದು ಕೇವಲ ಕಾವಿ ಒಂದೇ ಉಳಿದಿದೆ. ಇತರ ಚಿಹ್ನೆಗಳೂ ಇಲ್ಲ.)
**'ಲಿಂಗಮೇವಾಶ್ರಮಖ್ಯಾತೌ'**

ವ್ಯಾಪಾರದಲ್ಲಿ ಮೋಸವೇ ಜಾಸ್ತಿ. ಹೆಚ್ಚು ಮೋಸಮಾಡಿದವ ಒಳ್ಳೆ ವ್ಯಾಪಾರಿ ಎನಿಸುತ್ತಾನೆ. 'ಮಾಯೈವ ವ್ಯಾವಹಾರಿಕೇ'

ಪಿಕ್‌ನಿಕ್‌ಗೆ ಹೋಗುವುದೇ ತೀರ್ಥಯಾತ್ರೆ. ಬೇರೆ ತೀರ್ಥಯಾತ್ರೆಯೇ ಗೊತ್ತಿಲ್ಲ. 'ದೂರೇ ವಾರ್ಯಯನಂ ತೀರ್ಥಂ'

ಲಾವಣ್ಯ ಎಂದರೆ ಹಿಂದಿನ ಮುತ್ತೈದೆಯರ ಭೂಷಣಗಳಲ್ಲ. ಕೇಶಕರ್ತನ, ವಿಧವಿಧ ಕೇಶವಿನ್ಯಾಸವೇ ಲಾವಣ್ಯ ಎನಿಸಿದೆ. ಸ್ತ್ರೀಯರೂ, ಪುರುಷರೂ ಇಬ್ಬರು ಇದರಲ್ಲಿ ಸ್ಪರ್ಧಿಗಳಾಗಿ ವರ್ತಿಸುತ್ತಿದ್ದಾರೆ. 'ಲಾವಣ್ಯಂ ಕೇಶಧಾರಣಮ್'

ಹೀಗೆ ಅನೇಕ ರೀತಿಯ ವಿಪರ್ಯಾಸಗಳನ್ನು ವ್ಯಾಸರು ಬಣ್ಣಿಸಿದ್ದಾರೆ. ಇಂದಿನ ಸ್ಥಿತಿಗತಿಗಳನ್ನು ನೋಡಿದಾಗ ವ್ಯಾಸರ ಮಾತಿನಲ್ಲಿ ಸಂಪೂರ್ಣ ವಿಶ್ವಾಸ ಮೂಡುತ್ತದೆ. ನಮ್ಮೆಲ್ಲರ ಅಧರ್ಮದ ಕಣ್ಣನ್ನು ಮುಚ್ಚಿ ಧರ್ಮದ ಕಣ್ಣನ್ನು ವ್ಯಾಸರೇ ತೆರೆಯಬೇಕು.

ಸನ್ಯಾಸ ಅಂದರೆ ಎಷ್ಟು ಅಗ್ಗ ಆಗಿಬಿಟ್ಟಿದೆ ಎಂದರೆ ಅದಕ್ಕೆ ಈಗೀಗ ದಂಡ ಕಮಂಡಲು ಕೂಡ ಬೇಡ, ಕಾಷಾಯವಸ್ತ್ರ ಇದ್ದರೆ ಸಾಕು; ಕೇವಲ ಚಿಹ್ನೆ ಇದ್ದರೆ ಸಾಕು. ಚಿಹ್ನೆಗೆ ಮಾತ್ರ ಸ್ಥಾನ. ಉಳಿದ ಆಚಾರ ವಿಚಾರ ಧ್ಯಾನ ಇವ್ಯಾವುದಕ್ಕೂ ಸ್ಥಾನ ಇಲ್ಲ. ಇಂತಹ ಅಭಿನವ ಸಂನ್ಯಾಸಿಗಳು ಕಲಿಯುಗದಲ್ಲಿ ಅಲ್ಲಲ್ಲಿ ಬೆಳೆಯುತ್ತಿದ್ದಾರೆ. ಮಹಾಭಾರತದಲ್ಲಿ ತುಲಾಭಾರ ಬ್ರಾಹ್ಮಣನಿಗೆ ಹೇಳಿದೆ. ಆ ಬ್ರಾಹ್ಮಣನು ತುಲಾಭಾರಕ್ಕೆ ನಿನ್ನ ಗುರು ಯಾರು? ನಿನಗೆ ಇವೆಲ್ಲಾ ಸಿದ್ಧಿ ಹೇಗೆ ಬಂತು ಎಂದು ಕೇಳಲು, ತುಲಾಭಾರನು ನನ್ನ ಗುರು ತಕ್ಕಡಿ. ಈ ತಕ್ಕಡಿ ಎಲ್ಲರಿಗೂ ಒಂದೇ ತೂಕ ತನಗೆ ಬೇಕಾದವನಿಗೆ ಒಂದು ಬೇಡವಾದವರಿಗೆ ಇನ್ನೊಂದು ವ್ಯತ್ಯಾಸವಿಲ್ಲ. ಎಲ್ಲರಿಗೂ ಒಂದೇ ತೂಕ ತೋರಿಸುವ ಈ ತಕ್ಕಡಿಯೇ ನನ್ನ ಗುರು. ಬೇಕಾದ ತಕ್ಕಡಿ ಎಲ್ಲರಿಗೂ ಸಮಾನತೆಯನ್ನು ತೋರಿಸುವಂತೆ ನನಗೆ ಅದರಿಂದ ಸಮಾನತೆಯ ಪ್ರಾಮಾಣಿಕತೆಯ ಪಾಠ ಸಿಕ್ಕಿದೆ. ಹಾಗಾಗಿ ನಾನು ಯಾರಿಗೂ ಮೋಸ, ವಂಚನೆ ಮಾಡದೆ ಸಮಾನತೆಯಿಂದ ಇರುವುದರಿಂದ ನನಗೆ ಈ ಸಿದ್ಧಿ ಬಂತು. ಭಾರೀ ತಪಸ್ಸು ಮಾಡಿಲ್ಲ. ಭಾರೀ ಪಾಂಡಿತ್ಯ ಗಳಿಸಿಲ್ಲ. ಇಷ್ಟೆಲ್ಲಾ ದಿವ್ಯದೃಷ್ಟಿ ಹೇಗೆ ಬಂತು. ಆಗ ವ್ಯವಹಾರದಲ್ಲಿ ಪ್ರಾಮಾಣಿಕತೆಗೆ ವಿಶಿಷ್ಟ ಸ್ಥಾನ ಇತ್ತು. ಆದರೆ ಕಲಿಯುಗದಲ್ಲಿ ವ್ಯವಹಾರದಲ್ಲಿ ಎಷ್ಟು ಮೋಸ, ವಂಚನೆ ಮಾಡಲು ಸಾಧ್ಯವೋ ಅವನಿಗೆ ವ್ಯವಹಾರದಲ್ಲಿ ಅಷ್ಟು ಹೆಚ್ಚು ಯಶಸ್ಸು ಲಭ್ಯ.

ಹೀಗೆ ಕಲಿಯುಗದಲ್ಲಿ ಪ್ರಜೆಗಳು ಯಾವ ರೀತಿಯಲ್ಲಿ ವ್ಯವಹಾರ, ಜೀವನ ನಡೆಸುತ್ತಾರೆ ಎಂಬುದನ್ನು ಭಾಗವತದ ಈ ಸ್ಕಂಧದಲ್ಲಿ ವಿವರಿಸಿದ್ದಾರೆ. ಈ ಸನ್ಯಾಸಿ ಗಳೆಲ್ಲ ಕಲಿಯುಗದಲ್ಲಿ ಸಂಸಾರಿಗಳಾಗುತ್ತಾರಂತೆ. ಸಂನ್ಯಾಸಿಗಳು ಸಂಸಾರಿಗಳಾಗುವ ದುರ್ಘಟನೆ ನಡೆಯುತ್ತದೆ. ಸಂನ್ಯಾಸಿಗಳಿಗೇ ಹಣ ಸಂಪಾದಿಸುವ ಆಸೆ ಬೆಳೆಯುತ್ತದೆ. ಹೀಗೆ ಅನೇಕ ತರದ ದುರಂತಗಳು ಕಲಿಯುಗದಲ್ಲಿ ನಡೆದರೂ ಕಲಿಯುಗದ ಒಂದು ದೊಡ್ಡ ಗುಣ ಏನು ಎಂಬುದನ್ನು ಹೇಳಿದ್ದಾರೆ. ನೈತಿಕವಾಗಿ, ಸಾಮಾಜಿಕವಾಗಿ, ಆಧ್ಯಾತ್ಮಿಕವಾಗಿ ಸಮಾಜ ಯಾವ ಮಟ್ಟಕ್ಕೆ ಬರುತ್ತದೆಂಬುದನ್ನು ತಿಳಿಸಿದ್ದಾರೆ. ನೀತಿ ಚಾರಿತ್ರ್ಯ ಇಲ್ಲ. ಧರ್ಮಾಚರಣೆ ಲೋಪ. ಧರ್ಮದಲ್ಲಿ ಪ್ರವೃತ್ತಿಯಿಲ್ಲ. ಬರೇ

ಸ್ವಾರ್ಥಸಾಧನೆಗಾಗಿ ಜನರು ಜೀವನ ನಡೆಸುತ್ತಾರೆ ಎಂಬುದನ್ನು ನಿರೂಪಿಸಿ ಕಲಿಯುಗದಲ್ಲಿ ಯಾವ ದೋಷಗಳು ತುಂಬಿವೆ ಮತ್ತು ಎಷ್ಟೆಲ್ಲ ದೋಷಗಳು ತುಂಬಿದ್ದರೂ ಒಂದು ಒಳ್ಳೆಯ ಗುಣವೆಂದರೆ ಭಗವಂತನ ಕೀರ್ತನೆ ಮಾಡುವುದರ ಮೂಲಕ ಬೇಗನೆ ಉದ್ಧಾರ ಆಗುವುದು. ಕಲಿಯುಗದಲ್ಲಿ ಭಗವಂತನನ್ನು ಬಹಳ ಸುಲಭವಾಗಿ ಒಲಿಸಬಹುದು. ಕೃತಯುಗದಲ್ಲಿ ಧ್ಯಾನ ಮಾಡಬೇಕು. ಏಕಾಗ್ರತೆಯಿಂದ ಮಾಡಬೇಕು. ಏಕಾಗ್ರತೆ ಬರಬೇಕಾದರೆ ಮನೋಬಲ ಬೇಕು. ಆ ಮನೋಬಲವೇ ಕಲಿಯುಗದಲ್ಲಿ ಗಟ್ಟಿಯಿಲ್ಲ. ತ್ರೇತಾಯುಗದಲ್ಲಿ ಯಜ್ಞಯಾಗಾದಿಗಳನ್ನು ಮಾಡಿ ಭಗವಂತನನ್ನು ಒಲಿಸಬೇಕಾಗುತ್ತದೆ. ಆದರೆ ಇವು ಯಾವುದೂ ಇಲ್ಲದೆ ಭಗವಂತನನ್ನು ಸುಲಭವಾಗಿ ಒಲಿಸುವ ಮಾರ್ಗ ಎಂದರೆ ಅದು ನಾಮಸ್ಮರಣೆ. ಅಂತಹ ಸುಲಭವಾದ ಮಾರ್ಗ ಕಲಿಯುಗದಲ್ಲಿದೆ.

## ವೇದಾಂತವನ್ನು ಮೈಗೂಡಿಸಿಕೊಂಡ ಪರೀಕ್ಷಿತ

ಭಾಗವತ ಸಂದೇಶ ಅಂದರೆ ಅದು ಭಕ್ತಿಯ ಸಂದೇಶ. ಅದು ಭಗವಂತ ಅನೇಕ ರೂಪಗಳಲ್ಲಿ ಭಕ್ತರಿಗೆ ಅನುಗ್ರಹಿಸಿದ ಸಂದೇಶ ಮತ್ತು ಭಕ್ತರು ಅನೇಕ ರೀತಿಯಲ್ಲಿ ಮಾಡಿದ ಭಗವಂತನ ಸ್ತೋತ್ರ. ಇಡೀ ಭಾಗವತದಲ್ಲಿರುವ ಭಗವಂತನ ಅನೇಕ ರೂಪಗಳ ಸಂದೇಶ, ಕಪಿಲ, ಋಷಭ ಮುಂತಾದ ರೂಪಗಳ ಸಂದೇಶ ಮತ್ತು ಭಕ್ತರು ಮಾಡಿರುವ ಸ್ತೋತ್ರಗಳನ್ನೇ ಒಟ್ಟು ಮಾಡಿದರೂ ಅದೊಂದು ದೊಡ್ಡ ತತ್ವಜ್ಞಾನದ ಜಾಗೃತಿಗೆ ಕಾರಣ ಆಗುತ್ತದೆ. ಭಕ್ತರ ಕಥೆ, ಭಗವಂತನ ಅವತಾರಗಳು ಮತ್ತು ಭಕ್ತರು ಭಿನ್ನಭಿನ್ನ ಸಂದರ್ಭಗಳಲ್ಲಿ ಮಾಡಿದ ಪ್ರಾರ್ಥನೆ ಹಾಗೂ ಭಗವಂತನ ಸಂದೇಶಗಳು ಇವುಗಳೆಲ್ಲ ಒಂದನೇ ಸ್ಕಂಧದಿಂದ ಕೊನೆಯ ಸ್ಕಂಧದವರೆಗೆ ಚೆನ್ನಾಗಿ ತುಂಬಿಕೊಂಡಿವೆ. ಇವನ್ನೆಲ್ಲ ಕೇಳಿದ ಪರೀಕ್ಷಿತ ಹೇಳುತ್ತಾನೆ: "ಇನ್ನು ನನಗೆ ತಕ್ಷಕನ ಭಯವೇ ಇಲ್ಲ!" "ತಕ್ಷಕ ಬಂದರೆ ಏನು ಮಾಡಿಯಾನು? ತನ್ನ ವಿಷದಿಂದ ನನ್ನ ದೇಹವನ್ನು ನಾಶ ಮಾಡಿಯಾನು. ಆದರೆ ನನ್ನ ಆತ್ಮವನ್ನು ಯಾವ ವಿಷವೂ ಏನೂ ಮಾಡದು. ತಕ್ಷಕನ ವಿಷಕ್ಕಿಂತ ಮಿಥ್ಯಾಜ್ಞಾನ ಎನ್ನುವ ವಿಷ ಭಯಂಕರವಾದುದು. ಇದು ಆತ್ಮದ ಅವನತಿಗೆ ಕಾರಣವಾಗುತ್ತದೆ. ನಿತ್ಯ ನರಕದಲ್ಲಿ ಬೀಳಬೇಕಾಗುತ್ತದೆ. ಅಂತಹ ಮಿಥ್ಯಾಜ್ಞನಾವೆಂಬ ವಿಷವನ್ನು ಪರಿಹಾರ ಮಾಡಿದ್ದೀರಿ" ಎಂಬುದಾಗಿ ಪರೀಕ್ಷಿತರಾಜ ಶೌನಕಮುನಿಗಳಿಗೆ ಕೃತಜ್ಞತೆಯನ್ನು ಸಲ್ಲಿಸುತ್ತಾನೆ. ಶೌನಕರು ತಮ್ಮ ಉಪದೇಶವನ್ನು ಮುಗಿಸಿ ಹೊರಟಿರಲು ಒಂದು ಚಿಕ್ಕ ಕ್ರಿಮಿಯ ರೂಪದಲ್ಲಿ ತಕ್ಷಕನ ಪ್ರವೇಶವಾಗಿದೆ. ಒಂದು ಚಿಕ್ಕ ಕ್ರಿಮಿಯು ತನ್ನನ್ನು ಸಾಯಿಸದು ಎಂಬುದಾಗಿ ಪರೀಕ್ಷಿತರಾಜ ಅದನ್ನು ತನ್ನ ಕೈಯಲ್ಲಿರಿಸಿಕೊಂಡ. ಆದರೆ ಅದು ದೊಡ್ಡ ಹಾವಾಗಿ ಪರೀಕ್ಷಿತನನ್ನು ಸುಟ್ಟು ಬೂದಿ ಮಾಡಿತು. ನಾವು ಇದರಿಂದ ಒಂದನ್ನು ತಿಳಿದು ಕೊಳ್ಳಬೇಕು. ಒಂದು ದುರ್ಗುಣ ಚಿಕ್ಕದಾಗಿ ಪ್ರವೇಶಿಸಿ ಆಮೇಲೆ ಬೃಹದಾಕಾರಕ್ಕೆ ಬೆಳೆದು ಇನ್ನಷ್ಟು ದುರ್ಗುಣಗಳಿಗೆ ಪ್ರವೇಶ ದೊರಕಿಸಿ ನಮ್ಮ ಸರ್ವನಾಶಕ್ಕೆ ಕಾರಣವಾಗುತ್ತದೆ.

## ಮಾರ್ಕಂಡೇಯೋಪಾಖ್ಯಾನ

ಪರೀಕ್ಷಿತನ ದೇಹ ನಾಶವಾಯಿತು. ಅವನ ಆತ್ಮ ಭಗವಂತನ ಬಳಿಗೆ ಹೋಗುತ್ತಾ ಇದೆ. ಅವನ ಈ ಭಕ್ತಿಯ ವೈಭವ, ಅವನ ಸಾಹಸ ಇವೆಲ್ಲ ನೋಡಿ ಪುಳಕಿತರಾದ ದೇವತೆಗಳು ಅವನ ಮೇಲೆ ಪುಷ್ಪವೃಷ್ಟಿ ಮಾಡುತ್ತಿದ್ದಾರೆ. ಭಾಗವತಶ್ರವಣ ಮಾಡಿ ದೇಹ ನಾಶವಾದ ಅನಂತರ ಪುನೀತನಾದ ಪರೀಕ್ಷಿತನು ಅಮೃತತ್ವವನ್ನು ಪಡೆದು ಭಗವಂತನ ಬಳಿಗೆ ಹೋಗುತ್ತಿದ್ದಾನೆ.

ಮುಂದೆ ಮಾರ್ಕಂಡೇಯರು ಹೇಗೆ ಭಗವಂತನ ಅನುಗ್ರಹಕ್ಕೆ ಪಾತ್ರರಾದರು ಎಂಬುದನ್ನು ಭಾಗವತ ತಿಳಿಸುತ್ತದೆ. ಮಾರ್ಕಂಡೇಯ ವಿಷಯಾಸಕ್ತಿಯನ್ನು ತೊರೆದು ಯಾವುದೇ ಕಾಮನೆಗಳಿಲ್ಲದೆ ಅಖಂಡವಾಗಿ ತಪಸ್ಸು ಮಾಡುತ್ತಿದ್ದನು. ದೇವತೆಗಳು ಅವನನ್ನು ಪರೀಕ್ಷೆ ಮಾಡುತ್ತಾರೆ. ಎಲ್ಲ ಭೋಗಸಾಮಗ್ರಿಗಳನ್ನೂ ಅಪ್ಸರಸ್ತ್ರೀಯರನ್ನೂ ಕಳುಹಿಸಿದರೂ ಯಾವುದೇ ರೀತಿಯಲ್ಲಿ ವಿಚಲಿತನಾಗದೆ ಆತ್ಮನಿಗ್ರಹದಿಂದ ಭಗವಂತನನ್ನು ಕುರಿತು ಅಖಂಡವಾಗಿ ತಪಸ್ಸು ಮಾಡುತ್ತಾರೆ. ಇವನ ಭಗವದ್ಭಕ್ತಿಯನ್ನು ಮೆಚ್ಚಿ ಬದರಿ ಕ್ಷೇತ್ರದಲ್ಲಿರುವ ನರನಾರಾಯಣರು ದರ್ಶನ ನೀಡಿದರು. ಆಗ ಮಾರ್ಕಂಡೇಯರು ಅವರ ಮಹಿಮೆಯನ್ನು ಕೊಂಡಾಡಿ ಸ್ತೋತ್ರ ಮಾಡಲು ಭಗವಂತನು ಮೆಚ್ಚಿ ನಿನಗೆ ಬೇಕಾದ ವರ ಕೇಳು ಎಂದನು. ''ನೀನೇ ಸಾಕ್ಷಾತ್ತಾಗಿ ದರ್ಶನ ನೀಡಿದ ಮೇಲೆ ಇದಕ್ಕಿಂತ ಇನ್ಯಾವ ದೊಡ್ಡ ವರ ಇದೆ? ಭಗವದ್ಭಕ್ತರು ಕೇವಲ ಭಗವಂತನನ್ನೇ ಬೇಡುತ್ತಾರೆ. ನಿನ್ನಲ್ಲಿ ಇನ್ನಷ್ಟು ಭಕ್ತಿ ಬೆಳೆಯುವಂತೆ ಮಾಡು. ನಿನ್ನ ಮಾಯೆಯನ್ನು ತೋರಿಸು. ನಿನ್ನ ಅದ್ಭುತಶಕ್ತಿಯನ್ನು ತೋರಿಸು.'' ಎಂಬುದಾಗಿ ಮಾರ್ಕಂಡೇಯರು ಹೇಳುತ್ತಾರೆ.

ಹೀಗಿರಲು ಒಂದು ದಿವಸ ಇದ್ದಕ್ಕಿದ್ದಂತೆ ಭಾರೀ ಪ್ರಳಯಕ್ಕೆ ಮೊದಲಾಯಿತು. ಎಲ್ಲ ಕಡೆ ಮೋಡಗಳು. ಭಾರೀ ಉಲ್ಕಾಪಾತ. ಭೂಮಿಗಳೆಲ್ಲ ಅಸ್ತವ್ಯಸ್ತ. ಎಲ್ಲೆಲ್ಲೂ ನೀರು. ಆ ನೀರಿನಲ್ಲಿ ಮಾರ್ಕಂಡೇಯ ಒಬ್ಬನೇ ತೇಲುತ್ತಾ ಇದ್ದಾನೆ. ಆ ನೀರಿನಲ್ಲಿ ದೊಡ್ಡ ದೊಡ್ಡ ಅಲೆಗಳ ಹೊಡೆತ. ಜಲಚರ ಪ್ರಾಣಿಗಳ ಕಡಿತ. ಹೀಗೆ ಅನೇಕ ವರ್ಷಗಳ ಕಾಲ ಮಾರ್ಕಂಡೇಯ ಕಷ್ಟ ಅನುಭವಿಸುತ್ತಾ ಇರಲು ದೂರದಲ್ಲಿ ಒಂದು ಆಲದ ಎಲೆಯ ಮೇಲೆ ಒಂದು ಸುಂದರವಾದ ಪುಟ್ಟ ಮಗು ಮಲಗಿದೆ.

ಕರಾರವಿಂದೇನ ಪದಾರವಿಂದಂ ಮುಖಾರವಿಂದೇ ವಿನಿವೇಶಯಂತಮ್ ।
ವಟಸ್ಯ ಪತ್ರಸ್ಯ ಪುಟೇ ಶಯಾನಂ ಬಾಲಂ ಮುಕುಂದಂ ಮನಸಾ ಸ್ಮರಾಮಿ ॥

ಅದು ಯಾರು ಎಂಬುದನ್ನು ತಿಳಿಯುವ ಕುತೂಹಲದಿಂದ ಅದರ ಹತ್ತಿರಕ್ಕೆ ಕಷ್ಟಪಟ್ಟು ಈಜಿಕೊಂಡು ಬಂದ. ಆ ಮಗುವಿನ ಉಸಿರಾಟಕ್ಕೆ ರಭಸಕ್ಕೆ ಸಿಕ್ಕಿ ಮಗುವಿನ ದೇಹದೊಳಗೆ ಪ್ರವೇಶಿಸಿದ. ಅಲ್ಲಿ ನೋಡುವುದೇನು! ಅದ್ಭುತ ಪ್ರಪಂಚ! ಬೆಟ್ಟಗಳು, ನದಿಗಳು, ಕಾಡುಗಳು ಎಲ್ಲ ಅತ್ಯದ್ಭುತವಾಗಿ ಗೋಚರಿಸಿದವು. ಎಲ್ಲ ಸುತ್ತಾಡಿದ. ಕೊನೆಗೆ ಆ ಉಸಿರಿಗೆ ಸಿಕ್ಕಿ ಹೊರಕ್ಕೆ ದೂಡಲ್ಪಟ್ಟ. ಪುನಃ ಸಮುದ್ರದಲ್ಲಿ ಪ್ರಳಯದ ಆಟೋಪ. ಮಾರ್ಕಂಡೇಯನಿಗೆ ಇಂತಹ ವಿಶೇಷಾನುಭವ ಆಯಿತು. ಒಂದು ಚಿಕ್ಕ

ಮಗುವಿನ ಹೊಟ್ಟೆಯಲ್ಲಿ ಇಡೀ ಬ್ರಹ್ಮಾಂಡ! 'ಅಣೋರಣೀಯಾನ್ ಮಹತೋ ಮಹೀಯಾನ್' ಎಂಬುದಾಗಿ ಮತ್ತೊಮ್ಮೆ ನೋಡೋಣವೆಂದು ಆ ಮಗುವಿನ ಬಳಿಗೆ ಹೋಗುತ್ತಾನೆ. ಅಲ್ಲಿ ಎಲೆಯೂ ಇಲ್ಲ, ಮಗುವೂ ಇಲ್ಲ! ಯಥಾಸ್ಥಿತಿಯಂತೆ ತನ್ನ ಆಶ್ರಮದಲ್ಲೇ ಇದ್ದಾನೆ.

ಈ ರೀತಿಯ ಭಗವಂತನ ದರ್ಶನದಿಂದ ಮಾರ್ಕಂಡೇಯ ಖುಷಿಪಟ್ಟ. ಭಗವಂತನಲ್ಲಿ ಇನ್ನಷ್ಟು ವಿಶ್ವಾಸ ಬೆಳೆಯಿತು. ಮತ್ತಷ್ಟು ಭಕ್ತಿಯಿಂದ ಧ್ಯಾನಕ್ಕೆ ಕುಳಿತ. ಮೃತ್ಯುಂಜಯನಾಗುವಂತೆ ಅನುಗ್ರಹಿಸಲು ಅಲ್ಲಿಗೆ ಬಂದ ರುದ್ರದೇವರನ್ನು ಅವನು ಗಮನಿಸಲೇ ಇಲ್ಲ. ಧ್ಯಾನದಲ್ಲಿ ಅಷ್ಟು ತಲ್ಲೀನ. ಮನೋಭಿಮಾನಿ ದೇವತೆಯಾದ ರುದ್ರದೇವರು ಅವನ ಮನಸ್ಸನ್ನು ಪ್ರವೇಶ ಮಾಡಿದರು. ಆಗ ಮಾರ್ಕಂಡೇಯ ಎಚ್ಚೆತ್ತ. ರುದ್ರದೇವರ ವಿಶೇಷಾನುಗ್ರಹದಿಂದ ಮಾರ್ಕಂಡೇಯ ಮೃತ್ಯುಂಜಯನಾದ. ಅವನಿಗೆ ರುದ್ರದೇವರು ಭಗವಂತನ ಮಹಿಮೆಯನ್ನು ವರ್ಣಿಸಿದರು. ಮಾರ್ಕಂಡೇಯನು ತಪಸ್ಸಿನಿಂದ ಭಗವಂತನ ದರ್ಶನ ಪಡೆದು ವಿಶೇಷ ಅನುಗ್ರಹಕ್ಕೆ ಪಾತ್ರನಾದ ಎಂಬುದಾಗಿ ಮಾರ್ಕಂಡೇಯನ ಚರಿತ್ರೆ ಈ ಸ್ಕಂಧದಲ್ಲಿ ಉಲ್ಲಿಖಿತವಾಗಿದೆ.

ಇಂತಹ ಮಹಾನುಭಾವರಾದ ಮಾರ್ಕಂಡೇಯರ ಚರಿತ್ರೆಯನ್ನು ಹೃದಯಸ್ಪರ್ಶ ವಾಗುವಂತೆ ಭಾಗವತದಲ್ಲಿ ಸಂಗ್ರಹಿಸಿದ್ದಾರೆ.

ಜೀವನದಲ್ಲಿ ನಾವೂ ಸಹ ಭಕ್ತಿಪ್ರಚೋದಕವಾದ ಭಾಗವತವನ್ನು ಬಿಡದೆ ಶ್ರವಣಮಾಡೋಣ!! ಮನನ, ಪಠಣಗಳನ್ನು ನಡೆಸೋಣ!! ಭಗವದನುಗ್ರಹಕ್ಕೆ ಭಾಗಿಗಳಾಗೋಣ!!

ದೇವದೇವನೇ! ಪ್ರತಿ ಹುಟ್ಟಿನಲ್ಲಿಯೂ ನಿನ್ನ ಪಾದಕಮಲಗಳಲ್ಲಿ ಹೆಚ್ಚು ಹೆಚ್ಚು ಭಕ್ತಿಯನ್ನು ಕೊಡು, ಭವಸಾಗರವನ್ನು ನೀಡಾಡು.

ಯಾರ ನಾಮಸಂಕೀರ್ತನೆಯಿಂದಲೇ ಎಲ್ಲಾ ಪಾಪಗಳೂ ನಾಶಹೊಂದುತ್ತವೆಯೋ ನಮಸ್ಕರಿಸುವುದರಿಂದ ದುಃಖಗಳೆಲ್ಲವೂ ದೂರವಾಗುತ್ತವೆಯೋ ಅಂತಹ ಪರನಾದ ಹರಿಯನ್ನು ಶಿರಸಾ ನಮಿಸುವೆ.

ನಾಮಸಂಕೀರ್ತನಂ ಯಸ್ಯ ಸರ್ವಪಾಪ ಪ್ರಣಾಶನಮ್ ।
ಪ್ರಣಾಮೋ ದುಃಖಶಮನಃ ತಂ ನಮಾಮಿ ಹರಿಂ ಪರಮ್ ॥ – (೧೨-೧೩-೨೩)

ನಮ್ಮೆಲ್ಲರನ್ನೂ ಆದರದಿಂದಲಿ ಕಾಯೋ ಶ್ರೀಕೃಷ್ಣ....
ವಿಜಯೀಂದ್ರಾಖ್ಯ ಶಿಷ್ಯೇಣ ವಿಶ್ವೇಶಗುರುತೃಪ್ತಯೇ ।
ಕೃತೋಽಯಂ ಸಂಗ್ರಹೋ ನೂನಂ ತೇನ ಪ್ರೀಣಾತು ಕೇಶವಃ ॥

**ಇಲ್ಲಿಗೆ ಭಾಗವತದ ದ್ವಾದಶ ಸ್ಕಂಧವು ಲಕ್ಷ್ಮೀಹಯಗ್ರೀವನಿಗೆ ಸಮರ್ಪಿತವಾಯಿತು.**

॥ ಮಧ್ವೇಶಾರ್ಪಣಮಸ್ತು ॥